ಸಂ. ೨೭.

# ಶಿವಾನುಭವ

೧೯೫೭.

R. N. B. 2554

# ಶಿವಾನುಭವ

ಸಂಪುಟ ೨೭ ] [ ಸಂಚಿಕೆ ೨

ಸಂಪಾದಕ

ಫ. ಗು. ಹಳಕಟ್ಟಿ,

ಬಿ.ಎ. ಎಲ್.ಎಲ್.ಬಿ.



ವಾ. ಚ. ೫-೧೨-೦ ] ವಿಜಾಪುರ. [ ಫೆಬ್ರುವರಿ ೧೯೫೩

# ವಿಷಯಾನುಕ್ರಮಣಿಕೆ.



# ಶಿವಾನುಭವ

| ವರ್ಷ ೨೭ | ಫೆಬ್ರುವರಿ ೧೯೫೩ | ಸಂಚಿಕೆ ೨ |
| --- | --- | --- |

## ಆದ್ಯರ ವಚನ

(ಲೇಖಕರು:- ಎನ್. ಆರ್. ದೇಸಾಯಿ ವಕೀಲ ಸಿಂದಗಿ)

........●........

ಆದ್ಯರ ವಚನ ಪರುಷ ಕಂಡಯ್ಯಾ !
ಸದಾಶಿವನೆಂಬ ಲಿಂಗವ ನಂಬುವದು,
ನಂಬಿದೊಡನೆ ನೀ ವಿಜಯ ಕಂಡಯ್ಯಾ
ಅಧರಕ್ಕೆ ಕಹಿ, ಉದರಕ್ಕೆ ಸಿಹಿ.
ಕೂಡಲ ಸಂಗನ ಶರಣರ ವಚನ ಬೇವು ಸವಿದಂತೆ !

(ನಾನು ಗಂಡ ಗುರು ಪುಟ ೪೮)

ಶ್ರೀ ಬಸವೇಶ್ವರರು ಈ ವಚನದಲ್ಲಿ ಆದ್ಯರ ವಚನದ ಗೌರವವನ್ನೂ ಮಹತ್ವವನ್ನೂ ಆದರ್ಶವನ್ನೂ ಸುಂದರವಾಗಿ ಆದರಿಸಿ ಹೇಳುವರು. ಈ ಒಂದು ವಚನದಿಂದ ಇಡೀ ವಚನ ಶಾಸ್ತ್ರದ ಮಹತ್ವವನ್ನೇ ಅರಿಯಬಹುದು. ಒಟ್ಟಾರೆ ಹೇಳಬೇಕಾದರೆ, ಭಗವದ್ಗೀತೆಗೆ ಉಪನಿಷತ್ತಕ್ಕೆ ಅಲ್ಲವೆ ವೇದವಾಕ್ಯಕ್ಕೆ ಎಷ್ಟು ಉಚ್ಚ ಮಹತ್ವವಿದೆಯೋ ಅಷ್ಟೇ ಉಚ್ಚ ಮಹತ್ವವು ಈ ತತ್ವಯುಕ್ತ ಅನುಭಾವದ ಕನ್ನಡ ವಚನಗಳಿಗೆ ಇದೆ. ಈ ವಚನಗಳು ಮುಕ್ತಿ ಮಾರ್ಗಕ್ಕೆ ಕೈಗನ್ನಡಿಯಾಗಿವೆ; ಎಂದು ಶ್ರೀ ಬಸವೇಶ್ವರರು ಧೃಢಭಾವದಿಂದ ಹೇಳುವರು.

ಶಾಸ್ತ್ರವೆಂಬುದು ಮನ್ಮಥ ಶಾಸ್ತ್ರವಯ್ಯಾ.
ವೇದಾಂತವೆಂಬುದು ಮೂಲ ಮನೋವ್ಯಾಧಿಯಯ್ಯಾ.
ಪುರಾಣವೆಂಬುದು ಮೃತವಾದವರ ಗಿರಾಣವಯ್ಯಾ.

ತರ್ಕವೆಂಬುದು ಮರ್ಕಟಾಟವಯ್ಯ.
ಆಗಮವೆಂಬುದು ಯೋಗದ ಗೋರವಯ್ಯ-
ಇತಿಹಾಸವೆಂಬುದು ರಾಜರ ಕಥಾ ಭಾಗವಯ್ಯ.
ಸ್ಮೃತಿಯೆಂಬುದು ಪಾಪ ಪುಣ್ಯ ವಿಚಾರವಯ್ಯ.
ಆದ್ಯರ ವಚನವೆಂಬುದು ಬಹು ವೇದ್ಯವಯ್ಯ,
ನಿಮ್ಮ ಕಪಿಲ ಸಿದ್ಧ ಮಲ್ಲಿಕಾರ್ಜುನನ ತಿಳಿಯಲಿಕ್ಕೆ

ಎಂದು ಆದ್ಯರ ವಚನದ ಶ್ರೇಷ್ಠತೆಯನ್ನು ಸಿದ್ಧರಾಮಯ್ಯನು ಹೇಳುವನು. ಹೀಗೆ ಆದ್ಯರ ವಚನದಲ್ಲಿ ಶರಣರ ಶ್ರದ್ಧೆಯು ಅಗಾಧ ವಾಗಿ ಬೇರೂರಿದೆ. ಆ ವಚನಗಳು ಈಗ್ಯೂ ಕೂಡ ಸಜೀವ ಚೈತನ್ಯ ಮಯ ಶಕ್ತಿಗಳಾಗಿವೆ ಎಂದು ಹೇಳಬಹುದು.

ನಮ್ಮ ಈ ವಚನದಲ್ಲಿಯ ಶಬ್ದಗಳೂ ರಚನೆಯೂ ಸಾಮಾನ್ಯವಾಗಿ ಉಪಯೋಗಿಸಿದವಲ್ಲ. ಬಹು ಅರ್ಥ ಗರ್ಭಿತವಾಗಿವೆ. ಒಂದೊಂದೇ ಪದದ ವಿವೇಚನೆ ಮಾಡಿದಲ್ಲಿ ಈ ವಚನದ ಅರ್ಥವು ಸುಗಮವಾಗುವದು:—

೧. ಆದ್ಯರ ವಚನ ಪರುಷ ಕಂಡಯ್ಯ !

(ಅ) 'ಆದ್ಯರು' ಅಂದರೆ ಸಾಮಾನ್ಯವಾಗಿ ಪುರಾತನರೆಂದು ಹೇಳ ಬಹುದು. ಆ ಆದ್ಯರು ಬಹು ಪುರಾತನರು. ಅವರು ತಮ್ಮ ವಿಚಾರ ಆಚಾರಗಳಲ್ಲಿ ನಿರ್ಮಲತೆ, ಭಕ್ತಿಯಲ್ಲಿ ನಿಶ್ಚಲತೆ, ಆತ್ಮನಲ್ಲಿ ನಿಷ್ಠೆಯನ್ನು ಬೆಳೆಯಿಸಿದವರು; ತ್ಯಾಗ, ವೈರಾಗ್ಯ, ಆತ್ಮ ಸಾಕ್ಷಾತ್ಕಾರಗಳಲ್ಲಿ ಕಡೆಯ ಮೆಟ್ಟಿಲನ್ನು ಮುಟ್ಟಿದವರು; ಪರಮಾತ್ಮನಲ್ಲಿ ಸಮರಸ ಸುಖವನ್ನು ಹೊಂದಿದ ವೀರ ಯೋಗಿಗಳವರು. ಶಾಸ್ತ್ರ ಪಾಂಡಿತ್ಯದ ಜಾಲಕ್ಕೆ ಸಿಲು ಕದೆ ಇವರು ಆ ಶಾಸ್ತ್ರಾನುಗುಣವಾಗಿ ಪರಿಶ್ರಮ ಪಟ್ಟು ಅನುಭಾವದಿಂದ ಆ ಪರಮಾತ್ಮನನ್ನು ಸಾಕ್ಷಾತ್ಕರಿಸಿದವರು. ಹಿಂದಿನ ಕಾಲದಲ್ಲಿ ವೇದಾದಿ ಗಳ ಮುಖಾಂತರ ಇಲ್ಲವೆ ಯೋಗಾದಿಗಳ ದ್ವಾರ ಪರಮಾತ್ಮನನ್ನು ಅರಿತ ಋಷಿವರ್ಯರೂ ತಪಃ ಪ್ರಭಾವದಿಂದ ಪರಮಾನಂದ ಪಡೆದ ಯೋಗಿ ಗಳೂ ಭಕ್ತಿ ಮಾರ್ಗದಿಂದ ಭಾವರಹಿತರಾದ ಸಂತರೂ ಯಾವ ಮೆಟ್ಟಿ ಲನ್ನು ತಮ್ಮ ಅನುಭಾವದಿಂದ ಕಂಡರಿದವರು ಈ ನಮ್ಮ ಆದ್ಯರು.

ಈ ಆದ್ಯರು ಒಂದೇ ಕಾಲದಲ್ಲಿ ಬಂದವರಲ್ಲ. ಇವರು ಪುರಾತನ ಕಾಲದಿಂದ ಬೇರೆ ಬೇರೆ ಸಮಯಕ್ಕೆ ಅವತರಿಸುತ್ತ ಬಂದಿರುವರು.

ಆದರೂ ಕೂಡ, ಅವರೆಲ್ಲ ಅದೇ ಸತ್ಯವನ್ನು ಅದೇ ಅನುಭಾವದಿಂದ ಒಬ್ಬರ ಹಿಂದೊಬ್ಬರು ಕಾಣುತ್ತ ಬಂದಿದ್ದು ಆ ಪರಂಪರೆಯೇ ಅವರ ತತ್ವದ ಸತ್ಯವನ್ನು ಧೃಡೀಕರಿಸುಪದು. ಮೂಲ ೬೩ ಆದ್ಯರ ನಂತರ ಕೂಡ ಎಷ್ಟೋ ಶರಣರು ಅದೇ ಸತ್ಯವನ್ನು ಅದೇ ಅನುಭಾವದಿಂದ ಕಂಡಿದ್ದು ಉಂಟು. ಅದಕ್ಕಾಗಿ ಮೂಲ ಆದ್ಯರು ೬೩ ಮಾತ್ರ ಇದ್ದರೂ ಆ 'ಆದ್ಯ' ಪದವನ್ನು ಅಂಥ ಸತ್ಯ ಅನುಭಾವವನ್ನು ಅರಿತ ಇನ್ನಿತರ ಶರಣ ಶರಣೆಯರಿಗೂ ಅನ್ವಯಿಸುವರು. ಇದೇ ವಚನದ ಕಡೆಯ ಪದ ದಲ್ಲಿ "ಕೂಡಲ ಸಂಗನ ಶರಣರ ವಚನ" ಎಂದು ಉಪಯೋಗಿಸಿದ್ದುದು ಆ 'ಆದ್ಯ' ಪದದ ವಿಸ್ತರಣೆಯನ್ನೇ ಮಾಡಿದಂತಾಗಿದೆ. ಶ್ರೀ ಬಸವೇಶ್ವರರು ಸಿದ್ಧರಾಮೇಶ್ವರರು, ಅಕ್ಕ ಮಹಾದೇವಿಯು, ಅಲ್ಲಮ ಪ್ರಭು, ಅಜಗಣ್ಣ, ಮುಕ್ತಾಯಿ ಮುಂತಾದವರೆಲ್ಲ ಆ 'ಆದ್ಯ' ಪದವಿಯನ್ನು ಮುಟ್ಟಿದ ಶರಣ ಶರಣೆಯರೇ ಸೈ. ಆದ್ದರಿಂದ, ಈ ವಚನದಲ್ಲಿಯ 'ಆದ್ಯ' ರೆಂದರೆ, ಮೂಲ ಪುರಾತನರಲ್ಲದಲೆ ಅವರ ಮೆಟ್ಟಿಲನ್ನು ಮುಟ್ಟಿದ ಉಳಿದ ಶರಣ ಶರಣೆಯರು ಕೂಡ ಎಂದು ತಿಳಿಯತಕ್ಕದ್ದು.

(ಬ) ಅಂಥ ಮಹಾ ಮಹಿಮರ ಅಂತರಂಗದಿಂದ ಅನುಭಾವದಲ್ಲಿ ಹೊರಸೂಸಿ ಹರಿದು ಬಂದ ಸೊಳ್ನುಡಿಯೇ 'ವಚನ' ವು. ಅಂಗದ ಸಂಗ ವನ್ನು ಬಿಚ್ಚಿ ಬಿಸಾಟಿ ತಮ್ಮ ಆತ್ಮ ಲಿಂಗದಲ್ಲಿ ತಲ್ಲೀನರಾಗಿ ಪರವಶ ರಾದಾಗ ಅವರ ಅಂತರಂಗದಲ್ಲಿ ಸ್ಫುರಿಸಿದ ಅಮೃತವಾಣಿಯೇ 'ವಚನ'ವು. ಶುದ್ಧ, ಸಾತ್ವಿಕ, ಇಂದ್ರಿಯಾತೀತ ಪರಮ ಭಾವನೆಯಲ್ಲಿ ಯಾವ ಋಷಿ ಗಳೂ ಯಾವ ಯೋಗಿವರ್ಯರೂ, ಯಾವ ದೇವ ಪುರುಷರೂ ದೇವ ವಾಕ್ ಎಂದು ವೇದೋಪನಿಷತ್ತುಗಳ ಸ್ಫುರಣೆಯನ್ನು ಕಂಡರೋ ಯಾವ ವಾಕ್ ಪರಮಾತ್ಮನ ವಾಕ್ ಎಂದು ಕರೆದಿರುವರೋ ಅಂಥದೇ ಒಂದು ವಾಕ್ ಅಂಥದೇ ಒಂದು ತತ್ವ. ವಿಚಾರ ದೋಹನೆ ಅಂಥದೇ ಸಜೀವ ಸ್ಫುರಣೆ ನಮ್ಮ ಆದ್ಯರ 'ವಚನ' ವಾಗಿದೆ. ಮಹಾ ಮಹಿಮರ ವಾಕ್ ದಲ್ಲಿ ದೇವಾಂಶವಿದ್ದುದರಿಂದಲೇ ಆ ಉಕ್ತಿಯು ಸತ್ಯಮಯುವಾಗುವದು.

ಅಷ್ಟೇ ಏಕೆ ? ಈ ವಾಕ್‌ವು ಶುದ್ಧ ಅಂತರಾತ್ಮನಿಂದ ಬಂದಿರುವ ದರಿಂದ ಅದು ಒಂದು ಪರಮ ಶಕ್ತಿಯೇ ಆಗಿರುವದು. ಶುದ್ಧ ಸತ್ಯ ನುಡಿಯಲ್ಲಿ ಆ ಶಕ್ತಿಯು ವಿಶೇಷವಾಗಿ ಏಕೀಕೃತವಾಗಿರುವದು. ಶ್ರೇಷ್ಠ

ಪುರುಷರ ನುಡಿಯು ನಾಟಕದಲ್ಲಿ ನುಡಿದರೂ ಕೂಡ ಎಷ್ಟೇ ಪರಿಣಾಮ
ವನ್ನು ಮಾಡುತ್ತಿದ್ದಲ್ಲಿ, ಶುದ್ಧ ಅಂತರಾತ್ಮನಿಂದ ಉಕ್ಕಿ ಬಂದ ಆ ನಿರ್ಮಲ
ವಾಕ್ಯದಲ್ಲಿ ಅತಿಯಾಗಿ ಶಕ್ತಿ ತುಂಬಿರಲೇ ಬೇಕು. ಇದು ದೈವೀ ಸ್ಫುರ
ಣೆಯು; ಸೂಕ್ಷ್ಮದಲ್ಲಿ ಅತಿ ಸೂಕ್ಷ್ಮ; ಬಲದಲ್ಲಿ ಅತಿ ಬಲವಾದ ಶಕ್ತಿಯು.
ಸಾಮಾನ್ಯ ಸಿದ್ಧ ಪುರುಷರಲ್ಲಿ ಕೂಡ ಈ ಶಕ್ತಿಯನ್ನು ಕಾಣುತ್ತಿದ್ದಲ್ಲಿ
ಅತಿ ಮಾನವರಲ್ಲಿ ಆ ಶಕ್ತಿಯನ್ನು ಎಷ್ಟಾಗಿ ಕಾಣಬಹುದು ! ಆ ಶಕ್ತಿಯು
ವಚನದಲ್ಲೆಲ್ಲ ತುಂಬಿದೆ.

(ಕ) **ಪರುಷ ಕಂಡಯ್ಯಾ:**— ಇಂಥ ಶಕ್ತಿಯುತವಾದ 'ವಚನವು
ಪರುಷವಿದ್ದಂತೆ' ಎಂದು ಉಪಮಿಸುವರು. ಪರುಷ ಸರಸು ಇವು ಸ್ಪರ್ಶ
ಶಬ್ದದಿಂದ ಬಂದಿದ್ದು ತಗಲುವಿಕೆ ಮಾತ್ರದಿಂದ ಬಂಗಾರಮಯವಾಗಿ
ಮಾಡುವ ಹರಳು ( *Philosofhera stone Touck stone* ) ಎಂದು
ತಾತ್ವಿಕವಾಗಿ ಹೇಳುವರು. ಈ ಅವ್ಯರ ವಚನವೂ ಕೂಡ ಅಂಥ
ಅಮೌಲ್ಯ ಹರಳು ಎಂದು ಅರ್ಥ.

ಇಲ್ಲಿ ನಮ್ಮ ಗುರುಗಳು ಸುಂದರವಾಗಿ ವಿವೇಚಿಸಿರುವರು. ಪರು
ಷದ ಸ್ಪರ್ಶದಿಂದ ಸರ್ವಸ್ವವೂ ಬಂಗಾರಮಯವಾಗಿ ಅಮೌಲ್ಯ ವಸ್ತುಗಳಾ
ಗುತ್ತಿದ್ದಲ್ಲಿ, ಇಡೀ! ವಿಶ್ವವೇ ಅಮೌಲ್ಯವಾಗಬೇಕಾಗಿತ್ತು ! ಆ ಪರುಷ
ವನ್ನು ಎಲ್ಲೆಲ್ಲಿಯೂ ತಟ್ಟಿದಂತೆ ಅಂತರಂಗದಲ್ಲಿ ತೂಗಬಿಟ್ಟಿಲ್ಲವಲ್ಲ ! ಭೂಮಿ
ಯಲ್ಲಿ ಎಲ್ಲಿಯಾದರೂ ಅದು ಬಿದ್ದಿದರೆ, ಅದಕ್ಕೆ ತಗಲಿದ ಭೂಮಿ,
ಭೂಮಿಗೆ ತಗಲಿದ ಗಿಡಗಂಟಿಗಳೂ ನಾವೂ ಕೂಡ ಆ ಭಂಗಾರಮಯ
ಅಮೌಲ್ಯ ವಸ್ತುಗಳಾಗಬೇಕಿತ್ತಲ್ಲ ! ಎಂದು ಶಂಕಿಸಬಹುದು. ಆದರೆ
ಹಾಗಲ್ಲ. ಸೂಜಿಗಲ್ಲು ಕೂಡ ಕಂಡ ಕಂಡ ಕಬ್ಬಿಣವನ್ನು ಆಕರ್ಷಿಸಿ
ಹಿಡಿಯಲಾರದು. ಸೂಜಿಗಲ್ಲು ಹಿಡಿಯಬೇಕಾದರೆ ಕಬ್ಬಿಣವು ಶುದ್ಧವಾಗಿ
ಉಕ್ಕಾಗಲೇಬೇಕು. ಉಕ್ಕನ್ನು ಆಗ ಮಾತ್ರ ಅದು ಹಿಡಿಯುವದು.
ಅದರಂತೆ ಪರುಷದಂತಿರುವ ಈ ವಚನಗಳು ನಮ್ಮ ಮನವನ್ನು ಹಿಡಿಯ
ಬೇಕಾದಲ್ಲಿ ಮನವು ನಿರ್ಮಲವಾಗಿ ಶುದ್ಧವಾದ ಉಕ್ಕಿನಂತಾಗಬೇಕು.
ಅಂದಲ್ಲಿ ಮಾತ್ರ ಈ ವಚನವು ಪರುಷದಂತೆ ಹಿಡಿದು ಎಳೆದುಕೊಳ್ಳುವದು.
"ಪರಸು ಸಿಕ್ಕಿದರೂ ನಿರಸವಿದ್ದವಗೆ ಸಲ್ಲದು." ಎಂದು ಜಾಣ್ಣುಡಿಯುಂಟು.
ಆಸಕ್ತಿ ಇಲ್ಲದವರಿಗೆ ಯಾವ ವಚನ ಏನು ಮಾಡೀತು ! ಆ ವಚನವ

ಕತ್ವದ ಕುರಿತು ಹಸಿವು ಬೇಕು; ತೃಷೆಯು ಬೇಕು. ಅಗ್ಗೆ ಅದರ ರುಚಿಯು ತಿಳಿದೀತು !

ಅಷ್ಟೇ ಏಕೆ? ವಚನಗಳ ರುಚಿಯು ಹಿಡಿದ ಮೇಲೆ ಬಿಡಲೇ ಆಗದು. ಆ ವಚನವು ನಮ್ಮನ್ನೂ ನಮ್ಮ ಮನವನ್ನೂ ಪರುಷದಂತೆ ಬಂಗಾರಮಯುವಾಗಿ ಅಮೌಲ್ಯ ವಸ್ತುವನ್ನಾಗಿ ಮಾಡಲಾರದೆ ಬಿಡದು. ಅದು ಬೆನ್ನು ಹತ್ತುವದು ಕಠಿಣ; ಬೆನ್ನು ಹತ್ತಿದ ಮೇಲೆ ಜಿಗಳೆಯಾಗಿ ಅಂಟುವದು. ಒಂದು ರೂಪು ಮಾಡದಲೆ ಎಂದೂ ಬಿಡದು. ಇಂಥ ಅಗಾಧ ಮಹಿಮೆ ಆ ವಚನಗಳಲ್ಲಿ ಇದೆ ಎಂದು ಶ್ರೀ ಬಸವೇಶ್ವರರು ರಸವತ್ತಾಗಿ ವಚನದ ಮಹಿಮೆಯನ್ನು ಹೇಳುವರು. ಈ ಮಾತನ್ನು ಶ್ರದ್ಧೆ ಇದ್ದವರು ಪರೀಕ್ಷಿಸಿ ನೋಡಬೇಕು ! ಇದು ಒಂದು ಪ್ರಯೋಗ ! ಯಾವದೇ ಒಂದು ತಾತ್ವಿಕ ವಚನವನ್ನು ತೆಗೆದುಕೊಂಡು, ಮುಖಪಾಠ ಮಾಡಿ, ಅದರಲ್ಲಿಯ ಶಬ್ದ ಶಬ್ದಗಳನ್ನೂ ಪದ ಪದಗಳನ್ನೂ ತಳಸೋಸಿ ವಿವೇಚಿಸಿ ನೋಡಿರಿ. ಅಷ್ಟಕ್ಕಷ್ಟೇ ಮಾತ್ರ ಬಿಡಬೇಡಿರಿ. ಅಂಥ ಶ್ರದ್ಧೆ ಮಾಡಬೇಡಿರಿ. ಮನಸ್ಸಿಗೆ ತೃಪ್ತಿಕರವಾಗುವ ವರೆಗೆ ಯಾಕೆ ಎಂದು ನಿಮ್ಮ ಮನಸ್ಸನ್ನೇ ಪ್ರಶ್ನಿಸುತ್ತ ಸಾಗಿರಿ. ಉತ್ತರವೂ ಬರುವದು; ಶಾಂತಿ ಸಿಗುವದು. ಆಗ್ಗೆ ಮಾತ್ರ 'ವಚನವು ಪರುಷ' ವಾಗಿ ಪರಿಣಮಿಸುವದು. ಆಗ್ಗೆ ಮಾತ್ರ 'ಆದ್ಯರ ವಚನ ಪರುಷ' ಎಂದು ಮನಗಾಣುವದು.

(೨) ಆದರೆ ಒಂದು ಕರಾರು ಮಾಡಿದೆ. 'ಸದಾಶಿವನೆಂಬ ಲಿಂಗವ ನಂಬುವದು' ಎಂಬ ಕರಾರು ಇದೆ. ಈ ಕರಾರಿನಂತೆ ನಡೆವರೆ ಆದ್ಯರ ವಚನವು ಪರುಷವಷ್ಟೇ ಅಲ್ಲ 'ಮುಂದೆ ನಂಬಲೊಡನೆ ನೀ ವಿಷಯ ಕಂಡಯ್ಯ' ಎಂದೂ ಹೇಳುವರು. ಈ ಮಾತುಗಳಿಗೆ ಮಹತ್ತರವಾದ ಅರ್ಥವಿದೆ:—

(ಅ) 'ಸದಾಶಿವನೆಂಬ ಲಿಂಗ' ಎಂದರೆ ದೇವ ಪರಮಾತ್ಮ ನಮ್ಮ ನಮ್ಮ ಪಂಥದಂತೆ ನಮ್ಮ ಇಷ್ಟ ದೇವ. ಯಾವ ಹೆಸರಿನಿಂದ ಕರೆದರೂ ಯಾವ ರೂಪದಲ್ಲಿ ನೋಡಿದರೂ ಅವನು ಅದೇ ಪರಮಾತ್ಮ. ಇಲ್ಲಿ ಬಡಿದಾಟ ಬೇಡ. 'ಈಶ್ವರ-ಅಲ್ಲಾ. ತೇರಿ ನಾಮ' ಎಂಬ ಭಾವ ಬೇಕು.

(ಬ) 'ನಂಬುವದು' ಎನ್ನುವಲ್ಲಿ 'ನಿಶ್ಚಯದಿ ನಿಶ್ಚಲನು' ಎನ್ನುವಂತೆ ಅಚಲವಾದ, ನಿಜವಾದ, ಸ್ಥಿರವಾದ ಶ್ರದ್ಧೆಯನ್ನಳವಡಿಸಬೇಕು. ಎಂದು

ಹೇಳುವರು. ಶ್ರದ್ಧೆಯು ಅತಿ ಆಳವಾಗಿ ಬೇರೂರಬೇಕು; ಬ್ರಹ್ಮ ಶಾಖೆಯಲ್ಲಿ ಎಲ್ಲೆಲ್ಲಿಯೂ ಪಸರಿಸಬೇಕು. * ಈ ಶ್ರದ್ಧೆಯೇ ನಂಬಿಗೆಯು.

ಈ ಪ್ರಕಾರ ಪರಮಾತ್ಮನಲ್ಲಿ ಸಂಪೂರ್ಣ ಶ್ರದ್ಧೆಯನ್ನಿಟ್ಟು ಮರೆ ಹೋಗಬೇಕು. ಅಂತರಾತ್ಮನಿಗೆ ಸಂಪೂರ್ಣ ಶರಣಾಗತನಾಗಬೇಕು. ಇಂಥ ಶ್ರದ್ಧಾ ಭಾವನೆಯಿಂದ ಆದ್ಯರ ವಚನವನ್ನು ಪರಿಶೀಲಿಸಿದಲ್ಲಿ ಅದು ನಿಜವಾಗಿಯೂ ಪರುಷವಾಗುವದು. ಇಲ್ಲವಾದಲ್ಲಿ ಕಗ್ಗ ಪರುಷ (ಬಿಡಿಸಲಾರದ ತೊಡಕು, ಕಗ್ಗಂಟು) ಆಗುವದು.

(ಕ) ಈ ಪ್ರಕಾರ ಗಾಢ ಶ್ರದ್ಧೆಯನ್ನಿಟ್ಟು ವಚನಗಳನ್ನು ಪರಿಶೀಲಿಸಿದಲ್ಲಿ 'ನೀ ವಿಜಯ ಕಂಡಯ್ಯ' 'ವಿಜಯವು ನಿನಗಾಗಿ ನಿಶ್ಚಯವಾಗಿ ಕಟ್ಟಿ ಇಟ್ಟದ್ದು' ಎಂದು ಸಾರಿ ಹೇಳುವರು. ಇಲ್ಲಿ ಗೀತೆಯ ಉಕ್ತಿಯು ನೆನಪಾಗದಿರದು.

ಯತ್ರ ಯೋಗೇಶ್ವರಃ ಕೃಷ್ಣೋ ಯತ್ರ ಪಾರ್ಥೋ ಧನುರ್ಧರಃ।
ತತ್ರ ಶ್ರೀ ವಿಜಯೋ ಭೂತಿರ್ಧ್ರುವಾ ನೀತಿರ್ಮತಿರ್ಮಮ ॥

ಎಂದು ಹೇಳುವಲ್ಲಿ:—

ಸದಾಶಿವನೆಂಬ ಲಿಂಗವ ನಂಬುವದು;
ನಂಬಲೊಡನೆ ನೀ ವಿಜಯ ಕಂಡಯ್ಯ !

ಎನ್ನುವ ಅರ್ಥವು ಅಡಕವಾಗಿರುವದು. ಎಲ್ಲೆಲ್ಲಿ ಯೋಗೇಶ್ವರನಾದ ಶ್ರೀ ಕೃಷ್ಣನೂ ಧನುರ್ಧಾರಿಯಾದ ಅರ್ಜುನನೂ (ಕೂಡಿ) ಇರುವರೋ ಅಲ್ಲಲ್ಲಿ ವಿಜಯವು ಕಟ್ಟಿಟ್ಟದ್ದು ಎಂದು ಗೀತೆ ಹೇಳುವದು. ಆದರೆ ಈಗ ಕೃಷ್ಣನೆಲ್ಲಿರುವನು ? ಈಗ ಅರ್ಜುನನೆಲ್ಲಿರುವನು ? ಅವರೇ ಇಲ್ಲದಲ್ಲಿ ಅವರ ಸಮ್ಮೇಲನವೆಂತು ! ಶ್ರೀ ದಿವಾಕರರು ಹೇಳುವಂತೆ ಒಂದು ಗೂಢಾರ್ಥವಿದ್ದಂತೆ ಕಾಣುತ್ತದೆ. ಶ್ರೀ ಕೃಷ್ಣನಿಗೆ ನಾರಾಯಣನೆಂದೂ ಅರ್ಜುನನಿಗೆ ನರನೆಂದೂ ಕರೆಯುವರು. ಅವರು ಹಿಂದಿನ ಕಾಲದ 'ನರ ನಾರಾಯಣರ' ಅವತಾರವೆಂದೂ ಪ್ರಸಿದ್ಧಿಯುಂಟು. ಈಗಿನ ಕಾಲದ ನರ ನಾರಾಯಣರೆಂದರೂ ಅಡ್ಡಿ ಇಲ್ಲ. ನಾರಾಯಣನೆಂದರೆ

* ಪ್ರಶ್ನೆಯ ಬಗ್ಗೆ "ನಾನು ಕಂಡ ಗುರು" ಪುಟ ೨೧ ರಿಂದ ೨೫ ನೋಡಿರಿ.

ಪರಮಾತ್ಮ, ಅಂತರಾತ್ಮ. ನರನೆಂದರೆ ದೇಹರೂಪಿ ಮನುಷ್ಯ ಇಂದ್ರಿಯ ಮಾಗು ಜೀವ. ಮನುಷ್ಯನಿಗೆ ಇರಲು, ಬಾಳಲು, ತೇರ್ಗಡೆ ಹೊಂದಲು ಅಂತರಾತ್ಮನಾದ ಆ ಪರಮಾತ್ಮನ ಅನುಗ್ರಹ, ಆ ಪರಮಾತ್ಮನ ಪ್ರೇರಣೆ ಬೇಕೇ ಬೇಕು. ಇದನ್ನು ಅರಿತು ಜೀವಿಯಾದ ನರನು ಅಚಲ ಶ್ರದ್ಧೆಯಿಂದ ಆ ಅಂತರಾತ್ಮನಾದ ನಾರಾಯಣನಿಗೆ ಶರಣು ಹೋದಾಗ ಮಾತ್ರ ವಿಜಯ ಸಿಕ್ಕೀತು ! ಈ ಸಂಪೂರ್ಣ ಶರಣ್ಯ ಭಾವವೇ ಆ ಸಮ್ಮೇಲನ ! ಆ ಸಮ್ಮಿಲನ !

ಈ ಮಾತನ್ನೇ ಮೇಲಿನ ವಚನದಲ್ಲಿ 'ಲಿಂಗವ ನಂಬು' 'ಪರಮಾತ್ಮನಲ್ಲಿ ಶ್ರದ್ಧೆಯಿಟ್ಟು ಶರಣು ಹೋಗು' ಎಂದು ಹೇಳಿರುವರು. ಆಗ್ಗೆ ಅಂಗ ಲಿಂಗದ ಸಮ್ಮೇಲನವಾಗಿ ವಿಜಯ ಕಟ್ಟಿಟ್ಟದ್ದು ಎಂದು ಹೇಳುವರು. ಎಂಥ ಸುಂದರ ಸಾದೃಶ್ಯವಿದು.

(೩) ಇಂಥ ದಿವ್ಯ ವಚನಗಳು "ಅಧರಕ್ಕೆ ಕಹಿ" ಎಂದು ಹೇಳುವರಲ್ಲ ! ಈ ಮಾತನ್ನು ಎರಡು ತರದಿಂದ ವಿವೇಚಿಸಿ ನೋಡಬಹುದು:—

(ಅ) ಅಧರಕ್ಕೆ ಅಂದರೆ ತುಟಿಗೆ * ( ನಾಲಿಗೆಗೆ ಕೂಡ ಅಲ್ಲ. ) ಅಂದರೆ ಬಾಹ್ಯಕ್ಕೆ ತೋರಿಕೆಗೆ ಮಾತ್ರ' ಎಂದು ಅರ್ಥ. ಈ ವಚನಗಳಲ್ಲಿ ಸಾಮಾನ್ಯವಾಗಿ ರಾಗ, ಪ್ರಾಸ, ತಾಳಗಳು ಕಾಣ ಬರದೆ ಕೆಲವರಿಗೆ ಬಾಹ್ಯದಿಂದ ನೋಡಿದಲ್ಲಿ ಕಹಿಯಾಗಿ ಅರುಚಿಯಾಗಿ ಕಾಣಬಹುದು. ಆದರೆ ಅವನ್ನೇ ನುಂಗಿ ಅರಗಿಸಿ ವಿಚಾರಿಸಿದಲ್ಲಿ ಅಂತರಂಗಕ್ಕೆ ಬಿಡಲಾರದಂಥ ಸಿಹಿಯಾದ ರುಚಿಕಟ್ಟಾದ ಪ್ರಮೇಯಗಳುಳ್ಳದುವಾಗಿ ಕಂಡು ಬರುವವು. ವಚನಗಳ ಬಾಹ್ಯ ರೂಪಕ್ಕೆ ಬಾಹ್ಯ ರಚನೆಗೆ ಮಹತ್ವ ಕೊಡಬಾರದು. ಮನನ ಮಾಡಬೇಕು. ಆಳವಾಗಿ ವಿಚಾರಿಸಬೇಕು. ಪಾಲಿಸಲು ಪ್ರಯತ್ನಿಸಬೇಕು. ಆಗ್ಗೆ ಅವುಗಳಲ್ಲಿ ಅಡಕವಾದ ಗಾಂಭೀರ್ಯಯುಕ್ತವಾದ ತತ್ವಗಳ ಆತ್ಮಕ್ಕೆ ತಟ್ಟಿ ಬಲು ಸವಿಯಾಗಿ ಕಂಡುಬರುವವು. ಆ ವಚನದ ಹೊರಗಣ ಸ್ವರೂಪದಿಂದ ನಿರಾಶೆ ಹೊಂದದಲೆ ಅದರ ತಿರುಳಿನ ಸಿಹಿ ಸವಿಯನ್ನು ಸೇವಿಸಿರಿ ! ಅಮೃತವನ್ನು ಪಾನ ಮಾಡಿರಿ ಎಂದು ಹೇಳುವರು.

---

*Sifsymfalby = ತೋರಿಕೆಗೆ ಮಾತ್ರ ಕಳವಳ; ತುಟಿಯಿಂಡ ಕಚ್ಚು = ತೋರಿಕೆಗೆ ಕಚ್ಚು)

(ಬ) ಮತ್ತೊಂದು ತಾತ್ವಿಕ ಅರ್ಥ:—

ಅಧರವು ಒಂದು ಇಂದ್ರಿಯವು. ಈ ಇಂದ್ರಿಯಕ್ಕೆ ರುಚಿ ಅಥವಾ ಅರುಚಿ ಎಂಬ ಭಾವವು ತಾನಾಗಿ ಇರುವದಿಲ್ಲ, ತಿಳಿಯುವದಿಲ್ಲ. ಅದು ನಮ್ಮ ಮನದ ಒಲುವಿನ ಮೇಲೆ ಅವಲಂಬಿಸಿದೆ. ಮಾಂಸ ತಿನ್ನುವದು ಕೆಲವರಿಗೆ ರುಚಿಕಟ್ಟಾದದ್ದೂ ಆಹುದು. ಇನ್ನು ಕೆಲವರಿಗೆ ಅರುಚಿ ಕಟ್ಟಾದದ್ದೂ ಆಹುದು. ಹೀಗೇಕೆ? ಅದಕ್ಕೆಲ್ಲ ಅಭ್ಯಾಸವೇ ಕಾರಣ ಮನದ ಒಪ್ಪಿಗೆಯೇ ಕಾರಣ ಅದೂ ಅಲ್ಲದರೆ ಈ ದೇಹಕ್ಕೆ ಅವಶ್ಯವಿಲ್ಲದಿದ್ದಲ್ಲಿ ರುಚಿಕರ ಪದಾರ್ಥವೂ ಕೂಡ ಕಹಿಯಾಗಿ ಕಾಣು ವದು. ಜ್ವರ ಬಂದಾಗ್ಗೆ ಅನ್ನ ಕಹಿ ಹತ್ತುವದು. ಹೊಟ್ಟೆ ತುಂಬಿ ದಾಗ್ಗೆ ಹುಗ್ಗಿ ಕೂಡ ಹುಳಿಹುಳಿ. ಅಗ್ಗೆ ಅದೇ ತುಟಿ, ಅದೇ ಅನ್ನ, ಅದೇ ಹುಗ್ಗಿ ಇದ್ದಾಗ್ಯೂ ರುಚಿಕರವಾದ ಅದೇ ಆಹಾರವು ಅರುಚಿಕರ ವಾಗಿ ತೋರುವದು. ಅಂದರೆ ಇಂದ್ರಿಯುಗಳ ರುಚಿ ಅರುಚಿಗಳು ಕೃತ್ರಿಮವಾದವುಗಳು ನೇರವಾದವುಗಳಲ್ಲ. ಅವು ಕೃತ್ರಿಮ ಕಾರ್ಯ ಮಾಡುವ ಇಂದ್ರಿಯಗಳನ್ನು ವಚನಗಳು ಗೌಣವೆಂದು ಹಳಿ ಯುವವು. ಇಂದ್ರಿಯಗಳನ್ನು ಹಿಡಿದಿಟ್ಟು ಮೂಗದಾಣಿ ಹಾಕಲು ವಚನ ಗಳು ಹೇಳುವವು. ಹಾಗಿದ್ದಲ್ಲಿ ಮರ್ಕಟದಂತಿರುವ ಈ ಇಂದ್ರಿಯಗಳಿಗೆ ಆ ವಚನದತ್ತ ಅಭಿರುಚಿ ಎತ್ತ ಹುಟ್ಟಬೇಕು? ಅವುಗಳಿಗೆ ಕಹಿಯಾಗಿಯೇ ಕಾಣುವದು.

ಆದರೆ ವಚನಗಳು ಉದರಕ್ಕೆ ಅಂದರೆ ಅಂತರಂಗಕ್ಕೆ ಬಹು ಪೋಷ ಕವು. ವಚನಗಳ ಸವಿಯನ್ನು ಎಷ್ಟು ಸವಿದರೂ ಸಾಲದು. ಸವಿಯುವ ತೃಷೆಯು ಹೆಚ್ಚುತ್ತಲೇ ಹೋಗುವದು. ಆ ಸವಿಯನ್ನು ಸವಿಯುವದು ಅಂತರಾತ್ಮ; ಇಂದ್ರಿಯಗಳಲ್ಲ.

ಇಲ್ಲಿ ಉದಾಹರಣೆಗಾಗಿ 'ಬೇವು ಸವಿದಂತೆ' ಎಂದು ಕೂಡ ಹೇಳು ವರು. ಶ್ರೀ ಬಸವೇಶ್ವರರಿಗೆ ಬೇರೆ ಚಂದವಾದ ಉಪಮೆ ಸಿಗಲಿಲ್ಲವೇ? ಅಥವಾ ಈ ಪದಗಳನ್ನು ಬೇಕೆಂದಲೇ ಉಪಯೋಗಿಸಿರಬಹುದೇ?

ಬೇವು ತಿನ್ನಲು ಬಲು ಕಹಿ. ಆದರೆ ಅದರ ರಸವು ಹೊಟ್ಟೆಯೊ ಳಗೆ ಹೋದನಂತರ ಅಲ್ಲಿ ಅದರ ಕಹಿತನ ಹತ್ತುವದಿಲ್ಲವಲ್ಲ! ಮಿತಿಯಿಂದ ತಿಂದಲ್ಲಿ ಅದು ಆರೋಗ್ಯಕರವೂ ಆಗಿರುವದು. ಆ ಬೇವಿನ ರಸವು ಆ ರಸದಲ್ಲಿದ್ದ ಸತ್ವವು ನಮ್ಮ ಉದರದಲ್ಲಿದ್ದ ಕಿಲ್ಮಿಷಗಳನ್ನು ಹೊಡೆದೊಡಿ

ಸುವದು. ಈ ಮಹತ್ವಕ್ಕಾಗಿಯೇ ಪೂರ್ವ ಕಾಲದಿಂದ ಪ್ರತಿ ವರ್ಷ ಪ್ರತಿಪದೆಯ ದಿನವೇ ಅವಶ್ಯಕವಾಗಿ ಆದರದಿಂದ ಬೇವನ್ನು ಸವಿಯುವೆವು. ಆ ಶುಭದಿನವೇ ಬೇವು ಸವಿಯುಲು ಇದ್ದ ನೇಮವನ್ನು ಗಮನಿಸಿದರೆ ಹಬ್ಬದಲ್ಲಿ ನಾಲಿಗೆಯನ್ನು ಕಹಿ ಮಾಡಿಕೊಳ್ಳುವದನ್ನು ಕಂಡರೆ ಅದು ದೈಹಿಕ ಆರೋಗ್ಯಕ್ಕಾಗಿಯೂ ಅಹುದು, ಆತ್ಮ ವಿಕಾಸಕ್ಕೆ ಕುರುಹು ಆಗಿಯೂ ಅಹುದು ಎಂದು ಹೇಳಬಹುದು. ಪ್ರತಿಪದೆಯು ದಿನ ವರ್ಷದ ಮೊದಲನೆಯ ದಿನ ಆತ್ಮ ವಿಕಾಸಕ್ಕೆ ಸ್ವಬ ಹುಟ್ಟಲಿ ಎಂದು ಈ ಬೇವು ಸವಿಯುವ ರೂಢಿ ಇರಬಹುದೇ ? ಎನಿಸುವದು.

ಅಂದಲ್ಲಿ, ಆದ್ಯರ ವಚನಗಳು ಇಂದ್ರಿಯ ಲೋಲುಪರಿಗೆ ಬೇವಿನಂತೆ ಕಹಿಯಾಗಿಯೇ ಕಾಣುವವು; ಆಧ್ಯಾತ್ಮಿಗಳಿಗೆ ಮಾತ್ರ ಅಮೃತದಂತೆ ಸಿಹಿಯಾಗಿಯೇ ಕಾಣುವವು ಅಲ್ಲದೆ, ಬೇವನ್ನು ವರುವರುಷ, ಮೇಲಿಂದ ಮೇಲೆ, ಹೇಗೆ ಸವಿ ಸವಿದು ಕಿಲ್ಮಿಷಗಳನ್ನು ದೂರ ಅಟ್ಟಿ ನಿರ್ಮಲ ಮಾಡಿಕೊಳ್ಳುವೆವೋ ಹಾಗೆ ಈ ವಚನಗಳನ್ನು ಕೂಡ ಮೇಲಿಂದ ಮೇಲೆ ಅರಗಿಸುತ್ತ ಅಂತರಂಗದ ಕಿಲ್ಮಿಷಗಳನ್ನು ಹೊರದೂಡಿ ನಿರ್ಮಲಗೊಂಡು ಆಧ್ಯಾತ್ಮಿಕ ವಿಕಾಸವನ್ನು ಬಲಗೊಳಿಸುವದು ಬಹು ಯೋಗ್ಯವೆಂದು ಹೇಳುವರು.

ಒಟ್ಟಾರೆ ಹೇಳಬೇಕಾದರೆ, ಆದ್ಯರ ವಚನಗಳು ಶ್ರದ್ಧೆಯಿಂದ ಗಮನಿಸಿದಲ್ಲಿ ಪರುಷದಂತೆ ಇರುವವು; ಇಂದ್ರಿಯ ಲೋಲುಪರಿಗೆ ಅವು ಕಹಿಯಾಗಿ ಕಂಡರೂ ಆಧ್ಯಾತ್ಮಿಗಳಿಗೆ ಬಲು ಸಿಹಿಯಾಗಿ ರುಚಿಸುವವು. ಇವನ್ನು ಮೇಲಿಂದ ಮೇಲೆ ಅರಗಿಸುತ್ತಿದ್ದಲ್ಲಿ ನಮ್ಮ ಅಂತರಂಗದ ಕಿಲ್ಮಿಷ ಭಾವನೆಗಳು ದೂರಾಗಿ ಆತ್ಮ ವಿಕಾಸವು ಬಲಗೊಳ್ಳುವದು ಎಂದು ಹೇಳುವರು.

# ಪ್ರಮಥರು

(ಲೇಖಕರು:- ಶ್ರೀ ಬಸಪ್ಪ ಚನ್ನಪ್ಪ ಪಟ್ಟೇದ, ನಂಟಮುರಿ.)

ಮಥ (ಮಥನ) ವೆಂದರೆ ಕಡೆಯುವದು ಇಲ್ಲವೆ ಒಳಿತಾಗಿ ಚರ್ಚಿಸುವದು. ಈ ಮಥ ಶಬ್ದಕ್ಕೆ 'ಪ್ರ' ಉಪಸರ್ಗ ಸೇರಿ ಪ್ರಮಥವೆಂದಾಗಿದೆ. ಪ್ರಮಥವೆಂದರೆ ಚನ್ನಾಗಿ ನಡೆದವರು. ನಮ್ಮ ವೀರಶೈವ ಧರ್ಮ ತತ್ವಗಳನ್ನು ಅನುಭವ ಮಂಟಪದಲ್ಲಿ ಬಸವಾದಿ ಪ್ರಮಥರು ಒಳ್ಳೆ ಸೂಕ್ಷ್ಮ ರೀತಿಯಿಂದ ಅರಿದಾಟ ನಡಿಸಿ ಪರಿಶುದ್ಧಗೊಳಿಸಿ ನಿಶ್ಚಿತ ಸ್ವರೂಪಕ್ಕೆ ತಂದಿರುವರು. ಆದುದರಿಂದ ವೀರಶೈವಾನುಯಾಯಿಗಳು ಈ ಅನುಭವ ಮಂಟಪದಲ್ಲಿದ್ದ ಸಭಾಸದರಿಗೆ ಪ್ರಮಥರು ಎಂದು ಕರೆದಿರುವರು. ಅವರಿಗೆ ಅಮರ ಗಣಗಳೆಂತಲೂ ಹೆಸರುಂಟು. ಇವರು ೭೭೦ ಜನರಿದ್ದರಂತೆ. ಅದಕಾರಣ ಲಿಂಗನಂತರ ಮತ ತತ್ವಗಳು ಇಷ್ಟೊಂದು ಪ್ರಕಾಶಮಾನವಾಗಿ ಥಳಥಳಿಸುತ್ತಿರುವವು. ಅವೇ ಬಸವಾದಿಗಳ ವಚನ ಗ್ರಂಥಗಳಲ್ಲಿ ಪ್ರತಿಪಾದಿತವಾಗಿವೆ. ಅಕ್ಕ ಮಹಾದೇವಿಯವರು ಅವನ್ನು "ಚೊಕ್ಕಕಾಳಿನ ರಾಶಿಯೆಂತಲೂ ಪುರಾಣಾದಿಗಳು ತೂರಿಬಿದ್ದಿರುವ ಹೊಟ್ಟಿನ ಗುಂಪೆ ಯೆಂತಲೂ ಹೇಳಿದ್ದಾರೆ. ಪುರಾಣಗಳಲ್ಲಿ ಈ ಅತಿಶಯೋಕ್ತಿ ವರ್ಣನವೇ (ಹೊಟ್ಟೇ) ಹೆಚ್ಚಾಗಿರುವದು. ಚೊಕ್ಕ ಕಾಳು (ತಾತ್ವಿಕ ಸತ್ಯ ಸಂಗತಿ) ಎಲ್ಲಿಯಾದರೂ ಒಂದೊಂದಿರುವವು. ಅವನ್ನು ಆರಿಸಿ ಬೇರೆ ಮಾಡುವದೇ ಕಠಿಣವಾಗುವದು. ಅದಕ್ಕೆಂತಲೇ ಪುರಾಣಾದಿಗಳನ್ನು ಕೇಳುವದರ ಬದಲು ವಚನ ಶಾಸ್ತ್ರವನ್ನು ಕೇಳಬೇಕು. ಅಲ್ಲಿ ಹೇಳಿದುದರಲ್ಲಿ ಕಸರು ಎನಿತೆನಿತೂ ತೋರದು. ಇರುವುದೆಲ್ಲ ಅಚ್ಚ ಕಾಳಿನ ರಾಶಿಯೇ ಆಗಿರುವದು.

ಶ್ರೀ ಬಸವಣ್ಣನವರು, "ವೇದಕ್ಕೆ ಒರೆಯ ಕಟ್ಟುವೆ. ಶಾಸ್ತ್ರಕ್ಕೆ ನಿಗಳವನಿಕ್ಕುವೆ. ತರ್ಕದ ಬೆನ್ನ ಬಾರನೆತ್ತುವೆ. ಆಗಮಗಳ ಮೂಗು ಕೊಯ್ವೆ" ಎಂದು ಹೇಳಿದ್ದಾರೆ. ಅಂದರೆ ಅವುಗಳಲ್ಲಿ ಎಷ್ಟೋ ಸಂಗತಿಗಳು ಕಾಲವು ಬದಲಿಸಿದಂತೆ ನಿರುಪಯೋಗವಾದಾಗಿಯೂ ಅಲ್ಲದೆ ಪೀಡಾಕಾರವಾಗಿಯೂ ಪರಿಣಮಿಸುತ್ತವೆ. ಅಂತಹವನ್ನು ತೆಗೆದು ಹಾಕಿ ಬಲ್ಲವರು ಕಾಲೋಚಿತವಾಗಿದ್ದವುಗಳನ್ನೇ ಬಳಸಿರುವರು.

ಪುರಾಣ ಮಿತ್ಯೇವ ನ ಸಾಧು ಸರ್ವಂ । ನ ಚಾಪಿ ಕಿಂಚಿನ್ನವ ಮಿತ್ಯವದ್ಯಂ॥
ಸಂತಃ ಪರೀಕ್ಷ್ಯಾನ್ಯತರದ್ಭಜಂತೇ । ಮೂಢಃ ಪರಪ್ರತ್ಯಯನೇಯ ಬುದ್ಧಿಃ
ಎಂಬ ಪದ್ಯವು ಇದನ್ನೇ ಹೇಳುವದು. ವೇದ ಶಾಸ್ತ್ರಾದಿಗಳಲ್ಲಿಯೂ
ಇದೇ ರೀತಿ ಇರುವದು. ಅಂತೇ ಅಣ್ಣನವರು ಮೇಲಿನ ವಚನದಲ್ಲಿ
ಹಾಗೆ ಉಸುರಿರುವರು. ಆ ಕಾರಣ ಅವೆಲ್ಲವುಗಳಿಗಿಂತ ವೀರಶೈವ ಮತಕ್ಕೆ
ವಚನ ಗ್ರಂಥಗಳೇ ಮಿಗಿಲಾದ ಆಧಾರವಾಗಿವೆ.

ಪ್ರಮಥರು ಬರೇ ಹೇಳಿಬಿಡಲಿಲ್ಲ, ತಾವು ಸ್ವತಃ ಹಾಗೆ ನಡೆದು
ಅವು ನಿಜವಾಗಿಯೇ ಮಾನವನ ಆತ್ಮೋದ್ಧಾರಕ್ಕೆ ಅತ್ಯಂತ ವಿಹಿತವಾಗಿರು
ವುದೆಂಬುದನ್ನು ಕಂಡುಕೊಂಡು [ಬಳಿಕ ಆ ಮೇರೆಗೆ ನಡೆಯುಲಿಕ್ಕೆ ಇತ
ರರಿಗೆ ಬೋಧಿಸಿರುವರು. ಅಂತೇ ಅವು ತ್ರಿಕಾಲಾಬಾಧಿತ ತತ್ವಗಳಾಗಿ
ಎಲ್ಲ ಜನರಿಗೂ ಮತಸ್ಥರಿಗೂ ಮನೋಹರವಾಗಿಯೇ ಬೆಳಗುತ್ತಿರುವವು.
ಇದೇ ಪ್ರಮಥರು ಮಾಡಿದ ಹೊಸವಾದ ಕಾರ್ಯವು. ಅವರ ಕೀರ್ತಿಯು
ಅಜರಾಮರವಾಗಿ ಉಳಿಯುಲಿಕ್ಕೆ ಇದೇ ಕಾರಣವಾಗಿರುವದು. ಅವರ
ತತ್ವಗಳಾವವೆಂಬುದನ್ನು ಇಲ್ಲಿ ಹೇಳುವ ಪ್ರಯೋಜನವಿಲ್ಲ. ಅವು ವಚನ
ಗ್ರಂಥಗಳಲ್ಲಿ ಉಕ್ತವಾಗಿವೆ ಆ ತತ್ವಗಳನ್ನು ಅನುಸರಿಸುವವರಿಗೆ ಭಕ್ತರು
ಇಲ್ಲವೆ ಲಿಂಗವಂತರು ಅಥವಾ ವೀರಶೈವ ಎಂದೆನ್ನುತ್ತಾರೆ.

ವೀರಶೈವರಿಗಿಂತಲೂ ಮೊದಲು ಲಕುಲೀಶ ಕಾಳಾಮುಖ ಪಾಶುಪತ
ಮುಂತಾದ ಹಲವು ಶೈವ ಮತಗಳಿದ್ದವು. ಅವು ತರತರದ ದೋಷಗ
ಳಿಂದ ಯುಕ್ತವಾಗಿದ್ದವು. ಶ್ರೀ ಬಸವಣ್ಣನವರು ಪಾಶುಪತರಲ್ಲಿಯೇ
ಜನ್ಮವೆತ್ತಿದ್ದರು. ಅದು ಅವರ ದೃಷ್ಟಿಯಲ್ಲಿ ಹೇಯವೆನಿಸಿದ್ದರಿಂದ ಅದನ್ನು
ಬಿಟ್ಟು ಲಿಂಗವಂತರಾಗಿ ಆ ಮತತತ್ವಗಳನ್ನು ಮತ್ತಿಷ್ಟು ಒಳಿತಾಗಿ ಶುದ್ಧಿ
ಗೊಳಿಸಲೆಂದು ಕಲ್ಯಾಣದಲ್ಲಿ ಅನುಭವ ಮಂಟಪವನ್ನು ಸ್ಥಾಪಿಸಿದರು.
ಅಲ್ಲಿ ಆದ ನಿರ್ಣಯಗಳನ್ನೆಲ್ಲ ಬರಿಸಿ ಇಡಿಸಿದರು. ಅವೇ ವಚನ ಗ್ರಂಥ
ಗಳಿಗೆಲ್ಲ ಆಧಾರವು. ಅಂತೇ ಅದಾವ ವಚನ ಗ್ರಂಥ ಓದಿದರೂ ಸಾರವು
ಒಂದೇ ಒಂದು ಹೊರಡುವದು. ಶೈವರಾಗಲಿ ಯಾವದೇ ಪರಧರ್ಮದವ
ರಾಗಲಿ ಬಹುಶಃ ಎಲ್ಲರೂ ವಿಷಯ ಸುಖಕ್ಕೆ ಮೆಚ್ಚಿ ಬಾಯ್ಬಿಡುವವರೇ!
ಜಗತ್ತಿನ ಹೊನ್ನು ಹೆಣ್ಣು ಮಣ್ಣು ಮೊದಲಾದ ವಿಷಯಗಳನ್ನು ಸಂಪಾ
ದಿಸಿ ಭೋಗಿಸಲಿಕ್ಕೆ ಹೆಣಗುವವರೇ! ಆದರೆ ಈ ವಿಷಯಗಳಿಂದಾಗುವ

ಆನಂದವು ತೀರ ಅಶಾಶ್ವತ. ಶಾಶ್ವತ ನಿತ್ಯ ಸುಖವು ಒಂದೇ ಒಂದು ಶಿವಾನಂದ (ಬ್ರಹ್ಮಾನಂದ) ದಲ್ಲಿರುವದು. ಅಂತೇ ಪ್ರಮಥರು "ವಿಷಯ ಸುಖವನ್ನು ದೇಹ ರಕ್ಷಣದ ಮಟ್ಟಿಗೆ ಮಾತ್ರ ಹೊಂದಬೇಕು. ಹೆಚ್ಚಾಗಿ ವಿಷಯಗಳ ಸಂಗ್ರಹದ ಗೋಜಿಗೆ ಹೋಗಬಾರದು. ಅವು ಸಹಜವಾಗಿಯೇ ಬಹಳ ಪ್ರಾಪ್ತವಾದರೆ ಅವನ್ನು ಸಮಾಜಕ್ಕಾಗಿ ಅದರಲ್ಲಿಯೂ ಸತ್ಪಾತ್ರರಾದವರಿಗೆ ಮಾತ್ರ ವೆಚ್ಚ ಮಾಡಬೇಕೆಂದು ಹೇಳಿದ್ದಾರೆ.

ಹೆಚ್ಚು ಸಂಗ್ರಹಿಸಿದರೆ ವಿನಾಕಾರಣ ಆಲಸ್ಯ ಅಹಂಕಾರ ಮದಾಂಧತೆ ಅರುಪ್ರಗೇಡು ಪಾಪಕೃತಿಗಳು ತಾವಾಗಿಯೇ ಮನುಷ್ಯನನ್ನು ಬಳಿಶಾಗಿ ಭವಪಾಶದಲ್ಲಿ ಬಿಗಿದು ಬಿಡುವವೇ ಹೊರತು ಆತ್ಮೋದ್ಧಾರವನ್ನೇನೂ ಮಾಡವು. ಮನಸ್ಸಿಗೆ ಶಾಂತಿ ನಿಜವಾದ ಆನಂದಗಳನ್ನೂ ಕೊಡಲಾರವು. ಆದುದರಿಂದ ಅವುಗಳನ್ನು ಕಾಯ ರಕ್ಷಣದ ಪೂರ್ತೆ ಮಾತ್ರ ಗಳಿಸಬೇಕು. ಸಂಗ್ರಹಿಸಬಾರದು ಎಂಬುದೇ ಪ್ರಮಥರ ಸಿದ್ಧಾಂತವು. ಆದರೆ ಇದು ಈಗಿನವರಿಗೆ ಎಷ್ಟು ಮಾತ್ರವೂ ಮನಸ್ಸಿಗೆ ಬರುವದಿಲ್ಲ. ಅವರು ನಾವು ಆರೋಗ್ಯದಿಂದಿದ್ದಾಗ ಹೆಚ್ಚಿಗೆ ಸಂಗ್ರಹಿಸದಿದ್ದರೆ, ಇಲ್ಲವೆ ಆ ಸಂಗ್ರಹವನ್ನೆಲ್ಲ ಸತ್ಪಾತ್ರದಲ್ಲಿ ದಾನ ಮಾಡಿ ಬರಿಗೈಯವರಾಗಿ ಕೂತರೆ. ಅಂತ್ಯಕಾಲದಲ್ಲಿ ನಮಗೆ ಅನಾರೋಗ್ಯ ಒದಗಿ ಬೇನೆಯಿಂದ ಬಳಲಹತ್ತಿದರೆ, ಇಲ್ಲವೆ ಮಕ್ಕಳು ಚಿಕ್ಕವರಿರುವಾಗಲೇ ನಾವು ತೀರಿ ಹೋದರೆ ಮುಂದೇನು ಗತಿ? ಎಂದು ಪ್ರಶ್ನಿಸುವರು. ಇದರ ಉತ್ತರವೇನೆಂದರೆ:— ನೀವು ನಿಜವಾದ ಭಕ್ತಿ ಮಾರ್ಗದಿಂದ ನಡೆದು ಆಪತ್ತಿಗೊಳಗಾಗಿದ್ದರೆ, ಉಳಿದ ಭಕ್ತರು ನಿಮ್ಮ ಕಷ್ಟವನ್ನು ನೋಡಿ ಕೊಂಡು ಎಂದೂ ಸುಮ್ಮನೆ ಕೂಡ್ರಲಾರರು. "ನೋಡಿಕೊಳ್ಳುವವನು ಭಕ್ತನಲ್ಲ" ಎಂದು ಅವರಿಗೂ ಪ್ರಮಥರು ವಿರೋಧವಿತ್ತಿರುವರು. ಆ ಕಾರಣ ಅವರು ನಿಮಗೆ ಸಹಾಯ ಮಾಡಲು ತಪ್ಪದೆ ಮುಂದೆ ಬರುವರು. ನೀವು ಅಗ್ಗೆ ಲವಮಾತ್ರವೂ ಸಂದೇಹಗೊಳ್ಳಬಾರದು. ಮತ್ತು ನಾವು ಸಲಹುವೆವು" ಎಂಬ ಒಣ ಅಹಂಕಾರಕ್ಕೊಳಗಾಗಬೇಡಿರಿ. ಹುಟ್ಟಿಸಿದ ದೇವರೇ ಯಾವಾಗಲೂ ಸಂರಕ್ಷಿಸುವನು.

"ಯಾತಕೆ ಚಿಂತೆಯನು ಮಾಡುವೆ ಮೂಢಾ ॥ ವಿಶ್ವನಾಥನೆ ಪೋಷಿಪನು ಯೋಚಿಸಬೇಡಾ ॥" ಇತ್ಯಾದಿ ಪೂರ್ವಿಕರ ಬೋಧೆಗಳತ್ತ ಲಕ್ಷಿಸಿರಿ. ನಾವು ನಿಮಿತ್ತಮಾತ್ರರೆಂಬುದನ್ನು ಮರೆಯಬೇಡಿರಿ. ಇದು ಸತ್ಯ ಸತ್ಯ ಸತ್ಯ ತ್ರಿವಾರ ಸತ್ಯ !!

ಶಿವಾನಂದವು ಮಾತ್ರ ಶಾಂತಿ ಶಾಶ್ವತ ಸುಖಗಳ ಆಗರವಾಗಿದೆ. ಆ ಶಿವಾನಂದ ಪ್ರಾಪ್ತಿಗಾಗಿಯೇ ಭಕ್ತರು ಯಾವಾಗಲೂ ಹೆಣಗಾಡಬೇಕೆಂದು ಪ್ರಮಥರು ಆಗ್ರಹದಿಂದ ಬೋಧಿಸಿದ್ದಾರೆ. ಗಳಿಸಿಟ್ಟ ವಿಷಯಗಳೇನೂ ದೇಹ ಬಿಟ್ಟ ಮೇಲೆ ಸಂಗಡ ಬರುವದಿಲ್ಲ. ಈ ಶಾಂತಿ ಪರಮಾನಂದಗಳು ಮಾತ್ರ ಅವನ ಸಂಗಡಲಿರುವವು. ದೇವರಲ್ಲಿ ಸಮರಸಗೊಳಿಸಿ ಮೋಕ್ಷವನ್ನು ಕೊಡುವವು. ಜನ್ಮ ಸಾಫಲ್ಯಗೊಳಿಸುವವು. ಪ್ರಮಥರು ನಿರ್ಧರಗೊಳಿಸಿ ವಚನಶಾಸ್ತ್ರದಲ್ಲಿ ಹೇಳಿದುದೆಲ್ಲ ಇದೊಂದೇ ಸಂಗತಿಯು. ಷಟ್‌ಸ್ಥಲ ಜ್ಞಾನ ಮೂಲಕವಾಗಿ ಅವನ್ನು ಪಡೆಯಲು ಶ್ರೀ ಚೆನ್ನ ಬಸವ ದೇವರು ಉಪದೇಶಿಸಿದ್ದಾರೆ. ಅದಕ್ಕಾಗಿ ಮತ್ತೂ ಸೂಕ್ಷ್ಮ ವಿಚಾರದೊಂದಿಗೆ ನೂರೊಂದು ಸ್ಥಳಗಳನ್ನು ಕೇಳಿರುವರು. ಅವುಗಳಲ್ಲಿ ಭಕ್ತನಾಗಲಿಕ್ಕೆ ಪಿಂಡ ಸ್ಥಳ, ಪಿಂಡ ಜ್ಞಾನಸ್ಥಳ, ಸಂಸಾರ ಹೇಯ ಸ್ಥಲ, ಇವಾದಮೇಲೆ ಗುರುಕಾರುಣ್ಯ ಸ್ಥಲವನ್ನು ಹೇಳಿದ್ದಾರೆ. ಗುರುವು ಆಗ ಲಿಂಗ, ವಿಭೂತಿ, ರುದ್ರಾಕ್ಷಿಗಳನ್ನು ಧರಿಸಿ ಶಿಷ್ಯನಿಗೆ ಶಿವಮಂತ್ರೋಪದೇಶ ಮಾಡುವನು. ಈ ಎಂಟು ಸ್ಥಳಗಳನ್ನು ಹೊಂದಿದವನೇ ಭಕ್ತ (ಈಶ್ವರ)ನೆನಿಸುವನು. ಆತನೇ ಲಿಂಗಾಯತನು.

ಈಗ ನಾವು ವ್ಯವಹಾರದಲ್ಲಿರುವ ರೀತಿಯನ್ನು ನೋಡಿದರೆ, ಲಿಂಗವಂತರ ಹೊಟ್ಟೆಯಲ್ಲಿ ಹುಟ್ಟಿದ ಕೂಸಿಗೆ, ಅದು ಹುಟ್ಟಿದ ಕೂಡಲೆಯೋ ಇನ್ನೂ ತಾಯಿಯ ಗರ್ಭದಲ್ಲಿರುವಾಗಲೋ ಗುರುವಿನಿಂದ ಲಿಂಗಧಾರಣವಾಗಿಬಿಡುವದು. ಆತನಿಗೆ ಪಿಂಡಸ್ಥಳ, ಪಿಂಡ ಜ್ಞಾನಸ್ಥಳ, ಸಂಸಾರ ಹೇಯ ಸ್ಥಲಗಳ ಸಂಬಂಧ ಇರುವದಿಲ್ಲೆಂಬುದು ಸ್ಪಷ್ಟವೇ ಅದೆ ಆದರೆ ಈ ಮಾರ್ಗ "ಆ ಶಿಶುವು ಗರ್ಭದಲ್ಲಿದ್ದಾಗ ಲಿಂಗ ಧಾರಣವಾದರೂ ಅದಕ್ಕೆ ಮೊದಲೇ ವಿದಿತವಾಗಿರುತ್ತವೆ" ಎಂದು ಹೇಳುವವರೂ ಇದ್ದಾರೆ. ಒಂದು ವೇಳೆ ಅಲ್ಲಿದ್ದಾಗ ಗೊತ್ತಿದ್ದವೆಂದು ತಿಳಿದರೂ, ಜನ್ಮಿಸುವಾಗ ಪ್ರಸೂತಿ ವಾಯುವಿನ ಆಘಾತದಿಂದ ಆ ಕೂಸು ಗಾಸಿಯಾಗಿ ಭೂಮಿಗೆ ಬಿದ್ದಮೇಲೆ ಇಲ್ಲಿಯ ವಾತಾವರಣ ಪರಿಸ್ಥಿತಿಗಳನ್ನು ಕಂಡು ಮತ್ತಿಷ್ಟು ಹಾಹಾಕಾರಿ, ತೀರ ಅಜ್ಞನಾಗಿ ಬಿಡುವದು. ಒಳ್ಳೊಳ್ಳೆ ದೊಡ್ಡವರಾದವರೇ ಜಗತ್ತಿನ ಮಾಯೆಗೆ ಒಳಗಾಗಿ ಬಳಲುತ್ತಿರುವಾಗ ಪಾಪ! ಆ ಕೂಸಿಗೆ ಹಾಗಾಗುವದೇನು ಆಶ್ಚರ್ಯ? ಇಂತಹ ಕೂಸು ಬೆಳೆದು ದೊಡ್ಡದಾಗಿ ನಿಂತರೂ ಅದು ಹೆಸರಿಗೆ ಮಾತ್ರ ಲಿಂಗವಂತನೆನಿಸುವದೇ ಹೊರತು,

ಲಿಂಗಧಾರಣದ ನಿಜವಾದ ಪ್ರಯೋಜನವನ್ನು ಪಡೆಯಲಾರದು. ಈ ಮಾತಿಗೆ ಈಗ ನಾವು ಸಾಮಾಜಿಕರನ್ನು ಪ್ರತ್ಯಕ್ಷ ನೋಡುವುದೇ ಸಾಕ್ಷಿ. ಈ ಹುಡುಗನು ದೊಡ್ಡವನಾದಮೇಲೆ ಅವನಿಗೆ ದೀಕ್ಷೆ - ಶಿಕ್ಷೆ - ಜ್ಞಾನಗಳು ಗುರುಗಳಿಂದ ಲಭಿಸದೆ ಹೋದರೆ, ಅವನಕಡೆಗೇನು ತಪ್ಪು? ಅದೆಲ್ಲ ಸಮಾಜದೊಳಗೆ ರೂಢವಾಗಿ ನಿಂತಿರುವ ಈಗಿನ ಪರಿಪಾಠದಕಡೆಗೆಯೇ ಇರುವದು. ಇರಲಿ.

ಈಗ ಪಿಂಡಾದಿ ಮೂರು ಸ್ಥಳಗಳ ವಿಷಯವಾಗಿಯೇ ಬರೆಯುವದು ಮುಖ್ಯೋದ್ದೇಶವದೆ. ಅವುಗಳ ಸಂಬಂಧವಾಗದೆ ಅವು ಪೂರಾ ಮನಸ್ಸಿನ ಮೇಲೆ ಬಿಂಬಿಸದೇ ಹೋದರೆ, ಕಣ್ಣು ಕಟ್ಟಿ ಅಜ್ಞಾನ ಪಂಕದಲ್ಲಿಯೇ ಹೂಳಿ, ಜಗತ್ತಿನಲ್ಲಿ ವ್ಯವಹರಿಸಲಿಕ್ಕೆ ( ಜೀವನ ಸಾಗಿಸಲಿಕ್ಕೆ ) ಹೇಳಿದಂತಾಯಿತು ಏಕೆಂದರೆ:—

(೧) ಪಿಂಡಸ್ಥಳ:— ಪಿಂಡವೆಂದರೆ ಏನು ? ಎಂದು ಕೇಳಿದರೆ ಅದರ ಸಮರ್ಪಕ ಉತ್ತರವನ್ನು ತೀರ ತುಸು ಜನರು ಮಾತ್ರ ಹೇಳುವರು. ಗಿಳಿಪಾಠದಂತೆ ಓದಿದವರು ಹೆಚ್ಚಾದರೆ ಪಿಂಡ ಸ್ಥಳದೊಳಗಿನ ವಚನಗಳನ್ನು ಎತ್ತಿ ನುಡಿದು ಹೇಳಬಹುದು. ಆದರೆ ಅದರಿಂದ ಅವರಿಗೇನೂ ಪಿಂಡದ ಅರ್ಥವೇ ಗೊತ್ತಿರುವದಿಲ್ಲ. ಪಿಂಡವೆಂದರೆ ಈ ಜಗತ್ತಿನಲ್ಲಿ ನಾವು ಕಾಣುವ ಪ್ರತಿಯೊಂದು ಒಡವೆ ಇಲ್ಲವೆ ಪದಾರ್ಥ. ಜಗತ್ತೂ ಅದರೊಳಗಿನ ಎಲ್ಲ ವಸ್ತುಗಳೂ ಪರಬ್ರಹ್ಮ (ಪರಶಿವ) ನಿಂದಲೇ ಆಗಿರುತ್ತವೆ. “ಲಿಂಗ ಮಧ್ಯೇ ಜಗತ್ ಸರ್ವಂ” ಅಥವಾ “ಶಿವಮಯಮಿದಂ ಜಗತ್” ಎಂಬವೇ ಇದಕ್ಕೆ ಸಾಕ್ಷ್ಯ. ಆ ಪ್ರತಿಯೊಂದು ಪಿಂಡವು (ಪದಾರ್ಥವು) ಶಿವರೂಪವೇ ಅಥವಾ ಶಿವನೇ ಎಂದು ದೃಢವಾಗಿ ಭಾವನೆ ಹೊಂದಿದರೆ, ಪಿಂಡಸ್ಥಲವನ್ನು ಅರಿತಂತಾಯಿತು.

(೨) ಪಿಂಡ ಜ್ಞಾನಸ್ಥಳ:— ಆ ಪದಾರ್ಥಗಳಿಗೆ ಅವುಗಳ ಆಕಾರ ಗುಣಾದಿಗಳಿಗನುಸರಿಸಿ ಬೇರೆ ಬೇರೆ ಹೆಸರುಗಳು ಬಿದ್ದಿರುತ್ತವೆ. ಈಗ ಯಾರನ್ನಾದರೂ ಪದಾರ್ಥ ತೋರಿಸಿ ‘ಇವು ಏನು ಎಂದು ವಿಚಾರಿಸಿದರೆ ಜೋಳ, ಹಕ್ಕಿ, ಕಲ್ಲು, ಗಿಡ, ಕುರಿ, ಬೆಕ್ಕು, ಮನುಷ್ಯ ಇತ್ಯಾದಿಗಳನ್ನೇ ಹೇಳುವರು. ಅಲ್ಲದೆ ಅವೆಲ್ಲ ‘ಶಿವ ಇಲ್ಲವೆ ದೇವ’ ಎಂದು ಯಾರೂ ಹೇಳುವ

ದಿಲ್ಲ. ವ್ಯವಹಾರದಲ್ಲಿ ಹಾಗೆ ಹೇಳುವದು ಉಚಿತವಾಗಿದ್ದರೂ, ತಾತ್ವಿಕ ದೃಷ್ಟಿಯಿಂದ ಅದು ತಪ್ಪೆನಿಸುವದು. ವೀರಶೈವರು ಜ್ಞಾನ ಪ್ರಧಾನರಾಗಿರುವದರಿಂದ ಪ್ರತಿಯೊಬ್ಬ ದೊಡ್ಡವನಿಗೆ ತಾತ್ವಿಕಾರ್ಥವು ಗೊತ್ತಿರಲೇ ಬೇಕು. ಇಲ್ಲವಾದರೆ ಅವನು ನಿಜವಾದ ಶಿವಜ್ಞಾನಿಯಾಗಿ ಲಿಂಗಾಂಗ ಸಾಮರಸ್ಯವನೆಂದೂ ಪಡೆಯಲಾರನು. ಹಾಗಾದರೆ ಲಿಂಗವಂತರ ಉದರದಲ್ಲಿ ಜನ್ಮಿಸಿ ವೀರಶೈವನೆನಿಸಿದುದರ ಪ್ರಯೋಜನವೇನು ?

(೩) ಸಂಸಾರ ಹೇಯ ಸ್ಥಳ:- ಸಂಸಾರವೆಂದರೆ ಪ್ರಪಂಚ (ಜಗತ್ತು). ಇದು ಬಹು ಮನೋಹರವಾಗಿ ಕೂಸಿಗೆ ಕಂಡಂತೆ ದೊಡ್ಡವರಿಗೂ ಸಹ ಕಾಣುತ್ತದೆ. ಅಂತೇ ಅವರು ಅದಕ್ಕೆ ಮೋಹಿಸಿ, ವಿಷಯಗಳ ಬಲೆಗೆ ಬಿದ್ದು ಸಂಗ್ರಹಿಸಿ ಪೇಚಾಡುತ್ತಿರುವರು. ಹೊನ್ನು ಹೆಣ್ಣು ಮಣ್ಣು ಮೊದಲಾದ ವಿಷಯ (ಪದಾರ್ಥ) ಗಳೆಲ್ಲ ಸುಖಮಯವಾಗಿಯೇ ಅವರಿಗೆ ತೋರುತ್ತವೆ. ಅವೆಲ್ಲ ಅಶಾಶ್ವತ (ಅಧ್ರುವ) ಪದಾರ್ಥಗಳಾದುದರಿಂದ ಅವು ನಡು ನಡುವೆಯೇ ನಾಶ ಹೊಂದಿ ಕೈ ಬಿಡುತ್ತವೆ. ಅದುದರಿಂದ ನರನಿಗೆ ಬರು ದುಃಖ ಪ್ರಾಪ್ತವಾಗುವದು. ಹಾಗಾಗಬಾರದೆಂದೇ ಪ್ರಮಥರು ಅಲಿಪ್ತ ಸಂಸಾರ ಮಾಡಲಿಕ್ಕೆ ಹೇಳುತ್ತಾರೆ. ಹೆಂಡಿರು ಮಕ್ಕಳು ಬದುಕು ಭಾಗ್ಯವೆಂಬ ಈ ಷಣತ್ರಯವನ್ನು ನಂಬಬೇಡ; ಅವನ್ನು ಮೇಲೆ ನಂಬಿದಂತೆ ನಟಿಸುತ್ತಿದ್ದರೂ (ಕರ್ತವ್ಯನಿಷ್ಠನಂತೆ ತೋರುತ್ತಿದ್ದರೂ) ಒಳಗೆ ಮಾತ್ರ ಅವನ್ನು ಶಾಶ್ವತವೆಂದು ನಂಬಬೇಡ. ಋಣಾನುಬಂಧ ತೀರಿದೊಡನೆಯೇ ಅವು ಹೋಗಿಬಿಡುವವು. ಅವಕ್ಕೂ ನಿನಗೂ ಏನೇನು ಸಂಬಂಧವಿಲ್ಲ. ಅವು ತಮ್ಮ ಕರ್ಮ ಫಲವನ್ನು ಅನುಭವಿಸುತ್ತವೆ; ನೀನು ನಿನ್ನ ಕರ್ಮಕ್ಕೊಳಗಾಗಿರುವೆ. ಅವು ಪ್ರಾಪ್ತವಾದಾಗ ಹಿಗ್ಗಬೇಡ, ಹೋದಾಗ ತಗ್ಗಬೇಡ. ಈ ಮಾತನ್ನು ಅಂತಃಕರಣದಲ್ಲಿ ಸದಾ ಗಟ್ಟಿಯಾಗಿ ಹಿಡಿದುಕೊಂಡು ಹೊರಗೆ ಪ್ರಪಂಚವನ್ನು ಎಲ್ಲರಂತೆಯೇ ನೀನು ಕರ್ತವ್ಯವೆಂದು ಮಾಡುತ್ತ ಹೋಗು. ಬಿಟ್ಟು ಮಾತ್ರ ಇರಬೇಡ. ಅದರಿಂದ ಬೇರೆ ಬೇರೆ ದೋಷಗಳು ತಟ್ಟಲಿಕ್ಕೆ ಕಾರಣವಾಗುವದು. ಹೀಗೆ ವರ್ತಿಸುವದೇ ಅಲಿಪ್ತ ಸಂಸಾರ. ಇಂತು ಸಂಸಾರಿಯಾಗಿದ್ದರೂ ಕೂಡ! ಪ್ರಪಂಚದಲ್ಲಿ ತ್ರಿತಾಪಗಳು ತಪ್ಪಲಾರವು. ಆದುದರಿಂದಲೇ ಭವವನ್ನು ತಪ್ಪಿಸಿಕೊಂಡು ಶಿವಾನುಗ್ರಹದಿಂದ ಅವನಲ್ಲಿ ಬೆರೆಯಲಿಕ್ಕೆ ಲಿಂಗವಂತನು ತತ್ಪರನಾಗಿರುವನು.

ಈ ಮೂರು ಸ್ಥಳಗಳನ್ನು ಯಥೋಚಿತವಾಗಿ ಹೊಂದಿದವೇಲೆ ಗುರುಕೃಪೆ ಪಡೆದು ಲಿಂಗಧಾರಿಯಾದರೆ ಆಗ ಅವನಿಗೆ ಲಿಂಗ ವಿಭೂತಿ ರುದ್ರಾಕ್ಷಿಗಳು ಶಿವಮಂತ್ರವೂ ಲಭಿಸಿ, ಭಕ್ತನಾಗುವನು. ಅಲ್ಲಿಗೆ ದೀಕ್ಷೆಯ ಕಾರ್ಯ ಮುಗಿಯಿತು. ಆದಾಗ್ಯೂ ಇಷ್ಟರಿಂದಲೇ ಅವನಲ್ಲಿ ನಿಜವಾದ ಭಕ್ತತ್ವವು ನೆಲೆಗೊಳ್ಳಲಾರದು. ಬಳಿಕ ಅವನಿಗೆ ಶಿಕ್ಷಾ ಗುರುವಿನ ಶಿವ ಮಾರ್ಗ ಶಿಕ್ಷಣವು ಅನುಕೂಲಾಗ್ರ ಅವಶ್ಯವಾಗಿ ದೊರೆಯಲೇ ಬೇಕು. ಅದರಿಂದ ಲಿಂಗವ ನಲೆಕಲೆ ಮುಂತಾದವುಗಳ ಜ್ಞಾನವಾಗುವದು. ಅಂದರೆ ಲಿಂಗವೆಂದರೇನು, ಅದನ್ನು ಯಾಕೆ ಧರಿಸಬೇಕು, ಲಿಂಗ ಪೂಜೆಯ ಪ್ರಯೋಜನವೇನು, ಅದನ್ನು ಹೇಗೆ ಮಾಡಬೇಕು, ಅದರಂತೆ ವಿಭೂತಿ ರುದ್ರಾಕ್ಷಿಗಳೆಂದರೇನು, ಅವನ್ನು ಯಾಕೆ ಧರಿಸಬೇಕು, ಅದರಿಂದ ಯಾವ ಯಾವ ಭಾವನ ಮಾಡಬೇಕು; ಇತ್ಯಾದಿಗಳೆಲ್ಲ ನಿಃಸಂದೇಹವಾಗಿ ತಿಳಿಯುವವು. ಆಗ ಅವುಗಳಲ್ಲಿ ಭಕ್ತಿಯುದ್ಭವಿಸಿ ಅವುಗಳನ್ನು ಆರಾಧಿಸಿ ನಿಜವಾದ ಭಕ್ತನಾಗುವನು. ಇಲ್ಲದಿದ್ದರೆ, ಅವನ್ನು ಎತ್ತೋ ಚೆಲ್ಲಿಕೊಟ್ಟು ಮನಬಂದಂತೆ ನಡೆಯುವನು. ಹೀಗೆ ಶಿಕ್ಷಾಗುರುವಿನ ಉಪದೇಶ ಪಡೆದ ಮೇಲೆ ಮಹಾ ಗುರುವಾದ ಶ್ರೀ ಜ್ಞಾನ ಗುರುರಾಯನಿಂದ ತಾನು ಮೊದಲೇ ಪಡೆದ ಶಿವಮಂತ್ರವನ್ನು ಅದರ ಅಂತಸ್ಥವಾದ ಮಾರ್ಮಿಕಾರ್ಥ ಸಹಿತ ವಾಗಿ ಅರಿತುಕೊಂಡು ಜಪಿಸಿ, ತದ್ಭಾವನೋದ್ದೀಪಿತನಾಗಿ, ತಾನು ಯಾ ರೆಂಬುದನ್ನು ಅಂತಃಕರಣದಲ್ಲಿ ಗ್ರಹಿಸಿಕೊಂಡು ಭಕ್ತನು ಕೃತಾರ್ಥ ನಾಗಬೇಕು.

ಪಿಂಡ ಸ್ಥಳದಿಂದ ಭೇದ ಭಾಸವಳಿದು, ಸರಿ ಸಮಾನತೆಯು ನೆಲೆ ಗೊಂಡು ಏಕಮೇವಾ ದ್ವಿತೀಯತೆಗೆ ಆಸ್ಪದ ಉಂಟಾಗುವದು. ಪಿಂಡ ಜ್ಞಾನ ಸ್ಥಳದಿಂದ ಪರಸ್ಪರರಲ್ಲಿ ಆದರ ಭಾವವು ಹುಟ್ಟಿ ಅವರ ಸೇವಾ ಶುಶ್ರೂಷೆ ಮಾಡುವ ಒಲವು ಉಂಟಾಗಿ, ಭಕ್ತಿಯು ಒಡಮೂಡುವದು. ಸಂಸಾರ ಹೇಯ ಸ್ಥಳದಿಂದ ಶಾಶ್ವತವಾವುದು, ಅಶಾಶ್ವತವಾವುದು ಎಂಬು ದರ ಕಡೆಗೆ ಲಕ್ಷ ಹೋಗುವದು; ಈ ಶಾಶ್ವತ ಅಶಾಶ್ವತಗಳಿಗೇನೇ ಧ್ರುವ ಅಧ್ರುವ ಸತ್ತು - ಅಸತ್ತು, ಪ್ರಸಾದ - ಓದನಗಳೆಂತಲೂ ಹೆಸರುಂಟು. ಈ ಮೂರು ವಿಧದ ತಿಳವಳಿಕೆಯು ಪ್ರತಿಯೊಬ್ಬನಿಗೆ ಅವಶ್ಯವಾಗಿ ಇರಲೇ ಬೇಕು- ವೀರಶೈವ ತತ್ವಜ್ಞಾನಕ್ಕೆ ಇವೇ ಮೂಲಾಧಾರವಾಗಿವೆ. ಶಿಕ್ಷಾಗುರು

ವಿನ ಬೋಧೆಯಿಲ್ಲವೆ, ಇವು ಹೇಗೆ ತಮ್ಮಿಂದ ತಾವೇ ಹುಟ್ಟುವವು? ಅನೇ
ಕರು " ಮನೆಯೊಳಗಿನ ಹಿರಿಯರನ್ನು ನೋಡಿ ಮಕ್ಕಳು ಅನುಕರಣ
ದಿಂದ ತಮಗೆ ತಾವೇ ಕಲಿತುಕೊಳ್ಳುವರು; ಅವರಿಗೆ ಗುರು ಶಿಕ್ಷಣದ
ಅವಶ್ಯಕತೆಯು ಏಕೆ? " ಎಂಬುವವರೂ ಇದ್ದಾರೆ. ಒಂದು ವೇಳೆ ಇದನ್ನು
ಒಪ್ಪಿದರೂ ಎಲ್ಲರ ಮನೆಯಲ್ಲಿ ಅಂತಹಬಲ್ಲ ಹಿರಿಯರು ಇರುವ ಸಂಭವ
ವಿಲ್ಲ. ಇದ್ದರೂ ಅವರವರ ಕಾಯಕದಲ್ಲಿ ಮಕ್ಕಳಿಗೆ ಹೇಳಿಕೊಡಲು ಅವ
ಕಾಶವಾಗಲಿಕ್ಕಿಲ್ಲ. ಆದುದರಿಂದ ಅವರಿಗೆ ಗುರುಶಿಕ್ಷೆಯು ಬೇಕೇ ಬೇಕು.
ಈ ಗುರುವು ಆದಾರನಿದ್ದರೂ ಚಿಂತೆಯಿಲ್ಲ. ಅವನು ಮಾತ್ರ ಒಳಿತಾಗಿ
ಬಲ್ಲವನಿರಬೇಕು. ಎಷ್ಟೇ ಸುಶಿಕ್ಷಿತಹಿರಿಯರಿದ್ದರೂ ತಮ್ಮ ಮಕ್ಕಳನ್ನು ಈಗ
ಎಲ್ಲರೂ ಶಾಲೆಗೆ ಕಲಿಯಲು ಕಳಿಸಿಕೊಡುವದಿಲ್ಲವೇ? ಮನೆಯಲ್ಲಿ ಹೇಳಿದು
ದಕ್ಕೂ ಶಾಲಾ ಶಿಕ್ಷಣಕ್ಕೂ ಕೆಲ ವ್ಯತ್ಯಾಸಗಳು ಇರುತ್ತವೆ. ಅಲ್ಲಿರುವ ಸೌಕ
ರ್ಯಗಳೆಲ್ಲ ಮನೆಯಲ್ಲಿ ಹೇಗೆ ಬಂದಾವು !

ಈಗ ಜಗತ್ತಿನಲ್ಲಿ ಏನು ನಡೆದಿದೆಂಬುದನ್ನು ತಮ್ಮ ನೆನಪಿಗೆ ತಂದು
ಕೊಡುವದು ಅವಶ್ಯವದೆ. ಅದೇನು ಹೊಸದಲ್ಲ. ಎಲ್ಲರಿಗೂ ಗೊತ್ತಿದ್ದುದೇ!
ಆದರೆ ಯಾವಾಗಲೂ ಕಣ್ಮುಂದೆ ಮಾತ್ರ ಇರುವದಿಲ್ಲ. ಸಾಂಪ್ರತಕ್ಕೆ ಪಾಶ್ಚಾ
ತ್ಯರು ( ಯುರೋಪ ಅಮೇರಿಕೆಯ ಜನರು ) ಹೆಚ್ಚು ಪ್ರಗತಿಪರರಾಗಿ
ರುವರೆಂಬ ಭಾವನೆಯಿರುವದಲ್ಲವೆ! ಅವರ ಅನುಕರಣೆಯನ್ನೇ ಮಾಡ
ಲಿಕ್ಕೆ ಭಾರತೀಯರೆಲ್ಲರೂ ತೊಡಗುವರಲ್ಲವೇ ? ಆ ಪಾಶ್ಚಾತ್ಯರಾದರೋ
ಜಗದ್ವಿಷಯಗಳಿಗೆ ಅತ್ಯಂತ ಮೋಹಿಸಿದವರು. ಹೊನ್ನು ಹೆಣ್ಣು ಮಣ್ಣುಗಳಿಗೆ
ಬೇಕಾದ ಸಾಹಸಮಾಡಲಿಕ್ಕೆ ಹಂಬಲಿಸುತ್ತಿರುವರು. ಅವರಿಗೆ ಪಾರಮಾ
ರ್ಥಿಕವು ( ಮೋಕ್ಷವು ) ಏಟೂ ತೋರುವದಿಲ್ಲ. ಅಂತೇ ಅವರು ರಾಷ್ಟ್ರೀ
ಯತ್ವವುಳ್ಳವರಾಗಿ ತಮ್ಮ ರಾಷ್ಟ್ರದ ಹಾಗು ಜನರ ಐಹಿಕ ಶ್ರೇಷ್ಠತೆ
ಗಾಗಿ ಯಾವಾಗಲೂ ಹೊಂಚುಹಾಕಿಕೊಂಡೇ ನಡೆಯುವರು.ಮೇಲೆ ಮಾತ್ರ
ಬಹು ಸಾಧುತ್ವನಿಡಿದಂತೆ ಸೋಗು ಹಾಕುವರು. ಇವರೇ ಈಗ ದೊಡ್ಡ ದೊಡ್ಡ
ಮುತ್ಸದ್ದಿಗಳು ಎಂದು ಹೆಸರು ಪಡೆಯುವರು. ಇಂತಹ ದುಷ್ಟರ ಅನು
ಕರಣದಿಂದ ನಮ್ಮ ಆತ್ಮೋದ್ಧಾರವೆಂತು ಪ್ರಾಪ್ತಿಸುವದು? ಏಶಿಯದವರು
(ಪೌರ್ವಾತ್ಯರು) ಸಹ ನಾವು ಭಾರತೀಯರುಕೂಡ, ಅವರಂತೆಯೇ ವಿಷಯ
ಸುಖಕ್ಕಾಗಿಯೇ ಬಡಕೊಳ್ಳುತ್ತೇವೆ. ಎಲ್ಲರನ್ನು ನೋಡಿ ನಾವು ಲಿಂಗವಂ
ದರೂ ಸಹ ವಿಷಯಾಭಿಲಾಷಿಗಳಾಗಿ ಕಡತನಕ ಹೆಣಗಾಡಿ ನರಜನ್ಮವನ್ನು
ವ್ಯರ್ಥ ಕಳೆದು ಬಿಡುತ್ತೇವೆ. ಲಿಂಗಧಾರಿಗಳಾಗಿದ್ದರೂ ಲಿಂಗಾಂಗ ಸಾಮ

ರಸ್ಯದ ಅರಿವೆ ಇಲ್ಲದವರಾಗಿದ್ದೇವೆ ಹೆಸರಿಗೆ ಮಾತ್ರ ಪ್ರಮಥರ ಅನುಯಾಯಿಗಳೆಂದು ಹೇಳುತ್ತೇವೆ; ಆದರೆ ಯಾವಾಗಲೂ ಭವಿಜನರಂತೆಯೇ ನಡೆಯುತ್ತೇವೆ. ಕಡೆಗೆ ಅವರಂತೆ ಮಲತ್ರಯದಿಂದ ದೂಷಿತರಾಗಿ ಚಕ್ರದಲ್ಲಿ ಸಿಕ್ಕು ಚೂರಾಗುತ್ತಿರುವೆವು. ಆದರೂ ನಾವು ವೀರಶೈವರೆಂದು ಹೇಳಲಿಕ್ಕೆ ಮಾತ್ರ ಮರೆಯುವದಿಲ್ಲ. ಹೆಸರಿಗೆ ಹಾಲಪ್ಪ. ಆದರೂ ಮನೆಯಲ್ಲಿ ಹಾಲಿನ ಒಂದು ತೊಟಕಾದರೂ ಸಿಕ್ಕುವಂತಿಲ್ಲ. ಇಂತಹ ಒಣ ಲಿಂಗಧಾರಿತ್ವದಿಂದೇನಾಗುವದು ? ನಾವು ನಿಜವಾದ ಲಿಂಗವಂತಿಕೆಯನ್ನೂ ಸಾತ್ವಿಕ ರಾಷ್ಟ್ರೀಯತೆಯನ್ನೂ ಹೊಂದಿ ಬಾಳತಕ್ಕದ್ದು.

ಇನ್ನು ಮೇಲಾದರೂ ಮೇಲೆ ಹೇಳಿದಂತೆ ದೀಕ್ಷಾ-ಶಿಕ್ಷಾ-ಜ್ಞಾನಗಳನ್ನು ಸರಿಯಾಗಿ ಹೊಂದಬೇಕು. ಇವೇ ಆಂತರಿಕ ಪಾದೋದಕಗಳೆನಿಸುವವು. ದೀಕ್ಷಾಗುರು ಶಿಕ್ಷಾಗುರು ಜ್ಞಾನಗುರುಗಳ ಪ್ರಯೋಜನವನ್ನು ಒಳಿತಾಗಿ ಪಡೆಯದಿದ್ದರೆ, ಈ ಪಾದೋದಕಗಳು ಪ್ರಾಪ್ತಿಸವು. ಲಿಂಗಾಂಗಿಯು ಸದ್ಭಕ್ತನಾಗಲಾರನು. ಸ್ವಯಂ ಚರ ಪರಜಂಗಮತ್ವಗಳಿಗೂ ದೂರಾಗುವನು. ಪ್ರಸಾದಕ್ಕೂ ಎರವಾಗುವನು. ಇಂತಾದರೆ ಅವನು ಶರಣನೂ ಐಕ್ಯನೂ ಆಗಿ ಲಿಂಗಾಂಗ ಸಾಮರಸ್ಯವನೆಂತು ಪಡೆಯುವನು ? ಮಹಾಲಿಂಗದಲ್ಲಿ ಐಕ್ಯತ್ವ ಪಡೆಯದಿದ್ದರೆ ನಮ್ಮ ಜನ್ಮವು ವ್ಯರ್ಥವೇ ಸರಿ. ಇನ್ನು ಲಿಂಗಾಂಗಿಗಳು ಇತ್ತ ಹೆಚ್ಚಾಗಿ ಗಮನಿಸುವದು ಅವಶ್ಯವದೆ.

# ವಿಶ್ವ ಕಲ್ಯಾಣ

(ಲೇಖಕರು:- ಶ್ರೀ ಸಿ. ನಾ. ಮಹಾಂತಣ್ಣವರ. ಮು. ಹುನ್ನೂರ.)



ವಿಶ್ವದೊಳು ಇಳಿದು, ವಿಶ್ವಧರ್ಮವೆಂದೆನಿಸುವ ವೀರಶೈವ ಮತ ಮಾರ್ಗದೊಳು ಸುಳಿದು, ನಿತ್ಯಾಚಾರದೊಳು ಬೆಳೆದು, ಸತ್ಯಾಚಾರವನು ತಳೆದು, ಕ್ರಿಯಾಚಾರದೊಳು ಉಳಿದು, ಜ್ಞಾನಾಚಾರದೊಳು ಹೊ[illegible] ಭೃತ್ಯಾಚಾರದೊಳು ಬಳೆದು, ಸದಾಚಾರದೊಳು ವೇಳೆಗಳೆದು, ಲಿಂಗಾಚಾರ ದೊಳು ಮನವಂ ಸೆಳೆದು, ಗಣಾಚಾರದೊಳು ಕರಣ ಮಥನಂಗಳ ಗೆಲಿದು ಶಿವಾಚಾರದೊಳು ಸದ್ಭಾವತ್ರಯಗಳನೊಡಗೊಂಡು ಸದಾ ಸನ್ನಿಹಿತನಾ ಗಿರುವ ವಿಶ್ವಾಶ್ರಮವೆನಿಸುವ ವಿಶ್ವ ಕಲ್ಯಾಣದ ಬಸವಾದಿ ಪ್ರಮಥರ ಮಹಾ ಮನೆಯೊಳು ದಾಸೋಹನೆಸಗುವ ಸುಯೋಗವನು ಸಾಧಿಸಿ, ಸಂಧಿಸಿ, ಬಂಧಿಸಿ, ಭವಮ[illegible]ಕನೆನಿಸಿ ಕಾಯಯ್ಯ ಎನ್ನ ಸಿದ್ಧೇಶ್ವರಾ ॥ ೧ ॥

ಮಾನವನ ಮತಿಯು ಮುಂದರಿದು ಮುದಂಗೊಳುತ ನಿಂದು ನೋಡಿ ನಿರೀಕ್ಷಿಸಲು, ನಿರಕ್ಷರ ಕುಕ್ಷಿಗಳು ಸಹ ಸಹಜಾನಂದದೊಳು ಇರುವ ಸುಲಭ ಮಾರ್ಗವಾವುದೆಂಬ ವಿಚಾರವನೆಸಗಲು, ವೇದ ಧರ್ಮವೆಂಬ ಖನಿ ಯೊಳು ಅನೇಕ ಮತಗಳೆಂಬ ಲೋಹಗಳೂ ನವರತ್ನಗಳೂ ಥಳಥಳಾಯ ಮಾನವಾಗಿ ಮಾನವನ ಸುವಿಚಾರ ತರಂಗಗಳೊಳಗೆ ಪ್ರಕಾಶಿಸಿ ಅಡಗು ವವಷ್ಟೇ. ಅವುಗಳಲ್ಲಿ ಸರ್ವ ವಿಶ್ವವನು ನೇತಿಗಳೆದು ತನ್ನ ದೇಹಾದಿ ಕರಣಂಗಳನು ಕಡೆಗೆ ಮಾಡುವ ವಿಚಾರ ಚಂದ್ರೋದಯದ ಬೆಳದಿಂಗ ಳಲ್ಲಿ ಮಾತಾಡಲು ಸುಲಭವಾದರೂ ನಡೆಯಲ್ಲಿ ನುಡಿಯ ಪರಿಣಾಮವು ಕಾಣದಿರಲು, ಮಾನವನು ಹೌಹಾರಿ ವಿಶ್ವವನು ನೇತಿಗಳೆದರೂ ಬಂಧು ಬಳಗ ಸಮಾಜವನ್ನುಳಿದರೂ ಸುಲಭವಾಗಿ ಗತಿಗಾಣದವನಾಗಿ ವೇದಾಂತ ತತ್ವವನೆ ಹಿಡಿದು ದೂಡದೇ ವಿಶ್ವದ ಆದಿ ಅನಾದಿಗಳನರುಹುತ್ತ ತಾನು ತನ್ನ ಬಂಧು ಬಾಂಧವರೊಡನಾಡುತ್ತ "ಜಂಗಮಂ ಜಗದ್ಭರಿತಂ, ಲಿಂಗ ಮಧ್ಯೇ ಜಗತ್ಸರ್ವಂ" ಎಂಬ ಜ್ಞಾನದೊಳು ಸುಳಿಯುತ್ತ "ಏಕೇನ ಜನ್ಮನಾ ಮುಕ್ತಿಃ" ಎಂಬ ತತ್ವಕ್ಕನುಸಾರವಾಗಿ, ವಿಶ್ವದೊಳಿರ್ದು ವಿಶ್ವದ ಸಾರವನೆ ಸ್ವೀಕರಿಸಿ, ವಿಶ್ವಾಂತರ್ಯಾಮಿಯಾದ ಲಿಂಗವನು ಅಂಗೈಸುತ "ಏಕೋ

ದೇವೋತ್ರಯೋರ್ಭಾಗಂ ಗುರುಲಿಂಗಂತು ಜಂಗಮಂ ; ಎಂಬ ಶ್ರುತಿಯನೆ ಅತಿ ನಿಜವೆನಿಸುವ ಅನುಭವದೊಳು ಒಲಿದಾಡುವ ಆನಂದಮಯ ವಿಶ್ವ ಧರ್ಮದೊಳು ವಿರಾಜಿಸುವ ಪ್ರಮಥಾಧೀಶರ ನಡೆಯೇ ನಿಜಕಲ್ಯಾಣ ವೆನಿಸುವದು.

ಪಂಚ ತತ್ವಗಳಿಂದೊಡಗೂಡಿದ ಈ ವಿಶ್ವವು ಆ ಪಂಚ ತತ್ವಗಳ ಪರಸ್ಪರ ಕೂಡುವಿಕೆಯಿಂದ ಚತುಃಕರಣಗಳೂ ಪಂಚ ವಿಷಯಗಳೂ ಪಂಚ ವಾಯುಗಳೂ ಜ್ಞಾನೇಂದ್ರಿಯ ಪಂಚಕವೂ ಕರ್ಮೇಂದ್ರಿಯ ಪಂಚಕವೂ ಆತ್ಮನೊಡನೆ ತನುವಾಗಿ ಜನಿಸಿದ ಮಾನವ ಕೋಟಿಯಲ್ಲಿ ಸುಜ್ಞಾನಾನಂದವಮಂ ಪಡೆದು ಪ್ರಜ್ವಲಿಸುವ ಪ್ರಮಥಾಧೀಶರೊಳು ನೀತಿ ಯಲ್ಲಿ, ಭಕ್ತಿಯಲ್ಲಿ, ಆಚಾರ ಕ್ರಿಯಾದಿಗಳಲ್ಲಿ ಅತಿ ಧೀರರಾಗಿ ವೀರರಾಗಿ ವೀರಶೈವ ಮತವಿಶಿಷ್ಟರಾಗಿ ಭವಬಂಧನವಂ ಸ್ವತಃ ಹರಿದುಕೊಳ್ಳುವದಲ್ಲದೆ, ಭವಸಾಗರದಲ್ಲಿ ಮುಳು ಮುಳುಗಿ ಏಳುವವರ ಬೀಳುವವರ ಕಂಡು ಕಾತ ರಿಸಿ ಕರುಣಾಮಯರಾಗಿ ಕೈಹಿಡಿದು ಎಬ್ಬಿಸಿ, ಜಗದ ಮಬ್ಬನ್ನು ಕಳೆದು ಜಗದೊಳಗಿನ ಒಳಜಗದೊಳು ನುಗ್ಗಿ ನೂರೊಂದು ಸ್ಥಲದ ಅನುಭವಾಮೃತ ವನ್ನು ಉಣಿಸಿ ತಣಿಸುವ ವಚನ ಸಾಹಿತ್ಯದಿಂದ ಸುಸಂಸ್ಕೃತಿಗಳನ್ನಾಗಿ ಮಾಡುವ ಸುಲಭ ಮಾರ್ಗವನು ತೋರುತ್ತ, ಸಕಲ ಪ್ರಾಣಿಗಳ ಹಿತವನೆ ಮಾಡುತ್ತ, ಆಶಾ ಪಾಶವ ಹರಿಯುತ್ತ ಅಷ್ಟ ಮದಂಗಳನ್ನು ನಷ್ಟಪಡಿ ಸುತ್ತ, ಅಷ್ಟಾವರಣ ಕ್ರಿಯೆಯನು ಅರುಹುತ್ತ ನವವಿಧ ಭಕ್ತಿಗಳನ್ನು ಬೆಸೆಯುತ್ತ ಲಿಂಗತ್ರಯಗಳನು ಅಂಗತ್ರಯಗಳಲ್ಲಿ ಆಣಿ ಮಾಡುತ್ತ, ನವ ವಿಧ ಲಿಂಗಗಳನ್ನು ನವವಿಧ ಅಂಗಗಳಲ್ಲಿ ಅಳವಡಿಸುತ್ತ, ದಶಾಚಾರಗ ಳನ್ನು ಅರುಹಿ ಆಚರಿಸುವಂತೆ ಮಾಡುತ್ತ, ಲಿಂಗ ನಿಷ್ಠೆಯನು ಬಲಿಸುತ್ತ ತನುವಿನ ಕಳವಳವನು ಇಷ್ಟಲಿಂಗ ಪೂಜೆಯಿಂದ ಕಳೆಯುತ್ತ, ಮನದ ಕನಲವನು ಪ್ರಾಣಲಿಂಗದ ಪೂಜೆಯಿಂದ ಮನವೇ ಲಿಂಗವನ್ನಾಗಿ ಮಾಡುತ್ತ ಭಾವದ ಬಯಕೆಗಳನು ಭಾವಲಿಂಗದ ಪೂಜೆಯಿಂದ ನಷ್ಟಗೊಳಿಸುತ್ತ, ಅಂತೂ ಮಾನವು ಮಹದಲ್ಲಿ ನಿಂದುದೇ ಲಿಂಗ, ಕರಣಂಗಳರತುದೇ ಬಚ್ಚ ಬರಿಯ ಬೆಳಗು, ಎಂಬ ಅನುಭಾವದ ಅನುವು, ಕ್ರಿಯಾ ಜ್ಞಾನಗಳಿಂದ ತನ್ನೊಳು ತಾನೇ ಹುಟ್ಟುವಂತೆ ಮಾಡುತ್ತ ಶ್ರೀ ಹಡಪದ ಲಿಂಗಮ್ಮನಂತೆ ಲಿಂಗಾಂಗ ಸಾಮರಸ್ಯ ಜ್ಞಾನವು ಅಳವಡುವ ಹಾಗೆ ಶರಣರ ದಾಸೋಹಂ ಭಾವದಿಂದ ಬಾರದೆ ಇರದು.

"ಮಚ್ಚಬೇಡ ಮರಳಿ ನರಕಕ್ಕೆರಗಿ, ಕರ್ಮಕ್ಕೆ ಗುರಿಯಾಗಬೇಡ. ನಿಶ್ಚಿಂತಳಾಗಿ ನಿಜದಲ್ಲಿ ಚಿತ್ತವ ಸುಯಿಧಾನ ಮಾಡಿ, ಲಿಂಗದಲ್ಲಿ ಮನವ ಅಚ್ಚೊತ್ತಿದಂತಿರಿಸಿ, ಕತ್ತಲೆಯನು ಹರಿದು ಬಚ್ಚಬರಿಯ ಬೆಳಗಿನೊಳು ನಲಿದು ಸುಖಿಯಾಗಿರೆಂದು ನಮ್ಮ ಅಪ್ಪಣ್ಣ ಪ್ರಿಯ ಚನ್ನಬಸವಣ್ಣ"

ಶ್ರೀ ಚನ್ನಬಸವಣ್ಣನು ಹಡಪದ ಅಪ್ಪಣ್ಣ ಲಿಂಗಮ್ಮರೆಂಬ ದಂಪತಿಗಳಿಗೆ ತ್ರಿವಿಧ ದೀಕ್ಷೆಯಂ ಗೈದು, ಮಲತ್ರಯ.ಗಳ ಅಳಿದು ತಾಪತ್ರಯುಗಳ ಶಾಂತಗೊಳಿಸಿ, ಕರ್ಮತ್ರಯುಗಳನ್ನು ಕಳೆದು, ಜೀವತ್ರಯಗಳನ್ನು ಹೋಗಲಾಡಿಸಿ, ಕರ್ಮತ್ರಯುಗಳನ್ನು ಕಳೆದು, ಶಿವಭಾವಿಗಳನ್ನಾಗಿ ಮಾಡಿ, ಸದಾಸರ್ವದಾ ಶಿವಶರಣರ ಸಂಗದಲ್ಲಿದ್ದ ಅನುಭಾವ ಮಂಟಪದಲ್ಲಿ ದಂಪತಿಗಳೀರ್ವರೂ ತಮ್ಮ ಅನುಭಾವದ ವಚನಗಳನ್ನು ಸಾದರ ಪಡಿಸಿದರೂ ಒಮ್ಮೊಮ್ಮೆ ತಮ್ಮ ಸದ್ಭಾವದೊಳು ಜೀವಭಾವವು ಮುಂದರಿದು ನಿಂತಾಗ ಹಾಡಿದ ವಚನವಿದು. ಪಂಚ ವಿಷಯಗಳಲ್ಲಿ ಮನವು ಪಂಚ ಪ್ರಸಾದಗಳನ್ನು ಮರೆತು, ಜೀವ ಭಾವಕ್ಕೆ ಹಾತೊರೆದಾಗ ತನ್ನೊಳು ಸುವಿಚಾರಿಸಿ "ಮಚ್ಚಬೇಡ ಮರಳಿ ನರಕಕ್ಕೆರಗಿ" ಎಂದೂ, ಒಂದು ವೇಳೆ ಮಚ್ಚಿ ಮನವು ಲಿಂಗ ಭಾವವನ್ನು ಬಿಟ್ಟು ಜೀವ ಭಾವ ತಳೆದು ವಿಷಯಾಸಕ್ತವಾಗಲು ಆತುರ ಪಟ್ಟರೆ ಕರ್ಮಗಳು ಬೆನ್ನ ಬಿಡವು. ಪ್ರಾರಬ್ಧ ಕರ್ಮವನ್ನು ಗೆಲ್ಲುವ ಶಕ್ತಿಯುಳ್ಳ ಶಿವಶರಣೆಯರು ಸಂಚಿತ ಆಗಾಮಿ ಕರ್ಮಗಳಿಗೆ ಅಂಜುವ ಪ್ರಸಂಗವಿದು. ಆಗ್ಗೆ ಮನವನ್ನು ಹಿಂದಿರುಗಿಸಿ, ನಿಶ್ಚಿಂತಳಾಗಿ ನಿಜದಲ್ಲಿ ತನ್ನ ಚಿತ್ತವನ್ನು ಸುಯಿಧಾನಿಯನ್ನಾಗಿ ಮಾಡುವಳು. ಮತ್ತು ಲಿಂಗದಲ್ಲಿ ಅಂಗವನ್ನು ಅಚ್ಚೊತ್ತಿದಂತಿರಿಸುವಳು. ಕರಣ ಮಥನ ನಿಲ್ಲಿಸಿ ಅನುವಿನಿಂ ಶಿವತತ್ವದೊಳು ಒತ್ತರಿಸಿ ನಿಲ್ಲುವಳು. ನಿಂತು ತನ್ನ ಲಿಂಗ ರೂಪಾದ ಅಪ್ಪಣ್ಣನನ್ನೂ ಶ್ರೀ ಗುರುತಾಯಿಯೆನಿಸಿದ ಶ್ರೀ ಚನ್ನಬಸವಣ್ಣನನ್ನೂ ನೆನೆನೆನೆದು ಅಬಾಧಿತವಾದ ಅನುಭಾವವನ್ನು ನಿರ್ದೇಶಿಸಿದ ಈ ವಚನದ ಭಾವವಿದು.

ನಮ್ಮ ಭರತ ಭೂಮಿಯಲ್ಲಿ ಹಿಂದೂ ಸ್ತ್ರೀಪುರುಷರು ಈಗ ನೂರು ದೀಡನೂರು ವರ್ಷಗಳ ಇಂಗ್ಲೀಷ ರಾಜ್ಯಾಡಳಿತೆಯಿಂದ ನಮ್ಮಲ್ಲಿಯ ಸುಶಿಕ್ಷಿತ ಪಂಗಡದವರು ದೊಡ್ಡ ದೊಡ್ಡ ಅಧಿಕಾರಾರೂಢರಾಗಿ, ಇಂಗ್ಲಿಷರ ಭಾಷೆ ವೇಷ ಆಹಾರೋಪಹಾರಗಳ ಅನುಕರಣ ಮಾಡುತ್ತ ಬಂದದ್ದು

ರಿಂದ ಸಾಮಾನ್ಯ ಜನರು ಸಹ ಆ ಸುಶಿಕ್ಷಿತರಂತೆ ವೇಷಾಡಂಬರಿಗಳಾಗಿ ಹ್ಯಾಟ, ಬೂಟ, ಶರ್ಟ, ಕ್ರಾಸ ಮೊದಲಾದ ವೇಷಗಳನ್ನೂ ಚಹಾ, ಚುಟ್ಟಾ ಕಾಫಿ, ಸಿಗಾರೇಟ ಪೇಯ ಸ್ವಾಹಾಗಳನ್ನೂ ಸಿನೇಮಾ ಸಾಯಿಕಲ ಮೋಟಾರ ಬಸ್‌ಗಳನ್ನೂ ಅನುದಿನದ ಬಳಿಕೆಯಲ್ಲಿ ತಂದದ್ದರಿಂದ ಆದಾಯಕ್ಕಿಂತ ವ್ಯಯವು ಮಿತಿಮೀರಿ, ನೀತಿ ನಡಾವಳಿಗಳ ಭೀತಿಯಿಲ್ಲದೆ ಪರಧನವನ್ನು ಕಪಟ ಕುಹಕ ತನಗಳಿಂದ ಅಪಹರಿಸಿ ತಮ್ಮ ದುಶ್ಚಟಗಳನ್ನು ಸಾಗಿಸುವ ಪುಂಡತನ ಚಂಡಿತನ ಲಂಡತನ ತುಂಡತನ ಮಂಡತನಗಳು ಮಾನವ ಕೋಟಿಯಲ್ಲಿ ಮನೆಮಾಡಿದ್ದು ಆಶ್ಚರ್ಯವಲ್ಲ. ಈ ಪರಿಸ್ಥಿತಿಯನ್ನು ದೂರ ಮಾಡಲು ಮಹಾತ್ಮಾ ಗಾಂಧಿಯವರ ದಿನಚರ್ಯದಂತೆ ಪ್ರತಿ ಗ್ರಾಮದ ಶಿಷ್ಟಾಚಾರಿಗಳು ವಿಶಿಷ್ಟಾಚರಣೆಯಲ್ಲಿ ತಂದು ನಡೆದಲ್ಲದೆ ಈ ಪರಿಸ್ಥಿತಿಯು ದೂರತೋಲಾಸ್ತವೇ ಸರಿ. ಆದ್ದರಿಂದ ನಮ್ಮ ಶಿವಶರಣರ ನೀತಿ ನೇಮಗಳನ್ನು ಬಳಿಕೆಯಲ್ಲಿ ತಂದು ಆ ಬಗ್ಗೆ ತಿಳುವಳಿಕೆಯು ಸಮಾಜದಲ್ಲಿ ಸಹಜ ಹುಟ್ಟುವ ಪರಿಸ್ಥಿತಿಯನ್ನು ತಂದುಕೊಡುವದು ಸದ್ಯದ ಗುರುಹಿರಿಯರ ಆದ್ಯ ಕರ್ತವ್ಯವಾಗಿದೆ. ಹಾಗು ಪ್ರತಿ ಗ್ರಾಮದ ಮಠಾಧಿಕಾರಿಗಳೂ ಸದ್ಭಕ್ತರೂ ಶಿವಶರಣರ ನಡೆ ನುಡಿಗಳಂತೆ ಆಚರಿಸಿ ಅನುಕರಣೀಯರಾಗುವದು ಅತಿ ಮಹತ್ವದ್ದಾಗಿದೆ. "ಮಾಡದಿರು ಪರಹಿಂಸೆಯ, ನುಡಿಯದಿರು ಮಿಥ್ಯವ, ನಡೆಯದಿರು ದುರ್ಮಾರ್ಗದೊಳು, ಕೂಡದಿರು ಪರಸ್ತ್ರೀಯರ, ಮುಟ್ಟದಿರು ಪರರೊಡವೆಯ, ತೀಡದಿರು ಹಿಂದಿನ ಭವಾಂತರಗಳ, ಓಡದಿರು ಸಂಕಲ್ಪ ವಿಕಲ್ಪಗಳಗ, ಬಿಡದಿರು ಶರಣರ ಸಂಗವ, ಆಡದಿರು ಪರನಿಂದೆಯ, ತಡೆಯದಿರದಿರು ಷಡುವರ್ಗವ ಪಡೆಯದಿರುದಿರು ನವವಿಧ ಭಕ್ತಿಯ, ನಡಿಸದಿರು ಸತ್ಕಾಯಕ ಸತ್ಕ್ರಿಯೆಗಳಿಂದ ನಮ್ಮ ಸಿದ್ಧೇಶ್ವರಾ" ಎಂಬ ನೀತಿ ವಚನಗಳ ಜೊತೆಗೊಳಿಸಿ ಭಕ್ತಿಶಕ್ತಿಯನ್ನುಂಟುಮಾಡುವದೂ ಮಹತ್ವದ್ದಾಗಿದೆ.

ಮಾನವನ ಆಯುರ್ಮರ್ಯಾದೆಯು ನೂರು ವರ್ಷವಿದ್ದರೂ ಅಕಾಲಿಕ ಮರಣವನ್ನು ನಾವೆಲ್ಲರೂ ನೋಡುತ್ತೇವಲ್ಲ; ಅದಕ್ಕೆ ಅನೇಕತರದ ಕಾರಣಗಳಿರಬಹುದು. ದಂಪತಿಗಳು ಸುಸಂತಾನದ ನಿಯಮಗಳನ್ನು ಪಾಲಿಸದಿರಬಹುದು. ಆಹಾರ ವಿಹಾರಗಳಲ್ಲಿ ಕಡುತರದ ವಿರಧೀರತ್ವಗಳನ್ನು ನಡಿಯಿಸದಿರಬಹುದು. ವಿಷಯಾಸಕ್ತತೆಯು ವಿಶೇಷ ಅಲ್ಲೋಲ ಕಲ್ಲೋಲ

ವಾಗಿರಬಹುದು. ಅಸಃ ಮನ ಭಾವದೊಳು ದುರ್ದೃಶ್ಯಾಂತಗಳು ಅಲೆದಾಡಿರಬಹುದು. ದುರ್ವ್ಯಸನಾ ಜನಸಮಾಜದ ಸಂಪರ್ಕವಾಗಿರಬಹುದು. ದುಷ್ಟ ಪ್ರಾಣಿಗಳ ಮಾಟ ನೋಟ ಕೂಟಗಳು ಮನದಲ್ಲಿ ಮೂಡಿರಬಹುದು. ಇಂಥ ಅನೇಕ ಕಾರಣಗಳು ದುಸ್ಸಂತಾನದ ಬೀಜಗಳೆಂದು ಹೇಳಬಹುದು. ಆದರೆ ಶಿವಶರಣರ ದಿನಚರ್ಯೆಯಲ್ಲಿ ಇವಾವವೂ ಅಂಟಲು ಆಸ್ಪದವಿಲ್ಲ. ಅವರ ಅಂತರಂಗವೆಲ್ಲ ಅರುಹು ಆಗಿ, ಬಹಿರಂಗವೆಲ್ಲ ಲಿಂಗ ರೂಪಾಗಿರುವದು. ಅವರು ನೋಡಿದ್ದೆಲ್ಲ ಶಿವಲಿಂಗ, ಕೇಳಿದ್ದೆಲ್ಲ ಪ್ರಸಾದ ಲಿಂಗ, ಮುಟ್ಟಿದ್ದೆಲ್ಲ ಜಂಗಮ ಲಿಂಗ, ವಾಸಿಸಿದ್ದೆಲ್ಲ ಆಚಾರಲಿಂಗ, ರುಚಿಸಿದ್ದೆಲ್ಲ ಗುರುಲಿಂಗ. ಈ ಎಲ್ಲದರಲ್ಲಿ ಪರಿಣಮಿಸಿದ್ದೆಲ್ಲ ಮಹಾಲಿಂಗವಾದ ಬಳಿಕ ಅವರಿಂದ ಉದ್ಭವಿಸಿದ ಸಂತಾನವು ಶರಣ ಸಂತಾನವಾಗದೇನು ಮಾಡೀತು? ಇದರಿಂದ ಸತ್ಸಂಗದ ಮಹತ್ವವೂ ಸಪ್ತ ವಿಧ ದೀಕ್ಷಾ ಮಹತ್ವವೂ ಎಷ್ಟಿದೆಂಬದನ್ನು ವಾಚಕರೇ ಊಹಿಸಲಿ.

ತನುವಿನೊಳು ಇಷ್ಟಲಿಂಗ ಭಾವಿಸಲು ಪ್ರತಿದಿನ ತ್ರಿಕಾಲದೊಳು ಇಷ್ಟಲಿಂಗದೊಡಗೂಡಿದ ಲಿಂಗತ್ರಯಗಳ ಪೂಜೆಯು ಅವಶ್ಯವು. ತ್ರಿಕಾಲ ಲಿಂಗ ಪೂಜೆಯು ಬಡ ಮಾನವನಿಗೆ ಸಾಧ್ಯವೇ ಎಂಬ ಸಂಶಯವು ಬರಬಹುದು. ಆದರೆ ಪ್ರತಿಯೊಬ್ಬ ಮಾನವನು ಮುಂಜಾನೆ ಮಧ್ಯಾಹ್ನ ಸಂಜೆಗಳಲ್ಲಿ ತನುತ್ರಯಗಳ ಆರೈಕೆಯನ್ನು ಮಾಡದೆ ಇರನು. ಆಯಾ ಕಾಲದಲ್ಲಿ ಜರಗುವ ಕ್ರಿಯೆಗಳೇ ಇಷ್ಟ, ಪ್ರಾಣ ಭಾವಲಿಂಗಗಳ ಪೂಜೆಯು ಈ ಕ್ರಿಯೆಗಳಲ್ಲಿ ಜೀವ ಭಾವವನ್ನು ಬದಲಿಸಿ, ಶಿವಭಾವದಿಂದಿರುವುದೇ ಶಿವಭಕ್ತನ ಕರ್ತವ್ಯವು. ಅಂತೇ ಶ್ರೀ ಬಸವನ ಕಾಲದಲ್ಲಿ ನೂರೊಂದು ಕುಲದ ಹದಿನೆಂಟು ಜಾತಿಯವರೆಲ್ಲ ಅಂದರೆ ನೂರೊಂದು ಸ್ಥಲದ ಅಂಗಸ್ಥಲ, ಲಿಂಗಸ್ಥಲ, ಪೂರಿತರೆಲ್ಲ ಶಿವಭಕ್ತರಾಗಿ ಶಿವಶರಣರಾಗಿ ಬಾಳಿ ಬದುಕಿ ಚಿರಸ್ಥಾಯಿಯಾಗಿ ಉಳಿದಿರುವರು. ಅಂದ ಬಳಿಕ ಈಗಾದರೂ ಸತ್ಯ ವ್ರತವನ್ನು ಕೈಕೊಂಡು ಸದಾಚಾರಿಗಳಾಗಿ ಭಕ್ತಿ ಶಕ್ತಿಯರ ಕೈ ಹಿಡಿದು ಭೃತ್ಯಾಚಾರವ ವಹಿಸಿ, ಇಷ್ಟಲಿಂಗ ಧಾರಣದಿಂದ ಲಿಂಗಾಚಾರಿಗಳಾಗಿ; ತನುತ್ರಯದೊಳು ಬರುವ ಅನಿಷ್ಟವನು ಅತಿಗಳೆದು ಗಣಾಚಾರಿಗಳಾಗಿ, ಶಿವಭಕ್ತಿ, ಶಿವವ್ರತ, ಶಿವಪೂಜೆ, ಶಿವಧ್ಯಾನ, ಶಿವಜ್ಞಾನಗಳಿಂದ ಶಿವಾಚಾರಿಗಳಾಗಿ ವೀರಶೈವ ಮತಮಾರ್ಗದೊಳು ನಡೆಯುತ್ತ ನುಡಿಯುತ್ತ

ಗುರುಲಿಂಗ ಜಂಗಮಾರ್ಚನೆಗಳಿಂದ ಪಾದೋದಕ ಪ್ರಸಾದಗಳನ್ನು ಪಡೆಯುತ್ತ ಶಿವಪ್ರಪಂಚಿಗಳಾಗಿ ಬಾಳುತ್ತಿದ್ದರೆ ಮುಕ್ತಿ ಮಂದಿರದೊಳು ಉಳಿದು ಐಹಿಕ ಪಾರಮಾರ್ಥಿಕ ಸುಖ ಸಂಪದಗಳು ದೊರೆಯಲು ಹೆದ್ದಾರಿಯೆಂದು ಹೇಳದೆ ಇರೆನು.

ನಿಜ ಶರಣರು ನಿತ್ಯಾಚಾರಿಗಳಾಗಿ ಪ್ರತಿ ಮಾಸದ ಶುದ್ಧ ಪದ್ಯ ಚತುರ್ದಶಿಯು ನಿಯತಾಚಾರವಾದ ಶಿವಯೋಗಾಚರಣೆಯನ್ನು ತಮ್ಮ ನೆರೆಯ ಶಿವಭಕ್ತಾದಿ ಶರಣ ಸಂತಾನದೊಡನೆ ಆಚರಿಸುವರಲ್ಲದೆ ಮಾಘ ಶುದ್ಧ ಚತುರ್ದಶಿಯ ದಿವಸ ಮಹಾ ಶಿವಯೋಗಾಚರಣೆಯನ್ನು ಆಚರಿಸುವ ಆಗಮ ಪದ್ಧತಿಯು ಸಾಗುತ್ತ ಬಂದದ್ದು ಸರ್ವಶ್ರುತವಷ್ಟೇ. ಆ ಕಾಲದಲ್ಲಿ ಗ್ರಾಮಾಂತರಗಳ ಶಿವಾಲಯ ಜಂಗಮ ಮಠಗಳಲ್ಲಿ ಎಲ್ಲರೂ ವಿತಾಹಾರಿಗಳಾಗಿ ಮಿತಭಾಷಣೆಗಳಾಗಿ ಶಿವಕೀರ್ತನ, ಶಿವಭಜನೆ, ಶಿವ ಪುರಾಣ, ಶಿವಪ್ರವಚನಗಳಲ್ಲಿ ಆಸಕ್ತರಾಗಿ ಅಷ್ಟಾವರಣವೇ ಅಂಗವೆಂಬ ಅನುಭಾವದೊಳು ಲಿಂಗಾಂಗ ಸಾಮರಸ್ಯದ ಅಮೃತಾಂಬುಧಿಯಲ್ಲಿ ಆನಂದ ತುಂದಿಲರಾಗುತ್ತ ಆ ಶಿವಯೋಗದ ಮಾಟ ನೋಟ ಕೂಟಗಳು ಲಿಂಗಾಂಗಿಗಳ ತನು ಮನೋಭಾವಗಳಲ್ಲಿ ಬಿಂಬಿಸಿ, ಅದೇ ಶಿವಯೋಗಾಚರಣೆಯು ತಮ್ಮ ತಮ್ಮ ನಿತ್ಯಾಚಾರದ ಬಳಿಕೆಯಲ್ಲಿ ಬಂದು ಗುರುಸೇವೆ, ಲಿಂಗ ಪೂಜೆ, ಜಂಗಮ ದಾಸೋಹಗಳು ವಿಶ್ವಧರ್ಮವಾದ ವೀರಶೈವ ಸಮಾಜದಲ್ಲಿ ನಿತ್ಯಶಃ ತೋರಿ ಬರುವವು. ಇದರಿಂದ ಬಸವಾದಿ ಪ್ರಮಥರಾಚರಣೆಯ ಶಿವಯೋಗಿಗಳ ಪಾದ ಪೂಜೆ. ಜಂಗಮ ದಾಸೋಹ, ದಶವಿಧ ಪಾದೋದಕ ಏಕಾದಶ ಪ್ರಸಾದಗಳ ಸಮರಸ ಜ್ಞಾನದ ಮಹತ್ವವು ಎಷ್ಟಿದೆಂಬುದನ್ನರಿತು ವ್ಯಷ್ಟಿ ರೂಪದ ಗುರುಲಿಂಗ ಜಂಗಮ ಜ್ಞಾನವು ಸಮಷ್ಟಿ ರೂಪಾದ ಸಮಾಜದಲ್ಲಿ ಉಂಟಾಗಿ, ಪರಸ್ಪರಾನಂದವೂ ಪ್ರೇಮವೂ ಭಕ್ತಿಯೂ ಬೆಳೆಯುತ್ತ ಸುಜ್ಞಾನವೂ ಮಹಾ ಜ್ಞಾನವೂ ತಲೆದೋರಿ ನೂರೊಂದರ ಪರಿಯು ಸರಿಯಾಗಿ ಸಂಧಿಸುವದರಲ್ಲಿ ಯಾವ ಅಭ್ಯಂತರವೂ ಇಲ್ಲ. ಇಂಥ ಅನುಭವಾಮೃತವನ್ನು ಪಡೆದ ಹಡಪದ ಲಿಂಗಮ್ಮನು ಐಕ್ಯ ಸ್ಥಳದಲ್ಲಿ "ಅಂಗವ ಮರೆದಂಗೆ ಲಿಂಗದ ಹಂಗೇಕೋ? ಅರಿವ ಕಂಡವಂಗೆ ಗುರುಹಿನ ಹಂಗೇಕೋ? ತಾನು ತಾನಾದವಂಗೆ ಧ್ಯಾನದ ಹಂಗೇಕೋ? ಮನಮುಗ್ಧವಾದವಂಗೆ ಮಾನವರ ಹಂಗೇಕೋ? ಆಶೆಯನಳಿದವಂಗೆ ರೋಷದ ಹಂಗೇಕೋ? ನಡೆಗೆಟ್ಟವಂಗೆ ನುಡಿಯ ಹಂಗೇಕೋ? ತನ್ನ ಮರೆದು

ನಿಮ್ಮನೆಂದ ಶರಣಂಗೆ ಅಲ್ಲೇ ಐಕ್ಯ ಕಂಡೆ. ಅಪ್ಪಣ್ಣ ಪ್ರಿಯ ಚನ್ನ ಬಸವಣ್ಣ”
ಈ ಪ್ರಕಾರ ಹಾಡಿರುವಳು.

ಇದರ ಮೇಲಿಂದ ನೀತಿ ಕ್ರಿಯಾಚಾರಗಳ ಮಹತ್ವವು ಎಷ್ಟೆಂಬುದು ಗೊತ್ತಾಗದೆ ಇರದು. ಹಾಗು ಮಾರ್ಗ ಕ್ರಿಯೆಯಲ್ಲಿ ಮನಗಂಡ ಮಾತುಗಳೂ ಜಗತ್ತನ್ನು ಮರೆತು ಮೀರಿದ ಕ್ರಿಯೆಯಲ್ಲಿ ಮಾತಾಡಿದ ಮಾತುಗಳೂ ವಚನ ಭಾಂಡಾರವೆಂಬ ಸಿದ್ಧಾಂತವು ವ್ಯಕ್ತವಾಗುವದು. ಸದ್ಯದ ಪರಿಸ್ಥಿತಿಯಲ್ಲಿ ಸದಯಾಂತಃಕರುಣಿಗಳಾದ ಮಹನೀಯರೂ ಸಭ್ಯ ಗೃಹಸ್ಥರೂ ಕಳೆದುಕೊಂಡ ಕಲ್ಯಾಣದ ಮಾರ್ಗವನ್ನು ಸಮಗೊಳಿಸಿ ಕಾಲಾಳುಗಳೂ ಗಾಡಿಗಳೂ ಕಾಲುಕಾಡಿಗಳೂ ಮೋಟಾರುಗಳೂ ಸದು ಹೃದಯಿಗಳಿಂದ ತುಂಬಿ ಬರುವಂತೆ ಸರಿಗೊಳಿಸಿ ವಿಮಾನ ಮಾರ್ಗವೂ ತಲೆದೋರಿ ಅವುಗಳ ಸ್ವ್ಯಾಂಡವೂ ಕಂಡುಬರುವಂತೆ ವೀರಶೈವ ಮಹಾ ಸಭೆಯುನ್ನು ಶ್ರೀ ಬಸವ ಜಯಂತಿಯ ಕಾಲದಲ್ಲಿ ಜರಗಿಸುವ ತಯಾರಿಯನ್ನಿಟ್ಟದ್ದು ವಿಶ್ವ ಕಲ್ಯಾಣವೆಂದು ಹೇಳಲು ಪರಮಾನಂದವು.

# ಕಲ್ಯಾಣದ ಮಹಾಯೋಜನೆ

## ಮಾನವನಿಂದು ಎತ್ತ ಸಾಗಿರುವನು?

(ಲೇಖಕರು- ಶ್ರೀ ಎಮ್. ಸಿದ್ಧವೀರಯ್ಯ ಮು. ಕೃಷ್ಣ. ಜಿ. ರಾಯಚೂರು)



ಮಾನವನು ಜೀವನ ಯಾತ್ರೆಯಲ್ಲಿ ಬಹುದೂರ ನಡೆಯುತ್ತ ಬಂದಿದ್ದಾನೆ. ಆದರೂ ಅವನು ತನ್ನ ನಿರ್ದಿಷ್ಟ ಗುರಿಯಾವುದೆಂಬುದನ್ನು ಅರಿಯದಂತಾಗಿದ್ದಾನೆ. ಜೀವನ ವಾಹಿನಿಯು ಪ್ರವಹಿಸುತ್ತ ಮಲಿನಹೊಂದುತ್ತಲಿದೆ ಹೊರತು ನೈರ್ಮಲತೆಯು ಅದರಲ್ಲಿ ನಿಚ್ಚಳಿಸದಂತಾಗಿದೆ. ಇಂದು ನಮಗಾಗಿ ಅನಂತ ವಿಧಿ ಮಂಡಲಗಳು ಮತ್ತು ಸಂಘ ಸಂಸ್ಥೆಗಳು ಕರ್ತವ್ಯಕರ್ಮಗಳನ್ನು ನಿರ್ದೇಶಿಸುತ್ತಿದ್ದರೂ ನಮ್ಮ ಅಂತಃಶಕ್ತಿಯ ಬೆಳವಣಿಗೆಯ ರೀತಿ ನೀತಿಗಳ್ಯಾವವೂ ಅಲ್ಲಿ ತೋರದಾದವು. ಯಾಕೆಂದರೆ ಮಾನವನಿಂದು ಕರಣೇಂದ್ರಿಯಾದಿಗಳ ಪಾಶವೀ ಪ್ರವೃತ್ತಿಯ ತೃಪ್ತಿಯೇ ಜೀವನದ ಧ್ಯೇಯ ವಾಗಿಟ್ಟುಕೊಂಡು, ಸ್ವಾರ್ಥಪ್ರೇರಿತ ಸುಖವೇ ಸಮಗ್ರ ಜೀವನದ ಹೋರಾಟಕ್ಕೆ ಕಾರಣವಾಗಿ ಆಕುಂಚಿತ ಜೀವನ ಸಾಗಿಸುತ್ತಿದ್ದಾನೆ. ಇಂದು ಪರಿಪರಿಯಿಂದ ರಂಜಿಸಿತೋರುವ ಜಗದ್ವಿಲಾಸವು ಜೀವನ ಸೌಖ್ಯದ ಸುಂದರಸೋಗಿನಲ್ಲಿ ಅವನನ್ನು ಪ್ರವೃತ್ತಿ ಮಾರ್ಗದಭಿಮುಖವಾಗಿ ಆತ್ಮ ಅಧೋಗತಿಗೆ ಆಕರ್ಷಿಸುತ್ತಲಿದೆ. ಅವನ ಆಶೆ, ಆಲಸ್ಯತನಗಳು ಹೆಚ್ಚಾದಂತೆ ಆತ್ಮೋದ್ಧಾರದ ಪ್ರಶ್ನೆಯು ಜಟಿಲವಾಗುತ್ತಲೆ ನಡೆದಿದೆ. ನಿರ್ಗುಣವಾದ ವಿಜ್ಞಾನವನ್ನು ಹೃದಯ ಹೀನತೆಯಿಂದ ಉಪಯೋಗಿಸುತ್ತಿರುವ ಇಂದಿನ ವಿಜ್ಞಾನಿಯು ವಿಶ್ವದ ಮಹಾ ಜ್ಞಾನಿಯ ಲೀಲಾ ರಹಸ್ಯವನ್ನರಿತು ಭಾವಾವಿಷ್ಟನೆನಿಸದೆ, ಭೌತಿಕದ ಬೆಡಗಿನಲ್ಲಿ ರಾಷ್ಟ್ರೋದ್ಧಾರದೇಕೋದ್ಧಾರದ ಹೆಸರಿನಿಂದ ಸರ್ವನಾಶವು ಅಳವಿಗೆ ಜನಾಂಗವನ್ನು ಜಗ್ಗುತಲಿದ್ದಾನೆ (*Science leads to the ancient civilisation*) ಎಂಬಂತೆ ವಿಜ್ಞಾನ ಕಲೆಯು ಪರಮಾವಧಿಗೆ ತಲುಪಿ ಜಗತ್ತನ್ನು ಪುನಃ ಮಾನವೇತಿಹಾಸದ ಬಾಲ್ಯ ಜೀವನಾವಸ್ಥೆಗೆ ತಂದು ಮುಟ್ಟಿಸಿದೆ. ಇದೇ ಪ್ರಪಂಚದ ಸಾಂಸ್ಕೃತಿಕ ನಾಗರಿಕ ಏರಿಳಿತವು ಕಾಲಚಕ್ರ ಭವಚಕ್ರದ ಗತಿಯು.

## ಜೀವಿತೋದ್ದೇಶ

ಮಾನವ ಜೀವಿತೋದ್ದೇಶವು ತನ್ನ ಸ್ವರೂಪ ಜ್ಞಾನವನ್ನುಂಟು ಮಾಡಿಕೊಳ್ಳುವದಾಗಿದೆ ಎಂದು ಎಲ್ಲಾ ಧರ್ಮದರ್ಶನಗಳು ಸಾರುತ್ತಲೇ ಬಂದಿದ್ದಾವೆ. ಮಾನವನು ಅರಿತರೂ ತನ್ನನ್ನು ತಾನು ಅರಿಯುವದು ಅತ್ಯಂತ ಮಹತ್ವದ ಕಲೆಯಾಗಿದೆ 'ಏನನಾದರೆಯು ಸಾಧಿಸಬಹುದು ಮತ್ತೇನ ನಾದರೂ ಸಾಧಿಸಬಹುದು. ತಾನಾರೆಂಬುದುನರಿಯುವ ಕಲೆಯು ಸರ್ವ ಸಾಮಾನ್ಯರಿಗೆ ವಶವರ್ತಿಯಾಗತಕ್ಕದಲ್ಲ. ಶಿವಾಂಶಿಕನಲ್ಲದವನಿಗೆ ಶಿವ ನಾಗಲು ಸಾಧ್ಯವಿಲ್ಲ. 'ವನದ ಕೋಕಿಲೆ ಮನೆಗೆ ಬಂದರೆ ತನ್ನ ವನವನ್ನು ನೆನೆವುದು ಮಾಣದೇ?' ಎಂಬಂತೆ ಶಿವಪ್ರಸಾದಪ್ರೇರಿತ ಮಾನವನು ಮಾಯಾ ಮಿಶ್ರಿತನಾದರೂ ಅದನ್ನು ಹೊದ್ದದೆ, ತನ್ನ ಅಂತರಿಕ ಅರಿವಿನಲ್ಲೇ ಬಾಹ್ಯಾ ಚರಣೆಯನ್ನು ಮಿಂದು ಪರಿಶುದ್ಧಗೊಳಿಸಿ ಆತ್ಮ ವಿಕಾಸ ಸಮಾಜವಿಕಾ ಸಕ್ಕೆ ಸದ್ಹೇತುವಾಗುವಂತೆ ಮಾರ್ಪಡಿಸುವದು ಸಿದ್ಧಿ ಪುರುಷರ ಜೀವನ ಧ್ಯೇಯವಾಗಿದೆ.

## ಕಲ್ಯಾಣದ ಶರಣರ ಕರೆ

ಕಲ್ಯಾಣದ ಶರಣರು ಕರುಳಿಲ್ಲದ ಕಲಿಗಳು ಧನದಲ್ಲಿ ಶುಚಿಗಳು ಪ್ರಾಣದಲ್ಲಿ ನಿರ್ಭಯರು ಅರುವಿನ ಮಹಾಂತರು ನಂಬಿದವರಿಗಿಂಬು ಗೊಡುವರು. ಸಕಲ ಜೀವಾತ್ಮರಿಗೆ ಲೇಸನೇಬಯಸುವ ಧೀರೋದ್ಧತರು. ಸತ್ಯ ಸನ್ನಿಹಿತರು. ನಿತ್ಯ ಸುಖಿಗಳು, ಮಾಯಾವಿಲಾಸ ವಿಡಂಬಕರು ಲಿಂಗಾನಂದ ತಲ್ಲೀನರು ಜ್ಞಾನನಿಧಿನಿಕ್ಷೇಪರು ಇಂಥಾ ನಿಸ್ಸೀಮ ಅಧ್ಯಾತ್ಮಸೀಮಾ ಪುರುಷರು ಜಗಜೀವಿಗಳನ್ನು ಸದಾ ಶಾಶ್ವತ ಸುಖದತ್ತ ಸ್ವಾಗತಿಸುವರು. ಕರ್ಮ ಕೋಟಲೆಯರು ಭುವಿಜೀವಿಗಳ ಆತ್ಮ ವಿಜಯದ ಸುಲಭಮಾರ್ಗ ವನ್ನು ಸುಗಮಗೊಳಿಸಿ ಸಕಲರೂ ಅದನ್ನು ತುಳಿದು ಜೀವನ ಯಾತ್ರೆ ಸಾಫಲ್ಯ ಗೊಳಿಸಿರೆಂದು ಸಾರಿದವರು. ಜನ್ಮ ಜನ್ಮಕ್ಕೆ ತಿರುಗದೆ, ಸೋಹಂ ಎಂದು ಗರ್ವಿಸದೆ ದಾಸೋಹ ಭಾವನೆಯಿಂದ ಭವದ ಬೇರನಗಿದು ತೆಗೆದು ಭಕ್ತಿ ಪಥದಲ್ಲಿ ಗಮಿಸಿ ಪಾರಾದರು ಆತ್ಮಾ ರಾಮಸ್ಥಿತಿಗೆ ಷಟ್‌ಸ್ಥಾಲಾತ್ಮಕ ಲಿಂಗಾಂಗ ಸಾಮರಸ್ಯ ಯೋಗವೇ ಮುಖ್ಯವೆಂದು ಸಾಧಿಸಿ ಅದನ್ನೇ ಲೋಕಾನುಕರಣೆಗೆ ಅಣಿಗೊಳಿಸಿದರು.

## ಮಹದ್ಯೋಜನೆಯ ಹಿನ್ನೆಲೆ

ವ್ಯಕ್ತಿಯು ಕುಟುಂಬದ ಘಟಕವಾದಂತೆ ಕುಟುಂಬವು ರಾಷ್ಟ್ರದ ಅವಿಭಾಜ್ಯ ಘಟಕವಾಗಿರುತ್ತದೆ. ಕೌಟುಂಬಿಕ ಸುಸ್ಥಿತಿಯೇ ರಾಷ್ಟ್ರ ಸಮಾಜ

ಗಳ ಸುಸ್ಥಿತಿಯಾದ ಕಾರಣ ಕಲ್ಯಾಣದ ಶರಣರು ಮೊದಲು ಕೌಟುಂಬಿಕ ಸುಯೋಜನೆಯ ಹೊಣೆಯನ್ನು ಅಂಗೀಕರಿಸಿದರು. ಹೇಗೆ ಜನಾಂಗವೋ? ಹಾಗೆ ಸಂಸ್ಕೃತಿಯು, ಹೇಗೆ ಕುಟುಂಬವೋ? ಹಾಗೆ ರಾಷ್ಟ್ರವು. ರಾಷ್ಟ್ರದಯೋಗ್ಯತಾ ಯೋಗ್ಯತೆಯನ್ನು ಕೌಟುಂಬಿಕ ಜೀವನದಲ್ಲಿ ಅಳೆದ ಗುರ್ತಿಸಬಹುದಾದ ಕಾರಣ ವ್ಯಕ್ತಿ ವ್ಯಕ್ತಿಗಳಿಂದೊಡಗೂಡಿದ ಈ ಚಿಕ್ಕ ರಾಷ್ಟ್ರ (ಕುಟುಂಬ) ದ ಉನ್ನತಿಯೇ ಸಂಯುಕ್ತ ಸಮಾಜಗಳ ಗಣರಾಜ್ಯ ಅಂತರ್ರಾಷ್ಟ್ರೋನ್ನತಿಯ ಮೂಲವಾಗಿದೆ ಎಂದು ಕಲ್ಯಾಣದ ಶರಣರು ಸಮಾಜದ ಕೊಳೆಯನ್ನು ತೊಳೆದು ಅದನ್ನು ಸಮೂಲಾಗ್ರ ಶುದ್ಧಗೊಳಿಸಿ ಎತ್ತಿ ಹಿಡಿಯಲು ಪ್ರತಿಯೊಬ್ಬರಿಗೆ ಸತ್ಯ ಧರ್ಮದ ಸ್ವರೂಪಜ್ಞಾನ ಉಂಟುಮಾಡಿ ಕೊಡುವ ಸಂವಿಧಾನವನ್ನೇರ್ಪಡಿಸಿದರು. ಹತ್ತಿಪ್ಪತ್ತು ಕುಟುಂಬಗಳುಳ್ಳ ಒಂದೊಂದು ಸಣ್ಣ ಹಳ್ಳಿಗಳಲ್ಲಿಯೂ ಮಠಗಳನ್ನು ಸ್ಥಾಪಿಸಿ, ಅಲ್ಲಲ್ಲಿಯ ಜನಸಾಮಾನ್ಯರ ಜೀವನ ಸೌಂದರ್ಯದ ರೀತಿನೀತಿಗಳನ್ನು ನಿರಂತರವಾಗಿ ತಿಳಿಸುತ್ತ ಜೀವನಸೌಖ್ಯ ಶಾಂತಿಯ ಮಾರ್ಗದರ್ಶಕ ಸುಯೋಜನೆಯನ್ನು ರಚಿಸಿದರು. ಹಳ್ಳಿಗಳಿಂದಲೇ ದಿಲ್ಲಿಯಾದ ಕಾರಣ ಹಳ್ಳಿಗರ ನಡೆನುಡಿಗಳ ತಿದ್ದುಪಡೆಯ ಸಕ್ರಮಹೊಣೆಯನ್ನು ಅಲ್ಲಲ್ಲಿಯ ಮಠಾಧಿಕಾರಿಗಳಿಗೆ ವಹಿಸಿಕೊಟ್ಟರು. ಅಂದಿನ ಮಠಗಳು ಸಮಾಜದ ಸೊತ್ತೆನಿಸಿ ಧರ್ಮರಾಜ್ಯಾಂಗ ಮಂದಿರಗಳಾಗಿದ್ದವು. ಅವುಗಳಿಗೆ ಸಂಬಂಧಿಸಿಕೊಂಡು ಅಂದಿನ ಕಾಯಕದಯ್ಯಗಳು ವೀರಸತ್ಯಾಗ್ರಹ ವ್ರತಾಚರಣೆಯ ಉಗ್ರಸೇವೆಯಿಂದ ಜನಜೀವನದ ಶಿಕ್ಷಣವನ್ನು ಕೈಕೊಂಡಿದ್ದರು. ಅಂದಿನ ಘಟನಾತ್ಮಕ ಸಮಾಜ ಸುಯೋಜನೆ ಎಲ್ಲಿ? ಇಂದಿನ ಒಡಕಿನ ಸಂಘ ಸಂಸ್ಥೆಗಳೆಲ್ಲಿ ?

## ಅನುಭವ ಮಂಟಪದ ಉತ್ಪತ್ತಿ

ಶ್ರೀ ಬಸವಣ್ಣನವರು ಯಾವಾಗಲೂ ಪ್ರಗತಿಪರ ವಿಚಾರಿಗಳು. ದೇಶಕಾಲಪರಿಸ್ಥಿತಿಯೊಡನೆ ಕೂಡಿ ಮುನ್ನಡೆಯುವ ಜೀವಂತ ಧರ್ಮಾಚರಣೆಗಳನ್ನೇ ಅವರು ಸಾಧಿಸುವ ಮನೋವೃತ್ತಿವುಳ್ಳವರು. ಹಳೆಯದೆಂದು ಕೊಳೆತ ನಡೆಯನ್ನು ಅವರು ನಂಬುವವರಲ್ಲ. ತರ್ಕಬದ್ಧವಾಗಿ ಸ್ವಾನುಭವದ ಒರೆಗೆ ಸರಿಬರುವ ಧರ್ಮಾಚರಣೆಗಳನ್ನೇ ಅವರು ಅನುಸರಿಸ ತಕ್ಕವರ. ಅಣ್ಣನವರ ಈ ತೆರದ ನಡೆ ನುಡಿ ಅವರ ತಂದೆತಾಯಿಗಳಿಗೂ ಸರಿಬಾರದ ಕಾರಣ ಮನೆಯಿಂದ ಹೊರಬಿದ್ದು, ಸಂಗನ ಆಶ್ರಯವನ್ನೇ ನಂಬಿ ಧರ್ಮ

ದಲ್ಲಿ ನಿಜ ನಂಬಿಕೆಯನ್ನು ಬೆಳಸುವ ಸಂಪಾಟು ಉಂಟುಮಾಡಿಕೊಂಡರು. ಪಂಡಿತರ ಪಾಂಡಿತ್ಯ ಪ್ರದರ್ಶನೆಯೂ ಸಾನತನ ಗ್ರಂಥಗಳ ಸಾಂಪ್ರದಾಯಿಕ ಕಟ್ಟು ನಿಟ್ಟುಗಳೂ ಅವರ ನಿರ್ಮಲ ಜೀವನ ವಾಹಿನಿಯ ಓಘವನ್ನು ತಡೆಗಟ್ಟದಾದವು. ಸತ್ಯವನ್ನೇ ಸಂದರ್ಶಿಸಲು ಹೆಣಗಾಡುವ ಅವರ ಅಂತಃ ಸ್ಫೂರ್ತಿಯು ಕರ್ಮಗಳ ಜಾಲವನ್ನು ಹರಿದು ವಿವೇಕ ಸಮ್ಮತವಾದ ನಿಜಾಚರಣೆಗಳಲ್ಲಿ ಪ್ರತಿಬಿಂಬಿಸಿತು. ಅವರು ಲೋಕ ವಿರೋಧಿಗಳಾಗಿ ಸಂಗನ ರಾಜತೇಜದಲ್ಲಿ ಬೆಳಗುತ್ತ ಸತ್ಯವನ್ನೇ ಎತ್ತಿಹಿಡಿದು ಹೋದಹೋದಲ್ಲಿ ನಿಂದನಿಂತಲ್ಲಿ ಅನುಭಾವ ಗೋಷ್ಠಿಯ ಅಭ್ಯಾಸವನ್ನು ಕೈಕೊಂಡರು. ಸ್ವಾನುಭಾವವೇ ಅವರ ಜೀವನದ ಉಸುರಾಯಿತು. ಅಲ್ಲಲ್ಲಿ ಸಂದರ್ಶನೆಯಿಂದ ಸಂದತತ್ವಜಿಜ್ಞಾಸುಗಳೊಡನೆ ವಾದವಿವಾದ ಗೈಯುವಾಗ್ಗೆ ಅವರು ಸಿಂಹದ ಮರಿಯಂತೆ ಗಾಂಭೀರ್ಯಯುತರಾಗಿ ತೋರುತ್ತಿದ್ದರು. ಹೋದಹೋದಲ್ಲೆಲ್ಲಾ ಅನುಭಾವ ಧರ್ಮದ ದಿಗ್ವಿಜಯಗೈಯುತ್ತ ಸತ್ಯ ಧರ್ಮದ ಧ್ವಜವನ್ನು ಎತ್ತಿಹಿಡಿದರು. ಅನುಭಾವ ಗೋಷ್ಠಿಗೆ ಅಣ್ಣನವರು ಆಧಾರ ಸ್ತಂಭವಾಗಿ, ಅಣ್ಣನವರ ಜೀವನಕ್ಕೆ ಅನುಭಾವ ಗೋಷ್ಠಿಯೇ ಧ್ಯೇಯಾಧಾರವಾಗಿ, ಅನ್ಯೋನ್ಯ ಆತ್ಮೀಯತೆ ಉಂಟಾಯಿತು. ಆತ್ಮ ವಿಕಾಸನೆಗಾಗಿ ಏರ್ಪಡಿಸಿಕೊಂಡಿದ್ದ ಅಣ್ಣನವರ ಅನುಭವ ಮಂಟಪದ ಸದ್ವಾಸನೆಯು ಸುತ್ತಲೂ ಪಸರಿಸಿತು. ಮುಂದೆ ಅವರು ಕಲ್ಯಾಣಕ್ಕೆ ಹೋಗಿ ನೀಲಾಂಬಿಕೆಯರನ್ನು ಕೈಹಿಡಿದು ರಾಜ ಕಾರಣದಲ್ಲಿ ಪದಾರ್ಪಣೆಗೈದರೂ, ಅನುಭಾವ ಕ್ಷುಧೆಯು ಅವರ ಆತ್ಮದಿಂದ ಅಗಲಲಿಲ್ಲ ತಮ್ಮ ನಿತ್ಯ ನೈಮಿತ್ಯಕ ಕಾಯಕ ಮುಗಿಸಿಕೊಂಡು ತಮ್ಮ ಅರಮನೆಯ ಪಕ್ಕದಲ್ಲಿಯೇ ಅನುಭಾವ ಗೋಷ್ಠಿಗಾಗಿ ಒಂದು ಸ್ಥಾನವನ್ನು ರಚಿಸಿಕೊಂಡು ಆತ್ಮ ನಿರೀಕ್ಷಣೆ ಮಾಡಿಕೊಳ್ಳುವದೂ ಧರ್ಮ ಚರ್ಚೆಗೈಯ್ಯುವದೂ ಎಂದಿನಂದದ ಪರಿಪಾಟು ಮುಂದುವರಿಸಿದರು. ಅಣ್ಣನವರ ಮನೋವೈಶಾಲ್ಯವನ್ನು ಕಂಡು ಹಲವರು ಆಸ್ಥಾನಕ್ಕೆ ಆಕರ್ಷಿತರಾದರು. ಅವರ ಅಂತಃಕರಣದ ಕೋಡಿವರಿದು ಹರಿಯುವದನ್ನು ಕಂಡು ಅವರು ಹರ್ಷಿತರಾದರು. ತಮ್ಮನ್ನು ಎತ್ತಿಹಿಡಿದು ಉದ್ಧರಿಸುವ ದಾತ ದೊರಕಿದನೆಂದು ಆನಂದ ಭಾಷ್ಪಗಳನ್ನುರುಳಿಸಿದರು. ಕೆಲವೇ ದಿವಸಗಳಲ್ಲಿ ಅನುಭಾವ ಜಿಜ್ಞಾಸುಗಳ ಸಂಖೆ ಬೆಳೆದು ಅಣ್ಣನವರ ಅನುಭವ ಮಂಟಪವು ಕಿಕ್ಕಿರಿಯಿತು.

## ಪತಿತ ಪಾವನ ಬಸವಣ್ಣ

ಭಕ್ತಿ ಪಕ್ಷಪಾತಿಗಳಾದ ಬಸವಣ್ಣನವರು ಪತಿತರನ್ನು ಎತ್ತಿಹಿಡಿಯಲು ಟೊಂಕ ಕಟ್ಟಿದರು. 'ಆರಾದಡಾಗಲೀ ಶ್ರೀಮಹಾದೇವನ ನೆನೆವವನ ಬಾಯ ತಾಂಬುಲವ ಮೆಲಿವೆ. ಬೀಳುಡಿಗೆಯ ಹೊದಿವೆ ಎಂದು ಭಕ್ತಾಧಿಕ್ಯವೆಂದು ಸಮರ್ಥಿಸುತ್ತ ಭಕ್ತಿ ಜೀವಿಗಳಿಗೆಲ್ಲರಿಗೂ ಅನುಭವ ಮಂಟಪದ ಬಾಗಿಲನ್ನು ತೆರೆದಿಟ್ಟರು. ಕಲ್ಯಾಣದ ಒಳಹೊರಗಿನಿಂದ ತಂಡ ತಂಡವಾಗಿ ಆಗಮಿಸುತ್ತಿರುವ ಸದ್ಭಾವಿಗಳನ್ನು ಕಂಡು ಅಣ್ಣನವರು 'ದಿನಕರನುದಯಕ್ಕೆ ಕಮಲ ವಿಕಸಿತವಾದಂತೆ ಎನಗೆ ನಿಮ್ಮ ಶರಣರ ಬರವು ಕೂಡಲ ಸಂಗಮದೇವ' ಎಂದು ಹರ್ಷೋದ್ಗಾರ ತೆಗೆಯುತ್ತಿದ್ದರು. ಬಂದ ಭಕ್ತರನ್ನು ಪ್ರೋತ್ಸಾಹಿಸುತ್ತ 'ಅಳಿಗೊಂಡಿಹರೆಂದು ಅಂಜಲದೇಕೆ? ನಾಸ್ತಿಕವಾಡಿಹರೆಂದು ನಾಚಲದೇಕೆ? ಆರಾದಡಾಗಲಿ ಕೂಡಲ ಸಂಗಮದೇವರ ಮುಂದೆ ದಂದಣದತ್ತಣವೆನ್ನಿ' ಎಂದು ಅವರನ್ನು ಮೈದಡವಿ ಉಬ್ಬಿಸುತ್ತಿದ್ದರು. ಕನಿಷ್ಟ ಕುಲದವರೆಂದು ಕಡೆಗಣಿಸಲ್ಪಟ್ಟು ಮೂಲೆಗುಂಪಾಗಿದ್ದ ಜನರೇ ಮೊದಲು ಅನುಭವ ಮಂಟಪದಲ್ಲಿ ನೆರೆದರು. ಅಂಥವರಲ್ಲಿ ಜ್ಞಾನದಧಿಯನ್ನು ಸ್ಫುರಿಸಿ ವಿಚಾರ ಮಂಥನ ಗೈಯುತ್ತ ಅನುಭಾವ ನವನೀತ ತೆಗೆಯುವುದು ಬಸವಣ್ಣನವರ ಕೆಲಸವಾಗಿತ್ತು. ಕುರುಬ, ಕುಂಬಾರ, ಅಗಸ, ಮಾದಿಗ, ಕ್ಷೌರಿಕ, ಕಬ್ಬಲಿಗ, ದೀನ ದಲಿತ, ಕುರಿಕಾಯ್ವ, ದನಕಾಯ್ವರೆಲ್ಲಾ ಅನುಭವ ಮಂಟಪಕ್ಕೆ ಸದಸ್ಯರಾದರು. ಸನಾತನಿಗಳಿಗಿದು ಸರಿದೋರದೆ ಅವರು ಪ್ರತ್ಯಕ್ಷವಲ್ಲದಿದ್ದರೂ ಅಪ್ರತ್ಯಕ್ಷವಾಗಿ ಅಣ್ಣನವರ ಕಾರ್ಯಕ್ಕೆ ವಿರೋಧಿಗಳಾದರು. ಇಂಥವರ ವಿರೋಧಕ್ಕೆ ಅಣ್ಣನವರು ಬಗ್ಗದೆ ಬೆದಕದೆ 'ನ್ಯಾಯ ನಿಷ್ಠುರ ದಯಾ ದಾಕ್ಷಿಣ್ಯ ಪರ ನಾನಲ್ಲ. ಲೋಕ ವಿರೋಧಿ ಶರಣನಾರಾರಿಗೂ ಅಂಜುವವನಲ್ಲ ಕೂಡಲ ಸಂಗಮದೇವರ ರಾಜ ತೇಜದಲ್ಲಿಪ್ಪನಾಗಿ' ಎಂದು ಧೈರ್ಯದಿಂದ ಸಾರಿ ತಮ್ಮ ಕರ್ತವ್ಯ ಕರ್ಮಗಳನ್ನು ಬಹು ಜನ ವಿರೋಧದಲ್ಲಿ ಸಾಧಿಸಿಕೊಂಡು ವಿಚಾರ ಕ್ರಾಂತಿಯನ್ನೆಬ್ಬಿಸಿದರು. ಮೂಢ ನಂಬಿಗೆಗಳ ಮೂಲೋತ್ಪಾಟನೆ ಗೈದು ಸತ್ಯ ಧರ್ಮದ ಸಾರವನು ಸುರಿಸಿದರು. ಜನಸಾಮಾನ್ಯರ ನುಡಿಯಲ್ಲಿಯೇ ತತ್ವ ರತ್ನಗಳನ್ನು ಹಕ್ಕಿ ಹಸಿಗೆ ಮಾಡಿದರು. ಧರ್ಮ ಸಮಾಜ, ನೀತಿ ಮುಂತಾದ ಸಂಸ್ಕೃತಿಯ ಅಂಗ ಉಪಾಂಗಗಳಲ್ಲಿ ಮಹತ್ವದ ಬದಲಾವಣೆಯನ್ನು ಗೈದು ಭಾರತೀಯ ಸಂಸ್ಕೃತಿಯಲ್ಲಿರುವ ಲೋಪ ದೋಷಗಳನ್ನು ಎತ್ತಿ ಹಿಡಿದು ಅದನ್ನು

ಸಮೂಲಾಗ್ರ ಸಂಸ್ಕರಿಸಿ ಬೆಳಿಸಿದರು. ಅಣ್ಣನವರ ಧಾರ್ಮಿಕ ಅಂದೋಲನದ ಕಿಡಿಯು ಪ್ರಜ್ವಲಿಸಿ ಕನ್ನಡ ನಾಡಿನ ತುಂಬಾ ಕ್ರಾಂತಿಯುತ ಬೇಗೆಯನ್ನು ಒತ್ತಿಸಿತು. ಧರ್ಮವು ಸಕಲರ ಸೊತ್ತಾಯಿತು ಊಚ ನೀಚತೆಯು ವಿಷಮತೆ ನಾಶವಾಗಿ ಸಾಮಾಜಿಕ ಮತ್ತು ಆರ್ಥಿಕ ಸಮತೆ ಸ್ಥಿರಗೊಂಡಿತು. ಸುನೀತಿ ಸತ್ಕ್ರಿಯಾಚರಣೆಗಳಿಗೆ ಅತ್ಯಂತ ಮಹತ್ವ ಉಂಟಾಗಿ ಅಧ್ಯಾತ್ಮ ಜೀವನದತ್ತ ಜನಾಂಗದ ಒಲವುಂಟಾಯಿತು. ಅಖಿಲ ಮಾನವರಿಗಾಗಿ ಅನುಭವ ಮಂಟಪದ ಬಾಗಿಲು ತೆರದಿಟ್ಟ ಕಾರಣ ಎಲ್ಲರೂ ಇಲ್ಲಿ ಸೇರಿ ಅಣ್ಣನವರ ವಿಶಾಲವಾದ ಹೃದ್ಗಂಗೆಯಲ್ಲಿ ಮಿಂದು ಪಾವನ ಹೊಂದುತ್ತಿದ್ದರು. ಬರಬರುತ್ತ ಅನುಭವ ಮಂಟಪಕ್ಕೆ ಸೇರುವ ಅಣ್ಣಗಳ ಯೋಗ್ಯತೆಯನ್ನು ಅವರವರ ಆಚರಣೆಯ ಅಳಿಗೋಲಿನಿಂದ ಅಳೆಯಲಾಗುತ್ತಿತ್ತು. ಉಚ್ಚ ಜಾತಿ ಉದ್ದಾಮ ಪಾಂಡಿತ್ಯಕ್ಕಲ್ಲಿ ಮಹತ್ವವಿರಲಿಲ್ಲ. ವೇದಾಗಮ ಉಪನಿಷದ್ವಾಕ್ಯಗಳನ್ನು ಅಲ್ಲಿ ಚರ್ಚೆಗೆ ನಿಲ್ಲಿಸಿ ಬಹುಸಂಖ್ಯಾಕರ ಸದಸದ್ವಿವೇಕ ಒರೆಗೆ ತಾಕಿ ಬಣ್ಣವಿಟ್ಟ ತತ್ವಗಳನ್ನೇ ಗ್ರಹಿಸಿ ಪ್ರಕಟಿಸುತ್ತಿದ್ದರು. ಈ ರೀತಿ ಭಾವಾವೇಶದಿಂದ ನುಡಿದ ವಾಕ್ಯಗಳೇ ವಚನಗಳು. ಸ್ವಾನುಭಾವ ಸಾಧಕರ ಹೃದ್ಗುರಿಯಿಂದ ಹೊರಹೊಮ್ಮಿದ ಈ ಅಂತಃಸೆಲೆಯು ವಾಙ್ಮಯ ಪ್ರಪಂಚದಲ್ಲಿ ಹೊನ್ನಿನ ಹೊಳೆಯಾಗಿ ಹರಿಯಿತು. ಇಂಥಾ ಹಾಲ್ಹೊಳೆಯ ಸವಿಪಾನದ ಸುಖವನ್ನು ಸರ್ವರಿಗೆ ಮಾಡಿ ಕೊಡುವ ಕೆಲಸ ಕಲ್ಯಾಣದ ಶರಣರದಾಗಿತು.

## ಅನುಭವ ಮಂಟಪದ ಬಾಹ್ಯ ಸ್ವರೂಪ

ಅನುಭವ ಮಂಟಪವು ಅಂತರಂಗದ ಅಧ್ಯಾತ್ಮ ಹಂತದ ಕುರುಹಾಗಿತ್ತು- ಶುದ್ಧ ಜೀವಿಯು ನಿವೃತ್ತಿ ಮಾರ್ಗವಿಡಿದು ಲಿಂಗ ಶಕ್ತಿಯನ್ನು ಸಾಧಿಸಿ ನಿರವಯ ಪದವಿಯನ್ನೈದಲು ಆರು ತೆರನಾಗುತ್ತದಷ್ಟೇ ? ಈ ತರದ ಅಧ್ಯಾತ್ಮ ಸಕೀಲಕ್ಕನುಸರಿಸಿ ಅನುಭವ ಮಂಟಪದ ಬಾಹ್ಯ ಕಟ್ಟಡದ ರಚನೆಯಾಗಿದ್ದಿತು. (೧) ಭಕ್ತ (೨) ಮಹೇಶ (೩) ಪ್ರಸಾದಿ (೪) ಪ್ರಾಣಲಿಂಗಿ (೫) ಶರಣ (೬) ಐಕ್ಯ, ನಿರಾಲಂಬ. ಅಂಗನ ಈ ಅಧ್ಯಾತ್ಮ ಸ್ಥಿತ್ಯಂತರಕ್ಕನುಸರಿಸಿ ಅನುಭವ ಮಂಟಪದ ಮೆಟ್ಟಲುಗಳನ್ನು ರಚಿಸಿ ಮೇಲೆ ರತ್ನ ಖಚಿತವಾದ ಶೂನ್ಯ ಸಿಂಹಾಸನವನ್ನೇರ್ಪಡಿಸಲಾಗಿತ್ತು- ಆಯಾ ಸ್ಥಲ ಕಟ್ಟಿನ ಯೋಗ್ಯತೆಯನುಸರಿಸಿ ಸಾಧಕರು ಅಲ್ಲಿ ಕೂಡ್ರುತ್ತಿದ್ದರು. ಭಕ್ತ, ಮಹೇಶ, ಪ್ರಾಣಲಿಂಗಿ, ಶರಣ, ಐಕ್ಯ ಎಂಬ ಆಧ್ಯಾತ್ಮಿಕ ಹಂತಗಳನ್ನು ಸಾಧಕರು ಕ್ರಮೇಣ ಸಾಧಿಸುತ್ತ ಆಯಾ ಸ್ಥಲದ ಮೇಲೆ ವಿರಾಜಿಸಿ, ಅನುಭಾವ ಗೈಯಯ್ಯುತ್ತಿದ್ದರು. ಭಕ್ತಿಯಲ್ಲಿ ಆರು ತೆರನಾಗಿ ಮಾಡಿ

ಇದರ ವಿಕಾಸನೆಯಾದಂತೆ ಕ್ರಮೋಕ್ತ ಆಯಾ ಸ್ಥಲಗಳನ್ನು ಏರಲು ಸಾಧಕನು ಅರ್ಹನಾಗುತ್ತಿದ್ದನು. ಭಕ್ತಿ ಸ್ಥಲದವರು ಮಂಟಪದ ಕೆಳಗಿನ ಸೋಪಾನದಲ್ಲಿಯೇ ಕುಳಿತು ಶ್ರದ್ಧಾ ಭಕ್ತಿ ಮಾಡುತ್ತ ಅದರಲ್ಲಿ ನಿಷ್ಠೆಯನ್ನು ಬೆಳಸಿ ನಿಷ್ಠಾ ಭಕ್ತಿಯುತರಾಗಿ ಮುಂದೆ ಮಹೇಶ ಸ್ಥಲ ಸಾಂಕೇತಿಕ ಸೋಪಾನವನ್ನೇರುವ ಸುವ್ಯವಸ್ಥಿತ ಏರ್ಪಾಡು ಅಲ್ಲಿ ಉಂಟಾಗಿತ್ತು. ಕಂಡ ಕಂಡವರು ಕಂಡ ಕಂಡಲ್ಲಿ ಕುಳಿತು ಕಂಡ ಕಂಡಂತೆ ಮಾತಾಡುವ ಅವ್ಯವಸ್ಥೆ ಅಲ್ಲಿರಲಿಲ್ಲ. ರಾಜ ಮಹಾರಾಜನಾದರೂ ಒಂದಿಲ್ಲೊಂದು ಬಗೆಯ ಸತ್ಯ, ಶುದ್ಧ ಕಾಯಕ ಕೈಕೊಂಡು, ನೈತಿಕ ದೀಕ್ಷೆಯನ್ನು ಪಡೆದು ಮೊದಲು ಭಕ್ತಿ ಸೋಪಾನವನ್ನೇರಬೇಕಾಗುತ್ತಿತ್ತು. ಈ ರೀತಿ ಆತ್ಮವಿಕಸನೆಯನ್ನು ಕಿಂಕುರ್ವಾಣತೆಯಿಂದ ಕೈಕೊಂಡು ನಿರವಯಲ ಶೂನ್ಯ ಸಿಂಹಾಸನವನ್ನೇರಿದ ಶರಣರೂ ಅಲ್ಲಿದ್ದರು. ಅಣ್ಣನು ಅನುಭವ ಮಂಟಪ ಕಟ್ಟಿದ ಹಲವಾರು ವರ್ಷಗಳ ವರೆಗೂ ಶೂನ್ಯ ಸಿಂಹಾಸನವು ಖಾತಿರವಾಗಿಯೇ ಉಳಿದಿತ್ತು. ಅದನ್ನೇರುವ ಸಾಮರ್ಥ್ಯವು ಅಲ್ಲಿರುವ ಸಾಧಕರಿಗಿನ್ನೂ ಉಂಟಾಗಿದ್ದಿಲ್ಲ. ಅಣ್ಣನ ನಿರಾಳ ಹೃದಯ ಸಿಂಹಾಸನವನ್ನೇರಿ, ನಿಸ್ಸೀಮ ನಿಜದೊಳ್ಪೆಡೆಯುವರಾರಿಲ್ಲದಂತಾಯ್ತೆಂದು ಪ್ರಲಾಪಿಸುತ್ತಿರುವಾಗ್ಗೆ ಮಾಯಾ ಕೋಲಾಹಲನಾದ ಶ್ರೀಪ್ರಭುದಲ್ಲಮನು ಬನವಾಸಿಯಿಂದ ಹೊರಟು ದಿಗ್ವಿಜಯ ಕೈಕೊಂಡು ಕಲ್ಯಾಣಕ್ಕೆ ಬಂದು ಅಣ್ಣನು ರಚಿಸಿದ ಹೃದಯ ಗದ್ದುಗೆಯ ಬಾಹ್ಯ ಸಿಂಹಾಸನವನ್ನು ಪಾದವಿಲ್ಲದೆ ಗಮಿಸುತ್ತ, ಕಣ್ಣಿಲ್ಲದೆ ನೋಡುತ್ತ ಮನವಿಲ್ಲದೆ ನೆನೆಯುತ್ತ, ಹಸ್ತವಿಲ್ಲದೆ ಗ್ರಹಿಸುತ್ತ ಏರಿ ಕಾಯವಿದಲ್ಲ ಅಕಾಯಾರೂಢನಾಗಿ ಅವಿರಳಾನಂದದಲ್ಲಿ ಬೆರೆತು, ಅಣ್ಣನ ಅಧ್ಯಾತ್ಮದ ಮಂದಿರಕ್ಕೆ ತುದಿ ಮೊದಲಿಲ್ಲದ ಕಲಶವನ್ನಿಟ್ಟು ಕಂಗೊಳಿಸಿದನು. ಆಗ್ಗೆ ಅಣ್ಣನ ಧ್ಯೇಯ, ಹೃದ್ಭಯಕೆಯು ಸಾಧಿಸಿದಂತಾಗಿ ಅನುಭವ ಮಂಟಪದ ನವ್ಯ ಭವ್ಯ ಪರಿಪೂರ್ಣತೆಯನ್ನು ನೋಡಿ ನೋಡಿ ಆನಂದ ಭಾಷ್ಪಗಳನ್ನುದುರಿಸಿದನು. ಆಗ್ಗೆ ಅನುಭವ ಮಂಟಪವು ಪ್ರಪಂಚದ ಏಕಮೇವಾದ್ವಿತೀಯ ಆದರ್ಶ ಜೀವನ ಶಿಕ್ಷಣಾಲಯವೆನಿಸಿ ಲೋಕ ವಿಖ್ಯಾತಿಹೊಂದಿತು. ಅನುಭವ ಮಂಟಪದ ಅಧ್ಯಾತ್ಮ ಕುಲುಮೆಯಲ್ಲಿ ಪುಟಗೊಂಡ ಶರಣರು ವಿಶುದ್ಧ ಚೈತನ್ಯದ ಕೈದೀವಿಗೆ ಪಡಿಯಚ್ಚುಗಳೆನಿಸಿ ಒಂದೊಂದು ಬಗೆಯ, ಸಾಧಾರಣ ಆದರ್ಶವನ್ನು ಮೆರೆಸಿದರು. ಇದಲ್ಲದೆ ಅನುಭವ ಮಂಟಪದ ಶರಣರ ಸತ್ಯ ಸಂಯೋಜನೆ.

ಬ್ರಹ್ಮಯ್ಯನ ಹೊಳೆಮೊದಲಾದ ಸಣ್ಣಪುಟ್ಟ ಹಳ್ಳಗಳು ಅದಕ್ಕೆ ಕೂಡು ತ್ತವೆ. ಈ ಭಾಗದ ಮಧ್ಯದಲ್ಲಿ ಉಳವಿ ಗ್ರಾಮವಿರುತ್ತದೆ. ಉಳವಿಯು ಮಹಾಮನೆಯ ಕೊಳ್ಳ ಮತ್ತು ಆಕಳಗವಿಯ ಕೊಳ್ಳವೆಂಬ ಎರಡು ಕೊಳ್ಳಗಳಿರುತ್ತವೆ. ಈ ಕೊಳ್ಳಗಳ ಉಭಯ ಪಾರ್ಶ್ವಗಳಲ್ಲಿ ಎತ್ತರವಾದ ಪರ್ವತಗಳಿವೆ ಹೀಗೆ ಈ ಪ್ರದೇಶವು ಅತ್ಯಂತ ಭದ್ರವಾಗಿರುತ್ತದೆ. ಇಂಥ ಪ್ರದೇಶದಲ್ಲಿ ಇದ್ದುಕೊಂಡು ಚನ್ನಬಸವೇಶ್ವರ ಮಡಿವಾಳಮಾಚಿದೇವ ಈ ಮೊದಲಾದ ಶಿವಶರಣರು ನಿರಂತರವಾಗಿ ಇದ್ದುಕೊಂಡು ಕಾಲಕಳೆ ಯಲು ಬಯಸಿದ್ದರು. ಅವರು ಅಲ್ಲಮ ಪ್ರಭುವಿನಂತೆ ಶ್ರೀಶೈಲಪ್ರಾಂತಕ್ಕೆ ಹೋಗಲಿಲ್ಲ. ಯಾಕಂದರೆ ಈ ಪ್ರಾಂತವು ಬಹಳ ದೂರದಲ್ಲಿದೆ. ಆದರೆ ಈ ಉಳವಿಯ ಪ್ರದೇಶವು ಕಲ್ಯಾಣ ರಾಜ್ಯದ ಮೇರೆಯಲ್ಲಿದ್ದಿತು. ಆದ್ದ ರಿಂದ ಮುಂದೆ ಯೋಗ್ಯ ಸಂಧಿಯನ್ನು ಸಾಧಿಸಿ ಶೀಘ್ರವಾಗಿ ತಮ್ಮ ಮೊದಲಿನ ಪ್ರದೇಶವನ್ನು ಪ್ರವೇಶಮಾಡಲು ಅದು ಅನುಕೂಲವುಳ್ಳದ್ದಾ ಗಿತ್ತು. ಸಮೀಪದಲ್ಲಿ ಈಗಿನ ಹುಬ್ಬಳ್ಳಿ ಮತ್ತು ಕಲಘಟಗಿ ಮತ್ತು ಧಾರ ವಾಡ ತಾಲೂಕುಗಳಿದ್ದು ಅವುಗಳಿಂದ ಅನ್ನಧಾನ್ಯವನ್ನು ಪೂರೈಸಿಕೊಳ್ಳಲು ಅವರಿಗೆ ಶಕ್ಯವಿದ್ದಿತು. ಆದ್ದರಿಂದ ಉಳವಿಯು ಪ್ರದೇಶವು ವಸಾಹತು ಮಾಡಲು ಉಪಯುಕ್ತವೆನಿಸಿದ್ದರಿಂದ ಶಿವಶರಣರು ಈ ಕಡೆಗೆ ಹೊರ ಟರೆಂದು ನಮಗೆ ತೋರುತ್ತದೆ.

ಜೈನರೂ ಸಾರಸ್ವತರೂ ಇದಕ್ಕೂ ದೂರವಾಗಿರುವ ಸಮುದ್ರತೀರ ಪ್ರದೇಶದಲ್ಲಿ ವಸಾಹತು ಮಾಡಿದ್ದಾರೆ. ಒಂದು ಕಾಲದಲ್ಲಿ ಇವರಿಗೂ ಸಂಕಟಗಳು ಪ್ರಾಪ್ತವಾಗಿರಬಹುದು. ಆದ್ದರಿಂದ ಅವರು ಈ ಪ್ರದೇಶಗ ಳಿಗೆ ಬಹು ಕಾಲದ ಹಿಂದೆಯೇ ಬಂದು ವಸಾಹತು ಮಾಡಿರಬಹುದೆಂದು ತೋರುತ್ತದೆ.

## ಚನ್ನಬಸವೇಶ್ವರನ ಸೇನಾನಾಯಕರು

ಚನ್ನಬಸವೇಶ್ವರನು ಕಲ್ಯಾಣವನ್ನು ಬಿಟ್ಟು ಉಳವಿಗೆ ಹೋಗುವ ವರೆಗೂ ಮಾರ್ಗದಲ್ಲಿ ಅವನು ವೈರಿಗಳಕೂಡ ಕಾದಾಡುವ ಪ್ರಸಂಗಗಳು ಅನೇಕಸಾರಿ ಬಂದವು. ಆ ಕಾಲದಲ್ಲಿ ಅವನು ಒಬ್ಬ ನುರಿತ ನಿಷ್ಣಾತ ಸೇನಾಪತಿಯಂತೆ ವರ್ತಿಸಿದನು ಆರಂಭದ ಕಾಲದಲ್ಲಿ ಮಡಿವಾಳಮಾಚಿ ದೇವನು ಅವನಿಗೆ ಸಹಾಯಕನಾಗಿದ್ದನು. ಅವನು ಕಾತರವಳ್ಳಿಯ ಕಾಳ ಗದ ವರೆಗೂ ಚನ್ನಬಸವೇಶ್ವರನ ಕೂಡ ಇದ್ದಿರಬಹುದು ಮುಂದೆ ಚನ್ನ

ಬಸವೇಶ್ವರನು ಅರಣ್ಯ ಪ್ರದೇಶವನ್ನು ಪ್ರವೇಶಿಸಿದ ಬಳಿಕ ಕಿನ್ನರಿಬ್ರಹ್ಮಯ್ಯನು ಅವನಿಗೆ ಮುಖ್ಯ ಸಹಾಯಕನಾಗಿದ್ದನು. ಅವರೊಡನೆ ಕಕ್ಕಯ್ಯ ಶೂಲದ ಬೊಮ್ಮಣ್ಣ ಕೂಗಿನ ಮಾರಿತಂದೆ ಮೊದಲಾದವರು ಸಹಾಯಕರಾಗಿದ್ದರು.

## ಶಿವಶರಣರ ಆರಂಭದ ಪಯಣ

ಚನ್ನಬಸವೇಶ್ವರನು ಕಲ್ಯಾಣವನ್ನು ಬಿಟ್ಟು ತೊರಗಲ್ಲು ಪ್ರಾಂತಕ್ಕೆ ಬರುವವರೆಗೂ ಯುದ್ಧಗಳಾದಂತೆ ತೋರುವದಿಲ್ಲ. ಈ ಕಾಲದಲ್ಲಿ ಶಿವಶರಣರ ದಂಡಾಳುಗಳು ಉತ್ತರದಿಂದ ಪಯಣಮಾಡುತ್ತ ತೊರಗಲ್ಲಿನವರೆಗೂ ಬಂದಿರಬಹುದು. ಬಿಜ್ಜಳನ ವಧೆಯಾದ ಬಳಿಕ ಅವನ ರಾಜ್ಯ ಕಾರಭಾರದಲ್ಲಿ ಅವ್ಯವಸ್ಥೆಯುಂಟಾಗಿರಬೇಕೆಂಬು ತೋರುತ್ತದೆ. ಅದ್ದರಿಂದ ಆರಂಭದಲ್ಲಿ ಬಿಜ್ಜಳನ ದಂಡಾಳುಗಳಿಗೆ ಶಿವಶರಣರನ್ನು ಬೆನ್ನಟ್ಟುವದು ಆಗಿರುವದಿಲ್ಲ.

## ಕಡಕೋಳದಲ್ಲಿ ತಂಗಿದ್ದು

ಶಿವಶರಣರು ತೊರಗಲ್ಲಿನ ಸಮೀಪದಲ್ಲಿರುವ ಕಡಕೋಳ, ಗೊಡಚಿ, ಮತ್ತು ಸತ್ತೀಗೇರಿ ಈ ಗ್ರಾಮಗಳಲ್ಲಿ ಇದ್ದದ್ದರ ಉಲ್ಲೇಖವು ಗ್ರಂಥಗಳಲ್ಲಿ ಬಂದಿರುತ್ತದೆ. ಶಿವಶರಣರು ಕಡಕೋಳದಲ್ಲಿ ಶಿವಪೂಜೆಯನ್ನು ಮಾಡಿದರೆಂತಲೂ ಗೊಡಚಿಯಲ್ಲಿದ್ದ ಗಿಡದ ಕುತ್ತಿನಲ್ಲಿ ಒಂದು ಚಿಕ್ಕಗುಡಿಯನ್ನು ಕಟ್ಟಿಸಿದರೆಂತಲೂ ಅಲ್ಲಿ ಮಡಿವಾಳಮಾಚಿದೇವನು ವಾಸಿಸಿದನೆಂತಲೂ ಹೇಳಿದೆ. ಶಿವಶರಣರು ಸತ್ತೀಗೇರಿಯಲ್ಲಿ ಸತ್ತಿಗೆಯಾಕಾರಗಳನ್ನು ತೆಗೆದುಕೊಂಡರೆಂಬ ಉಲ್ಲೇಖವು ಬಂದಿರುತ್ತದೆ. ಆದರೆ ಈ ಭಾಗದಲ್ಲಿ ಅವರು ಬಿಜ್ಜಳನ ದಂಡಾಳುಗಳ ಕೂಡ ಯುದ್ಧಮಾಡಿದ್ದು ತಿಳಿದು ಬಂದಿಲ್ಲ. ಈ ಎಲ್ಲ ಗ್ರಾಮಗಳು ಸಮಿ ಸಮೀಪವಾಗಿವೆ. ಶಿವಶರಣರು ಇಲ್ಲಿ ಮೊದಲು ತಮ್ಮ ದಂಡಾಳುಗಳನ್ನು ವ್ಯವಸ್ಥಿತವಾಗಿಟ್ಟುಕೊಂಡು ಕಾಳಗಕ್ಕೆ ಅಣಿಯಾದರೆಂದು ತೋರುತ್ತದೆ. ಆದರೆ ಮುಂದೆ ಈಭಾಗದಿಂದ ಉಳವಿಯವರೆಗೂ ಅಲ್ಲಲ್ಲಿ ಯುದ್ಧಗಳಾಗುತ್ತ ಹೋಗಿರುತ್ತವೆ.

## ಮುರಗೋಡ ಠಾಣ್ಯ

ಈಕಡಕೋಳ ಪ್ರದೇಶದ ಪಶ್ಚಿಮಕ್ಕೆ ೭—೮ ಮೈಲುಗಳ ಹಿಂದೆ ತಲ್ಲೂರು, ಮೊದಲೂರು, ಮುರಗೋಡ, ಈ ಗ್ರಾಮಗಳಿವೆ. ಈ ಭಾಗದಲ್ಲಿ ಶಿವಶರಣರಿಗೂ ಬಿಜ್ಜಳನ ದಂಡಾಳುಗಳಿಗೂ ಯುದ್ಧಗಳಾಗಿವೆ.

ಮೊದಲೂರಲ್ಲಿ ಅಳಿಯ ಬಿಜ್ಜಳನಕೂಡ ಮೊದಲನೆಯ ಯುದ್ಧವಾಯಿತು. ಆದ್ದರಿಂದ ಈ ಗ್ರಾಮಕ್ಕೆ ಮೊದಲೂರು ಎಂಬ ಹೆಸರು ಪ್ರಾಪ್ತವಾದಂತೆ ತೋರುತ್ತದೆ. ತಲ್ಲೂರಲ್ಲಿ ಜೈನರ ತಲೆಯುಕಡಿದು ಎಂಬ ಉಲ್ಲೇಖವು ಬಹಳ ಕಡೆಗೆ ಬಂದಿದೆ. ಅದರಂತೆ ಮುರಗೋಡಿನಲ್ಲಿ ಜೈನರ ದಳವನ್ನು ಶಿವಶರಣರು ಮುರಿಯು ಕಡಿದರೆಂತಲೂ ಅಲ್ಲಿ ಕೆಂಗೇರಿಯಲ್ಲಿ ಖಂಡೆಯ ತ್ರಿಶೂಲಗಳನ್ನು ತೊಳೆದರೆಂತಲೂ ಉಲ್ಲೇಖಗಳಿವೆ. ಈ ಉಲ್ಲೇಖಗಳ ಮೇಲಿಂದ ಶಿವಶರಣರು ಕಡಕೋಳ ಭಾಗಕ್ಕೆ ಮೊದಲು ಬಂದು ಅಲ್ಲಿಂದ ಮುರಗೋಡಕ್ಕೆ ಹಿಂದಕ್ಕೆ ಸರಿದು ಅಲ್ಲಿ ನಿಂತುಕೊಂಡು ಯುದ್ಧಗಳನ್ನು ನಡಿಸಿದ ಹಾಗೆ ತೋರುತ್ತದೆ. ಈ ಭಾಗದಲ್ಲಿ ಅನೇಕ ಘೋರ ಯುದ್ಧಗಳಾಗಿರಬಹುದು. ಅವುಗಳ ವಿವರಗಳು ನಮಗೆ ತಿಳಿದು ಬಂದಿಲ್ಲ. ಇದು ಇನ್ನೂ ಸಂಶೋಧಿಸತಕ್ಕ ವಿಷಯವಾಗಿದೆ.

## ಮೂಗಬಸವದಲ್ಲಿ ವಾಸ್ತವ್ಯವು

ಮುರಗೋಡ ಠಾಣ್ಯದಲ್ಲಿ ಆದ ಈ ಕಾಳಗಗಳಲ್ಲಿ ಶಿವಶರಣರು ಹಿಂದೆಗೆಯಬೇಕಾದ್ದರಿಂದ ಅವರು ಮೂಗಬಸವ ಎಂಬಲ್ಲಿ ತಳವೂರಿದರು. ಇದಕ್ಕೆ ಸಮೀಪವಾಗಿ ಬಸವನಕೊಳ್ಳ ಎಂಬ ಸ್ಥಳವಿದೆ. ಇಲ್ಲಿ ಚನ್ನಬಸವನು ತಂಗಿರಬಹುದು. ಇಲ್ಲಿ ಶಿವಶರಣರು ಕೌಡಿಬಾಗಟೆಯ ಹೊಯ್ಸಿದರೆಂದು ಗ್ರಂಥಗಳಲ್ಲಿ ಹೇಳಿದೆ. ಮುರಗೋಡ ತಲ್ಲೂರು ಮತ್ತು ಮೊದಲೂರಗಳಲ್ಲಿ ಕಾಳಗಗಳಾಗಲು ಅವುಗಳಲ್ಲಿ ಚೆಲ್ಲಾಪಿಲ್ಲಿಯಾದ ಶಿವಶರಣರ ದಂಡಾಳುಗಳನ್ನು ಮೂಗಬಸವದಲ್ಲಿ ಬರಮಾಡಿಕೊಂಡು; ಅವುಗಳನ್ನು ವ್ಯವಸ್ಥೆಗೊಳಿದರೆಂದು ತೋರುತ್ತದೆ.

## ನಾಗಳಾಪುರದಲ್ಲಿ ಠಾಣ್ಯ

ಮೂಗಬಸವದಿಂದ ಅವರು ಪಶ್ಚಿಮಕ್ಕೆ ಹತ್ತು ಮೈಲು ಹಿಂದಕ್ಕೆ ಸರಿದು ನಾಗಳಾಪುರದಲ್ಲಿ ತಮ್ಮ ಠಾಣ್ಯವನ್ನು ಹಾಕಿರಬೇಕೆಂದು ತೋರುತ್ತದೆ. ನಾಗಳಾಪುರದಲ್ಲಿ ನಾಗಲಾಂಬಿಕೆ ಮತ್ತು ಚನ್ನಬಸವೇಶ್ವರ ಇವರ ದೇವಾಲಯುಗಳಿರುತ್ತವೆ. ಇಲ್ಲಿಗೆ ಚನ್ನಬಸವೇಶ್ವರನ್ನು ಬಂದು ಅವನು ಅಂದಿನ ಯುದ್ಧಗಳಲ್ಲಿ ಅಸ್ತವ್ಯಸ್ತವಾಗಿ ಹರಡಿದ್ದ ತನ್ನ ದಂಡನ್ನು ಇಲ್ಲಿಗೆ ಬರಮಾಡಿಕೊಂಡನು. ಮತ್ತು ಸುತ್ತಲಿನ ಪ್ರದೇಶವು ತನ್ನ ಅಂಕಿತದಲ್ಲಿ ಉಳಿಯಬೇಕೆಂದು ಅಲ್ಲಲ್ಲಿ ಠಾಣ್ಯಗಳನ್ನು ರಚಿಸಿದನು. ಈ ಠಾಣ್ಯಗಳು ಹಿಂಚಲ, ಸಂಪಗಾವ, ಮುರಕಿಭಾವಿ, ನಂದೀಹಳ್ಳಿ ಮತ್ತು ಚಿವಟಗುಂಡಿ

ಈ ಗ್ರಾಮಗಳಲ್ಲಿ ಇದ್ದಂತೆ ತೋರುತ್ತದೆ. ಇಂಚಲದಲ್ಲಿ ಬಂಕಯ್ಯನ ಸಮಾಧಿಯು ಇದೆ. ಈತನು ಕಲ್ಯಾಣದಿಂದ ಶಿವಶರಣರೊಡನೆ ಇದ್ದು ಯುದ್ಧಮಾಡುತ್ತ ನಾಗಳಾಪುರಿದವರೆಗೆ ಬಂದಿದ್ದನು. ಈ ಎಲ್ಲ ಸ್ಥಳಗಳಲ್ಲಿ ಶಿವಶರಣರ ಕುರುಹುಗಳು ಇವೆ.

## ಕಾದರೊಳ್ಳಿಯ ಯುದ್ಧ

ಈ ಭಾಗದಲ್ಲಿ ಚನ್ನಬಸವೇಶ್ವರನು ಬಂದಬಳಿಕ ಅವನು ಬಿಜ್ಜಳನ ದಂಡಾಳುಗಳೊಡನೆ ಯುದ್ಧ ಮಾಡುವದು ಅವಶ್ಯವೆನಿಸಿತು. ಆದ್ದರಿಂದ ಅವನು ಮಲಪ್ರಭಾನದಿಯನ್ನು ದಾಟಿ ಕಾದರೊಳ್ಳಿ ಸಮೀಪವಲ್ಲಿ ಯುದ್ಧಕ್ಕೆ ಅಣಿಯಾಗಿ ನಿಂತನು. ಇಲ್ಲಿ ಅಳಿಯ ಬಿಜ್ಜಳನ ದಂಡಾಳುಗಳೊಡನೆ ಕಡುತರವಾದ ಕಾಳಗವು ಸಂಭವಿಸಿತು. ಈ ಕಾಳಗದಲ್ಲಿ ಅಳಿಯ ಬಿಜ್ಜಳನು ಶಿವಶರಣರ ದಂಡಾಳುಗಳನ್ನು ಸಂಪೂರ್ಣವಾಗಿ ನಾಶಮಾಡಲು ಪ್ರಯತ್ನಿಸಿದನು. ಆದರೆ ಅದು ಸಾಧ್ಯವಾಗಲಿಲ್ಲ. ಇದರ ಬದಲು ಕಾಳಗವು ನಡೆದ ಕಾಲದಲ್ಲಿ ಅವನೇ ಶಿವಶರಣರ ಕೈಗೆ ಸಿಕ್ಕಿಬಿದ್ದನು. ಆಗ ಅವರು ಅವನನ್ನು ಕೊಂದು ಹಾಕಲು ಸಿದ್ಧರಾಗಿದ್ದರು. ಇದು ನಾಗಲಾಂಬಿಕೆಗೆ ತಿಳಿದಕೂಡಲೆ ಅವಳು ರಣರಂಗಕ್ಕೆ ಬಂದು ಅವನನ್ನು ಕೊಂದು ಹಾಕದಿರಲು ಆಜ್ಞಾಪಿಸಿ ಅವನನ್ನು ಬಿಡುಗಡೆ ಮಾಡಿಸಿದಳು. ಆದರೆ ಈ ಯುದ್ಧದಲ್ಲಿ ಶಿವಶರಣರಿಗೆ ಜಯವು ಸಿಕ್ಕರೂ ಅವರು ನಾಡನ್ನು ಬಿಟ್ಟು ಸುರಕ್ಷಿತ ಸ್ಥಳದಲ್ಲಿ ಇರಬೇಕೆಂದು ನಿಶ್ಚಯಿಸಿದ್ದರಿಂದ ಅವರು ಉಳವಿಯ ಕಡೆಗೆ ತೆರಳಿದರು.

## ಗಂಗಾಂಬಿಕೆಯ ಮರಣ.

ಕಾದರೊಳ್ಳಿಗೆ ಸಮೀಪವಾಗಿ ಮಲಪ್ರಭಾ ನದಿಯ ದಂಡೆಯ ಮೇಲೆ ಮುಗುಟಖಾನ ಹುಬ್ಬಳ್ಳಿ ಎಂಬ ಗ್ರಾಮವಿದೆ. ಅಲ್ಲಿಯೇ ಬಸವೇಶ್ವರನ ಹೆಂಡತಿಯಾದ ಗಂಗಾಂಬಿಕೆಯ ದೇವಾಲಯವಿದೆ. ಯುದ್ಧ ಕಾಲದಲ್ಲಿ ಇಲ್ಲಿಯೇ ಅವಳು ಮರಣಹೊಂದಿರಬೇಕೆಂದು ತೋರುತ್ತದೆ. ಗಂಗಾಂಬಿಕೆಯೂ ನಾಗಲಾಂಬಿಕೆಯೂ ಬಸವೇಶ್ವರನ ಕೂಡ ಕಪ್ಪಡಿಸಂಗಮಕ್ಕೆ ಹೋಗಲಿಲ್ಲ. ಅವರು ಯಾವಾಗಲೂ ಚನ್ನಬಸವೇಶ್ವರನ ಕೂಡ ಇದ್ದುಕೊಂಡು ಪ್ರತಿಯೊಂದು ಯುದ್ಧದಲ್ಲಿ ಕಾಳಗದ ಮುಖದಲ್ಲಿ ಶಿವಶರಣರ ದಂಡಾಳುಗಳನ್ನು ಪ್ರೋತ್ಸಾಹಿಸುತ್ತ ಬಂದಿದ್ದಾರೆ. ಕಡೆಗೆ ಗಂಗಾಂಬಿಕೆಯು ಕಾತರವಳ್ಳಿಯ ಕಾಳಗದವರೆಗೆ ಜೀವಂತ ಇದ್ದು ಮುಗುಟಖಾನ ಹುಬ್ಬಳ್ಳಿ

ಯಲ್ಲಿ ತೀರಿಕೊಂಡಳು. ಅವಳು ತೀರಿಕೊಂಡ ಸ್ಥಾನದಲ್ಲಿ ಒಂದು ದೇವಾಲಯವಿದೆ. ಹೀಗೆ ಗಂಗಾಂಬಿಕೆ ನಾಗಲಾಂಬಿಕೆಯರು ಈ ಬಿಕ್ಕಟ್ಟಿನ ಕಾಲದಲ್ಲಿ ವೀರ ಸ್ತ್ರೀಯರಿಗೆ ಶೋಭಿಸುವಂತೆ ಶೂರ ತನದಿಂದ ವರ್ತಿಸಿದ್ದಾರೆ.

**ಮಡಿವಾಳ ಮಾಚಿದೇವನ ಯುದ್ಧಗಳು.**

ಶಿವಶರಣರ ದಂಡಾಳುಗಳು ಕಡಕೋಳ, ಮುರಗೋಡ, ಮುರುಗ ಬಸವ ಮತ್ತು ನಾಗಳಾಪುರ ಈ ನಾಲ್ಕು ಠಾಣ್ಯಗಳಲ್ಲಿ ಇದ್ದಾಗ್ಗೆ ಮಡಿವಾಳ ಮಾಚಿದೇವನು ಸುತ್ತಲಿನ ಪ್ರದೇಶವಲ್ಲಿ ಸಂಚರಿಸುತ್ತ ಶತ್ರುಗಳ ಸೈನ್ಯವನ್ನು ಸುತ್ತುತ್ತ ಅವರನ್ನು ಕಂಗೆಡಿಸುತ್ತ ಕಾಳಗ ಮಾಡುತ್ತ ಬಂದಿರಬಹುದು. ಈ ಕಾಲಕ್ಕೆ ಅವನು ತೋರಿಸಿದ ಸಾಹಸವು ಬಹು ಮಿಗಿಲಾದದ್ದು. ಅವನೊಡನೆ ಚನ್ನಬಸವನೂ ಕೂಡ ವೈರಿಗಳೊಡನೆ ಕಾದಾಡಿದ್ದಾನೆ. ಇದರಿಂದ ಈ ಭಾಗದಲ್ಲಿ ಅವರ ಹೆಸರಿನ ಅನೇಕ ದೇವಾಲಯಗಳಾಗಿರುತ್ತವೆ. ಮಡಿವಾಳ ಮಾಚಿದೇವನು ವೀರಭದ್ರನ ಅವತಾರವೆಂದು ತಿಳಿಯಲ್ಪಟ್ಟಿದ್ದಾನೆ. ಆದ್ದರಿಂದ ಅವನಿಗೋಸ್ಕರ ವೀರಭದ್ರನ ದೇವಾಲಯಗಳು ಅವನು ಹೋದಲ್ಲೆಲ್ಲ ಆಗಿವೆ. ಚನ್ನಬಸವೇಶ್ವರನು ವಾಸವಾಗಿದ್ದಲ್ಲಿ ಬಸವೇಶ್ವರನ ಹೆಸರಿನಿಂದ ದೇವಾಲಯುಗಳಾಗಿವೆ. ಕಡಕೋಳ, ಗೊಡಚಿ, ಕುರಗುಂದ, ಮುರುಗೋಡ, ಬೈಲಹೊಂಗಲ, ಹಟ್ಟಿಹೊಳೆ, ನೇಸರಗಿ, ಲಕ್ಕುಂಡಿ, ಬೆಳವಡಿ, ಸಂಪಗಾವ, ಚಿವಟಗುಂಡಿ, ಕಾದರೋಳಿ, ಬೀಡಿ, ಇಲ್ಲಿ ವೀರಭದ್ರ ದೇವಾಲಯುಗಳಾಗಿರುತ್ತವೆ ಕಲ್ಲೂರು, ಮೂಗಬಸವ, ಸಂಪಗಾವ, ಚಿವಟಗುಂಡಿ ಇಲ್ಲಿ ಬಸವೇಶ್ವರನ ಹೆಸರಿನ ದೇವಾಲಯುಗಳು ಇಲ್ಲಿರುತ್ತವೆ. ಈ ದೇವಾಲಯುಗಳಲ್ಲಿ ದೇವತೆಯ ಮುಖವು ಬಹುಶಃ ಪಶ್ಚಿಮ ದಿಕ್ಕಿಗೆ ಇರುತ್ತದೆ. ಇದೇ ಅವುಗಳ ವೈಶಿಷ್ಟ್ಯವು. ಶಿವಶರಣರು ಪಶ್ಚಿಮ ದಿಕ್ಕಿಗೆ ಉಳವಿಯ ಕಡೆಗೆ ತೆರಳಿದರೆಂದು ಸೂಚಿಸುವದಕ್ಕೋಸ್ಕರ ಜನರು ಈ ರೀತಿಯ ವಿಗ್ರಹಗಳನ್ನೂ ದೇವಾಲಯುಗಳನ್ನೂ ಕಟ್ಟಿಸಿದಹಾಗೆ ತೋರುತ್ತದೆ.

**ನಾಗಳಾಪುರದಲ್ಲಿ ನಾಗಲಾಂಬಿಕೆಯು.**

ನಾಗಳಾಪುರದಲ್ಲಿ ನಾಗಲಾಂಬಿಕೆಯ ಮೂರ್ತಿಯು ಈಗಲೂ ಇರುತ್ತದೆ. ಈ ಗ್ರಾಮದ ಹೊರಗೆ ಕೆರೆಯ ದಂಡೆಯ ಮೇಲೆ ಒಂದು ಚಿಕ್ಕ ದಿನ್ನೆ ಇದ್ದು ಅಲ್ಲಿ ಬಸವನ ಮೂರ್ತಿಯೂ ಅದರ ಬಲಕ್ಕೆ ನಾಗವ್ವನ ಮೂರ್ತಿಯೂ ಇರುತ್ತವೆ. ನಾಗಲಾಂಬಿಕೆಯ ಮೂರ್ತಿಯು ೨ ಫೂಟು

ಎತ್ತರ ಇದ್ದು ಅದಕ್ಕೆ ಇಳಿಬಿಟ್ಟ ಕೂದಲುಗಳು ಕೊರಳಲ್ಲಿ ರುದ್ರಾಕ್ಷಿ ಮಾಲೆ ಕೈಯ್ಯಲ್ಲಿ ಜಪಮಾಲೆ ಇರುತ್ತವೆ. ಈ ಗ್ರಾಮದಲ್ಲಿ ಚನ್ನಬಸವ ಮತ್ತು ನಾಗಲಾಂಬಿಕೆಯರು ಇದ್ದದರಿಂದ ಅವರ ದೇವಾಲಯಗಳು ಇಲ್ಲಿ ಆಗಿವೆ.

## ಮಡಿವಾಳ ಮಾಚಿದೇವನ ಮರಣ.

ಮಡಿವಾಳ ಮಾಚಿದೇವನು ಚನ್ನಬಸವೇಶ್ವರನ ಕೂಡ ಕಾತರವಳ್ಳಿಗೆ ಬಂದು ಅಲ್ಲಿ ಯುದ್ಧವಾದಬಳಿಕ ಅವನು ಮುಂದೆ ಅವನ ಕೂಡ ಉಳವಿಯ ಕಡೆಗೆ ಹೋಗಲಿಲ್ಲ. ಅವನು ತಿರುಗಿ ತನ್ನ ಗ್ರಾಮವಾದ ಹಿಪ್ಪರಗಿಗೆ ಬಂದು ಅಲ್ಲಿ ಕಲ್ಲಿನಾಥನಲ್ಲಿ ಐಕ್ಯ ಹೊಂದಿದನೆಂದು ಗ್ರಂಥಗಳಲ್ಲಿ ಉಲ್ಲೇಖಗಳು ಬಂದಿವೆ. ಆದರೆ ಇಂಥ ಬಿಕ್ಕಟ್ಟಿನ ಸಮಯದಲ್ಲಿ ಶೂರನಾದ ಅವನು ಚನ್ನಬಸವನನ್ನು ಬಿಟ್ಟುಕೊಟ್ಟು ಹೋಗುವ ಸಂಭವವಿಲ್ಲ. ಅವನು ಈ ಕಾಲದಲ್ಲಿ ಈ ಭಾಗದಲ್ಲಿ ಹಗೆಗಳ ಕೂಡ ಕಾದಾಡುತ್ತ ಇಲ್ಲಿಯೇ ತೀರಿಕೊಂಡಿರಬೇಕು. ಅವನ ಸಮಾಧಿಯು ಮುರಗೋಡದ ಹತ್ತಿರ ಸೊಗಲತೀರ್ಥಕ್ಕೆ ಸಮೀಪವಿರುವ ಕಾರೀಮನೆಗೆ ಸಮೀಪವಾಗಿವೆ ಎಂದು ಇತ್ತ ಕಡೆಯ ಜನರ ತಿಳವಳಿಕೆ ಇದೆ. ಇದು ಸಂಭವನೀಯುವಿವೆ.

## ಉಳವಿಯಲ್ಲಿ ವಸಾಹತ್ತು

ಕಾದರವಳ್ಳಿಯಲ್ಲಿ ಶಿವಶರಣರು ವೈರಿಗಳನ್ನು ತಡೆದದ್ದಲ್ಲದೆ ಅವರನ್ನು ಸೋಲಿಸಿದುದು ನಿಜವೆಂದು ತೋರುತ್ತದೆ. ಅವರು ಬಿಜ್ಜಳನ ದಂಡಾಳುಗಳ ಸೇನಾಪತಿಯಾದ ಅಳಿಯ ಬಿಜ್ಜಳನನ್ನು ಕೈಸೆರೆ ಸಹ ಹಿಡಿದಿದ್ದರು. ಆದರೆ ಅವರು ಅವನನ್ನು ಘಾತಿಸದೆ ಬಿಟ್ಟಿದ್ದಾರೆ. ಈ ಕಾಲದಲ್ಲಿ ಚನ್ನಬಸವೇಶ್ವರನ ಮನಸ್ಸಿನಲ್ಲಿ ದೇಶದಲ್ಲಿ ತಾನಿರದೆ ದೇಶತ್ಯಾಗ ಮಾಡಿ ಉಳವಿಯ ಭಾಗದಲ್ಲಿ ಕಾಯಮವಾಗಿ ವಸಾಹತು ಮಾಡುವದು ಇತ್ತೆಂದು ತೋರುತ್ತದೆ. ಆದ್ದರಿಂದ ಶಿವಶರಣರು ಅಳಿಯ ಬಿಜ್ಜಳನನ್ನು ಹಿಂಸಿಸದೆ ಹಾಗೆಯೇ ಅವನನ್ನು ಬಿಟ್ಟುಕೊಟ್ಟಿರಬೇಕು.

ಈ ಕಾಲದಲ್ಲಿ ನಾಡಿನಲ್ಲಿ ವೀರಶೈವರು ಅಲ್ಪ ಸಂಖ್ಯಾಕರಾಗಿದ್ದರು. ಜೈನರೂ ವೇದವಾದಿಗಳೂ ಬಹುಸಂಖ್ಯೆಯಿಂದ ಇದ್ದರು. ಅವರಿದ್ದಲ್ಲಿ ಶಿವಾನುಭವದ ಉದಾರ ತತ್ವಗಳಂತೆ ನಾಡಿನಲ್ಲಿ ನಿರಾತಂಕವಾಗಿ ನಡೆಯುವದು ಶಿವಶರಣರಿಗೆ ಶಕ್ಯ ತೋರಲಿಲ್ಲ. ಆದ್ದರಿಂದ ಜೈನರು ಒಂದು ಕಾಲದಲ್ಲಿ ಹೇಗೆ ಕರ್ನಾಟಕವನ್ನು ಬಿಟ್ಟು ಉತ್ತರ ಕನ್ನಡದ ಮತ್ತು

ದಕ್ಷಿಣ ಕನ್ನಡದ ಜಿಲ್ಲೆಗಳಿಗೆ ಹೋಗಿ ವಸಾಹತು ಮಾಡಿದರೋ ಹಾಗೆಯೇ ಶಿವಶರಣರು ಉಳವಿ, ಗೋಕರ್ಣ, ಸ್ವಾದಿ, ಶಿರ್ಶಿ, ಬನವಾಸಿ, ಈ ಭಾಗ ಗಳನ್ನು ಆಕ್ರಮಿಸಿ ಕಾಯಮವಾಗಿ ಅಲ್ಲಿ ವಸಾಹತು ಮಾಡಬೇಕೆಂದು ಗೊತ್ತುಪಡಿಸಿದ್ದರೆಂದು ತೋರುತ್ತದೆ. ಈ ಕಾಲದಲ್ಲಿ ಗೋವೆ, ಹಲಸಗಿ ಹಾನಗಲ್ಲು ಗ್ರಾಮಗಳಲ್ಲಿ ಕದಂಬರ ರಾಜ್ಯಗಳಿದ್ದು ಅವು ಸುರಕ್ಷಿತವಾಗಿ ಬಾಳುತ್ತ ಬಂದಿದ್ದವು. ಈ ರಾಜ್ಯಗಳಲ್ಲದೆ ಕೊಂಕಣಿಗರೂ ಸಾರಸ್ವತರೂ ಹವಿಕರೂ ಹೀಗೆ ಕೆಲವು ಸಮಾಜಗಳು ಈ ಭಾಗಗಳಲ್ಲಿ ಬಂದು ನೆಲೆಸಿ ದ್ದರು. ಈ ಸಮಾಜದವರಂತೆ ಶಿವಶರಣರೂ ಉಳವಿಯ ಪ್ರಾಂತಕ್ಕೆ ಬಂದು ವಸಾಹತು ಮಾಡಲು ಬಯಸಿರಬಹುದು. ಆದ್ದರಿಂದ ಅವರು ಕಾತರವಳ್ಳಿಯ ಕಾಳಗದಲ್ಲಿ ಜಯವನ್ನು ಹೊಂದಿದ್ದರೂ ಅವರು ಕಲ್ಯಾ ಣಕ್ಕೆ ತಿರುಗಿ ಹೋಗದೆ ಉಳವಿಯ ಕಡೆಗೆ ಹೊರಟರು.

## ಸಂಬ್ರಾಣಿಯ ಕಾಳಗ.

ಶಿವಶರಣರು ಅಲ್ಲಿಗೆ ಹೋಗುವ ಕಾಲದಲ್ಲಿ ಅವರು ಎರಡು ತಂಡ ಗಳನ್ನು ತಮ್ಮ ಸೈನ್ಯದಲ್ಲಿ ಮಾಡಿಕೊಂಡರು. ಒಂದು ತಂಡವು ಕಾದರ ವಳ್ಳಿಯಿಂದ ನೈಋತ್ಯ ದಿಕ್ಕಿಗೆ ಹಲಸಿಗೆಯ ಕಡೆಗೆ ತೆರಳಿತು. ಅವರು ಬೀಡಿ ಗ್ರಾಮದಿಂದ ಹಲಸಿಗೆ, ಹಲಸಿಗೆಯಿಂದ ಕಕ್ಕೇರಿ, ಕಕ್ಕೇರಿಯಿಂದ ಲಿಂಗನಮಠ ಮತ್ತು ಜಂಗಮ ಹಟ್ಟಿಗೆ ಬಂದರು. ಇಲ್ಲಿ ಹಳ್ಳದಲ್ಲಿ ಶಿವ ಪೂಜೆ ಮಾಡಿದರೆಂದು ಗ್ರಂಥಗಳಲ್ಲಿ ಉಲ್ಲೇಖಗಳಿವೆ. ಈ ಗ್ರಾಮದಿಂದ ಅವರು ಜಗಳ ಬೆಟ್ಟಕ್ಕೆ ಬಂದರು. ಇದು ದಟ್ಟವಾದ ಅರಣ್ಯ ಪ್ರದೇಶವು. ಆದರೆ ಆಳಿಯ ಬಜ್ಜಳನ ದಂಡಾಳುಗಳು ಅವರನ್ನು ಅಲ್ಲಿಯೂ ಬೆನ್ನ ಟ್ಟುವದನ್ನು ಬಿಡಲಿಲ್ಲ. ಈ ಕಾಲದಲ್ಲಿ ಕಕ್ಕಯ್ಯನು ಅವರ ಪ್ರಮುಖ್ಯಸ್ಥ ನಾಗಿದ್ದನು. ಅವನು ಕಕ್ಕೇರಿಗೆ ಬಂದಬಳಿಕ ಇಲ್ಲಿಯೇ ಅವನು ತೀರಿ ಕೊಂಡನು. ಈ ಗ್ರಾಮದಲ್ಲಿ ಅವನ ದೇವಾಲಯವೂ ಅವನ ಹೆಸರಿನ ಬಾವಿಯೂ ಬೀದಿಯೂ ಇರುತ್ತವೆ. ಈ ಸಂಗತಿಗಳ ಮೇಲಿಂದ ಶಿವಶರ ಣರು ಈ ಭಾಗದೊಳಗಿಂದ ಹಾಯ್ದು ಹೋದರೆಂಬುದು ಗೊತ್ತಾಗುತ್ತದೆ. ಕಕ್ಕಯ್ಯನೊಡನೆ ಈ ಕಾಲದಲ್ಲಿ ಚನ್ನ ಬಸವೇಶ್ವರನೂ ಇದ್ದನೆಂದು ತೋರುತ್ತದೆ. ಯಾಕೆಂದರೆ ಈ ಭಾಗದಲ್ಲಿರುವ ಅನೇಕ ಗ್ರಾಮಗಳಲ್ಲಿ ಬಸವೇಶ್ವರನ ಹೆಸರಿನ ದೇವಾಲಯಗಳಿವೆ. ಅವುಗಳಿಗೆ ಬಸವೇಶ್ವರನ ಹೆಸರಿದ್ದರೂ ಅವು ಚನ್ನ ಬಸವೇಶ್ವರನ [illegible] ದ [illegible]ರುತ್ತದೆ.

ವೈರಿಗಳು ಶಿವಶರಣರನ್ನು ಇಲ್ಲಿಯೂ ಬಿಡದೆ ಅವರನ್ನು ಬೆನ್ನಟ್ಟುತ್ತ ಬಂದರು. ಅವರೊಡನೆ ಜಗಳಬೆಟ್ಟದಲ್ಲಿ ಕಾಳಗ ನಡೆದಿರಬೇಕು. ಆದ್ದರಿಂದ ಈ ಬೆಟ್ಟಕ್ಕೆ ಜಗಳಬೆಟ್ಟವೆಂಬ ಹೆಸರು ಬಂದಿದೆ. ಮುಂದೆ ಚನ್ನಬಸವನು ಸಾಂಬ್ರಾಣಿ ಎಂಬ ಗ್ರಾಮಕ್ಕೆ ಆಗಮಿಸಿದನು. ವೈರಿಗಳ ಕೂಡ ಇಲ್ಲಿ ನಿಕರವಾದ ಕಾಳಗವು ಸಂಭವಿಸಿತು. ಅವರಲ್ಲಿ ಶಿವಶರಣರು ವೈರಿಗಳನ್ನು ಪೂರ್ಣವಾಗಿ ಸೋಲಿಸಿದರೆಂಬ ಉಲ್ಲೇಖಗಳಿವೆ. ಆದ್ದರಿಂದ ಗ್ರಂಥಗಳಲ್ಲಿ "ಜೈನರ ಬಲ ಸಾಂಬ್ರಾಣಿಯಲ್ಲಿ ಸತ್ತಿತ್ತು" ಎಂದು ಹೇಳಿವೆ. ಮುಂದೆ ಶಿವಶರಣರು ಸಾಂಬ್ರಾಣಿಯಿಂದ ಹದಿನೈದು ಮೈಲುಗಳ ಮೇಲಿರುವ ಯಲ್ಲಾಪುರಕ್ಕೆ ಬಂದರು. ಹೀಗೆ ಈ ದಿಕ್ಕಿನಿಂದ ಬಂದ ಶಿವಶರಣರ ತಂಡವು ಮಾರ್ಗ ಕ್ರಮಣ ಮಾಡುತ್ತ ವೈರಿಗಳನ್ನು ಅಲ್ಲಲ್ಲಿ ತಡೆಯುತ್ತ ಉಳವಿಯ ಪ್ರದೇಶವನ್ನು ಮುಟ್ಟಿದರು.

### ಶಿವಶರಣರ ಪೂರ್ವ ತಂಡದ ಪಯಣ

ನಾವು ಹಿಂದೆ ಕಾದರವಳ್ಳಿಯ ಯುದ್ಧವಾದಬಳಿಕ ಶಿವಶರಣರು ತಮ್ಮಲ್ಲಿ ಎರಡು ತಂಡಗಳನ್ನು ಮಾಡಿಕೊಂಡರೆಂತಲೂ ಅವುಗಳಲ್ಲೊಂದು ತಂಡವು ಕಕ್ಕೇರಿ, ಜಗಳಬೆಟ್ಟ, ಸಾಂಬ್ರಾಣಿ, ಯಲ್ಲಾಪುರ ಮಾರ್ಗವಾಗಿ ತೆರಳಿತೆಂತಲೂ ಹೇಳಿರುವೆವಷ್ಟೇ. ಎರಡನೆಯ ತಂಡವು ಕಾದರವಳ್ಳಿಯಿಂದ ಅದರ ಪೂರ್ವಕ್ಕಿರುವ ಸೀಮೆಯೊಳಗಿಂದ ಹೊರಟಿರುತ್ತದೆ. ಈ ತಂಡದಲ್ಲಿ ಶಿವಶರಣರ ಸಂಖ್ಯೆಯು ಮೊದಲನೇ ತಂಡಕ್ಕಿಂತಲೂ ಸಣ್ಣದಾಗಿತ್ತೆಂದು ತೋರುತ್ತದೆ. ಆದ್ದರಿಂದ ಅಳಿಯ ಬಿಜ್ಜಳನ ದಂಡಾಳುಗಳು ಇದನ್ನು ಲಕ್ಷಿಸದೆ ಮೊದಲನೇ ತಂಡಕ್ಕೆ ಹೆಚ್ಚಿಗೆ ಲಕ್ಷಕೊಟ್ಟಂತೆ ತೋರುತ್ತದೆ. ಆದ್ದರಿಂದ ಈ ಪಶ್ಚಿಮಭಾಗದಲ್ಲಿ ಹೆಚ್ಚು ಕಡುತರವಾದ ಕಾಳಗಗಳಾಗಿವೆ.

ಶಿವಶರಣರು ಕಾದರವಳ್ಳಿಯಿಂದ ನಂದೀಹಳ್ಳಿಗೆ ಬಂದಿದ್ದಾರೆ. ಅಲ್ಲಿ ಕೂಗುಬಸವನ ಗುಡಿ ಮತ್ತು ನಂದೀಶ್ವರನ ಗುಡಿ ಇವೆ. ಮುಂದೆ ಅವರು ಅಲ್ಲಿಂದ ಕಿತ್ತೂರಿಗೆ ಬಂದಿದ್ದಾರೆ. ಅಲ್ಲಿ ರಣಗಟ್ಟಿ ಎಂಬ ಸ್ಥಳವಿದೆ. ಅದು ಈ ಶಿವಶರಣರಿಗೆ ಸಂಬಂಧಪಟ್ಟದ್ದಾಗಿ ತೋರುತ್ತದೆ. ಅಲ್ಲಿ ಅವರು ತಮ್ಮ ಆಯುಧ ತೊಳೆದರೆಂದು ಹೇಳಿದೆ. ಅವರು ಮುಂದೆ ಕಿತ್ತೂರಿನಿಂದ ಪೂರ್ವಕ್ಕೆ ತಡಕೋಡ ಎಂಬ ಗ್ರಾಮಕ್ಕೆ ಬಂದರು. ತಡಕೋಡಕ್ಕೆ ಬಂದಿದ್ದರ ಉಲ್ಲೇಖಗಳು ಅನೇಕ ಗ್ರಂಥಗಳಲ್ಲಿ ಬಂದಿರುತ್ತವೆ. ಶರು

ವಾಯು ಅವರು ಕಡಕೋಳದಿಂದ ನರೇಂದ್ರ, ನರೇಂದ್ರದಿಂದ ಎತ್ತಿನ ಗುಡ್ಡ ಮತ್ತು. ಅಲ್ಲಿಂದ ಧಾರವಾಡಕ್ಕೆ ಬಂದರು. ಈ ಸ್ಥಳಗಳಲ್ಲೆಲ್ಲ ಬಸವೇಶ್ವರನ ದೇವಾಲಯಗಳಿವೆ. ಧಾರವಾಡದಲ್ಲಿಯೂ ಚನ್ನ ಬಸವೇಶ್ವರನ ದೇವಾಲಯ ಇದೆ. ಅದು ಅಲ್ಲಿ ಪ್ರಸಿದ್ಧವಿದೆ. ಮುಂದೆ ಶಿವಶರಣರು ಧಾರವಾಡದಿಂದ ಸತ್ತೂರು, ಸತ್ತೂರದಿಂದ ಅಮರಗೋಳ, ಅಮರಗೋಳ ದಿಂದ ಹುಬ್ಬಳ್ಳಿಗೆ ಸಮೀಪವಿರುವ ಉಣಕಲ್ಲಿಗೆ ಬಂದಿದ್ದಾರೆ. ಈ ಎಲ್ಲ ಸ್ಥಳಗಳಲ್ಲಿ ಚನ್ನಬಸವೇಶ್ವರನವ ಶರಣರೂ ಬಂದಿದ್ದರ ಬಗ್ಗೆ ಐತಿಹ್ಯಗಳೂ ಕುರುಹುಗಳೂ ಇರುತ್ತವೆ. ಇವು ಕೇವಲ ಕಾಲ್ಪನಿಕವಾಗಿರದೆ ಹಿಂದೆ ಒದಗಿದ ನಿಜಸ್ಥಿತಿಯನ್ನು ತಿಳಿಸುವಂತಹವಿರುತ್ತವೆ. ಮುಂದೆ ಶಿವಶರಣರು ಉಣಕಲ್ಲಿನಿಂದ ಈಗ ಕಲಘಟಗಿ ತಾಲೂಕಿನಲ್ಲಿರುವ ಭೋಗೇರ ನಾಗರಕೊಪ್ಪ ಮತ್ತು ಗಂಜೀಗಟ್ಟಿ ಈ ಗ್ರಾಮಗಳಿಗೆ ಬಂದು ಅಲ್ಲಿಂದ ತಂಬೂರು ಎಂಬ ಗ್ರಾಮಕ್ಕೆ ಬಂದಿದ್ದಾರೆ. ಅಲ್ಲಿಂದ ಯಲ್ಲಾಪುರಕ್ಕೆ ಬಂದಿದ್ದಾರೆ.

ಮಾರ್ಗದಲ್ಲಿರುವ ಭೋಗೇರ ನಾಗರಕೊಪ್ಪ ಗಂಜೀಗಟ್ಟಿ ಮತ್ತು ತಂಬೂರ ಈ ಗ್ರಾಮಗಳಲ್ಲಿ ಪ್ರಸಿದ್ಧ ಬಸವೇಶ್ವರನ ದೇವಾಲಯಗಳಿವೆ. ಭೋಗೇರ ನಾಗರಕೊಪ್ಪ ಸಮೀಪವಾಗಿ ಹೊನ್ನೀಹಳ್ಳಿ ಎಂಬ ಗ್ರಾಮವಿದೆ. ಅಲ್ಲಿಯೂ ಬಸವೇಶ್ವರನ ದೇವಾಲಯವಿದೆ. ಈ ಗ್ರಾಮದಿಂದ ಆರು ಮೈಲುಗಳ ಮೇಲೆ ಬೂದನ ಗುಡ್ಡವೆಂಬ ಗ್ರಾಮವಿದೆ. ಅಲ್ಲಿ ಚನ್ನಬಸವನು ಲಿಂಗ ಪೂಜೆ ಮಾಡುತ್ತಿರುವಾಗ್ಗೆ ಅವನ ಮಜ್ಜನದ ನೀರು ಬೂದಿಯಲ್ಲಿ ಬೀಳಲು ಅದು ಅಲ್ಲಿಯೇ ಇಂಗಿ ಹೋಯಿತಂತೆ. ಅಲ್ಲಿ ಈಗಲೂ ಬೂದಿಯಲ್ಲಿ ನೀರು ಬಿದ್ದ ಹಾಗೆ ಕಾಣುತ್ತಿದೆಯಂತೆ. ಅವನು ಇಲ್ಲಿ ಇರುವಾಗ್ಗೆ ಒಂದು ಹುಲಿಯು ಬೆನ್ನುಹತ್ತಲು, ಚನ್ನಬಸವನು ಮೊಳಕಾಲೂರಿಹೊಡೆಯಲು ಅಲ್ಲಿ ತಗ್ಗು ಬಿದ್ದಿತು. ಈ ಸ್ಥಳವನ್ನು ಜನರು ಈಗಲೂ ಪೂಜೆ ಮಾಡುತ್ತಾರೆ.

ಶರಣರು ತಂಬೂರಲ್ಲಿ ಬಹಳ ದಿವಸ ಇದ್ದಹಾಗೆ ತೋರುತ್ತದೆ. ಅಲ್ಲಿ ಬಸವೇಶ್ವರನ ಪ್ರಸಿದ್ಧ ದೇವಸ್ಥಾನವಿದೆ. ಅದು ಸುಂದರವಾದ ಕಟ್ಟಡವು. ಅವರ ಜಾತ್ರೆಯು ಉಳವಿಯ ಬಸವೇಶ್ವರನ ಜಾತ್ರೆಯ ದಿವಸವೇ ಆಗುತ್ತದೆ. ಇದಲ್ಲದೆ ಇಲ್ಲಿ ಕಾಳ ಬಸವೇಶ್ವರನ ಹಾಳು ಗುಡಿ, ಇನ್ನೊಂದು ಬಸವೇಶ್ವರನ ಕಟ್ಟಡವಿಲ್ಲದ ಗುಡಿ, ಕಪಿ ಮಾರೇಶ್ವರನ ಗುಡಿ,

ಕಲ್ಮೇಶ್ವರ ಗುಡಿ ಎಂಬ ಗುಡಿಗಳು ಇರುತ್ತವೆ. ಅಲ್ಲಲ್ಲಿ ಶಿಲಾಶಾಸನ
ಗಳಿವೆ. ಗ್ರಾಮದ ಪೂರ್ವಕ್ಕೆ ಅರ್ಧ ಮೈಲಿನ ಮೇಲೆ ಬರಬನಹಳ್ಳಿ ಎಂಬ
ಹಾಳಾದ ಗ್ರಾಮವಿದೆ. ಅಲ್ಲಿ ಬಸವೇಶ್ವರನ ಗುಡಿ ಇದ್ದು ಅದು ಬಿದ್ದಿ
ರುತ್ತದೆ. ಈ ಗ್ರಾಮವಲ್ಲದೆ, ಇಲ್ಲಿಂದ ಒಂದು ಮೈಲಿನ ಮೇಲೆ ಸಿಂಗನ
ಹಳ್ಳಿ ಎಂಬ ಹಾಳಾದ ಗ್ರಾಮವಿದೆ. ಅಲ್ಲಿ ಶಿವಾಲಯವಿದೆ. ಅಲ್ಲಿ ೩
ಶಿಲಾಶಾಸನಗಳಿವೆ. ಹಾಗೆಯೇ ಈ ಗ್ರಾಮದಿಂದ ಪಶ್ಚಿಮಕ್ಕೆ ಶಾಡಂಬಿ
ಎಂಬ ಗ್ರಾಮವಿದೆ. ಅದೂ ಹಾಳಾದದ್ದು. ಅಲ್ಲಿ ಸುಂದರವಾದ ಕಟ್ಟಡ
ಗಳ ಅವಶೇಷಗಳಿವೆ. ಶಿಲಾಲೇಖಗಳೂ ಇವೆ. ತಂಬೂರದಿಂದ ೧೫
ಮೈಲುಗಳ ಮೇಲೆ ಕಾಮಧೇನು ಎಂಬ ಗ್ರಾಮವಿದೆ. ಅಲ್ಲಿ ಕಲ್ಮೇಶ್ವರನ
ದೇವಾಲಯವಿದೆ. ಶಿಲಾಶಾಸನಗಳೂ ಇರುತ್ತವೆ.

## ಪೂರ್ವ ತಂಡದವರ ಯುದ್ಧಗಳು

ಶಿವಶರಣರು ಮಾರ್ಗ ಕ್ರಮಣ ಮಾಡುವಲ್ಲಿ ಕಿತ್ತೂರ, ದಡಕೋಡ
ಮತ್ತು ಧಾರವಾಡದಲ್ಲಿ ವೈರಿಗಳೊಡನೆ ಯುದ್ಧ ಮಾಡಿದ ಕುರುಹುಗಳಿವೆ.
ಕಿತ್ತೂರಲ್ಲಿ ರಣಗಟ್ಟಿ ಕೆರೆಯಲ್ಲಿ ಅವರು ತಮ್ಮ ಆಯುಧಗಳನ್ನು ತೊಳೆ
ದರೆಂಬ ಆಖ್ಯಾಯಿಕೆ ಇದೆ. ಧಾರವಾಡದಲ್ಲಿರುವ ದೇವಾಲಯಕ್ಕೆ ಸಮೀಪ
ವಾಗಿ ಒಂದು ವೀರಗಲ್ಲು ಇದೆ. ಅದರಲ್ಲಿ ಅಸಂಖ್ಯ ಎತ್ತುಗಳ ಕುತ್ತಿಗೆ
ಗಳು ಕಡಿದು ಬಿದ್ದಹಾಗೆ ಚಿತ್ರಗಳಿವೆ. ಇಲ್ಲಿ ಶಿವಶರಣರು ಸೋತು
ಹೋದರೆಂದು ತಿಳಿಸಲು ಈ ವೀರಗಲ್ಲಿನಲ್ಲಿ ಇಂಥ ಚಿತ್ರಗಳನ್ನು ಕಟೆದಿರಬ
ಹುದು. ಮುಂದೆ ತಂಬೂರಕ್ಕೆ ಹೋಗಿ ಅಲ್ಲಿ ಬಹಳ ದಿವಸ ವಾಸವಾಗಿದ್ದಹಾಗೆ
ತೋರುತ್ತದೆ. ಅಲ್ಲಿ ಸುತ್ತಲು ಪುರಾತನ ದೇವಾಲಯಗಳ ಅವಶೇಷಗ
ಳಿವೆ. ಶಿಲಾಶಾಸನಗಳಿವೆ. ತಂಬೂರಿಂದ ೧೫ ಮೈಲುಗಳ ಮೇಲೆ
ಯಲ್ಲಾಪುರವಿರುತ್ತದೆ. ಇಲ್ಲಿಗೆ ಶಿವಶರಣರು ಬಂದಿದ್ದಾರೆ.

## ಉಳವಿಗೆ ಪ್ರಯಾಣ

ಯಲ್ಲಾಪುರದಲ್ಲಿ ಪಶ್ಚಿಮದ ಮತ್ತು ಪೂರ್ವದ ಎರಡೂ ಶಿವಶರ
ಣರ ತಂಡಗಳು ಕೂಡಿವೆ. ಹೀಗೆ ಕೂಡಿಕೊಂಡು ಎಲ್ಲರೂ ಉಳವಿಯ
ಕಡೆಗೆ ಹೊರಟಿರುವರು. ಇಲ್ಲಿಂದ ಉಳವಿಯು ೧೮ ಮೈಲುಗಳ ಮೇಲಿದೆ.
ಮಾರ್ಗವು ಬಹು ಬಿಕ್ಕಟ್ಟಿನದು. ಈ ಪ್ರದೇಶವು ಉನ್ನತವಾದ ಗಿಡಮರ
ಗಳಿಂದ ತುಂಬಿಕೊಂಡು ಸಂಚಾರ ಮಾಡಲು ಬಹು ಕಠಿಣವಾಗಿರುತ್ತದೆ.

ಈ ಪ್ರದೇಶದೊಳಗಿಂದ ಕಾಳೀ ನದಿಯು ಬಹು ರಭಸದಿಂದ ಹರಿಯುತ್ತದೆ. ಈ ಭೂಭಾಗವನ್ನು 'ರಾಕ್ಷಸ'ನೆಂಬ ಹೆಸರಿನ ಒಬ್ಬ ರಾಜನು ಈ ಕಾಲದಲ್ಲಿ ಆಳುತ್ತಿದ್ದನೆಂದು ತೋರುತ್ತದೆ. ಅವನು ಶಿವಶರಣರನ್ನು ಕಂಡು ಅವರನ್ನು ಬಹಳ ಆದರಿಸಿ ಉಳವಿಯ ವರೆಗೂ ಕಳುಹಿಸಿಕೊಟ್ಟಿದ್ದಾನೆ. ಅವರನ್ನು ಅವನು ಬಹಳ ಉಪಚರಿಸಿದ್ದಾನೆಂಬ ಐತಿಹ್ಯಗಳಿವೆ. ಉಳವಿಯ ಜಾತ್ರೆಯಲ್ಲಿ ಅವನ ತೇರು ಮೊದಲು ಆಗುತ್ತದೆ. ಅವನು ಕಾಳೀ ನದಿಯ ಗುಂಟ ಹಬ್ಬಿದ ಪರ್ವತ ಪ್ರದೇಶದಲ್ಲಿ ರಾಜ್ಯವಾಳುತ್ತಿದ್ದನು. ಶಿವಶರಣರು ಇಲ್ಲಿದ್ದ ಉನ್ನತ ಘಟ್ಟವನ್ನು ಏರಿ ಉಳವೀ ಗ್ರಾಮವಿದ್ದ ಪ್ರದೇಶಕ್ಕೆ ಹೋಗಿದ್ದಾರೆ.

## ಮಹಾಮನೆಯಲ್ಲಿ ತಂಗಿದ್ದು

ಆದರೆ ಅಳಿಯ ಬಿಜ್ಜಳನ ದಂಡಾಳುಗಳು ಇಲ್ಲಿಯೂ ಕೂಡ ಶಿವಶರಣರನ್ನು ಬಿಡಲಿಲ್ಲ. ಅವರನ್ನು ಅಲ್ಲಿಯೂ ಅಟ್ಟಿಕೊಂಡು ಬಂದಿದ್ದಾರೆ. ಇದರಿಂದ ಅವರನ್ನು ಸಂಪೂರ್ಣವಾಗಿ ಸಂಹರಿಸಬೇಕೆಂಬ ಅವರ ಇಚ್ಛೆ ಇದ್ದುದು ಸ್ಪಷ್ಟವಾಗುತ್ತದೆ. ಈ ವರೆಗೆ ನಡೆದ ಯುದ್ಧಗಳ ಮೂಲಕ ಶಿವಶರಣರ ಸಂಖ್ಯೆಯು ಬಹಳ ಕಡಿಮೆಯಾಗುತ್ತ ಬಂದಿತ್ತು. ಅವರು ಉಳವಿಗೆ ಬಂದ ಬಳಿಕ ಮಹಾ ಮನೆ ಗವಿಯು ಇದ್ದ ಸ್ಥಳವು ಬಹು ಬಿಕ್ಕಟ್ಟಿನದೂ ಭದ್ರವಾದುದೂ ಇರುವದೆಂದು ಅವರಿಗೆ ತೋರಿದ್ದರಿಂದ ಅವರು ಅಲ್ಲಿಗೆ ಹೋಗಿ ಸ್ವಸಂರಕ್ಷಣೆಯನ್ನು ಮಾಡಿಕೊಳ್ಳುವದರಲ್ಲಿ ತೊಡಗಿದನಂತರು.

ಈ ಉಳವಿಯ ಸಂಗ್ರಾಮದಲ್ಲಿ ಮಹತ್ವದ ಭಾಗವನ್ನು ವಹಿಸಿದವರು ಚನ್ನ ಬಸವೇಶ್ವರ ಮತ್ತು ಕಿನ್ನರಿ ಬ್ರಹ್ಮಯ್ಯ ಇವರೇ ಇದ್ದಾರೆ. ಕಡೆಯ ಈ ಕಾಳಗದಲ್ಲಿ ಶಿವಶರಣರು ಅತ್ಯದ್ಭುತವಾಗಿ ಶತ್ರುಗಳ ಕೂಡ ಹೋರಾಡಿದ್ದಾರೆ. ಯಾರೂ ಶತ್ರುಗಳಿಗೆ ಶರಣು ಹೋಗಿಲ್ಲ. ಕಕ್ಕೇರಿಯಲ್ಲಿ ಕಕ್ಕಯ್ಯನು ತೀರಿದ ಬಳಿಕ ಕಿನ್ನರೀ ಬ್ರಹ್ಮಯ್ಯನು ಸೈನ್ಯಾಧಿಕಾರವನ್ನು ವಹಿಸಿ ಶಿವಶರಣರ ದಂಡಾಳುಗಳನ್ನು ನಡೆಯಿಸಿಕೊಂಡು ಬರುತ್ತಾ ತನ್ನ ಬೆನ್ನು ಹತ್ತಿ ಬರುತ್ತಲಿರುವ ವೈರಿಗಳನ್ನು ಅಲ್ಲಲ್ಲಿ ತಡೆಯುತ್ತಾ ಉಳವಿಯ ವರೆಗೂ ಬಂದಿದ್ದಾನೆ.

## ಮಹಾಮನೆಯನ್ನು ಭದ್ರಪಡಿಸಿದ್ದು

ಉಳವಿಯು ಇದ್ದ ಈ ಪ್ರದೇಶವು ಬಹು ಭದ್ರವಾಗಿದೆ. ಇದು ಒಂದು ಸಣ್ಣ ಕಂದರವಿದ್ದಂತೆ. ಈ ಕಂದರದ ಈಶಾನ್ಯ ದಿಕ್ಕಿಗೆ ಬಹು ಬಿಕ್ಕಟ್ಟಿನ ಪರ್ವತ ಪ್ರದೇಶವಿದೆ ಈ ಪ್ರದೇಶದಲ್ಲಿ ಮಹಾಮನೆಯ ಕೊಳ್ಳವಿದ್ದು ಅದರೊಳಗಿಂದ ಒಂದು ನದಿಯು ರಭಸದಿಂದ ಹರಿಯುತ್ತ ಅದರ ಅಂತ್ಯದಲ್ಲಿರುವ ಗವಿಯ ಮಗ್ಗುಲಿನಿಂದ ಹರಿದು ಹೋಗುತ್ತದೆ. ಈ ನದಿಯ ಮೊದಲಿನ ಹೆಸರು 'ಕಾನೇರಿ ನದಿ" ಎಂದು ಇತ್ತು. ಇದಕ್ಕೆ ಈಗಿನ ನಕಾಶದಲ್ಲಿ ನುಜ್ಜಿ ನದಿ ಎಂಬ ಹೆಸರು ಇದ್ದುದು ಕಂಡುಬರುತ್ತದೆ. ಆದರೆ ಜನರು ಇದನ್ನು 'ಕಿನ್ನರೀ ಬ್ರಹ್ಮಯ್ಯನ ಹೊಳೆ' ಎಂದು ಕರೆಯುತ್ತಾರೆ. ಕಿನ್ನರೀ ಬ್ರಹ್ಮಯ್ಯನ ಹೊಳೆ ಮತ್ತು ಕಾನೇರಿ ಹೊಳೆ ಈ ಎರಡೂ ಹೆಸರುಗಳು ಒಂದೇ ಇರುತ್ತವೆ ಈ ನದಿಯು ಮಹಾಮನೆಯ ಕೊಳ್ಳಕ್ಕೆ ಬಂದ ಕೂಡಲೇ ಅದು ಅಲ್ಲಿ ತಡಸಲು ತಡಸಲುಗಳಾಗಿ ಹರಿಯುತ್ತ ಗವಿಯ ಮಗ್ಗುಲಿನಿಂದ ಹಾಯ್ದು ಹೋಗುತ್ತದೆ. ಈ ಗವಿಯ ಮುಂಭಾಗವು ವಿಶಾಲವಾದದ್ದು. ಇದರ ಒಂದು ಮೂಲೆಯಲ್ಲಿ ಬೇರೊಂದು ಗವಿಯೂ ಇದ್ದು ಅದು ಪರ್ವತದ ಹೊಟ್ಟೆಯೊಳಗೆ ಬಹು ದೂರ ಹೋಗಿರುತ್ತದೆ. ಈ ಎಲ್ಲ ಸ್ಥಳಗಳಲ್ಲಿ ಸಾವಿರಾರು ಜನರು ಸುಲಭವಾಗಿ ಇರುವಂತೆ ಇದೆ. ಕಿನ್ನರೀ ಬ್ರಹ್ಮಯ್ಯನು ಈ ಸ್ಥಳವು ಭದ್ರವಾದದ್ದೆಂದೆಣಿಸಿ ನದಿಯ ಪಾತ್ರವನ್ನು ೨೦೦–೩೦೦ ಫೂಟುಗಳ ಅಂತರದಲ್ಲಿ ಒಡೆದು ಪ್ರವಾಹವು ಗವಿಯ ಮುಖದಲ್ಲಿ ಬೀಳುವಂತೆ ಮಾಡಿದ್ದಾನೆ. ಇದರಿಂದ ನದಿಯ ಪ್ರವಾಹವು ಗವಿಯ ಮುಂದೆ ಒಂದು ಕಂದಕದಂತೆ ಆಗಿದೆ. ನದಿಯು ಗವಿಯನ್ನು ಪ್ರವೇಶಿಸಿ ಅದರ ಬಲಕ್ಕೆ ಮಾಡಿದ ಒಂದು ದೊಡ್ಡ ತೂತಿನೊಳಗಿಂದ ರಭಸದಿಂದ ಹೊರಬಿದ್ದು ಅದು ಮೂಲ ಪ್ರವಾಹಕ್ಕೆ ಕೂಡುತ್ತದೆ. ಹೀಗೆ ಮಹಾಮನೆ ಗವಿಯು ಒಂದು ಭದ್ರವಾದ ಕೋಟೆಯಂತಾಗಿದೆ

## ಮಹಾಮನೆಯ ಮುತ್ತಿಗೆ

ಈ ವರೆಗೆ ಚನ್ನಬಸವೇಶ್ವರನ ಕೂಡ ಉಳಿದಿದ್ದ ಶಿವಶರಣರೆಲ್ಲರೂ ಈ ಮಹಾಮನೆಯ ಗವಿಯ ಮುಖದಲ್ಲಿ ನಿಂತುಕೊಂಡು ಹೋರಾಡಿದ್ದಾರೆ. ಈ ಗವಿಯ ಬಲಕ್ಕೂ ಎಡಕ್ಕೂ ಪರ್ವತ ಪ್ರದೇಶವಿದ್ದು ಅಲ್ಲಿ ಅನೇಕ ಸಮಾಧಿಗಳು ಈಗಲೂ ಇರುತ್ತವೆ. ಅವುಗಳಿಗೆ ಸಮೀಪವಾಗಿ

'ಕಿನ್ನರೀ ಬ್ರಹ್ಮಯ್ಯ' ಎಂಬ ಹೆಸರುಳ್ಳ ಒಂದು ಶಿಲಾಲೇಖವು ಭೂಮಿಯಲ್ಲಿ ನೆಟ್ಟಿದ್ದನ್ನು ನಾನು ಸ್ವತಃ ನೋಡಿದ್ದೇನೆ. ಅದು ಕಿನ್ನರೀಬ್ರಹ್ಮಯ್ಯನ ಸಮಾಧಿ ಇರಬಹುದೆಂದು ಊಹಿಸಲು ಅಡ್ಡಿ ಇಲ್ಲ. ಈ ಶಿಲಾಲೇಖವು ಈ ಪರ್ವತದ ಎತ್ತರ ಪ್ರದೇಶದಲ್ಲಿರುತ್ತದೆ. ಈ ಕುರುಹುಗಳಲ್ಲದೆ ಈ ಪ್ರದೇಶದ ಮೇಲ್ಭಾಗದಲ್ಲಿ ಗೋಡೆಗಳ ಅವಶೇಷಗಳು ಈಗಲೂ ಕಂಡುಬರುತ್ತವೆ. ಅವುಗಳ ಮೇಲಿಂದ ಈ ಕೊಳ್ಳದ ಸುತ್ತಲೂ ಶಿವಶರಣರು ಆಳವೇರಿ ಗೋಡೆಗಳನ್ನು ಹಾಕಿ ತಮ್ಮ ರಕ್ಷಣೆ ಮಾಡಿಕೊಂಡಿದ್ದಾರೆಂಬ ಅನುಮಾನವು ಉಂಟಾಗುತ್ತದೆ. ಅಳಿಯ ಬಿಜ್ಜಳನ ದಂಡಾಳುಗಳು ಇಲ್ಲಿಯೂ ಬಂದು ಮಹಾ ಮನೆ ಗವಿಗೆ ಮುತ್ತಿಗೆ ಹಾಕಿದ್ದಾರೆ. ಆದರೆ ಶಿವಶರಣರು ಅವರಿಗೆ ಮೊರೆಹೊಗದೆ ಅವರ ಕೂಡ ಕಡೆತನಕ ಕಾದಾಡುತ್ತ ತಮ್ಮ ದೇಹವಿಟ್ಟಿದ್ದಾರೆ.

ಚನ್ನ ಬಸವೇಶ್ವರನ ಸಮಾಧಿ ಸ್ಥಳವು ಉಳವಿ ಗ್ರಾಮಕ್ಕೆಹೊಂದಿಯೇ ಇರುತ್ತದೆ. ಇಲ್ಲಿ ಒಂದು ದೇವಾಲಯವು ಈಗ ಇರುತ್ತದೆ. ಇಲ್ಲಿಯೇ ಅವನನ್ನು ಹೂಗಿದಿರಬಹುದೆಂದುನಮಗೆ ತೋರುತ್ತದೆ.

## ಶಿವಶರಣರು ಕೈಲಾಸಕ್ಕೆ ಹೋದದ್ದು.

ವೀರಶೈವ ಪುರಾಣ ಗ್ರಂಥಗಳಲ್ಲಿ ಶಿವಶರಣರ ಅಂತ್ಯದ ಬಗ್ಗೆ ಇರುವ ಆಖ್ಯಾಯಿಕೆಯು ಏನೆಂದರೆ:— ಈ ಭಾಗದಲ್ಲಿ ಒಂದು ಉನ್ನತವಾದ ಪ್ರದೇಶದಲ್ಲಿ ಹೊನ್ನರಳಿ ಮರವೊಂದಿದ್ದು ಶಿವಶರಣರು ಅದಕ್ಕೊಂದು ತೊಟ್ಟಿಲವನ್ನು ಕಟ್ಟಿ ಅದರಲ್ಲಿ ಶಿವಶರಣರನ್ನು ಕುಳ್ಳಿರಿಸಿ ತೂಗಲಾಗಿ ಆ ತೊಟ್ಟಿಲವು ಎಲ್ಲಕ್ಕೂ ಮೇಲೆ ಹೋಗಲು ಅಲ್ಲಿ ಕಾದುಕೊಂಡಿದ್ದ ಶಿವದೂತರು ತಮ್ಮ ಪುಷ್ಪಕ ವಿಮಾನದೊಳಗಿಂದ ಅವರನ್ನು ಕೈಲಾಸಕ್ಕೆ ತೆಗೆದುಕೊಂಡು ಹೋದರೆಂದು ಹೇಳಲ್ಪಡುತ್ತದೆ.

## ರುದ್ರ ಮುನಿಯ ಆಗಮನ ಮತ್ತು ಅವನ ಮುಂದಿನ ಕಾರ್ಯಕ್ರಮ

ಉಳಿವಿಯ ಸಂಗ್ರಾಮವು ಮುಗಿದ ಬಳಿಕ ಹಡಪದ ರೇಚಯ್ಯ, ಅಕ್ಕ ನಾಗಲಾಂಬಿಕೆ, ಸುಲಿಯ ಚಂದಯ್ಯ, ಹೀಗೆ ಮೂವರು ಮಾತ್ರ ಅಲ್ಲಿ ಜೀವಂತ ಉಳಿದರು. ಅಷ್ಟರಲ್ಲಿ ರುದ್ರಮುನಿಯು ಮತ್ತು ಹಿಪ್ಪರಿಗೆಯ ಮಲ್ಲಿಕಾರ್ಜುನ ಇವರು ಶಿವಶರಣರನ್ನು ಹುಡುಕುತ್ತ ಈ ಸ್ಥಳಕ್ಕೆ ಬಂದರು. ಆಗ ಅವರೆಲ್ಲರೂ ಕೂಡಿಕೊಂಡು ಈ ಕಠಿಣ ಪರಿಸ್ಥಿತಿಯಲ್ಲಿ,

ಮುಂದೇನು ಮಾಡಬೇಕೆಂಬುವರ ಬಗ್ಗೆ ವಿಚಾರ ಮಾಡಿರಬೇಕು. ಅವರ್‍ಕ್ಕೆ ಈ ಸಮಯದಲ್ಲಿ ಧೈರ್ಯಗೆಡದೆ ಮತ್ತೊಂದು ಉಪಾಯವನ್ನು ಯೋಜಿಸಿದರೆಂದು ತೋರುತ್ತದೆ. ಈ ಪೂರ್ವದಲ್ಲಿಯೇ ಸಿದ್ಧರಾಮೇಶ್ವರನನ್ನು ಚನ್ನಬಸವೇಶ್ವರನು ಜಗದ್ಗುರುವಾಗಿ ನೇಮಿಸಿದ್ದನು. ಸಿದ್ಧರಾಮೇಶ್ವರನು ಇಡೀ ಪ್ರಾಂತದಲ್ಲಿ ವರ್ಚಸ್ಸುಳ್ಳವನಾಗಿದ್ದನು. ಹಾಗೆಯೇ ಶ್ರೀಶೈಲ ಪ್ರಾಂತದಲ್ಲಿ ಶಿವಶರಣರು ವೈರಿಗಳ ಕೂಡ ಯುದ್ಧಗಳನ್ನು ನಡಿಸಿದ್ದರು. ಅವರು ಅಲ್ಲಿ ಯಶಸ್ಸನ್ನು ಸಂಪಾದಿಸಿದವರಾಗಿದ್ದರು. ಆದ್ದರಿಂದ ಈ ಪೂರ್ವ ಭಾಗದಲ್ಲಿದ್ದ ವೀರಶೈವ ದಳವನ್ನು ಪಶ್ಚಿಮ ಭಾಗಕ್ಕೆ ಬರಮಾಡಿಕೊಂಡು ಇಲ್ಲಿ ಒಂದು ಭದ್ರವಾದ ಸ್ಥಳವನ್ನು ಆಯ್ದು ಇಲ್ಲಿಂದ ವೀರಶೈವ ಮತಸ್ಥಾಪನೆಯ ಕಾರ್ಯವನ್ನು ಜರುಗಿಸಬೇಕೆಂದು ಅವರು ನಿಶ್ಚಯಿಸಿದ ಹಾಗೆ ತೋರುತ್ತದೆ.

## ರುದ್ರಮುನಿಯು ಶ್ರೀಶೈಲಕ್ಕೆ ಹೋದದ್ದು

ಈ ಯೋಜನೆಯ ಪ್ರಕಾರ ರುದ್ರಮುನಿಯು ಉಳಿವಿಯಿಂದ ಮೊದಲು ಕಲ್ಯಾಣ ಪಟ್ಟಣಕ್ಕೆ ಬಂದನು. ಆದರೆ ಅಲ್ಲಿ ಬಿಜ್ಜಳನ ಮರಣದ ತರುವಾಯ ಅವ್ಯವಸ್ಥೆಯಾಗಿತ್ತು. ಆದ್ದರಿಂದ ಅವನು ಅಲ್ಲಿ ನಿಲ್ಲದೆ ಶ್ರೀಶೈಲ ಪ್ರಾಂತಕ್ಕೆ ಹೋಗಿ ಅಲ್ಲಿ ಒಂದು ಸಿಂಹಾಸನವನ್ನು ಸ್ಥಾಪಿಸಿದ್ದ ಮುಕ್ತಿಮುನಿ ಮೊದಲಾದವರನ್ನು ಕಂಡು ಅಲ್ಲಿದ್ದ ಶಿವಶರಣರ ಸೈನ್ಯವನ್ನು ಪಶ್ಚಿಮ ರಣಭೂಮಿಗೆ ಕಳಿಸುವವನಾದನು.

## ತರೀಕೆರೆಗೆ ಸಮೀಪವಾಗಿ ನಾಗಲಾಂಬಿಕೆಯ ವಾಸ

ಇತ್ತ ನಾಗಲಾಂಬಿಕೆ ಮತ್ತು ನೀಲಿಯು ಚಂದಯ್ಯ ಇವರು ಉಳಿವಿಯ ಪ್ರದೇಶವನ್ನು ಬಿಟ್ಟು ತುಂಗಾ ಮತ್ತು ಭದ್ರಾ ನದಿಗಳು ಹರಿಯುವ ಪ್ರದೇಶಕ್ಕೆ ಬಂದು ತರೀಕೆರೆಗೆ ಸಮೀಪವಾಗಿ ಒಂದು ಆಶ್ರಮವನ್ನು ಸ್ಥಾಪಿಸಿದ್ದರು. ಇಲ್ಲಿ ಅವರು ಶ್ರೀಶೈಲ ಪ್ರಾಂತದಿಂದ ಬರಬಹುದಾದ ಜನ ಸಹಾಯವನ್ನು ನಿರೀಕ್ಷಿಸುತ್ತ ಕೆಲ ಕಾಲ ಕಳೆದರು. ಆದರೆ ಶ್ರೀಶೈಲ ಪ್ರಾಂತದಿಂದ ಸಹಾಯವು ಬರುವ ಪೂರ್ವದಲ್ಲಿಯೇ ನಾಗಲಾಂಬಿಕೆಯು ತರೀಕೆರೆಗೆ ಸಮೀಪವಾಗಿ ಎಣ್ಣೆ ಹೊಳೆಯ ಧಡದಲ್ಲಿ ತನ್ನ ದೇಹವಿಟ್ಟಳು. ಅಲ್ಲಿಂದ ೮—೧೦ ಮೈಲು ದೂರವಿರುವ ನಂದೀ ಎಂಬ ಗ್ರಾಮದಲ್ಲಿ

ನುಲಿಯ ಚಂದಯ್ಯನು ಕೆಲಕಾಲವಿದ್ದನು. ಇಲ್ಲಿಂದ ಅವನು ಎಲ್ಲಿಯೋ ಹೊರಟು ಹೋಗಿ ಮಾಯವಾದನೆಂದು ಜನರಿಂದ ಹೇಳಲ್ಪಡುತ್ತಿದೆ. ಈ ಪ್ರಕಾರ ಉಳಿವಿಯ ಸಂಗ್ರಾಮದಲ್ಲಿ ಹೋರಾಡಿದ ಈ ಉಭಯ ಮಹಾನುಭಾವರಹೃದಯ ದ್ರಾವಕ ಅಂತ್ಯವಿರುತ್ತದೆ.

## ಬಾಳೇಹಳ್ಳಿಯಲ್ಲಿ ಸಿಂಹಾಸನ ಸ್ಥಾಪನೆ.

ಆದರೆ ಇದರ ತರುವಾಯ ಶಿವಶರಣರಿಗೆ ಅಭ್ಯುದಯದ ಕಾಲವು ಸ್ವಲ್ಪ ದಿವಸಗಳಲ್ಲಿ ಪ್ರಾಪ್ತವಾಯಿತು. ಶ್ರೀಶೈಲ ಪ್ರಾಂತದಿಂದ ದಿಗಂಬರ ಮುಕ್ತಿ ಮುನಿಯು ಈ ಸ್ಥಳಕ್ಕೆ ಬಂದು ಇದಿರಾಳಿಗಳನ್ನು ಸಂಪೂರ್ಣವಾಗಿ ಸೋಲಿಸಿ ಬಾಳೇಹಳ್ಳಿಯಲ್ಲಿ ಒಂದು ಸಿಂಹಾಸನ ಮಠವನ್ನು ಸ್ಥಾಪಿಸಿದನು.

## ವೀರಶೈವ ಧರ್ಮ ಪ್ರಸಾರ

ಆಗ ಅಸ್ತವ್ಯಸ್ತವಾಗಿದ್ದ ಶಿವಶರಣರೆಲ್ಲರೂ ಈ ಸ್ಥಳದಲ್ಲಿ ಒಟ್ಟುಗೂಡಿ ಬಸವಾದಿ ಪ್ರಮಥರ ತತ್ವಗಳನ್ನು ಗ್ರಾಮ ಗ್ರಾಮಗಳಲ್ಲಿ ದೇಶದಲ್ಲೆಲ್ಲ ಬಲವಾಗಿ ಪ್ರಕಾಶಪಡಿಸಹತ್ತಿದರು. ಅವರು ಹೋದಲ್ಲೆಲ್ಲ ಜನರು ಅವರನ್ನು ಸ್ವಾಗತಿಸಿ ವೀರಶೈವ ಧರ್ಮವನ್ನು ಬಹಿರಂಗದಿಂದ ಸ್ವೀಕರಿಸಹತ್ತಿದರು. ಅಸಂಖ್ಯ ಶಿವಗಣಗಳು ಕೂಡಿಕೊಂಡು ಗ್ರಾಮಾಂತರಗಳಲ್ಲಿ ಮಠಗಳನ್ನು ಸ್ಥಾಪಿಸಹತ್ತಿದರು. ಶಿವಶರಣರು ಯುದ್ಧ ಮಾಡಿದ ಸ್ಥಳಗಳಲ್ಲೆಲ್ಲ ವೀರಶೈವ ಮತವು ವಿಶೇಷವಾಗಿ ಹೆಚ್ಚೆಚ್ಚು ಪ್ರಮಾಣದಿಂದ ಪ್ರಸಾರವಾಗಹತ್ತಿತು. ಈ ಪ್ರಕಾರ ಶಿವಶರಣರನ್ನು ಹಿಂಸೆಪಡಿಸಿದ್ದಕ್ಕೋಸ್ಕರ ಅವರು ಪ್ರಚಾರಪಡಿಸಿದ ಧರ್ಮವು ಮಾತ್ರ ಎಷ್ಟು ಮಾತ್ರವೂ ಅಳಿಯಲಿಲ್ಲ. ಅವರ ಉದಾರ ತತ್ವಗಳು ದೇಶದಲ್ಲೆಲ್ಲ ಮೊದಲಿನಕಿಂತಲೂ ಹೆಚ್ಚಿಗೆ ಪ್ರಸಾರವಾಗಹತ್ತಿದವು. ದೇಶದಲ್ಲೆಲ್ಲ ಶಿವಶರಣರ ತತ್ವಗಳ ಬಗ್ಗೆ ದೊಡ್ಡ ಚಳವಳಿಯೇ ಎದ್ದಿತು. ಈ ಕಾಲದಲ್ಲಿ ಬಹು ಜನ ವಚನಕಾರರಾದರು. ಇವರಲ್ಲಿ ಎಲ್ಲ ಜಾತಿಯ ಜನರು ಸಮಾವೇಶವಾಗಿದ್ದರು.

ಹೀಗೆ ವೀರಶೈವ ಮತವು ಉತ್ತರ ಮತ್ತು ಮಧ್ಯ ಕರ್ನಾಟಕ ಪ್ರದೇಶಗಳಲ್ಲಿ ಬಹು ಶೀಘ್ರವಾಗಿ ಬೆಳೆಯಹತ್ತಿತು. ಜನಸಮುದಾಯದ ಬಲದ ಮುಂದೆ ಯಾವ ರಾಜಕೀಯ ಬಲವು ನಿಲ್ಲಬಹುದು? ಈ ಕಾಲದಲ್ಲಿ ಚಾಲುಕ್ಯರ ರಾಜ್ಯದಲ್ಲಿ ಅನೇಕ ಸಾಮಂತ ರಾಜರು ಆಳುತ್ತಿದ್ದರು.

ಅವರು ಭಿನ್ನ ಧರ್ಮದವರಾಗಿದ್ದರೂ ಅವರು ವೀರಶೈವ ಮತವು ಹೀಗೆ ಜನತೆಯಲ್ಲಿ ಪ್ರಸಾರವಾಗುವದನ್ನು ತಡೆಯಲಾರದೆ ಹೋದರು. ಈ ಪ್ರಕಾರ ಬಸವ, ಚನ್ನ ಬಸವ, ಮಡಿವಾಳ ಮಾಚಿದೇವ, ಗಂಗಾಂಬಿಕೆ, ನೀಲಾಂಬಿಕೆ, ನಾಗಲಾಂಬಿಕೆ, ಹರಳಯ್ಯ, ಮಧುವಯ್ಯ, ನುಲಿಯ ಚಂದಯ್ಯ, ಕಕ್ಕಯ್ಯ, ಕೋಲದ ಕಕ್ಕಯ್ಯ ಚನ್ನಬಸವ, ಹಡಪದ ರೇಚಯ್ಯ, ಹಡಪದ ಅಪ್ಪಣ್ಣ, ಮೊದಲಾದ ವಿಭೂತಿಗಳು ತಮ್ಮ ರಕ್ತವನ್ನು ರಣಾಂಗಣದಲ್ಲಿ ಸೂರೆಮಾಡಿದ್ದು ವ್ಯರ್ಥವಾಗಿ ಹೋಗಲಿಲ್ಲ. ಅವರ ಪ್ರಯತ್ನಗಳ ಫಲವಾಗಿ ವೀರಶೈವ ಧರ್ಮವು ನಾಡಿನಲ್ಲಿ ಎಲ್ಲ ಕಡೆಗೂ ಸ್ಥಿರವಾಗಿ ಉಳಿಯಿತು. ಇಷ್ಟೇ ಅಲ್ಲ, ಈ ಮಹಾನುಭಾವರ ಹೆಸರಿನ ಮೇಲೆ ಅಸಂಖ್ಯ ದೇವಾಲಯಗಳು ಪ್ರಾಂತದಲ್ಲಿ ಉತ್ಪನ್ನವಾದವು ಅಲ್ಲಿ ಅವರ ಹೆಸರುಗಳ ಮೇಲೆ ಜಾತ್ರೆಗಳಾಗಹತ್ತಿದವು. ಹೀಗೆ ಈ ಮಹಾನುಭಾವರ ಕೀರ್ತಿಯು ಕರ್ನಾಟಕದಲ್ಲಿ ಚಿರಸ್ಥಾಯಿಯಾಗಿ ಉಳಿಯಿತು.

ಈ ಕಾಲದ ತರುವಾಯ ನಾಡಿನಲ್ಲೆಲ್ಲ ಅನೇಕ ಧರ್ಮಯುದ್ಧಗಳಾದವು. ಅವುಗಳಲ್ಲೆಲ್ಲಿ ಶಿವಶರಣರು ಜಯಶೀಲರಾಗುತ್ತ ಬಂದರು. ಅವುಗಳ ವಿವರಗಳನ್ನು ನಾವು ಶಿವಶರಣರ ಚರಿತ್ರೆಗಳು ಭಾಗ ೩ ಇದರ ಪುಟ ಸಂಖ್ಯೆ ೨೯೫ ರಿಂದ ೩೨೨ ವರೆಗೆ ಕೊಟ್ಟಿದ್ದೇವೆ. ವಾಚಕರು ಅವುಗಳನ್ನು ನೋಡಬೇಕೆಂದು ನಾವು ವಿನಂತಿ ಮಾಡಿಕೊಳ್ಳುತ್ತೇವೆ.

## ಚನ್ನ ಬಸವನ ಮಹತ್ಕಾರ್ಯಗಳು

ನಾವು ಈ ವರೆಗೆ ವಿವರಿಸಿದ ಚನ್ನಬಸವೇಶ್ವರನ ಕಾರ್ಯಗಳ ಮೇಲಿಂದ ಅವನು ಎಂಥ ಅದ್ಭುತ ಮತ್ತು ಸಾಹಸದ ಕೃತ್ಯಗಳನ್ನು ಮಾಡಿದ್ದಾನೆಂಬುದು ಗೊತ್ತಾಗುತ್ತದೆ. ಅವನು ಷಟ್‌ಸ್ಥಲ ವಿಷಯಗಳ ಮೇಲೆ ಮಹತ್ವದ ಗ್ರಂಥಗಳನ್ನು ರಚಿಸಿದ್ದಾನೆ. ಅವು ಷಟ್‌ಸ್ಥಲ ಮೂಲವನ್ನೇ ತಿಳಿಯಪಡಿಸುತ್ತವೆ. ಶಿವಾನುಭವದ ಮಂಟಪದಲ್ಲಿ ವಿವಾದ ವಿಷಯಗಳು ಬಂದಲ್ಲಿ ಎಲ್ಲ ಶಿವಶರಣರು ಅವುಗಳ ಬಗ್ಗೆ ತೀರ್ಪನ್ನು ಕೊಡಲು ಅವರು ಚನ್ನಬಸವೇಶ್ವರನನ್ನೇ ಯಾವಾಗಲು ಮುಂದು ಮಾಡುವರು. ಅವನು ಕೊಟ್ಟ ಅಭಿಪ್ರಾಯಗಳು ಎಲ್ಲರಿಗೂ ಸಮ್ಮತವಾಗುತ್ತಿದ್ದವು. ಅವನ ಜ್ಞಾನವು ಇಷ್ಟು ಪ್ರಗಲ್ಭ ಸ್ಥಿತಿಯನ್ನು ಹೊಂದಿತ್ತು. ಇದಕ್ಕೆ ಬಸವೇಶ್ವರ, ಅಕ್ಕ ನಾಗಲಾಂಬಿಕೆ, ಅಲ್ಲಮ ಪ್ರಭು, ಸಿದ್ಧರಾಮೇಶ್ವರ

೬ ದರ್ಶನಗಳು:— ಶೈವ, ಶಾಕ್ತ, ವೈಷ್ಣವ, ಸೌರ, ಗಾಣಾಪತ್ಯ, ಮಾಯಾವಾದಿ, ಇವು ಆರು ದರ್ಶನಗಳು.

ಪಂಚ ಸೂತಕಗಳು:—

೧ನೇ ವಿಧ:— ಇವು ಜಾತಿಸೂತಕ, ಜನನ ಸೂತಕ, ಪ್ರೇತ ಸೂತಕ, ರಜಸೂತಕ, ಉಚ್ಛಿಷ್ಟ ಸೂತಕ, ಇವು ಐದು ಸೂತಕಗಳು.

೨ನೇ ವಿಧ:— ಆರು ಸ್ಥಲಗಳ ಪ್ರಕಾರ ಆರು ಸೂತಕಗಳು ಇವೆ- ಅವು ಕುಲಸೂತಕ, ಛಲಸೂತಕ, ತನುಸೂತಕ ಮನಸೂತಕ, ನೆನಹು ಸೂತಕ, ಭಾವಸೂತಕ, ಎಂದಿವೆ. ಇವು ಭಕ್ತ ಮಹೇಶಾದಿ ಸ್ಥಲಗಳಿಗೆ ಅನುಕ್ರಮವಾಗಿ ಸಂಬಂಧಿಸಿವೆ.

ಶೈವವಿಧಗಳು:—

(ಅ) ಶೈವ, ಪಾಶುಪತ, ಸೋಮ, ದಕ್ಷಿಣ, ಕಾಳಾಮುಖ, ಲಾಕುಳ, (ಯಾವ ೬)

(ಬ) ಆದಿಶೈವ, ಮಹಾಶೈವ, ಅನುಶೈವ, ಅವಾಂತರಶೈವ, ಅಂತ್ಯಶೈವ, ಪ್ರವರಶೈವ. ಆದಿಶೈವರು ಶಿವದ್ವಿಜರು. ದೀಕ್ಷೆಹೊಂದಿದ ಶಿವದ್ವಿಜರು ಮಹಾಶೈವರು. ನೃಪರಿಗೂ ವೈಶ್ಯರಿಗೂ ದೀಕ್ಷೆಯನ್ನಿತ್ತರೆ, ಅವರು ಅನುಶೈವರು. ಶೂದ್ರರಿಗೆ ದೀಕ್ಷೆಯನ್ನಿತ್ತರೆ ಅವರು ಅವಾಂತರ ಶೈವರು. ಬ್ರಾಹ್ಮಣನಿಂದ ಶೂದ್ರಸ್ತ್ರೀಯಲ್ಲಿ ಹುಟ್ಟಿದವರು ಪ್ರವರ ಶೈವರು. ಅಂತ್ಯಜರಿಗೆ ದೀಕ್ಷೆಯನ್ನಿತ್ತರೆ ಅವರು ಅಂತ್ಯಶೈವರು.

(ಕ) ವಾಮ, ದಕ್ಷಿಣ, ಮಿಶ್ರ, ಸಿದ್ಧಾಂತ. ಶಕ್ತಿಪರವಾದುದು ವಾಮವು. ಭೈರವಪರವಾದುದು ದಕ್ಷಿಣವೆನಿಸುವದು. ಸಪ್ತಮಾತೃಕಾಪರವಾದುದು ಮಿಶ್ರವು. ಪರಶಿವ ಪರವಾದುದು ಸಿದ್ಧಾಂತವು. ಹೀಗೆ ಶೈವ ಭೇದಗಳಿವೆ.

(ಡ) ಸಾಮಾನ್ಯಶೈವ, ಮಿಶ್ರಶೈವ, ಶುದ್ಧಶೈವ, ವೀರಶೈವ. ಶಿವನನ್ನು ಪೂಜಿಸುವವರು ಸಾಮಾನ್ಯರು. ಶಿವ, ವಿಷ್ಣು, ಬ್ರಹ್ಮ, ಷಣ್ಮುಖ, ಗಣಪತಿ ಇಂಥ ದೇವತೆಗಳನ್ನೆಲ್ಲ ಪೂಜಿಸುವವರು ಮಿಶ್ರಶೈವರು. ಶಿವನೆನೊಬ್ಬನನ್ನೇ ಪೂಜಿಸುವವರು ಶುದ್ಧ ಶೈವರು. ಇವರಿಗೆ ಲಿಂಗಧಾರಣ ವಿಧೆ. ಸಂಕಲ್ಪ ವಿಕಲ್ಪಗಳನ್ನು ದೂರಮಾಡಿ ಆತ್ಮತತ್ವದ ವಿಚಾರ ಮಾಡುವವರು ವೀರಶೈವರು.

ಟೀಪು:— ಶಿವಶರಣರು ಮತ್ತು ವಚನಕಾರರು ಇಂಥ ಯಾವ ಭೇದವನ್ನೂ ಎಣಿಸುವದಿಲ್ಲ. ಅವರು ಭವಿ, ಭಕ್ತ ಎಂಬ ಎರಡೇ ಭೇದಗಳನ್ನು ಎಣಿಸುತ್ತಾರೆ. ವೀರಶೈವ ದೀಕ್ಷೆಹೊಂದಿದವರಲ್ಲಿ ಯಾವ ತರದ ಭೇದವನ್ನು ಅವರು ಎಣಿಸುವದಿಲ್ಲ.

ಐಕ್ಯದ ಭೇದಗಳು:— ಸಾಲೋಕ್ಯ, ಸಾಮೀಪ್ಯ, ಸಾರೂಪ್ಯ, ಸಾಯುಜ್ಯ ಇವು ಆಯಾಧರ್ಮದವರ ಧ್ಯೇಯಗಳಾಗಿವೆ.

ಕಾಂಡಗಳು:— ಕರ್ಮಕಾಂಡ, ಭಕ್ತಿಕಾಂಡ, ಜ್ಞಾನಕಾಂಡಗಳು ಎಂದಿವೆ.

ಗೋತ್ರಗಳು:— ವೀರ, ನಂದಿ, ವೃಷಭ, ಭೃಂಗೀ, ಸ್ಕಂದ ಇವು ೫ ಗೋತ್ರಗಳು. ಇವು ಅನುಕ್ರಮವಾಗಿ ಪಡ್ವಿಡಿ, ವೃಷ್ಟಿ, ಮುಕ್ತಾಗುಚ್ಛ, ಲಾಂಛನ, ಸುವರ್ಣ, ಇದ್ದು ಇವುಗಳ ಕನ್ನಡ ಹೆಸರುಗಳು ವಾಡಿಕೆಯಲ್ಲಿವೆ. ಅವು ಪಡವಿಡಿ ಬಗೆ, ಮಳೆ ಬಗೆ, ಮುತ್ತಿನ ಕಂತೆಯ ಬಗೆ, ಲಂಬನ ಬಗೆ ಮತ್ತು ಪಂಚವಣ್ಣಿಗೆಯ ಬಗೆ ಎಂದಿವೆ. ಇವುಗಳಿಗೆ ರೇವಣಸಿದ್ಧ, ಮರುಳಾರಾಧ್ಯ, ಏಕೋರಾಮ, ಪಂಡಿತಾರಾಧ್ಯ, ವಿಶ್ವಾರಾಧ್ಯ ಇವರು ಅನುಕ್ರಮವಾಗಿ ಮೂಲಗುರುಗಳು.

ಏಕಾದಶ ರುದ್ರರು:— ವೀರಭದ್ರ, ಶಂಭು, ಗಿರೀಶ, ಅಜೈಕಪಾತ್, ಅಹಿರ್ಬುಧ್ನ್ಯ, ಪಿನಾಕಿ, ಸ್ಥಾಣು, ಪಶುಪತಿ, ಭವ, ಉಗ್ರ, ತ್ವಿಟ್‌ಪತಿ.

ಅಷ್ಟದಿಕ್ಪಾಲಕರು:— ಇಂದ್ರ, ಅಗ್ನಿ, ಯಮ, ನಿರುತಿ, ವರುಣ, ವಾಯು, ಕುಬೇರ, ಈಶಾನ.

ಸಪ್ತಸಾಗರಗಳು:— ಲವಣ ಸಮುದ್ರ, ಕ್ಷೀರಸಮುದ್ರ, ದಧಿಸಮುದ್ರ, ಘೃತಸಮುದ್ರ, ಇಕ್ಷುಸಮುದ್ರ, ಸುರಾಸಮುದ್ರ, ಸ್ವಾದೂದಕ ಸಮುದ್ರ.

ಹದಿನಾಲ್ಕು ಲೋಕಗಳು:— ಅತಳ, ವಿತಳ, ಸುತಳ, ಮಹೀತಳ, ತಳಾತಳ, ರಸಾತಳ, ಪಾತಾಳ, ಭೂಲೋಕ, ಭುವರ್ಲೋಕ, ಸುವಲೋಕ, ಮಹಲೋಕ ಜನೋಲೋಕ, ತಪೋಲೋಕ, ಸತ್ಯಲೋಕ,

ಪಂಚ ಯಜ್ಞನಗಳು:— ದೇವಯಜ್ಞ, ಪಿತೃಯಜ್ಞ, ಮನುಷ್ಯಯಜ್ಞ, ಭೂತಯಜ್ಞ, ಬ್ರಹ್ಮಯಜ್ಞ ಎಂದಿವೆ.

ಉದ್ಧರಣೆಗಳು:— ವೀರಶೈವ ತತ್ವಗಳ ಮಾರ್ಗವನ್ನು ತಿಳಿಯಲಿಕ್ಕೆ ಉದ್ಧರಣೆಗಳು ಸಾಧನವಾಗಿವೆ. ಅವು ೩೬ ಇವೆ. ಅವುಗಳ ಹೆಸರುಗಳು:— ಅನಾದಿ ಭಕ್ತೋದ್ಧರಣೆ, ಅಷ್ಟಾವರಣೋದ್ಧರಣೆ, ಅನಾದಿ ಜಂಗಮೋದ್ಧರಣೆ, ಗೋಮುಖೋದ್ಧರಣೆ, ಪ್ರಣವೋದ್ಧರಣೆ, ಮುಕುಟೋದ್ಧರಣೆ, ಶೂನ್ಯಲಿಂಗೋದ್ಧರಣೆ. ಚಿದಂಬರೋದ್ಧರಣೆ, ಷಟ್ಬ್ರಹ್ಮೋದ್ಧರಣೆ, ಪಂಚಮೂರ್ತಿ ಲಿಂಗೋದ್ಧರಣೆ, ಶಾಂಭವೀಚಕ್ರೋದ್ಧರಣೆ, ವೃಷಭೋದ್ಧರಣೆ, ನವಚಕ್ರೋದ್ಧರಣೆ, ತತ್ವಪಂಚೀಕರಣೋದ್ಧರಣೆ, ಮಂತ್ರಪಂಚೀಕರಣೋದ್ಧರಣೆ, ಲಿಂಗಪಂಚೀಕರಣೋದ್ಧರಣೆ, ಮಹಾಲಿಂಗೋದ್ಧರಣೆ, ಷಡಕ್ಷರೋದ್ಧರಣೆ, ಬಸವೋದ್ಧರಣೆ ನೂರೆಂಟು ಪ್ರಣವೋದ್ಧರಣೆ, ಅಧಃಕುಂಡಲಿ ಶಕ್ತಿಪ್ರಣವೋದ್ಧರಣೆ, ಊರ್ಧ್ವಕುಂಡಲಿ ಶಕ್ತಿಪ್ರಣವೋದ್ಧರಣೆ, ಜ್ಞಾನಚಕ್ರೋದ್ಧರಣೆ, ನೂರೆಂಟು ತೆರದ ಅರ್ಪಣೋದ್ಧರಣೆ, ಅರುವತ್ತಾರು ತೆರದ ಕರಣಾರ್ಪಣೋದ್ಧರಣೆ, ನಾಲ್ವತ್ತೆಂಟು ತೆರದ ಅರ್ಪಣೋದ್ಧರಣೆ, ಇನ್ನೂರಹದಿನಾರು ತೆರದ ಅರ್ಪಣೋದ್ಧರಣೆ, ಮೂವತ್ತಾರುತೆರದ ಮಿಶ್ರಾರ್ಪಣೋದ್ಧರಣೆ, ಕಾಯಾರ್ಪಣೊದ್ಧರಣೆ, ಅಂಗಷಡಕ್ಷರೋದ್ಧರಣೆ, ಲಿಂಗಷಡಕ್ಷರೋದ್ಧರಣೆ, ಲಯಯೋಗ ಸಮಾಧಿ ಎಂದಿವೆ.

# ಪರಿಶಿಷ್ಟಗಳು

(೧)

## ಪಂಚವರ್ಣದ ಹಿಟ್ಟುಮಾಡುವ ಕ್ರಮ

(೧) ನಿರ್ಮಲತರವಾದ ತಂಡುಲವ ತೆಗೆದುಕೊಂಡು ಉದಕದಲ್ಲಿ ಮೂರು ವೇಳೆ ಚನ್ನಾಗಿ ತೊಳೆದುಕೊಂಡು ಗೋವಿನ ಕ್ಷೀರದಲ್ಲಿ ಹದಗಟ್ಟಿ ಇಡದು ಹುಡಿಮಾಡಿ ಶೋಧಿಸಿಕೊಂಡು ಅದನು ಐದು ಭಾಗವ ಮಾಡಿಕೊಂಡು ಒಂದು ಭಾಗದ ಹಿಟ್ಟು ಅಲ್ಲೂರಾಯ ಸೊಪ್ಪಿನ ರಸದಲ್ಲಿ ಹದಗೊಡಲು ಹಸುರಹದು. ಮತ್ತೊಂದು ಭಾಗವ ಹಿಟ್ಟು ಅಳಲಿ ಕಾಯುವ ರಸದಲ್ಲಿ ಹದಗಟ್ಟಲು ಕಪ್ಪಾಗುವದು. ಮೂರನೇ ಭಾಗವ ಹಿಟ್ಟು ಅರಿಶಿನ ನೀರಿನಲ್ಲಿ ಹದಗಟ್ಟಲು ಹಳದಿಯಾಗುವದು. ನಾಲ್ಕನೆಯ ಭಾಗದ ಹಿಟ್ಟು ಅರಿಸಿನ ನೀರೊಳಗೆ ಸುಣ್ಣವ ಕದಡಿದ ನೀರ ಸೋಂಕಿಸಿ ಹದವ ಕೊಡಲು ಕೆಂಪಾಗುವದು. ಐದನೆ ಭಾಗದ ಹಿಟ್ಟು ಶುದ್ಧ ಸಾಲೆವೆನಿಸುವದು. ಇಂತಿದು ಪಂಚವರ್ಣಗೆಯ ಹಿಟ್ಟೆನಿಸುವದು. ಇಂತೀ ಪಂಚವರ್ಣದ ಹಿಟ್ಟಿನಿಂದ ಸಮಾಧಿಯೊಳಗೆ ರಂಗವಲ್ಲಿಯನಿಕ್ಕುವದು. ಈ ಕ್ರಮವ ಬಲ್ಲಂಥ ಜ್ಞಾನಿಗಳು ಅರಿದು ಮಾಡುವದು.

(೨)

### ೬೪ ಆಚಾರಗಳು

(೧) ಆಚಾರವೆಂಬುದು ಕೂರಲಗು. ತಪ್ಪಿ ಬಂದರೆ ಪ್ರಾಣವ ತೆಗಲುವದು. ಅದು ಕಾರಣ ಅರಿದರಿದು ಆಚರಿಸಬೇಕು. ಆಚಾರ ವಿಚಾರ ಉಭಯದ ವಿಚಾರವ ನೋಡದೆ ಶಿವದೀಕ್ಷೆಯ ಮಾಡಲಾಗದು. ಅದೆಂತೆಂದೊಡೆ ಪರರ ಹೆಣ್ಣಿಗೆ ಕಣ್ಣಿಡದಿಹುದೇ ೧ನೇ ಆಚಾರ. ಪರರ ದ್ರವ್ಯವ ಅಪಹಾರ ಮಾಡದಿಹುದೇ ೨ನೇ ಆಚಾರ. ಸುಳ್ಳಾಡದಿಹುದೇ ೩ನೇ ಆಚಾರ. ವಿಶ್ವಾಸಘಾತವ ಮಾಡದಿಹುದೇ ೪ನೇ ಆಚಾರ. ಪ್ರಾಣಹಿಂಸೆಯ ಮಾಡದಿಹುದೇ ೫ನೇ ಆಚಾರ. ಸಕಲ ಶಿವಗಣರ್ಗೆ ಸಂತೋಷವಂ ಪುಟ್ಟಿಸುವದೇ ೬ನೇ ಆಚಾರ. ಸ್ವೀಕರಿಸುವ ನೇಮವಂ ಪ್ರಾಣಾಂತ್ಯವಾಗಿ ಬಿಡೆನೆಂಬುವೇ ೭ನೇ ಆಚಾರ. ಷಟ್‌ಸ್ಥಲದವರಂ ಧಿಕ್ಕರಿಸುವ ಜನರಂ ಸೀಳುವೆನೆಂಬುವ ವ್ರತವೇ ೮ನೇ ಆಚಾರ. ಕೆಡು ಜನರ ಸಹವಾಸ ಮಾಡದಿಹುದೇ ೯ನೇ

ಆಚಾರ. ಸಜ್ಜನ ಸಂಗತಿ ಬಿಡದಿಹುದೇ ೧೦ನೇ ಆಚಾರ. ಅನ್ಯದೇವತಾ
ಭಜನೆಗೆ ವಿಮುಖನಾಗುವದೇ ೧೧ನೇ ಆಚಾರ. ಶಿವನೇ ಸರ್ವೋತ್ತಮ
ಶಿಖಾಮಣಿ ಎಂದು ಮನದಲ್ಲಿ ಅಚ್ಚೊತ್ತಿರುವುದೇ ೧೨ನೇ ಆಚಾರ. ಶಿವನಿಗೆ
ಶಿವ ಗಣಂಗಳಿಗೆ ಸಾಂಗ್ರ ಮಾತ್ರ ಭೇದ ಮಾಡದಿಹುದೇ ೧೩ನೇ ಆಚಾರ.
ಲಿಂಗ ಜಂಗಮರ ಅಂಗವ ಮುಟ್ಟದಿಹುದೇ ೧೪ನೇ ಆಚಾರ. ಸಕಲ ಜೀವಿಗಳಿಗೆ
ಹಿತವ ಬಯಸುವದೇ ೧೫ನೇ ಆಚಾರ. ಸರ್ವರಿಗೆ ಹಿತವ ಮಾಡುವದೇ
೧೬ನೇ ಆಚಾರ. ಗುರು ಪಾದೋದಕವ ಲಿಂಗಕ್ಕೆ ತೋರಿ ಮುಕ್ಕುಳಿಸುವುದೇ
೧೭ನೇ ಆಚಾರ. ಕಡ್ಡಿ ಲಿಂಗಕ್ಕೆ ತೋರಿ ದಂತ-ಧಾವನೆ ಮಾಡುವದೇ
೧೮ನೇ ಆಚಾರ. ಸರ್ವಾಂಗವ ಸ್ವಚ್ಛವಾಗಿ ಪ್ರಕ್ಷಾಳಿಸುವದೇ ೧೯ನೇ
ಆಚಾರ. ಲಿಂಗ ಮುದ್ರೆಯಿಲ್ಲದ ಗಡಿಗೆಯಲ್ಲಿ ಪಾಕವ ಮಾಡದಿಹುದೇ
೨೦ನೇ ಆಚಾರ. ಪ್ರಣವ ಮುದ್ರೆ ಇಲ್ಲದ ವಸ್ತ್ರವ ಹೊದೆಯದಿಹುದೇ ೨೧ನೇ
ಆಚಾರ. ಹುಟ್ಟಿದ ಶಿಶುವಿಗೆ ಲಿಂಗ ಧಾರಣವ ಮಾಡದೆ ತಾಯ ಮೊಲೆ
ಹಾಲು ಜೇನು ತುಪ್ಪ ಮುಟ್ಟಿಸದಿಹುದೇ ೨೨ನೇ ಆಚಾರ. ಬೀದಿಗು
ಬಾಜಾರಕ್ಕೆ ಹೋಗಿ ಹೇವು ವ್ಯಾಪಾರ ಭವಿಗಳ ಕೂಡೆ ಮಾಡಿ ಜಳಕವ
ಮಾಡದೆ ಉಣ್ಣದಿಹುದೇ ೨೩ನೇ ಆಚಾರ. ಭವಿಯಾದರೆ ಕೈ ಮುಗಿಯ
ದಿಹುದೇ ೨೪ನೇ ಆಚಾರ. ಆಡಿದ ಭಾಷೆಯಂ ಕಡೆ ಪೂರೈಸುವದೇ ೨೫ನೇ
ಆಚಾರ. ಸತ್ಯವನ್ನು ನುಡಿದು ತಪ್ಪದಿಹುದೇ ೨೬ನೇ ಆಚಾರ. ಮಿಥ್ಯವಂ
ನುಡಿದು ತಪ್ಪದಿಹುದೇ ೨೭ನೇ ಆಚಾರ. ಭವಿಯ ಕೂಡ ಕ್ಷೌರವ ಮಾಡಿಸ
ದಿಹುದೇ ೨೮ನೇ ಆಚಾರ. ಶಿವದಾರವಂ ಕಟ್ಟಿ ರಕ್ಷಿಸುವದೇ ೨೯ನೇ ಆಚಾರ.
ಶಿಶುಗಳಿಗೆ ಲಿಂಗವಂ ಕಟ್ಟಿ ಹಾಲಂ ಕರೆವುದೇ ೩೦ನೇ ಆಚಾರ. ಮಂತ್ರ
ಸಹಿತ ಗೋಮಯಂ ಹಿಡಿದು ಮಂತ್ರ ಸಹಿತ ಪುಟವಿಕ್ಕಿ ಭಸ್ಮದ ರಾಶಿಯಂ
ಮಾಡುವದೇ ೩೧ನೇ ಆಚಾರ. ಆ ಭಸ್ಮದ ರಾಶಿಯಂ ಪಾದೋದಕದೊಡನೆ
ಉಂಡೆಯಂ ಕಟ್ಟುವದೇ ೩೨ನೇ ಆಚಾರ. ಕ್ರಮವರಿತು ಕೋಟಿ ಜಪಂ
ಗೈದು ಧರಿಸುವದೇ ೩೩ನೇ ಆಚಾರ. ವಿಧಿಯರಿತು ಸ್ನಾನವರಿತು ರುದ್ರಾಕ್ಷಿ
ಗಳಂ ಧರಿಸುವದೇ ೩೪ನೇ ಆಚಾರ. ಶಿವಾನುಭವ ಶಾಸ್ತ್ರವಂ ವಿಚಾರಿಸು
ವದೇ ೩೫ನೇ ಆಚಾರ. ಮನವ ನೋಯಿಸಿ ಮಾತನಾಡದಿಹುದೇ ೩೬ನೇ
ಆಚಾರ. ಲಿಂಗದ ನೆಲೆಯರಿತು ಲಿಂಗವ ಪೂಜಿಸುವದೇ ೩೭ನೇ ಆಚಾರ.
ಗುರು ಮುಖದಿಂ ತಾನಾರು ತನ್ನ ನಿಜವೇನೆಂದು ಬೆಸಗೊಳ್ಳುವುದೇ ೩೮ನೇ
ಆಚಾರ. ಜಂಗಮಲಿಂಗಂ ಮೆಟ್ಟಿ ನಡೆದ ಸ್ಥಲವ ನಂಬುಗೆಯಿಂದುದೇ ೩೯ನೇ

ಆಚಾರ. ಅವಿಚ್ಛಿನ್ನವಾಗಿ ಅಂಗತ್ರಯವರ್ಕ್ಷ ಮನ ಓಕರಿಗೊಂಡುದೇ ೪೦ನೇ ಆಚಾರ. ಪುಷ್ಪದ ವನದಲ್ಲಿ ಭವಿಯು ತಿರುಗಗೊಡದಿರುವದೇ ೪೧ನೇ ಆಚಾರ. ಆವರ್ಣವ ಹೊಟ್ಟೆಯಂ ಮಾಡದೆ ಫಲಂಗಳಂ ತೆಗೆದುಕೊಂಬುದೇ ೪೨ನೇ ಆಚಾರ. ಲಿಂಗದಲ್ಲಿ ಶಿಲೆಯ ಭಾವವನರಸದಿರುವದೇ ೪೩ನೇ ಆಚಾರ. ಜಂಗಮದಲ್ಲಿ ಕುಲವನರಸದಿಹುದೇ ೪೪ನೇ ಆಚಾರ. ಗುರುವಿನಲ್ಲಿ ನರನೆಂಬ ಭಾವನೆ ಮಸಿಗೆಡದುದೇ ೪೫ನೇ ಆಚಾರ. ವಿಭೂತಿಯಲ್ಲಿ ಭೇದವ ಮಾಣ್ಬುದೇ ೪೬ನೇ ಆಚಾರ. ರುದ್ರಾಕ್ಷಿ ಶುದ್ಧವಮಾಡಿ ಮಣಿಗಳ ಅರಸದುದೇ ೪೭ನೇ ಆಚಾರ. ಪಾದೋದಕದಲ್ಲಿ ಉಚ್ಛಿಷ್ಟವಳಿದುದೇ ೪೮ನೇ ಆಚಾರ. ಪ್ರಸಾದದಲ್ಲಿ ರುಚಿಯ ಸೋತದಿರುವದೇ ೪೯ನೇ ಆಚಾರ. ಮಂತ್ರದಲ್ಲಿ ಕುತ್ಸಿತ ಕಲ್ಪನೆ ಮಾಡದಿಹುದೇ ೫೦ನೇ ಆಚಾರ. ಲಿಂಗಾರ್ಚನೆ ವಿರಹಿತ ಭೋಜನ ಮಾಡದಿರುವದೇ ೫೧ನೇ ಆಚಾರ. ಜಂಗಮ ತೃಪ್ತಿ ಮಾಡಿಸದೆ ತಾನು ಭೋಗಿಸದಿಹುದೇ ೫೨ನೇ ಆಚಾರ. ವೀರ ಮಾಹೇಶ್ವರ ಲಿಂಗವಂ ತೆಗಿಸಿ ಅರ್ಪಣ ಮಾಡುವದೇ ೫೩ನೇ ಆಚಾರ. ಐಶ್ವರ್ಯಂ ಸವನಿಧಿಗೊಳಿಸಿ ತನು ಲಿಂಗ ಪೂಜೆಯಂ ಮಾಡುವದೇ ೫೪ನೇ ಆಚಾರ. ಲಿಂಗ ದ್ರೋಹವಂ ಕೇಳಿ ತಾನು ಪ್ರಾಣ ಬಿಡುವದೇ ೫೫ನೇ ಆಚಾರ. ಜಂಗಮ ದ್ರೋಹವಂ ಕೇಳಿ ತಾನು ಐಕ್ಯನಾಗುವದೇ ೫೬ನೇ ಆಚಾರ. ಲಿಂಗದ್ರೋಹವಂ ಮಾಡಿದವನ ಪ್ರಾಣವಂ ಛೇದಿಸುವದೇ ೫೭ನೇ ಆಚಾರ. ಜಂಗಮ ದ್ರೋಹ ಮಾಡಿದವನ ಶಿರವನೀಡಾಡುವದೇ ೫೮ನೇ ಆಚಾರ. ಭವಿಯು ಬೆರಸಿದ ಹೆಂಡರಂ ದಂಡಿಸುವದೇ ೫೯ನೇ ಆಚಾರ. ಕುಲಗೆಟ್ಟ ಹೆಣ್ಣಂ ಬಿಡುವುದೇ ೬೦ನೇ ಆಚಾರ. ಅಷ್ಟಾವರಣವನಂಗವ ಮಾಡುವ ಭೇದವನರಿಯುವದೇ ೬೧ನೇ ಆಚಾರ. ತಾನಾರು ಲಿಂಗವಾರು ಎಂಬ ಭೇದವು ತಿಲ ಮಾತ್ರವಿಲ್ಲದಿಹುದೇ ೬೨ನೇ ಆಚಾರ. ತನ್ನ ನಿಜ ವಿಚಾರವಂ ತಾ ಮರೆಯದೆ ಷಟ್‌ಸ್ಥಲದವರಿಗೆ ಅರುಹಿ ತನ್ನಂತೆ ಮಾಡುವದೇ ೬೩ನೇ ಆಚಾರ. ಇಂತಿಪ್ಪ ಆಚಾರಂಗಳ ಕಡೆಮುಟ್ಟಿಸುವದೇ ಕೂಡಲಚೆನ್ನ ಸಂಗಮ ದೇವರಲ್ಲಿ ೬೪ನೇ ಆಚಾರ ನೋಡಾ ಸಿದ್ಧರಾಮಯ್ಯ.

(೨) ೧ನೇ ಆಚಾರದಿಂದ ಶೀಲವಂತನಾಗುವನು. ೨ನೇ ಆಚಾರದಿಂದ ಧನವಂತನಾಗುವನು. ೩ನೇ ಆಚಾರದಿಂದ ಕೀರ್ತಿವಂತನಾಗುವನು. ೪ನೇ ಆಚಾರದಿಂದ ವಿಶ್ವಾಸವಂತನಾಗುವನು. ೫ನೇ ಆಚಾರದಿಂದ ಸತ್ಪುರುಷನೆನಿಸುವನು. ೬ನೇ ಆಚಾರದಿಂದ ಭಕ್ತಿವಂತನೆನಿಸುವನು. ೭ನೇ ಆಚಾರ

ದಿಂದ ವೀರಶೈವನೆನಿಸುವನು. ೮ನೇ ಆಚಾರದಿಂದ ವೀರ ಮಾಹೇಶ್ವರನೆನಿ ಸುವನು. ೯ನೇ ಆಚಾರದಿಂದ ಸ್ವಾತ್ವಿಕನೆನಿಸುವನು. ೧೦ನೇ ಆಚಾರ ದಿಂದ ವಿವೇಕಿ ಎನಿಸುವನು. ೧೧ನೇ ಆಚಾರದಿಂದ ವೀರವ್ರತಿ ಎನಿಸುವನು. ೧೨ನೇ ಆಚಾರದಿಂದ ವೀರ ಭಕ್ತನೆನಿಸುವನು. ೧೩ನೇ ಆಚಾರದಿಂದ ಶರಣ ನೆನಿಸುವನು. ೧೪ನೇ ಆಚಾರದಿಂದ ಸದಾಚಾರಿ ಎನಿಸುವನು. ಇನ್ನು ಮೇಲು ಮೇಲು ಹೇಳಿದ ೫೦ ಆಚಾರವುಳ್ಳವನೇ ಪ್ರಸುಘನೆನಿಸುವನು. ಪುರಾತನರೊ ಳಗಾಟ ಲಾಮನೆನಿಸುವನು. ಕೂಡಲ ಚನ್ನ ಸಂಗಯ್ಯ ನಿಮ್ಮ ತ್ರಿ ಮಾಮೃತಿ ಸಹಸ್ರ ಮಡಿ ಮಹಿಮನೆನಿಸುವನು ಕೇಳು ಸಿದ್ಧರಾಮಯ್ಯ.

೩

## ಬಸವಣ್ಣನ ಬಾವನ್ನದಿರವು

(೧) ಗುರು ಕಾರುಣ್ಯಸಂಪನ್ನನು ವಿಭೂತಿ ರುದ್ರಾಕ್ಷಿ ಧಾರಣಿಕನು ಪಂಚಾಕ್ಷರೀ ಭಾಷಾಸಮೇತನು, ಲಿಂಗಾಂಗ ಸಂಬಂಧಿ, ನಿತ್ಯಲಿಂಗಾರ್ಚಕನು, ಅಪಿ ತಪಲ್ಲಿ ಅವಧಾನಿ, ಪಾದೋದಕ ಪ್ರಸಾದ ಗ್ರಾಹಕನು, ಭಕ್ತಿ ಸಂಪನ್ನನು, ಏಕಲಿಂಗ ನಿಷ್ಠಾಪರನು, ಚರಲಿಂಗ ಲೋಲುಪ್ತನು, ಶರಣ ಸಂಗಮೇಶ್ವರನು. ತ್ರಿವಿಧಲ್ಲಿ ಆಯತನು, ತ್ರಿಕರಣ ಶುದ್ಧನು. ತ್ರಿವಿಧ ಲಿಂಗಾಂಗ ಸಂಬಂಧಿ. ಅನ್ಯ ದೈವ ಸ್ಮರಣೆಯ ಹೊದ್ದನು. ಭವಿಯ ಸಂಗವ ಮಾಡನು. ಭವಿಪಾಕವ ಕೊಳ್ಳನು. ಪರ ಸತಿಯ ಬೆರೆಸನು. ಪರಧನವನೊ ಲ್ಲನು. ಪರನಿಂದೆಯನಾಲಿಸನು. ಅನೃತವನಾಡನು. ಅನ್ಯಾಯವನಾಡನು ಹಿಂಸೆಯ ಮಾಡನು. ತಾಮಸಭಕ್ತಿ ಸಂಗವ ಮಾಡನು. ಅನ್ನ ಅರ್ಥ ಪ್ರಾಣ ಅಭಿಮಾನ ಮುಂತಾಗಿ ಗುರುಲಿಂಗ ಜಂಗಮಕ್ಕೆ ಅರ್ಪಿಸಿ ಪ್ರಸಾದ್ಯ ಮುಂತಾಗಿ ಭೋಗಿಸುವ. ಜಂಗಮದ ನಿಂದೆಯ ಸೈರಿಸ. ಪ್ರಸಾದವ ನಿತ ಕೊಳ್ಳುವ, ಅನ್ಯರಾಸೆಗಯ್ಯ. ಪಾತ್ರಾಪಾತ್ರವನರಿವ. ಚತುರ್ವಿಧ ಸಿರಿವಿ ಯ ಹಾರ ಅರಿಷಡ್ವರ್ಗಕ್ಕೆ ಅಳುಕ. ಕುಲಮದಂಗಳ ಬಗೆಗೊಳ್ಳ. ದ್ವೈತಾ ದ್ವೈತವನೊಲ್ಲ. ಸಂಕಲ್ಪ ವಿಕಲ್ಪವ ಮಾಡುವವನಲ್ಲ. ಕಾಲೋಚಿತವ ಬಲ್ಲ. ಕ್ರಮಯುಕ್ತನಾಗಿಹನು. ಷಟ್‌ಸ್ಥಲ ಭರಿತ. ಸರ್ವಾಂಗ ಲಿಂಗಿ. ಪಾದೋ ದಕ ಸಂಪನ್ನನಯ್ಯ. ಇಂತಿ ಐವತ್ತೆರಡಾಯುಧದಲಿ ನಿರ್ಮಲನಾಗಿ ಮೆರೆದ ನಮ್ಮ ಬಸವಣ್ಣನು. ಆ ಬಸವಣ್ಣನ ಪಾದಕ್ಕೆ ನಾನು ಅಹೋ ರಾತ್ರಿ ಯೆಲ್ಲ ನಮೋ ನಮೋ ಎನುತಿರ್ದೆನು ಕಾಣಾ ಚನ್ನಮಲ್ಲಿಕಾರ್ಜುನಾ.

## (೪)

## ಅನಾದಿಸೂತ್ರ.

(೧) ಬ್ರಹ್ಮ, ವಿಷ್ಣು, ರುದ್ರ, ಈಶ್ವರ, ಸದಾಶಿವರಿಂದ ಪೂಜಾ ನಮಸ್ಕಾರಕ್ಕೆ ಕರ್ತೃವಾದ ಪರಶಿವಮೂರ್ತಿ ಅಂತಪ್ಪ ಪರಶಿವಮೂರ್ತಿಯು ಐವರಿಗೆ ಅನಾದಿಯು. ಅಂತಪ್ಪ ಪರಶಿವ ಭಕ್ತನ ಕರಮನ ಭಾವದಲ್ಲಿ ಪೂಜೆಗೊಂಬ ನಿಃಕಲಪರಶಿವ ಮೂರ್ತಿ ಗುರುಲಿಂಗಜಂಗಮವೇ ಅನಾದಿಗೆ ಅನಾದಿಯಾಗಿರ್ಪುದೆಂಬುದೀಗ ಅನಾದಿ ಎಂಬ ಶಬ್ದಕ್ಕರ್ಥ.

ಹೀಗೆ ಒಪ್ಪಿಸಲ್ಪಟ್ಟಂಥ ನಿಃಕಲ ಪರಶಿವ ಮೂರ್ತಿ ಗುರುಲಿಂಗ ಜಂಗಮದ ಚಿದಂಶವೇ ಭಕ್ತ ಮಹೇಶ ಪ್ರಸಾದಿ ಪ್ರಾಣಲಿಂಗಿ ಶರಣ ಐಕ್ಯರೆಂಬುದೀಗ ಷಟ್‌ಸ್ಥಲವೆಂಬ ಶಬ್ದಕ್ಕರ್ಥ.

ಬ್ರಹ್ಮ ವಿಷ್ಣು ಇಂದ್ರ ಚಂದ್ರ ಮನು ಮುನಿ ದೇವದಾನವ ಮಾನವರೆಲ್ಲ ಬದ್ಧ ಬವ ಪಾಶಂಗಳ ದಾಂಟಿ ಸರ್ವಸಂಗ ಪರಿತ್ಯಾಗದಿಂದಿರ್ಪರು ಭಕ್ತರೆಂಬುದೀಗ ನಿರಾಭಾರಿ ಎಂಬ ಶಬ್ದಕ್ಕರ್ಥ.

ಬ್ರಾಹ್ಮಣ ಕ್ಷತ್ರಿಯ ವೈಶ್ಯ ಶೂದ್ರ ಪಾಶುಪತ ಕಾಳಾಮುಖ ಎಂಬ ಷಣ್ಮತದವರೇ ಶೈವರು, ಗೊಲ್ಲಾಳಯ್ಯ ಬಳ್ಳೇಶ ಮಲ್ಲಯ್ಯ ಗುರುಭಕ್ತಯ್ಯ ಮೊದಲಾದ ನವ ಮುಗ್ಧರೇ ವೀರಶೈವರು, ಇವು ಎರಡನು ಹಿಡಿದು ಬಳಸುವದೇ ಅಪಶೈವರು. ಈ ಶೈವ ವೀರಶೈವ ಅಪಶೈವಂಗಳಿಗುಪರಿಯಾಗಿ ಉಪಾಧಿ ಮಾಟಸ್ಥಲವಿಡಿದು ಒಪ್ಪಲ್ಪಟ್ಟಂಥಾದ್ದೇ ಸಾಮಾನ್ಯ ವೀರಶೈವವೆನಿಸುವದು. ಆ ಸಾಮಾನ್ಯ ವೀರಶೈವಕ್ಕುಪರಿಯಾಗಿ ಗುರು ಲಿಂಗ ಜಂಗಮ ಭಕ್ತಿಯಿಂದ ನಿರುಪಾಧಿ ಮಾಟಸ್ಥಲವಿಡಿದು ಒಪ್ಪಲ್ಪಟ್ಟಂಥಾದ್ದೇ ವಿಶೇಷ ವೀರಶೈವವೆನಿಸುವದು. ಆ ವಿಶೇಷ ವೀರಶೈವಕ್ಕುಪರಿಯಾಗಿ ಅಷ್ಟಾವರಣಾಂತರಂಗ ಬಹಿರಂಗದಲ್ಲಿ ಸಂಬಂಧಾಚರಣೆಗಳಿಂದ ಆಚ್ಛಾದಿಸಿಕೊಂಡು ತನ್ನ ತಾನೇ ಪೂಜ್ಯ ಪೂಜಕತ್ವದಿಂದಿರ್ಪುದೆಂಬುದೀಗ ವೀರಶೈವವೆಂಬ ಶಬ್ದಕ್ಕರ್ಥ.

ಯಮ ನಿಯಮ ಆಸನ ಪ್ರಾಣಾಯಾಮ ಪ್ರತ್ಯಾಹಾರ ಧ್ಯಾನ ಧಾರಣ ಸಮಾಧಿ ಎಂಬ ಯೋಗಗಳಿಗೆ ಉಪರಿಯಾಗಿ ರಾಜಿಸುವಂಥ ಭಕ್ತ ಮಹೇಶ ಪ್ರಸಾದ ಪ್ರಾಣಲಿಂಗ ಶರಣ ಐಕ್ಯಸ್ಥಲಂಗಳ ವೀರ ನಿರವಯ ನಿಃಶೂನ್ಯ ನಿರಂಜನ ಸ್ಥಲದಲ್ಲಿ ನಿಂದ ಶಿವಯೋಗ ಎಂಬುದೀಗ ಶರಣನು ಎಂಬ ಶಬ್ದಕ್ಕರ್ಥ.

R.N. B. 2554

# ಶಿವಾನುಭವ

ಸಂಪುಟ ೧೭ ] [ ಸಂಚಿಕೆ ೩

ಸಂಪಾದಕ

ಫ. ಗು. ಹಳಕಟ್ಟಿ

ಬಿ.ಎ. ಎಲ್. ಎಲ್. ಬಿ.



## ವಿಷಯಾನುಕ್ರಮಣಿಕೆ.





ಶಿವಾನುಭವ
ಮಾಸ ಪತ್ರಿಕೆ ವಿಜಯಪುರ
ವಾರ್ಷಿಕ ಚಂದಾ ೫—೧೨—೦

# ಶಿವಾನುಭವ

ವರ್ಷ ೨೭ || ಮಾರ್ಚ ೧೯೩೪ || ಸಂಚಿಕೆ ೩

## ಪಾಲಕುರಿಕಿ ಸೋಮನಾಥ ಕವಿ.

( ಲೇಖಕರು:— ಶ್ರೀ. ಬಂಡಾರು ತಮ್ಮಯ್ಯನವರು ಕಾಕಿನಾಡ. )

(ಟೀಪು:—ಪಾಲ್ಕುರಿಕೆ ಸೋಮನಾಥನು ಆಂಧ್ರ ಮತ್ತು ಕನ್ನಡ ವಾಙ್ಮಯಗಳಲ್ಲಿ ಬಹು ಉಚ್ಚ ಸ್ಥಾನವನ್ನು ಹೊಂದಿದ್ದಾನೆ. ಹಾಗೆಯೇ ಅವನು ಸಂಸ್ಕೃತ ಭಾಷೆಯಲ್ಲಿಯೂ ಪಂಡಿತನಾಗಿದ್ದಾನೆ. ಇವನ ಚರಿತ್ರೆಯನ್ನು ನಾವು ಶಿವಶರಣರ ಚರಿತ್ರೆಗಳು ಭಾಗ ೩. ಪುಟ ೧೯೬. ಇದರಲ್ಲಿ ಪ್ರಕಟಿಸಿದ್ದೇವೆ. ಆ ಲೇಖ ಬರೆಯುವ ಕಾಲದಲ್ಲಿ ಅವನ ವಿಷಯವಾಗಿ ವಿಶ್ವಸನೀಯ ವಿವರಣೆಗಳು ನಮಗೆ ದೊರೆತಿದ್ದಿಲ್ಲ. ಆದ್ದರಿಂದ ಅದರಲ್ಲಿ ಅನೇಕ ದೋಷಗಳುಂಟಾಗಿರುತ್ತವೆ. ಈ ಮಹಾನುಭಾವನ ವಿಷಯವಾಗಿ ನಿಜ ಸಂಗತಿಗಳನ್ನು ಸಂಗ್ರಹಿಸುವದು ಬಹು ಅವಶ್ಯವೆಂದು ನಮಗೆ ತೋರಿದ್ದರಿಂದ ಈಗ ಉಪಲಬ್ಧವಾಗಿರುವ ಸಂಗತಿಗಳನ್ನು ನಾವು ಈ ಪತ್ರಿಕೆಯಲ್ಲಿ ಪ್ರಕಟಿಸಿದ್ದೇವೆ.

ಮೇಲ್ಕಂಡ ಚರಿತ್ರೆಯಲ್ಲಿ ನಾವು ಪಾಲ್ಕುರಿಕೆ ಗ್ರಾಮವು ಮೈಸೂರ ಸಂಸ್ಥಾನದಲ್ಲಿ ತುಮಕೂರ ಜಿಲ್ಲೆಯಲ್ಲಿ ಚಿಕ್ಕ ಬಳ್ಳಾಪುರಕ್ಕೆ ಸಮೀಪವಾಗಿದೆಂದು ಕಾಣಿಸಿದ್ದೇವೆ. ಅದು ಈಗ ಒಂದು ಹಾಳಾದ ಗ್ರಾಮವಾಗಿದ್ದು ಅಲ್ಲಿ ಸೋಮನಾಥ ದೇವಾಲಯವಿರುವದಿಲ್ಲೆಂದು ತಿಳಿದುಬರುತ್ತದೆ ಆದ್ದರಿಂದ ಈ ಗ್ರಾಮವು ಪಾಲ್ಕುರಿಕೆ ಸೋಮನಾಥನದೆಂದು ನಮಗೆ ತೋರುವದಿಲ್ಲ.

ತೋಂಟದ ಸಿದ್ಧಲಿಂಗ ದೇಶಿಕನು ಈ ಗ್ರಾಮವು ಶ್ರೀಶೈಲದ ಈಶಾನ್ಯ ದಿಕ್ಕಿನಲ್ಲಿದೆ ಎಂದು ತನ್ನ ಕಾವ್ಯದಲ್ಲಿ ಬರೆದಿದ್ದಾನೆ. ಶರಣ ಸಾಹಿತ್ಯ ಪತ್ರಿಕೆಯ ನವೆಂಬರ ೧೯೫೨ನೇ ಸಂಚಿಕೆಯಲ್ಲಿ ಶ್ರೀ ಬಂಡಾರು ತಮ್ಮಯ್ಯನವರು ಒಂದು ಲೇಖನವನ್ನು ಇವನ ವಿಷಯವಾಗಿ ಬರೆದಿದ್ದಾರೆ. ಅವರು ಈ ಗ್ರಾಮವು ಹೈದ್ರಾಬಾದ ಸಂಸ್ಥಾನದಲ್ಲಿದೆ ಎಂತಲೂ ಇಲ್ಲಿ "ಸೋಮೇಶ್ವರ ಸ್ವಾಮಿ" ಯ ದೇವಾಲಯವಿರುತ್ತದೆಂತಲೂ ಕಾಣಿಸಿದ್ದಾರೆ. ಆದ್ದರಿಂದ ಈ ಗ್ರಾಮವೇ ಸೋಮಾರಾಧ್ಯನು ವಾಸಿಸುತ್ತಿದ್ದ ಗ್ರಾಮವಾಗಿರಬೇಕು.

ಈ ಗ್ರಾಮವು ಆಂಧ್ರದೇಶದಲ್ಲಿದ್ದರೂ ಕನ್ನಡ ನಾಡಿನ ಮೇರೆಯು ಅಲ್ಲಿಂದ ಬಹು ದೂರವಿರುವದಿಲ್ಲ. ಆದ್ದರಿಂದ ಸೋಮಾರಾಧ್ಯನು ಕರ್ನಾಟಕ ಪ್ರಾಂತವನ್ನು ಇಲ್ಲಿಂದ ಸಂಚರಿಸಿ ಈ ಕಾಲವಲ್ಲಿ ಆಗಿ ಹೋಗಿದ್ದ ಶಿವಶರಣರ ಚರಿತ್ರೆಗಳನ್ನು ಸಂಗ್ರಹಿಸಿದಹಾಗೆ ತೋರುತ್ತದೆ.

ಸೋಮಾರಾಧ್ಯನ ಸಮಾಧಿಯು ಬೆಂಗಳೂರು ಜಿಲ್ಲಾ ಮಾಗಡಿ ತಾಲೂಕಿನಲ್ಲಿರುವ 'ಕಳ್ಳಿಯು' ಈ ಗ್ರಾಮವೇ ಇರುತ್ತದೆ.

ಈ ಬಂಡಾರು ತಮ್ಮಯ್ಯನವರ ಲೇಖನವನ್ನು ಶಿವಾನುಭವ ಪತ್ರಿಕೆಯಲ್ಲಿ ಮುದ್ರಣ ಮಾಡಲು ಅನುಮತಿಯನ್ನು ಇತ್ತದ್ದಕ್ಕೋಸ್ಕರ ನಾವು ಆಸ್ಥಾನ ವಿದ್ವಾನ್ ಬಿ. ಶಿವಮೂರ್ತಿ ಶಾಸ್ತ್ರಿಗಳಿಗೆ ಬಹಳ ಆಭಾರಿ ಆಗಿದ್ದೇವೆ. —ಸಂಪಾದಕ: 'ಶಿವಾನುಭವ')

ಶ್ರೀ. ನಾರಾಯಣರಾಯರ ಈ ನವೀನ ವಾದವನ್ನು ವಿಭೂತಿಪತ್ರಿಕಾಧಿಪತಿಗಳಾದ ಶ್ರೀ ಚಿದಿರೆಮಠದ ವೀರಭದ್ರ ಶರ್ಮರು ವಿಭೂತಿ ಪತ್ರಿಕೆಯ ( ಸಂಪುಟ ೨. ಸಂಚಿಕೆ ೧ ) ಲ್ಲಿಯೂ " ಬಸವಪುರಾಣ-ತತ್ಕೃತಿ ವಿಶೇಷಗಳು " [ ವಿಭೂತಿ ಸಂ॥ ೪, ಸಂಚಿಕೆ ೧ ] ಎಂಬ ಪ್ರಬಂಧದಲ್ಲಿ ಶ್ರೀ. ಶೇಷಾದ್ರಿ ರಮಣ ಕವಿಗಳೂ ಸಹ ವಿಮರ್ಶಿಸಿದ್ದಾರೆ. ಇತರತ್ರ ಇನ್ನೂ ಕೆಲವರು ಇದನ್ನು ಚರ್ಚಿಸಿದ್ದಾರೆ. ಶ್ರೀ ನಾರಾಯಣರಾಯರು ಇವುಗಳಲ್ಲಿ ಯಾವದಕ್ಕೂ ಸರಿಯಾದ ಸಮಾಧಾನಗಳನ್ನು ಹೇಳಲಾರದೆ ಶ್ರೀ ವೀರಭದ್ರ ಶರ್ಮರಿಗೆ ಪ್ರಾರ್ಥನಾಪೂರ್ವಕವಾಗಿ "ಪಾಲ್ಕುರಿಕಿ" ಎಂಬ ಶಿರೋನಾಮೆಯುಳ್ಳ ಒಂದು ಸಣ್ಣ ಲೇಖನವನ್ನು ಬರೆದರು. [ ಭಾರತಿ, ಸಂಪುಟ ೨೦. ಸಂಚಿಕೆ ೨ ] ಅದರಲ್ಲಿ, ತಮ್ಮ ಹಾಲಕುರಿಕೆ ವಾದವು

ಕೇವಲ ಹೊಸತೆಂದೂ, ಪಾಲಕುರಿಕೆ ಗ್ರಾಮ ನಾಮಾಂತರ ವಿಚಾರವೇ ನೂತನವೆಂದೂ ಹೇಳಿದ್ದಾರೆ. ಹಾಲಕುರಿಕೆ ಪ್ರಾಂತದಲ್ಲಿ ಈಗ ತೆಲಗು ಭಾಷೆ ವ್ಯವಹಾರದಲ್ಲಿ ಅಷ್ಟಾಗಿ ಇಲ್ಲದಿದ್ದರೂ, ಪೂರ್ವದಲ್ಲಿ ಇರಬಹುದೆಂದಾಗಲಿ, "ಪಾಲಕುರಿಕೆ" ಕನ್ನಡ ಪ್ರಾಂತ ಶಾಸನಗಳಲ್ಲಿ "ಪಾಲ್ಕುರಿಕೆ" ಎಂಬ ಹೆಸರಿನಿಂದ ವಿರಾಜಿಸುತ್ತಿತ್ತೆಂದಾಗಲಿ, ಅಂತಹ ಶಾಸನ ಪ್ರಮಾಣವನ್ನೊಂದಾದರೂ ಅಲ್ಲಿ ಉದಾಹರಿಸಿಲ್ಲ. ಮಾತ್ರವಲ್ಲದೆ, ಪಾಲಕುರ್ಕಿ ಎಂಬುದೇ ಪಾಲಕುರಿಕೆ ಎಂಬ ನಿಶ್ಚಿತ ವಾದವನ್ನು ಪ್ರಾರಂಭಿಸಿದವ ನಾನೇ ಎಂಬುದಾಗಿಯೂ, ನನ್ನ ಮಾತುಗಳನ್ನು ನಂಬಿ ಅವನ್ನು ಸಮರ್ಥಿಸಲು ಶ್ರೀ ವೀರಭದ್ರ ಶರ್ಮರು ತಮ್ಮ ಹಾಲಕುರಿಕೆ ವಾದವನ್ನು ಖಂಡಿಸಲು ಪ್ರಯತ್ನಿಸಿದರೆಂದೂ ಸಹ ಶ್ರೀ ನಾರಾಯಣರಾಯರು ಬರೆದಿದ್ದಾರೆ: ಇದೆಲ್ಲ ಕೇವಲ ಸಾಹಸದ ಮಾತುಗಳೆಂದು ಹೇಳಲು ವಿಷಾದವೆನಿಸುತ್ತದೆ. ದುಂದುಭಿ ಸಂವತ್ಸರದ ಆಂಧ್ರಪತ್ರಿಕೆಯ ಯುಗಾದಿ ಸಂಚಿಕೆಯಲ್ಲಿ ಸೋಮನಾಥನನ್ನು ಪಾಲಕುರಿಕೆ, ನಿಜಾಮ ರಾಜ್ಯದಲ್ಲಿ "ಪಾಲಕುರ್ಕಿ" ಎಂದು ವ್ಯವಹರಿಸಲ್ಪಡುತ್ತಿರುವುದು ನನಗೆ ತಿಳಿದಿರಲೇ ಇಲ್ಲ. ಅನಂತರವೇ ತಿಳಿದದ್ದು. ಏಕಾಮ್ರನಾಥನ ಪ್ರತಾಪ ಚರಿತ್ರೆಯಲ್ಲಿಯೂ ಮತ್ತು ಕೆಲವು ಬಸವ ಪುರಾಣಗಳಲ್ಲೂ ಈತನನ್ನು "ಪಾಲಕುರ್ಕಿ ಸೋಮನಾಥನೆಂದೇ ಸ್ಮರಿಸಲಾಗಿದೆ. ಆದ್ದರಿಂದ ಪಾಲಕುರಿಕೆ" "ಪಾಲಕುರ್ಕಿ" ಎಂದು ಈಗ ನೂರು ವರ್ಷಗಳ ಹಿಂದೆಯೇ ವ್ಯವಹರಿಸಲ್ಪಟ್ಟು ಈಗಲೂ ಅದೇ ನಡೆದು ಬರುತ್ತಿರುವುದೆಂದು ತೋರುತ್ತದೆ. ಎಂದಿನಿಂದಲೂ ಹೀಗೆ, ವ್ಯವಹಾರದಲ್ಲಿರಲಿ, ಸೋಮನಾಥನ ಕಾಲದಲ್ಲಿ ಮಾತ್ರ "ಪಾಲಕುರಿಕೆ" ಎಂದೇ ಇತ್ತೆಂಬುದು ಆತನ ಕೃತಿಗಳಿಂದಲೇ ಪ್ರಮಾಣಿತವಾಗಿದೆ. ತೋಂಟದಾರ್ಯನ ಸೋಮೇಶ್ವರ ಪುರಾಣದಲ್ಲಿ "ಶ್ರೀಶೈಲಕ್ಕೆ ಈಶಾನ್ಯ ಪ್ರಾಂತದಲ್ಲಿರುವ ಪಾಲಕುರಿಕೆಯಲ್ಲಿ ಸೋಮನಾಥನು ಅವತರಿಸಿದನು. ಆ ಪ್ರಾಂತದಲ್ಲಿಯೇ ತನ್ನ ಅನನ್ಯ ಮಹಿಮೆಗಳಿಂದ ಶೋಭಿಸುವ ಸೋಮೇಶ್ವರ ಸ್ವಾಮಿಯು "ಕೊಲನ್ಪಾಕು" ಗ್ರಾಮದಲ್ಲಿ ನೆಲಸಿರುವನು. ಈ ಸ್ವಾಮಿಯನ್ನು ಸೇವಿಸಿ, ಅನುಗೃಹೀತರಾಗಿ ತಂದೆತಾಯಿಗಳು ಈತನಿಗೆ ಸೋಮನಾಥ ಎಂದು ನಾಮಕರಣ ಮಾಡಿದರು ಎಂದು ಬರೆಯಲಾಗಿದೆ. ತೋಂಟದಾರ್ಯನ ಸಮಕಾಲೀನನಾದ ಪಿಡುಪರ್ತಿ ಸೋಮನಾಥನ ಪದ್ಯ ಬಸವಪುರಾಣದಲ್ಲಿ ಸಹ, ಈ ಪಾಲಕುರಿಕೆ ಓರಂಗಲ್ಲು ಪ್ರಾಂತದಲ್ಲಿರುವ ಗ್ರಾಮವೆಂದು ಸ್ಪಷ್ಟ

ವಾಗಿ ವಿಶದವಾಗುತ್ತದೆ. ಏಕಾಮ್ರನಾಥನ ಪ್ರತಾಪಚರಿತ್ರೆಯೂ, ಇದನ್ನು ಪುಷ್ಟೀಕರಿಸುತ್ತದೆ. ಆದ್ದರಿಂದ ಪೂರ್ವಾಂಧ್ರ ಕರ್ನಾಟಕ ಕವಿಗಳೆಲ್ಲರೂ ಸೋಮನಾಥನ ಜನ್ಮಸ್ಥಾನ ನಿಜಾಮು ಪ್ರಾಂತದ ಪಾಲಕುರಿಕೆಯೆಂದೇ ತಿಳಿದಿದ್ದರೆಂದು ಸ್ಪಷ್ಟವಾಗುತ್ತದೆ. ಕನ್ನಡ ಕವಿ ಚರಿತ್ರಕಾರರಾದ ರಾವು ಬಹದ್ದೂರ್. ಪ್ರಾಕ್ತನ ವಿಮರ್ಶ ವಿಚಕ್ಷಣ ಶ್ರೀ. ರಾ. ನರಸಿಂಹಾಚಾರ್ಯರೂ ಸಹ ಉಪಯುಕ್ತ ರೀತಿಯಲ್ಲಿಯೇ ನಿರ್ಣಯಿಸಿರುತ್ತಾರೆ. ಶ್ರೀ ರೈಸು ಸಾಹೇಬರು ತಮ್ಮ "Kanarese Literature" [ ಕನ್ನಡ ಸಾಹಿತ್ಯ ] ದಲ್ಲಿ "ಸೋಮನಾಥನು ಗೋದಾವರೀ ಪ್ರಾಂತದವನು, ಆದ್ದರಿಂದ ಗೋದಾವರೀ ಪ್ರಾಂತದಲ್ಲಿನ "ಪಾಲಕುರಿಕೆ"ಯೇ ಈತನ ಜನ್ಮಸ್ಥಾನವೆಂದಿರುವರು. ಹೀಗಿರುವಾಗ ಸತ್ಯವನ್ನು ಮರೆಮಾಚಿ ಶ್ರೀ ನಾರಾಯಣರಾಯರು "ಪಾಲಕುರಿಕಿ" ವಾದವನ್ನು ಪ್ರಾರಂಭಿಸಿದವನು ನಾನೆಂದು ಹೇಳುವುದು ಅತಿಸಾಹಸ. "ಮುರಾರೇಃ ಸ್ತೃತೀಯಃ ಪಂಥಾಃ" ಎಂಬಂತೆ ತೃತೀಯ ಪಂಥವಾಗಿ ಒಂದು ಹೊಸ ವಾದವನ್ನು ಪ್ರಕಟಿಸಬೇಕೆಂಬ ಅಭಿಲಾಷೆಯಿಂದಲೇ ಶ್ರೀ ನಾರಾಯಣರಾಯರು ಏಕಾರಾಂತವಾದ "ಹಾಲಕುರಿಕೆ" ಯನ್ನು "ಹಾಲಕುರಿಕಿ" ಎಂದು ಇಕಾರಾಂತವಾಗಿ ಮಾಡಿದರೆಂದು, ಸಹೃದಯರೆಲ್ಲರೂ ತಿಳಿಯುವರು. ಆಂಧ್ರ, ಕರ್ನಾಟಕ ಕವಿಗಳಲ್ಲಿ ಅಥವಾ ಆಧುನಿಕ ವಿಮರ್ಶಕರಲ್ಲಿ ಈ ಮೊದಲು ಒಬ್ಬರಾದರೂ ಶ್ರೀ ನಾರಾಯಣರಾಯರ "ಹಾಲಕುರಿಕೆ"ಯನ್ನು ಸೋಮನಾಥನ ಜನ್ಮಸ್ಥಳವೆಂದು ಹೇಳಿಲ್ಲ. ಯಾವ ಶಾಸನದಲ್ಲೂ ಹಾಲಕುರಿಕೆ "ಪಾಲಕುರಿಕೆ" ಅಥವಾ "ಪಾಲಕುರಿಕಿ" ಎಂದು ವ್ಯವಹರಿಸಲ್ಪಟ್ಟಿತ್ತೆಂಬುದು ಶ್ರೀ ನಾರಾಯಣರಾಯರ ವಾದಕ್ಕೆ ಸಹಕಾರಿಯಾದ ಪ್ರಮಾಣವಾಗಲಾರದು. ಒಂದೇ ಹೆಸರಿನ ಗ್ರಾಮಗಳು, ಬೇರೆ ಬೇರೆ ಪ್ರಾಂತಗಳಲ್ಲಿ ಅಥವಾ ಒಂದೇ ಪ್ರಾಂತದಲ್ಲಿ ಅದೂ ಒಂದೇ ತಾಲೂಕಿನಲ್ಲಿ ಈಗಲೂ ಸಹ ಇವೆ. ಹಾಗೆಯೇ ಪಾಲಕುರಿಕಿ ಎಂಬ ಗ್ರಾಮಗಳೂ ಬೇರೆ ಬೇರೆ ಕಡೆಗಳಲ್ಲಿ ಕಂಡುಬರಬಹುದು. ಆದರೂ, ವಾಸ್ತವವಾಗಿಯೂ, ಅಷ್ಟು ಒಂದೇ ಹೆಸರಿನ "ಪಾಲಕುರಿಕಿ" ಗ್ರಾಮಗಳಲ್ಲಿ ಸೋಮನಾಥನ ಜನ್ಮಸ್ಥಾನ ಗ್ರಾಮವಾವುದೆಂಬುದನ್ನು ಶೃಂಗಗ್ರಾಹಿ ನ್ಯಾಯದಿಂದ ನಿರ್ಣಯಿಸಬೇಕಾದುದು ಇತಿಹಾಸಕಾರರ ಧರ್ಮ. ಶ್ರೀ ವೀರಭದ್ರ ಶರ್ಮರು ಮೈಸೂರು ರಾಷ್ಟ್ರದಲ್ಲಿನ ತುಮಕೂರು ಜಿಲ್ಲಾ ತಿಪಟೂರು ತಾಲೂಕಿನ "ಹಾಲಕುರಿಕೆ" ಯನ್ನು ತಾವು ಸ್ವತಃ ಸಂದರ್ಶಿ

ಸಿದರೆಂದು ಅಲ್ಲಿ ವಿಷಯಗಳನ್ನು ಕುರಿತು ಪೂರ್ವೋಕ್ತ ವಿಮರ್ಶನಾ ನಂತರ, (ವಿಭೂತಿ-ಸಂಪುಟ ೪. ಸಂಚಿಕೆ ೭—೮—೯ ಗಳಲ್ಲಿ) "ಹಾಲ ಕುರಿಕೆ" ಎಂಬ ಶೀರ್ಷಿಕೆಯಿಂದ ಮತ್ತೊಂದು ಲೇಖನವನ್ನು ಬರೆದಿರುವರು. ಅದನ್ನು ಓದಿದವರು ಶ್ರೀ ನಾರಾಯಣರಾಯರ ವಾದದಲ್ಲಿ ನಿಸ್ಸಾರತೆಯನ್ನು ಮತ್ತು ಅಸಮಂಜಸವನ್ನು ತಿಳಿಯುವರು. ಶ್ರೀ ನಾರಾಯಣರಾಯರು (ಭಾರತಿ ೨೦ನೇ ಸಂಪುಟ ೭ನೇ ಸಂಚಿಕೆಯಲ್ಲಿ) ತಾವು ಪ್ರಕಟಿಸಿದ ಪ್ರಬಂಧವನ್ನು ಬರೆಯುವಾಗ್ಗೆ ಬಹುಶಃ ಶ್ರೀ ಶರ್ಮರವಿಭೂತಿ ಸಂಚಿಕೆಯಲ್ಲಿನ "ಪಾಲುಕುರಿಕೆ" ಎಂಬ ಪ್ರಬಂಧವನ್ನು ಓದಿರಲಾರರು. ಆ ಗ್ರಾಮದಲ್ಲಿ ಯಾರಿಗೂ ಕನಿಷ್ಟಪಕ್ಷ ವೀರಶೈವರಿಗೂ ಕೂಡ, ಪಾಲಕುರಿಕಿ ಸೋಮನಾಥನ ಹೆಸರಾದರೂ ತಿಳಿದಿಲ್ಲವೆಂದು ಶ್ರೀ ಶರ್ಮರು ಬರೆದಿರುವರು. ಸೋಮನಾಥನ ಕಾಲಕ್ಕೆ ಅಲ್ಲಿ ಶಿವಾಲಯವಾದರೂ ಸ್ಥಾಪಿತವಾಗಿರಲಿಲ್ಲ. ಅದು ಇಂತಹ ಕುಗ್ರಾಮ. ಅಲ್ಲಿ ಶಿವಾಲಯವೊಂದು ಸ್ಥಾಪಿತವಾಗಿ ಇನ್ನೂರು ವರ್ಷಗಳಿಗೆ ಅಧಿಕವಾಗಿಲ್ಲವೆಂದು ಸಪ್ರಮಾಣವಾಗಿ ತಿಳಿದಿದೆ.

## ೪. ಪ್ರಕರಣ ಪಾಲಕುರಿಕೆ ವೃತ್ತಾಂತ.

ಪರಮಪೂಜ್ಯನಾದ, ಸೋಮನಾಥನ ಜನ್ಮಸ್ಥಾನವೂ, ಮತ್ತು ಮನೆಯ ಹೆಸರೂ ಆಗಿ ಒಪ್ಪುವ ಈ "ಪಾಲಕುರಿಕಿ"ಯು ಆಂಧ್ರ ಭಾಷಾಭಿಮಾನಿಗಳಿಗೆಲ್ಲ ಪುಣ್ಯಪ್ರದವಾದ ದಿವ್ಯ ಕ್ಷೇತ್ರವಾಗಿದೆ. ಇಂತಹ ಈ ದಿವ್ಯಕ್ಷೇತ್ರ ವೃತ್ತಾಂತವನ್ನು ಪಾಠಕರಿಗೆ ನಿವೇದಿಸುವುದು ಆವಶ್ಯಕ. ವಿಭೂತಿ ಪತ್ರಿಕಾಧಿಪತಿಗಳು ಈ ಕ್ಷೇತ್ರ ದರ್ಶನವನ್ನು ಮಾಡಿ, ಮೇಲಿನ ಶಿರೋನಾಮೆಯಲ್ಲಿ ಒಂದು ಪ್ರಬಂಧವನ್ನು ತಮ್ಮ ಪತ್ರಿಕೆಯಲ್ಲಿ [ಸಂಪುಟ ೩, ಸಂಚಿಕೆ ೬] ಪ್ರಕಟಮಾಡಿದ್ದಾರೆ. ಅದರಲ್ಲಿನ ವಿಷಯಗಳು ಕೆಲವನ್ನು ಇಲ್ಲಿ ವಿವರಿಸಲಾಗುವುದು.

ಈ ಗ್ರಾಮವು ಓರುಗಲ್ಲಿಗೆ ಹನ್ನೆರಡು ಹರದಾರಿಗಳ ದೂರದಲ್ಲಿರುವ ಜನಗಾಂ ತಾಲೂಕಿಗೆ ಸೇರಿದೆ. ಹೈದರಾಬಾದಿನಿಂದ ಬರುವವರು ನಿಜಾಂ ಸ್ಟೇಟು ರೈಲು ಮಾರ್ಗದಲ್ಲಿ ಜನಗಾಂ ಸ್ಟೇಶನಿನಲ್ಲೂ, ಬೆಜವಾಡ ದಾರಿಯಿಂದ ಬರುವವರು ಗಣಪುರದ ಸ್ಟೇಶನ್ನಿನಲ್ಲಿಯೂ ಇಳಿದು ಆರು ಮೈಲುಗಳೂ ಬಸ್ಸಿನಲ್ಲೂ, ತರುವಾಯ ಹನ್ನೆರಡು ಮೈಲು ಎರಡೆತ್ತಿನ ಬಂಡಿಗಳಲ್ಲಿಯೂ

ಪ್ರಯಾಣ ಮಾಡಿ ಪಾಲಕುರಿಕೆಯನ್ನು ಸೇರಬ[illegible] ಈ ದಿನ ಅದು ಚಿಕ್ಕ ಗ್ರಾಮವಾಗಿಯೇ ಇದೆ. ಆದರೆ "ಕೊ[illegible]ನಾಯು ಗೊದವ ಕಾದು" [ಮೂರ್ತಿ ಚಿಕ್ಕದಾದರೂ-ಕೀರ್ತಿ ಕಡಿಮೆಯಿಲ್ಲ] ಎಂದು ಹೇಳಿದ ವೇಮನನ ಮಾತಿನಂತೆ ಗ್ರಾಮವು ಚಿಕ್ಕದಾದರೂ ಕ್ಷೇತ್ರ ಮಹತ್ವಕ್ಕೆ ಏನೂ ಕಡಿಮೆಯಿಲ್ಲ. ಗ್ರಾಮಕ್ಕೆ ಪಶ್ಚಿಮದಲ್ಲಿ ಎರಡು ಮೂರು ಫರ್ಲಾಂಗುಗಳ ದೂರದಲ್ಲಿ ಉದ್ದವಾದ ಪರ್ವತವೊಂದು ಇದೆ. ಆ ಪರ್ವತ ಕಲ್ಲಿನ ಒಂದು ಗುಹೆಯಲ್ಲಿ ಸ್ವಯಂಭೂ ಪರಮೇಶ್ವರನು ಲಿಂಗಸ್ವರೂಪದಲ್ಲಿ ವಿರಾಜಿಸುತ್ತಿದ್ದಾನೆ. ಉತ್ತರ ಮುಖದ ಆ ಗುಹಾಲಯವು ತಗ್ಗಾಗಿರುವುದರಿಂದ, ಸ್ವಾಮಿಯ ದರ್ಶನಕ್ಕೆ ಬಗ್ಗಿ ಹೋಗಬೇಕು. ಸ್ವಾಮಿಯ ಎದುರಿನಲ್ಲಿ ಶಿಲ್ಪಕಲೆಯಿಂದೊಪ್ಪುವ ಪ್ರಾಚೀನವಾದ ನೀಲನಂದೀಶ್ವರ ವಿಗ್ರಹವೊಂದಿದೆ. ಎಡಭಾಗದಲ್ಲಿ ಮತ್ತೊಂದು ಸಣ್ಣ ಗುಹೆಯಲ್ಲಿ ನರಸಿಂಹ ಸ್ವಾಮಿಯ ವಿಗ್ರಹವಿದೆ. ಪೂರ್ವದಲ್ಲಿ, ಇದು ಉಮಾದೇವಿಯ ಮಂದಿರವೆಂದೂ ತರುವಾಯ ಯಾರೋ ಅಲ್ಲಿ ನರಸಿಂಹ ವಿಗ್ರಹವನ್ನು ಪ್ರತಿಷ್ಠಿಸಿರುವರೆಂದೂ ಅಲ್ಲಿಯವರು ಹೇಳುತ್ತಾರೆ. ಈ ಬೆಟ್ಟದ ಮೇಲಿನಿಂದ ನಿಂತು ನೋಡಿದರೆ ಎರಡು ಮೈಲುಗಳ ದೂರದಲ್ಲಿ "ಬಮ್ಮೆರ" ಎಂಬ ಗ್ರಾಮವು ದೃಷ್ಟಿಗೋಚರವಾಗುವುದು. ಆಂಧ್ರ ಭಾಗವತದ ರಚನೆಕಾರಣನಾದ ಪೋತನಾಮಾತ್ಯನ ಜನ್ಮಸ್ಥಾನವೂ ಇದೆ. ವರ್ಷಂಪ್ರತಿ ಮಹಾಶಿವರಾತ್ರಿಯ ದಿನ ಇಲ್ಲಿ ಸೋಮೇಶ್ವರ ಸ್ವಾಮಿಗೆ ಬಹು ಮಹತ್ತರವಾದ ಉತ್ಸವ ಕೈಂಕರ್ಯವು ನಡೆಯುವುದು. ಯಾತ್ರಿಕರು ವಿಶೇಷವಾಗಿ ಸೇರುವರು. ಧ್ವಜಸ್ತಂಭವು ಬೆಟ್ಟದ ಮೇಲೆ ಇಲ್ಲ. ಕೆಳಭಾಗದಲ್ಲಿ ಮಾತ್ರವಿದೆ. ಅದರ ಮೇಲೆ "ಶ್ರೀ ಪಾಲುಕುರಿಕಿ ಸೋಮೇಶ್ವರ ಸ್ವಾಮಿ" ಎಂದು ಕೆತ್ತಿರುವ ಅಕ್ಷರಗಳಿವೆ. ಪಾಲ್ಕುರಿಕಿ ಸೋಮನಾಥ ಕವಿಯ ಪೂರ್ವಿಕರು ಈ ಸೋಮೇಶ್ವರ ಸ್ವಾಮಿಯ, ಪರಂಪರಾಗತ ಅರ್ಚಕರೆಂದೂ, ಈ ಸೋಮೇಶ್ವರ ಸ್ವಾಮಿಯ ಅನುಗ್ರಹದಿಂದ ಉದಯಿಸಿದವನಾದುದರಿಂದಲೇ, ತಂದೆತಾಯಿಗಳು ಈತನಿಗೆ ಸೋಮನಾಥನೆಂದು ನಾಮಕರಣ ಮಾಡಿದರೆಂದೂ ಈ ಹಿಂದೆಯೇ ಹೇಳಲಾಗಿದೆ. ಭಕ್ತಿ ಪರವಶತೆಯಿಂದ ಯುಕ್ತವಾದ ಅನನ್ಯ ಸದೃಶವೂ, ಅದ್ಭುತವೂ ಆದ ಕವಿತಾ ಮಹತ್ವವು ಶ್ರೀ ಸೋಮನಾಥನಿಗೆ ಈ ಸ್ವಾಮಿಯ ಪ್ರಸಾದದಿಂದಲೇ ಪ್ರಾಪ್ತವಾಗಿರಬೇಕೆಂದು ಹೇಳಬೇಕಾಗಿಲ್ಲ. ಮಾತ್ರವಲ್ಲ. ಬಮ್ಮೆರಪೋತನಾಮಾತ್ಯ

ಕವಿತಾ ಮಹಾತ್ಮ್ಯೆಗೂ ಸಹ ಈ ಸ್ವಾಮಿಯ ವರಪ್ರಸಾದವೇ ಕಾರಣವೆ ನ್ನುತ್ತಾರೆ. ಪಾಲಕುರಿಕೆಯಲ್ಲಿ ಮಹಾಶಿವರಾತ್ರಿ ಉತ್ಸವಕಾಲದಲ್ಲಿ ಯಾತ್ರಿ ಕರು "ಪಾಲಕುರ್ಕಿ ನಿಲಯ ಸೋಮಲಿಂಗಾ! ಪಾದಮುಲಕು ಶರಣು! ಉರಲುಗ ಬಸ್ಮೆರಪೋತ ರಾಜನಕು ಮೀರು ಕೋರಿನ ವರಮುಲ ಕೃಪ ಚೇಸಿನಾರಟ! ಪಾಲಕುರ್ಕಿನಿಲಯ" [ಎಲೈ ಪಾಲಕುರಿಕಿ ಸೋಮೇಶ್ವರ ಸ್ವಾಮಿ! ನಿನ್ನ ಪಾದಗಳೇ ಶರಣು! ಪೋತನಾಮಾತ್ಯನಿಗೆ ಬೇಡಿದ ವರ ಗಳನ್ನು ದಯಪಾಲಿಸಿರುವ ಸ್ವಾಮಿ] ಎಂದು ಹಾಡುತ್ತಿರುವುದು ಶ್ರವಣ ಗೋಚರವಾಗುವುದು. ಭಕ್ತಿರಸ ಪ್ರವಾಹದಲ್ಲಿ ತೇಲಾಡಿಸಿ ಮುಳುಗಿಸಿ ಆನಂದವನ್ನೀಯುವ ಇಬ್ಬರು ಸುಪ್ರಸಿದ್ಧ ಮಹಾಕವಿಗಳನ್ನು ಕರುಣಿಸಿದ ಈ ಸೋಮೇಶ್ವರ ಸ್ವಾಮಿಯನ್ನು ಸಂದರ್ಶಿಸಿ, ಪೂಜಿಸಿ, ಪುಣ್ಯಭಾಗಿಗ ಳಾಗಬೇಕಾದುದು ಪ್ರತಿಯೊಬ್ಬ ಭಾರತೀಯ ಆಸ್ತಿಕನ ಕರ್ತವ್ಯವಾಗಿದೆ.

ಸೋಮೇಶ್ವರಾಲಯವಿರುವ ಬೆಟ್ಟಕ್ಕೆ ಪೂರ್ವ ಭಾಗದಲ್ಲಿ ಸ್ವಲ್ಪ ದೂರದಲ್ಲಿ ಸೋಮನಾಥ ಕವಿಯ ಸಮಾಧಿ ಇದೆ. ಅದರ ಮೇಲೆ ಸೋಮನಾಥ ಲಿಂಗವನ್ನು ಪ್ರತಿಷ್ಠಿಸಿ ಸಣ್ಣ ಆಲಯವೊಂದನ್ನು ನಿರ್ಮಿಸ ಲಾಗಿದೆ. ಇದಕ್ಕೆ ಸೋಮನಾಥಾಲಯವೆಂದು ವ್ಯವಹಾರವಿದೆ. ಈ ದೇವಾಲಯದ ಗರ್ಭಮಂದಿರದಲ್ಲಿ ಸೋಮನಾಥನ ಸಮಾಧಿ ಲಿಂಗವೂ, ಪಕ್ಕದಲ್ಲಿ, ತಾಮ್ರಲೋಹದ ವೀರಭದ್ರ ಪ್ರತಿಮೆಗಳು ಕೆಲವೂ ಇವೆ. ಮಂಟಪದ ದೇವಾಲಯದ ಪಕ್ಕದಲ್ಲಿ ಒಂದು ಮೂಲೆಯಲ್ಲಿ ಅರ್ಧ ಭಾಗದ ವರೆಗೂ ಹೂತುಹೋಗಿರುವ ಗಣಪತಿ ವಿಗ್ರಹವೂ ಮತ್ತು ನಾಗ ಕನ್ಯೆ ವಿಗ್ರಹಗಳೂ; ಭೈರವ ದ್ವಾರಪಾಲಕ ವಿಗ್ರಹಗಳೂ ಇವೆ. ಈ ಮಂಟಪಕ್ಕೆ ಪೂರ್ವದಿಕ್ಕಿನಲ್ಲಿ ಹತ್ತಿರವಾಗಿ ಧ್ವಜಸ್ತಂಭವೂ ಅದರ ಸಮೀ ಪದಲ್ಲಿ ಜಟಾ ರುದ್ರಾಕ್ಷಿಗಳಿಂದ ಅಲಂಕಾರವಾಗಿ ಹೃದಯಗಳ ಕಂಕಮುಲ ಯುಗ್ಮಗಳಿಂದ ಶಿವಲಿಂಗವನ್ನು ಪೂಜಿಸುತ್ತಿರುವ ಶಿಲಾವಿಗ್ರಹವೂ ಇದೆ. ವಿಗ್ರಹದ ಕೆಳಭಾಗದಲ್ಲಿ ಪುರಾತನಾಂಧ್ರ ಲಿಪಿಯಲ್ಲಿ ಹೆಸರು ಕೂಡ, ಬರೆಯಲಾಗಿದೆ. ಆದರೆ ಬಹು ಪುರಾತನವಾಗಿ ಸವೆದು ಹೋಗಿರುವುದ ರಿಂದ ಕೇವಲ ಸೋ-ನಾ. ಎಂಬ ಎರಡೇ ಅಕ್ಷರಗಳು ಅಸ್ಪಷ್ಟವಾಗಿ ಕಾಣಿ ಸುತ್ತವೆ. ಇದು ಸೋಮನಾಥನ ವಿಗ್ರಹವೇ ಎನ್ನಲು ಸಂಶಯವಿಲ್ಲ. ಸೋಮನಾಥ ಕ್ಷೇತ್ರವು ವಿಶೇಷ ಮಹಿಮಾನ್ವಿತವಾಗಿ ಭಕ್ತರಿಗೂ, ರೋಗಿ

ಗಳಿಗೂ, ಕಾವ್ಯಾದಿಗಳಿಗೂ, ಅರ್ತರಿಗೂ ಯಾತ್ರಾರಂಗವಾಗಿ ಪ್ರಕಾಶಿಸುತ್ತದೆ. ಸುತ್ತಲೂ ಇಪ್ಪತ್ತು ಗಾವುದಗಳ ದೂರದಿಂದ ದಿನಂ ಪ್ರತಿ ಯಾತ್ರಿಕರು ಇಲ್ಲಿಗೆ ಬರುತ್ತಾರೆ. ಯಾತ್ರಿಕರಿಗಾಗಿಯೇ ಈ ಸೋಮನಾಥಾಲಯದ ಉತ್ತರದಲ್ಲೂ ಪೂರ್ವದಲ್ಲೂ ಸಹ ಹದಿನೈದು ಧರ್ಮಶಾಲೆಗಳಿವೆ. ರೋಗನಿವಾರಣಾದಿ ಮಹಿಮೆಗಳಿಗೆ ಇಲ್ಲಿನ ಸೋಮನಾಥನ ಯಂತ್ರ ಮಂತ್ರ ಪುರಶ್ಚರಣೆ ಅಷ್ಟದಿಗ್ಬಂಧಾದಿಗಳು ಕಾರಣ. ದೇವಾಲಯದ ದಕ್ಷಿಣ ಭಾಗದಲ್ಲಿ ಸ್ವಲ್ಪ ದೂರದಲ್ಲಿ ಹೊಲಗಳಲ್ಲಿ ಹೂತುಹೋಗುವ ವಿಗ್ರಹಗಳೂ ಶಿಲ್ಪಕಲಾಪೂರ್ಣ ಶಿಲಾಖಂಡಗಳೂ ಇವೆ. ಹೀಗೆಯೇ ಎಂಟು ದಿಕ್ಕುಗಳಲ್ಲಿ ಯಂತ್ರದಿಗ್ಬಂಧ ಸ್ಥಾನಗಳು ಇವೆಯೆಂದು ದೇವಸ್ಥಾನಾಧಿಕಾರಿಗಳು ಹೇಳುತ್ತಾರೆ. ಇಷ್ಟು ಮಹಿಮೆಗಳಿಂದ ಕೂಡಿದ್ದರೂ ಸಹ ದೇವಾಲಯಾಧಿಕಾರಿಗಳ ಮತ್ತು ಅರ್ಚಕರ ಅಶ್ರದ್ಧೆ, ಅನಾದರ ಮತ್ತು 'ಅಲಕ್ಷ್ಯಗಳಿಂದ ಆಲಯವು ಜೀರ್ಣವಾಗಿರುವುದು ಮಾತ್ರವಲ್ಲದೆ ಗೋಡೆಗಳೂ, ಕೆಲವು ಭಾಗಗಳೂ ಬಿದ್ದುಹೋಗುವುವೆಂಬ ಶಂಕೆಯುಂಟಾಗುತ್ತದೆ. ಈಗಾಗಲೇ ಪ್ರಾಕಾರವು ಕಾಣಿಸುತ್ತಲೇ ಇಲ್ಲ. ಈ ಶೋಚನೀಯ ಸ್ಥಿತಿಯನ್ನು ಹೋಗಲಾಡಿಸುವುದು ನಮ್ಮೆಲ್ಲರ ಆಸ್ತಿಕರ ಕರ್ತವ್ಯ.

ಸೋಮೇಶ್ವರಾಲಯವಿರುವ ಬೆಟ್ಟದ ತಪ್ಪಲಲ್ಲಿ ದೊಡ್ಡ ದೊಡ್ಡ ಜೇನು ಗೂಡುಗಳು ಮೂವತ್ತುಮೂರು ಈಗಲೂ ಸರ್ವದಾ ಕಾಲದಲ್ಲಿಯೂ ಕಾಣಿಸುತ್ತವೆ. ಈ ದೇವಾಲಯಕ್ಕೆ ಅಶುಚಿಯಾಗಿ ಬರುವವರ ಮೇಲೆ ಆಕ್ರಮಣ ಮಾಡಿ ಆ ಜೇನು ನೊಣಗಳು ಅವರನ್ನು ಎಡಬಿಡದೆ ಅಟ್ಟಿಸಿಕೊಂಡು ಹೋಗುತ್ತವೆ. ಆದರೆ ಸೋಮನಾಥಾಲಯದ ಸನ್ನಿಧಿಗೆ ಅವು ಪ್ರವೇಶಿಸುವದಿಲ್ಲ. ಈ ರೀತಿಯಾಗಿ ಅಸಂಖ್ಯಾತ ಮಹಿಮಾಯುಕ್ತವಾದ ಸೋಮೇಶ್ವರ ಸೋಮನಾಥ ಲಿಂಗಗಳನ್ನು ಸಂದರ್ಶಿಸಲು ಆಸ್ತಿಕರಾದ ಶಿವಭಕ್ತರೂ, ಭಾಷಾಭಿಮಾನಿಗಳೂ, ಜೀವನದಲ್ಲಿ ಒಂದು ಸಲವಾದರೂ ಪಾಲುಕುರಿಕೆಗೆ ಪ್ರಯಾಣಮಾಡಿ ಧನ್ಯರಾಗಬೇಕು.

ಸರಿಯಾದ ಸಂಶೋಧನೆಯೂ, ಅನ್ವೇಷಣವೂ ನಡೆದರೆ ಈ ಪಾಲುಕುರಿಗೆಯಲ್ಲಿಯೂ ಆ ಪ್ರಾಂತದಲ್ಲಿಯೂ ದುರ್ಲಭವಾದ ಸೋಮನಾಥನ ಕೃತಿಗಳೂ ಮತ್ತು ಇತರ ಚಾರಿತ್ರಿಕವಾದ ಸಾಮಗ್ರಿಗಳೂ ಲಭ್ಯವಾಗುವದರಲ್ಲಿ ಸಂಶಯವಿಲ್ಲ.

[ಪಾಲುಕುರಿಕೆ ಸೋಮನಾಥ ಕವಿಯ ಜನ್ಮಸ್ಥಳವು ಆಂಧ್ರದೇಶವೇ ಆಗಿರಬಹುದೆಂದು ಭಾವಿಸಿದರೂ, ಆತನ ಸಮಾಧಿ ಸ್ಥಳ ಬೆಂಗಳೂರು ಜಿಲ್ಲಾ ಮಾಗಡಿ ತಾಲೂಕಿನಲ್ಲಿರುವ ಕಳ್ಳಿಯದ ಬೆಟ್ಟದಲ್ಲಿ ಎಂಬುದು ನಿರ್ವಿವಾದವಾಗಿದೆ. ಸುಮಾರು ೩೫೦ ವರ್ಷಗಳ ಹಿಂದೆ ರಚಿತವಾಗಿರುವ ಪಾಲ್ಕುರಿಕೆ ಸೋಮೇಶ್ವರ ಪುರಾಣದಲ್ಲಿ (೧೫ನೇ ಸಂಧಿಯಲ್ಲಿ) ಆ ಗ್ರಂಥ ಕರ್ತೃವು ಸೋಮನಾಥನ ಸಮಾಧಿ ಸ್ಥಳವು ಕಳ್ಳಿಯವೆಂಬುವನ್ನು ಸ್ಪಷ್ಟವಾಗಿ ಹೇಳಿದ್ದಾನೆ. (ಪುಟ ೨೯೬) ಕನ್ನಡ ಕವಿ ಚರಿತ್ರೆ ಭಾಗ ೧ ರಲ್ಲಿ (ಪುಟ ೨೯೨) ಕಳ್ಳಿಯವೇ ಈತನ ಸಮಾಧಿ ಸ್ಥಳವೆಂದು ಹೇಳಿದೆ. ಅಲ್ಲದೆ ಪ್ರತ್ಯಕ್ಷವಾಗಿ ಕಳ್ಳಿಯದ ಬೆಟ್ಟದಲ್ಲಿ ಇರುವ ಈ ಕವಿಯ ಸಮಾಧಿಯೂ ಪ್ರತಿವರ್ಷ ಲಿಂಗವಂತರಿಂದ ಅಲ್ಲಿ ನಡೆವ ಪರ್ವವೂ ಈ ವಿಷಯವನ್ನು ಸಮರ್ಥನಗೊಳಿಸುತ್ತವೆ. — ಸಂಪಾದಕ: ಶರಣ ಸಾಹಿತ್ಯ]

# ಅ. ಭಾ. ವೀರಶೈವ ಮಹಾ ಸಭೆಯ ಬಗ್ಗೆ ನನ್ನ ವಿಚಾರಗಳು

(ಲೇಖಕರು: ಷಡಕ್ಷರಯ್ಯ ಸಿದ್ಧಯ್ಯನವರು ಪಲ್ಲಪುರ ಮಠ)

---

ಬಸವ ಕಲ್ಯಾಣದ ಮಹಾ ಯೋಜನೆಯನ್ನಿಟ್ಟುಕೊಂಡ ನನ್ನ ಮಿತ್ರರು ಇತ್ತೀಚೆಗೆ ಆ ಸಂಬಂಧವಾಗಿ ತಮ್ಮ ಸದಭಿಪ್ರಾಯಗಳನ್ನು ಸಂಗ್ರಹಿಸಿ ನಿಚ್ಚಳವಾಗಿ ಜನರ ಮುಂದೆ ಇಟ್ಟಿದ್ದಾರೆ. ಬಸವ ಕಲ್ಯಾಣದಲ್ಲಿ ವೀರಶೈವರಿಗಾಗಿ ಒಂದು ಆದರ್ಶ ವಿದ್ಯಾಪೀಠದ ಸ್ಥಾಪನೆಯೇ ಅವರ ಗುರಿ. ಇದು ಎಲ್ಲರಿಗೂ ಬೇಕಾದ ವಿಷಯ. ೧೨ನೆಯ ಶತಮಾನದಲ್ಲಿ ವಿವಿಧ ಕ್ಷೇತ್ರಗಳಲ್ಲಿ ಸುಧಾರಣೆಯ ಪೂರ್ಣಾವಸ್ಥೆಯನ್ನು ಹೊಂದಿ ಸರ್ವ ಶೂನ್ಯವಾಗಿ ಕಂಗೊಳಿಸುವ ಅಂದಿನ ಕಲ್ಯಾಣ ಇಂದು ನಿರಾಶಾಮಯ ವಾತಾವರಣದಲ್ಲಿ ತೇಜೋವಿಹೀನವಾಗಿ, ಅಲ್ಲೊಂದು ಇಲ್ಲೊಂದು ಕೆಲವು ಶಿಥಿಲ ಸ್ಮಾರಕಗಳು ಮಾತ್ರ ತೋರುತ್ತಲಿವೆ. ಇದು ನಿಜವಾಗಿಯೆ ಭಾವುಕರ ಮನ ಭೇದಿಸಲು ಕಾರಣವಾಗಿದೆ. "ಕಲ್ಯಾಣ ಮುನ್ನಿನಂತೆ ಪಟ್ಟಣವಾದೀತು" "ಮನೆಯವರು ಮನೆಗೆ ಬಂದಾರು" ಎಂಬ ಶರಣರ ಭವಿಷ್ಯವಾಣಿ ಇದೀಗ ಕಾರ್ಯಗತವಾಗುವ ಕಾಲ ಸಮೀಪಿಸಿದೆ ಎನ್ನುವಂತೆ ಭಾಸವಾಗುತ್ತದೆ. ಬಸವ ಕಲ್ಯಾಣದ ಆ ಮಹಾ ಯೋಜನೆಗಳ ಬಗ್ಗೆ ದಿನದಿನಕ್ಕೆ ಮಿಂಚಿನ ಬದಲಾವಣೆಗಳಾಗುತ್ತಲಿವೆ. ಇದು ಕಾಲಜ್ಞಾನದ ಶುಭಸೂಚನೆ. ಶ್ರೀ ಬಾಬಾಸಾಹೇಬರು ಮಾರದ ಅವರ ನಾಯಕತ್ವದಲ್ಲಿ ಶ್ರೀ ಹಳಕಟ್ಟಿಯವರ ನೇತೃತ್ವದಲ್ಲಿ ಶ್ರೀ ಶರಣ ಕವಿಗಳು ಶ್ರೀ ರುದ್ರಶೆಟ್ಟಿಯವರೇ ಮೊದಲಾದ ಕೆಲ ಮಿತ್ರರ ಸತತ ಪ್ರಯತ್ನದ ಫಲವಾಗಿ ಬಸವ ಕಲ್ಯಾಣದಲ್ಲಿ ಅ. ಭಾ. ವೀರಶೈವ ಮಹಾ ಸಭೆಯನ್ನು ಸೇರಿಸಲು ನಿರ್ಧರಿಸಲ್ಪಟ್ಟಿದೆ. ಇದೇ ಜನೆವರಿ ೧೫ರಂದು ಹೈದರಾಬಾದಿನಲ್ಲಿ ನೆರವೇರಿದ ಕಾರ್ಯಕಾರೀ ಸಭೆಯಲ್ಲಿ ಈ ಮಾತಿಗೆ ಮುದ್ರೆ ಬಿದ್ದಿದೆ. ಅದಕ್ಕಾಗಿ ಒಂದು ಸ್ವಾಗತ ಸಮಿತಿಯು ಕೂಡಾ ರಚಿಸಲಾಗಿದೆ. ಹೈದರಾಬಾದದ ಸ್ಥಾನಿಕ ಸ್ವರಾಜ್ಯ ಮಂತ್ರಿಗಳಾದ ಶ್ರೀಮಾನ್ ಅಣ್ಣಾರಾಯರು ಗಣಮುಖಿ ಅವರು ಸ್ವಾಗತಾಧ್ಯಕ್ಷರಾಗಿಯೂ ಶ್ರೀಮಾನ್ ಬಾಬಾಸಾಹೇಬ ಮಾರದ ಅವರು

ಗೌರವ ಕಾರ್ಯದರ್ಶಿಗಳಾಗಿಯೂ ನಿಶ್ಚಯಿಸಲ್ಪಟ್ಟಿದ್ದಾರೆ. ಅಂತೂ ಇಷ್ಟ
ರಲ್ಲಿಯೇ ಬಸವ ಕಲ್ಯಾಣದಲ್ಲಿ ಮಹಾ ಸಭೆಯಾಗುವದು ನಿಶ್ಚಯ. ಕೆ.
ಪಿ. ಸಿ. ಸಿ. ಅಧ್ಯಕ್ಷರಾದ ಶ್ರೀ ಎಸ್. ನಿಜಲಿಂಗಪ್ಪನವರು ಎಸ್. ಪಿ.
ಮುಂಬಯಿ ಕೃಷಿ ಮಂತ್ರಿಗಳಾದ ಎಂ. ಪಿ. ಪಾಟೀಲರು ಕಲ್ಯಾಣಕ್ಕೆ
ಆಗಮಿಸಿ ಪರಿಸ್ಥಿತಿಯನ್ನು ಪೂರ್ಣ ಅವಲೋಕಿಸಲು ತಮ್ಮ ಸಂದರ್ಶನ
ವನ್ನಿತ್ತಾಗ ಈ ಮಹಾ ಯೋಜನೆಗೆ ಮತ್ತಿಷ್ಟು ಹೆಚ್ಚಿನ ಸ್ವರೂಪ ಪ್ರಾಪ್ತ
ವಾಗಿದೆ. ಬಸವ ಕಲ್ಯಾಣದಲ್ಲಿ ವೀರಶೈವ ಮಹಾ ಸಭೆಯನ್ನು ಕರೆಯುವ
ದೆಂದರೆ ಬಸವಕಲ್ಯಾಣದ ಮಹಾ ಯೋಜನೆ ಕಾರ್ಯಗತವಾಗಲು ಅನು
ಕೂಲವಾಗುವದಲ್ಲದೆ, ವೀರಶೈವರ ಸಮಸ್ತ ಸಮಸ್ಯೆಗಳನ್ನು ಪರ್ಯಾಲೋ
ಚಿಸಲು ಒಂದು ಐತಿಹಾಸಿಕ ಮಹತ್ವವುಂಟಾಗುವದೆಂದು ನನ್ನ ಅಭಿಪ್ರಾಯ.

ಇತಿಹಾಸ ಪ್ರಸಿದ್ಧವಾದ ಬಸವ ಕಲ್ಯಾಣದಲ್ಲಿ ಅ. ಭಾ. ವೀರಶೈವ
ಮಹಾ ಸಭೆ ಕೂಡುವದೆಂದು ಅದರ ಹೆಸರಿಗೆ ತಕ್ಕಂತೆ ಭಾರತದ
ಮೂಲೆ ಮೂಲೆಗಳಿಂದ ನಮ್ಮವರು ಬರುವಂತಾಗಬೇಕು. ಉತ್ತರದಲ್ಲಿ
ನೇಪಾಳ ವೀರಶೈವ ಬಂಧುಗಳೂ ದಕ್ಷಿಣದಲ್ಲಿ ಶಿಲೋನದ (ಲಂಕಾ) ವೀರ
ಶೈವ ಬಂಧುಗಳೂ ಮಹಾ ಸಭೆಯಲ್ಲಿ ಭಾಗ ವಹಿಸಬೇಕು. ಸಾಧ್ಯ
ವಾದರೆ ಹೊರದೇಶಗಳಲ್ಲಿರುವ ವೀರಶೈವರಿಗೂ ಈ ಸಮಾಚಾರ ಮುಟ್ಟು
ವಂತಾಗಬೇಕು. ಪಂಚ ಪೀಠಾಧಿಪತಿಗಳೂ, ವಿರಕ್ತ ಮಠಾಧೀಶ್ವರರೂ ಇಲ್ಲಿ
ಸಮ್ಮಿಳಿತರಾಗಿ ವೀರಶೈವ ಸಿದ್ಧಾಂತದ ಕುರಿತು ಸಮಾಲೋಚಿಸುವ
ಸುಯೋಗ ಪುನಃ ಕಲ್ಯಾಣಕ್ಕೆ ಪ್ರಾಪ್ತವಾಗಬೇಕು. ಈ ಮಹಾಧಿವೇಶನದ
ಅಧ್ಯಕ್ಷ ಪೀಠವು ವೀರಶೈವ ಸಮಾಜದ ಉದ್ಧಾರಕ್ಕಾಗಿ ತಮ್ಮ ತನು
ಮನ ಧನಗಳಿಂದ ದುಡಿದು ತಮ್ಮ ಆಯುಷ್ಯವನ್ನೇ ಸವೆಸಿದ ವ್ಯಕ್ತಿಗಳಿಗೆ
ಮೀಸಲಾಗಿರಬೇಕು. ಬಸವ ಕಲ್ಯಾಣದ ಜೀರ್ಣೋದ್ಧಾರವೂ ಮತ್ತು
ಮಹಾ ಯೋಜನೆಯೂ ಇದೇ ಕಾಲಕ್ಕೆ ನಿಶ್ಚಯವಾಗಬೇಕಾಗಿದೆ. ಈ
ಉಭಯ ಮಹಾ ಕಾರ್ಯಗಳ ದೃಷ್ಟಿಯನ್ನಿಟ್ಟುಕೊಂಡೇ ಸಮರ್ಥ ಅಧ್ಯಕ್ಷ
ರನ್ನು ಆರಿಸುವದು ಯೋಗ್ಯವು. ಹೊಸ ಕಾಲಕ್ಕೆ ಹೊಸ ಸಂದೇಶ
ಕೊಡುವ ವ್ಯಕ್ತಿಗಳು ನಮಗೆ ಬೇಕು. ಮುಂದೆ ಕಲ್ಯಾಣದ ಯೋಜ
ನೆಯಲ್ಲಿ ಸಂಪೂರ್ಣ ಸಹಕರಿಸಿ ಕೃತಿಗಿಳಿಸುವ ಮಹಾ ಪ್ರಭಾವಶಾಲಿ
ಗಳು ಬೇಕು. ಇದು ನಮಗೆ ಈಗ ಬೇಕಾದ ಸಂಗತಿ.

## ವೀರಶೈವರ ಇಂದಿನ ಪರಿಸ್ಥಿತಿ.

ಪ್ರಕೃತ ಪರಿಸ್ಥಿತಿಯಲ್ಲಿ ಜನತೆಯು ವೀರಶೈವ ಸಿದ್ಧಾಂತವನ್ನು ತಿಳಿದು ಧರ್ಮದ ಕುರಿತು ಅನಾಸಕ್ತಿಯನ್ನು ಹೋಗಲಾಡಿಸುವದು ಅತ್ಯಾವಶ್ಯಕ. ಸದ್ಯಃ ಸಮಾಜದಲ್ಲಿ ತಲೆ ಎತ್ತಿದ ಅನಾಸಕ್ತಿ ಮತ್ತು ಅನೈಕ್ಯಕ್ಕೆ ಕಾರಣವೆಂದರೆ ಜನರಲ್ಲಿ ವೀರಶೈವ ಮತ ಸಂಬಂಧವಾಗಿರುವ ಐತಿಹಾಸಿಕ ಜ್ಞಾನದ ಅಭಾವವೆಂದೇ ಹೇಳಬಹುದು. ನಮ್ಮವರಲಿ ಸಂಶೋಧನಾತ್ಮಕ ದೃಷ್ಟಿಯಿಲ್ಲ. ಯುಗ ಯುಗಾಂತರಗಳಿಂದ ತನ್ನ ಅಸ್ತಿತ್ವವನ್ನು ಕಾಯ್ದುಕೊಂಡು ಬಂದ ಶೈವ ಧರ್ಮವು ಕೊನೆಯಲ್ಲಿ ವೀರಶೈವ ಧರ್ಮದಲ್ಲಿ ಪರ್ಯವಸಾನ ಹೊಂದಿತು. ಈ ಕಾಲಾವಧಿಯಲ್ಲಿ ಅನೇಕ ಮತಗಳು ಈ ಧರ್ಮದಲ್ಲಿ ಸಮಾವೇಶವಾದವು. ಶೈವ ಧರ್ಮ ವೃಕ್ಷಕ್ಕೆ ವೀರಶೈವ ಪಕ್ವ ಫಲವು. Veerashaivism is a development form of Shaivism ಎಂದು ಒಬ್ಬ ಪಾಂಡಿತ್ಯ ಪಂಡಿತರು ನುಡಿದಿದ್ದಾರೆ. ಕೆಲವರು ವೀರಶೈವವು ಶೈವ ಧರ್ಮದ ಒಂದು ಭಾಗವೆಂದು ಸಹಜವಾಗಿ ಹೇಳಿ ಬಿಡುವರು. ಶೈವಕ್ಕೆ ವ್ಯಾಪ್ತಿಯನ್ನ ಕಲ್ಪಿಸಿ ವೀರಶೈವಕ್ಕೆ ಸಂಕುಚಿತ ದೃಷ್ಟಿಯನ್ನು ರೂಪಿಸುವರು. ಇದು ಸಮಂಜಸವಲ್ಲ. ಶಿವೋಪಾಸನೆಯು ಆಲ ಕಾಲಕ್ಕೆ ತಾತ್ವಿಕ ಸಿದ್ಧಾಂತದ ಮೇಲೆ ಪ್ರಗತಿ ಹೊಂದುತ್ತ ಬಂದಿರುವದಕ್ಕೆ ಅದರ ಇತಿಹಾಸ ಸಾಕ್ಷಿಯಾಗಿದೆ. ಶೈವರೆ ಸ್ಮಾರ್ತರು, ಜೈನರು ಇದರ ವಿಶಾಲ ಸಿದ್ಧಾಂತವನ್ನ ಒಪ್ಪಿ ಅತ್ಯಾನಂದದಿಂದ ಇದನ್ನು ಸ್ವೀಕರಿಸುತ್ತ ಬಂದರು. ವೀರಶೈವ ಮತದ ಕಾಲಮಾನವನ್ನು ಕಂಡು ಹಿಡಿಯಲು ಹೋದಂತೆಲ್ಲ ಅದು ಮತ್ತೆ ಮತ್ತೆ ಪ್ರಾಚೀನವಾಗುತ್ತ ಹೋಗುತ್ತವೆಂದು ಐತಿಹಾಸಿಕರು ಹೇಳುತ್ತಿದ್ದಾರೆ. ವೀರಶೈವ ಧರ್ಮದ ಐತಿಹಾಸಿಕ ಚರಿತ್ರೆಯಲ್ಲಿ ಎರಡು ಘಟಗಳನ್ನು ಕಾಣಬಹುದು. ಪ್ರಾಚೀನ ಕಾಲದಿಂದ ಹನ್ನೊಂದನೆಯ ಶತಮಾನದವರೆಗೆ ಬಂದದ್ದು ಒಂದು ಹನ್ನೆರಡನೆಯ ಶತಮಾನದಿಂದ ಇಲ್ಲಿಯ ವರೆಗೆ ಬಂದದ್ದು ಎರಡನೆಯದು. ಹೀಗೆ ಇದರ ಚರಿತ್ರೆಯಲ್ಲಿ ಎರಡು ಘಟಗಳು. ಪೂರ್ವ ಘಟ್ಟವು ಸಂಸ್ಕೃತ ಸಾಹಿತ್ಯದಲ್ಲಿ ಹೆಚ್ಚು ಸಮಾವೇಶವಾಗಿದೆ. ಅದು ಬಹುಜನರಿಗೆ ಅಭೇದ್ಯ ಕೋಟೆ ಮತ್ತು ಕೆಲವರಿಗೆ ಮುಸುಕು. ಈ ಯುಗದಲ್ಲಿ ಆಚಾರ್ಯರು ಭಾಷ್ಯಕಾರರು ಅನೇಕ ಸಂಸ್ಕೃತ ಗ್ರಂಥಗಳನ್ನು ಬರೆದರು. ಎರಡನೆಯ ಘಟ್ಟವು ಕನ್ನಡ ಸಾಹಿತ್ಯದಲ್ಲಿ ಕ ೦

ಕೊಂಡಿದೆ. ಎಲ್ಲರಿಗೂ ಅದು ಮನೆಯ ಮಾತು. ಈ ಯುಗದಲ್ಲಿ ಅನೇಕ ಜನ ಶಿವಶರಣರು ಅವಿಚ್ಛಿನ್ನವಾಗಿ ಪ್ರಯತ್ನಿಸಿ ಈ ಸಿದ್ಧಾಂತವನ್ನು ಭರತ ಖಂಡದಲ್ಲೆಲ್ಲ ಹರಡಿದರು. ಶರಣರ ಶಿಖಾಮಣಿಯಾದ ಬಸವಣ್ಣನು ಅಂದು ಕಲ್ಯಾಣದಲ್ಲಿ ಸಂಸ್ಥಾಪಿಸಿದ ಶಿವಾನುಭವ ವಿದ್ಯಾಪೀಠವು ಜಗತ್ಪ್ರಸಿದ್ಧವು. ಪ್ರಾಚೀನ ಭಾರತೀಯ ವಿದ್ಯಾಪೀಠಗಳಾದ ತಕ್ಷಶಿಲೆ, ನಲಂದ ಮೊದಲಾದ ವಿದ್ಯಾಪೀಠಗಳಿಗಿಂತ ಬಸವ ಕಲ್ಯಾಣದ ಶಿವಾನುಭವ ವಿದ್ಯಾಪೀಠವು ಯಾವ ದೃಷ್ಟಿಯಿಂದಲೂ ಕಡಿಮೆಯಾಗದು. ಭಾರತಾದ್ಯಂತ ಎಲ್ಲ ಜಿಜ್ಞಾಸುಗಳನ್ನು ಕಲ್ಯಾಣದತ್ತ ಆಕರ್ಷಿಸಿದ ಶಕ್ತಿ ಸಾಮಾನ್ಯವಾದುವಲ್ಲ. ಬಸವಣ್ಣ ಆ ಕಾಲದ ಕಾರಣಿಕ ಪುರುಷ ಯುಗ ಪುರುಷ. ಬಸವ ಕಲ್ಯಾಣದ ಆ ಮಹಾ ವಿದ್ಯಾಪೀಠದ ತತ್ವಗಳು ಇಂದಿಗೂ ಅಚ್ಚಳಿಯದಂತೆ ಪ್ರಜ್ವಲಿಸುತ್ತಿರುವದು ಅವುಗಳ ಗುರುತ್ವದ ಹಿರಿಮೆಯೇ ಕಾರಣ. ೨೦ನೆಯ ಶತಮಾನದಲ್ಲಿ ನಾವು ಈ ಎರಡೂ ಘಟ್ಟಗಳಿಂದ ದೂರಾಗುತ್ತ ನಡದಿದ್ದೇವೆ. ಅಥವಾ ಒಂದನ್ನು ಹೊಗಳುತ್ತಲೂ ಇನ್ನೊಂದನ್ನು ತೆಗಳುತ್ತಲೂ ಸಾಗಿದ್ದೇವೆಂದರೆ ತಪ್ಪಾಗದು. ವೀರಶೈವ ಮಹಾ ಸಭೆಗಳು ಇಂದಿಗೂ ಆಗುತ್ತ ಬಂದಿವೆ. ಆದರ ಸದುಪಯೋಗ ಸಮಾಜವವು ಮಾಡಿಕೊಂಡಿಲ್ಲ. ಗುರು ವಿರಕ್ತರಲ್ಲಿ ಐಕ್ಯ, ಒಳಪಂಗಡಗಳಲ್ಲಿ ಬಳಕೆ ಇಷ್ಟಾದರೂ ಇಂದಿಗೂ ನಮ್ಮವರು ಸಾಧಿಸದಿದ್ದುದು ವಿಷಾದಕರ. ಗುರು ಪೀಠಗಳು ಮಠಾಧಿಪತಿಗಳು ಸ್ವಲ್ಪ ವಿಶಾಲ ಭಾವನೆ ತಾಳಬೇಕಾದುದು ಅವರ ಕರ್ತವ್ಯವಾಗಿದೆ. ಇದೀಗ ಪ್ರಜಾರಾಜ್ಯ ನಮ್ಮ ಮನೆ ಮಠಗಳನ್ನು ಸುಧಾರಿಸಿಕೊಳ್ಳಲು ನಮಗೆ ಅಧಿಕಾರ. ಮಠಾಧೀಶ್ವರರು ಗುರು ವಿರಕ್ತರೆಂಬ ಭೇದಭಾವನೆಯನ್ನು ಕೆಲಕಾಲವಾದರೂ ಬದಿಗಿಟ್ಟು ಧರ್ಮ ಪ್ರಚಾರಕ್ಕಾಗಿ ವಿದ್ಯಾ ಪ್ರಚಾರಕ್ಕಾಗಿ ಸಿದ್ಧರಾಗಬೇಕು. ನಮ್ಮದು ಜಾತ್ಯತೀತ ರಾಷ್ಟ್ರ. ನಮಗೆ ಧರ್ಮದ ಪ್ರಸ್ತುತ ಸುತರಾಂ ಬಂಧವಿಲ್ಲೆಂಬ ಗೊತ್ತು ಸಿದ್ಧಾಂತಕ್ಕೆ ಯಾರೂ ಲಕ್ಷ ಕೊಡಬಾರದು. ಭಾರತದ ರಾಜ್ಯಘಟನೆದಲ್ಲಿ ಇಂಥ ಅರ್ಥಕ್ಕೆ ಆಸ್ಪದವಿಲ್ಲ. ಭಾರತ ರಾಜ್ಯವು ಜಾತ್ಯತೀತವಾಗಬಹುದು. ಧರ್ಮಾತೀತವಾಗಲು ಸಾಧ್ಯವಿಲ್ಲ. ಭಾರತೀಯರ ಪರಸ್ಪರ ಸಹೋದರ ಭಾವನಕ್ಕೆ ಧರ್ಮವೇ ಆಧಾರವಾಗಿದೆ. ನಾವೆಲ್ಲರೂ ಬಂದು ಭೇದವು ಅಜ್ಞಾನದಿಂದ ದ್ವೇಷದಿಂದ ಉತ್ಪನ್ನವಾಗುತ್ತದೆ. ಜಾತಿಯ ಗಂಧವೇ ಸೋಕಿಯದ ಪಶ್ಚಿಮ ರಾಷ್ಟ್ರಗಳಲ್ಲಿ ಪರಸ್ಪರ ಸಹೋ

ಧರ ಭಾವನೆ ಎಷ್ಟರ ಮಟ್ಟಿಗೆ ನಾವು ಕಾಣುತ್ತೇವೆ? ಪ್ರೇಮವು ಸರ್ವ ಧರ್ಮಗಳ ಮೂಲ ಶಿಕ್ಷಣ. ಇತ್ತೀಚೆಗೆ ನಮ್ಮವರು ಸಹ ಪಾಶ್ಚಾತ್ಯ ಜ್ಞಾನಿಗಳಿಂದ ಜ್ಞಾನಿಗಳಾಗಿ ತಮ್ಮ ಕಣ್ಣುಗಳ ಮೇಲೆ ಪಾಶ್ಚಾತ್ಯರ ಕನ್ನಡಕವನ್ನು ಹಾಕಿಕೊಂಡು ನಮ್ಮ ಸಿದ್ಧಾಂತಗಳನ್ನ ನೋಡುತ್ತಲಿದ್ದಾರೆ. ಅದು ಧರ್ಮದ ದೋಷವಲ್ಲ. ಅವರ ದೃಷ್ಟಿದೋಷ. ಅಂತೂ ಧರ್ಮ ಪ್ರಚಾರಕ್ಕೆ ಒಂದು ಕೊರತೆ. ಈ ಕೊರತೆಯನ್ನು ಹೋಗಲಾಡಿಸಲು ಧಾರ್ಮಿಕ ಸಮ್ಮೇಳನಗಳ ಅವಶ್ಯಕತೆ ಬಹಳ ಇದೆ. ಧಾರ್ಮಿಕ ಸಮ್ಮೇಳನಗಳ ಕೊರತೆಯಿಂದಲೇ ನಮ್ಮಲ್ಲಿ ಇಂದು ಅನೈಕ್ಯದ ಭೂತವು ತಾಂಡವವಾಡುತ್ತಲಿದೆ. ಇವರ ಮೂಲೋಚ್ಚಾಟನೆ ಮಹಾ ಸಭೆಯಿಂದಲೇ ಸಾಧ್ಯ.

ಇತ್ತೀಗ ಭಾರತ ಸಂಚಾರವನ್ನು ಮುಗಿಸಿ ಮರಳಿ ಇಂಗ್ಲಂಡಕ್ಕೆ ಪ್ರಯಾಣಬೆಳಸಿದ ಕೂಲಿಕಾರ ಧುರೀಣರಾದ ಕ್ಲಿಮೆಂಟ ಅಟ್ಲಿಯವರು "ರಶಿಯನ್ ಕಮ್ಯುನಿಸ್ಟದ ಆತ್ಮಹೀನ ಆದ ಭೌತಿಕವಾದವನ್ನು ಎದುರಿಸುವಲ್ಲಿ ಏಷಿಯಾದ ರಾಷ್ಟ್ರಗಳ ಧಾರ್ಮಿಕ ಹಿನ್ನೆಲೆ ಒಂದು ಪ್ರಬಲವಾದ ಸಾಧನವಾಗಿದೆ" ಎಂದು ತಮ್ಮ ಪ್ರಕಟನೆಯಲ್ಲಿ ಹೇಳಿದ್ದು ನಮ್ಮ ರಾಜಕೀಯ ಧುರೀಣರು ಲಕ್ಷಿಸತಕ್ಕ ಸಂಗತಿಯಾಗಿದೆ. "ಧರ್ಮೋ ರಕ್ಷತಿ ರಕ್ಷಿತಃ"

## ಮಹಾ ಸಭೆಯ ಅವಶ್ಯಕತೆ.

ಮಹಾಸಭೆಯ ನಿಮಿತ್ತವಾಗಿ ನಾವೆಲ್ಲ ಒಂದೆಡೆ ಸೇರುವಂತಾಗಲಿ. ಪರಸ್ಪರ ಸ್ನೇಹ ಸಹಕಾರಗಳು ಹೆಚ್ಚಿ, ಸೌಹಾರ್ದ ಭಾವ ವೃದ್ಧಿಗೊಳ್ಳಲಿ. ಧರ್ಮ ಪ್ರಚೋದನೆಯಿಂದ ಜನರು ಎಚ್ಚತ್ತು ಧರ್ಮದಲ್ಲಿ ನಿಷ್ಠೆಯುಳ್ಳವರಾಗಿ ಬಾಳುವದರಲ್ಲಿ ಸಂದೇಹವಿಲ್ಲ. ಸ್ವತಂತ್ರ ಭಾರತಕ್ಕೆ ಬೇಕಾದದ್ದು ಇದು. ಮುಂಬರುವ ನಮ್ಮ ಅಧಿವೇಶನವು ಸಕಲ ಬಂಧುಗಳ ಸಹಕಾರದಿಂದ ನಡೆಯಬೇಕು. ಏಕಪಕ್ಷೀಯ ವಾದದಲ್ಲಿ ಸರ್ವಾಂಗ ಸುಂದರತೆಗೆ ಚ್ಯುತಿ. ಬಸವಕಲ್ಯಾಣದಲ್ಲಿ ಅಖಿಲ ಭಾರತ ವೀರಶೈವ ಮಹಾ ವ್ಯಕ್ತಿಗಳು ಏಕತ್ರ ಸಮ್ಮಿಳಿತರಾಗಿ ಧರ್ಮದ ಕುರಿತು ಹೆಚ್ಚಿನ ಜ್ಞಾನ ಪಡೆಯುವಂತಾಗಬೇಕು. ಭಾರತ ದೇಶದ ನಾಗರಿಕತೆ ಹಾಗೂ

ಪ್ರಾಚೀನ ಸಂಸ್ಕೃತಿಯ ವೈಶಿಷ್ಟ್ಯ ಅದರ ಧಾರ್ಮಿಕ ತಳಹದಿಯ ಮೇಲೆ ಭದ್ರವಾಗಿ ನಿಂತಿದೆ ಎನ್ನುವದು ಬಸವ-ಕಲ್ಯಾಣದಲ್ಲಿ ಆ ದಿವ್ಯ ವಚನಗಳ ಪ್ರತಿ ಧ್ವನಿಯಾಗಬೇಕು.

ಇಂದು ಜಗತ್ತಿನಲ್ಲಿ ಎಲ್ಲ ರಾಷ್ಟ್ರಗಳು ಶಾಂತಿ ಸತ್ಯತೆಗಳ ಸಾಕ್ಷಾತ್ಕಾರಕ್ಕಾಗಿ ಹಾತೊರೆಯುತ್ತಲಿವೆ. ಜಗತ್ತಿನಲ್ಲಿ ಪರಸ್ಪರ ಬಾಂಧವ್ಯ ಬೆಳೆಯಬೇಕೆಂದು ರಾಷ್ಟ್ರ ಸಂಘವು ತನ್ನ ಸರ್ವ ಶಕ್ತಿಯನ್ನು ಪೂರೈಸುತ್ತಲಿವೆ. ಆದರೂ ದಿನ ದಿನಕ್ಕೆ ಈ ವಿಷಯ ಜಟಿಲವಾಗುತ್ತ ನಡೆದಿದೆ. ಇದಕ್ಕೆ ಕಾರಣ ಸಂಶಯ-ಭಯ. ಇದು ತೊಲಗಬೇಕು. ಜಗತ್ತು ನೀತಿಯ ನೆಲೆಗಟ್ಟಿನ ಮೇಲೆ ನಿಂತಿದೆ. ಧರ್ಮ ಅದಕ್ಕೆ ಆಧಾರವಾಗಿದೆ. ಧರ್ಮಕ್ಕೇನೆ ನಮ್ಮವರು ಆಚಾರ ಪ್ರಾಯರಾದರೆ ಸತ್ಯ, ಶಾಂತಿಗಳಾಗಿ ಪ್ರತ್ಯಕ್ಷವಾಗುವ ಬಗೆ ಹೇಗೆ? ಮಾಡುವವರು ಮಾಡುವರು. ಮಾಡಲಾರದವರು ಮಾತಾಡುವರು ಎಂದು ಬರ್ನಾಡ್‌ಷಾ ಹೇಳಿದಂತೆ ನಮ್ಮಲ್ಲಿ ವಾಚಾಳಿಗಳು ಬಹಳ ಜನರಿದ್ದಾರೆ. ರಾಜಕೀಯ ಕ್ಷೇತ್ರದಲ್ಲಿ ನಿರಾಶೆಗೊಂಡ ಕೆಲ ಅಸಂತುಷ್ಟಿಗಳು ವಾಮಮಾರ್ಗಗಾಮಿಗಳಾಗಿ ನಡೆಯುತ್ತಲಿದ್ದಾರೆ. ಭಾಷಾವಾರ ಪ್ರಾಂತ ರಚನೆಯ ಚಳವಳಿಯಲ್ಲಿ ಇಂಥ ಜನರೇ ಹೆಚ್ಚಾಗಿದ್ದಾರೆ. ಸುಲಭವಾಗಿ ದೊರೆಯಬೇಕಾದ ಆ ಸಮಸ್ಯೆ ಇವರಿಂದ ಮತ್ತಷ್ಟು ಬಿಗಿಯಾಗುತ್ತ ನಡೆದಿದೆ. ಇವರು ತತ್ವಸೂಚಕರಲ್ಲ. ಜಾತೀಯ ರಂಗ ಸ್ಥಳದ ಮೇಲೆ ಸೂತ್ರಧಾರರಾಗಲು ಇಚ್ಛಿಸುವರು. "ಆಗದು ಆಗದು ಮಾತಿನಂತೆ ಮನವಿಲ್ಲದವರ" ಎಂದ ಬಸವಣ್ಣನವರು ಇಂಥವರನ್ನು ಎಚ್ಚರಿಸಿದ್ದಾರೆ. ಕೆಲ ವೀರಶೈವ ಸಂಸ್ಥೆಗಳು ಸಾಧಾರಣೆಯ ಹೆಸರಿನಲ್ಲಿ ಆಚಾರ ದುಡ್ಡನ್ನು ಹಾಳುಮಾಡಿವೆ. ಇನ್ನೂ ಅನೇಕ ಇಂಥ ಸಂಸ್ಥೆಗಳು ನಮ್ಮ ಕಣ್ಣ ಮುಂದೆ ಪ್ರತ್ಯಕ್ಷವಾಗಿದ್ದುದು ದುರ್ದೈವದ ಸಂಗತಿ. ವೀರಶೈವ ಮತವೆಂದರೆ ಒಂದು ಸಂಕುಚಿತ ಮತವೆಂಬ ಭಾವನೆ ಇತ್ತೀಚೆಗೆ ನಮ್ಮವರಲ್ಲಿ ಕಂಡುಬರುತ್ತದೆ. ಇದು ನಿಜವಾಗಿಯೇ ವೀರಶೈವ ಧರ್ಮದ ದುರ್ದೃಷ್ಟಿ. ಮಹಾ ಸಭೆಯು ಅಂಥ ಅಪವಾದವನ್ನೂ ದೋಷವನ್ನೂ ಮೂಲತಃ ಕಿತ್ತು ಬಿಸುಟು ವೀರಶೈವ ಸಿದ್ಧಾಂತದ ನಂದಾದೀಪವನ್ನು ಭಾರತದ ಮೂಲೆ ಮೂಲೆಗಳಲ್ಲಿ ಬೆಳಗುವಂತೆ ಮಾಡುವದು ಆಗಬೇಕು.

ಭಾರತೀಯ ಸಕಲ ಧರ್ಮಗಳ ಚರ್ಚಾ ಕೂಟವಾಗಿ, ಹೊಸ ಸಾಹಿತ್ಯಕ್ಕೆ ಕೇಂದ್ರವಾಗಿ ಕಾಯಕವೇ ಕೈಲಾಸವಾಗಿ, ಆರ್ಥಿಕ ಸಮಾನತೆಗೆ ಆಧಾರವಾಗಿ ಲಿಂಗಸಂಕೇತದಿಂದ ಎಲ್ಲರೂ ಸಮಾನರೆಂಬ ಅಭೇದ್ಯಕ್ಕೆ ಕಾರಣವಾಗಿ, ಶಿವಾನುಭವ ಮಂಟಪದ ಅಡಿಗಲ್ಲಾಗಿ ಮೆರೆದು ಆ ಬಸವ-ಕಲ್ಯಾಣವು ಇಂದು ನಮ್ಮನ್ನು ತಿನ್ನತ್ತ ಕೂಗಿ ಕರೆಯುತ್ತಲಿದೆ. ಎಲ್ಲರೂ ಆ ಕಡೆಗೆ ಧಾವಿಸಿ ತ್ರಿಪುರಾಂತಕೇಶ್ವರನ ಕೆರೆಯಲ್ಲಿ ಮಿಂದು ಮೂರನೆಯ ಘಟ್ಟವನ್ನು ಮುಂದುವರಿಸಬೇಕಾಗಿದೆ. ವೀರಶೈವ ಧರ್ಮವು ವಿಶಿಷ್ಟ ಜನರ ಮತಾಚರಣೆಯಲ್ಲ. ವಿಶಾಲ ಪ್ರಪಂಚದ ಆಧಾರ ಸ್ತಂಭ. ಒಂದು ಕಾಲಕ್ಕೆ ಇಡೀ ಪ್ರಪಂಚದಲ್ಲೇ ಪ್ರಧಾನವಾದ ಶೈವ ಧರ್ಮವು ಇಂದು ನಮ್ಮವರಿಗೆ ಕನಸಾಗಿ ಕಾಣುತ್ತಿದೆ. ಯುರೋಪ, ಅಮೇರಿಕಾ, ಏಸಿಯಾ ಮೊದಲಾದ ಮಹಾ ಖಂಡಗಳಲ್ಲಿ ಇಂದಿಗೂ ಶಿವದೇವಾಲಯಗಳಿದ್ದುದು ಎಲ್ಲರೂ ಗಮನಿಸತಕ್ಕ ಸಂಗತಿಯಾಗಿದೆ. ಭಾರತದಲ್ಲಿ ಎಲ್ಲ ಧರ್ಮಗಳಿಗೆ ಸಮಾನಾವಕಾಶ ಕೊಟ್ಟು ತನ್ನಲ್ಲಿ ಅಳವಡಿಸಿಕೊಂಡ ಧರ್ಮವು ವೀರಶೈವವೊಂದೆ ಎಂದು ಹೇಳಲು ಅಭಿಮಾನವೆನಿಸುತ್ತದೆ. ಭಾರತೀಯ ತತ್ವ ಶಾಸ್ತ್ರದಲ್ಲಿ ಕೆಲ ಮಹನೀಯರು ವೇದಾಂತಕ್ಕೆ ಪ್ರಾಧಾನ್ಯ ಕೊಟ್ಟರೆ ವೀರಶೈವರು ಅದಕ್ಕೂ ಮುಂದೆ ಹೋಗಿ ಸಿದ್ಧಾಂತಕ್ಕೆ ಮಹತ್ವ ಕೊಟ್ಟರು. ತತ್ವಜ್ಞಾನದಲ್ಲಿ ವೀರಶೈವರು ಹೇಳುವ ಶಕ್ತಿ ವಿಶಿಷ್ಟಾದ್ವೈತ ಸಿದ್ಧಾಂತವು ತಾತ್ವಿಕ ವಿವೇಚನೆಯ ಕೊನೆಯ ನಿರ್ಣಯವಾಗಿದೆ. ಇದಕ್ಕೂ ಮೀರಿ ಇನ್ನೂ ಮುಂದುವರಿದ ತತ್ವ ಸಿದ್ಧಾಂತ ರೂಪ ತಾಳಿಲ್ಲ. ಇವೆಲ್ಲ ವಿಷಯಗಳು ನಮ್ಮ ಮಹಾ ಸಭೆಯಲ್ಲಿ ಚರ್ಚಿಸಲ್ಪಡಬೇಕು.

ಅ. ಭಾ. ವೀರಶೈವ ಮಹಾ ಸಭೆಯಲ್ಲಿ ಕೆಲ ಮಹಾ ವ್ಯಕ್ತಿಗಳಿಗೆ ಅವಶ್ಯ ಸ್ಥಾನ ದೊರೆಯಬೇಕು. ಮಹಾ ಸಭೆಯ ಉದ್ಘಾಟನವನ್ನು ನೆರವೇರಿಸಲು ಮೈಸೂರಿನ ಶ್ರೀಮನ್ಮಹಾರಾಜರವರನ್ನು ವಿಜ್ಞಾಪಿಸಿಕೊಳ್ಳಬೇಕು. ಸರ್ವ ಧರ್ಮಗಳಿಗೆ ಮಹದಾಶ್ರಯವನ್ನಿತ್ತು ಶಾಸ್ತ್ರೀಯ ಗ್ರಂಥಗಳ ಪ್ರಕಟನೆಗೆ ಅಪಾರ ಧನ ಸಹಾಯ ನೀಡಿದ ಅವರ ಅಮೃತ ಹಸ್ತವು ವೀರಶೈವ ಮಹಾ ಸಭೆಯ ಆರಂಭೋತ್ಸವವನ್ನು ನೆರವೇರಿಸಲಿ. ಭಾರತದ ಉಪಾಧ್ಯಕ್ಷರಾದ ಡಾ॥ ಸರ್ವಪಲ್ಲಿ ರಾಧಾಕೃಷ್ಣನ್ನರನ್ನು ಶಿವಾನುಭವಾಶ್ರಮದ ಉದ್ಘಾಟನೆಯನ್ನು ನೆರವೇರಿಸಿ ಕೊಡಲು ಬಿನ್ನವಿಸಿಕೊಳ್ಳಬೇಕು. ಶೈವ ಧರ್ಮವು ಅವರ ಜ್ಞಾನ ಭಾಂಡಾರದ ಕುಲುಮೆಯಿಂದ ಹೊರಬೀ

ಳಲಿ. ಅದು ನಮ್ಮವರಿಗೆ ಆದರ್ಶವಾದೀತು. ಮಹಾ ಸಭೆಯ ಅಧ್ಯಕ್ಷ ಸ್ಥಾನವನ್ನು ಸ್ವೀಕರಿಸಲು ಚಿತ್ರದುರ್ಗ ಶೂನ್ಯ ಸಿಂಹಾಸನಾಧೀಶ್ವರರಾದ ನಿರಂಜನ ಜಗದ್ಗುರು ಮುರುಘಾ ರಾಜೇಂದ್ರ ಮಹಾ ಸ್ವಾಮಿಗಳನ್ನು ನಿವೇದಿಸಿಕೊಳ್ಳುವದು ಸಮಯೋಚಿತ. ಸಮಾಜ ಸುಧಾರಣೆಗಾಗಿ, ವೀರಶೈವ ಧರ್ಮದ ಉನ್ನತಿಗಾಗಿ ಭಾರೆಯೆರೆದ ಮಹಾ ವ್ಯಕ್ತಿಗಳು ಕಲ್ಯಾಣದಲ್ಲಿ ಪುನಃ ವಿರಾಜಮಾನರಾಗುವದು, ಸ್ಥಳೀಯ ದೃಷ್ಟಿಯಿಂದ ಅತಿ ಮಹತ್ವವಾದದ್ದೆಂದು ನನ್ನ ಅಭಿಪ್ರಾಯ. ಐತಿಹಾಸಿಕ ಸಂಶೋಧನೆಯಲ್ಲಿ ತಮ್ಮ ಜೀವನವನ್ನು ಧಾರೆಯೆರೆದ ಶ್ರೀ ಸದಾಶಿವಯ್ಯನವರು ಎಂ. ಎ. ಬಳ್ಳಾರಿ, ಕರ್ನಾಟಕ ವಿಶ್ವ ವಿದ್ಯಾಲಯದ ರಜಿಸ್ಟ್ರಾರರಾದ ಶ್ರೀ ಡಾ. ನಂದೀಮಠರು ಶ್ರೀ ನಿಡುಮಾಮಿಡಿ ಜಗದ್ಗುರುಗಳು, ಶ್ರೀ ಹಳಕಟ್ಟಿಯವರು ಇವರನ್ನೆಲ್ಲ ಈ ಸಲ ಒತ್ತಟ್ಟಿಗೆ ಕೂಡಿಸುವದು ಮಹಾ ಸಭೆಯ ಕೆಲಸ. ಈ ಎಲ್ಲ ವ್ಯಕ್ತಿಗಳು ವ್ಯಕ್ತಿಗತವಾಗಿ ದುಡಿದೇ ಸವೆದಿದ್ದಾರಲ್ಲದೆ ಸಮಾಜವು ಇವರನ್ನು ಒಂದುಗೂಡಿಸುವ ಪ್ರಯತ್ನ ಸರಿಯಾದ ಮಾರ್ಗದಲ್ಲಿ ಮಾಡಿಲ್ಲವೆಂದೇ ತೋರುತ್ತದೆ. ಬೆಂಗಳೂರಿನ ಕನ್ನಡ ಸಾಹಿತ್ಯ ಪರಿಷತ್ತು ವೀರಶೈವ ಮಹಾ ವಿದ್ವಾಂಸರನ್ನು ಆಮಂತ್ರಿಸಿ ಗೌರವ ಸಲ್ಲಿಸಿದರೂ ನಮ್ಮವರ ದೃಷ್ಟಿಯಲ್ಲಿ ಆ ವ್ಯಕ್ತಿಗಳಿಗಾಗಿ ಯಾವ ಸ್ಥಾನವಿದೆ? ಒಟ್ಟಾರೆ ನಮ್ಮಲ್ಲಿ ವಿದ್ಯಾಪಕ್ಷಪಾತಿಗಳ ಕೊರತೆ. ನಮ್ಮ ಪ್ರಧಾನ ಮಂತ್ರಿಗಳು ಕಾಶ್ಮೀರ ಶೈವರು. ಕಾಶ್ಮೀರ ಶೈವ ಸಿದ್ಧಾಂತದ ಸ್ಫೂರ್ತಿಯೇ ವೀರಶೈವ ಧರ್ಮಕ್ಕೆ ಪೂರಕ. ಕಾಶ್ಮೀರ ಶೈವರಿಗೂ ವೀರಶೈವರಿಗೂ ನಿಕಟ ಸಂಬಂಧ. ಕಲ್ಯಾಣದ ಬಸವಣ್ಣನು ಕಾಶ್ಮೀರಕ್ಕೆ ಹೋಗಿ ಜಂಗಮರನ್ನು ಕದ್ದು ತಂದದ್ದಕ್ಕಾಗಿ ಚೋರ-ಬಸವನಾದನು. ನಿಜಾಂಶದಿಂದ ಕೂಡಿದ ಐತಿಹಾಸಿಕ ಸಂಗತಿಯನ್ನು ನಮ್ಮ ಪ್ರಧಾನ ಮಂತ್ರಿಗಳಿಗೆ ಮುಟ್ಟಿಸುವ ಸಾಹಸಿಗಳು ನಮ್ಮಲ್ಲಿದ್ದಾರೆಯೇ? ನಮ್ಮ ಸಂಗತಿಗಳಲ್ಲಿ ನಮಗೆ ವಿಶ್ವಾಸವಿಲ್ಲ. ಇದು ತುಂಬಾ ಶೋಚನೀಯ.

ಪಂಚ ಪೀಠಾಧಿಪತಿಗಳು ಕಲ್ಯಾಣದ ಮಹಾ ಮನೆಗೆ ಬರಲಿ. ಕಾಲಾಜ್ಞಾನ ಸಾಹಿತ್ಯಕ್ಕೆ ಆಚಾರ್ಯ ಪುರುಷನಾದ ರುದ್ರಮುನಿಯ ಬೆಟ್ಟ ನೋಡಿದಾಗ ಅವರೇನು ಪುದೀರ ಕೊಡುವರೋ ತಿಳಿಯಲಿ. ಮಹಾ ಸಭೆಯ ಅಂಗವಾಗಿ ಸಾಹಿತ್ಯ ಗೋಷ್ಠಿ, ಶಿಕ್ಷಣಗೋಷ್ಠಿ, ಮಹಿಳಾಗೋಷ್ಠಿಗಳು ನಡೆದರೆ ಸಮಾಜಕ್ಕೆ ಹೊಸ ಚೇತನ. ಸಾಹಿತ್ಯ ಸಂಸ್ಕೃತಿಗಳ

ಸಂಶೋಧನೆಯಲ್ಲಿ ಹೊಸಲಾದ ವ್ಯಕ್ತಿಗಳು ನಮ್ಮಲ್ಲಿ ಇದ್ದಾರೆ. ಶ್ರೀ ಸಿದ್ದಯ್ಯನವರು ಪುರಾಣಿಕರು ಬಿ. ಎ. ಎಲ್. ಎಲ್. ಬಿ. ಶ್ರೀ ಮಾಳವಾಡರು, ಶ್ರೀ ಭೂಸನೂರ ಮಠ ಶ್ರೀ ಸಾಸನೂರರೇ ಮೊದಲಾದವರು ಆ ಕ್ಷೇತ್ರಕ್ಕೆ ಕಳೆತಂದವರಾಗಿದ್ದಾರೆ. ಮಹಾ ಸಭೆ ಅವರನ್ನು ಮರೆಯದಿರಲಿ. ಇವತ್ತಿಗೂ ಅಚ್ಚಾಗದೇ ಇರುವ ಕೈಬರಹ ತಾಡಓಲೆಗಳ ಪ್ರದರ್ಶನ ಅವಶ್ಯ ಏರ್ಪಾಡಾಗುವದು ಮುಖ್ಯ. ಒಟ್ಟಾರೆ ಪ್ರಪಂಚದ ನಾಗರಿಕತೆಗೆ ಭಾರತದ ನಾಗರಿಕತೆ ಆಧಾರವಾಗಿದ್ದಲ್ಲಿ ಭಾರತೀಯರ ನಾಗರಿಕತೆಗೆ ಶೈವ ಸಂಸ್ಕೃತಿಯೇ ಆಧಾರದೆಂದು ನನ್ನ ಮತ. ಇದು ಧರ್ಮದ ದುರಭಿಮಾನವಲ್ಲ. ಸಂಶೋಧಕರ ಸದಭಿಪ್ರಾಯ ದಿವ್ಯ ಸಂದೇಶ ಅ. ಭಾ. ವೀರಶೈವ ಮಹಾಸಭೆಯ ಹಿತೈಷಿಗಳು ನನ್ನ ವಿಚಾರಗಳನ್ನು ಪರಾಮರ್ಶಿಸಬೇಕಾಗಿ ನನ್ನ ವಿನಂತಿ.

—o—

# ಅಂಕಲಗಿ ಮಠದ ವರ್ಣನೆ

( ಲೇಖಕರು- ಕವಿಗಳು ಕುರುಗುಂದ )

---

ಅಂಕಲಗಿ ಕ್ಷೇತ್ರವಿದು ಕರ್ನಾಟಕ ಪ್ರಾಂತದೊಳ್
ಶಂಕರಿಂ ರಾಜಗಿಂ ಶಂಕೇಜ ಭೂಮಿಯಿಂ
ಶಂಕರನ ಶರಣರಿಂ ಶಬರಜನ ವೃಂದದಿಂ ಶ್ರೇಷ್ಠಿಗಳ ಬಳಗದಿಂದೆ
ಅಂಕೆಯಿಲ್ಲದೆ ಮೆರೆವ ಸದ್ಭಕ್ತ ನಿಕರದಿಂ
ಬಿಂಕದಿಂ ಷಡಕ್ಷರಿ ದೇವ ಕೃತ ಶಬರ
ಶಂಕರ ವಿಲಾಸದೊಳು ವೈಭವದಿ ಹೆಸರಾಂತು ವಿರಾಜಿಸುತ್ತಿರುವದು

ವಾರ್ಧಿಕ

ಪೊಡವಿಯೊಳ್ ಮೇಲಾದ ಶ್ರೀಯಡವಿ ಸಿದ್ಧೇಶ
ಕಡುಮುದದಿ ನಿನ್ನಡಿಗೆ ಭಕ್ತಿಯಿಂ ಪೊಡಮಡುವೆ
ಮೃಡನೆರಡನೆಯವತಾರ ಶರಣ ಶಿರೋಮಣಿಯೆ ! ಪಾಲಿಸೈ
ಕರುನಾಡನು.

ದೃಢತರದ ಭಕ್ತಿಯಂ ಧೈರ್ಯವಂ ತಾಳ್ಮೆಯಂ
ಸಡಗರದ ಸುಪ್ರಸಾದ್ಧರಕೆಯನ್ನಿತ್ತಿರಲು
ಬೇಡುವದು ಯೇನುಂಟು ? ತಿರು ತಿರುಗಿ ಕೊಡುವದೈ ! ತವಪಾದ
ಭಕ್ತಿಯನ್ನು.

ಬಳ್ಳಾರಿ ನೆರೆಯಲ್ಲಿ ಅಂಕಲಗಿ ಬಳಿಯಲ್ಲಿ
ಸಲ್ಲಲಿತ ಪತ್ರಿಯಾ ಬನದೊಳಗೆ ಅಡವೀಶ
ನಿಲಯುವಿದು ಕೈಲಾಸದಂದದಲಿ ಕಣ್ಮನೋಹರವಾಗಿ
ರಂಜಿಸುವದು.

ಬಲ್ಲಿದರ ತಾಣವಿದು ಬಡವರರ ಮನೆಯಾಗಿ
ಎಲ್ಲರಿಗು ಬೇಕಾಗಿ ನಿಜಸುಖಕೆ ನೆಲೆಯಾಗಿ
ಒಳ್ಳಿತ್ತು ಕಾಯಕದ ಹೆದ್ದಾರಿ ತೋರಿಸುತೆ ಪ್ರೇಮಮಯ
ಮಾಗಿಹುದು.

ಅಡಿಗಡಿಗೆ ಆನಂದ ಕೊಡುತಿರುವ ಅಡವೀಶ
ಎಡಬಿಡದೆ ನಿನ್ನಡಿಗೆ ಸಡಗರದಿ ಪೊಡಮಡುವೆ
ಅಡೆತಡೆಗಳೆಲ್ಲವನು ಹೊರದೂಡಿ ಕಾವುದೈ !
ಕಾಂತಾರ ಶ್ರೀಕಾಂತನೆ ।

ಒಡೆಯ ಶ್ರೀ ಸಿದ್ಧೇಶ ! ಒಡನೊಡನೆ ನುತಿಸುವೆನು
ನಡೆನುಡಿಯುಲೊಂದಾಗಿ ನುಡಿಸೇಡ ಮಾಡಲ್ಕೆ
ಕೊಡುವದೈ ! ದೃಢತರವ ಭಕ್ತಿಯಂ ಯುಕ್ತಿಯಂ ಶ್ರೀ ಶಕ್ತಿ
ಸಂಪದವನು ॥

ಗುಜನಾಳ ಸುಲಧಾಳ ಗಂಭೀರ ಗ್ರಾಮದಿಂ
ಭಜಕ ಜನ ವೃಂದದಿಂ ಬಾಲಕರ ನಿಕರದಿಂ
ಸುಜನ ಜನ ಸಂಘದಿಂದಡವೀಶ ತಾಣವಿದು ಪರಿಶೋಭಿಸುತ್ತಿರುವದು
ಅಕ್ಕರೆಯು ಜನಗಳಿಂ ಅಕ್ಕನಾ ಬಳಗದಿಂ
ಕಕ್ಕುಲತೆ ಮಿಗಿಲಾಗಿ ಕಾಂಗ್ರೆಸದಿ ಸಲೆ ದುಡಿದು
ದಿಕ್ಕು ದಿಕ್ಕಿನೊಳೆಲ್ಲ ಕಾಂತಿಯಿಂ ಮೆರೆವಕ್ಕ ತಂಗೇರ ಹಾಳದಿಂದೆ
ತಂಗಿಯರ ಹಳ್ಳದಿಂದೆ ।

ಸಕ್ಕರೆಗೆ ಮಿಗಿಲಾಗಿ ಸವಿಯೊಳಗೆ ಹೆಚ್ಚಾಗಿ
ಅಕ್ಕರದಿ ತನ್ನೆಡೆಗೆ ಜನರನ್ನು ಸೆಳೆಯುತಿದೆ
ಚೊಕ್ಕಾಗಿ ಶೋಭಿಸುವ ಸಹಕಾರ ವೃಕ್ಷದಿಂ ಸೊಗಸಾಂತ
ಬನಗಳಿಂದೆ ॥

ಇವರೇ ಕಾರಣರಾಗಿದ್ದಾರೆ. ಚನ್ನಬಸವೇಶ್ವರನು ವೀರಶೈವಸಮಾಜದ ಸುವ್ಯ ವಸ್ಥೆಗೂ ಕಾರಣನಾದನೆಂದು ವೀರಶೈವ ಗ್ರಂಥಗಳಲ್ಲಿ ಹೇಳಲ್ಪಡುತ್ತದೆ. ಇದು ನಿಜವೆಂದು ತೋರುತ್ತದೆ. ಅವನು ಏಕೋತ್ತರದ ಶತಸ್ಥಲಗಳು ಷಟ್‌ಸ್ಥಲಗಳು, ಪಂಚಾಚಾರಗಳು, ಅಷ್ಟಾವರಣಗಳು, ಷಟ್‌ಸ್ಥಲಸಕೀಲ ಗಳು, ಪಾದೋದಕ ಪ್ರಸಾದದ ವಿಧಾನಗಳು, ಮಂತ್ರಶಾಸ್ತ್ರ ಈ ಮಹತ್ವದ ವಿಷಯಗಳ ಬಗ್ಗೆ ಜ್ಞಾನಮಾಡಿಕೊಂಡು ಅವುಗಳನ್ನು ವ್ಯವಸ್ಥೆ ಗೊಳಿಸಲು ಕಾರಣನಾಗಿದ್ದಾನೆ. ವೀರಶೈವ ಮತದಲ್ಲಿ ಒಂದು ಕಾಲದಲ್ಲಿ ಕೇವಲ ತಾತ್ವಿಕ ವಿಚಾರಗಳು ಹೆಚ್ಚಾಗಿ ಇದ್ದವು. ಆದರೆ ಈ ವಿಚಾರಗ ಳನ್ನು ಆಚರಣೆಗೆ ತರುವ ಕಾರ್ಯವನ್ನು ಚನ್ನಬಸವೇಶ್ವರನು ಪೂರ್ತಿ ಮಾಡಿದ್ದಾನೆ. ಈ ಪ್ರಕಾರ ಅವನು ಷಟ್‌ಸ್ಥಲಶಾಸ್ತ್ರದಲ್ಲಿ ಕ್ರಾಂತಿಯನ್ನು ಮಾಡಿದ್ದಾನೆ. ಅವನ ಈ ಕಾರ್ಯವು ಅಮೌಲ್ಯವಾಗಿರುತ್ತದೆ.

ಈ ಕಾಲದಲ್ಲಿ ಬಸವೇಶ್ವರನಿಗೆ ಬಿಜ್ಜಳ ರಾಜನ ವರ್ತನೆಯ ಮೂಲಕ ಆಗಿಂದಾಗ್ಗೆ ತೊಂದರೆಗಳುಂಟಾಗುತ್ತಿದ್ದವು. ಇಂಥ ಸಮಯೇ ಗಳಲ್ಲಿ ಅವನು ತನ್ನ ಸಹಾಯಕ್ಕೋಸ್ಕರ ಮಡಿವಾಳಮಾಚಿದೇವ ಕಿನ್ನರಿ ಬ್ರಹ್ಮಯ್ಯ, ಕೇತಯ್ಯ ಮೊದಲಾದವರನ್ನು ಕರೆದುಕೊಂಡು ಹೋಗುತ್ತಿ ದ್ದನು. ಆಗ ಅವನು ತನ್ನ ಕೂಡ ಚನ್ನಬಸವೇಶ್ವರನನ್ನು ಯಾವಾಗಲೂ ಕರೆದುಕೊಂಡು ಹೋಗುವನು. ಅವನ ಮೇಲೆ ವಿಶ್ವಾಸವು ಇಷ್ಟು ಮಿಗಿಲಾ ಗಿದ್ದಿತು. ಚನ್ನಬಸವೇಶ್ವರನು ಬಸವೇಶ್ವರನಕಿಂತಲೂ ಬಹಳ ಚಿಕ್ಕವನು. ಆದರೂ ಅವನು ಅವನಕೂಡ ಯಾವಾಗಲೂ ಆದರ ಭಾವದಿಂದ ವರ್ತಿ ಸುವನು. ಆದ್ದರಿಂದ ಚನ್ನಬಸವೇಶ್ವರನ ವರ್ಚಸ್ಸು ಎಲ್ಲ ಶಿವಶರಣರ ಮೇಲೆ ಅತ್ಯಂತವಾಗಿ ಇದ್ದು ಅವರು ಅವನನ್ನು ಬಹಳ ಆದರಿಸುವರು. ಅವನು ಅತ್ಯಂತ ಜ್ಞಾನಿಯು. ಅವನು ಕರಣಹಸಿಕೆ, ಮಂತ್ರ ಗೋಪ್ಯ ವಚನ ಗ್ರಂಥಗಳನ್ನು ಬರೆದಿದ್ದಾನೆ. ಅವನು ತೀಕ್ಷ್ಣಬುದ್ಧಿಯವನು. ಇದಲ್ಲದೆ ಅವನು ಇನ್ನೂ ಅನೇಕ ಗ್ರಂಥಗಳನ್ನುಬರೆದಿರಬಹುದು.ಆದರೆ ಅವು ನಮಗೆ ಇನ್ನೂ ಉಪಲಬ್ಧವಾಗಿಲ್ಲ.

ಚನ್ನಬಸವೇಶ್ವರನು ಅತ್ಯಂತ ಶೂರನಾಗಿದ್ದನೆಂಬುದು ನಾವು ಈ ವರೆಗೆ ವಿವರಿಸುತ್ತ ಬಂದ ವಿವರಣೆಗಳಮೇಲಿಂದ ಗೊತ್ತಾಗುತ್ತದೆ. ಅವನು ಶೂರನಾಗಿದ್ದಂತೆಯೇ ಯುದ್ಧಕಾರ್ಯಗಳನ್ನು ನಡಿಸುವಲ್ಲಿ ಬಹು ಜಾಣ್ಮೆ

ಯುಳ್ಳವನಾಗಿದ್ದಾನೆ. ಅವನು ಯುದ್ಧಕಲೆಯನ್ನು ಚನ್ನಾಗಿ ಅರಿತವನಾಗಿ
ದ್ದನು. ಶಿವಶರಣರು ಕಲ್ಯಾಣದಲ್ಲಿ ಸುರಕ್ಷಿತವಾಗಿ ನಿಲ್ಲುವದು ಅಶಕ್ಯ
ವೆಂದು ಅವನಿಗೆ ತೋರಿದ ಕೂಡಲೇ ಅವನು ಬಿಜ್ಜಳನಿಗೆ ಯೋಗ್ಯ ಪ್ರತೀ
ಕಾರ ಮಾಡಿ ಕಲ್ಯಾಣದಿಂದ ಹೊರಬಿದ್ದನು. ಅವನು ಯಾವ ಮಾರ್ಗ
ದಿಂದ ತೊರಗಲ್ಲು ನಾಡಿಗೆ ಹೋದನೆಂಬುದು ಸ್ಪಷ್ಟವಾಗಿ ಗೊತ್ತಾಗಿಲ್ಲ.
ಆದರೆ ಬಸವೇಶ್ವರನ ಕಾಲದಲ್ಲಿ ತೊರಗಲ್ಲು ನಾಡು ಅಂದರೆ ಈಗಿನ ಬೈಲ
ಹೊಂಗಲ ತಾಲೂಕಿನಲ್ಲಿ ಮತ್ತು ಅದರ ದಕ್ಷಿಣಕ್ಕಿರುವ ಕಿತ್ತೂರು ನರೇಂದ್ರ
ಧಾರವಾಡ ಹುಬ್ಬಳ್ಳಿ ಈ ಪಟ್ಟಣಗಳಿರುವ ಪ್ರದೇಶದಲ್ಲಿ ನಿಬಿಡವಾದ
ಅರಣ್ಯವಿತ್ತು. ಇದು ಹಿಂದಿನಕಾಲದಲ್ಲಿ ಈಗಿನಂತೆ ಬೈಲುಪ್ರದೇಶವಾಗಿರಲಿಲ್ಲ.
ಸವದತ್ತಿ ಅಥವಾ ಸುಗಂಧವರ್ತಿ ಸಪ್ಪುತೀರ್ಥ ಸೊಗಲು ಯಲ್ಲಮ್ಮನ
ಗುಡ್ಡ ಇವುಗಳಿದ್ದ ಪ್ರದೇಶಗಳಾದರೂ ವೃಕ್ಷಗಳಿಂದ ತುಂಬಿಕೊಂಡು
ಭಯಂಕರವಾದ ಅರಣ್ಯವಾಗಿದ್ದಿತು. ಆದ್ದರಿಂದ ಚನ್ನಬಸವೇಶ್ವರನು ಕಲ್ಯಾ
ಣವನ್ನು ಬಿಟ್ಟ ಬಳಿಕ ಸರಳ ಮಾರ್ಗದಿಂದ ಬಹು ಒತ್ತರದಿಂದ ಈ
ಬಿಸ್ಕಟ್ಟಿನ ಪ್ರದೇಶಕ್ಕೆ ಬಂದಿರಬೇಕೆಂದು ನಾವು ಊಹಿಸುತ್ತೇವೆ.

ಅವನು ಈ ಪ್ರದೇಶಕ್ಕೆ ಬಂದಬಳಿಕ ಅವನು ಭದ್ರವಾದ ಸ್ಥಳಗ
ಳನ್ನು ಮೊದಲು ಆಯ್ದುಕೊಂಡು ಅಲ್ಲಿಂದ ಅವನು ಸುತ್ತಲಿನ ಪ್ರದೇಶ
ದಲ್ಲಿ ವೈರಿಗಳ ವಿರುದ್ಧವಾಗಿ ದಾಳಿಇಡುತ್ತಿದ್ದನೆಂದು ನನಗೆ ತೋರುತ್ತದೆ.
ಈ ದಾಳಿಗಳಲ್ಲಿ ಅವನು ಯಶಸ್ಸನ್ನು ಹೊಂದಿರಬಹುದೆಂತಲೂ ನನಗೆ
ತೋರುತ್ತದೆ. ಒಂದುವೇಳೆ ಅವನು ಅವುಗಳಲ್ಲಿ ಅಪಜಯಹೊಂದಿದ್ದರೆ
ಅವನ ಸೈನ್ಯವನ್ನು ವೈರಿಗಳು ಸಂಪೂರ್ಣವಾಗಿ ನಾಶವಮಾಡಿ ಬಿಡುತ್ತಿ
ದ್ದರು. ಈ ಸ್ಥಿತಿಯನ್ನು ತಂದುಕೊಳ್ಳದೆ ಅವನು ಅವರನ್ನು ಹಿಂದಕ್ಕಟ್ಟುತ್ತ
ಮೆಲ್ಲಮೆಲ್ಲನೆ ಉಳವಿಯಕಡೆಗೆ ಸರಿಯುತ್ತ ಈ ಉಳವಿ ಕಾಡು ಪ್ರದೇ
ಶಕ್ಕೆ ಬಂದನು. ಅವನು ಇಲ್ಲಿಯೇ ಚಿರಸ್ಥಾಯಿಯಾಗಿ ಉಳಿದುಕೊಂಡು
ವೀರಶೈವ ಮತಕ್ಕೋಸ್ಕರ ಒಂದು ಮಹಾಪೀಠವನ್ನು ರಚಿಸಲು ಗೊತ್ತು
ಮಾಡಿದ್ದನು. ಇದು ಅವನ ವೈರಿಗಳಿಗೆ ತಿಳಿದಿತ್ತು. ಆದ್ದರಿಂದ ಅವರು
ಅವನನ್ನು ಸಂಪೂರ್ಣವಾಗಿ ಸೋಲಿಸಿ ಅದನನ್ನೂ ಶಿವಶರಣರನ್ನೂ ನಾಶ
ಮಾಬೇಕೆಂದು ನಿಶ್ಚಯಿಸಿದ್ದರು. ಆಗ ಅವರು ಅವನನ್ನು ಬೆನ್ನಟ್ಟುವ
ದನ್ನು ಬಿಡದೆ ಉಳವಿಯ ವಿಭಾಗದಲ್ಲಿ ಅವನ ದಂಡಾಳುಗಳನ್ನು ಮುತ್ತಿ
ಅವರನ್ನು ನಾಶಮಾಡಿದರು.

ಉಳವಿಯು ಬಹು ಭದ್ರವಾದ ಪ್ರದೇಶವು. ಅದು ಅಲ್ಲಿ ಒಂದು ಸಣ್ಣ ಕಂದರವಾಗಿರುತ್ತದೆ. ಅದರ ಸುತ್ತಲೂ ಎತ್ತರವಾದ ಪರ್ವತಗಳು ಹಬ್ಬಿವೆ. ಈ ಪರ್ವತಗಳನ್ನು ದಾಟಿ ಉಳವಿಗೆ ಹೋಗಲು ಒಂದು ಬಹು ಬಿಕ್ಕಟ್ಟಿನ ದಾರಿ ಇರುತ್ತದೆ. ಆಗ್ನೇಯ ದಿಕ್ಕಿಗೆ ಗಣೇಶನ ಗುಡಿ, ಎತ್ತು ಕಾಯುವ ಬಸವ, ಎಂಬ ಹೆಸರಿನ ಸ್ಥಳಗಳಿವೆ. ಈ ಸ್ಥಳಗಳ ಮುಂದೆ ಕಾಳೀನದಿಯು ಉಭಯದಿಂದ ಹರಿಯುತ್ತದೆ. ಈಶಾನ್ಯ ದಿಕ್ಕಿಗೆ ಆಕಳಗವಿ ವಿಭೂತಿಯ ಕಣಜ ರುದ್ರಾಕ್ಷಿ ಮಂಟಪ ಎಂಬ ಹೆಸರಿನ ಗವಿಗಳಿವೆ. ಇವೆಲ್ಲವು ಬಹು ಬಿಕ್ಕಟ್ಟಿನ ಪ್ರದೇಶದಲ್ಲಿವೆ. ಈ ಗವಿಗಳಿಗೆ ಸಮೀಪವಾಗಿಯೇ ಚಿಲುಮೆ ಅಗ್ಗಣಿ ಎಂಬ ಒಗ್ಗೆಯು ಇರುತ್ತದೆ. ಇದರೊಳಗಿಂದ ನೀರು ಯಾವಾಗಲೂ ಹೊರಬೀಳುತ್ತಿರುತ್ತದೆ. ಇದರಲ್ಲಿಯ ನೀರು ಪರ್ವತದ ಮಧ್ಯಭಾಗದಿಂದ ಹೊರಗೆ ಚಿಮ್ಮುತ್ತ ಬರುತ್ತದೆ. ಇದರಿಂದ ಶಿವಶರಣರು ಈ ಭಾಗದಲ್ಲಿ ಹೆಚ್ಚುಕಾಲ ವಾಸ ಮಾಡಿರಬಹುದೆಂದು ತೋರುತ್ತದೆ. ಯಾಕಂದರೆ ಇಲ್ಲಿ ವಾಸಕ್ಕೆ ಯೋಗ್ಯವಾದ ಅನೇಕ ಗವಿಗಳು ಇವೆ. ಈ ಪ್ರದೇಶದ ಉತ್ತರಕ್ಕೆ ಮಹಾಮನೆಯು ಕೊಳ್ಳವಿದೆ. ಇದು ಬಹು ಬಿಕ್ಕಟ್ಟಿನ ಪ್ರದೇಶವಾಗಿದೆ. ಚನ್ನಬಸವೇಶ್ವರನು ಉಳವಿಯ ಈ ಭದ್ರವಾದ ಸ್ಥಳವನ್ನು ಆಯ್ದುಕೊಂಡು ವೀರಶೈವರಿಗೆ ಇದನ್ನು ಮುಖ್ಯಧಾರ್ಮಿಕ ಪೀಠವನ್ನಾಗಿ ಮಾಡಲು ಯೋಚಿಸಿದ್ದನೆಂದು ತೋರುತ್ತದೆ. ಈ ಭಾಗದ ನೆರೆಯಲ್ಲಿಯೇ ಬನವಾಸಿ ಗೋಕರ್ಣ ಮೊದಲಾದ ಮಹತ್ವದ ಕ್ಷೇತ್ರಸ್ಥಾನಗಳಿವೆ. ಇದರ ಮಗ್ಗುಲಿನಿಂದಲೇ ಪಶ್ಚಿಮ ಸಮುದ್ರಕ್ಕೆ ಹೋಗುವ ಗಟ್ಟದ ಮಾರ್ಗಗಳಿವೆ. ಈ ಮಾರ್ಗಗಳ ಮೂಲಕ ಕರ್ನಾಟಕದ ವ್ಯಾಪಾರವು ಪರದೇಶಗಳ ಕೂಡ ಅವ್ಯಾಹತವಾಗಿ ನಡೆಯುತ್ತಿತ್ತು. ಈಗಿನ ಕಾರವಾರ ಕುಮಟಾ ಹೊನ್ನಾವರ ಈ ಬಂದರಗಳು ಈ ಭಾಗಕ್ಕೆ ದೂರವಿರುವದಿಲ್ಲ. ಕೆಲವು ಶತಮಾನಗಳಾದ ಮೇಲೆ ಸ್ಥಳಕ್ಕೆ ಸಮೀಪವಾಗಿರುವ ಸ್ವಾದಿ ಮತ್ತು ಬೀಳಗಿ ಭಾಗಗಳಲ್ಲಿ ಜೈನರು ಬಂದು ತಮ್ಮ ರಾಜ್ಯಸ್ಥಾಪನೆ ಮಾಡಿದ್ದು ಕಂಡುಬರುತ್ತದೆ. ವೀರಶೈವ ಧರ್ಮವು ಬೆಳೆದ ಬಳಿಕ ಅವರು ಕರ್ನಾಟಕದಲ್ಲಿ ನಿಲ್ಲದೆ ಅವರು ಈ ಪ್ರದೇಶಗಳಿಗೆ ಬಂದು ವಸಾಹತು ಮಾಡಿದ್ದಾರೆ.

ಉಳವಿಯ ಸಂಗ್ರಾಮದ ತರುವಾಯ ಕರ್ನಾಟಕದ ಭಾಗಗಳಲ್ಲೆಲ್ಲ ಶಿವಶರಣರ ಮಹತ್ತರವಾದ ಸಾಮಾಜಿಕ ಕ್ರಾಂತಿಯು ಉಂಟಾಯಿತು.

ಇದರ ಪರಿಣಾಮವಾಗಿ ಜೈನ ಧರ್ಮವಿದ್ದ ಸ್ಥಳಗಳಲ್ಲೆಲ್ಲ ವೀರಶೈವಧರ್ಮವು ಕಾಣಿಸಿಕೊಂಡಿತು. ಹೀಗೆ ವೀರಶೈವರ ಸಂಸ್ಕೃತಿಯು ಬೆಳೆಯಹತ್ತಲು ಈ ಕಡೆಗೆ ವಾಸಿಸುತ್ತಿದ್ದ ಜೈನರು ಸ್ಥಳಾಂತರಮಾಡಿ ಈಗಿನ ಬೆಳಗಾವ ಕೊಲ್ಹಾಪುರ ಕಾರವಾರ ಮತ್ತು ಮಂಗಳೂರು ಜಿಲ್ಹೆಗಳಲ್ಲಿ ಅನೇಕ ಕಡೆಗೆ ಹೋಗಿ ವಸಾಹತ್ತುಗಳನ್ನು ಮಾಡಿಕೊಂಡು ವಾಸಿಸುತ್ತ ಬಂದರು.

ಇದೇ ರೀತಿಯನ್ನು ಉಳವಿಯಲ್ಲಿ ಕೈಕೊಳ್ಳಬೇಕೆಂದು ಚನ್ನಬಸವೇಶ್ವರನು ಆಲೋಚಿಸಿದ್ದನು. ಆದರೆ ಶಿವಶರಣರ ತತ್ವಗಳ ಪ್ರಭಾವದ ಮೂಲಕ ನಾಡಿನಲ್ಲಿ ಬೇರೆ ಘಟನೆಗಳು ಉಂಟಾದವು. ಇವುಗಳ ಪರಿಣಾಮವಾಗಿ ವೀರಶೈವ ಧರ್ಮವು ಇಡೀ ಉತ್ತರ ಮತ್ತು ಮಧ್ಯ ಕರ್ನಾಟಕ ಪ್ರದೇಶಗಳಲ್ಲಿ ಬಹುದಟ್ಟವಾಗಿ ವ್ಯಾಪಿಸಿತು. ಇದು ಸತ್ವಶಾಲಿಯಾದ ಶಿವಶರಣರ ಉದಾರ ವಿಚಾರಗಳ ಮೂಲಕವೇ ಎಂಬುದು ಸ್ಪಷ್ಟವದೆ.

ಆದರೆ ಮುಂದೆ ಉಳವಿಯು ಧರ್ಮಪೀಠವಾಗದೆ ಹೋಗಿ ಅದರ ದಕ್ಷಿಣಭಾಗದಲ್ಲಿರುವ ಮೈಸೂರ ಸೀಮೆಯಲ್ಲಿರುವ ಕಡೂರ ಜಿಲ್ಹೆಯಲ್ಲಿಯ ಬಾಳೆಹೊನ್ನೂರು ಅಥವಾ ಬಾಳೆಹಳ್ಳಿ ಇದು ವೀರಶೈವರಿಗೆ ಮುಖ್ಯ ಪೀಠವಾಯಿತು. ಉಳವಿಯ ಘಟನೆಗಳಲ್ಲಿ ಮುಖ್ಯ ಭಾಗವಹಿಸಿದವರು ರುದ್ರಮುನಿಯು. ಅವನ ಸಲಹೆಯ ಮೇರೆಗೆ ಬಾಳೇಹಳ್ಳಿಭಾಗವು ವೀರಶೈವರಿಗೆ ಮುಖ್ಯ ಪೀಠವಾಯಿತು.

ಈ ಪ್ರಕಾರ ರುದ್ರಮುನಿ ಚನ್ನಬಸವೇಶ್ವರ ಕಿನ್ನರೀಬ್ರಹ್ಮಯ್ಯ ಮಡಿವಾಳಮಾಚಿದೇವ ನಾಗಲಾಂಬಿಕೆ ಶೂಲದ ಬೊಮ್ಮಯ್ಯ ನುಲಿಯ ಚಂದಯ್ಯ ಗಂಗಾಂಬಿಕೆ ಕಕ್ಕಯ್ಯ ಈ ಮಹಾಪುರುಷರ ಮೂಲಕ ಈ ಕಾಲಕ್ಕೆ ವೀರಶೈವಸಮಾಜದಲ್ಲಿ ಒಂದು ಅದ್ಭುತ ಕ್ರಾಂತಿಯುಂಟಾಯಿತು. ಇವರಿಗೆಲ್ಲ ಮುಖ್ಯಸ್ಥನು ಅತ್ಯಂತ ಸಾಹಸಿಗನಾದ ಚನ್ನಬಸವೇಶ್ವರನೇ ಇದ್ದಾನೆ. ಇವನ ಮೂಲಕ ವೀರಶೈವ ಧರ್ಮವು ನಾಡಿನಲ್ಲಿ ಸ್ಥಿರವಾಗಿ ಉಳಿಯಿತು.

# ಜೈನ ಗ್ರಂಥಕಾರರ ವೃತ್ತಾಂತಗಳು

ಇಲ್ಲಿಗೆ ಚನ್ನಬಸವೇಶ್ವರನ ಚರಿತ್ರೆಯನ್ನು ನಿಲ್ಲಿಸಿ ಜೈನರು ಶಿವಶರಣರ ವಿಷಯವಾಗಿ ವಿವರಿಸಿರುವ ಕೆಲವು ವೃತ್ತಾಂತಗಳನ್ನು ವಿವೇಚಿಸುವದು ಅವಶ್ಯ ತೋರುತ್ತದೆ. ಯಾಕಂದರೆ ಫ್ಲೀಟ, ಭಂಡಾರಕರ, ಮೊದಲಾದ ಗ್ರಂಥಕಾರರು ಬಸವೇಶ್ವರನ ವಿಷಯವಾಗಿ ಮುಖ್ಯವಾಗಿ ಜೈನರ ವೃತ್ತಾಂತಗಳನ್ನು ಅವಲಂಬಿಸಿ ಬಸವ, ಚನ್ನಬಸವ, ನಾಗಲಾಂಬಿಕೆ ಇವರ ಶೀಲ, ನಡೆ ಇವುಗಳನ್ನು ವಿಪರ್ಯಾಸ ಮಾಡಿ ತಮ್ಮ ಗ್ರಂಥಗಳಲ್ಲಿ ಪ್ರಕಟಿಸಿದ್ದಾರೆ. ಅವರು ಬರೆದ ಐತಿಹಾಸಿಕ ಗ್ರಂಥಗಳು ಈಗಲೂ ಆಧಾರ ಗ್ರಂಥಗಳೆಂದೆನಿಸಿಕೊಳ್ಳುತ್ತವೆ. ಆದ್ದರಿಂದ ಅವರು ವಿವರಿಸಿದ ವೃತ್ತಾಂತಗಳು ಮಹತ್ವದ ಇತರ ಐತಿಹಾಸಿಕ ಗ್ರಂಥಗಳಲ್ಲಿಯೂ ಪಠ್ಯಪುಸ್ತಕಗಳಲ್ಲಿಯೂ ಕೂಡ ಬಂದಿರುತ್ತವೆ. ಅವರು ಮಾಡಿದ ವಿಧಾನಗಳನ್ನು ವೀರಶೈವರು ಆಧಾರ ಪೂರ್ವಕವಾಗಿ ಖಂಡನೆ ಮಾಡಿರುವದಿಲ್ಲ. ಕೆಲವು ಕಡೆ ಕೆಲ ಮಹನೀಯರು ಅವುಗಳನ್ನು ಖಂಡನೆ ಮಾಡಿದ್ದುಂಟು. ಆದರೂ ಅವುಗಳನ್ನು ಪರಮತೀಯರಾದ ಗ್ರಂಥಕಾರರು ಕಡೆಗಣಿಸುತ್ತಾರೆ ಇದು ಅತ್ಯಂತ ಶೋಚನೀಯವಾಗಿದೆ.

ನಾವು ಈ ವರೆಗೆ ಶಿವಶರಣರ ಚರಿತ್ರೆಗಳನ್ನು ಮೂರು ಭಾಗಗಳಲ್ಲಿ ಪ್ರಕಟಿಸಿದ್ದು ಅವುಗಳ ಮೇಲಿಂದ ಶಿವಶರಣರು ಎಂಥ ಉಚ್ಚ ವರ್ತನೆಯುಳ್ಳವರಾಗಿದ್ದರೆಂಬುದು ಸ್ಪಷ್ಟವಿದೆ. ಆದರೂ ಅವರಲ್ಲಿ ಚನ್ನಬಸವ, ನೀಲಾಂಬಿಕೆ, ನಾಗಲಾಂಬಿಕೆ ಇವರ ವಿಷಯವಾಗಿ ಸಲ್ಲದ ಆರೋಪಗಳು ಮಾಡಲ್ಪಟ್ಟಿರುತ್ತವೆ. ಇವುಗಳನ್ನಷ್ಟೇ ನಾವು ಇಲ್ಲಿ ಉಲ್ಲೇಖಿಸುತ್ತೇವೆ.

ಜೈನರ ವೃತ್ತಾಂತಗಳು ಮೂರು ಗ್ರಂಥಗಳಲ್ಲಿ ಇರುವದಾಗಿ ತಿಳಿಯುತ್ತದೆ. ಫ್ಲೀಟ ಸಾಹೇಬರು 'ವಿಜಲಾಂಕ ಕಾವ್ಯ' ಎಂಬ ಸಂಸ್ಕೃತ ಗ್ರಂಥವನ್ನು ಆಧಾರವಾಗಿಟ್ಟುಕೊಂಡು ತಮ್ಮ ಗ್ರಂಥದಲ್ಲಿ ವಿವರಿಸಿರುತ್ತಾರೆ. ಅದು ಹೇಗೆಂದರೆ— ಬಸವೇಶ್ವರನಿಗೆ ಪದ್ಮಾವತಿ ಎಂಬ ತಂಗಿಯೊಬ್ಬಳಿದ್ದಳು. ಅವಳು ಬಹು ಸುಂದರಿಯಾಗಿದ್ದಳು. ಬಿಜ್ಜಳನು ಅವಳಿಗೆ ಮೋಹಿತನಾಗಿ ರಾಜ್ಯಭಾರವನ್ನು ಬಸವೇಶ್ವರನಿಗೆ ಒಪ್ಪಿಸಿ ತಾನು ಅಂತಃಪುರದಲ್ಲಿ ಯಾವಾಗಲೂ ವೇಳೆಗಳೆಯಹತ್ತಿದನು. ಬಸವೇಶ್ವರನು ಬಿಜ್ಜಳನ ಈ ವರ್ತನೆಯ ಮೂಲಕ ನಿರಂಕುಶ ವೃತ್ತಿಯುಳ್ಳವನಾಗಿ ಬೊಕ್ಕಸ

ದಕ್ಷಿಣೆಯ ಹಣವನ್ನು ದುರ್ವ್ಯಯ ಮಾಡುತ್ತ ವೀರಶೈವ ಧರ್ಮವನ್ನು ಪ್ರಸಾರ ಮಾಡಹತ್ತಿದನು. ಇದು ಬಿಜ್ಜಳನಿಗೆ ತಿಳಿದು ಬರಲು ಅವನು ಬಸವೇಶ್ವರನನ್ನು ಕುರಿತು ಆಕ್ಷೇಪಿಸಹತ್ತಿದನು. ಹೀಗಿರಲು ಬಿಜ್ಜಳನು ಶಿಲಾಹಾರರ ರಾಜಧಾನಿಯಾದ ಕೊಲ್ಲಾಪುರದಿಂದ ಕಲ್ಯಾಣಕ್ಕೆ ಬರುವ ಸಮಯದಲ್ಲಿ ಬಸವೇಶ್ವರನು ಅವನಿಗೆ ಕಳಿಸಿದ ಒಂದು ವಿಷಪೂರಿತ ಹಣ್ಣನ್ನು ತಿನ್ನಲು ಅವನು ಮರಣ ಹೊಂದಿದನು. ಆಗ ಬಿಜ್ಜಳನ ಮಗನು ಬಸವೇಶ್ವರನನ್ನು ಶಿಕ್ಷಿಸಲು ಉದ್ಯುಕ್ತನಾದನು. ಬಸವೇಶ್ವರನು ಉಳವಿಗೆ ಓಡಿ ಹೋಗಿ ಅಲ್ಲಿ ಒಂದು ಬಾವಿಯಲ್ಲಿ ಬಿದ್ದು ಆತ್ಮಹತ್ಯ ಮಾಡಿಕೊಂಡನು.

'ಬಿಜ್ಜಳಾಂಕ ಚರಿತೆ' ಎಂಬ ಬೇರೊಂದು ಕಾವ್ಯ ಗ್ರಂಥವಿದ್ದು ಅದರಲ್ಲಿ ಮೇಲೆ ವರ್ಣಿಸಿದಂತೆಯೇ ಕಥೆಯು ಇದೆಯಂತೆ. ಇದರಲ್ಲಿ ಅನೇಕ ಶಿವಶರಣೆಯರ ಚರಿತ್ರೆಗಳೂ ಬಂದಿವೆ. ಇದರ ಗ್ರಂಥಕಾರನು ಬಸವ ಪುರಾಣದಲ್ಲಿಯ ಚರಿತ್ರೆಗಳನ್ನು ತೆಗೆದುಕೊಂಡು ಶಕ್ಯವಿದ್ದಷ್ಟು ಅವುಗಳನ್ನು ವಿಪರ್ಯಾಸ ಮಾಡಿ ಶಿವಶರಣರು ದುರ್ವ್ಯಸನಿಗಳೂ, ದುರಾಚಾರಿಗಳೂ, ಹಿಂಸಕರೂ ಆಗಿದ್ದರೆಂದು ನಿರೂಪಣೆ ಮಾಡಿದ್ದಾನೆ. ನಾಗಲಾಂಬಿಕೆಯು ಕಕ್ಕಯ್ಯನನ್ನು ಇಟ್ಟುಕೊಂಡ ಒಬ್ಬ ಸ್ತ್ರೀಯಳು ಎಂದು ಇದರಲ್ಲಿ ಹೇಳಿದ್ದಾನೆ.

ಚಂದ್ರಸಾಗರ ವರ್ಣಿ ಎಂಬ ಬೇರೊಬ್ಬ ಜೈನ ಗ್ರಂಥಕಾರನು ತನ್ನ ಗ್ರಂಥದಲ್ಲಿ ಬರೆದಿರುವದೇನೆಂದರೆ— ಬಸವೇಶ್ವರನಿಗೆ ಪದ್ಮಾವತಿ ಎಂಬ ತಂಗಿಯು ಇದ್ದಳು. ಅವಳನ್ನು ಬಿಜ್ಜಳನು ಮದುವೆಯಾದನು. ಆಗ ಅವಳು ಜೈನ ಧರ್ಮವನ್ನು ಸ್ವೀಕರಿಸಿ ಅದರಂತೆಯೇ ವರ್ತಿಸಹತ್ತಿದಳು. ಮುಂದೆ ಬಿಜ್ಜಳನಿಗೆ ಮರಣ ಸಮಯವು ಪ್ರಾಪ್ತವಾಗಲಾಗಿ ಅವನು ಬಸವೇಶ್ವರನನ್ನು ತನ್ನೆಡೆಗೆ ಬರಮಾಡಿಕೊಂಡು ತನ್ನ ಮಗ ಶಿವ ಬಿಜ್ಜಣನನ್ನು ಅವನ ಕಯ್ಯಲ್ಲಿ ಕೊಟ್ಟು ಅವನಿಗೆ—ನೀನು ವೀರಶೈವ ಧರ್ಮವನ್ನು ಪ್ರಚಾರ ಮಾಡುವದಿಲ್ಲವೆಂದು ವಚನ ಕೊಡಲು ಹೇಳಲು ಅದಕ್ಕೆ ಬಸವೇಶ್ವರನು ಮೊದಲು ಒಪ್ಪಿಕೊಂಡನು. ಆದರೆ ರಾಜ್ಯ ಶಕಟವು ತನ್ನ ಕಯ್ಯಲ್ಲಿ ಬಂದ ಬಳಿಕ ಅವನು ವೀರಶೈವ ಧರ್ಮವನ್ನು ಪ್ರಚಾರಮಾಡುವವನಾದನು. ಅವನು ಶಿವ ಬಿಜ್ಜಣನಿಗೆ ವೀರಶೈವ ಧರ್ಮದ ದೀಕ್ಷೆಯನ್ನು ಕೊಟ್ಟನು. ಹೀಗೆ ಬಸವೇಶ್ವರನು ಕಾರ್ಯ ಮಾಡುತ್ತಿರುವದನ್ನು ಪದಾ

ಪತಿಯು ನೋಡಿ ಅವಳು ಅವನನ್ನು ಅರಮನೆಗೆ ಬರಗೊಡುತ್ತಿದ್ದಿಲ್ಲ. ಮುಂದೆ ಶಿವ ಬಿಜ್ಜಳನು ಒಂದು ದಿವಸ ಅಂತಃಪುರದಲ್ಲಿ ತನ್ನ ತಾಯಿಯನ್ನು ಕಾಣಲಿಕ್ಕೆ ಬಂದಾಗ ಅವಳು ಅವನಿಗೆ— ನೀನು ಜೈನ ಕುಲದವನು, ಬಸವನು ನಿನಗೆ ತಪ್ಪು ದಾರಿಗೆ ಹಚ್ಚಿದ್ದಾನೆ, ಎಂದು ಹೇಳಿ ಅವನನ್ನು ಅಂತಃಪುರದಲ್ಲಿ ಕರೆದುಕೊಂಡು ಹೋಗಿ ಅಲ್ಲಿದ್ದ ಜಿನ ಮೂರ್ತಿಗಳನ್ನು ಅವನಿಗೆ ತೋರಿಸಿದಳು. ಆಗ ಶಿವ ಬಿಜ್ಜಳನು ಬಸವೇಶ್ವರನನ್ನು ಕರೆಸಿ ಅವನಿಗೆ— ನೀನು ನನಗೆ ಮೋಸ ಮಾಡಿರುವಿ, ಎಂದು ನುಡಿದು ಅವನನ್ನು ಅಲ್ಲಿಯೇ ಕೊಂದುಹಾಕಿದನು.

ಹೀಗೆ ಜೈನರ ವೃತ್ತಾಂತಗಳು ಭಿನ್ನ ಭಿನ್ನ ತೆರನಾಗಿವೆ. ಈ ಗ್ರಂಥಗಳು ೧೫ನೇ ೧೬ನೇ ಶತಮಾನಗಳಲ್ಲಿ ಬರೆದವುಗಳಾಗಿವೆ. ಅವುಗಳ ಭಾಷೆಯು ಉಚ್ಚ ತರದ್ದಲ್ಲ. ಈ ಗ್ರಂಥಗಳನ್ನು ಶಿವಶರಣರನ್ನು ಅವಹೇಳನೆ ಮಾಡುವ ಉದ್ದಿಶ್ಯವಾಗಿಯೇ ಬರೆದವುಗಳೆಂಬುದು ಅವುಗಳನ್ನು ನೋಡಿದ ಕೂಡಲೆ ಸ್ಪಷ್ಟವಾಗಿ ತಿಳಿಯುವಂತೆ ಇವೆ. ಈ ವಿವರಣೆಗಳನ್ನು ಪುಷ್ಟೀಕರಿಸಲು ಯಾವ ಪ್ರತ್ಯಂತರ ಪುರಾವೆಗಳಿಲ್ಲ. ಇಂಥ ವೃತ್ತಾಂತಗಳನ್ನು ನಮ್ಮ ಕರ್ನಾಟಕ ಇತಿಹಾಸಜ್ಞರು ಅವಲಂಬಿಸಿ ಅವುಗಳನ್ನು ಅವರು ತಮ್ಮ ಗ್ರಂಥಗಳಲ್ಲಿ ಉಲ್ಲೇಖಿಸಿರುವರು. ಇದು ಯಾರನ್ನಾದರೂ ಆಶ್ಚರ್ಯಗೊಳಿಸುವಂಥದಿದೆ. ಇವರಿಗೆ ವೀರಶೈವ ಗ್ರಂಥಗಳ ಪರಿಚಯವಿಲ್ಲದ್ದರಿಂದಲೂ ವೀರಶೈವರೂ ಕೂಡ ಈ ವಿಧಾನಗಳನ್ನು ಖಂಡಿಸದೆ ತಟಸ್ಥರಾಗಿ ಉಳಿದಿದ್ದುದರಿಂದಲೂ ಇಂಥ ವಿಧಾನಗಳು ಈಗಲೂ ಕೂಡ ಮಾಡಲ್ಪಡುವದು ಕಂಡುಬರುತ್ತದೆ. ಇದು ಖೇದಕರವಾಗಿರುತ್ತದೆ. ಶಿವಶರಣರ ಚರಿತ್ರೆಗಳು ಎಷ್ಟು ಉದಾತ್ತವೂ ನೀತಿ ಮತ್ತೆಯುಳ್ಳವೂ ಇವೆ ಎಂಬುದು ನಾವು ಈ ವರೆಗೆ ಪ್ರಕಟಿಸಿರುವ ಅಸಂಖ್ಯ ಶಿವಶರಣರ ಚರಿತ್ರೆಗಳಿಂದಲೂ ಅವರ ಉಕ್ತಿಗಳಿಂದಲೂ ತಿಳಿದು ಬರುವಂತೆ ಇವೆ. ಅವುಗಳನ್ನು ವೀರಶೈವರು ತಕ್ಕ ಅಧಿಕಾರಿಗಳ ಮುಂದಿಟ್ಟು ಇಂಥ ತಪ್ಪು ವಿಧಾನಗಳನ್ನು ಸರಿಪಡಿಸಲು ಪ್ರಯತ್ನಿಸುವದು ಬಹಳ ಅವಶ್ಯವಾಗಿದೆ.

ನಾವು ಈಗ ಮೇಲಿನ ಚರಿತ್ರೆಗಳಲ್ಲಿಯ ಎಲ್ಲ ವಿಷಯಗಳನ್ನು ವಿವರಿಸಲಿಕ್ಕೆ ಹೋಗದೆ ಚನ್ನಬಸವ, ನಾಗಲಾಂಬಿಕೆ, ನೀಲಾಂಬಿಕೆ ಇವರಿಗೆ ಸಂಬಂಧಿಸಿದ ಕೆಲವು ವಿಷಯಗಳನ್ನು ಮಾತ್ರ ಇಲ್ಲಿ ನಿರೂಪಣೆ ಮಾಡುತ್ತೇವೆ.

ಚನ್ನಬಸವ:— ಜೈನ ಗ್ರಂಥಕಾರರು ತಮ್ಮ ಗ್ರಂಥಗಳಲ್ಲಿ ಚನ್ನ ಬಸವನ ವಿಷಯವಾಗಿ ಅತ್ಯಲ್ಪವಾಗಿ ಉಲ್ಲೇಖಿಸಿರುತ್ತಾರೆ. ಕೆಲವು ಗ್ರಂಥ ಕಾರರು ಅವನನ್ನು ಉಲ್ಲೇಖಿಸುವದೇ ಇಲ್ಲ. ವಿರೋಧಿಗಳು ಮಹತ್ಕಾರ್ಯ ಗಳನ್ನು ಮಾಡಿದವರಿದ್ದರೆ ಅವರ ಕಾರ್ಯಗಳನ್ನು ಹೀಗೆ ಅತ್ಯಲ್ಪವಾಗಿ ವಿವರಿಸುವ ಒಲವು ಯಾವಾಗಲೂ ಇರುತ್ತದೆ. ಒಂದು ವೇಳೆ ವಿವರಿಸಿ ದರೆ ಅವರನ್ನು ಹೀನಗಳೆಯುವದೇ ಅವರ ಮುಖ್ಯ ಉದ್ದೇಶವಿರುತ್ತದೆ. ಚನ್ನ ಬಸವನು ಜೈನರೊಡನೆ ಬಹು ಪರಾಕ್ರಮದಿಂದ ಹೋರಾಡಿದ್ದಾನೆ. ಇದನ್ನು ಅವರು ಉಲ್ಲೇಖಿಸಿಲ್ಲ. ಆದರೆ ಅವನು ಹಾದರದಿಂದ ಹುಟ್ಟಿ ದವನೆಂಬುದನ್ನು ಮಾತ್ರ ಅವರು ಹೇಳುವದುಂಟು.

ಆದರೆ ಚನ್ನಬಸವನ ಚರಿತ್ರೆಯಲ್ಲಿ ಅವನ ತಾಯಿಯಾದ ನಾಗ ಲಾಂಬಿಕೆಗೆ ಲಗ್ನವಾಗಿತ್ತು, ಬಸವೇಶ್ವರನು ಪಿತೃಗೃಹವನ್ನು ತೊರೆಯುವ ಮೊದಲೇ ಅವಳು ಅವನನ್ನು ಹಡೆದಿದ್ದಳು, ಅವಳ ಗಂಡನ ಹೆಸರು ಶಿವಸ್ವಾಮಿಯು, ಎಂಬುದನ್ನು ನಾವು ಅವನ ಚರಿತ್ರೆಯಲ್ಲಿ ದೃಢಪಡಿಸಿ ದ್ದೇವೆ. ಕಕ್ಕಯ್ಯನಿಂದ ಚನ್ನಬಸವನು ಹುಟ್ಟಿದನೆಂದು ಜೈನರು ಹೇಳು ತ್ತಾರೆ. ಆದರೆ ಬಿಜ್ಜಳನು ೧೨ ವರ್ಷ ಮಾತ್ರ ಕಲ್ಯಾಣದಲ್ಲಿ ರಾಜ್ಯ ವಾಳಿದನು. ಅವನು ಅದಕ್ಕೂ ಮೊದಲು ಅಲ್ಲಿ ಆಳಿರುವದಿಲ್ಲ. ಆದ್ದ ರಿಂದ ಬಸವೇಶ್ವರನು ಈ ಕಾಲಕ್ಕೆ ಕಲ್ಯಾಣಕ್ಕೆ ಬಂದಿರಲಿಲ್ಲ. ಅವನು ಇಲ್ಲದಾಗ ಕಕ್ಕಯ್ಯನು ಕಲ್ಯಾಣಕ್ಕೆ ಬರುವ ಸಂಭವವೇ ಇಲ್ಲ. ಆದ್ದ ರಿಂದ ಆತನ ಮೂಲಕ ಕಲ್ಯಾಣದಲ್ಲಿ ಚನ್ನಬಸವನ ಜನನವಾಗುವದು ಅಸಂಭವವೇ ಸರಿ. ಈ ವಿಷಯಗಳನ್ನು ನಾವು ಸವಿಸ್ತಾರವಾಗಿ ಚನ್ನ ಬಸವನ ಚರಿತ್ರೆಯಲ್ಲಿ ನಿರೂಪಿಸಿದ್ದೇವೆ. ಆದ್ದರಿಂದ ನಾಗಲಾಂಬಿಕೆಯು ಹಾದರದಿಂದ ಚನ್ನಬಸವನನ್ನು ಹಡೆದಳೆಂದು ಜೈನ ಗ್ರಂಥಕಾರರು ಹೇಳು ವದರಲ್ಲಿ ಇದು ಅವರ ದ್ವೇಷಬುದ್ಧಿಯನ್ನು ಮಾತ್ರ ತೋರಿಸುತ್ತಿದೆಯೇ ಹೊರ್ತು ಬೇರೊಂದಿಲ್ಲ.

ನಾಗಲಾಂಬಿಕೆಯ ಚರಿತ್ರೆಯನ್ನು ನಿರೀಕ್ಷಿಸಿದಲ್ಲಿ ಅವಳು ಉಚ್ಚ ಶಿವಾನುಭವಿಯೂ ಯೋಗಿಣಿಯೂ ಆಗಿದ್ದಳೆಂದು ತಿಳಿದು ಬರುತ್ತದೆ. ಶಿವ ಶರಣರು ಸಂಚರಿಸಿದಲ್ಲೆಲ್ಲ ಅವಳ ಧ್ಯಾನಕ್ಕೋಸ್ಕರ ಅವಳ ಸಲುವಾಗಿ ನಿರ್ಮಿಸಿದ ಗುಹೆಗಳೂ ವಸತಿಗಳೂ ಈಗಲೂ ಇರುವದು ಕಂಡುಬರುತ್ತದೆ.

ಶಿವಾನುಭವ ಗ್ರಂಥಮಾಲಾ ನಂ ॥ ೩೬

# ವಚನಶಾಸ್ತ್ರಸಾರ.

## ಭಾಗ ೩.

(ವೀರಶೈವಾಚಾರಗಳು)

ಉತ್ತರಾರ್ಧ

---

ಸಂಪಾದಕರು

ರಾ ॥ ಬ ॥ ಫ. ಗು. ಹಳಕಟ್ಟಿ.

ಬಿ. ಎ. ಎಲ್. ಎಲ್. ಬಿ. ವಿಜಾಪುರ.

---

೧ನೇ ಆವೃತ್ತಿ

೧೯೫೩

ಇದನ್ನು ವಿಜಾಪುರದಲ್ಲಿ
ರಾ। ಬಾ। ಫ. ಗು. ಹಳಕಟ್ಟಿ ಇವರು ತಮ್ಮ
"ಹಿತಚಿಂತಕ ಪ್ರಿಂಟಿಂಗ ಪ್ರೆಸ್ಸಿ" ನಲ್ಲಿ ಮುದ್ರಿಸಿದರು.
ಮತ್ತು ಅವರು ಅಲ್ಲಿಯೇ
ಪ್ರಕಟಿಸಿದರು.

# ಪ್ರಸ್ತಾವನೆ



ಈಗ ನಾವು ಪ್ರಕಟಿಸಿರುವ ವಚನಶಾಸ್ತ್ರಸಾರ ಭಾಗ ೩ ಉತ್ತರಾರ್ಧ ಇಲ್ಲಿಗೆ ವಚನಶಾಸ್ತ್ರಸಾರ ಗ್ರಂಥಗಳು ಪೂರ್ತಿಯನ್ನು ಹೊಂದಿದವು. ಈ ಗ್ರಂಥದ ೧ನೇ ಭಾಗವು ೧೭—೨—೧೯೨೩ನೇ ದಿವಸ ಪ್ರಸಿದ್ಧವಾಯಿತು. ಆ ಗ್ರಂಥವು ಜನತೆಗೆ ಹೊಸತೆಂದ್ಧೆಂದು ತೋರಿತು. ಯಾಕೆಂದರೆ ಆಗ ವಚನ ವಾಙ್ಮಯದ ಪ್ರಚಾರವು ಕನ್ನಡಿಗರಲ್ಲಿ ಏನೂ ಇದ್ದಿದ್ದಿಲ್ಲ. ಮುಂದೆ ವಚನಗಳು ಜನಪ್ರಿಯವಾಗಹತ್ತಿದ್ದರಿಂದ ಈ ೧ನೇ ಭಾಗದಲ್ಲಿ ಇನ್ನೂ ಹೆಚ್ಚು ವಚನಗಳನ್ನು ಸೇರಿಸಿ ಅದರ ೨ನೇ ಆವೃತ್ತಿಯನ್ನು ಹೊರಡಿಸಿದೆವು. ಇದು ಬಹು ದೊಡ್ಡ ಗ್ರಂಥವಾಗುವದೆಂದು ತೋರಿದ್ದರಿಂದ ಅದರಲ್ಲಿ ಪೂರ್ವಾರ್ಧ ಉತ್ತರಾರ್ಧ ಎಂಬ ಎರಡು ವಿಭಾಗಗಳನ್ನು ಮಾಡಿ ಪೂರ್ವಾರ್ಧದಲ್ಲಿ ಭಕ್ತ, ಮಹೇಶ್ವರ, ಸ್ಥಲಗಳಲ್ಲಿಯ ವಚನಗಳನ್ನು ಸಂಗ್ರಹಿಸಿದೆವು. ಈ ಗ್ರಂಥವು ೧೦-೮-೧೯೩೧ರಲ್ಲಿ ಪ್ರಕಟವಾಯಿತು. ಇದು ೩೮೧ ಪುಟಗಳುಳ್ಳ ಗ್ರಂಥವಾಯಿತು. ಉಳಿದ ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯ ಸ್ಥಲಗಳ ವಚನಗಳನ್ನು ಒತ್ತಟ್ಟಿಗೆ ಸೇರಿಸಿ ಅವುಗಳನ್ನು ಇದೇ ಭಾಗದಲ್ಲಿ ಉತ್ತರಾರ್ಧದಲ್ಲಿ ಪ್ರಕಟಿಸಿದೆವು. ಇದು ೨೬—೬—೧೯೩೩ರಲ್ಲಿ ಪ್ರಕಟವಾಯಿತು. ಈ ಎರಡೂ ಗ್ರಂಥಗಳ ಮೂಲಕ ವಚನಗಳ ನಿಜ ಸ್ವರೂಪ ಮತ್ತು ಶಿವಶರಣರ ಧಾರ್ಮಿಕ ಸಾಮಾನ್ಯ ತತ್ವಗಳು ಇವುಗಳನ್ನು ತಿಳಿಯಬಹುದಾಗಿದೆ. ಈ ಉತ್ತರಾರ್ಧವು ೨೯೬ ಪುಟಗಳುಳ್ಳ ಗ್ರಂಥವಾಗಿರುತ್ತದೆ.

ಈ ಗ್ರಂಥಗಳು ಪ್ರಕಟವಾದಬಳಿಕ ನಾವು ವಚನಶಾಸ್ತ್ರಸಾರ ಭಾಗ ೨ ಇದನ್ನು ಪ್ರಕಟಿಸುವ ಕಾರ್ಯವನ್ನು ಕೈಕೊಂಡೆವು. ಅದು ೧೫-೧-೧೯೩೮ನೇ ತಾರೀಖಿನ ದಿವಸ ಪೂರ್ತಿಗೊಂಡಿತು. ಅದರಲ್ಲಿ ಷಟ್‌ಸ್ಥಲ ಸಿದ್ಧಾಂತದ ತತ್ವ ವಿಷಯಗಳು ಶಿವಶರಣರ ವಚನಗಳ ಮೂಲಕವೇ ನಿರೂಪಿಸಲ್ಪಟ್ಟಿರುತ್ತವೆ. ಇದರಲ್ಲಿ ಸೃಷ್ಟಿಯ ರಚನೆ, ಕರಣ ಹಸಿಗೆಯ ವಿಷಯಗಳು, ಕ್ರಿಯೆಗಳ ಸ್ವರೂಪ, ಸಕೀಲಗಳು, ಷಟ್‌ಸ್ಥಲಗಳು, ಏಕೋತ್ತರ ಶತಸ್ಥಲ ಇವೇ ಮೊದಲಾದ ಮಹತ್ವದ ವಿಷಯಗಳು ವಿವೇಚಿಸಲ್ಪಟ್ಟಿರುತ್ತವೆ. ಇದು

೬೦೩ ಪುಟಗಳುಳ್ಳ ಗ್ರಂಥವಾಗಿರುತ್ತದೆ. ಇದರಲ್ಲಿ ಶಿವಶರಣರ ತತ್ವಗಳ ತಿರುಳು ಸಂಗ್ರಹಿಸಲ್ಪಟ್ಟಿದೆಂದು ಹೇಳಬಹುದು.

ವಚನಶಾಸ್ತ್ರಸಾರದ ೩ನೇ ಭಾಗದಲ್ಲಿ ವೀರಶೈವಾಚಾರಗಳು ನಿರೂಪಿತವಾಗಿರುತ್ತವೆ. ಈ ಭಾಗವು ತೀವ್ರವಾಗಿ ಪ್ರಸಿದ್ಧವಾಗುವ ಲಕ್ಷಣಗಳು ಆರಂಭದಲ್ಲಿ ತೋರಲಿಲ್ಲ. ಆದ್ದರಿಂದ ಅದರಲ್ಲಿ ಪೂರ್ವಾರ್ಧ ಮತ್ತು ಉತ್ತರಾರ್ಧ ಎಂಬ ಎರಡು ವಿಭಾಗಗಳನ್ನು ಮಾಡಿ ಪೂರ್ವಾರ್ಧವನ್ನು ನಾವು ೧—೧೦—೧೯೩೭ರಲ್ಲಿ ಪ್ರಕಟಿಸಿದೆವು. ಇದರಲ್ಲಿ ವೀರಶೈವರ ಕ್ರಿಯೆಗಳೂ ಆಚಾರಗಳೂ ನಿರೂಪಿಸಲ್ಪಟ್ಟಿರುತ್ತವೆ. ಅದರಲ್ಲಿರುವ ೧ನೇ ಭಾಗದಲ್ಲಿ ವೀರಶೈವರು ಕ್ರಿಯೆಗಳನ್ನು ಹೇಗೆ ಮಾಡಬೇಕೆಂಬುದು ಹೇಳಲ್ಪಟ್ಟಿರುತ್ತದೆ. ಅದರಲ್ಲಿಯ ೨ನೇ ಭಾಗದಲ್ಲಿ ಆಚಾರ ಭೇದಗಳು, ೩ನೇ ಭಾಗದಲ್ಲಿ ಅಷ್ಟಾವರಣಗಳಲ್ಲಿ ಮಹತ್ವದ ಆವರಣಗಳಾದ 'ಗುರು, ಲಿಂಗ, ಜಂಗಮಗಳು, ಆಮೇಲೆ ಶಿವಯೋಗದ ಸಾಮಾನ್ಯ ಸ್ವರೂಪ, ಈ ವಿಷಯಗಳು ಹೇಳಲ್ಪಟ್ಟಿರುತ್ತವೆ. ಈ ಎಲ್ಲ ವಿಷಯಗಳು ವಚನಕಾರರ ವಚನಗಳನ್ನು ಉದಹರಿಸಿಯೇ ವಿವರಿಸಿರುತ್ತೇವೆ. ಈ ಗ್ರಂಥದ ಒಟ್ಟು ಪುಟ ಸಂಖ್ಯೆ ೨೩೪ ಇರುತ್ತದೆ.

ಈ ವಚನಶಾಸ್ತ್ರ ಗ್ರಂಥದ ಉತ್ತರಾರ್ಧವೇ ಈಗ ಪ್ರಕಟವಾದ ಕಡೆಯ ಗ್ರಂಥವಾಗಿರುತ್ತದೆ. ಇದರಲ್ಲಿ ಪಾದೋದಕ, ಪ್ರಸಾದಗಳು, ಅವುಗಳ ಪರಿಣಾಮಗಳು, ಅವುಗಳನ್ನು ಆಚರಿಸುವ ಪದ್ಧತಿಗಳು, ಅರ್ಪಣದ ಕ್ರಮಗಳು, ಪ್ರಸಾದದ ಸ್ವರೂಪ, ಪ್ರಸಾದದ ವಿಭೇದಗಳು, ದಶವಿಧ ಪಾದೋದಕಗಳು, ವಿಶ್ರಾರ್ಪಣಗಳು, ಷಟ್‌ಚಕ್ರಗಳಲ್ಲಿ ಆಯಾ ಲಿಂಗಗಳ ಉದ್ಭವವು ಇವೇ ಮೊದಲಾದ ಮಹತ್ವದ ಗೂಢ ವಿಷಯಗಳು ವಚನಕಾರರ ಉಕ್ತಿಗಳ ಮೂಲಕವೇ ನಿರೂಪಿಸಲ್ಪಟ್ಟಿರುತ್ತವೆ.

ಈ ವಿಷಯಗಳಾದಮೇಲೆ ಈ ಗ್ರಂಥದಲ್ಲಿ ವಿಭೂತಿ, ರುದ್ರಾಕ್ಷಿ ಈ ವಿಷಯಗಳು ನಿರೂಪಿಸಲ್ಪಟ್ಟಿರುತ್ತವೆ.

ಈ ವಿಷಯಗಳಾದಮೇಲೆ ಮಂತ್ರ ವಿಷಯವು ಸವಿಸ್ತಾರವಾಗಿ ಹೇಳಲ್ಪಟ್ಟಿರುತ್ತದೆ. ವಚನಶಾಸ್ತ್ರದಲ್ಲಿ ಮಂತ್ರ ಶಾಸ್ತ್ರವು ಬಹು ಮಹತ್ವವಾದದ್ದು. ವೀರಶೈವರು ಆಚರಿಸತಕ್ಕ ಮುಖ್ಯ ವಿಷಯವು ಇದಾಗಿದೆಂಬ ಹೇಳಬಹುದು. ಈ ಭಾಗದಲ್ಲಿ ಓಂಕಾರ, ಪ್ರಣವದ ವಿಧಗಳು, ಶರೀರಕ್ಕೆ

ನೇತ್ರಗಳ ಸಂಬಂಧ, ಮಂತ್ರ ಜಪದ ಪದ್ಧತಿಗಳು, ಪಂಚ ಧಾರಣೆಗಳು, ಸಮಾಧಿ ಕ್ರಿಯೆಗಳು, ಮುಂತಾದ ವಿಷಯಗಳು ನಿರೂಪಿಸಲ್ಪಟ್ಟಿರುತ್ತವೆ. ಕಡೆಗೆ ಕೆಲವು ಪರಿಶಿಷ್ಟಗಳಲ್ಲಿ ವೀರಶೈವಾಚಾರಗಳಿಗೆ ಸಂಬಂಧಿಸಿದ ಅವಾಂತರ ವಿಷಯಗಳು ಹೇಳಲ್ಪಟ್ಟಿರುತ್ತವೆ. ಇವೆಲ್ಲ ವಿಷಯಗಳು ಶಿವಶರಣರ ಉಕ್ತಿಗಳ ಮೂಲಕವೇ ವಿವೇಚಿಸಲ್ಪಟ್ಟಿರುತ್ತವೆ.

ಈ ಎಲ್ಲ ವಿಷಯಗಳನ್ನು ನಮ್ಮ ಧರ್ಮಾಧಿಕಾರಿಗಳು ಯಾವಾಗಲೂ ಗುಪ್ತವಾಗಿಯೇ ಇಡುತ್ತಿದ್ದರು. ಇವುಗಳನ್ನು ನಿರೂಪಿಸುವ ಉಕ್ತಿಗಳನ್ನು ಅವರು ಬಹಿರಂಗಗೊಳಿಸುತ್ತಿದ್ದಿಲ್ಲ. ಆದ್ದರಿಂದ ಈ ಆಚಾರಗಳ ಪರಿಚಯವು ವೀರಶೈವ ಸಮಾಜದಲ್ಲಿ ಅತ್ಯಲ್ಪವಾಗಿಯೇ ಇರುತ್ತದೆಂದು ಹೇಳಬಹುದು. ಇದರಿಂದ ಇವುಗಳನ್ನು ವಿವರಿಸುವ ಉಕ್ತಿಗಳ ಮರ್ಮವನ್ನು ಕಂಡ ಹಿಡಿಯುವದು ಈಗ ದುಸ್ತರವಾಗಿರುತ್ತದೆ. ಆದರೆ ಈ ವಿಷಯವು ಬಹು ಮಹತ್ವದ್ದೆಂದು ನಮಗೆ ತೋರಿದ್ದರಿಂದ ಆ ವಚನಗಳನ್ನು ಯಥಾವತ್ತಾಗಿ ಈ ಗ್ರಂಥದಲ್ಲಿ ಪ್ರಕಟ ಮಾಡಿದ್ದೇವೆ.

ಹೀಗೆ ವಚನಶಾಸ್ತ್ರದ ಬೇರೆ ಬೇರೆ ವಿಭಾಗಗಳನ್ನು ನಾವು ಪ್ರಕಟ ಮಾಡುತ್ತಿರುವಾಗ್ಗೆ ಅವುಗಳಲ್ಲಿ ಬರುವ ವಿಶಿಷ್ಟ ಪಾರಿಭಾಷಿಕ ಶಬ್ದಗಳ ಅರ್ಥವು ಸಾಮಾನ್ಯ ಜನರಿಗೆ ಸಹ ತಿಳಿವಳಿಕೆಯಾಗಬೇಕೆಂದು ನಾವು 'ಶಿವಾನುಭವ ಶಬ್ದಕೋಶ' ಎಂಬ ಹೆಸರಿನ ಗ್ರಂಥವನ್ನು ಪ್ರಕಟಿಸಿದೆವು. ಅದರಲ್ಲಿ ವಚನಶಾಸ್ತ್ರದ ಮಹತ್ವದ ವಿಷಯಗಳನ್ನು ನಾವು ಆಧುನಿಕ ಭಾಷೆಯಲ್ಲಿ ವಿವರಿಸಲು ಯತ್ನಿಸಿದ್ದೇವೆ. ಈ ಗ್ರಂಥದಲ್ಲಿ ವಚನಶಾಸ್ತ್ರದಲ್ಲಿಯ ವಿಶೇಷ ತರದ ಶಬ್ದಗಳ ಅರ್ಥಗಳನ್ನು ಕೊಟ್ಟಿರುತ್ತೇವೆ. ಈ ಗ್ರಂಥದ ಅವಶ್ಯಕ ಭಾಗಗಳನ್ನು ನಾವು ಈ ಗ್ರಂಥದಲ್ಲಿ ಅಲ್ಲಲ್ಲಿ ಉದಹರಿಸಿದ್ದೇವೆ. ಇದರಿಂದ ಆಯಾ ವಚನಗಳ ಭಾವವು ಸುಸ್ಪಷ್ಟವಾಗುವದೆಂದು ನಾವು ಎಣಿಸಿದ್ದೇವೆ. ಈ ಗ್ರಂಥದಲ್ಲಿ ಒಟ್ಟು ಪುಟಸಂಖ್ಯೆ ೩೭೬ ಇರುತ್ತದೆ.

ವಚನಶಾಸ್ತ್ರಸಾರ ಭಾಗ ೧ ಇದು ವೀರಶೈವ ಧರ್ಮದ ಸಾಮಾನ್ಯ ಸ್ವರೂಪವನ್ನು ಮತ್ತು ಅದರ ವಾಙ್ಮಯವನ್ನು ತಿಳಿಯಲು ಬಹು ಉಪಯುಕ್ತವಾಗಿರುತ್ತದೆ. ಅದರ ೨ನೇ ಭಾಗದಲ್ಲಿ ಷಟ್‌ಸ್ಥಲ ವಿಷಯಗಳ ನಿರೂಪಣೆ ಇರುತ್ತದೆ. ಇದು ಕೇವಲ ತಾತ್ತ್ವಿಕ ಗ್ರಂಥವಾಗಿದೆ. ವಚನ

ಶಾಸ್ತ್ರಕ್ಕೆ ಮೂಲಾಧಾರವಾಗಿರುವ ತತ್ವಗಳ ಪರಿಚಯವು ಎಲ್ಲರಿಗೂ ಇರು ವದು ಬಹು ಅವಶ್ಯವಾದದ್ದು. ಈ ತತ್ವ ಪರಿಚಯದೊಡನೆ ಆಚಾರ ವಿಷಯ ಜ್ಞಾನವೂ ಎಲ್ಲರಲ್ಲಿರುವದು ಅವಶ್ಯವು. ಈ ವಿಷಯವು ಈಗಿನ ಎರಡನೇ ಭಾಗದಲ್ಲಿ ಬಂದಿದೆ.

ಬ್ರಾಹ್ಮಣ, ಜೈನ, ಬೌದ್ಧ ಮುಂತಾದ ಮತಸ್ತರು ತಮ್ಮ ತಮ್ಮ ವಿಶಿಷ್ಟ ಆಚಾರಗಳನ್ನು ನಿರ್ಮಿಸಿಕೊಂಡಿರುತ್ತಾರೆ. ಹಾಗೆಯೇ ಶಿವಶರಣರೂ ತಮ್ಮ ಧಾರ್ಮಿಕ ತತ್ವಗಳ ಪ್ರಕಾರ ಕೆಲವು ಧಾರ್ಮಿಕ ಕಟ್ಟುಗಳನ್ನೂ ವಿಧಿ ವಿಧಾನಗಳನ್ನೂ ಆಚಾರಗಳನ್ನೂ ನಿರ್ಮಿಸಿಕೊಂಡಿರುತ್ತಾರೆ. ಅವುಗಳಂತೆ ವೀರಶೈವನು ಆಚರಿಸಿದಲ್ಲಿ ಅವನು ಇಹದಲ್ಲಿ ಒಂದೇ ಜನ್ಮದಲ್ಲಿಯೇ ಶೂನ್ಯ, ಅಥವಾ ಬಯಲು, ಅಥವಾ ನಿರ್ವಾಣ, ಅಥವಾ ಮೋಕ್ಷವನ್ನು ಹೊಂದುವನೆಂದು ವೀರಶೈವರು ದೃಢವಿಶ್ವಾಸವುಳ್ಳವರಾಗಿದ್ದಾರೆ. ಈ ಆಚಾರಗಳ ವಿವರಣೆಗಳು ವಚನಶಾಸ್ತ್ರಸಾರ ಭಾಗ ೨ರದರ ಪೂರ್ವಾರ್ಧ ಮತ್ತು ಉತ್ತರಾರ್ಧ ಗ್ರಂಥಗಳಲ್ಲಿ ಬಂದಿವೆ.

ಈ ಕಡೆಯ ವಿಭಾಗದ ಅನುಕ್ರಮಣಿಕೆಯನ್ನು ವಾಚಕರು ಪರಿಶೀಲಿಸಿದಲ್ಲಿ ಅದರಲ್ಲಿಯ ವಿಷಯಗಳು ಎಷ್ಟು ಉಚ್ಚತರದವೂ ಶಿವಾನುಭವ ಬೋಧಕವೂ, ಗಾಢವೂ ಇರುತ್ತವೆಂಬುದು ಅವರಿಗೆ ತಿಳಿಯದೆ ಇರದು. ವಚನಶಾಸ್ತ್ರವು ಒಂದು ಹೊಸತರದ ವಾಙ್ಮಯವೇ ಆಗಿದೆಂದು ಅವರ ಲಕ್ಷ್ಯಕ್ಕೆ ತತ್‌ಕ್ಷಣ ಬರದೆ ಇರಲಾರದು.

ಹೀಗೆ ನಾವು ೧೭–೨–೧೯೨೩ರಲ್ಲಿ ಆರಂಭಿಸಿದ ಪ್ರಯತ್ನಗಳು ಈ ಗ್ರಂಥ ಸಮಾಪ್ತಿಯಾದ ತಾರೀಖಿಗೆ ಅಂದರೆ ೧–೩–೧೯೫೩ಕ್ಕೆ ಪೂರ್ತಿಯಾಗಿರುತ್ತವೆ. ಈ ಕಾರ್ಯದಲ್ಲಿ ನಮಗೆ ಅನೇಕ ತರದ ತೊಂದರೆಗಳೂ ವಿಘ್ನಗಳೂ ಉದ್ಭವಿಸಿದವು. ಆದರೂ ಶಿವಶರಣರ ದಯೆ ದಿಂದ ಅವೆಲ್ಲವೂ ದೂರವಾಗಿ ಈ ಕಾರ್ಯವು ಪೂರ್ತಿಯಾದದ್ದಕ್ಕೆ ನಾವು ಆ ದಯಾಘನನಾದ ಪರಮಾತ್ಮನನ್ನು ಅನನ್ಯ ಭಾವದಿಂದ ಸ್ಮರಿಸುತ್ತೇವೆ.

ವಿಜಾಪುರ<br>ತಾ। ೧–೩–೧೯೫೩

ತಮ್ಮ ವಿಧೇಯ<br>ಫ. ಗು. ಹಳಕಟ್ಟಿ<br>ಸಂಪಾದಕ

# ಅನುಕ್ರಮಣಿಕೆ.



## ಪ್ರಸಾದ-

## ಶಿವಾನುಭವ ಶಬ್ದಕೋಶದಲ್ಲಿಯ ಅವತರಣಿಕೆಗಳು

(ಶಿವಾನುಭವ ಶಬ್ದಕೋಶ ಅವತರಣಗಳು ಸಮಾಪ್ತ)

## ವಿಭೂತಿ



## ರುದ್ರಾಕ್ಷಿ

## ಮಂತ್ರ

(ಶಿವಾನುಭವ ಶಬ್ದಕೋಶದಲ್ಲಿಯ ಅವತರಣಗಳು)

ಭಕ್ತ ಸ್ಥಲ ೧೫ ಮಹೇಶ ಸ್ಥಲ ೯ ಪ್ರಸಾದಿ ಸ್ಥಲ ೭ ಪ್ರಾಣಲಿಂಗಿ ಸ್ಥಲ ೫ ಶರಣಸ್ಥಲ ೪ ಐಕ್ಯಸ್ಥಲ ೪ ಆಚಾರಲಿಂಗ ಸ್ಥಲ ೯ ಗುರುಲಿಂಗ ಸ್ಥಲ ೯ ಶಿವಲಿಂಗ ಸ್ಥಲ ೯ ಜಂಗಮಲಿಂಗ ಸ್ಥಲ ೧೨ ಪ್ರಸಾದ ಲಿಂಗ ಸ್ಥಲ ೯ ಮಹಾಲಿಂಗ ಸ್ಥಲ ೯ ಇಂತೀ ನೂರೊಂದು ಸ್ಥಲಂಗಳೇ ಶರಣಂಗೆ ಮಾರ್ಗ ಕ್ರಿಯಾ ಸ್ವರೂಪವಾದವೆಂಬುದೀಗ ಆಚರಣೆ ಎಂಬುದೀಗ ಆಚರಣೆ ಎಂಬ ಶಬ್ದಕ್ಕರ್ಥ.

ಭಕ್ತಸಂಗಸ್ಥಲ ೧೮. ಮಹೇಶಸಂಗಸ್ಥಲ ೧೮. ಪ್ರಸಾದಿಯಂಗ ಸ್ಥಲ ೧೮. ಪ್ರಾಣಲಿಂಗಿ ಅಂಗಸ್ಥಲ ೧೮. ಶರಣಸಂಗಸ್ಥಲ ೧೮. ಐಕ್ಯಸಂಗ ಸ್ಥಲ ೧೮. ಆಚಾರ ಲಿಂಗ ಸ್ಥಲ ೧೮. ಗುರುಲಿಂಗ ಸ್ಥಲ ೧೮. ಶಿವ ಲಿಂಗ ಸ್ಥಲ ೧೮. ಜಂಗಮಲಿಂಗ ಸ್ಥಲ ೧೮ ಪ್ರಸಾದಿ ಲಿಂಗಸ್ಥಲ ೧೮. ಮಹಾಲಿಂಗ ಸ್ಥಲ ೧೮ ಇಂತೀ ೨೧೬ ಸ್ಥಲಂಗಳೇ ಶರಣಂಗೆ ಮೀರಿದ ಕ್ರಿಯಾಸ್ವರೂಪವಾದನೆಂಬುದೀಗ ಸಂಬಂಧವೆಂಬ ಶಬ್ದಕ್ಕರ್ಥ.

ಆಜ್ಞಾ ಉಪದೇಶ ಸ್ವಸ್ತಿಕಾರೋಹಣ, ಕಲಶಾಭಿಷೇಕ ವಿಭೂತಿ ಪಟ್ಟ, ಲಿಂಗಾಯತ, ಲಿಂಗ ಸ್ವಾಯತ, ಸಮಯ, ನಿಃ ಸಂ ಸಾರ, ನಿರ್ವಾಣ ತತ್ವ ಅಧ್ಯಾತ್ಮ ಅನುಗ್ರಹ ಸತ್ಯ ಶುದ್ಧ ಏಕಾಗ್ರ ಚಿತ್ತ. ದೃಢ ವ್ರತ ಪಂಚೇಂದ್ರಿಯಾರ್ಪಿತ ಅಹಿಂಸೆ ಲಿಂಗ ನೈಷ್ಠೆ ಮನೋಲಯ ಸದ್ಯಸ್ಮುಕ್ತಿ ಇಂತೀ ೨೧ ದೀಕ್ಷೆಗಳೇ ಶರಣನ ಮಾರ್ಗ ಕ್ರಿಯೆ ಮೀರಿದ ಕ್ರಿಯೆಯನೊಳಗೊಂಡು ಸನ್ಮಾರ್ಗ ನಡೆನುಡಿಗಳಾಗಿರ್ಪುದೆಂಬುದೀಗ ಬೋಧಾವೃತವೆಂಬ ಶಬ್ದಕ್ಕರ್ಥ.

೧೦೧ ಸ್ಥಲಂಗಳೇ ಚಿದಂಗ ಚಿದ್ಘನ ಲಿಂಗವಾಗಿ ೨೧೬ ಸ್ಥಲಂಗಳೇ ಚಿತ್ಪ್ರಾಣಾಂಗ ಚಿತ್ಪ್ರಾಣ ಲಿಂಗವಾಗಿ ಏಕವಿಂಶತಿ ದೀಕ್ಷೆಗಳೇ ಚಿದ್ಭಾವಾಂಗ ಚಿದ್ಭಾವ ಲಿಂಗವಾಗಿ ಇಂತು ಶರಣನಂಗ ಪ್ರಾಣಭಾವಂಗಳಲ್ಲಿ ಇಷ್ಟ ಪ್ರಾಣ ಭಾವ ಆಚರಣೆ ಸಂಬಂಧ ಸ್ವರೂಪಂಗಳಿಂದ ಒಪ್ಪುತ್ತಿರ್ಪ ನೆಂಬುದೀಗ ನಿಲುಕಡೆ ಎಂಬ ಶಬ್ದಕ್ಕರ್ಥ.

ಸದ್ಭಕ್ತನ ಆಚಾರ ಲಿಂಗಾನುಭಾವ, ವೀರ ಮಾಹೇಶ್ವರನ ಗುರುಲಿಂಗಾನುಭಾವ, ಶಿವಪ್ರಸಾದಿಯ ಶಿವಲಿಂಗಾನುಭಾವ, ನಿಜಪ್ರಾಣಲಿಂಗಿಯ ಜಂಗಮ ಲಿಂಗಾನುಭಾವ, ನಿಜ ಶರಣನ ಪ್ರಸಾದಲಿಂಗಾನುಭಾವ, ನಿಜೈಕ್ಯನ ಮಹಾ ಲಿಂಗಾನುಭಾವ ನಿರಾಲಂಬ ನಿಃಕಳ ಲಿಂಗಾನುಭಾವ. ನಿಜ

ವಯು ನಿಃಶೂನ್ಯ ಲಿಂಗಾನುಭಾವ, ನಿವರ್ಾಯ ನಿರಂಜನ ಲಿಂಗಾನುಭಾವ ಇಂತೀ ನವಲಿಂಗಾನುಭಾವಂಗಳೇ ಶರಣನಂತರಂಗದಲ್ಲಿ ಮಹಾ ಜ್ಞಾನ ಪ್ರಕಾಶದಿಂದ ಒಪ್ಪುತ್ತಿರ್ಪುವೆಂಬುದೀಗ ಚಿದೈಶ್ವರ್ಯವೆಂಬ ಶಬ್ದಕ್ಕರ್ಥ.

೬೪ ತೆರದ ವರ್ಣಂಗಳು, ೧೪೪ ಆಚಾರಂಗಳು, ೩೨೪ ಚಕ್ರಂಗಳು, ಸರ್ವಾಚಾರ ಸಂಪತ್ತಿನ ೩೨ ಉದಾಹರಣೆಗಳು, ಶಿವಯೋಗ ಸ್ಥಾಪನ ಸ್ಥಲ, ಪ್ರಾಣಲಿಂಗ ಪೂಜಾ ವಿಧಾನ ಸ್ಥಲ, ನವಲಿಂಗಾರ್ಚನ ಸ್ಥಲ, ಪರ ತತ್ವ ಲಿಂಗ ಪ್ರಕಾಶ ಸ್ಥಲ, ಶಿವಾದ್ವೈತ ಶರಣ ಪ್ರಕಾಶ ಸ್ಥಲ, ಮಹಾ ಲಿಂಗೈಕ್ಯ ಸ್ಥಲ, ಜ್ಞಾನ ಶೂನ್ಯ ಸ್ಥಲ. ಅಷ್ಟ ವಿಧ ಮಹಾಮಂತ್ರ ಸಕೀಲು ಸಮಾಧಿ ಮೊದಲಾದ ಚಿತ್ಪ್ರಕಾಶಂಗಳೇ ಶರಣಂಗೆ ಆಭರಣವಾಗಿರ್ಪುದು.

ಶ್ರೀ ಗುರು ಸಿದ್ಧ ಲಿಂಗೇಶ್ವರನ ಕೃಪಾ ಪ್ರಸನ್ನತ್ವದಿಂದ ಎನ್ನ ಕರ ಮನ ಸುಭಾವದಲ್ಲಿ ಪ್ರಭಾವಿಸುವ ಚಿದ್ಘನ ಇಷ್ಟ ಮಹಾಲಿಂಗದ ಬೆಳಗಿ ನೊಳಗೆ ಕಂಡೆನು ಎಂಬುದೀಗ ಚಿದಾಭರಣನೆಂಬ ಶಬ್ದಕ್ಕರ್ಥ.

ಹೀಗೆ ಅನಾದಿವಿಡಿದು ಬಂದ ಗುರು ಲಿಂಗ ಜಂಗವು, ಅನಾದಿ ವಿಡಿದು ಬಂದ ಪಾದೋದಕ ಪ್ರಸಾದ, ಅನಾದಿವಿಡಿದು ಬಂದ ವಿಭೂತಿ ರುದ್ರಾಕ್ಷಿ, ಅನಾದಿವಿಡಿದು ಬಂದ ತ್ರ್ಯಕ್ಷರ ಪಂಚಾಕ್ಷರ ಷಡಕ್ಷರ,ಅನಾದಿ ವಿಡಿದು ಬಂದ ಗುರು ಶಿಷ್ಯಾಂಗ ಲಿಂಗ ಭಕ್ತ ಜಂಗಮ ಶರಣ ಸಂಬಂಧ, ಅನಾದಿವಿಡಿದು ಬಂದ ಆಚಾರ ಆಚರಣೆಯ ಸಂಬಂಧ, ಸತ್ಕ್ರಿಯಾ ಜ್ಞಾನ ಸ್ವರೂಪು ನಿಲುಕಡೆ, ಅನಾದಿವಿಡಿದು ಬಂದ ಭಕ್ತಿ ಜ್ಞಾನ ವೈರಾಗ್ಯ ಸಕೀಲು ಸಂಬಂಧ, ಶಿವಯೋಗ ಶಿವಾನುಭಾವದ ನಿಜ ಮಹಾ ಲಿಂಗೈ ಕ್ಯಾನುಭಾವ ನೋಡಾ ಶ್ರೀ ಗುರುಸಿದ್ಧ ಲಿಂಗೇಶ್ವರಂಗೆ ರೂಪು ರುಚಿ ತೃಪ್ತಿಯಾದ ಬಸವಲಿಂಗೇಶ್ವರಾ.

---

(೫)

## ಕಳಸ ಸ್ಥಾಪನೆಯು

ಮೂಲ ಪಂಚಾಕ್ಷರಿ ಎನಿಸುವ ಆರು ಪ್ರಣವಂಗಳು ಓಂ ಹ್ರಾಂ ನಮಃ ಶಿವಾಯ ಓಂಕಾರ ಸುತ್ತು ಬರೆದು, ಮತ್ತಂ ಅದರ ಸುತ್ತು ಐದು ಕಳೆಗಳಂ ಬರೆದು, ಅದೆಂತೆಂದೊಡೆ:-'ಈಶಾನಾಯ ಸರ್ವ ವಿದ್ಯಾನಾಂ

ಈಶ್ವರಃ ಸರ್ವ ಭೂತಾನಾಂ ಬ್ರಹ್ಮಣಾದಿ ಪತಿ ಬ್ರಹ್ಮ ಶಿವೋ ಮೆ ಅಸ್ತು ಸದಾಶಿವೋ, ತಾವಸ್ರದ ತಗಡಿನ ಮೇಲೆ ಬರೆದು ಗುರು ಕಳಶದ ಬಾಡಕೆ ಸ್ಥಾಪಿಸುವದು.

ಇನ್ನು ಎರಡು ತಗಡಿನ ಮೇಲೆ ವಕಾರ ಬರೆದು 'ಓಂ ಹ್ರಾಂ ಹ್ರೀಂ ನಮಃ ಶಿವಾಯು' ಈ ಪ್ರಣವದ ಸುತ್ತಲು ಎಂಟು ಕಲೆಗಳ ಬರೆದು ಅದೆಂತೆಂದೊಡೆ, 'ಸದ್ಯೋಜಾತ ಪ್ರಪದ್ಯಾಮಿ ಸದ್ಯೋಜಾತಾಯ ವೈ ನಮಃ ಭವೇ ಭವೇನಾದಿ ಭವಸ್ವಮಾಂ ಭವೋದ್ಭವಾಯ ನಮಃ' ಈ ಎಂಟನು ಬರೆದು ಪಶ್ಚಿಮುಕೊಂದನು ಈಶಾನ ಕೊಂದನು ಬರೆದು ಇಡುವದು.

ಮತ್ತೆ ಎರಡು ತಗಡಿನ ಮೇಲೆ ಮಕಾರಗಳ ಬರೆದು ಅದರ ಸುತ್ತ 'ಓಂ ಹ್ರಾಂ ನಮಶ್ಶಿವಾಯು' ಈ ಪ್ರಣವದ ಸುತ್ತಲು ಹದಿಮೂರು ಕಲೆಗಳ ಬರೆವುದು. ವಾಮದೇವಾಯ ನಮಃ ಜೇಷ್ಠಾಯ ನಮಃ ಶ್ರೇಷ್ಠಾಯ ನಮಃ ರುದ್ರಾಯ ನಮಃ ಕಲಾಯ ನಮಃ ಕಲವಿಕರಣಾಯ ನಮಃ ಬಲಾಯ ನಮಃ ಬಲ ವಿಕರಣಾಯ ನಮಃ ಬಲ ಪ್ರಮಥನಾಥಾಯ ನಮಃ ಸರ್ವ ಭೂತ ಮನಾಯ ನಮಃ ಮನಲೀಲೆ ಮನೋನ್ಮನಾಯ ನಮಃ ಆ ಮಿತಿ ಉತ್ತರ ದಿಕ್ಕಿಗೊಂದು ಅಗ್ನಿ ಮೂಲಿಗೊಂದು ಇಡುವದು.

ಮತ್ತೆರಡು ತಗಡಿನ ಮೇಲೆ ಶಿಕಾರಗಳ ಬರೆದು 'ಓಂ ಹ್ರಾಂ ಹ್ರೀಂ ಹ್ರೂಂ ಹ್ರೇಂ ಹ್ರೋಂ ನಮಃ ಶಿವಾಯು" ಈ ಪ್ರಣವದ ಸುತ್ತು ಎಂಟು ಕಲೆಗಳ ಬರೆದು 'ಓಂ ಅಘೋರೇಭ್ಯತ ಘೋರೇಭ್ಯೋ ಘೋರ ಘೋರ ತರೇಭ್ಯೋ ಸರ್ವತಃ ಸರ್ವಸರ್ವೇಭ್ಯೋ ನಮಸ್ತ ಅಸ್ತು ರುದ್ರರೂಪೇಭ್ಯೋ ಶಿವೇಭ್ಯೋಃ ಈ ಎಂಟು ಕಲೆಗಳ ಬರೆದು ದಕ್ಷಿಣ ದಿಕ್ಕಿಗೊಂದು ವಾಯುವ್ಯ ಮೂಲಿಗೊಂದು ಇಡುವದು.

ಎರಡು ತಗಡಿನ ಮೇಲೆ ವಕಾರವ ಬರೆದು ಆ ಪ್ರಣವದ ಸುತ್ತು 'ಓಂ ಹ್ರೀಂ ಹ್ರಾಂ ಹ್ರಃ ನಮಃ ಶಿವಾಯು' ಎಂಬ ಅಕ್ಷರವ ಬರೆದು ಇದರ ಸುತ್ತು ನಾಲ್ಕು ಕಲೆಗಳ ಬರೆದು ತತ್ಪುರುಷಯ 'ಪದ್ಮಹಿ ಮಹಾದೇವಾಯ ಧೀಮಹಿ ತಸ್ಮೋರುದ್ರ ಪ್ರಚೋದಯಾತ್' ಎಂದು ಬರೆದು ಪೂರ್ವ ದಿಕ್ಕಿಗೊಂದು ನೈಋತ್ಯ ಮೂಲಿಗೊಂದು ಇಡುವದು.

ಇದು ಕಳಶ ಸ್ಥಾಪಿಸುವ ನಿರ್ಣಯವು

---

(೬)

# ದೀಕ್ಷಾವಿಧಿ.

## ಮಂಟಪ ಕಟ್ಟುವದು.

(೧) ಸುತ್ತ ಚೌರಸ ಒಂಭತ್ತು ಹತ್ತು ಹನ್ನೊಂದು ಹನ್ನೆರಡು ಬೇಣಾಗಾಲಿ ಕಟ್ಟಿ ಗುರು ಕುಳ್ಳಿರುವ ಸ್ಥಾನದಲ್ಲಿ ಸಮ್ಮಾರ್ಜನೆ. ಐವತ್ತೆರಡಂಗುಲ ಅಗಲ ಮುವತ್ತಾರಂಗುಲ ಕಳಸವಿಡುವಲ್ಲಿ ನೀಲ ತೊಂಬತ್ತಾರಂಗುಲ ಅಗಲ ನಾಲ್ವತ್ತಾರಂಗುಲ ಸಮ್ಮಾರ್ಜನೆಯ ಮಾಡುವುದು. ಕಳಸಕ್ಕೆ ಹಸಿಯ ತುಂಬುವದಕ್ಕೆ ಸುತ್ತು ಚೌರಸ ಮೂವತ್ತೆರಡಂಗುಲ ಪ್ರಮಾಣನ ತುಂಬುವುದು. ಶಿಷ್ಯ ಕುಳ್ಳಿರುವಲ್ಲಿ ಚೌರಸ ಬತ್ತೀಸಂಗುಲು ಪ್ರಮಾಣ ಸಮ್ಮಾರ್ಜನೆಯ ಮಾಡುವುದು. ಗುರು ಕುಳ್ಳಿರುವ ಪೀಠದಿ ರಂಗವೋಲೆಯಂ ಬಸವನ ಗದ್ದುಗೆಯಂ ರಚಿಸುವುದು. ಶಿಷ್ಯ ಕುಳ್ಳಿರುವಲ್ಲಿ ಅಷ್ಟದಳ ಕಮಲವ ರಚಿಸುವುದು. ಈ ಪ್ರಮಾಣದಿಂದೆ ಅನುಗ್ರಹವ ಮಾಡುವದು.

(೨) ಇಂದ್ರ ದಿಕ್ಕು ಪಂಡಿತರು ಕುಳ್ಳಿರುವ ಸ್ಥಾನವು. ಅಗ್ನಿ ಕೋಣೆ ಮಹೇತಿನ ಮರುಳಾಚಾರ್ಯರ ಕಳಸ, ಮಹಂತಿನವರು ತಗೊಂಬುವದು. ಯಮ ದಿಕ್ಕು ಏಕೋರಾಮ ಕುಳ್ಳಿರುವ ಸ್ಥಾನವು. ನೈರುತ್ಯ ಕೋಣೆ ಪಂಡಿತಾರಾಧ್ಯರ ಕಳಶ ಮಠಪತಿ ತೆಗೆದುಕೊಂಬುವುದು. ವರುಣದಿಕ್ಕು ರೇವಣಾಚಾರ್ಯರು ಕುಳ್ಳಿರುವ ಸ್ಥಾನವು. ವಾಯವ್ಯ ಕೋಣೆ ಏಕೋರಾಮ ತಂದೆಗಳ ಕಳಸ. ಘನಲಿಂಗದವರು ತಗೊಂಬುವುದು. ಕುಬೇರ ದಿಕ್ಕು ಮರುಳಾಚಾರ್ಯರ ಸ್ಥಾನವು. ಈಶಾನ್ಯ ಕೋಣೆ ರೇವಣಾಚಾರ್ಯರ ಕಳಶ. ಮಹೇಶ್ವರಸ್ಥಲದವರು ತಗೊಂಬುವುದು.

# ತಗಾಯಿ ಸಾಲದ ಮೇಲೆ

## ಕಿರ್ಲೋಸ್ಕರ ಪೆಟ್ಟರ ೫ ಎಚ್ ಪಿ ಎಂಜಿನಗಳು




KIRLOSKAR

ನಿಮ್ಮ ಜಿಲ್ಹೆಯ ಕಲೆಕ್ಟರರ ಮುಖಾಂತರ ತಗಾಯಿ ಸಾಲದ ಮೇಲೆ ಈಗ ದೊರೆಯುತ್ತವೆ. ಅರ್ಜಿಯನ್ನು ಮಾಡಿಕೊಳ್ಳಬೇಕು.

ಈ ಸುಸಂಧಿಯನ್ನು ಕಳೆದುಕೊಂಡು ನಿರಾಶರಾಗಬೇಡಿರಿ.

- ಕಿರ್ಲೋಸ್ಕರ ಪೆಟ್ಟರ ಎಂಜಿನ್ ಅತ್ಯಂತ ಅಗ್ಗವಾದುದಾಗಿದೆ.
- ಬಿಡಿ ಭಾಗಗಳು ಎಲ್ಲ ಕಡೆಗೂ ಕಡಿಮೆ ದರಗಳಲ್ಲಿ ಕೂಡಲೇ ದೊರೆಯುತ್ತವೆ.
- ಎಣ್ಣೆಯ ಖರ್ಚು ನಾಲ್ಕು ತಾಸುಗಳಿಗೆ ಒಂದು ಗ್ಯಾಲನ್ ಮಾತ್ರ.
- ಆರು ತಿಂಗಳುಗಳ ವರೆಗೆ ದುರಸ್ತಿ ಸೇವೆ ಹಾಗೂ ಭಾಗಗಳನ್ನು ಕೂಡಿಸುವಿಕೆಯ ಉಚಿತ ಸೌಲಭ್ಯ.
- ಎಂಜಿನನ್ನು ರೂ. ೨೦ಕ್ಕೆ ಕೂಡ್ರಿಸಿ ಕೊಡಲಾಗುವದು. ಇದೊಂದೇ ಖರ್ಚು ಮಾತ್ರ.
- ಆದ್ದರಿಂದ ಎಲ್ಲ ರೈತರು ಈ ಸುಸಂಧಿಯ ಲಾಭವನ್ನು ಪಡೆಯಬೇಕಾಗಿ ವಿನಂತಿ

ವಿವರಗಳಿಗೆ ವಿಚಾರಿಸಿರಿ :—

ಮೆಸರ್ಸ ವಿಜಯ ಎಂಜಿನಿಯರಿಂಗ ಕ್ಯಾಂಡ ಮಾರ್ಕೆಟಿಂಗ ಕಂ.

ಅಡತಬಝಾರ ವಿಜಾಪೂರ.

| ಕೊಪ್ಪೀಕರ ರೋಡ | ಮಹಾರಾಜ ಪೇಟ | ರಾಮದೇವಗಲ್ಲಿ |
| --- | --- | --- |
| ಹುಬ್ಬಳ್ಳಿ | ಸೋಲಾಪೂರ | ಬೆಳಗಾಂವಿ |

# ಶಿವಾನುಭವ

—ooo●ooo—

ಸಂ ಪುಟ ೨೭ ] [ ಸಂಚಿಕೆ ೫

ಸಂಪಾದಕ

ಫ. ಗು. ಹಳಕಟ್ಟಿ,
ಬಿ. ಎ. ಎಲ್. ಎಲ್. ಬಿ.



ವಾ. ವ. ೫-೧೨-೦ ] ವಿಜಾಪುರ [ ಮೇ ೧೯[illegible]

## ವಿಷಯಾನುಕ್ರಮಣಿಕೆ.









# ಶಿವಾನುಭವ

ವರ್ಷ ೨೭ || ಮೇ ೧೯೫೩ || ಸಂಚಿಕೆ ೫

## ದೈವ—ದುಡಿಮೆ

( ಲೇಖಕ: — ಕೊಟ್ರಬಸವಲಿಂಗಶರಣರು. ಮು. ಬಾಗಳಿ
ತಾ. ಹರಪನಹಳ್ಳಿ. ಜಿ. ಬಳ್ಳಾರಿ. )

—o—

ಜಗತ್ತಿನಲ್ಲಿ ವಡೆಯುವ ಫಲಾಫಲಗಳಿಗೆ ಮನುಷ್ಯನು ಆಲೋಚನೆ ಮಾಡುವದೆನಂದರೆ ದೈವಬಲವೋ ದುಡುಮೆಬಲವೋ ಎಂಬ ವಾದಗಳು ಆಗಾಗ್ಗೆ ತಲೆ ಎತ್ತುತ್ತಲಿರುತ್ತವೆ. ಪ್ರಯತ್ನವಾದಿಯು 'ದೈವೇನ ದೇಯ ಮಿತಿ ಕಾಪುರುಷಾ ವದಂತಿ' ಎಂದು ದೈವವಾದಿಯನ್ನು ನಿಂದಿಸುತ್ತಾನೆ. ನಿದರ್ಶನ ಕೊಡುತ್ತಾನೆ. ಸಿಂಹವು ತಾನು ಮೃಗರಾಜನೆಂದು ಪ್ರಯತ್ನ ಇಲ್ಲದೆ ಹೆಮ್ಮೆಯಿಂದ ಹಸಿದು ಬಾಯ್ದೆರೆದು ಒಂದೆಡೆಯಲ್ಲಿ ಕುಳಿತಿದ್ದರೆ ಬೇಟೆಯು ಬಂದು ಬಾಯಲ್ಲಿ ತಾನೆ ಬೀಳುವದೇ ತಾನು ಎಷ್ಟು ಪರಾಕ್ರಮಶಾಲಿಯಾಗಿದ್ದರೂ ಎದ್ದು ಅತ್ತಿತ್ತ ಅಲೆದು ಸುತ್ತು ಮುತ್ತ ನೋಡಿ ಬೇಟೆಯಾಡುವ ಪ್ರಯತ್ನವನ್ನು ಮಾಡಿಯೇ ಆಗಬೇಕು ಎಂದೂ ದುಡಿಮೆಯ ದೊಡ್ಡಸ್ತಿಕೆಯನ್ನೇ ಪ್ರತಿಪಾದಿಸುತ್ತಾನೆ. ದೈವವಾದಿಯು 'ಯಕ್ನೇನ ಲಭ್ಯಮಿತಿ ಕಾಪುರುಷಾವದಂತಿ ಎಂದು ಹೇಳಿ ಅದೇ ನುಡಿಯಿಂದ ಯತ್ನವಾದಿಯನ್ನು ಹೀಗಳೆಯಬಹುದಲ್ಲವೇ ? ದೈವ ಬಲವುಳ್ಳವನಿಗೆ ಅನಿರೀಕ್ಷಿತವಾಗಿ ದ್ರವ್ಯಪ್ರಾಪ್ತಿ ಯಾಗುವದಿಲ್ಲವೇ? ದೈವಬಲವಿಲ್ಲದವನು ದೀರ್ಘವಾದ ಪ್ರಯತ್ನ ಮಾಡಿಯೂ ಫಲಪ್ರಾಪ್ತಿಯಾಗದೆ ಜೋಳ್ಳು ಕುಟ್ಟಿದಂತಾಗಿ ಶ್ರಮಕ್ಕೆ ಶ್ರಮವೇ ಫಲವಾಗಿ ನನ್ನ ಹಣೆಯ ಬರಹ ಒಳ್ಳೆಯದಿಲ್ಲವೆಂದು ಉಸುರ್ಗರೆಯುವದಿಲ್ಲವೇ? ಉದಾಹರಣೆಗಾಗಿ ವರ್ಷಾದ್ಯಂತ

ಕೃಷಿ ಮಾಡಿ ಬಿತ್ತಿದ ಬೀಜಕ್ಕೆ ಮಳೆ ಬೀಳದಿದ್ದಲ್ಲಿ ಆತನ ಪ್ರಯತ್ನ ಅದೇನಾಗಬಲ್ಲದು? ಒಂದು ವೇಳೆ ಮಳೆಯಾಗಿ ಚೆನ್ನಾಗಿ ಬೆಳೆದು ಕರಿಯಾಗಿ ಕಾಳು ಬಾರದಿದ್ದರೆ, ಆಗ ಅವನ ಬಾಯಿಂದ ಅದೇನು ಬರಬಲ್ಲದು? ನನ್ನ ದೈವ ಚನ್ನಾಗಿಲ್ಲ ಎಂದಲ್ಲವೆ? ದೈವಬಲವಿದ್ದರೆ ಕೋಡು ಕೊನರುವುದು ಬರಡು ಹಯನಹುದು. ಅದೇ ದೈವ ಕೃಪೆ ಇಲ್ಲದ ಕೊನರು ಕಮರುವುದು ಹಿಂಡುವ ಹಸು ಬರಡಹುದಲ್ಲವೇ ಎಂದು ಮುಂತಾಗಿ ದೈವವಾದಿಯು ದೈವದ ಹೆಚ್ಚುಗಾರಿಕೆಯನ್ನೆ ಮುಂದುವರಿಸುತ್ತಾನೆ.

ನಿಜವಾಗಿ ನೋಡಿದಲ್ಲಿ ಈ ಎರಡು ಜೊಳ್ಳು ವಾದಗಳು ಏಕಪಕ್ಷೀಯ ವಾದವುಗಳು. ಇವೆರಡೂ ಪೂರಕವಾದವುಗಳು ಇವುಎರಡೂ ಆವಶ್ಯಕ ವಾದವುಗಳು. ಅನಿವಾರ್ಯ ವಾದವುಗಳು. ದುಡಿದು ಪಡೆದದ್ದು ಒಮ್ಮೊಮ್ಮೆ ದಕ್ಕದೆ ಹೋಗಬಹುದು. ಹೋಗುತ್ತದೆ. ಇದರಿಂದಾಗಿ ಈ ಕೈಗೆ ಬಂದದು ಬಾಯಿಗೆ ಬರಲಿಲ್ಲ ಎಂಬ ಹೇಳಿಕೆಯಿದೆಯಲ್ಲವೆ? ಎರಡನೆಯದಾಗಿ ವಿವಾದಿಯು ಹೇಳುವಂತೆ ದಾರಿ ಹೋಕನಿಗೆ ದೈವಬಲದಿಂದ ಅನಿರೀಕ್ಷಿತವಾಗಿ ದುಡ್ಡು ಸಿಗಬಹುದು ಅದನ್ನು ರಕ್ಷಿಸಿ ಹೆಚ್ಚಿಸಿಕೊಳ್ಳುವ ಪ್ರಯತ್ನವನ್ನು ಮಾಡದಿದ್ದರೆ ದೈವ ಕೊಟ್ಟದ್ದು ಅದೆಷ್ಟು ದಿವಸ ನಿಲ್ಲಬಹುದು? ಧರ್ಮ ಕೊಟ್ಟದ್ದನ್ನು ಕರ್ಮ ಕೊಚ್ಚಿಕೊಂಡು ಹೋಯಿತಂತೆ, ಎಂದು ಆಡಿಕೊಳ್ಳುವ ರೂಢಿಯಿಲ್ಲವೆ? ಆದ್ದರಿಂದ ಯಾರೂ ಯಾರನ್ನು ಆಡಿಕೊಳ್ಳಬೇಕಾಗಿಲ್ಲ. ದೈವ ದುಡಿಮೆಗಳೆರಡೂ ಎಲ್ಲರಿಗೂ ಎಲ್ಲ ಕಾಲದಲ್ಲಿಯೂ ಬೇಕೇ ಬೇಕು. ಒಳ್ಳೆಯ ದೈವವಿದ್ದರೆ ಬರಲಿ ಇಲ್ಲದಿದ್ದರೆ ಹೋಗಲಿ ಎಂದು ಎಂದಿಗೂ ಹೇಡಿ ಮಾತಾಡಬಾರದು. ಸುಮ್ಮನೇ ಕುಳಿತುಕೊಳ್ಳಬಾರದು. ಪ್ರಯತ್ನ ಪಡುವುದು ಪುರುಷ ಕರ್ತವ್ಯ. ಫಲಕೊಡುವುದು ದೈವಕರ್ತವ್ಯ ಎಂದು ಮುಂದುವರಿಸುತ್ತಿರಬೇಕು. ಒಮ್ಮೆಗೆ ಫಲ ದೊರೆಯದಿದ್ದರೆ ಮತ್ತೆ ಮತ್ತೆ ಪ್ರಯತ್ನಿಸುತ್ತ ನೂರು ಸಲವಾದರೂ ಬೇಸರ ಪಡದೆ ಪ್ರಯತ್ನ ಪಟ್ಟು ದೈವಕೃಪೆಯನ್ನೂ ಪಡೆಯಲೇಬೇಕು ದೇವಧ್ಯಾನವನ್ನು ದೇಹ ದುಡಿಮೆಯನ್ನು ಎಂದಿಗೂ ಬಿಟ್ಟುಬಿಡಬಾರದು. ಮಾರ್ಕಂಡೇಯನು ತನ್ನ ಅಲ್ಪಾಯುಷ್ಯವನ್ನು ಕಳೆಕೊಂಡುದು ಬರೀ ತಪ್ಪು ಪ್ರಯತ್ನದಿಂದಲ್ಲ ದೈವಿಕ ಸಹಾಯದಿಂದ. ದೈವಿಕ ಸಹಾಯವಿಲ್ಲದಿದ್ದರೆ ಅವನ ಪ್ರಯತ್ನ ಫಲಿಸುತ್ತಿರಲಿಲ್ಲ. ಪ್ರಯತ್ನವೇ ಫಲದಾಯಕವಾಗಿದ್ದರೆ ಯಮನು ಬಂದು ತನ್ನ ಪಾಶವನ್ನು ಮಾರ್ಕಂಡೇಯನ ಮೇಲೆ ಹಾಕಬೇಕಾಗಿರಲಿಲ್ಲ. ದೈವದ ಬಲ

ವಿಲ್ಲದಿದ್ದಲ್ಲಿ ಯಾವನ ಆ ಪಾಕ ಕೆಲಸ ಮಾಡದೆ ಇರುತ್ತಿರಲಿಲ್ಲ. ದೈವ ದುಡಿಮೆ ಎರಡೂ ಸೇರಿ ಒಂದು ಫಲಿತಾಂಶವಾಗುತ್ತದೆ.

ಪ್ರತಿಯೊಬ್ಬನೂ ನೀತಿಯನ್ನು ಬೋಧಿಸುತ್ತ ರೀತಿಯನ್ನು ಶೋಧಿಸುತ್ತ ಬರಬೇಕು. ನೀತಿಬೋಧೆಯು ರೀತಿಯ ಶೋಧದಲ್ಲಿಯೇ ಪರ್ಯವಸಾನ ಪಡೆಯಬೇಕು. ಆಗ ಅದು ಪ್ರಯೋಜನಕಾರಿಯಾಗಬಲ್ಲದು, ಆಗುತ್ತದೆ. ಇಲ್ಲದಿದ್ದಲ್ಲಿ ಗಂಟಿಕ್ಕಿದ ಹಗ್ಗ ಹೊಸೆದಂತೆ. ಈ ತತ್ವವನ್ನು ತಿಳಿದು ಆ ರೀತಿ ಮಾಡುತ್ತಿರಬೇಕು. ಅದು ಒಂದು ವಿಜ್ಞಾನ ಮಾರ್ಗ.

ನಾವು ಯಾರಿಗಾದರೂ ಒಂದು ನೀತಿಯನ್ನು ಬೋಧಿಸಿದ್ದರೆ ಅದರ ಪ್ರಯೋಜನವನ್ನು ಆತನು ಪಡೆದಿರುವನೋ ಇಲ್ಲವೋ ಎಂಬುದು ತಿಳಿವವರೆಗೂ ಆತನಿಗೆ ನೀತಿಬೋಧೆಯನ್ನು ಮುಂದುವರಿಸಬಾರದು. ಅತಿ ಭೋಜನಶೀಲನಿಗೆ ಮಿತವಾಗಿ ಭುಂಜಿಸುವ ನೀತಿಯನ್ನು ಹೇಳಿದ್ದರೆ ಆತನು ಅದರಂತೆ ಆಚರಿಸುತ್ತಿರುವನೋ ಇಲ್ಲವೋ ಎಂದು ಆತನಿಗೆ ತಿಳಿಯದಂತೆ ಆತನ ಶೋಧನೆಯಲ್ಲಿ ನಡೆಸುತ್ತಿರಬೇಕು. ಅಲ್ಲಿಯವರೆಗೂ ಕ್ರಮಬದ್ಧವಾಗಿ ನಡೆಸಿದ್ದರೇನೆ ನೀತಿಬೋಧೆ ಗುರಿಹೊಂದುತ್ತದೆ. ನೈತಿಕ ಶಿಕ್ಷಣವೇ ಮನುಷ್ಯನಿಗೆ ಉಸಿರು. ಕ್ರಮ ತಪ್ಪಿ ನಡೆಯುವದರಿಂದ ಕಷ್ಟವಿನ್ನುಂಟು ಎಂಬುವ ಮಾತನ್ನು ಯಾವಾಗಲೂ ಜ್ಞಾಪಕದಲ್ಲಿ ಇಟ್ಟುಕೊಂಡಿರಬೇಕು. ಬಡವನಾಗಲಿ ಬಲ್ಲಿದರಾಗಲಿ ಸನ್ಯಾಸಿಯಾಗಲಿ ಸಂಸಾರಿಯಾಗಲಿ ಅಧಿಕಾರಿ ಇರಲಿ ಅನಧಿಕಾರಿ ಇರಲಿ ನೀತಿ ರೀತಿಗಳಿಲ್ಲದಿದ್ದರೆ ಅವರೆಲ್ಲ ಮನುಷ್ಯತ್ವಕ್ಕೆ ಸಲ್ಲದವರೆಂದು ನೀತಿ ನ್ಯಾಯಗಳಿಂದ ನಡೆವವರೇ ಮಹಾನುಭಾವಿಗಳೆಂದು ತಿಳಿದುಕೊಳ್ಳತಕ್ಕದ್ದು. ಇದು ಅಲ್ಲದೆ ಆ ಮಹಾನುಭಾವಿಗಳವರ ಉದಾಹರಣೆಗಳು ಅನೇಕ ರೀತಿ ಉಂಟು. ಆದರೂ ಇಲ್ಲಿ ಶ್ರೀ ಮನ್ನಿಜಗುಣಶಿವಯೋಗಿಗಳವರ ಒಂದೆರಡು ನೀತಿ ಬೋಧೆಗಳನ್ನು ವಿವರಿಸೋಣಾಗುತ್ತದೆ.

### "ಶ್ರೀ ಗುರು ವಚನದಿಂದಧಿಕ ಸುಧೆಯುಂಟೆ"

ಇದು ಮಾನವ ಜೀವನಕ್ಕೆ ಎಷ್ಟು ಅಗತ್ಯ? ನೀತಿ ಎಂಥ ಅಮೃತ? ನೀತಿ ಮಾನವನು ಅಮರನಾಗಿ ಅಖಂಡನಾಗಿ ಬದುಕಬೇಕಾದರೆ ಈ ನೀತಿಯನ್ನು ಸಂಪೂರ್ಣವಾಗಿ ಆಚರಣೆಯ ತೋರಬೇಕು. ಅನುಭವಿಸಿಯೇ ಆಗಬೇಕು ಮೊದಲು ಶ್ರೀ ಗುರುಗಳು ಎಷ್ಟು ಮಂದಿ

ಎಂಬ ಪದನ್ನು ಅರಿಯಬೇಕು. ಬೋಧಕ ವೇದಕ ನಿಷಿದ್ಧ ಕಾಮ್ಯ ಸೂಚಕ ವಾಚಕ ಕಾರಣ ವಿಹಿತ ಎಂದು ಎಂಟು ಬಗೆಯಾಗಿ ಶ್ರೀ ಗುರುಗಳಲ್ಲದ ಬರೀ ಗುರುಗಳಿರುವರೆಂದು ನಿಜಗುಣರು ಹೇಳಿದ್ದಾರೆ. ಆದರೆ ಅವರೆಲ್ಲ ಅಷ್ಟೊಂದು ಉಪಯುಕ್ತವಾದವರಲ್ಲ. ಆದರಿಂದಾಗಿ ಅವರು ಶ್ರೀ ಗುರುಗಳಲ್ಲ. ಅವರೆಲ್ಲರ ವಿಚಾರ ಇ ಬೇಕಾಗಿಲ್ಲ. ಶ್ರೀಗುರುಗಳೆಂದರೆ ಶ್ರೇಷ್ಠ ಗುರುಗಳು ಮುಖ್ಯವಾಗಿ ತಾಯಿತಂದೆ ಅಧ್ಯಾಪಕ, ಆಚಾರ್ಯ ಎಂಬದಾಗಿ ನಾಲ್ವರೇ ಎಂದು ಹೇಳಬೇಕು. ಈ ನಾಲ್ವರು ನರರಿಗೆಲ್ಲ ಶ್ರೀ ಗುರುಗಳು. ಇವರ ವಚನ ಸುಧೆಯನ್ನು ಪ್ರತಿಯೊಬ್ಬನನು ಪಾನ ಮಾಡಬೇಕು. ಅನೇಕರು ಮಾಡುತ್ತಿಲ್ಲ. ಅದರಿಂದಾಗಿ ಮಾನವನು ಬಾಳಿನಲ್ಲಿ ಮುಗ್ಗರಿಸುತ್ತಾನೆ. ಸಂಪೂರ್ಣ ಜೀವನದಿಂದ ವಂಚಿತನಾಗುತ್ತಿದ್ದಾನೆ.

ಮಾತೆ ಮೊದಲಿನ ಶ್ರೀಗುರು. ಇವಳು ಕೊಡುವದು ವಚನ ಸುಧೆ. ಮಾನವನಿಗೆ ಇದಕ್ಕೆ ಹೆಚ್ಚಿನ ಸುಧೆ ಬೇಕೊಂದಿಲ್ಲ. ಮಾನವನು ಮೊದಲು ಕಲಿಯಬೇಕಾದುದ್ದು ಮಾತು. ಮಾತಿಲ್ಲದೆ ಮಾನವನ ಚರಿತಾರ್ಥವೇ ಸಾಗುವದಿಲ್ಲ. ಪ್ರತಿಯೊಂದಕ್ಕೂ ಮಾತು ಬೇಕು. ಮಾತಿಲ್ಲನೆ ಹೋದರೆ ಮೂಕ ಪ್ರಾಣಿಯಾಗಿ ಇತರ ಪಶು ಪ್ರಾಣಿಗಳಂತೆ ಬದುಕಬೇಕಾಗಿತ್ತು. ಬದುಕಬೇಕು. ಇಂದಿನ ನಾಗರಿಕ ಮಾನವ ಜೀವನ ಕನಸಿನ ಮಾತಾಗುತ್ತಿತ್ತು. ಮಾನವತೆ ಮಾತಿನಿಂದ ಮೊದಲಾಗುತ್ತದೆ. ಮಾತು ಮಾತೆಯಿಂದ ಮೊದಲಾಗುತ್ತದೆ. ಈ ಕಾರಣದಿಂದ ವಚನಸುಧೆಯನೀವ ಪ್ರಥಮ ಶ್ರೀಗುರು. ಮಾತೆ. ಇವಳು ತನ್ನ ಕರ್ತವ್ಯವನ್ನು ನೆರವೇರಿಸುತ್ತಾಳೆ. ಮಾನವರಾಗಿ ಹುಟ್ಟಿ ಬರುವವರೆಲ್ಲರೂ ಈ ವಚನಸುಧೆಯ ನಾಲ್ಕನೆಯ ಒಂದು ಭಾಗಮಾತ್ರ. ಇದಾದ ಮೇಲೆ ಎರಡನೆಯ ಭಾಗವನ್ನು ಪಾನ ಮಾಡಬೇಕು. ಆ ಎರಡನೆಯ ಭಾಗದ ಅಮೃತವನ್ನು ಕೊಡುವ ಶ್ರೀಗುರು ತಂದೆ. ಈತನು ಕೊಡುವದು ಮಧ್ಯಾಮೃತ. ಮಾತು ಕಲಿತಾದ ಮೇಲೆ ಮಾಡುವದನ್ನು ಕಲಿಯಬೇಕು. ಕೃತಿಯಿಲ್ಲದ ಮಾತು ಯಾವ ಕೆಲಸಕ್ಕೂ ಬಾರದು. ಕೆಲಸಮಾಡದವನು ಬದುಕಲಾರನು. ಕಾರ್ಯಮಾಡದವಗೆ ಅನ್ನಆರೋಗ್ಯಹೇಳಿಲ್ಲ. ಅನ್ನಆರೋಗ್ಯವಿಲ್ಲದ ಜೀವನ ಅದೊಂದು ಮೃತ ಜೀವನ. ಅನ್ನ ಆರೋಗ್ಯಗಳನ್ನು ಸಂಪಾದಿಸುವ ಕಾರ್ಯಗಳಿಗೆ ಮೊದಲು ಪಿತನು ಪ್ರಬೋಧಿಸುತ್ತಾನೆ. ಆದ್ದರಿಂದ ಈತನು ಎರಡನೆಯ ಶ್ರೀಗುರು. ಇದು ಈತನಿಂದಲೇ ಆಗುವ ಕಾರ್ಯ. ತಾಯಿ ವಚನಪೂರಕಳಾದರೆ ತಂದೆ

ಕಾರ್ಯಪ್ರೇರಕ. ಕಾರ್ಯವಾಗದಿದ್ದರೇ ತಾಯಿ ಸಹಿಸಬಹುದು. ಸಹಿಸುತ್ತಾಳೆ. ತಂದೆ ಸಹಿಸಲಾರ. ಯಾವದಾದರೊಂದು ಕಾರ್ಯಕ್ಕೆ ಪ್ರಚೋದಿಸುತ್ತಾನೆ. ಪ್ರಾರಂಭಮಾಡಿಸುತ್ತಾನೆ. ಇದನ್ನು ಬಹು ಮಂದಿ ಪರಿಪಾಲಿಸುತ್ತಾರೆ. ತಂದೆಯ ಮಾತನ್ನು ಮೀರಿದ ನಿರುದ್ಯೋಗಿಗಳು. ನಮ್ಮ ಭಾರತದಲ್ಲಿ ಇನ್ನೂ ಅದೆಷ್ಟೋ ಜನರಿದ್ದಾರೆ. ಸೋಮಾರಿಗಳಿದ್ದಾರೆ. ನಿರುದ್ಯೋಗಿಗರು ತ್ಸಾಹಗಳು ಹೊರಟು ಹೋಗಬೇಕು. ಕಾರ್ಯಕ ಮಾತ್ರನಾದರೆ ಸಾಲದು ಇದು ಶರೀರಮಾತ್ರ ಪೋಷಿಸಬಲ್ಲದು. ಮಾನವನಿಗೆ ಶರೀರಪೋಷಣೆಯೇ ಚರಮ ಗುರಿಯಲ್ಲ. ಆದರಾಚೆ ಬುದ್ಧಿಯೊಂದಿದೆ. ಅದನ್ನು ಅಭಿವರ್ಧಿಸುವ ಕರ್ತವ್ಯವಿದೆ. ಅದಕ್ಕಾಗಿ ಮತ್ತೊಬ್ಬ ಶ್ರೀಗುರು ಬೇಕು. ಈತನು ಅಧ್ಯಾಪಕನಿದ್ದಾನೆ. ಈತನು ಮಾತೆಯ ಕಾರ್ಯವನ್ನು ಮುಂದುವರಿಸುತ್ತಾನೆ. ಮಾತೆಯು ಬರೀ ಮಾತು ಕಲಿಸಿರುತ್ತಾಳೆ. ಆದರೆ ಅದರ ಅರಿವು ಬುದ್ಧಿಸಂಸ್ಕಾರಕ್ಕೆ ಬಂದು ಸಿಲುಕಿರುವಷ್ಟು ಆಗಿರುವದಿಲ್ಲ. ಬರೀ ಕಾರ್ಯಸಾಧನೆಗೆ ಸಹಾಯಕವಾಗಿರುವದೇ ಹೊರತು ಮಾತಿನ ಮರ್ಮ ಮೂಲಗಳ ಅರಿವು ಸಿಕ್ಕಿರುವದಿಲ್ಲ. ಭೌತಿಕ ಬೌದ್ಧಿಕ ವಿಚಾರಾಭಿವೃದ್ಧಿ ಇರುವದಿಲ್ಲ. ಇದಾಗದ ವಿನಹ ಮನುಷ್ಯನು ಮನುಷ್ಯನಾಗಲಾರ. ನಾಗರಿಕನಾಗಲಾರ. ತಾಯಿಯಲ್ಲಿ ಉಲಿವುದು ಬಾಹ್ಯ ವಾಣಿ.

ಅಧ್ಯಾಪಕನಲ್ಲಿ ಕಲಿಯುವದು ಅಂತರ್ವಾಣಿ. ಇದುವೇ ಕಾವ್ಯ. ಕಾವ್ಯವೆಂದರೆ ಕೇವಲ ಛಂದೋಬದ್ಧವಾದ ಕವಿತೆಯಲ್ಲ ಪದ್ಯವಲ್ಲ. ಗದ್ಯವೂ ಕಾವ್ಯ. ಕಾವ್ಯವೆಂದರೆ ರಸವತ್ತಾದ ಸಾಹಿತ್ಯ ತಾಯಿಯಿಂದ ಕಲಿತ ಮಾತಿನಲ್ಲಿ ಈ ರಸವಂತಿಕೆ ಬಹು ಮಟ್ಟಿಗೆ ಇರುವುದಿಲ್ಲ. ಇದು ಕಾರಣ ರಸವಾಣಿಯನ್ನು ಮನುಷ್ಯನು ಅಳವಡಿಸಿಕೊಳ್ಳಲೇಬೇಕು. ಆಗ ಬುದ್ಧಿವಂತನೆನಿಸುತ್ತಾನೆ. ಜಾಣನೆಂದೆನಿಸುತ್ತಾನೆ. ಜವವಿಲ್ಲದ ಅಶ್ವ, ಕುವರನಿಲ್ಲದ ಮನೆ, ಕವಿತ್ವವಿಲ್ಲದ ಜಾಣ್ಮೆ, ಇವು ಪ್ರಯೋಜನವಿಲ್ಲೆಂದು ಕವಿ ಷಡಕ್ಷರಿಗಳು ಹೇಳಿದ್ದಾರೆ ತಾಳಿಯ ಮಾತಿದು. ಉಳಿದ ಪಶುಗಳಂತೆ ಸಾಮಾನ್ಯವಾದ ನಡೆಗೆಯುಳ್ಳದೆ ಅದು ಜಾತ್ಯಶ್ವವಿಲ್ಲ. ಅದರ ನಡಗಿಯಲ್ಲಿ ಚುರುಕು ಬರಬೇಕು. ವೇಗ ಹುಟ್ಟಬೇಕು. ಆಗ ಕುದುರೆ ಕುದುರೆಯಾಗಬಲ್ಲದು. ಇಲ್ಲದಿದ್ದರೆ ಕತ್ತೆಯಾಗಬಲ್ಲದು. ಮನುಷ್ಯನ ಮಾತಿನಲ್ಲಿಯೂ ಅಷ್ಟೆ. ಬರೀ ಮಾತು ಬಂದರೆ ಸಾಲದು. ತಾಯಿಯಲ್ಲಿ ಕಲಿತ ಆ ಮಾತು ಶಿಕ್ಷಣ ಸಂಸ್ಕಾರದಿಂದ ಸ್ವಲ್ಪ ಚುರುಕಾದರೆ ರಸಯುಕ್ತವಾದರೆ ಅದು

ಕಾವ್ಯವಾಗಬಲ್ಲದು. ಆಗ ಮಾತ್ತು ಇಡಿಯಾಗುತ್ತದೆ. ಬಾಳು ಇಡಿಯಾಗುತ್ತದೆ. ಇಲ್ಲದಿದ್ದರೆ ನಡಗೆ ಇಲ್ಲದ ಕುದುರೆಯಂತೆ ಆಗ ಬೇಕಾಗುತ್ತದೆ.

ಈತನನ್ನು ನರೋವಾ ನಾನರೊವಾ ಎಂದು ಪ್ರಶ್ನಿಸಬೇಕಾಗುತ್ತದೆ. ಉತ್ತರ ಪ್ರಶ್ನೆಯೇ ಉತ್ತರವಾಗಬಲ್ಲದು. ಓದುಬಾರದವನ ಬಾಳು ನಿಜಕ್ಕೂ ವಾನರನ ಬಾಳೆಂವೇ ಹೇಳಬೇಕು. ಮಾತು ಪ್ರತ್ಯಕ್ಷ ಅಪ್ರತ್ಯಕ್ಷ ಎಂದು ಎರಡು ಬಗೆಯಾಗಿದ. ಯಾರೊಡನೆ ಮಾತಾಡಬೇಕೋ ಅವರು ಪ್ರತ್ಯಕ್ಷವಾಗಿದ್ದಲ್ಲಿ ಅದು ಪ್ರತ್ಯಕ್ಷ ಮಾತು. ಒಬ್ಬರ ಮಾತನ್ನು ಇನ್ನೊಬ್ಬರ ಮುಖಾಂತರ ಮಾತಾಡುವುದು ಪರೋಕ್ಷ ಮಾತಿನ ಒಂದು ಬಗೆಯಾದರೂ ಬರಹ ಮೂಲಕ ಮಾತನಾಡುವುದು ಮತ್ತೊಂದು ಬಗೆಯಾಗಿರುವುದು. ನಿದರ್ಶನಕ್ಕಾಗಿ ಕವಿ ಕಾಳಿದಾಸನು ಆದೆಂದೋ ಆಗಿ ಹೋಗಿದ್ದಾನೆ ಇವನು ಇಂದು ಪ್ರತ್ಯಕ್ಷವಿಲ್ಲ. ಆದರೇನು ಅವನ ಅಂತರ್ವಾಣಿ ಪ್ರತ್ಯಕ್ಷವಾಗಿದೆ. ಆತನು ತನ್ನ ಅಂತರ್ವಾಣಿಯನ್ನು ಕಾವ್ಯ ಅಥವಾ ಸಾಹಿತ್ಯಮುಖದಲ್ಲಿ ಇರಿಸಿದ್ದಾನೆ. ಕಾವ್ಯವಾಣಿಯಲ್ಲಿ ನಮ್ಮೊಡನೆ ಮಾತನಾಡುತ್ತಾನೆ. ಕುಮಾರ ಕಥೆಯನ್ನು ಬಿತ್ತಿರಿಸುತ್ತಾನೆ. ದುಷ್ಯಂತ ಶಕುಂತಲೆಯರ ಬಾಳಬಗೆಯನ್ನು ಬಣ್ಣಿಸುತ್ತಾನೆ ಇಂದು ಅವನು ಅಪ್ರತ್ಯಕ್ಷವಾಗಿದ್ದು ನಡೆವ ಮಾತು ಇಷ್ಟು ದೂರದ ಮಾತುಬೇಡ. ಇದೀಗ ಈ ಪರೋಕ್ಷ ಮಾತಿನ ವ್ಯವಹಾರ ಹೆಚ್ಚಿಹೋಗಿ ಇದಕ್ಕೆ ಪತ್ರವ್ಯವಹಾರವೇ ಒಂದು ನಿದರ್ಶನ ನಮ್ಮ ಬಂಧುಗಳು ಎಷ್ಟೋ ದೂರದಲ್ಲಿದ್ದರೂ ನಾವು ಮಾತನಾಡುತ್ತೇವೆ. ಎಷ್ಟೋದೂರದ ರಾಜಕೀಯ ಮುಂತಾದ ವಿಚಾರಗಳನ್ನು ಪತ್ರಿಕೆಗಳ ಮುಖಾಂತರ ತಿಳಿದು ಮಾತಾಡುತ್ತೇವೆ ಪತ್ರಗಳ ಪತ್ರಿಕೆಗಳ ಮಾತುಗಳು ರಸವತ್ತಾಗಿದ್ದರೆ ಅವು ಕಾವ್ಯಗಳಾಗಬಲ್ಲವು, ಸಾಹಿತ್ಯಗಳಾಗಬಲ್ಲವು. ಆಗಿವೆ ವಿವೇಕಾನಂದರ ಜವಹಿರಲಾಲರ ಅನೇಕ ಪತ್ರಗಳು ಕಾವ್ಯಗಳಾಗಿವೆ. ಒಟ್ಟಿನಲ್ಲಿ ಇಂದಿನ ವ್ಯವಹಾರಿಕ ರಾಜಕೀಯ ಧಾರ್ಮಿಕ ದೃಷ್ಟಿಯಿಂದ ಪರೋಕ್ಷಮಾತುಗಳನ್ನು ಕಲಿಯುವುದು ಆವಶ್ಯಕ ಅನಿವಾರ್ಯ ಇದರಿಂದ ವಯನವರ ಮಟ್ಟ ಮೇಲಕ್ಕೇರುತ್ತದೆ. ಮಾತಿನ ಪೂರ್ಣತೆ ತುಂಬಿ ಬರುತ್ತದೆ ಇದರಿಂದಾಗಿ ಅಧ್ಯಾಪಕನು ಕೊಡುವ ಬೌದ್ಧಿಕ ಶಿಕ್ಷಣವನ್ನು ತಪ್ಪದೇ ಕೊಡಬೇಕು ಈ ಶಿಕ್ಷಣ ಸ ಕಿಯ್ಯೆ ಪಾನವನ್ನು ಅನೇಕರು ಮಾಡುತ್ತಿಲ್ಲ ಇದರಿಂದಾಗಿ ನಾಗರಿಕ ಜೀವನಕ್ಕೆ ಎರವಾಗುತ್ತಿದ್ದಾರೆ ಅನೇಕರು ಕಲಿತು ನಾಗರೀಕರಾಗಿ ಮೂರನೆಯ

ಜಂತದಲ್ಲಿ ಬಾಳಿ ಭೌತಿಕ ಬೌದ್ಧಿಕ ಸುಧೆಯನ್ನು ಮಾನವನು ಸವಿಯುತ್ತಿದ್ದಾರೆ ಮಾಡುತ್ತಾರೆ ಇದಾದರೂ ಕೊರತೆಯದೆ ಇದರಾಚೆ ಇನ್ನೊಂದು ಇದೆ ಅದೇ ಆತ್ಮ ಅದರಿಂದಲೇ ಬುದ್ಧಿ ಸಂಪತ್ತು ಶಕ್ತಿ ಸಂಪತ್ತು ವಾಕ್ ಸಂಪತ್ತು ಬರಬಲ್ಲವು ಇವೆಲ್ಲಕ್ಕೂ ಕಾರಣವಾದ ಆ ಆತ್ಮ ಸಂಸ್ಕಾರವಿಲ್ಲದ ಮೇಲೆ ಮಾನವನಾಗಿ ಬದುಕಿ ಪ್ರಯೋಜನವಿಲ್ಲ ಮಾತು ದೈಬುದ್ಧಿ ಸಂಸ್ಕಾರಗಳನ್ನು ಪಡೆದ ಮನುಷ್ಯ ಕಡೆಯದಾಗಿ ಆತ್ಮ ಸಂಸ್ಕಾರವನ್ನು ಪಡೆಯಲೇಬೇಕು ಆಗ ಮಾನವನು ಪರಿಪೂರ್ಣನಾಗಬಲ್ಲನು ಮಹೋದಯನಾಗಬಲ್ಲನು ಈ ಮಹತ್ಕಾರ್ಯವನ್ನು ಮಾಡುವವನು ನಾಲ್ಕನೆಯ ಶ್ರೀಗುರುವಾದ ಆಚಾರ್ಯನು ಮಾತುದೈಗಳ ಸಂಸ್ಕಾರ ಬಹಿರಂಗದ್ದು ಬುದ್ಧಿ ಆತ್ಮಗಳ ಸಂಸ್ಕಾರ ಅಂತರಂಗದ್ದು ಬಹಿರಂಗ ಸಂಸ್ಕಾರದ ಶ್ರೀ ಗುರುಗಳು ತಾಯಿತಂದೆಗಳು ಅಂತರಂಗದ ಸಂಸ್ಕಾರ ಶ್ರೀಗುರು ಅಧ್ಯಾಪಕ ಆಚಾರ್ಯರು ಇವರಿಬ್ಬರು ಅಂತರಂಗದ ತಾಯಿತಂದೆಗಳು ಅಧ್ಯಾಪಕನು ತಾಯಿಯ ಕೆಲಸವನ್ನು ಮುಂದುವರಿಸಿದರೆ ಆಚಾರ್ಯನು ತಂದೆಯ ಕೆಲಲಸವನ್ನು ಮುಂದುವರಿಸುತ್ತಾನೆ ಕ್ರಿಯೆಯಿಲ್ಲದ ಮಾತು ಹೇಗೆ ಕೊಂತೆಯದೋ ಹಾಗೆ ಆತ್ಮಾನುಭವವಿಲ್ಲದ ಪಾಂಡಿತ್ಯ ಕೊರತೆಯದು ಜನನಿಯ ಕೆಲಸವನ್ನು ಜನಕನು ಪೂರೈಸಿ ಕಳೆ ಕಟ್ಟಿಸಿದರೆ ಅಧ್ಯಾಪಕನ ಕೆಲಸವನ್ನೂ ಆಚಾರ್ಯನು ಪೂರೈಸಿ ಕಳೆ ಕಟ್ಟಿಸುತ್ತಾನೆ. ಅರಿತುದನ್ನು ಆಚರಿಸು ಎಂದು ಹೇಳುತ್ತಾನೆ. ಆಚರಿಸಿ ಅನುಭವಿಸು ಎಂದು ಬೋಧಿಸುತ್ತಾನೆ. ಅದರಂತೆ ನಡೆವುದೇ ಮಾನವ ಉತ್ತಮ ಸ್ಥಿತಿ ಉನ್ನತ ಶರಗತಿ ಇದೇ ಚರಮ ಗುರಿ ಪರಮಸಿರಿ ಇದರಿಂದಾಗಿ ಆಚಾರ್ಯನ ಆರ್ಯತ್ವ ಅತ್ಯಧಿಕವಾದುದು ಶ್ರೀಗುರುತ್ವ ಹಿಂದಿನವರಿಗಿಂತಲು ಶ್ರೇಷ್ಠವಾದುದು ಈ ಗುರುವಿನ ಬೋಧೆಗೆ ಬಹು ಮಂದಿ ಮನಸ್ಸು ಮಾಡುವದಿಲ್ಲ, ಸುಧೆಗೆ ಬಾಯಿಬಿಡುವದಿಲ್ಲ. ಮನಸ್ಸು ಮಾಡಿ ಮಹಾತ್ಮರಾಗಿ ಆದರ್ಶ ಜೀವಿಗಳಾಗಿ ಅಖಂಡ ಜೀವಿಗಳಾಗಿ ಬದುಕುವದಿಲ್ಲ ಜಗದ ಜೀವಿಗಳಲ್ಲಿ ಒಂದು ಜೀವಿಯಾಗಿ ಜನನ ಮರಣ ಜಂಜಡಕ್ಕೊಳಗಾಗಿ ಹೋಗುವರೇ ಬಹಳ ಆತ್ಮವಿದ್ಯೆಯನ್ನು ಅಳವಡಿಸಿಕೊಳ್ಳುವವರು ಅಪರೂಪ ಯಾಕಂದರೆ ಅಲ್ಲಿ ಜೀವನದ ಪರಿಪೂರ್ಣತೆ ಪರತತ್ವತೆಯಿದೆ ಎಂದು ತಿಳಿದವರು ಬಹು ಅಪರೂಪ ಇದರಿಂದಾಗಿ ಆ ಆತ್ಮವಿದ್ಯೆಯನ್ನು ಬೋಧಿಸುವ ಶ್ರೀಗುರುಗಳು ದುತ್ತು ಅಪರೂಪವಾಗಿದ್ದಾರೆ ಇಂದಿನ ಯುಗದಲ್ಲಿ ಆತ್ಮಸುಧೆಯನ್ನು ಸುರಿದು ಪರಿ

ಪೂರ್ಣ ಪರಮಾದರ್ಶನ ಜೀವನ ಸಾಗಿಸಿದವರಲ್ಲಿ ಮಹಾತ್ಮ ಗಾಂಧೀಜಿ
ಯವರೊಬ್ಬರು ಇದು ಇನ್ನೀದವರಿಗೂ ಅಗತ್ಯವಲ್ಲವೆ ಮಾತಾಡುವಿಕೆ
ಮಾಡುವಿಕೆ ಅರಿಯುವಿಕೆ ಅಳವಡಿಸಿಕೊಳ್ಳುವಿಕೆ ಹೀಗೆ ನಾಲ್ಕು ವಿಧ
ವಾದಂತಹ ವಚನ ಸುಧೆಗಿಂತ ಬೇರೆ ಸುಧೆಯಿಲ್ಲ. ಈ ಸುಧೆಗಿಂತ
ಬೇರೆ ನೀತಿ ಬೋಧೆಯಿಲ್ಲ ಆದ್ದರಿಂದ ಆತ್ಮಾನುಭವವನ್ನು ಅಳವಡಿಸಿ
ಕೊಳ್ಳುವುದೇ ಪರಮ ನೀತಿ ಇದನ್ನು ಅಳವಡಿಸಿಕೊಳ್ಳುವವನಿಗೆ ಆಚಾ
ರ್ಯನು ಬೋಧಿಸುವ ನೀತಿಗಳಾವು ತನ್ನಡತೆಗಳಾವು ಎಂಬುವದನ್ನು ಇನ್ನೂ
ಅರಿತಾಗಬೇಕು ರಾಗ ವಿರಾಗಗಳು ಮಾನವ ಜೀವನದಲ್ಲಿ ರಾತ್ರಿ ಹಗಲಿ
ನಂಥವು ರಾತ್ರಿ ಕಳೆದು ಹಗಲುಬಾರದಿದ್ದರೆ ಮಾನವ ಜೀವನ ಅದೊಂದು
ಶೂನ್ಯ ಅದೇ ಎಂದು ಬಂಧನ ಮಾನವನು ಮಹಾನುಭಾವನಾಗಬೇಕಾ
ದರೆ ರಾತ್ರಿಯನ್ನು ಕಳೆದಾಗಬೇಕು ಏರಿಗ ವಿವಹಡಬೇಕು ಮಾನವರು
ಮನೋವೃತ್ತಿಗೆ ಒಳಗಾಗಿ ಒದಗುವಾಗ ಸ್ವಾರ್ಥಿಯಾಗಿ ಬಾಳುತ್ತಾನೆ
ಸ್ವಾರ್ಥವು ರಾಗದ ಬೀಜ ರಾಗದ ಫಲದಬೀಜ ಇಲ್ಲಿ ಫಲವೆಂದರೆ ಬಳ
ಲಿಕೆ. ಇದುಬೇಕು ಎಂದುಬಯಸುವ ಶ್ರಮಿಸುವ ದಾಸರು ಆಗಬಹುದು
ಈ ಪ್ರಶ್ನೆಗೆ ಪಾರವಿಲ್ಲ. ಪಾರವಿಲ್ಲದ ಆ ಆಶೆಗೆ ಒಳಗಾಗುವುದು! ಪಾರ
ತಂತ್ರ ಪಾರಮಾರತ್ವ ಆತನ ಚಿತ್ತ ಆತನುಣ್ಣಿ ತಂತ್ರದಲ್ಲಿಂದು ಕರ್ತವ್ಯಾ
ಕರ್ತವ್ಯಗಳನ್ನು ಅರಿಯದಲೆ ಬಯಸಿದ್ದು ಯಾವದೇ ಇರಲಿ ಅದು ಹೇಗೆ
ಬರಲಿ, ಅದನ್ನು ಸಂಪಾದಿಸುವುದೇ ಅದರ ಕರ್ತವ್ಯ ಅದರಿಂದಾಗಿ ಮಾನ
ವನು ಪಶುವೃತ್ತಿಗಿಳಿಯುತ್ತಾನೆ ಅದರ ತಂತ್ರವಾಗಿ ಬಾಳುತ್ತಾನೆ ಬೀಳು
ತ್ತಾನೆ. ರಾಜಕೀಯ ರಂಗದಲ್ಲೆ ಆಗಲಿ ಧಾರ್ಮಿಕದಲ್ಲಿಯೇ ಆಗಲಿ ಮಾಲ
ಕನು ಅತಿ ಆಶೆಗೆ ಒಳಗಾದರೆ ಆ ರಂಗದಲ್ಲಿ ವಿಪ್ಲವ ಕಟ್ಟಿಟ್ಟ ಬುತ್ತಿ.
ಇಂದಿನ ಕಳಕಂತ್ರಿಯು ವಿಪ್ಲವದ ಕತೆಯಲ್ಲಿ ಸೇರಿವೆ ಯಾವ ಪರಿಸ್ಥಿ
ತಿಗೆ ಒಳಗಾಗಿದೆ ಎಂಬುದು ಎಲ್ಲರಿಗೂ ತಿಳಿದ ವಿಷಯ ಹೀಗೆಯೇ
ಧಾರ್ಮಿಕ ರಂಗದಲ್ಲಿಯು ರಾಗದಿಂದ ರಸವಿಲ್ಲ ರಾಗ ಎಲ್ಲ ರಂಗಗಳಲ್ಲಿ
ವಿಧಿಂಸ ಅದನ್ನೇ ರಸವೆಂದು ಭಾವಿಸಿ ಭ್ರಮಿಸಿ ಜೀವನು ಮುನ್ನಡೆ
ಯುತ್ತಿದ್ದಾನೆ. ಮುಂಗಾಣದವನಾಗಿದ್ದಾನೆ. ಇದನ್ನು ತಿಳಿದುಕೊಳ್ಳುವ
ತೀರಕ್ಕೆ ಬಂದು ಮತ್ತದವನಾಗಿದ್ದಾನೆ. ಮಹಾತ್ಮಾ ಗಾಂಧೀಜಿಯು ಮಾನ
ಹಂತದಿಂದ ಮಹಾತ್ಮಾ ಹಂತಕ್ಕೆ ಬಂದುದು ರಾಗದಿಂದಲ್ಲ ವಿರಾಗದಿಂದ.
ವಿರಾಗವೆಂದರೆ ಇದು ಎಲ್ಲವನ್ನು ಬಿಟ್ಟು ತಾನಾಗಿ ಇರುವುದೆ ವಿರಾ

ಗದ ಪೂರ್ಣತೆಯಲ್ಲಿ ಅದು ವೈಯಕ್ತಿಕ ಮಾತ್ರ. ಆತನು ಒಂದು ರೀತಿಯು
ಆಗಿಯೆ ಅದೇ ಲೋಕ ಕಲ್ಯಾಣಸಾಧನ ವಾದಾಗ ವಿರಾಗ ಪರಿಪೂರ್ಣ
ವಾಗಬಲ್ಲದು. ತನ್ನ ಸ್ವಾರ್ಥಕ್ಕಾಗಿ ವಿರಾಗವನ್ನು ಬಳಸಿ ಲೋಕ ಸೇವೆ
ಗಾಗಿ ರಾಗವನ್ನು ಬೆಳಸಿದರೆ ಅದು ವಿರಾಗವೆ. ಅಂತಹ ವಿರಾಗ ಇದೀಗ
ಅತ್ಯಗತ್ಯ, ಎಂದೆಂದಿಗೂ ಅತ್ಯಗತ್ಯ. ವ್ಯಕ್ತಿ ಹಿತವನ್ನು ಬಯಸುವವನು ಈ
ಲೋಕಕಲ್ಯಾಣಕಾರಕವಾದ ವಿರಾಗಕ್ಕೆ ಬಾರನು. ಬಾರದ ಮೇಲೆ ಅವನು
ಮಹಾನುಭಾವನಾಗಲಾರನು. ಆದ ಮೇಲೆ ಅವನಿಗೆ ಭವಬಂಧನ ತಪ್ಪದು.
ಭವಭವಾಂತರದಲ್ಲಿ ಅವನು ಬಂದಿಲ್ಲ ಒಂದು ರೀತಿಯಿಂದ ಬಳಲಲೇ
ಬೇಕು. ಬಳಲುತ್ತಾನೆ. ರಾಗಿಗೆ ಎಷ್ಟು ಸಂಪಾದಿಸಿದರು. ಅಶಾಂತಿ ಅ
ಸಂತೋಷ ಸಂಪಾದಿಸಿದ್ದರಂತೂ ಅವನ ಪಾಡು ಪಾಡೇನು ಅದನ್ನು ಹೇಳಲಾ
ಗದು. ವಿರಾಗಿಗೆ ಸಂಪಾದಿಸಿದರೂ ಸಂತೋಷ ಸಂತೃಪ್ತಿ ಸಂಪಾದಿಸದಿದ್ದರೂ
ಸಂತೋಷ ಸಂತೃಪ್ತಿ. ರಾಗಿಯು ಮೈಸಿರಿ ಮನೆ ಸಿರಿಗಳಿಗಾಗಿ ಹಿಗ್ಗುತ್ತಾನೆ.
ಹೆಚ್ಚುತ್ತಾನೆ. ವಿರಾಗಿಯು ಭಾವದ ಸಿರಿಭುವನದ ಸಿರಿಗಳಿಗಾಗಿ ಹಿಗ್ಗಿಹೆಚ್ಚು
ತ್ತಾನೆ. ರಾಗಿಗೆ ಅಹೋರಾತ್ರಿಗಳು ಒಮ್ಮೊಮ್ಮೆ ಬಂದು ಒಮ್ಮೆ ಸುಖ
ಒಮ್ಮೆ ದು:ಖ ಒಮ್ಮೆ ಶಾಂತಿ ಇನ್ನೊಮ್ಮೆ ಅಶಾಂತಿ ಒಮ್ಮೆ ಕ್ರಿಯೆ
ಮತ್ತೊಮ್ಮೆ ಅಕ್ರಿಯೆ ಒಮ್ಮೆ ದಯೆ ಮಗದೊಮ್ಮೆ ಅದಯೆ ಹೀಗೆ ಅಸ್ಥಿ
ರವಾಗಿ ಹುಟ್ಟುತ್ತವೆ. ವಿರಾಗಿಗೆ ಅವು ಯಾವಾಗಲೂ ಒಟ್ಟಾಗಿಯೇ ಇದ್ದು
ಶಾಂತತೆ ಸತ್ಕಾರ್ಯ ದಕ್ಷತೆ ಮುಂತಾದವುಗಳನ್ನು ಸದಾಕಾಲವಲ್ಲಿ ಹುಟ್ಟಿ
ಸುತ್ತವೆ. ರಾಗಿಯು ರಹಸ್ಯಕ್ಕಿಂತ ರಂಜನೆಗೆ ಹೆಚ್ಚು ವಾಲುತ್ತಾನೆ. ಅವ
ಶ್ಯಕ್ಕಿಂತ ಹೆಚ್ಚು ಅನವಶ್ಯತೆಗಳಿಗೆ ಆಶಿಸುತ್ತಾನೆ. ವಿರಾಗಿಯು ಇವುಗ
ಳಿಗೆ ವಿರುದ್ಧವಾಗಿ ವರ್ತಿಸುತ್ತಾನೆ. ರಾಗವು ತನ್ನನ್ನು ಬಂಧನದಿಂದ ದಾಟಿ
ಸದು. ವಿರಾಗವು ಭುವನವನ್ನೇ ಬಂಧನ ಬಳಲಿಕೆಗಳಿಂದ ದಾಟಿಸುತ್ತದೆ.
ಅದು ರಾಗದ ಗುಣ ಇದು ವಿರಾಗದ ಗುಣ. ಅದು ಭವಬಂಧನಕ್ಕೆ
ಬೀಜ. ಇದು ಭವವಿಮುಕ್ತಿಗೆ ಬೀಜ. ಭವ್ಯಶಕ್ತಿಗೆ ಬೀಜ. ಇಂತಹ ವಿರಾ
ಗವು ವಿವಾಹವಾಗದ ಸನ್ಯಾಸಿಗಳಿಗೆ ಮಾತ್ರವಲ್ಲ, ಸಂಸಾರಿಗಳಿಗೂ ಅವಶ್ಯ
ಕವಾದುದು. ಪ್ರತಿಯೊಬ್ಬನು ಪಾಲಿಸಬೇಕಾದುದು ಅಂದಿಗೆ ಜಗತ್ಕಲ್ಯಾಣ
ವಾಗುತ್ತದೆ. ಜೀವನ್ಮುಕ್ತಿಯ ಸವಿ ಸಿಕ್ಕುತ್ತದೆ. ಜೀವನ್ಮುಕ್ತಿಯೇ ಜೀವನ.
ವಿದೇಹ ಮುಕ್ತಿಯೇ ಮರಣ. ಜೀವನ್ಮುಕ್ತಿಯ ಜೀವನಕ್ಕೆ ಶರಣು ಹೋಗು
ವುದ ಲೇಸು. ಭವಬೀಜವಾದ ರಾಗವ ಬಿಡುವುದೇ ಲೇಸು. ತಿರೆಯಲ್ಲಿ

ನರಜನ್ಮಕ್ಕೆ ಹಿರಿದಿಲ್ಲ. ಕರಣವಿಜಯದಿಂದ ಕಲಿತನವಿಲ್ಲ. ಯಾಚನೆಗಿಂತ ನೀಚತನವಿಲ್ಲ. ಆತ್ಮದರಿವಿಗಿಂತ ಜಾಣ್ಮೆಯಿಲ್ಲ. ಕೃಪಣತೆಯೇ ಅಪವಾದವೇ ಆತ್ಮಹತ್ಯ. ಸತ್ಯವೇ ಶುದ್ಧ ತಪಸ್ಸ್ವಾಭಿಮಾನವೇ ಸಂಪದ ಕಾಯಬಿಟ್ಟು ಮಾಯದಾಟವಿಲ್ಲ. ಕಾವು ಬಿಟ್ಟು ಚುಚ್ಚು ಕತ್ತಿ ಇಲ್ಲ. ವಿನಯ ಬಿಟ್ಟು ಉಪಚಾರವಿಲ್ಲ. ತನ್ನ ಬಿಟ್ಟು ನನ್ನಿ ವಿಷಯವಿಲ್ಲ. ಶ್ರಮವೇ ಮುಕ್ತಿಸಾಧನ ವಿಮಲ ಮಾನಸವೇ ಶುಭ ತೀರ್ಥ. ಕ್ರಮ ತಪ್ಪಿನಡೆವುದೇ ಕಡು ಕಷ್ಟ. ಮಮಕಾರವೇ ಮಿಕ್ಕಿನ ಬಂಧ ದಯೆ ಇರಲು ಧರ್ಮ ಬೇಡ. ವಿರತಿ ಇರಲು ಸಂಪದ ಸುಖ ಬೇಡ ಅಚ್ಚ ಬಕುತಿ ಇರಲು ಸಚ್ಚರಿತವೇಕೆ? ಪರ ವಧುವಿನ ಕೂಟ ಪರವಿತ್ತಾಪಹರಣ ಅಭಕ್ಷ್ಯ ಸೇವನೆ ಹಿಂಸೆ ಇವು ತನುವಿನಿಂದಾಗುವ ಅನೀತಿಗಳು. ಪಾಮರ ಜನ್ಮ ಕಾರಣಗಳು. ಇವನ್ನು ಪರಿತ್ಯಜಿಸಬೇಕು.

—:o:—

# ವೀರಶೈವ ಧರ್ಮದ ಪೂರ್ವಕಾಲದ ಶೈವಧರ್ಮ

## ಕನ್ನಡ ಸಂಶೋಧನ ಉಪನ್ಯಾಸಮಾಲೆ

---

### ಶ್ರೀ ಕಪಟರಾಳ ಕೃಷ್ಣರಾಯರ ಭಾಷಣಗಳ ಸಾರ

ಪ್ರತಿ ವರ್ಷದಂತೆ ಈ ಸಲವಾದರೂ ಧಾರವಾಡದ ಕನ್ನಡ ರಿಸರ್ಚ ಇನ್ಸ್ಟಿಟ್ಯೂಟದವರು ವಾರ್ಷಿಕ ಸಂಶೋಧನೋಪನ್ಯಾಸ ಮಾಲೆಗಳನ್ನೇರ್ಪಡಿಸಿದ್ದರು. ಮೊದಲನೆಯ ವ್ಯಾಖ್ಯಾನ ಮಾಲೆಯಲ್ಲಿ ಗುಲಬುರ್ಗೆಯ ಶ್ರೀ ಕಪಟರಾಳ ಕೃಷ್ಣರಾಯರು "ವೀರಶೈವ ಧರ್ಮದ ಪೂರ್ವಕಾಲದ ಶೈವ ಧರ್ಮ" ಎಂಬ ವಿಷಯದ ಮೇಲೆ ಮಾರ್ಚ ತಾ. ೨೬, ೨೭, ೨೮ ಈ ಮೂರು ದಿವಸಗಳಲ್ಲಿ ಮಾತನಾಡಿದರು. ಸಂಸ್ಥೆಯ ಡಾಯರೆಕ್ಟರ ರಾದ ಶ್ರೀ ವಿದ್ಯಾರತ್ನ, ಆರ್. ಎಸ್. ಪಂಚಮುಖಿ, ಎಂ. ಎ. ಅವರು ಅಧ್ಯಕ್ಷತೆ ವಹಿಸಿದ್ದರು. ಅಧ್ಯಕ್ಷರು ಆರಂಭದಲ್ಲಿ ವ್ಯಾಖ್ಯಾತರ ಪರಿಚಯ ಮಾಡಿಕೊಡುತ್ತ ಶ್ರೀ ಕಪಟರಾಳ ಕೃಷ್ಣರಾಯರು ವೃತ್ತಿಯಿಂದ ವಕೀಲರಾಗಿದ್ದರೂ ಉತ್ತಮ ಸಂಶೋಧಕರಾಗಿದ್ದಾರೆ. ಅವರು ತಾವು ಈಗ ಮಾತನಾಡುವ ವಿಷಯವನ್ನು ಚನ್ನಾಗಿ ಅಭ್ಯಾಸ ಮಾಡಿದ್ದಾರೆ. ಮುಂತಾಗಿ ಹೇಳಿ ಶ್ರೀ ಕೃಷ್ಣರಾಯರಿಗೆ ತಮ್ಮ ವ್ಯಾಖ್ಯಾನವನ್ನು ಪ್ರಾರಂಭಿಸಲು ಕೇಳಿಕೊಂಡರು. ವ್ಯಾಖ್ಯಾತರ ಭಾಷಣಗಳ ಸಾರಾಂಶ ಕೆಳಗೆ ಕೊಟ್ಟಿದೆ.

(೧) ಋಗ್ವೇದ, ಯಜುರ್ವೇದ, ಅಥರ್ವಣ, ಶ್ವೇತಾಶ್ವೇತರ, ಅಶ್ವಲಾಯನ ಗೃಹ್ಯಸೂತ್ರ, ಅಥರ್ವ ಶಿರೋಪನಿಷತ್ತು ಪುರಾಣಾದಿಗಳಲ್ಲಿ ಬಂದಿರುವ ರುದ್ರ-ಶಿವವಾಚಕಶಬ್ದಗಳನ್ನು ನಿರ್ದೇಶಮಾಡಿ, ಋಗ್ವೇದದಿಂದ ಇಂದಿನ ವರೆಗೆ ರುದ್ರ-ಶಿವನಿಗೆ ವಾಙ್ಮಯ ಪರಂಪರೆಯು ಇದೆ ಎಂದೂ ಆದರೆ ಕ್ರಮಬದ್ಧವಾಗಿ Archaeology ಯ ಬೆಂಬಲವಿಲ್ಲವೆಂದೂ ಹೇಳಿದರು. ಅದರಂತೆ ಸಿಂಧು ನದೀತೀರದಲ್ಲಿ ದೊರೆತ ಪುರಾತನ ಅವಶೇಷಗಳಿಗೆ ವಾಙ್ಮಯ ಪರಂಪರೆಯ ಬೆಂಬಲವಿಲ್ಲೆಂದು ನಿರ್ದೇಶ ಮಾಡಿ ಸಂಶೋಧಕರಿಗೆ ಇದೊಂದು ತೊಡಕಾಗಿದೆ ಎಂದೂ ತೋರಿಸಿಕೊಟ್ಟರು.

(೨) ನಿಗಮಾಗಮ ಶಬ್ದಗಳನ್ನು ವಿವೇಚಿಸುತ್ತ ಆಗಮಗಳೆಂದರೆ ಉಪಾಸನಾ ಕಾಂಡಕ್ಕೆ ಸಂಬಂಧಪಟ್ಟವುಗಳೆಂದು ವಿವೇಚಿಸಿ, ಅಪ್ರಸಿದ್ಧರಿಂದ ರಚಿಸಲ್ಪಟ್ಟ ಗ್ರಂಥಗಳ ಸಮೂಹವೆಂದೂ, ಅವು ಸ್ಮೃತಿ ಗ್ರಂಥಗಳೆಂದು ಪ್ರತಿಪಾದಿಸಿದರು. ಅನಂತರ ಆಗಮಗಳನ್ನು ಪ್ರತಿಪಾದಿಸಿರುವ ವಿಷಯಗಳನ್ನು ಕುರಿತು ವಿವೇಚಿಸುತ್ತ ಶೈವ, ಶಾಕ್ತ, ವೈಷ್ಣವ, ಜೈನ ಬೌದ್ಧ ಎಲ್ಲರ ತಂತ್ರ ಗ್ರಂಥಗಳ ಮೂಲಭೂತತತ್ವಗಳು ಸ್ತ್ರೀ ಪು" ಶಕ್ತಿಗಳೆರಡು ಎಂದು ಪ್ರತಿಪಾದಿಸಿ ಇವುಗಳಿಂದ ನಾದ, ಬಿಂದು, ಕಲೆ ಘೋಷ ಶಾಂತ, ಶಾಂತಾತೀತ ಓಂಕಾರ ವಾಚಕ ಶಬ್ದ ಬ್ರಹ್ಮನನ್ನು, ಪರಾ, ಪಶ್ಯಂತಿ-ಮಧ್ಯಮಾ, ವೈಖರಿ ಮುಂತಾದ ಧ್ವನಿಯ ಸ್ವರೂಪ, ದೇಹದಲ್ಲಿ ಅವುಗಳ ಸ್ಥಾನ, ವಾಚ್ಯವಾಚಕ ಸಂಬಂಧ, ಕುಂಡಲಿ ನಿಯೋಗವನ್ನೂ ವಿಸ್ತರಿಸಿದರು. ಅನಂತರ ಪೂಜಾಸ್ಥಾನಗಳನ್ನೂ ಪೂಜೆಯ ಮೂಲಕಲ್ಪನೆ, ಲಿಂಗವು ಓಂಕಾರದ ಪ್ರತೀಕವೆಂದೂ, ಮಾಹೇಶ್ವರರಲ್ಲಿ ಅಥರ್ವಣ ವೇದಕ್ಕೆ ಪ್ರಾಧಾನ್ಯ ಕೊಡಲಾಗಿರುವದಲ್ಲದೆ ವ್ರತಕ್ಕೆ ಹೆಚ್ಚು ಮಹತ್ವವಿದ್ದು, ಕರ್ಮ ಎಂದರೆ ಪೂಜಾದಿ ಕರ್ಮಗಳೆಂದು, ಧ್ಯಾನ ಧಾರಣಾದಿ ವಿಷಯಗಳನ್ನು ವಿವೇಚಿಸಲಾಯಿತು.

## ದೇವಾಲಯಗಳು.

ಅನಂತರ ಅನೇಕ ದರ್ಶನಗಳಲ್ಲಿ ಲಿಂಗ ಶಬ್ದದ ಪ್ರಯೋಗವನ್ನು ವಿವೇಚಿಸುತ್ತ, ಶೈವಧರ್ಮದ ಇತಿಹಾಸವನ್ನು ರಾಜಕೀಯ ಇತಿಹಾಸದೊಡನೆ, ವಿವರಿಸುತ್ತ, ಪರಕೀಯರಾದ ಕುಷಾಣರ ಕಾಲದಲ್ಲಿ ಬೌದ್ಧರ ಪ್ರಾಬಲ್ಯವಿದ್ದು, ಭಾರಶಿವ, ವಾಕಾಟಕರು ಶೈವಧರ್ಮವನ್ನು ಎತ್ತಿಹಿಡಿದರೆಂದು ತೋರಿಸಿದರು. ಅನಂತರ ಇಡೀ ಹಿಂದುಸ್ತಾನದಲ್ಲಿ ವಿಶೇಷವಾಗಿ ಗುಜರಾಥ, ಆಬೂಪರ್ವತ, ಮೇವಾಡ, ಮಾಳವ, ಬುಂದೇಲಖಂಡ ಬಾಗೇಲಖಂಡ, ಓಡೀಸ, ತಮಿಳುನಾಡು, ಕರ್ನಾಟಕ ಶಿವಧರ್ಮವು ದೇವಾಲಯಗಳ ಮೂಲಕವಾಗಿ ಹೇಗೆ ಬೆಳೆದಿದೆ ಎಂದು ವಿಸ್ತರಿಸುತ್ತ, ತುರಕರ ದಾಳಿಯಿಂದ ಹೇಗೆ ಕುಗ್ಗುತ್ತ ಬಂದಿದೆಂದು ವಿವೇಚಿಸಿದರು. ಲಕುಲೀಶನ ಅವತಾರ, ಯೋಗಾಚಾರ್ಯರ ಪರಂಪರೆ, ಕರ್ನಾಟಕದಲ್ಲಿ ಲಾಕುಳ ಶೈವದ ಉದಯದೊಡನೆ, ಶಿವಲಿಂಗ ಸ್ಥಾಪನೆಗೆ ಆರಂಭವಾಗಿದೆ. ಎಂದೂ, ಗುರು, ತನ್ನ ಹೆಸರು, ಮಾತಾಪಿತೃಗಳ ಶ್ರೇಯಸ್ಸಿಗಾಗಿ,

ಇವೇ ಸದ್ಭಾವನೆಯಿಂದ ಲಿಂಗವನ್ನು ಸ್ಥಾಪಿಸಿ, ದೇವಾಲಯಗಳನ್ನು ಕಟ್ಟಿಸಿ ಅದರ ಅಧಿಷ್ಠಾನವೆಂದು ಧರ್ಮಸ್ಥಾನ, ಅಥವಾ ಮಠಗಳನ್ನು ಕಟ್ಟಿಸಿ, ಸ್ಥಾನಿಕರನ್ನು ನೇಮಿಸಲಾಗುತ್ತಿತ್ತು. ಈ ಸ್ಥಾನಿಕರಿಗೆ ಇದಲ್ಲದೆ ದೇವರಿಗೆ ಅಂಗಭೋಗ ರಂಗಭೋಗ ಖಂಡಸ್ಫುಟಿತ ಜೀರ್ಣೋದ್ಧಾರ, ನಿತ್ಯ ನೈವೇದ್ಯ, ಪೂಜೆ ಪುನಸ್ಕಾರ; ತಪೋಧನರ ಆಹಾರಕ್ಕಾಗಿ ವ್ಯವಸ್ಥೆ ಮಾಡಲಾಗುತ್ತಿದ್ದಿತು. ದೇವಾಲಯವೆಂದರೆ ಅದೊಂದು ಸಾಮಾಜಿಕ ಸಂಸ್ಥೆಯಾಗಿ ಪರಿಣಮಿಸಿ ಚಕ್ರವರ್ತಿ, ಮಂಡಳಿಕರು, ಗ್ರಾಮಾಧಿಪತಿಗಳಾದ ಮನ್ನೆಯರು, ಕಾಳಾಮುಖ ಯತಿಗಳು, ಅವರ ಶಿಷ್ಯರು, ಶಿಷ್ಯರಿಗೆ ಪಾಠ ಹೇಳುವ ಅಧ್ಯಾಪಕರು, ಮಾಣಿಯ ಠನ್ನೋದಿಸುವ ಓಝರು ಹೋಮ ಮಾಡುವ ಬ್ರಾಹ್ಮಣರು, ವೇಳೆಯ ಕಂಡುಹಿಡಿಯುವ ಘಳಿಗೆ ಬಟ್ಟಲವನ್ನು ನೋಡುವ ಮಾಣಿಯರು, ಹಾಡುವವರು, ಚೌರಿಯನ್ನು ಬೀಸುವ, ಪಾತ್ರ ವಾಡುವ ಸೂಳೆಯರು, ಬಾಣಸಿಗ, ಗಾಣಿಗರು, ತೋಟಗಾರರು, ಮಾಲೆಗಾರರು, ಪರಿಚಾರಕರು, ಕಲ್ಲುಕುಟಿಗರು, ಕಂಚಗಾರರು ಮುಂತಾದವರ ಜೀವಿತದ ವ್ಯವಸ್ಥೆ ಮಾಡಲಾಗುತ್ತಿತ್ತು. ಇಂತಹ ದೇವಾಲಯಗಳು ದೇಶದಲ್ಲೆಲ್ಲ ಹರಡಿ ಅದೊಂದು ನಾಡಿನ ವಿಶಿಷ್ಟ ಸಂಸ್ಕೃತಿಯೇ ಆಗಿ ಪರಿಣಮಿಸಿತು. ಈ ಸಂಸ್ಕೃತಿಗೆ ದೇವಾಲಯ ಸಂಸ್ಕೃತಿ ಅಥವಾ ತಾಂತ್ರಿಕ ಸಂಸ್ಕೃತಿಯೆಂದು ಕರೆಯಬಹುದು.

(೩) ಸೂತ ಸಂಹಿತೆ, ವಾಮನ ಪುರಾಣ, ಶಂಕರಾಚಾರ್ಯ, ಯಾಮುನಾಚಾರ್ಯ, ಶ್ರೀನಿವಾಸ, ಮಾಧ್ಯಭಾಷ್ಯ, ಜಯತೀರ್ಥ, ಸುಪ್ರಭೇದಾಗಮ, ನಿಜಗುಣಿಶಿವಯೋಗಿ, ಗುಣರತ್ನಸೂರಿ, ಸೋಮದೇವ, ವಿದ್ಯಾರಣ್ಯರ ಗ್ರಂಥಗಳಲ್ಲಿ ಕಾಳಾಮುಖರಿಗೆ ಕಾಲದಮನ, ಕಾರುಣಿಕ ಕಾಠಕ ಮುಂತಾದ ಬೇರೆ ಬೇರೆ ಹೆಸರುಗಳನ್ನು ನಿರ್ದೇಶಮಾಡುತ್ತ ಶುಕ್ಲ ಯಜುರ್ವೇದ ಸಂಬಂಧವನ್ನು ತೋರಿಸಲಾಯಿತು. ಅನಂತರ ಈ ಮತವು ಕೇವಲ ತಾಂತ್ರಿಕವೆಂದು ಆಧಾರ ಕೊಡುತ್ತ ಲಾಕುಲಾಗಮವೆಂಬ ಆಗಮವಿತ್ತೆಂದೂ, ಲಕುಲೀಶನಿಂದ ಉಕ್ತವಾದ ಶಾಸ್ತ್ರವೆಂದೂ, ಲಾಕುಳ ಸಿದ್ಧಾಂತವೆಂದೂ ತತ್ವಜ್ಞಾನ ದೃಷ್ಟಿಯಿಂದ ಈ ಲಾಕುಳ ಶೈವವು ನೈಯಾಯಿಕವೆಂದೂ ಶಾಸನಗಳ ಆಧಾರದಿಂದ ವ್ಯಾಖ್ಯಾತರು ತೋರಿಸಿ ಕೊಟ್ಟರು.

ಆತ್ಮ ತತ್ವಕ್ಕೆ ವ್ಯಾಪಕತ್ವ, ನಿತ್ಯತ್ವ, ಅಮೂರ್ತತ್ವ, ಚಿತ್ತ, ಸೃಷ್ಟಿತ್ವಾದ್ಯೈನಂತ ಅನಂತ ಧರ್ಮಗಳನ್ನು ಹೇಳುತ್ತ, ಶಿವಸಮಾನತೆಯೆಂಬ ಮುಕ್ತಿಯನ್ನು ಹೇಳುವವರಾಗಿದ್ದರು. ಈ ಲಾಕುಳ ಶೈವರಲ್ಲಿ ಕ್ರಾಂತಾಚಾರಕ್ಕೆ ಪ್ರಾಧಾನ್ಯ ಹೆಚ್ಚಾಗಿದ್ದಿತು. ಆದರಂತೆ ಶುದ್ಧಶೈವವೆಂಬ ವೈದಿಕ ತಾಂತ್ರಿಕ ಮತವೊಂದಿದ್ದಿತು. ಅದರ ಅನುಯಾಯಿಗಳು ಬ್ರಾಹ್ಮಣರಾಗಿದ್ದರು. ಲಾಕುಳ ಶೈವರಲ್ಲೂ ಗುರುಗಳು-ಭಕ್ತರೆಂಬಭೇದವಿತ್ತು. ಈ ಭಕ್ತರು ವಿಶೇಷವಾಗಿ ಲೌಕಿಕಕಾರ್ಯದಲ್ಲಿ ತೊಡಗಿದ ಅರಸು, ಮಂಡಳೇಶ್ವರರು, ಗೌಡರು, ಸೆಟ್ಟಿರು ಮುಂತಾಗಿ ಇವರೇಯಾಗಿದ್ದರು. ಗುರುಗಳಾದವರಿಗೆ ಸ್ಥಾನಪತಿಗಳು ಸ್ಥಾನಿಕರು, ಆಚಾರ್ಯರು, ಒಡೆಯರು, ಜೀಯರು, ಗೊರವರು, ತಪೋಧನರು, ಗಣಂಗಳು ಮಹರೂಷುಗಳು ಮುಂತಾದ ಅನೇಕ ಪರ್ಯಾಯ ನಾಮಗಳಿದ್ದವು. ಇವರ ಹೆಸರಿನ ಮುಂದೆ ಬಂದಿರುವ ಉಪಪದಗಳ ಪಟ್ಟಿಯನ್ನೇ ತಯಾರಿಸಿದ್ದುದು ಮಹತ್ವದ ಮಾತು. ಇವರು ದೇವಸ್ಥಾನಗಳಿಗೆ ಬಿಟ್ಟ ದತ್ತಿಗಳನ್ನು ಪಡೆದವರಾಗಿರುತ್ತಿದ್ದರು.

## ಕಾಳಾಮುಖರು

(೪) ಇವರಲ್ಲಿ ಗೃಹಸ್ಥರು—ಯತಿಗಳೆಂದು ಇಬ್ಬಗೆ. ಭಕ್ತರು, ಶಿಷ್ಯೆಯ ಮಕ್ಕಳು, ಸ್ವಜಾತಿಯವರಲ್ಲಿ ಪುತ್ರ ಸಂತತಿ ಮತ್ತು ಶಿಷ್ಯ ಸಂತತಿಯವರು ಇರುತ್ತಿದ್ದರು. ಇಂಥವರೇ ಮುಂದೆ ಕಂಥಾಚಾರ್ಯರಾಗುತ್ತಿದ್ದರು. ಯತಿಗಳ ವೃತಿಗಳಾಗುತ್ತಿದ್ದವರು ಇವರಲ್ಲಿಯೇ ಅಂಥ ಯತಿಗಳಾದವರಲ್ಲಿ ವಿಶಿಷ್ಟ ದೀಕ್ಷೆಹೊಂದಿದವರಿಗೆ ಮಾತ್ರ ಕಾಳಾಮುಖರೆಂಬ ಹೆಸರು. ಈ ಕಾಳಾಮುಖರು ಯಾರು ಮತ್ತು ಎಲ್ಲಿ ಅಡಗಿದರು ಎಂಬ ವಿಷಯವನ್ನು ಚರ್ಚಿಸುತ್ತ ಇದುವರೆಗೆ ಈ ವಿಷಯದಲ್ಲಿ ಅನೇಕ ವಿದ್ವಾಂಸರ ಅಭಿಪ್ರಾಯಗಳನ್ನು ಕೊಟ್ಟು, ಇವರು ಬ್ರಾಹ್ಮಣರಾಗಿದ್ದಿಲ್ಲ ಮತ್ತು "ಜೀಯರ್ರು" ಅಲ್ಲವೆಂದು ಚರ್ಚಿಸಿ, ಕೊನೆಗೆ ಈ ಲಾಕುಳ ಶೈವಗುರುಗಳು ಈಗಿನ ಜಾತಿವಿಷ್ಟವಾದ ಜಂಗಮರ ಪೂರ್ವಜರೆಂದು ಶಾಸನಗಳ ಆಧಾರದಿಂದ ಸಿದ್ಧಾಂತಗೈಯ್ಯಲಾಯಿತು.

[೫]. ಲಾಕುಳ ಶೈವ ಗುರುಗಳು ಎಲ್ಲರೂ ಕಾಶ್ಮೀರದಿಂದ ಬಂದವರಲ್ಲವೆಂದು ಸಿದ್ಧರ್ಶಿಸಿದರು. ಈ ಲಾಕುಳ ಗುರುಗಳ ಪರಂಪರೆಯಲ್ಲಿ ರಾಮೇಶ್ವರ ತೀರ್ಥ, ಶ್ರೀಶೈಲಮಠ, ಶಕ್ತಿಪರ್ಷೆ, ಸಿಂಹಪರ್ಷೆ, ಬೆಳ್ಳಿಯ

ಸಂತಾನ, ಕಾಶ್ಮೀರ ಸಂತಾನ, ಕಪಿಲ ತೀರ್ಥ ಮಠದ ಪರಂಪರೆ, ಕಾಶಿ ಮಠದ ಪರಂಪರೆಯನ್ನು ಶಾಸನಾಧಾರಗಳಿಂದ ಮಠಗಳ ಪ್ರಾಚೀನ ಶೈವ ಪುಣ್ಯ ತೀರ್ಥಗಳ ಪರಂಪರೆಯು ಮಠಗಳಿದ್ದವೆಂದು ಸ್ಪಷ್ಟಗೈದರು. ಒಟ್ಟಾಗಿ ಆ ಲಾಕುಳ ಗುರುಗಳ ಸಂಸ್ಥೆಯೇ ಈಗಿನ ಗುರುವರ್ಗದವರಾಗಿರುವರೆಂದು ಕಾಲ ಕಾಲಕ್ಕೆ ಆದ ಬದಲಾವಣೆ ತೋರಿಸುತ್ತ. ಸಿದ್ಧಾಂತಿಸಿದರು. ಶಾಸನಗಳಲ್ಲಿ ಪಂಚಾಚಾರ್ಯರ ಹೆಸರುಗಳು ಬಂದಿಲ್ಲವೆಂದೂ ಕ್ರಿ ಶ ೧೨೫೦ ಕ್ಕೆ ಬಸವೇಶ್ವರನ ಹೆಸರು ದೊರೆಯುತ್ತಿದೆಂದು ಹೇಳದ್ದಲ್ಲದೆ ಕ್ರಿ ಶ ೧೪೦೦ ರ ವರೆಗೆ ಆ ಪ್ರಾಚೀನ ಲಾಕುಳ ಶೈವದ ಪರಂಪರೆಯು ನಡೆದು ಬಂದದ್ದನ್ನು ಶಾಸನಾಧಾರದಿಂದ ವಿವೇಚಿಸಿದರು. ಇದಲ್ಲದೆ ಲಾಕುಳ ಶೈವರು ಕೆಲವರ ಊಹೆಯಂತೆ ಆರಾಧ್ಯ ಬ್ರಾಹ್ಮಣರಲ್ಲವೆಂದೂ, ಅವರಿಗೆ ಲಿಂಗ ಧಾರಣವು ಇದ್ದಿಲ್ಲವೆಂದೂ ಪ್ರತಿಪಾದಿಸಿದರು. ಕೆಲವು ಉದಾಹರಣೆಯನ್ನು ಓದಿದರು.

ಕಾಳಾಮುಖ ದೀಕ್ಷೆಯ ಸ್ವರೂಪವೇನಿತ್ತೆಂಬುದನ್ನು ಲಾಕುಳಾಗಮ ದೊರೆಯದ ವಿನಃ ಹೇಳಲು ಶಕ್ಯವಿಲ್ಲೆಂದೂ, ಶಾಸನಗಳಲ್ಲಿ ಎಲ್ಲಿಯೂ ಅವರು ಘೋರ ಕರ್ಮಿಗಳಾಗಿದ್ದರೆಂಬುದು ಕಂಡು ಬರುವದಿಲ್ಲೆಂದೂ ಪ್ರತಿಪಾದಿಸಿದರು.

(೬) ಲಾಕುಳ ಶೈವರಲ್ಲದೆ ಶುದ್ಧ ಶೈವರು ಬ್ರಾಹ್ಮಣರೆಂದೂ, ಅವರು ತಮ್ಮ ತಮ್ಮ ಗೋತ್ರ ಮುಂತಾಗಿ ಹೇಳಿಕೊಳ್ಳುತ್ತಿದ್ದರೆಂದೂ, ಅವರಲ್ಲಿ ಶೈವಾಚಾರ್ಯರು ಇರುತ್ತಿದ್ದರೆಂದ ಶಾಸನಗಳಿಂದ ತೋರಿಸಿ ಕೊಟ್ಟರು. ಕಾಣ್ವರು, ವಾಜಿವಂಶದವರು, ಕನ್ನಡ ಕುಲದ ಬ್ರಾಹ್ಮಣರು ಸಾವಾಸಿಗರು, ಹೆಬ್ಬಾರುವ, ಇದೇ ಬ್ರಾಹ್ಮಣ ಪಂಗಡದವರಿಗೂ ಕಾಳಾಮುಖ ಶೈವ ಗುರುಗಳಿಗೂ ಸಾಂಪ್ರದಾಯಕ ಸೌಹಾರ್ದ್ರ ಇದ್ದುದನ್ನು ವ್ಯಕ್ತಪಡಿಸುತ್ತ ಅಗ್ರಹಾರದ ಬ್ರಾಹ್ಮಣರ ಶೈವಗುರುಗಳಿಗೆ ಕೊಟ್ಟದ್ದನ್ನೂ ಬ್ರಾಹ್ಮಣರ ಸತ್ರವನ್ನು ನಡೆಸಲು ಲಾಕುಳ ಶೈವ ಗುರುಗಳಿಗೆ ಒಪ್ಪಿಸಿದ್ದುದರಿಂದ ಪರಸ್ಪರ ಸೌಹಾರ್ದ್ರವಿತ್ತೆಂದೂ ಸಾಂಪ್ರದಾಯಿಕ ಘರ್ಷಣೆಯಾದದ್ದು ಎಲ್ಲಿಯೂ ಸಿಕ್ಕಿಲ್ಲವೆಂದೂ ಹೇಳಿ ವ್ಯಾಖ್ಯಾನವನ್ನು ಕೊನೆಗಾಣಿಸಿದರು.

## ಅಧ್ಯಕ್ಷರ ಸಮಾರೋಪ ಭಾಷಣ

ಕೊನೆಗೆ ಅಧ್ಯಕ್ಷರು ಭಾಷಣಗಳಲ್ಲಿಯ ಮುಖ್ಯಾಂಶಗಳನ್ನು ವಿವರಿಸಿ ತಮಗೆ ಕಂಡುಬಂದ ಕೆಲವು ವಿಚಾರಗಳನ್ನು ತಿಳಿಸಿದರು. ಶೈವ ದೇವಾಲಯಗಳು ಕ್ರಿ ಶ ೫—೬ ನೇ ಶತಮಾನದಲ್ಲಿ ಪ್ರಚಾರದಲ್ಲಿ ಬಂದಿವೆ. ಅವು ಕ್ರಿ. ಶ. ೧೩ ನೆಯ ಶತಮಾನದಲ್ಲಿ ಮುಸಲ್ಮಾನರ ದಾಳಿಗೆ ತುತ್ತಾಗಿ ನಾಶಹೊಂದಿದವು. ಅನಂತರದ ಶೈವ ದೇವಾಲಯಗಳಿದ್ದರೂ ಅವು ಅಷ್ಟು ಉಚ್ಚ ತರಗತಿಯಾಗಿಲ್ಲವೆಂದು ಸ್ಥೂಲವಾಗಿ ಹೇಳಬಹುದು. ಶೈವ ದೇವಾಲಯಗಳಲ್ಲಿಯ ಗುರುಗಳು ಯಾವ ಯಾವ ಸಂಘದವರಿದ್ದರು ಅವರ ಆಚಾರ ವಿಚಾರಗಳು ಹೇಗಿದ್ದವು. ದೇವಾಲಯದ ಉಳಿದ ಪರಿಚಾರಕ ವರ್ಗವು ಹೇಗಿದ್ದಿತೆಂದು ಶ್ರೀ ಕೃಷ್ಣರಾಯರು ಮಾರ್ಮಿಕವಾಗಿ ನಮ್ಮ ಮುಂದೆ ಇಟ್ಟಿದ್ದಾರೆ. ವ್ಯಾಖ್ಯಾತರ ಅಭಿಪ್ರಾಯ ಈ ಲಾಕುಳ ಶೈವಗುರುಗಳು ವೀರಶೈವ ಧರ್ಮದ ಜಂಗಮರಾಗಿರಬೇಕು ಎಂದಿದೆ. ಕರ್ನಾಟಕದಲ್ಲಿ ಶೈವಧರ್ಮ ದಕ್ಷಿಣ ದೇಶದಿಂದ ಬಂತೋ ವಿಚಾರಿಸಬೇಕಾಗಿದೆ. ತಂತ್ರಯಾನದ ಕಾಲದಲ್ಲಿ ಅನೇಕ ಶೈವ ವಿಗ್ರಹಗಳು, ದೇವಾಲಯಗಳು ತಲೆದೋರಿವೆ. ಬೌದ್ಧ ಮತ್ತು ಜೈನಧರ್ಮಗಳ ಉನ್ನತಿಯ ಕಾಲದಲ್ಲಿಯೂ ಸಹ ಶೈವಧರ್ಮಗಳ ಉನ್ನತಿಯ ಕಾಲದಲ್ಲಿಯೂ ಸಹ ಶೈವಧರ್ಮವು ಅಲ್ಲಲ್ಲಿ ಪ್ರಭಾವಿಯಾಗಿದ್ದಿತು. ತೀರ ದಕ್ಷಿಣದವರೆಗೂ ಕನ್ನಡ ಶೈವ ಅರ್ಚಕರು ಹೋಗಿ ದೇವತಾರ್ಚನೆ ಮಾಡಿದ ಉದಾಹರಣೆಗಳಿವೆ ಇಂಥವರ ಬಗ್ಗ ನಾವು ಸಂಶೋಧಿಸಬೇಕು ಜೀರ ಗೊರವ ಎಂದು ಕಾಳಾಮುಖರ ಹೆಸರುಗಳು ಕೊನೆಗೆ ಬರುವ ಪದಗಳು ಆಗಿನ ಅರ್ಥಗಳನ್ನು ಕಳೆದುಕೊಂಡಿರುವವು. ಅವುಗಳನ್ನು ಈಗ ಪ್ರಚಾರದಲ್ಲಿದ್ದ ಹೆಸರಿನೊಡನೆ ಕೂಡಿಸುವದು ಸಮಂಜಸವಾಗುವದಿಲ್ಲ. ಎಂದು ಮುಂತಾಗಿ ಹೇಳಿ ವ್ಯಾಖ್ಯಾತರು ತಮ್ಮ ಸಂಶೋಧನೆಗಳನ್ನು ನಮ್ಮ ಮುಂದೆ ಇಟ್ಟಿದ್ದಕ್ಕಾಗಿ ಸಂಸ್ಥೆಯು ಅವರ ಆಭಾರ ಮನ್ನಿಸುತ್ತದೆ ಎಂದು ಹೇಳಿದರು.

——೦(೦)೦——

# ಸಟೀಕ ಬಸವೇಶ್ವರನ ವಚನಗಳು.

(೧) ಹಾಲ ತೊರೆಗೆ ಬೆಲ್ಲದ ಕೆಸರು, ಸಕ್ಕರೆಯ ಮಳಲು, ತವರಾಜದ ತೆರೆಯಂತೆ ಆದ್ಯರ ವಚನವಿರಲು ಬೇರೆ ಬಾವಿಯ ತೋಡಿ ಉಪ್ಪನೀರನುಂಬುವ ವಿಧಿಯಂತೆ ಆಯಿತ್ತೆನ್ನ ಮತಿ ಕೂಡಲ ಸಂಗಮ ದೇವಾ.

ತೊರೆ= ನದಿ. ಮಳಲು= ಉಸುಕು. ತವರಾಜ = ಯವಾಸ ಅಥವಾ ಯವ ಎಂಬ ಗಿಡದಿಂದ ಆದ ಅತ್ಯಂತ ಸಿಹಿಯಾದ ಸಕ್ಕರೆ. ಅಮೃತಕ್ಕೂ ಈ ಹೆಸರು ಇದೆ. ಆದ್ಯರು = ಪುರಾತನರು, ಶರಣರು. ವಿಧಿ= ದೈವ, ಸ್ಥಿತಿ.

ಹಾಲಿನ ನದಿಯೊಂದು ಹರಿಯುತ್ತಿದೆಂದು ತಿಳಿಯಿರಿ. ಅದರಲ್ಲಿ ಬೆಲ್ಲದ ಕೆಸರು, ಸಕ್ಕರೆಯ ಉಸುಕು ಮತ್ತು ಅದರ ನೀರಿನ ಮೇಲೆ ಅಮೃತ ರಸದ ಸಿಹಿಯಾದ ನೊರೆ ತೆರೆಗಳು ಇವೆ ಎಂದು ತಿಳಿಯಿರಿ. ಶಿವಶರಣರ ವಚನಗಳು ಇಂಥ ಹಾಲಿನ ನದಿಯಂತೆ ಇವೆ, ಎಂದು ಬಸವೇಶ್ವರನು ಇಲ್ಲಿ ಹೇಳಿದ್ದಾನೆ. ಹೀಗಿದ್ದರೂ ಇಂಥ ನದಿಯ ನೀರನ್ನು ಬಿಟ್ಟು ಬೇರೆ ಬಾವಿಯನ್ನು ತೋಡಿ ಅದರಲ್ಲಿ ಉಪ್ಪು ನೀರನ್ನು ಕುಡಿಯಬೇಕೆಂಬ ಬುದ್ಧಿಯು ನನ್ನಲ್ಲಿ ಆಗುತ್ತದೆ. ಶಿವಶರಣರ ವಚನಗಳನ್ನು ಬಿಟ್ಟು ಬೇರೆ ಕಥೆ ಪುರಾಣಗಳನ್ನು ಕೇಳುವದೆಂದರೆ ಮೇಲೆ ಹೇಳಿದ ಹಾಲಿನ ನದಿಯನ್ನು ಬಿಟ್ಟು ಇಂಥ ಉಪ್ಪು ನೀರನ್ನು ಕುಡಿಯುವವನ ಭಾಗ್ಯದಂತೆಯೇ ಸರಿ. ನನ್ನ ಮತಿಗೆ ಇಂಥ ಸ್ಥಿತಿಯು ಬಂದಿತೆಂದು ಬಸವೇಶ್ವರನು ಇಲ್ಲಿ ಹೇಳಿದ್ದಾನೆ.

(೨) ಆದ್ಯರ ವಚನ ಪರುಷ ಕಂಡಯ್ಯ! ಸದಾಶಿವನೆಂಬುವ ಲಿಂಗವ ನಂಬುವದು. ನಂಬಲೊಡನೆ ನೀ ವಿಜಯ ಕಂಡಯ್ಯಾ. ಅಧರಕ್ಕೆ ಕಹಿ. ಉದರಕ್ಕೆ ಸಿಹಿ. ಕೂಡಲ ಸಂಗನ ವಚನ ಬೇವ ಸವಿದಂತೆ.

ಅಧರ = ತುಟಿ.

ಶಿವಶರಣರ ವಚನಗಳು ಪರುಷದಂತೆ ಇರುತ್ತವೆ. ಅಂದರೆ ಪರುಷವು ಕಬ್ಬಿಣವನ್ನು ಮುಟ್ಟಲು ಹೇಗೆ ಆ ಕಬ್ಬಿಣವು ಬಂಗಾರವಾಗುತ್ತದೊ

ಹಾಗೆ ವಚನಗಳನ್ನು ಓದಿದರೆ ಓದುವವರ ಮನಸ್ಸು ಶುದ್ಧವಾಗುತ್ತದೆಂಬ ಭಾವವು ಇದರಲ್ಲಿದೆ. ಜಗತ್ತಿನ ಆರಂಭದಲ್ಲಿ ಪರಮಾತ್ಮನು ಚಿತ್ ಸ್ವರೂಪನಾಗಿದ್ದಾನೆ. ಮತ್ತು ಅವನಿಗೆ ಸದಾಶಿವನೆಂಬ ಹೆಸರು ಇದೆ, ಎಂದು ವಚನ ಶಾಸ್ತ್ರವು ಹೇಳುತ್ತಿದೆ. ಈ ಸದಾಶಿವನಿಗೆ ಮಹಾಲಿಂಗ ಅಥವಾ ಲಿಂಗ ಎಂಬ ಬೇರೆ ಹೆಸರುಗಳೂ ಇವೆ. ಈ ಲಿಂಗವನ್ನು ನೀನು ನಂಬಿದಲ್ಲಿ ನೀನು ನಿನ್ನ ಕಾರ್ಯಗಳಲ್ಲಿ ಜಯವನ್ನು ಹೊಂದುವಿ, ಎಂದು ಬಸವೇಶ್ವರನು ಇಲ್ಲಿ ಹೇಳುತ್ತ ಮುಂದೆ ಅವನು ಅನ್ನುವದೇನೆಂದರೆ— ಈ ವಚನಗಳು ಬಾಯಿಗೆ ಬಹು ಕಹಿಯಾದವುಗಳು. ಹೇಗೆ ಔಷಧವು ಕಹಿಯೋ ಹಾಗೆ ಅವು ಕಹಿಯಾದವುಗಳು. ಆದರೆ ಔಷಧವು ರೋಗವನ್ನು ನಾಶ ಮಾಡುವದರಿಂದ ಅದು ಹೊಟ್ಟೆಗೆ ಸಿಹಿಯಾದವದ್ದು. ಶಿವಶರಣರ ವಚನಗಳು ಹೀಗೆ ಕಹಿಯಾಗಿ ತೋರಿದರೂ ಅವು ಸಿಹಿಯಾದವುಗಳು. ಅವು ಬೇವಿನ ತೊಪ್ಪಲ ತಿಂದಂತೆ. ಈ ತೊಪ್ಪಲವು ನಾಲಿಗೆಗೆ ಬಹಳ ಕಹಿಯಾದದ್ದು. ಆದರೂ ದೇಹಕ್ಕೆ ಹಿತಕರವು. ಹಾಗೆ ವಚನಗಳು ಕಹಿಯಾಗಿದ್ದರೂ ದೇಹಕ್ಕೆ ಅವು ಹಿತಕರವಾದವುಗಳು. ಇಂಥ ವಚನಗಳನ್ನು ನೀನು ನಂಬಿ ನಡೆದರೆ ಅವು ಹಿತಮಾಡುತ್ತವೆಂದು ಬಸವೇಶ್ವರನು ಇಲ್ಲಿ ಹೇಳಿದ್ದಾನೆ.

(೩) ಅವ್ಯರ ವಚನ ಅದ್ಯರಿಗಾಯಿತ್ತು. ವೇದ್ಯರಿಗಲ್ಲದೆ ಸಾಧ್ಯವಾಗದು ಕೂಡಲ ಸಂಗಮ ದೇವ ನಿಮ್ಮ ಅನುಭಾವದಿಂದ ಎನ್ನ ಭವಂ ನಾಸ್ತಿಯಾಯಿತ್ತು.

ವೇದ್ಯರು = ತಿಳಿದವರು, ಜ್ಞಾನಿಗಳು.

ಶಿವಶರಣರ ವಚನಗಳು ಶರಣರಿಗಾಗಿ ಇವೆ, ಜ್ಞಾನಿಗಳಿಗೆ ಮಾತ್ರ ಅವು ಸಾಧ್ಯವು. ಆದರೆ ನಾನು ಶರಣನೂ ಅಲ್ಲ, ಜ್ಞಾನಿಯೂ ಅಲ್ಲ. ಅಂದಬಳಿಕ ಅವು ನನಗೆ ಹೇಗೆ ಸಾಧ್ಯವೆಂದು ಯಾರಾದರೂ ಕೇಳಿದರೆ ಅದಕ್ಕೆ ಅವು ಅನುಭಾವದಿಂದ ಸಾಧ್ಯವೆಂದು ಬಸವೇಶ್ವರನು ಇಲ್ಲಿ ಹೇಳುತ್ತಾನೆ. ಅನುಭಾವವೆಂದರೆ ಶಿವಶರಣರ ನುಡಿಗಳನ್ನು ಓದುವದು ಅಥವಾ ಕೇಳುವದು. ಹೀಗೆ ಓದಿ ಅಥವಾ ಕೇಳಿ ಅವುಗಳನ್ನು ತಿಳಿದುಕೊಳ್ಳುವದು ಮತ್ತು ತನಗೆ ತಿಳಿದಷ್ಟನ್ನು ಪರರಿಗೆ ತಿಳಿಸಿ ಹೇಳುವದು, ಮತ್ತು ಸಾಧ್ಯವಿದ್ದಷ್ಟು ಅವುಗಳಂತೆ ನಡೆಯುವದು. ಹೀಗೆ ಮಾಡು

ವಡೀ ಅನುಭಾವವೆಂದು ವಚನಶಾಸ್ತ್ರದಲ್ಲಿ ಅರ್ಥವಿದೆ. ಆದ್ದರಿಂದ ನೀನು ಪೂರ್ಣ ಜ್ಞಾನಿಯಾಗದಿದ್ದರೂ ಕೂಡ ನೀನು ಮೇಲೆ ಹೇಳಿದಂತೆ ಆಚರಿಸಿದಲ್ಲಿ ನಿನ್ನ ಭವವು ನಷ್ಟವಾಗುತ್ತದೆಂದು ಬಸವೇಶ್ವರನು ಇಲ್ಲಿ ಹೇಳಿದ್ದಾನೆ.

(೪) ಅಶ್ವಮೇಧ ಯಾಗವಂತಿರಲಿ, ಅಜಪೆಯುಪದೇಶವು, ಸಮಾಧಿಯಂತಿರಲಿ, ಹೋಮ ನೇಮ ಗಾಯತ್ರಿಯ ಜಪವಂತಿರಲಿ. ಜನಮೋಹನ ಮಂತ್ರವಂತಿರಲಿ. ಹೋ ! ಕೂಡಲ ಸಂಗನ ಶರಣನ ನುಡಿಯು ಗಡಣೆ ಎಲ್ಲಕ್ಕಧಿಕ ನೋಡಾ.

ಗಡಣೆ – ಸಮೂಹ.

ಹಿಂದಿನ ರಾಜರು ತಮ್ಮ ವೈಭವವು ಹೆಚ್ಚಾಗಲೆಂದು ಅಶ್ವಮೇಧ ಯಾಗಗಳನ್ನು ಮಾಡುತ್ತಿದ್ದರು. ಇಂಥ ಯಾಗಗಳು ನನಗೆ ಬೇಡ. ಅವು ಒತ್ತಟ್ಟಿಗಿರಲಿ. ಕೆಲವರು ತಾವು ಅಜಪ ಗಾಯತ್ರೀ ಮಂತ್ರದ ಉಪದೇಶವನ್ನು ಹೊಂದಿ ಯೋಗ ಸಮಾಧಿಯನ್ನು ಸಾಧ್ಯಮಾಡಿಕೊಳ್ಳಬೇಕೆಂದು ಅಪೇಕ್ಷಿಸುತ್ತಾರೆ. ಇಂಥ ಸಮಾಧಿಯೂ ಒತ್ತಟ್ಟಿಗಿರಲಿ. ಕೆಲವರು ಹೋಮ, ನಿಯಮ, ಗಾಯತ್ರೀ ಮಂತ್ರ ಜಪ, ಇವುಗಳನ್ನು ಮಾಡುವಲ್ಲಿ ತೊಡಗಿರುತ್ತಾರೆ. ಇವೂ ಒತ್ತಟ್ಟಿಗಿರಲಿ. ಬೇರೆ ಕೆಲವರು ಜನರನ್ನು ವಶಮಾಡಿಕೊಳ್ಳಬೇಕೆಂದು ವಶೀಕರಣ ವಿದ್ಯೆಯನ್ನು ಸಾಧಿಸಲು ಯತ್ನಿಸುತ್ತಾರೆ. ಇಂಥ ವಿದ್ಯೆಯೂ ಒತ್ತಟ್ಟಿಗಿರಲಿ. ಇವಾವೂ ನನಗೆ ಬೇಡ. ಆದರೆ ಕೂಡಲ ಸಂಗನ ಶರಣರ ನುಡಿಗಳ ಒಂದು ದೊಡ್ಡ ಸಮುದಾಯವಿದ್ದು, ಅವು ಇವೆಲ್ಲವುಗಳಿಗಿಂತಲೂ ಅಧಿಕವಾದವುಗಳು. ಅವು ನನಗೆ ಬೇಕೆಂದು ಬಸವೇಶ್ವರನು ಹೇಳಿದ್ದಾನೆ.

(೫) ಅಡಿಗಡಿಗೆ ದೇವರಾಣೆ, ಅಡಿಗಡಿಗೆ ಗುರುವಿನಾಣೆ, ಎಂಬ ವಚನ ಹೊಲ್ಲ. ಮುಂದೆ ಪಥಕ್ಕೆ ಸಲ್ಲರು. ಆದಿಯಿಂದ ಬಂದ ವಚನವೆಂದು ಶರಣರ ಕೂಡೆ ಸರಸವಾಡಿದರೆ ನಗುತಲಿರಿದುಕೊಂಡರೆ ಅಲಗು ನೆಡದಿಹುದೇ ?

ಹೊಲ್ಲ= ಯೋಗ್ಯ.

ಜನರು ಹೆಜ್ಜೆ ಹೆಜ್ಜೆಗೆ ದೇವರಾಣೆ, ಗುರುವಿನಾಣೆ ಎಂದು ಅನ್ನುತ್ತಾರೆ. ಪೂಜ್ಯ ವಸ್ತುಗಳ ಹೆಸರಿನ ಮೇಲೆ ಹೀಗೆ ಆಣೆ ಇಟ್ಟುಕೊಳ್ಳ

ವದು ಯೋಗ್ಯವಲ್ಲ. ' ಇಂಥವರು ಹಾದಿ ತಪ್ಪಿ ನಡೆದಂತೆಯೇ ಸರಿ. ಹಾಗೆಯೇ ಕೆಲವರು ಶರಣರ ನುಡಿಗಳಲ್ಲಿ ಏನು ಇದೆ? ಅವರು ಹಿಂದಿನವರು ಹೇಳಿದ್ದನ್ನೇ ಹೇಳುತ್ತಾರೆ, ಎಂದು ಅವುಗಳನ್ನು ಹೀಯಾಳಿಸಿ ನುಡಿಯುತ್ತಾರೆ. ಹೀಗೆ ನುಡಿಯುವವರು ಒಂದು ಅಲಗನ್ನು ತೆಗೆದುಕೊಂಡು ನಗುತ್ತ ಚುಚ್ಚಿಕೊಂಡಂತೆ. ಆ ಅಲಗು ಅವರನ್ನು ಚುಚ್ಚದೇ ಬಿಡಬಹುದೇ? ವಚನಗಳು ಕ್ಷುಲ್ಲಕವೆಂದು ಅವುಗಳನ್ನು ಹೀಗೆ ಹೀಯಾಳಿಸಿ ನುಡಿಯುವವರು ತಮಗೆ ತಾವೇ ಅಪಾಯ ಮಾಡಿಕೊಂಡಂತೆ, ಎಂದು ಬಸವೇಶ್ವರನ ಅಭಿಪ್ರಾಯವು.

(೬) ಮುನ್ನಿನ ಆದ್ಯರ ಪಥಂಗಳು ಇನ್ನಾರಿಗಳವಡದು ನೋಡಾ. ಬಲ್ಲನಾಗಿ ಒಲ್ಲನವರ, ಸಲ್ಲರು ಸಲ್ಲರು ಶಿವಪಥಕ್ಕೆ. ಒಳ್ಳಿಹ ವ್ಯೈಲಾರನ ಸಿಂಗಾರದಂತೆ, ವೇಶಿಯ ಬಾಯ ಎಂಜಲನುಂಬ ದಾಸಿಯ ಸಂಸಾರದಂತೆ ಕೂಡಲ ಸಂಗನ ಶರಣರನರಿಯದೆ ಉಳಿದ ಭಂಗಿತರ.

ಭಂಗಿತರು = ಮಾನ ಹೀನರು.

ಮೊದಲಿನ ಆದ್ಯರ ರೀತಿಗಳನ್ನು ತಿಳಿದು ಆಚರಿಸುವದು ಆದ್ಯರಿಗಲ್ಲದೆ, ಬೇರೆಯವರಿಗೆ ಸಾಧ್ಯವಲ್ಲವೆಂದು ಬಸವೇಶ್ವರನ ಅಭಿಪ್ರಾಯವು. ಅವುಗಳಂತೆ ಯಾರು ಆಚರಿಸುವದಿಲ್ಲವೋ ಅವರನ್ನು ದೇವರು ಪ್ರೀತಿಸಲಾರನು. ಇಂಥವರು ಅವನ ಹಾದಿಗೆ ಸಲ್ಲರು. ಇವರು ಶರಣರನ್ನು ಅರಿಯದ ಮಾನ ಹೀನರು. ಇಂಥವರು ಸಿಂಗಾರ ಮಾಡಿಕೊಂಡರೆ ಅದು ವ್ಯೈಲಾರನ ಸಿಂಗಾರದಂತೆ. ಅಂದರೆ ಈ ಮೂರ್ತಿಗೆ ಅದರ ಹೊರಗೆ ನಾನಾ ತರದ ಬಣ್ಣಗಳನ್ನು ಹಚ್ಚಿದರೂ ಅದರ ಒಳಗೆ ಗೊಬ್ಬರ ಮತ್ತು ಹುಂಡೀ ನಾರು ಹಾಕಿ ತುಂಬಿರುತ್ತಾರೆ. ಹಾಗೆ ಇಂಥವರ ಬಾಳ್ವೆಯು. ಅವರ ಬಾಳ್ವೆಯು ಒಬ್ಬ ವೇಶ್ಯಾ ಸ್ತ್ರೀಯಳ ಮನೆಯಲ್ಲಿ ಎಂಜಲ ತಿನ್ನುತ್ತ ಕಾಲ ಕಳೆಯುವ ದಾಸಿಯ ಬಾಳ್ವೆಯಂತೆ. ಅಂದರೆ ಅವರು ಬಹು ಕನಿಷ್ಠ ಸ್ಥಿತಿಯವರೆಂದು ಬಸವೇಶ್ವರನು ಇಲ್ಲಿ ಹೇಳಿದ್ದಾನೆ.

(೭) ಆದ್ಯರ ವಚನ ಪರುಷವೆಂದೆಂಬೆನು. ಆ ಪರುಷವೆನಗೆಂತು ದೊರೆಕೊಂಬುವುದಯ್ಯ? ತನು ಮನ ಧನವ ವಿವರಿಸಿ ನುಡಿವೆ. ಸೋಂಕಿಗೆ ಸೈರಿಸಲಾರೆ. ಹೊಲೆಯರ ಮದ್ದಳೆಯಂತೆ ನುಡಿವ ಡಂಭಕ ನಾನಯ್ಯ. ಕೂಡಲಸಂಗಮದೇವಾ.

ಶಿವಶರಣರ ವಚನಗಳು ಪರುಷದಂತೆ ಇವೆ. ಅವುಗಳನ್ನು ಓದಿದರೆ ಮನಸ್ಸು ಶುದ್ಧವಾಗುತ್ತದೆ. ಅಂಥ ಪರುಷವು ನನಗೆ ಹೇಗೆ ದೊರಕೀತೆಂದು ಬಸವೇಶ್ವರನು ಇಲ್ಲಿ ಅನ್ನುತ್ತಾನೆ. ನಾನು ನನ್ನ ಶರೀರವನ್ನು ಹೇಗೆ ಇಟ್ಟುಕೊಳ್ಳಬೇಕು, ನನ್ನ ಮನಸ್ಸು ಹೇಗೆ ಇರಿಸಬೇಕು, ಧನವನ್ನು ಹೇಗೆ ಉಪಯೋಗಿಸಬೇಕು, ಎಂಬುದನ್ನು ಕುರಿತು ನಾನು ಸವಿಸ್ತಾರವಾಗಿ ಬಾಯಿಂದ ಹೇಳುತ್ತೇನೆ. ಆದರೆ ಯಾರಾದರೂ ನೀವೇ ಹಾಗೆ ನಡೆದು ತೋರಿಸಿರಿ, ಎಂದರೆ ನಾನು ಸೈರಿಸುವದಿಲ್ಲ. ನಾನು ಕೂಡಲೇ ಸಿಟ್ಟಿಗೇಳುತ್ತೇನೆ. ಹೊಲೆಯರು ಒತ್ತಟ್ಟಿಗೆ ಸೇರಿಕೊಂಡು ಮದ್ದಳೆ ಬಾರಿಸುವದುಂಟು. ಅವರು ಏನೂ ಕಲಿಯದವರು. ಆದ್ದರಿಂದ ಅವರು ಸಿಕ್ಕ ಸಿಕ್ಕ ಹಾಗೆ ಬಾರಿಸುತ್ತ ಕುಣಿಯುತ್ತಾರೆ. ಅವರಂತೆ ನಾನು ತಾಳ ಮೇಳವಿಲ್ಲದೆ ನುಡಿಯುತ್ತೇನೆ. ನಾನು ಕೇವಲ ಡಂಭಾಚಾರಿಯು, ಎಂದು ಬಸವೇಶ್ವರನು ತನ್ನನ್ನು ತಾನೇ ಹಳಿದುಕೊಳ್ಳುತ್ತಾನೆ. ಆದರೆ ಆದ್ಯರ ವಚನವೆಂಬ ಪರುಷವು ನನಗೆ ದೊರೆತರೆ ಹೀಗಾಗುವದಿಲ್ಲವೆಂದು ಅವನು ಇಲ್ಲಿ ಹೇಳುತ್ತಾನೆ.

---

## ಪರಮಾತ್ಮನ ಸ್ವರೂಪ

(೮) ಎತ್ತೆತ್ತ ನೋಡಿದಡತ್ತತ್ತ ನೀನೇ ದೇವಾ. ಸಕಳ ವಿಸ್ತಾರದ ರೂಹು ನೀನೇ ದೇವಾ. ಬಾಹು ನೀನೇ ದೇವಾ. ವಿಶ್ವತೋ ಚಕ್ಷು ನೀನೇ ದೇವಾ. ವಿಶ್ವತೋಮುಖ ನೀನೇ ದೇವಾ. ವಿಶ್ವತೋ ಪಾದ ನೀನೇ ದೇವಾ, ಕೂಡಲಸಂಗಮದೇವಾ.

ರೂಹು = ರೂಪು

ಎಲೋ ಪರಮಾತ್ಮನೇ, ವಿಶ್ವದಲ್ಲಿ ಎತ್ತೆತ್ತ ನೋಡಿದರೂ ನೀನೇ ಇರುತ್ತೀ. ಈ ವಿಶ್ವವು ಬಹು ವಿಸ್ತಾರವಾದದ್ದು. ಅದರೂ ಅದರ ರೂಪು ನೀನೇ. ವಿಶ್ವವೆಲ್ಲ ನಿನ್ನ ಕಣ್ಣು. ವಿಶ್ವವೆಲ್ಲ ನಿನ್ನ ಮುಖವು. ವಿಶ್ವವೆಲ್ಲ ನಿನ್ನ ಪಾದವು ಎಂದು ಬಸವೇಶ್ವರನು ವೇದದಲ್ಲಿಯ ಒಂದು ವಾಕ್ಯವನ್ನು ಇಲ್ಲಿ ಉದಹರಿಸಿದ್ದಾನೆ. ಅಂದರೆ ಪರಮಾತ್ಮನಿಗೆ ಕೆಲವೊಂದು ಆಕೃತಿ ಅಥವಾ ಸ್ಥಾನವಿರದೆ ಅವನು ಎಲ್ಲವನ್ನೂ ವ್ಯಾಪಿಸಿದ್ದಾನೆಂದು ಇಲ್ಲಿ

ಅವನು ಹೇಳಿದ್ದಾನೆ. ಸಾಮಾನ್ಯವಾಗಿ ಜನರು ಕೆಲವೊಂದು ದೇವತೆ ಯನ್ನು ಕಲ್ಪಿಸಿ ಅದಕ್ಕೆ ತಲೆಗಳು ಎಷ್ಟು ಇವೆ, ಅದಕ್ಕೆ ಕೈಗಳು ಎಷ್ಟು ಇವೆ, ಎಂದು ಹೇಳುತ್ತಾರೆ. ಆದರೆ ಪರಮಾತ್ಮನು ಹಾಗಿರದೆ ಅವನ ಕಣ್ಣು ಬಾಹು ಎಲ್ಲವೂ ಜಗತ್ತಿನ ತುಂಬೆಲ್ಲ ಇವೆ. ಅಂದರೆ ಅವನು ವಿಶ್ವವ್ಯಾಪಿಯಾಗಿದ್ದಾನೆ. ಮತ್ತು ಅವನ ಚೈತನ್ಯವು ಎಲ್ಲರಲ್ಲಿಯೂ ಇದೆ ಎಂಬ ಭಾವವು ಈ ವಚನದಲ್ಲಿ ಇದೆ.

(೯) ಸಕಳ ನಿಃಕಳವ ಕೂಡಿಕೊಂಡಿಪ್ಪೆಯಾಗಿ ಸಕಳ ನೀನೇ, ನಿಃಕಳ ನೀನೇ ಕಂಡಯ್ಯಾ. ವಿಶ್ವತೋ ಚಕ್ಷು ನೀನೇ ದೇವಾ. ವಿಶ್ವತೋ ಮುಖ ನೀನೇ ದೇವಾ. ವಿಶ್ವತೋ ಬಾಹು ನೀನೇ ದೇವಾ, ಕೂಡಲ ಸಂಗಮದೇವಾ.

ಸಕಳ = ಆಕಾರವುಳ್ಳದ್ದು. ನಿಃಕಳ = ನಿರಾಕಾರವಾದದ್ದು.

ಜಗತ್ತಿನಲ್ಲಿರುವ ವಸ್ತುಗಳಲ್ಲಿ ಆಕಾರವುಳ್ಳವು ನಿರಾಕಾರವುಳ್ಳವು ಎಂದು ಎರಡು ವಿಭಾಗಗಳಿವೆ. ಇವುಗಳಲ್ಲಿ ಪರಮಾತ್ಮನು ಯಾವುದರಲ್ಲಿ ಇದ್ದಾನೆಂದು ಕೇಳಿದರೆ, ಅವನು ಈ ಎರಡೂ ತೆರದ ವಸ್ತುಗಳಲ್ಲಿ ಇದ್ದಾನೆಂದು ಬಸವೇಶ್ವರನು ಇಲ್ಲಿ ಹೇಳಿದ್ದಾನೆ. ಪರಮಾತ್ಮನ ಕಣ್ಣು ಒಂದು ಕಡೆಗೆ ಅವನ ಮುಖವು ಬೇರೊಂದು ಕಡೆಗೆ, ಅವನ ಭುಜವು ಇನ್ನೊಂದು ಕಡೆಗೆ, ಹೀಗಿರುವದಿಲ್ಲ. ಅವನ ಕಣ್ಣು, ಮುಖ, ಭುಜಗಳೆಲ್ಲವು ಎಲ್ಲ ಕಡೆಗೂ ಇವೆ. ಅಂದರೆ ಅವನು ವಿಶ್ವನಲ್ಲೆಲ್ಲ ಪಸರಿಸಿದ್ದಾನೆಂಬ ಭಾವವು ಇದರಲ್ಲಿ ಇದೆ.

(೧೦) ಶ್ರುತಿ ತತಿ ಶಿರದ ಮೇಲೆ ಅತ್ಯತಿಷ್ಠದ್ದಶಾಂಗುಲನ ನಾನೇನೆಂಬೆನಯ್ಯಾ. ಘನಕ್ಕೆ ಘನ ಮಹಿಮನ, ಮನಕ್ಕಗೋಚರನ, ಅಣೋರಣೀಯಾನ್, ಮಹತೋ ಮಹೀಯಾನ್ ಮಹಾದಾನಿ ಕೂಡಲ ಸಂಗಮದೇವ.

ಶ್ರುತಿ = ನಾಲ್ಕು ವೇದಗಳು. ತತಿ = ಸಮೂಹ. ಅತ್ಯತಿಷ್ಠತ್ = ದಾಟಿ ಇರು. ಅಣೋರಣೀಯಾನ್ = ಸಣ್ಣದರಲ್ಲಿ ಸಣ್ಣದು. ಮಹತೋ ಮಹೀಯಾನ್ = ದೊಡ್ಡದರಲ್ಲಿ ದೊಡ್ಡದು.

ನಾಲ್ಕು ವೇದಗಳು ಒಂದು ಜ್ಞಾನ ಭಾಂಡಾರದಂತಿರುತ್ತದೆ, ಆದರೆ ಪರಮಾತ್ಮನು ಆ ಭಾಂಡಾರಮಾತ್ರವಲ್ಲ. ಅದರಿಂದ ಹತ್ತು ಬೆರಳುಗಳಾಚೆ

ಸಹ ಪಸರಿಸಿದ್ದಾನೆ. ಅಂದರೆ ಅವನು ಅಗಾಧವಾದ ಜ್ಞಾನವುಳ್ಳವನೆಂಬ ಭಾವವು ಈ ನುಡಿಯಲ್ಲಿ ಇದೆ. ಅವನ ಮಹಿಮೆಯು ಜಗತ್ತಿನಲ್ಲಿ ಯಾವದು ಅತ್ಯಗಾಧವಾಗಿದೆಯೋ ಅದಕ್ಕೂ ಅಧಿಕವಾದದ್ದು. ಅವನು ಮನಸ್ಸಿಗೆ ನಿಲುಕದಂಥವನು. ಜಗತ್ತಿನಲ್ಲಿ ಯಾವದು ಅತ್ಯಂತ ಸೂಕ್ಷ್ಮವಾದುದೋ ಅದಕ್ಕೂ ಹೆಚ್ಚು ಸೂಕ್ಷ್ಮವಾಗಿರುವನು. ಯಾವದು ಅತಿ ದೊಡ್ಡದಾದುದೋ ಅದಕ್ಕೂ ಹೆಚ್ಚು ದೊಡ್ಡವನು. ಇಂಥವನಿದ್ದರೂ ಕೂಡ ಅವನು ಭಕ್ತರಿಗೆ ಬೇಡಿದ್ದನ್ನು ಕೊಡುವಂಥವನು. ಈ ಪ್ರಕಾರ ಬಸವೇಶ್ವರನು ಪರಮಾತ್ಮನ ಗುಣವರ್ಣನೆಯನ್ನು ಮಾಡಿದ್ದಾನೆ.

(೧೧) ಅಷ್ಟ ತನುಮೂರ್ತಿ ಲಿಂಗವೆಂಬರು. ಇವರಾರೆಂದು ನಾನರಿಯೆನಯ್ಯ. ಆದಿಯ [ಮಗನತೀತನು. ಅತೀತನ ಮಗನಾಕಾಶ. ಆಕಾಶನ ಮಗ ವಾಯು. ವಾಯುವಿನ ಮಗ ಅಗ್ನಿ. ಅಗ್ನಿಯ ಮಗನಪ್ಪು. ಅಪ್ಪುವಿನ ಮಗ ಪೃಥ್ವಿ. ಪೃಥ್ವಿಯ ಮಗ ಚಂದ್ರ. ಚಂದ್ರನ ಮಗ ಸೂರ್ಯ. ಸೂರ್ಯನ ಮಗ ದೇಹ. ದೇಹನ ಮಗನಾತ್ಮ ಇಂತೀ ಅಷ್ಟ ತನುವೆಲ್ಲಕ್ಕೆಯೂ ಉತ್ಪತ್ತಿಯುಂಟು. ಅಜಾತ ಜನಿತ ನಮ್ಮ ಕೂಡಲಸಂಗಮದೇವಂಗೆ ಮಾತಾಪಿತರುಗಳಿಲ್ಲ.

ಅಷ್ಟ ತನುಗಳು ಪೃಥ್ವಿ, ಅಪ್ಪು, ತೇಜ, ವಾಯು, ಆಕಾಶ, ಚಂದ್ರ, ಸೂರ್ಯ ಮತ್ತು ಆತ್ಮ ಇವರು ಇದ್ದು ಅವರು ದೇವರೆಂದು ಕೆಲವರು ತಿಳಿದಿರುತ್ತಾರೆ. ಯಾಕೆಂದರೆ ಇವುಗಳ ತತ್ವಗಳು ಮತ್ತು ಗುಣಧರ್ಮಗಳು ಎಲ್ಲ ಪದಾರ್ಥಗಳಲ್ಲಿ ಹೆಚ್ಚು ಕಡಿಮೆ ಪ್ರಮಾಣದಿಂದ ಇರುತ್ತವೆ. ಆದರೆ ಈ ತನುಗಳು ದೇವರೆಂದು ತಿಳಿಯುವದು ತಪ್ಪು ಎಂದು ಬಸವೇಶ್ವರನ ಅಭಿಪ್ರಾಯವು. ಯಾಕೆಂದರೆ ಇವುಗಳಿಗೆಲ್ಲ ಹುಟ್ಟು ಇದೆ. ಆದರೆ ನಮ್ಮ ಪರಮಾತ್ಮನಿಗೆ ಹುಟ್ಟುಎಂಬುದಿಲ್ಲ. ವಚನಶಾಸ್ತ್ರದ ಪ್ರಕಾರ ವಿಶ್ವವೆಲ್ಲ ಮೊದಲು ನಿರಾಕಾರವಾಗಿತ್ತು. ಅದರಲ್ಲಿ ಯಾವ ವಸ್ತುವೂ ಇರಲಿಲ್ಲ. ಮುಂದೆ ವಿಶ್ವವನ್ನು ಉಂಟುಮಾಡಬೇಕೆಂಬ ಇಚ್ಛೆಯು ಪರಮಾತ್ಮನಲ್ಲಿ ತೋರಲು ಆ ವರೆಗೆ ಗುಪ್ತನಾಗಿ ಅಡಗಿಕೊಂಡಿದ್ದ ಅವನಲ್ಲಿಯ ಆ ಶಕ್ತಿಯು ಪ್ರಕಟವಾಗುತ್ತದೆ. ಅದೇ ಚಿತ್ ಶಕ್ತಿಯು. ಆಮೇಲೆ ನಾದ ಬಿಂದು ಕಳೆಗಳು ಉಂಟಾದವು. ಅಲುಗಾಡುವಿಕೆಯೇ ನಾದವು. ಅದರಿಂದ ಉಂಟಾದ ರೂಪೇ ಬಿಂದುವು. ಇವು ಪರಸ್ಪರ ಕೂಡಲು ಅವು

ಗಳಲ್ಲಿ ಕಲೆಯು ಉತ್ಪನ್ನವಾಗುತ್ತದೆ. ಇವು ಮೂರು ಮತ್ತು ಮೂಲ
ದಲ್ಲಿದ್ದ ಚಿತ್ತು, ಇವು ಪರಸ್ಪರ ಕೂಡಿಕೊಳ್ಳಲು ಓಂಕಾರ ಪ್ರಣವವು
ಉಂಟಾಯಿತು. ಇದನ್ನು ಮಹಾಲಿಂಗವೆಂದು ವಚನಶಾಸ್ತ್ರಕಾರರು ಕರೆ
ದಿದ್ದಾರೆ. ಇದು ಆದಿ ಎಂದು ಬಸವೇಶ್ವರನು ಇಲ್ಲಿ ಹೇಳಿದ್ದಾನೆ. ಈ
ಆದಿಯಿಂದ ಸದಾಶಿವನು ಉತ್ಪನ್ನನಾದನು. ಅವನು ಪಂಚ ಮುಖವುಳ್ಳ
ವನು. ಇವು ಈಶಾನ್ಯ ಮುಖ, ತತ್ಪುರುಷ ಮುಖ, ಅಘೋರ ಮುಖ
ವಾಮದೇವ ಮುಖ, ಸದ್ಯೋಜಾತ ಮುಖ ಎಂದಿವೆ. ಇವುಗಳಿಂದಲೇ
ಪಂಚ ಸಾದಾಖ್ಯಗಳು, ಪಂಚ ಕಲೆಗಳು, ಪಂಚ ಪ್ರಾಣಗಳು, ಪಂಚ ಶಕ್ತಿ
ಗಳು, ಪಂಚ ಮಹಾಭೂತಗಳು ಮೊದಲಾದವು ಉತ್ಪನ್ನವಾದವು. ಈ
ಎಲ್ಲವುಗಳು ಸೃಷ್ಟಿಯ ರಚನೆಗೆ ಅವಶ್ಯವಾದವುಗಳು. ಇಂಥ ಸದಾಶಿವ
ನನ್ನು ಬಸವೇಶ್ವರನು ಇಲ್ಲಿ ಅತೀತನೆಂದು ಕರೆದಿದ್ದಾನೆ. ಈ ಅತೀತ
ನಿಂದ ಆಕಾಶ ತತ್ವದಉತ್ಪತ್ತಿ, ಆಕಾಶ ತತ್ವದಿಂದ ವಾಯು ತತ್ವದ
ಉತ್ಪತ್ತಿ, ವಾಯುತತ್ವದಿಂದ ಅಗ್ನಿ ತತ್ವದ ಉತ್ಪತ್ತಿ, ಅಗ್ನಿ ತತ್ವದಿಂದ
ಅಪ್ಪು ತತ್ವದ ಉತ್ಪತ್ತಿ, ಅಪ್ಪು ತತ್ವದಿಂದ ಪೃಥ್ವೀ ತತ್ವದ ಉತ್ಪತ್ತಿ, ಹೀಗೆ
ಅನುಕ್ರಮವಾಗಿ ಉತ್ಪನ್ನವಾದವು. ಪೃಥ್ವೀ ತತ್ವದಿಂದ ಚಂದ್ರನು ಮತ್ತು
ಚಂದ್ರನಿಂದ ಸೂರ್ಯನು ಉದಯವಾದರು. ಈ ಸೂರ್ಯನಿಂದ ದೇಹದ
ಉತ್ಪತ್ತಿಯಾಗುತ್ತದೆ. ದೇಹದಿಂದ ಆತ್ಮನು, ಹೀಗೆ ಸದಾಶಿವನ ಮೂಲ
ಕವೇ ಇವೆಲ್ಲ ವಸ್ತುಗಳ ಉತ್ಪತ್ತಿಯಾಗಿದೆ. ಈ ಪ್ರಕಾರ ಅಷ್ಟ ತನು
ಗಳಿಗೆ ಉತ್ಪತ್ತಿಯು ಇರುವದರಿಂದ ಇವು ದೇವರೆಂದು ಹೇಳಲು ಬರಲಾ
ರದು. ಯಾಕೆಂದರೆ ಪರಮಾತ್ಮನಿಗೆ ತಾಯಿ ತಂದೆಗಳಿಲ್ಲ. ಆವನು ಅನಾದಿ
ಯಿಂದಲೂ ಇದ್ದಾನೆಂಬ ಅಭಿಪ್ರಾಯವನ್ನುಬಸವೇಶ್ವರನು ಇಲ್ಲಿ ಹೇಳಿದ್ದಾನೆ.

(೧೩) ಭೂ ತೋಯ ಪಾವನ ಸಮೀರಣ ಅಂಬರಾದಿಗಳೆಲ್ಲ ಆದಿ
ಯಾಧಾರ ಪರಮಾತ್ಮ ಲಿಂಗದಲ್ಲಿ ಆದಿ ಮಧ್ಯಾವಸಾನವನರಿಯವೆ ಅಗಮ್ಯ
ವೇದಾದಿ ಸಕಲ ಶಾಸ್ತ್ರ ಪ್ರಮಾಣದು ಅದನಿಂತಿಂತೆಂದುಪಮಿಸಲಿಲ್ಲ,
ಮಹಾಂತ ಕೂಡಲಸಂಗಮದೇವಾ.

ತೋಯ = ಅಪ್ಪು. ಪಾವಕ = ಅಗ್ನಿ. ಸಮೀರಣ = ವಾಯು.
ಅಂಬರ = ಆಕಾಶ.

# ಶಿವಾನುಭವ

ಸಂಪುಟ ೨೭ ] [ ಸಂಚಿಕೆ ೪

ಸಂಪಾದಕ

ಫ. ಗು. ಹಳಕಟ್ಟಿ,

ಬಿ. ಎ. ಎಲ್. ಎಲ್. ಬಿ.



ವಾ. ವ. ೫-೧೨-೦] ವಿಜಾಪುರ [ ಏಪ್ರಿಲ ೧೯[illegible]

# ವಿಷಯಾನುಕ್ರಮಣಿಕೆ.



# ಶಿವಾನುಭವ

ವರ್ಷ ೨೭ | ಎಪ್ರೀಲ ೧೯೫೩ | ಸಂಚಿಕೆ ೪

## ಶಿವಾನುಭವ ಸಂಘಗಳು.

(ಲೇಖಕರು — ರಾ. ಬ. ಫ. ಗು. ಹಳಕಟ್ಟಿ, ವಿಜಾಪುರ.)

ಶಿವಾನುಭವ ಸಂಘಗಳು ಆತ್ಮಸುಧಾರಣೆ, ಕುಟುಂಬ ಸುಧಾರಣೆ ಮತ್ತು ಸಮಾಜ ಸುಧಾರಣೆ ಇವುಗಳನ್ನು ಜರಗಿಸಲು ಅತ್ಯಂತ ಸಹಾಯಕಾರಿಗಳಾಗಿರುತ್ತವೆ. ಬಸವೇಶ್ವರನ ಕಾಲದಲ್ಲಿ ಕಲ್ಯಾಣದಲ್ಲಿ ಸ್ಥಾಪಿಸಲ್ಪಟ್ಟ ಶಿವಾನುಭವ ಮಂಟಪವು ಎಂಥ ಮಹತ್ವದ ಕಾರ್ಯಗಳನ್ನು ಮಾಡಿತೆಂಬುದು ಎಲ್ಲರಿಗೂ ತಿಳಿದದ್ದಾಗಿದೆ. ಅದರ ಮೂಲಕವಾಗಿಯೇ ಅವನ ಕಾಲದಲ್ಲಿ ಸಮಾಜದಲ್ಲಿ ಒಂದು ಮಹತ್ವದ ಕ್ರಾಂತಿಯುಂಟಾಯಿತು. ಅಂಥ ಶಿವಾನುಭವ ಮಂಟಪಗಳು ಈ ಕಾಲದಲ್ಲಿ ಪ್ರತಿಯೊಂದ ಗ್ರಾಮದಲ್ಲಿ, ಪಟ್ಟಣದಲ್ಲಿ, ಮತ್ತು ಪಟ್ಟಣದ ಪ್ರತಿಯೊಂದು ಭಾಗದಲ್ಲಿ ಉಂಟಾಗಬೇಕು. ಇದರಿಂದ ವ್ಯಕ್ತಿಗಳ ಮತ್ತು ಕುಟುಂಬಗಳ ನಿಜವಾದ ಸುಧಾರಣೆಯು ಶಕ್ಯವಾಗುವದು. ಇಂಥ ಸುಧಾರಣೆಯೇ ಸಮಾಜ ಸುಧಾರಣೆಗೆ ತಳಹದಿಯಾಗಿದೆ.

ಶಿವಾನುಭವ ಸಂಘವನ್ನು ಒಂದು ಗ್ರಾಮದಲ್ಲಿ ಸ್ಥಾಪಿಸಬೇಕಾದರೆ, ಅಲ್ಲಿ ಒಬ್ಬನಾದರೂ ಶಿವಶರಣರ ತತ್ವಗಳಿಗೋಸ್ಕರ ಪ್ರೀತಿಯುಳ್ಳವನಿರತಕ್ಕದ್ದು. ಅವನಲ್ಲಿ ಅವರ ವಿಚಾರಗಳನ್ನು ಓದಿ ತಿಳಿದುಕೊಳ್ಳುವ ಲವಲವಿಕೆ ಇರತಕ್ಕದ್ದು. ಮತ್ತು ಅವನು ಅವುಗಳನ್ನು ತನಗೆ ಶಕ್ಯವಿದ್ದಷ್ಟರಮಟ್ಟಿಗೆ ಆಚರಿಸಲೂ ಪ್ರಯತ್ನಿಸತಕ್ಕದ್ದು. ಇಂಥ ಪ್ರವೃತ್ತಿಯುಳ್ಳ

ವನು ಗ್ರಾಮದಲ್ಲಿ ಇದ್ದರೆ ಮಾತ್ರ ಅಲ್ಲಿ ಶಿವಾನುಭವ ಸಂಘವು ಸರಿಯಾಗಿ ನಡೆಯುವದು. ಇಂಥವನೊಬ್ಬನು ಅಲ್ಲಿ ದೊರೆತ ಬಳಿಕ ಅವನು ತನ್ನ ವಿಚಾರಗಳನ್ನು ತನ್ನ ಗ್ರಾಮದಲ್ಲಿಯ ಜನರಲ್ಲಿಯೇ ಪ್ರಸಾರಪಡಿಸಲು ತೊಡಗಲು ಯತ್ನಿಸಬೇಕು. ಹೀಗೆ ಕನಿಷ್ಠ ೫-೬ ಜನರು ಅವನಿಗೆ ದೊರೆದಲ್ಲಿ, ಅವರೆಲ್ಲರೂ ಕೂಡಿ ಆ ಗ್ರಾಮದಲ್ಲಿ ಒಂದು ಶಿವಾನುಭವ ಸಂಘವನ್ನು ಸ್ಥಾಪಿಸಬೇಕು. ಈ ಸಂಘದವರು ವಾರದಲ್ಲಿ ಒಂದಾವರ್ತಿಯಾದರೂ ಒತ್ತಟ್ಟಿಗೆ ಸೇರಿ ಶಿವಶರಣರ ವಿಚಾರಗಳನ್ನು ಪರಿಶೀಲಿಸಬೇಕು. ಇವುಗಳನ್ನು ನಿರೂಪಿಸುವ ಅನೇಕ ಗ್ರಂಥಗಳು "ಶಿವಾನುಭವ ಗ್ರಂಥಮಾಲೆ" ಯಲ್ಲಿ ಇವೆ. ಅವುಗಳಲ್ಲಿ ಬೇಕಾದವುಗಳನ್ನು ಆರಿಸಿ ಸಭಾಸದರು ಓದಬೇಕು. ಇವುಗಳನ್ನು ತಾವು ಪರಿಶಿಲಿಸುವದಲ್ಲದೆ ಅವುಗಳನ್ನು ಅವರು ತಮ್ಮ ಕುಟುಂಬದ ಜನರಲ್ಲಿಯೂ ಪ್ರಸಾರಪಡಿಸಿ ಅವುಗಳ ಬಗ್ಗೆ ಅವರಲ್ಲಿ ನಿಜವಾದ ಪ್ರೀತಿಯನ್ನುಂಟುಮಾಡಬೇಕು. ಇದೇ ಸಮಾಜಸುಧಾರಣೆಗೆ ತಳಹದಿಯಾಗಿದೆ.

ಶಿವಾನುಭವ ಸಂಘಗಳಿಗೆ ಸಭಾಸದರು ನಿಷ್ಕಲಂಕ ಮನಸ್ಸಿನವರೂ, ಉದಾರ ಮತದವರೂ, ತಾವು ಕೇಳಿದ ವಿಷಯಗಳನ್ನು ತಮಗೆ ಶಕ್ಯವಿದ್ದಷ್ಟರಮಟ್ಟಿಗೆ ವ್ಯವಹಾರದಲ್ಲಿ ತರಲು ಉತ್ಸುಕರಾದವರೂ ಇರಬೇಕು. ಈ ಸಂಘಗಳಿಗೆ ಹಣಕ್ಕಿಂತಲು ಇಂಥ ಸಭಾಸದರ ಅವಶ್ಯಕತೆಯು ಬಹಳವಿರುತ್ತದೆ.

ಇಡೀ ಸಮಾಜವನ್ನು, ಇಡೀ ಪಟ್ಟಣವನ್ನು ಅಥವಾ ಇಡೀ ಗ್ರಾಮವನ್ನು ಏಕಕಾಲಕ್ಕೆ ಕೂಡಲೆ ಸುಧಾರಿಸುವದು ಅಶಕ್ಯವಿದೆ. ಇದು ಯಾವ ಕಾಲಕ್ಕೂ ಆಗಿರುವದಿಲ್ಲ. ಆದರೆ ಉಜ್ವಲವೃತ್ತಿಯುಳ್ಳವರ ಸಂಖ್ಯೆಯನ್ನು ಗ್ರಾಮಗಳಲ್ಲಿ ಕ್ರಮೇಣ ಹೆಚ್ಚಿಸುತ್ತ ಹೋಗಬೇಕು. ಇದು ಎಂಥ ಗ್ರಾಮದಲ್ಲಿಯಾದರೂ ಶಕ್ಯವು. ಗ್ರಾಮದಲ್ಲಿ ಇಂಥ ಜನರು ದೊರೆದಹಾಗೆ ಅವರಲ್ಲಿ ಸಂಘಟನೆಯನ್ನುಂಟುಮಾಡುತ್ತ ಹೋಗಬೇಕು. ಈ ಕಾರ್ಯಕ್ಕೆ ಕೆಲಕಾಲ ಹತ್ತಬಹುದು ಆದರೆ ಇಂಥ ಪ್ರಯತ್ನಗಳ ಸುಪರಿಣಾಮಗಳು ಸ್ಥಿರವಾಗಿ ಉಳಿಯುವವು.

ಈ ಪ್ರಕಾರ ಒಂದು ತಾಲೂಕು ಅಥವಾ ಜಿಲ್ಲೆ ಅಥವಾ ಜಿಲ್ಲೆಯ ಕೆಲವೊಂದು ಭಾಗದಲ್ಲಿ ಹತ್ತಿಪ್ಪತ್ತು ಶಿವಾನುಭವ ಸಂಘಗಳು ಸ್ಥಾಪಿ

ತವಾದ ಬಳಿಕ ಅವುಗಳು ಆಗಿಂದಾಗ್ಗೆ ಕೂಡಿಕೊಂಡು ಪರಸ್ಪರ ವಿಚಾರ ವಿನಿಮಯ ಮಾಡಲಿಕ್ಕೆ ಹತ್ತಬೇಕು. ಮತ್ತು ಆಕಾಲಕ್ಕೆ ಅವು ಗೊತ್ತುಪಡಿಸಿದ ಗೊತ್ತುವಳಿಗಳನ್ನು ಆಯಾ ಸಂಘಗಳೂ ಆ ಸಂಘಗಳ ಸಭಾಸದರೂ ಆಚರಣೆಯಲ್ಲಿ ತರಲು ಪ್ರಯತ್ನಿಸಬೇಕು.

ಈ ಕಾಲಕ್ಕೆ ಕಾಂಗ್ರೆಸ್ಸಿನ ಮತ್ತು ಇತರ ರಾಜಕೀಯ ಸಂಸ್ಥೆಗಳ ಸಂಘಟನೆಯನ್ನು ಅನುಕರಣ ಮಾಡುವ ಒಲವು ಜನರಲ್ಲಿ ಬಹಳ ಇರುತ್ತದೆ. ಆದರೆ ರಾಜಕೀಯ ಪ್ರಯತ್ನಗಳು ಮತ್ತು ಸಾಮಾಜಿಕ ಪ್ರಯತ್ನಗಳು ಇವುಗಳ ಪದ್ಧತಿಯಲ್ಲಿ ಮಹದಂತರವಿರುತ್ತದೆ. ರಾಜಕೀಯ ಪ್ರಯತ್ನಗಳಲ್ಲಿ ತೊಡಗಿದವರು ಕೆಲವೊಂದು ವಿಶಿಷ್ಟ ಉದ್ದೇಶವನ್ನಿಟ್ಟು ಕೊಂಡು ಅದನ್ನು ಸಂಪಾದಿಸುವದಕ್ಕೋಸ್ಕರ ಅದಷ್ಟು ಬಹುಜನ ಸಮಾಜದ ಬೆಂಬಲವನ್ನು ಪಡೆದು ಈ ಬೆಂಬಲದಿಂದ ಸರಕಾರ ಅಥವಾ ಸರಕಾರೀ ಅಧಿಕಾರಿಗಳು ಅಥವಾ ಶಾಸನ ಸಭೆಗಳು ಇವುಗಳ ಮೇಲೆ ತಮ್ಮ ವರ್ಚಸ್ಸನ್ನು ಕೆಡವಿ ತಮ್ಮ ಉದ್ದೇಶವನ್ನು ಸಾಧಿಸುವದು ಇರುತ್ತದೆ. ಆದರೆ ಸಾಮಾಜಿಕ ಮತ್ತು ಧಾರ್ಮಿಕ ಸುಧಾರಣೆಯಲ್ಲಿ ಈ ವಿಧವು ಇರದೆ ಅದಕ್ಕೋಸ್ಕರ ಪ್ರಯತ್ನಿಸುವವನು ಮೊದಲು ತನ್ನ ಮತ್ತು ತನ್ನ ಕುಟುಂಬದ ಸುಧಾರಣೆಯಲ್ಲಿ ತೊಡಗಿ ಸಮಾಜದ ಪ್ರಗತಿಗೋಸ್ಕರ ಪ್ರಯತ್ನಿಸುವದು ಇರುತ್ತದೆ. ಈ ಕಾರ್ಯಗಳಿಗೆ ವ್ಯಕ್ತಿಗಳು ಮುಂದಾಗಬೇಕು. ಮುಂದೆ ಗ್ರಾಮಗಳಲ್ಲಿ ಇಂಥ ವ್ಯಕ್ತಿಗಳ ಸಮುದಾಯವನ್ನು ಉಂಟುಮಾಡಬೇಕು. ಈ ಸಮುದಾಯಗಳೇ ಶಿವಾನುಭವ ಸಂಘಗಳಾಗುವವು.

## ಶಿವಾನುಭವ ಸಂಘಗಳ ಸಭಾಸದರು ಕೈಕೊಳ್ಳಬಹುದಾದ ಕಾರ್ಯಕ್ರಮಗಳು.

ಶಿವಾನುಭವ ಸಂಘಗಳ ಸಭಾಸದರು ಕೈಕೊಳ್ಳಬಹುದಾದ ಕಾರ್ಯಕ್ರಮದಲ್ಲಿ ನಾವು ಮೂರು ವಿಭಾಗಗಳನ್ನು ಮಾಡಬಹುದು. ಅವು ಯಾವವೆಂದರೆ:—

(೧) ಆತ್ಮ ಸುಧಾರಣೆಯ ಕಾರ್ಯಗಳು (೨) ಕುಟುಂಬ ಸುಧಾರಣೆಯ ಕಾರ್ಯಗಳು (೩) ಶಿವಾನುಭವ ಸಂಘಕ್ಕೋಸ್ಕರ ಮಾಡುವ

ಕಾರ್ಯಗಳು. ಪ್ರತಿಯೊಬ್ಬನು ಈ ಮೂರೂ ಕರ್ತವ್ಯಗಳನ್ನು ಜರುಗಿಸುವದು ಬಹಳ ಅವಶ್ಯವಿರುತ್ತದೆ.

ಮನುಷ್ಯನು ಆಚರಿಸತಕ್ಕ ಕಾರ್ಯಗಳು ಅಸಂಖ್ಯವಾಗಿರುತ್ತವೆ. ಆದರೆ ಅವುಗಳಲ್ಲಿ ಬಹುಜನ ಸಮಾಜಕ್ಕೆ ಯಾವವು ಈ ಕಾಲಕ್ಕೆ ಅತ್ಯಂತ ಅವಶ್ಯವೋ ಮತ್ತು ಯಾವವು ವ್ಯವಹಾರ್ಯವೋ ಅವುಗಳನ್ನು ಮುಖ್ಯವಾಗಿ ಆರಿಸಿ, ಅವುಗಳಲ್ಲಿ ಕೆಲವುಗಳನ್ನು ಮಾತ್ರ ಕೈಕೊಂಡು ಕಾರ್ಯಾರಂಭ ಮಾಡುವುದು ಯೋಗ್ಯವಾಗಿದೆ.

## ಆತ್ಮ ಸುಧಾರಣೆಯ ಕಾರ್ಯಗಳು

(೧) ವೀರಶೈವ ಧರ್ಮವು ಸ್ವಾನುಭವಕ್ಕೆ ಮತ್ತು ಆತ್ಮೋನ್ನತಿಗೆ ಬಹಳ ಮಹತ್ವವನ್ನು ಕೊಟ್ಟಿರುತ್ತದೆ. ಅದರ ತತ್ವಗಳು ಷಟ್‌ಸ್ಥಲ ಶಾಸ್ತ್ರದಲ್ಲಿ ಅಡಕವಾಗಿವೆ. ಅದರಲ್ಲಿ ಕ್ರಿಯೆಗಳ ಸಂಖ್ಯೆಯು ಬಹಳ ಕಡಿಮೆ. ಕಡಿಮೆ ಇದ್ದರೂ ಇದ್ದವುಗಳು ಗರ್ಭಿತಾರ್ಥವುಳ್ಳವೂ ಭಾವನಾಪೂರ್ಣವೂ ಆಗಿರುತ್ತವೆ. ಅವುಗಳ ಮರ್ಮವನ್ನು ವೀರಶೈವ ಸ್ತ್ರೀ ಪುರುಷರೆಲ್ಲರೂ ಅರಿಯುವದು ಅವಶ್ಯವು. ಇದನ್ನು ಅರಿಯಲು ವಚನ ಶಾಸ್ತ್ರದಷ್ಟು ಅತ್ಯುತ್ತಮವಾದ ವಾಙ್ಮಯವು ವೀರಶೈವ ಧರ್ಮದಲ್ಲಿ ಬೇರೆ ಯಾವದೂ ಇಲ್ಲೆಂದು ಹೇಳಬಹುದು. ಆದ್ದರಿಂದ ಶಿವಾನುಭವ ಸಂಘಗಳ ಪ್ರತಿಯೊಬ್ಬ ಸಭಾಸದನು ವಚನ ಗ್ರಂಥಗಳನ್ನು ಆಗಿಂದಾಗೆ ಓದುವ ಅಭ್ಯಾಸವನ್ನು ಇಟ್ಟುಕೊಳ್ಳಬೇಕು. ಮತ್ತು ಅವುಗಳ ಮೂಲಕ ಷಟ್‌ಸ್ಥಲ ಶಾಸ್ತ್ರದ ಮರ್ಮವನ್ನು ಅರಿಯಬೇಕು.

## ಪರಮಾತ್ಮನೊಬ್ಬನೇ ಇದ್ದಾನೆಂದು ನಂಬುವದು

(೨) ವೀರಶೈವ ಧರ್ಮದಲ್ಲಿ ಪರಮಾತ್ಮನು ಒಬ್ಬನೇ ಇದ್ದಾನೆ ಮತ್ತು ಅನೇಕ ದೇವತೆಗಳನ್ನು ವೀರಶೈವರು ಪೂಜಿಸಬಾರದು, ಎಂಬ ತತ್ವವು ಮುಖ್ಯವಾದುದು. ಅಲ್ಲದೆ ಪರಮಾತ್ಮನು ತನ್ನಲ್ಲಿಯೇ ಇದ್ದಾನೆಂತಲೂ ಅವನನ್ನು ತನ್ನಲ್ಲಿಯೇ ಕಾಣಬೇಕೆಂತಲೂ ವಚನಶಾಸ್ತ್ರವು ಹೇಳುತ್ತಿದೆ. ಮತ್ತು ಅವನನ್ನು ಹೀಗೆ ಕಾಣುವ ರೀತಿಯನ್ನು ಅದು ಸವಿಸ್ತಾರವಾಗಿ ಬೋಧಿಸುತ್ತದೆ. ಇದಕ್ಕೆ ಷಟ್‌ಸ್ಥಲ ಶಾಸ್ತ್ರವೆಂಬ ಹೆಸರು. ಈ ಶಾಸ್ತ್ರದಂತೆ ವೀರಶೈವರು ಶಕ್ಯವಿದ್ದಷ್ಟರಮಟ್ಟಿಗೆ ನಡೆಯುವದು

ಅವರ ಕರ್ತವ್ಯವಾಗಿದೆ. ಆದರೆ ಅನೇಕ ದೇವತೆಗಳನ್ನು ನಂಬಿದರೆ ಈ ಮಾರ್ಗದಂತೆ ನಡಿಯಲು ಶಕ್ಯವಲ್ಲ.

**ಲಿಂಗಪೂಜೆಯ ಮೂಲಕ ಲಿಂಗಾನುಸಂಧಾನದಲ್ಲಿರುವದು.**

(೩) ಎಲ್ಲ ಧರ್ಮಗಳಲ್ಲಿ ಆಚರಣೆಗೋಸ್ಕರ ಕೆಲವು ಧಾರ್ಮಿಕ ಕ್ರಿಯೆಗಳಿರುತ್ತವೆ. ವೀರಶೈವರಲ್ಲಿ ಲಿಂಗಧಾರಣೆಯು ಮಹತ್ವದ್ದಿದ್ದು ಇದು ಅವರ ಮುಖ್ಯ ಧಾರ್ಮಿಕ ಕ್ರಿಯೆಯಾಗಿದೆ. ಆದರೆ ವೀರಶೈವರ ಈ ಕ್ರಿಯೆಯಲ್ಲಿ ಬರೇ ಬಾಹ್ಯ ಉಪಚಾರಗಳು ಮುಖ್ಯವಾದವುಗಳಲ್ಲ. ಅದರಲ್ಲಿ ಆತ್ಮಾನುಸಂಧಾನದ ಅಥವಾ ಶಿವಯೋಗದ ತತ್ವಗಳು ಅಡಕ ವಾಗಿರುತ್ತವೆ. ಈ ರೀತಿಯನ್ನ ವಚನಶಾಸ್ತ್ರದಿಂದ ವೀರಶೈವರು ಅರಿಯ ತಕ್ಕದ್ದು. ಹೀಗೆ ಅರಿತು ಆಚರಿಸಿದಲ್ಲಿ ಮನುಷ್ಯನ ನೈತಿಕ, ಮಾನಸಿಕ, ಬೌದ್ಧಿಕ ಮತ್ತು ಯೌಗಿಕ ಸಾಮರ್ಥ್ಯವು ಬೆಳಯುತ್ತ ಹೋಗುತ್ತದೆ.

**ದುರ್ವ್ಯಸನ, ದುಶ್ಚಟ, ದುರ್ನಡತೆಗಳನ್ನು ಬಿಡುವುದು**

(೪) ಶಿವಶರಣರು ನೈತಿಕಾಚಾರಕ್ಕೆ ಬಹಳ ಮಹತ್ವವನ್ನು ಕೊಟ್ಟಿ ದ್ದಾರೆ. ಉನ್ನತವಾದ ನೈತಿಕಾಚರಣೆಯಿಂದ ಲಿಂಗ ಶಕ್ತಿಯು ಮನುಷ್ಯ ನಲ್ಲಿ ಬಲಗೊಳ್ಳುತ್ತದೆಂದು ಅವರು ಅಭಿಪ್ರಾಯಪಡುತ್ತಾರೆ. ನೀತಿ ಶಾಸ್ತ್ರದ ಮೇಲೆಯೇ ಅವರ ಷಟ್‌ಸ್ಥಲ ಶಾಸ್ತ್ರವು ನೆಲೆಗೊಳಿಸಲ್ಪಟ್ಟಿದೆ. ಅದ್ದರಿಂದ ನೀತಿಯ ವಚನಗಳು ವಚನ ಗ್ರಂಥಗಳಲ್ಲಿ ಆಗಿಂದಾಗ್ಗೆ ಬರುತ್ತವೆ. ಆದ್ದರಿಂದ ಇಂಥ ನೀತಿಯ ವಿಷಯಗಳನ್ನು ಶಕ್ಯವಿದ್ದಷ್ಟು ಎಲ್ಲರೂ ಪಾಲಿಸಲೇಬೇಕು. ಆದರೆ ಬಹುಜನರಲ್ಲಿ ಅನೇಕ ತರದ ದುರ್ವ್ಯಸನಗಳೂ, ದುಶ್ಚಟಗಳೂ, ದುರ್ನಡತೆಗಳೂ ಇರುತ್ತವೆ. ಇವು ಅವರ ಆರ್ಥಿಕ, ಮಾನಸಿಕ, ಶಾರೀರಿಕ ಮತ್ತು ಬೌದ್ಧಿಕ ಹಾನಿಯ ನ್ನುಂಟುಮಾಡುತ್ತವೆ.

**ಕಾಯಕದ ತತ್ವಗಳನ್ನು ತಿಳಿದುಕೊಂಡು ಆಚರಿಸುವದು.**

(೫) ಪ್ರತಿಯೊಬ್ಬ ವೀರಶೈವನು ಒಂದು ಉದ್ಯೋಗವನ್ನು ಮಾಡಿಯೇ ತನ್ನ ಉಪಜೀವನವನ್ನು ಸಾಗಿಸಬೇಕೆಂದು ಶಿವಶರಣರ ತತ್ತ್ವ ವಿದೆ. ಈ ಕಾರ್ಯದಲ್ಲಿ ಅವರ ಲಿಂಗಾನುಸಂಧಾನದ ವಿಚಾರಗಳನ್ನು ಅಡಕ ಮಾಡಿದ್ದಾರೆ. ಈ ದೃಷ್ಟಿಯಿಂದ ಮಾಡಿದ ಉದ್ಯೋಗಕ್ಕೆ ಅವರು ಕಾಯಕ

ವೆಂಬ ಹೆಸರು ಕೊಟ್ಟಿದ್ದಾರೆ. ಆದ್ದರಿಂದ ವೀರಶೈವರು ಯಾರೂ ಭಿಕ್ಷೆಯನ್ನು ಬೇಡಬಾರದು. ಈ ನಿಯಮವು ಮಠಾಧಿಕಾರಿಗಳಿಗೂ, ಜಂಗಮರಿಗೂ, ಸ್ತ್ರೀಯರಿಗೂ ಕೂಡ ಅನ್ವಯಿಸುತ್ತದೆ. ಆದ್ದರಿಂದ ಅವರೆಲ್ಲರೂ ಒಂದು ಕಾಯಕವನ್ನು ಮಾಡುತ್ತ ತಮ್ಮ ನಿರ್ವಾಹವನ್ನು ಸಾಗಿಸತಕ್ಕದ್ದು. ಆದರೆ ಮಠಾಧಿಕಾರಿಗಳು ಮಾಡತಕ್ಕ ಬೋಧಕ ಕಾರ್ಯಗಳು ಕಾಯಕಗಳಿರುತ್ತವೆ. ಸ್ತ್ರೀಯರು ಮಾಡತಕ್ಕ ಶಿಶುಪೋಷಣೆ, ಅಡಿಗೆ, ಮುಂತು ಗೃಹಕೃತ್ಯಾದಿ ಕಾರ್ಯಗಳು ಉತ್ತಮ ತರದ ಕಾಯಕಗಳು. ಹಾಗೆಯೇ ಅನೇಕರು ಮಾಡುತ್ತಿರುವ ಸಾರ್ವಜನಿಕ ಉಪಯುಕ್ತ ಕಾರ್ಯಗಳಾದರೂ ಕಾಯಕಗಳೆಂದು ತಿಳಿಯಿತಕ್ಕದ್ದು. ಆದ್ದರಿಂದ ಇಂಥವರ ಪ್ರಯತ್ನಗಳ ಉಪಯೋಗ ಮಾಡಿಕೊಳ್ಳುವವರು ಅವರಿಗೆ ಯೋಗ್ಯ ಪ್ರತಿಫಲವನ್ನು ಕೊಡಲೇಬೇಕು. ಆದರೆ ಕೆಲವು ಉದ್ಯೋಗಗಳು ಕಾಯಕಗಳೆಂದು ಭಾವಿಸಲು ಬರಲಾರದು. ಉದಾ:—ಸ್ವತಃ ಒಕ್ಕಲುತನ ಮಾಡದೆ ತಮ್ಮ ಎಲ್ಲ ಜಮೀನುಗಳನ್ನು ಬೇರೆಯವರಿಗೆ ಸಾಗಿಸುತ್ತ ತಾವು ಕೆಲಸ ಮಾಡದೆ ಇರುವದು, ಬಾಡಿಗೆಯ ಮನೆಗಳಿದ್ದು, ತಾವು ಏನೂ ಶ್ರಮ ಮಾಡದೆ ಅವುಗಳ ಉತ್ಪನ್ನದ ಮೇಲೆಯೇ ಉಪಜೀವಿಸುವದು, ನಿವೃತ್ತ ಸರಕಾರೀ ಅಧಿಕಾರಿಗಳಿದ್ದು, ಅವರು ತಮ್ಮ ಪೆನಶನದ ಮೇಲೆ ಮಾತ್ರ ಉಪಜೀವಿಸುತ್ತ ಸೋಮಾರಿತನದಿಂದ ಕಾಲಕಳೆಯುವದು, ಶ್ರೀಮಂತರಾಗಿದ್ದು, ತಮ್ಮ ಠೇವಿನಿಂದ ಬರುವ ಬಡ್ಡಿಯಿಂದ ತಮ್ಮ ನಿರ್ವಾಹ ಸಾಗಿಸುವುದು ಇವು ಕಾಯಕಗಳೆಂದು ಹೇಳಲಿಕ್ಕೆ ಬರಲಾರದು. ಇವರೆಲ್ಲರೂ ಬೇರೊಂದು ಉದ್ಯೋಗವನ್ನು ಅಥವಾ ತಮ್ಮ ಇದ್ದ ಉದ್ಯೋಗದಲ್ಲಿಯೇ ಹೆಚ್ಚಿಗೆ ಮನಸ್ಸು ಹಾಕಿ ಅದರಲ್ಲಿ ದುಡಿಯುವದನ್ನು ಮಾಡಬೇಕು. ಮನುಷ್ಯನು ತನ್ನ ಶಾರೀರಿಕ, ಮಾನಸಿಕ ಮತ್ತು ಬೌದ್ಧಿಕ ಶಕ್ತಿ ಇರುವವರೆಗೆ ಒಂದು ಕಾಯಕವನ್ನು ಮಾಡಲೇಬೇಕು. ಇದಕ್ಕೆ ವಿರುದ್ಧವಾದ ವರ್ತನೆಯು ಶಿವಾನುಭವ ಶಾಸ್ತ್ರಕ್ಕೆ ಸಮ್ಮತವಾದುದಲ್ಲ. ಯಾಕಂದರೆ ಕಾಯಕದಲ್ಲಿ ಶಾರೀರಿಕ, ಮಾನಸಿಕ, ಮತ್ತು ಬೌದ್ಧಿಕ ಶ್ರಮದ ಕೆಲಸಗಳಿರುತ್ತವೆ. ಈ ಶ್ರಮದ ಮೂಲಕವಾಗಿಯೇ ಇಂದ್ರಿಯಗಳ ವಿಕಾಸವಾಗುತ್ತದೆ. ಈ ವಿಕಾಸದಲ್ಲಿಯೇ ಆತ್ಮಸುಧಾರಣೆ ಇರುತ್ತದೆ. ಕಾಯಕದ ಉದ್ದೇಶವು ಕೇವಲ ಉಪಜೀವನವಲ್ಲ. ಅದರಲ್ಲಿ ಲಿಂಗ ಶಕ್ತಿಯ ವಿಕಾಸವೂ ಇರುತ್ತದೆ.

**ಕಾಯಕವನ್ನು ಮಾಡಿದ ಬಳಿಕ ಉಳಿದವೇಳೆಯನ್ನು ಉಪಯುಕ್ತ ಕಾರ್ಯಗಳಿಗಾಗಿ ಉಪಯೋಗಿಸುವುದು.**

(೬) ಮನುಷ್ಯನು ತನ್ನ ಉಪಜೀವನದ ಉದ್ಯೋಗವನ್ನು ಮಾಡಿದ ಬಳಿಕ ಅವನಿಗೆ ಕೆಲವು ವೇಳೆಯು ಹೆಚ್ಚಿಗೆ ಉಳಿಯುವದುಂಟು. ಹೀಗೆ ಉಳಿದದ್ದಾದರೆ, ಆಗ ಕೆಲವೊಂದು ಉಪಯುಕ್ತ ಕಾರ್ಯದಲ್ಲಿ ಅಂದರೆ ಆತ್ಮೋದ್ಧಾರ, ಸಮಾಜೋದ್ಧಾರ ಮೊದಲಾದ ಕಾರ್ಯಗಳನ್ನು ಮಾಡುವಲ್ಲಿ, ಆ ವೇಳೆಯನ್ನು ಕಳೆಯತಕ್ಕದ್ದು. ಉಪಜೀವನಕ್ಕೋಸ್ಕರ ಕಾಯಕ ಮಾಡುವ ಅವಶ್ಯಕತೆ ಇಲ್ಲದವರು ಈ ಸೂಚನೆಯನ್ನು ಪಾಲಿಸುವದು ಉಪಯುಕ್ತವಾದುದು.

**ಜೋತಿಷ್ಯ, ಶಕುನ ಮೊದಲಾದವುಗಳನ್ನು ನಂಬದಿರುವುದು.**

(೭) ಜ್ಯೋತಿಷ್ಯ, ಶಕುನ ಇಂಥವುಗಳನ್ನು ಅವಲಂಬಿಸಿ ಕಾರ್ಯ ಮಾಡಬಾರದೆಂದು ಶಿವಶರಣರ ಅಭಿಪ್ರಾಯವದೆ. ಇಲ್ಲಿ ಈ ತರದ ಶಾಸ್ತ್ರಗಳ ಸತ್ಯಾಸತ್ಯತೆಯ ಬಗ್ಗೆ ಪ್ರಶ್ನೆಯು ಇರುವದಿಲ್ಲ. ಆದರೆ ಈ ಮಾರ್ಗದಿಂದ ನಡೆಯುವದು ಶಿವಶರಣರ ಮತಕ್ಕೆ ವಿರೋಧವಾದದ್ದು. ಯಾಕಂದರೆ ಷಟ್‌ಸ್ಥಲ ಶಾಸ್ತ್ರದ ಮರ್ಮವನ್ನು ವೀರಶೈವರು ಅರಿತುಕೊಂಡು ಶಿವಾರ್ಪಣ ಭಾವದಿಂದ ತನ್ನ ಕಾರ್ಯಗಳನ್ನು ಮಾಡಬೇಕು ಮತ್ತು ಹೀಗೆ ಮಾಡುವುದರಿಂದ ಅವನ ಕರ್ಮಗಳು ನಷ್ಟವಾಗುವವು ಎಂದು ಶಿವಶರಣರ ಅಭಿಪ್ರಾಯವಿರುತ್ತದೆ.

**ಅನಾವಶ್ಯಕ ಖರ್ಚ ಮಾಡದಿರುವುದು.**

(೮) ಶಿವಶರಣರು ಶುಭಾಶುಭ ಕಾರ್ಯಗಳು, ಹಬ್ಬ ಹುಣ್ಣಿಮೆಗಳು ತೀರ್ಥ ಯಾತ್ರೆಗಳು, ದೇವಾಲಯಗಳು ಇವುಗಳಿಗೆ ಮಹತ್ವ ಕೊಡುವದಿಲ್ಲ. ಹಾಗೆಯೇ ತಮಗೆ ಸಂಬಂದಿಸದೆ ಇದ್ದ ದೇವತೆಗಳ ಜಾತ್ರೆಗಳನ್ನೂ ಹಬ್ಬಗಳನ್ನೂ ಉತ್ಸವಗಳನ್ನೂ ಅವರು ಮಾಡತಕ್ಕದ್ದಲ್ಲ. ವಚನ ಶಾಸ್ತ್ರದ ಪ್ರಕಾರ ಇವುಗಳ ಮೇಲಿನ ನಂಬಿಗೆಯು ವೀರಶೈವರ ಧಾರ್ಮಿಕ ಉನ್ನತಿಗೆ ಕಾರಣವಲ್ಲ.

**ಶಿವಾರ್ಪಣ ಬುದ್ಧಿಯಿಂದ ತನ್ನ ಕಾರ್ಯಮಾಡುವುದು.**

(೯) ಜನರಲ್ಲಿ ತಮ್ಮ ಕೀರ್ತಿಗಾಗಿ ಕಾರ್ಯಮಾಡುವ ಹಂಬಲವು ಬಹು ಹೆಚ್ಚಿಗಿರುತ್ತದೆ. ಆದರೆ ಶಿವಶರಣರ ತತ್ವದ ಪ್ರಕಾರ ಮನುಷ್ಯನು

ಯಾವ ಕಾರ್ಯ ಮಾಡಿದರೂ ಅದರಿಂದ ಯಾವ ಫಲವನ್ನು ಅಪೇಕ್ಷಿಸದೆ ಶಿವಾರ್ಪಣ ಬುದ್ಧಿಯಿಂದಲೇ ಅದನ್ನು ಮಾಡುವದು ಅವನ ಕರ್ತವ್ಯವು ಕಾಯಕ ಮಾಡುವದು ಅವನ ಕರ್ತವ್ಯವು. ಕಾಯಕ ಮಾಡುವಲ್ಲಿ ಆತ್ಮಪ್ರತಿಷ್ಠೆ ಎಂಬುದು ಅವನಲ್ಲಿ ಇರಕೂಡದು. ಆದರೆ ಸಾಮಾನ್ಯವಾಗಿ ಜನರು ಕೇವಲ ಆತ್ಮಪ್ರತಿಷ್ಠೆಗಾಗಿ ಕಾರ್ಯ ಮಾಡುತ್ತಿರುವುದರಿಂದ ಅವರಲ್ಲಿ ಪರಸ್ಪರ ಕಲಹಗಳು, ಈರ್ಷೆಗಳು, ಅಸೂಯೆಗಳು, ಮನಸ್ತಾಪಗಳು ಉಂಟಾಗುತ್ತವೆ. ಮತ್ತು ಸಮಾಜದಲ್ಲಿ ಪ್ರೇಮ ಮತ್ತು ಐಕ್ಯತೆಯು ಉಳಿಯುವದಿಲ್ಲ.

### ಕುಟುಂಬ ಸುಧಾರಣೆಯ ಕಾರ್ಯಗಳು.

ಹಿಂದೆ ಸೂಚಿಸಿದಂತೆ ಆತ್ಮ ಸುಧಾರಣೆಯನ್ನು ಮಾಡಿಕೊಳ್ಳುವುದು ಪ್ರತಿಯೊಬ್ಬನ ಕರ್ತವ್ಯವಾಗಿದೆ. ಈ ಕಾರ್ಯವು ಎಷ್ಟು ಮಹತ್ವವಾದದ್ದೋ, ಅಷ್ಟೇ ತನ್ನ ಮನೆಯಲ್ಲಿರುವ ಎಲ್ಲ ಜನರನ್ನು ಸುಧಾರಿಸುವದು ಮಹತ್ವವಾದದ್ದು. ಕುಟುಂಬದಲ್ಲಿ ತಾನು, ತನ್ನ ಹೆಂಡಿರು ಮಕ್ಕಳು ತನ್ನ ಆಶ್ರಿತರು, ಸೇವಕರು ಇವರೆಲ್ಲರೂ ಬರುತ್ತಾರೆ. ಇವರು ಸುಧಾರಿಸಿದವರು ಇರದಿದ್ದರೆ ಆತ್ಮ ಸುಧಾರಣೆಗೆ ಪ್ರತಿಬಂಧವು ಉಂಟಾಗುತ್ತದೆ. ಆದ್ದರಿಂದ ಕೆಳಗಿನ ಸೂಚನೆಗಳು ಮಾಡಲ್ಪಟ್ಟಿವೆ.

### ತನ್ನ ಕುಟುಂಬದಲ್ಲಿ ವಚನಗ್ರಂಥಗಳ ಅಭ್ಯಾಸ ನಡಿಸುವುದು.

(೧೦) ಪ್ರತಿಯೊಬ್ಬನು ಶಿವಶರಣರ ತತ್ವಗಳನ್ನು ತಾನು ಅರಿತು ಕೊಳ್ಳುವದಲ್ಲದೆ ಅವುಗಳನ್ನು ಮನೆಯಲ್ಲಿರುವ ಎಲ್ಲರಿಗೂ ತಿಳಿಸಿ ಹೇಳಿ ಅವರು ಅವುಗಳಂತೆ ಶಕ್ಯವಿದ್ದಷ್ಟರಮಟ್ಟಿಗೆ ನಡೆಯುವಂತೆ ಪ್ರಯತ್ನಿಸುವದು ಅವಶ್ಯವು. ಹೀಗೆ ವರ್ತಿಸುವದು ಪ್ರತಿಯೊಬ್ಬ ಕುಟುಂಬಸ್ಥನ ಮುಖ್ಯ ಕರ್ತವ್ಯವೆಂದು ಭಾವಿಸಬೇಕು. ಇದಕ್ಕೋಸ್ಕರ ಅವನು ವಾರದಲ್ಲಿ ಅಥವಾ ಪ್ರತಿದಿನ ಕೆಲವೊಂದು ವೇಳೆಯನ್ನು ಗೊತ್ತುಪಡಿಸಿ ಆಗ ಕುಟುಂಬದವರನ್ನೆಲ್ಲ ಒತ್ತಟ್ಟಿಗೆ ಕೂಡಿಸಿ ಶಿವಶರಣರ ವಚನಗಳನ್ನು ತನಗೆ ತಿಳಿದಷ್ಟರಮಟ್ಟಿಗೆ ಅವರಿಗೆ ತಿಳಿಸಿಹೇಳಬೇಕು. ಇದಲ್ಲದೆ ತನ್ನ ನಿತ್ಯದ ವ್ಯವಹಾರದಲ್ಲಿ ತನಗೆ ಕಂಡ.ಬಂದ ಅನುಭವಗಳನ್ನೂ ಸಮಾಜದಲ್ಲಿ ನಡೆದ ಅಥವಾ ನಡೆಯುತ್ತಿರುವ ವಿಶೇಷ ಸಂಗತಿಗಳನ್ನೂ ಅವರಿಗೆ ತಿಳಿಸಿಹೇಳಬೇಕು. ಈ ಕ್ರಮವು ಪ್ರತಿ ಕುಟುಂಬದಲ್ಲಿಯೂ ಯಾವಾಗಲೂ ನಡೆಯಬೇಕು.

## ಕುಟುಂಬದಲ್ಲಿ ಜ್ಞಾನ ಸಂಪಾದನೆಯ ಕಾರ್ಯಗಳಿಗೋಸ್ಕರ ಪ್ರಯತ್ನಿಸುವುದು.

(೧೧) ವೀರಶೈವ ಧರ್ಮದಲ್ಲಿ ಜ್ಞಾನ ಮತ್ತು ಅನುಭವ ಇವುಗಳಿಗೆ ಬಹಳ ಮಹತ್ವದ ಸ್ಥಾನವಿದೆ. ಆದ್ದರಿಂದ ಎಲ್ಲರೂ ಶಿವಶರಣರ ವಿಚಾರಗಳನ್ನು ತಾವೇ ಓದಿಕೊಂಡು ತಿಳಿದುಕೊಳ್ಳುವುದು ಬಹು ಅಗತ್ಯವು. ಆದ್ದರಿಂದ ಮನೆಯಲ್ಲಿರುವ ಸಣ್ಣವರೂ, ದೊಡ್ಡವರೂ, ಸ್ತ್ರೀಯರೂ, ಪುರುಷರೂ ಎಲ್ಲರೂ ಓದುಬರಹ ಕಲಿಯಬೇಕು. ಅವರಲ್ಲಿ ಕೆಲವರು ಕೆಲಮಟ್ಟಿಗೆ ಮಾತ್ರ ಕಲಿತವರಿರಬಹುದು. ಅವರು ಇನ್ನೂ ಹೆಚ್ಚಿಗೆ ಜ್ಞಾನ ಸಂಪಾದನೆ ಮಾಡುವಂತೆ ಕುಟುಂಬದ ಯಜಮಾನನು ಮತ್ತು ಅದರಲ್ಲಿಯ ಎಲ್ಲ ಸುಶಿಕ್ಷಿತ ಸ್ತ್ರೀಪುರುಷರು ಪ್ರಯತ್ನಿಸಬೇಕು.

## ಮನೆತನದ ದಿನಚರಿಯ ಕಾರ್ಯಗಳನ್ನು ಸುವ್ಯವಸ್ಥೆಯಿಂದಲೂ ನಿಯಮಿತತನದಿಂದಲೂ ಮಾಡುವುದು.

(೧೨) ನಮ್ಮ ದೇಶದಲ್ಲಿ ಶಿಸ್ತು, ಪದ್ಧತಿ, ಅಚ್ಚುಕಟ್ಟುತನ, ವ್ಯವಸ್ಥೆ, ಸ್ವಚ್ಛತೆ ಇವು ಇರದ್ದರಿಂದ ಅದು ಅನೇಕ ಹಾನಿಗಳಿಗೆ ಈಡಾಗಿರುತ್ತದೆ. ಈ ಸ್ಥಿತಿಯುಂಟಾಗಲಿಕ್ಕೆ ಮನೆತನಗಳಲ್ಲಿರುವ ಅವ್ಯವಸ್ಥೆಯೇ ಮುಖ್ಯ ಕಾರಣವು. ಆದ್ದರಿಂದ ಸ್ತ್ರೀಪುರುಷರು ತಮ್ಮ ಉಡಿಗೆ ತೊಡಿಗೆಗಳನ್ನು ಮತ್ತು ಮನೆಯಲ್ಲಿರುವ ಎಲ್ಲ ಸಾಮಾನುಗಳನ್ನು ಅಚ್ಚುಕಟ್ಟುತನದಿಂದ ಮತ್ತು ಸ್ವಚ್ಛತೆಯಿಂದ ಇಡಲು ಪ್ರಯತ್ನಿಸತಕ್ಕದ್ದು. ಅದರಂತೆ ಮನೆತನದಲ್ಲಿ ದಿನಾಲು ನಡೆಯುವ ದಿನಚರಿಯ ಕಾರ್ಯಗಳನ್ನಾದರೂ ಸುವ್ಯವಸ್ಥೆಯಿಂದ ಮತ್ತು ವೇಳೆಗೆ ಸರಿಯಾಗಿ ಮಾಡಲು ಪ್ರಯತ್ನಿಸತಕ್ಕದ್ದು. ಪಾಶ್ಚಿಮಾತ್ಯ ರಾಷ್ಟ್ರಗಳಲ್ಲಿಯ ಮನೆತನಗಳಲ್ಲಿ ಈ ವ್ಯವಸ್ಥೆಯು ತಪ್ಪದೆ ಇರುವದುಂಟು.

## ಕುಟುಂಬದ ಜನರೆಲ್ಲರೂ ಆರೋಗ್ಯದ ನಿಯಮಗಳನ್ನು ತಿಳಿದುಕೊಂಡು ಅವುಗಳನ್ನು ಪಾಲಿಸುವುದು.

(೧೩) ಶಿವಶರಣರು ಆರೋಗ್ಯತೆಗೆ ಮತ್ತು ಶರೀರ ಪಾಲನೆಗೆ ಬಹಳ ಮಹತ್ವವನ್ನು ಕೊಟ್ಟಿದ್ದಾರೆ. ಇದು ಅವರ ವಚನಗಳಿಂದ ತಿಳಿದು ಬರುತ್ತಿದೆ, ಚಿರಂಜೀವಿ ಎಂದರೆ 'ನಿರೋಗಿ' ಎಂತಲೂ 'ಬಹು

ದಿವಸ ಬಾಳುವವ ' ಎಂತಲೂ ಅವರು ಹೇಳಿದ್ದಾರೆ. ಇಂದ್ರಿಯಗಳ ತೀಕ್ಷ್ಣತೆಯು ಶಿವಾನುಭವದ ಕಾರ್ಯಗಳಿಗೆ ಯಾವಾಗಲೂ ಬಹಳ ಸಹಾಯಕಾರಿಯು. ಆದ್ದರಿಂದ ಕುಟುಂಬದ ಜನರೆಲ್ಲರೂ ಆರೋಗ್ಯದ ನಿಯಮಗಳನ್ನು ಅರಿತುಕೊಂಡು ಅವುಗಳನ್ನು ಪಾಲಿಸತಕ್ಕದ್ದು. ಇದೊಂದು ತಾವು ಮಾಡತಕ್ಕ ಧಾರ್ಮಿಕ ಕೃತ್ಯದೆಂದು ಭಾವಿಸಬೇಕು.

### ಮನೆಯಲ್ಲಿ ಶಿವಾನುಭವ ಮಂಟಪವನ್ನು ಸ್ಥಾಪಿಸುವುದು.

(೧೪) ಕುಟುಂಬದ ಜನರೆಲ್ಲರೂ ಶಿವಾನುಭವದ ವಿಚಾರಗಳನ್ನರಿತು ಅದರಂತೆಯೇ ಆಚರಿಸುವದು ಅವಶ್ಯವಾಗಿರುವದರಿಂದ ಈ ಕಾರ್ಯವನ್ನು ಮಾಡುವದಕ್ಕೋಸ್ಕರ ತಾನಿರತಕ್ಕ ಮನೆಯಲ್ಲಿಯ ಕೆಲವೊಂದು ಭಾಗವನ್ನು ಕಾದಿಡತಕ್ಕದ್ದು. ಇದಕ್ಕೆ ' ಶಿವಾನುಭವ ಮಂಟಪ ' ಎಂಬ ಹೆಸರು ಇರತಕ್ಕದ್ದು. ಇದನ್ನು ಶುದ್ಧವಾಗಿಯೂ ಪವಿತ್ರವಾಗಿಯೂ ಇಡತಕ್ಕದ್ದು.

### ಈ ಕಾರ್ಯಕ್ರಮ ಪತ್ರಿಕೆಗಳಲ್ಲಿಯ ಕಾರ್ಯಗಳನ್ನು ಕ್ರಮೇಣ ಕೈಕೊಳ್ಳುತ್ತ ಹೋಗುವುದು.

(೧೫) ಈ ಕಾರ್ಯಕ್ರಮ ಪತ್ರಿಕೆಯಲ್ಲಿ ಅನೇಕ ಸೂಚನೆಗಳಿದ್ದು ಅವುಗಳನ್ನು ಪ್ರತಿಯೊಬ್ಬನು ತನ್ನ ಕುಟುಂಬದ ಜನರಿಗೆಲ್ಲ ತಿಳಿಸಿ ಹೇಳತಕ್ಕದ್ದು. ಮತ್ತು ಅವುಗಳಲ್ಲಿ ಅವರು ತಮಗೆ ಬೇಕಾದ ಕನಿಷ್ಟ ಯಾವದಾದರೂ ಒಂದನ್ನು ಆರಂಭದಲ್ಲಿ ಕೈಕೊಳ್ಳುವಂತೆಯೂ ಪ್ರೋತ್ಸಾಹಿಸತಕ್ಕದ್ದು.

### ಶಿವಾನುಭವ ಸಂಘಕ್ಕೋಸ್ಕರ ಮಾಡುವ ಕಾರ್ಯಗಳು

### ಶಿವಾನುಭವ ಸಂಘದ ಸಭಾಸದನಾಗಿರುವುದು.

(೧೬) ಮನುಷ್ಯನು ತನ್ನ ಮತ್ತು ತನ್ನ ಕುಟುಂಬದ ಸುಧಾರಣೆಯನ್ನು ಮಾಡುವ ಕಾರ್ಯದಲ್ಲಿ ಶಿವಾನುಭವ ಸಂಘಗಳು ಅವನಿಗೆ ಬಹಳ ಸಹಾಯಕಾರಿಯಾದವುಗಳು. ಅದರಂತೆಯೇ ಅವುಗಳು ಜನಸುಧಾರಣೆಯ ಕಾರ್ಯಗಳಲ್ಲಿಯೂ ಅವನಿಗೆ ಸಹಾಯವಾಗುತ್ತವೆ. ಶಿವಾನುಭವ ಸಂಘಗಳಿಗೆ ಸಭಾಸದನಾಗುವ ಉದ್ದೇಶಗಳು ಇವೇ ಇರುತ್ತವೆ. ಆದ್ದ

ರಿಂದ ಶಿವಶರಣರ ವಿಚಾರಗಳು ಸಮ್ಮತವಿರುವಂಥ, ಅವುಗಳಿಗನುಸಾರ ವಾಗಿ ನಡೆಯಲು ಪ್ರಯತ್ನಿಸುವಂಥ, ಮತ್ತು ಉಚ್ಚ ವರ್ತನೆಯುಳ್ಳಂಥ ಸಭಾಸದರಿರುವ ಒಂದು ಶಿವಾನುಭವ ಸಂಘಕ್ಕೆ ಅವನು ಸಭಾಸದನಾಗ ತಕ್ಕದ್ದು. ಆಮೇಲೆ ಅವನು ಅದರ ಕಾರ್ಯಗಳಲ್ಲಿ ಪೂರ್ಣ ಮನಸ್ಸು ಹಾಕಿ ಸುಧಾರಣೆಯ ಕೆಲವೊಂದು ಕಾರ್ಯಕ್ರಮವನ್ನು ಕೈಕೊಂಡು ಅದು ಪ್ರಚಾರದಲ್ಲಿ ಬರುವಂತೆ ಪ್ರಯತ್ನಿಸತಕ್ಕದ್ದು. ಈ ಕಾರ್ಯಕ್ರಮ ದಲ್ಲಿ ತನ್ನ ಮತ್ತು ತನ್ನ ಕುಟುಂಬದವರಿಗೋಸ್ಕರ ತಾನು ಮಾಡತಕ್ಕ ಕಾರ್ಯಗಳೇ ಮಹತ್ವವಾದವುಗಳಿರುತ್ತವೆ. ಆದ್ದರಿಂದ ಶಿವಾನುಭವ ಸಂಘಗಳು ತಮ್ಮ ಸಭಾಸದರಿಗೆ ಯಾವ ಸುಧಾರಣೆಯ ಕಾರ್ಯಗಳು ಶಕ್ಯವೋ ಅಂಥವುಗಳನ್ನು ಅವು ಕೈಕೊಳ್ಳತಕ್ಕದ್ದು. ಈ ಕಾರ್ಯಗಳು ಅವರಿಗೆ ಸಿದ್ಧಿಸುತ್ತ ಹೋದಹಾಗೆ ಸಾರ್ವಜನಿಕ ಕಾರ್ಯಗಳನ್ನು ಮಾಡಲು ಅವಶ್ಯವಿರುವ ಯೋಗ್ಯತೆಯು ಅವರಿಗೆ ಪ್ರಾಪ್ತವಾಗುತ್ತ ಹೋಗುತ್ತವೆ.

### ಶಿವಾನುಭವ ಸಂಘದ ಸಭಾಸದರು ಪರಸ್ಪರ ಸಹಕಾರ, ಪರಸ್ಪರ ಪ್ರೇಮ ಮತ್ತು ಪರಸ್ಪರ ಬಂಧುಭಾವದಿಂದ ವರ್ತಿಸುವುದು.

(೧೭) ಶಿವಾನುಭವ ಸಂಘಗಳ ಸಭಾಸದರು ಯಾವ ಸಂಗತ, ಜಾತಿ, ಮತ, ಧರ್ಮದವರಿದ್ದರೂ ಕೂಡ ಅವರಲ್ಲಿ ಯಾವಾಗಲೂ ಪರಸ್ಪರ ಸಹಕಾರ, ಪರಸ್ಪರ ಪ್ರೇಮ, ಬಂಧು ಭಾವಗಳು ಇರತಕ್ಕದ್ದು. ಸಭಾಸದರಲ್ಲಿ ಮಠಾಧಿಕಾರಿಗಳು, ಅಧಿಕಾರಸ್ಥರು, ಶ್ರೀಮಂತರು, ಬಡವರು, ಸ್ಪೃಶ್ಯರು, ಅಸ್ಪೃಶ್ಯರು, ಹೀಗೆ ಅನೇಕರು ಇರಬಹುದು. ಆದರೆ ಅವರಲ್ಲಿ ಯಾರೂ ಶಿವಾನುಭವ ಸಂಘದವರು ಕೈಕೊಂಡ ಕಾರ್ಯಗಳಲ್ಲಿ ತಮ್ಮ ತಮ್ಮಲ್ಲಿ ಯಾವ ತರದ ಉಚ್ಚ ನೀಚ ಭಾವವನ್ನು ಅಥವಾ ಭಿನ್ನತೆಯನ್ನು ಕಲ್ಪಿಸಕೂಡದು.

### ಶಿವಾನುಭವ ಸಂಘಗಳ ಸಭಾಸದರಲ್ಲಿ ಪರಸ್ಪರ ಲಗ್ನ, ಪರಸ್ಪರ ಊಟ ಉಪಚಾರಗಳಿಗೋಸ್ಕರ ಪ್ರೋತ್ಸಾಹಿಸುವುದು.

(೧೮) ವೀರಶೈವ ಸಮಾಜದಲ್ಲಿ ಅನೇಕ ಒಳಪಂಗಡಗಳಿವೆ. ಅವುಗ ಳಲ್ಲಿ ಪರಸ್ಪರ ಭೋಜನ ಮತ್ತು ಪರಸ್ಪರ ಲಗ್ನವ್ಯವಹಾರಾದಿಗಳು ನಿರಾ ತಂಕವಾಗಿ ನಡೆಯುವದಿಲ್ಲ. ಆದರೆ ಇದು ಶಿವಶರಣರ ವಿಚಾರಗಳಿಗೆ

ಸಮ್ಮತವಾದುದಲ್ಲ. ಈ ಸ್ಥಿತಿಯನ್ನು ದೂರ ಮಾಡುವದು ಎಲ್ಲ ಶಿವಾನುಭವ ಸಂಘಗಳ ಮುಖ್ಯ ಕಾರ್ಯವಾಗಿದೆ.

ಆದರೆ ಇಂಥ ಕಾರ್ಯಗಳನ್ನು ಮಾಡುವಲ್ಲಿ ಆರಂಭದಲ್ಲಿ ಬಹು ಜಾಗ್ರತೆಯಿಂದ ವರ್ತಿಸುವದು ಅವಶ್ಯವಾಗಿದೆ. ಯಾಕಂದರೆ ಈ ಕಾರ್ಯಗಳು ವ್ಯಕ್ತಿಯ ಬಲವು ಮತ್ತು ಅವನ ಮನಸ್ಸಿನ ಸಿದ್ಧತೆ ಇವುಗಳ ಮೇಲೆ ಅವಲಂಬಿಸಿರುತ್ತವೆ. ಬಹು ದಿವಸ ನೆಲೆಗೊಂಡ ರೂಢಿಗಳು ಬಲಾತ್ಕಾರದಿಂದ ಹೋಗಲಾರವು. ಒಂದು ವೇಳೆ ಬಲಾತ್ಕಾರದಿಂದ ಅವುಗಳನ್ನು ಹೋಗಲಾಡಿಸಲು ಪ್ರಯತ್ನಿಸಿದ್ದಾದರೆ ಸಮಾಜದಲ್ಲಿ ಕಲಹಗಳೆದ್ದು ವಿಪರೀತ ಪರಿಣಾಮಗಳಾಗುತ್ತವೆ.

ವಚನಶಾಸ್ತ್ರದ ತತ್ವಗಳನ್ನು ಪ್ರಸಾರಮಾಡುವ ಕಾರ್ಯಗಳಿಗೆ ಸಹಾಯ ಮಾಡುವದು.

(೧೯) ವಚನಶಾಸ್ತ್ರವು ಮಾನವೀ ಜನಾಂಗದ ಹಿತಕ್ಕೋಸ್ಕರ ಇರುತ್ತದೆ. ಆದ್ದರಿಂದ ಅದರ ತತ್ವಗಳನ್ನು ಬಹುಜನ ಸಮಾಜದಲ್ಲಿ ಪ್ರಸಾರ ಪಡಿಸುವದು ಅವಶ್ಯವಿದೆ. ಇದಕ್ಕೆ ವ್ಯಾಖ್ಯಾನಗಳು, ಪ್ರವಚನಗಳು, ವೀರಶೈವರಲ್ಲಿ ಆಗಿಹೋದ ಶಿವಶರಣರ ಮತ್ತು ಮಹಾಪುರುಷರ ಜಯಂತಿಗಳು, ವಚನಗಾಯನ, ವಚನಸ್ಪರ್ಧೆಗಳು, ಪ್ರಹಸನಗಳು, ಶಿವಶರಣರಿಗೆ ಸಂಬಂಧಿಸಿದ ನಾಟಕಗಳು, ಅನೇಕತರದ ಪುಸ್ತಕಗಳ ಪ್ರಸಾರ, ವ್ಯಾಖ್ಯಾನಗಳು, ಅಭ್ಯಾಸಕೂಟಗಳು, ಭಜನಾ ಸಂಘಗಳು, ಶಿವಶರಣರ ರಗಳೆಗಳು ಮತ್ತು ಲಾವಣಿಗಳ ದಾಡುವಿಕೆ ಇವೇ ಮೊದಲಾದ ಪ್ರಯತ್ನಗಳ ಮೂಲಕ ಯಾವಾಗಲೂ ನಡೆಯುತ್ತಿರಬೇಕು. ಇಂಥ ಕಾರ್ಯಕ್ರಮಗಳನ್ನು ಶಿವಾನುಭವ ಸಂಘಗಳು ಅವಶ್ಯವಾಗಿ ಗ್ರಾಮಗಳಲ್ಲಿ ಆಗಿಂದಾಗ್ಗೆ ಏರ್ಪಡಿಸಬೇಕು.

ವೀರಶೈವ ಮಹಾಪುರುಷರನ್ನು ಪೂಜ್ಯ ಭಾವದಿಂದ ಕಾಣುವದು.

(೨೦) ವೀರಶೈವ ಸಮಾಜದಲ್ಲಿ ಅನೇಕ ಮಹಾಪುರುಷರು ಆಗಿ ಹೋಗಿದ್ದಾರೆ. ಅವರಲ್ಲಿ ಅನೇಕರು ಧರ್ಮಪ್ರವರ್ತಕರೂ, ಶಿವಾನುಭವಿಗಳೂ, ರಾಜಕೀಯ ಪುರುಷರೂ, ಧಾರ್ಮಿಕ ಪುರುಷರೂ, ಗ್ರಂಥಕಾರರೂ, ವಚನಕಾರರೂ, ಸಾಧುಗಳೂ ಇದ್ದಾರೆ. ಅವರು ರೇವಣ

ಸಿದ್ಧ, ಪ್ರಭುದೇವ, ದೇವರದಾಸಿಮಯ್ಯ, ಏಕೋರಾಮಾರಾಧ್ಯ, ಶಂಕರ ದಾಸಿಮಯ್ಯ, ಪಂಡಿತಾರಾಧ್ಯ, ಮರುಳಾರಾಧ್ಯ, ರುದ್ರಮುನಿ, ಬಸವ, ಮಹಾದೇವಿಯಕ್ಕ, ಸಿದ್ಧರಾಮ, ಮಡಿವಾಳ ಮಾಚಿದೇವ, ಚೆನ್ನಬಸವ ಹಡಪದಪ್ಪಣ್ಣ, ಚನ್ನಯ್ಯ, ಮಧುವರಸ, ಕಕ್ಕಯ್ಯ, ಹರಳಯ್ಯ, ಹರಿಹರ, ರಾಘವಾಂಕ, ಸಾರಂಗದೇವ, ತೋಂಟದಾರ್ಯ, ಷಡಕ್ಷರದೇವ, ಕೆಳದಿಯ ಬಸವರಾಜ, ಅಂಬಿಗರ ಚೌಡಯ್ಯ, ಇವರೇ ಮೊದಲಾದವರು ಇದ್ದಾರೆ. ಆದರೆ ಈಚೆಗೆ ಕೆಲವರು ಅವರನ್ನು ಹಳಿಯುವ ಪ್ರವೃತ್ತಿಯನ್ನು ತೋರಿಸುವದುಂಟು. ಇದು ಬಹುಶಃ ಅವರ ಚರಿತ್ರೆಗಳನ್ನು ತಿಳಿಯದ್ದರ ಮೂಲಕ ಇರುತ್ತದೆ. ಆದರೆ ಶಿವಾನುಭವ ಸಂಘಗಳು ಇಂಥ ಸ್ಥಿತಿಯನ್ನು ದೂರ ಮಾಡಲು ಅವಶ್ಯವಾಗಿ ಪ್ರಯತ್ನಿಸತಕ್ಕದ್ದು.

ಶಿವಾನುಭವ ಸಂಘಗಳು ತಮ್ಮ ಸಭಾಸದರ ಔದ್ಯೋಗಿಕ ಮತ್ತು ಆರ್ಥಿಕ ಸುಧಾರಣೆಗಳಿಗೋಸ್ಕರ ಪರಸ್ಪರ ಸಹಾಯ ಮಾಡುವದು.

(೨೧) ಶಿವಾನುಭವ ಸಂಘಗಳ ಸಭಾಸದರು ಕಾಯಕದ ದೃಷ್ಟಿಯಿಂದ ಉಚ್ಚ ಸ್ಥಿತಿಯನ್ನು ಹೊಂದಲು ಪ್ರಯತ್ನಿಸುವದು ಅವಶ್ಯವು. ಇದು ವೈಯ್ಯಕ್ತಿಕ ಮತ್ತು ಸಾಮೂಹಿಕ ಪ್ರಯತ್ನಗಳಿಂದ ಜರುಗತಕ್ಕದ್ದು. ಸಾಮೂಹಿಕ ಪ್ರಯತ್ನಗಳನ್ನು ಮಾಡುವಲ್ಲಿ ಸಭಾಸದರು ಯಾವಾಗಲೂ ಪರಸ್ಪರ ಸಹಾಯ ಮಾಡತಕ್ಕದ್ದು. ಸಂಘಗಳಾದರೂ ಈ ವಿಷಯಕ್ಕೆ ಮಹತ್ವದ ಸ್ಥಾನವನ್ನು ಕೊಟ್ಟು ಅವಶ್ಯಕ ಕಾರ್ಯಕ್ರಮಗಳನು ಕೈಕೊಳ್ಳತಕ್ಕದ್ದು. ಹೀಗೆ ಪ್ರಯತ್ನಿಸುವಲ್ಲಿ ಎಲ್ಲ ಕಡೆಯ ಶಿವಾನುಭವ ಸಂಘಗಳು ಪರಸ್ಪರ ಸಹಾಯ ಮಾಡತಕ್ಕದ್ದು. ಒಂದು ವೇಳೆ ಇತರ ಸಮಾಜದವರೊಡನೆ ಅವು ಪ್ರಯತ್ನ ಮಾಡುವದು ಅವಶ್ಯವಿದ್ದಲ್ಲಿ ಹಾಗೆ ಅವು ಪ್ರಯತ್ನಿಸಲೂ ಬೇಕು.

ವೀರಶೈವ ವಾಙ್ಮಯ ಮತ್ತು ಕಲೆಗಳಿಗೆ ಸಹಾಯ ಮಾಡುವದು

(೨೨) ಪ್ರತಿಯೊಬ್ಬನು ತನ್ನ ಮತ್ತು ತನ್ನ ಕುಟುಂಬದ ಸುಧಾರಣೆಗಾಗಿ ಅವಶ್ಯಕ ಖರ್ಚನ್ನು ಮಾಡಲೇಬೇಕಾಗುತ್ತದೆ. ಆದರೆ ಇಂಥ ಖರ್ಚಿನಲ್ಲಿ ತನ್ನ ಮತ್ತು ತನ್ನ ಸಮಾಜದ ಸಂಸ್ಕೃತಿ ಪೋಷಣೆಗಾಗಿ ಅಂದರೆ ವಾಙ್ಮಯ, ಕಲೆ, ಇವೇ ಮೊದಲಾದವುಗಳ ಅಭಿವೃದ್ಧಿಗಾಗಿ ತನ್ನ ಉತ್ಪನ್ನದ ಕೆಲವು ಭಾಗ ಹಣವನ್ನು ಕಾದಿಡುವದು ಬಹು ಅವಶ್ಯವು.

ಈ ಹಣದ ಉಪಭೋಗವನ್ನು ಸಭಾಸದರು ತಮ್ಮ ಮನೆಯಲ್ಲಿ ಪುಸ್ತಕಾಲಯ ಮೊದಲಾದವುಗಳನ್ನು ಸ್ಥಾಪಿಸುವದಕ್ಕೋಸ್ಕರ ವಿನಿಯೋಗಿಸತಕ್ಕದ್ದು. ಆದರೆ ಸಂಘದ ಸಭಾಸದರ ಆರ್ಥಿಕ ಮೊದಲಾದ ಪರಿಸ್ಥಿತಿಗೋಸ್ಕರ ಇಂಥ ಪ್ರಯತ್ನಗಳು ಅವರಿಗೆ ಶಕ್ಯವಿಲ್ಲದೆ ಹೋದರೆ ಅಂಥವರಿಗೋಸ್ಕರ ಪುಸ್ತಕಾಲಯ ಮೊದಲಾದ ಸಾಮಾನ್ಯ ಏರ್ಪಾಡುಗಳನ್ನು ಮಾಡಿ ಅವುಗಳಿಗೋಸ್ಕರ ಹೀಗೆ ಕಾದಿಟ್ಟ ಹಣವನ್ನು ವಿನಿಯೋಗಿಸತಕ್ಕದ್ದು.

ಶಿವಾನುಭವ ಸಂಘಗಳಿಗೆ ಸಹಾಯ ಮಾಡುವದು.

(೨೩) ಸಭಾಸದರು ಶಿವಾನುಭವ ಸಂಘಗಳ ಕಾರ್ಯಗಳಿಗಾಗಿ ತಮ್ಮ ಉತ್ಪನ್ನದಲ್ಲಿ ಕೆಲವು ಭಾಗ ಹಣವನ್ನು ಕೊಡುವದು ಅವಶ್ಯವು. ಆದ್ದರಿಂದ ಕೆಳಗಿನ ಸೂಚನೆಯು ಮಾಡಲ್ಪಟ್ಟಿದೆ. ಅದು ಯಾವದೆಂದರೆ:—

"ನಾನು ನನ್ನ ವಾರ್ಷಿಕ ಉತ್ಪನ್ನದಲ್ಲಿ ೧೦೦ರಲ್ಲಿ ೧ಕ್ಕೆ ಕಡಿಮೆ" ಯಲ್ಲದಷ್ಟು ಹಣವನ್ನು ಶಿವಾನುಭವ ಸಂಘಕ್ಕೆ ಅರ್ಪಿಸುವೆನು.

ಶಿವಾನುಭವ ಸಂಘಗಳ ಅಧಿಕಾರ ಸ್ಥಾನಗಳನ್ನು ದೊರಕಿಸಲು ವಿಶೇಷ
ಪ್ರಯತ್ನ ಮಾಡದೆ ಇರುವದು.

(೨೪) ಶಿವಾನುಭವ ಸಂಘಗಳಿಗೋಸ್ಕರ ಅಧ್ಯಕ್ಷ, ಕಾರ್ಯದರ್ಶಿ, ಹೀಗೆ ಕೆಲವು ಕಾರ್ಯಕರ್ತರನ್ನು ನೇಮಿಸುವ ವಾಡಿಕೆಯು ಈಗ ಇರುತ್ತದೆ. ಕೆಲವು ದಿವಸಗಳ ತರುವಾಯ ಈ ಸಂಘಗಳ ಮಹತ್ವವು ಬೆಳೆದ ಹಾಗೆ ಇಂಥ ಅಧಿಕಾರ ಸ್ಥಾನಗಳನ್ನು ಪಡೆಯಲು ಮೇಲಾಟಗಳು ಸಭಾಸದರಲ್ಲಿ ನಡೆಯಬಹುದು. ಹೀಗಾಗುವದು ಬಹು ಅನಿಷ್ಟವು. ಆದ್ದರಿಂದ ಈ ಸ್ಥಿತಿಯುಂಟಾಗದಂತೆ ಮೊದಲಿನಿಂದಲೇ ಸಭಾಸದರು ಎಚ್ಚರ ಪಡುವದು ಅವಶ್ಯವು. ಆದ್ದರಿಂದ ಈ ಕೆಳಗಿನ ಸೂಚನೆಯು ಮಾಡಲ್ಪಟ್ಟಿದೆ. ಅದು ಯಾವದೆಂದರೆ:—

"ನಾನು ಶಿವಾನುಭವ ಸಂಘದ ಅಧಿಕಾರ ಸ್ಥಾನಗಳನ್ನು ಪಡೆಯಲು" ಯಾವ ತರದ ವಿಶೇಷ ಪ್ರಯತ್ನಗಳನ್ನು ಮಾಡುವದಿಲ್ಲ. ನಾನು

ಯೋಗ್ಯತೆಯನ್ನು ನೋಡಿಯೇ ನನ್ನ ಮತವನ್ನು ಕೊಡುವೆನು. ಮತ್ತು ಸಂಘದವರು ನನ್ನನ್ನು ಯಾವ ಸ್ಥಾನಕ್ಕೆ ನೇಮಿಸುತ್ತಾರೋ ಅದಕ್ಕೆ ನಾನು ಒಪ್ಪಿಗೆ ಕೊಟ್ಟು ಆ ಸ್ಥಾನವನ್ನು ಸ್ವೀಕರಿಸಿ ಮನಃಪೂರ್ವಕ ವಾಗಿ ಆ ಕಾರ್ಯ ಮಾಡುವೆನು."

## ಶಿವಾನುಭವ ಸಂಘಗಳ ಸಭಾಸದರು
## ಅನುಸರಿಸಬೇಕಾದ ನಿಯಮಗಳು.

### (೧) ಆತ್ಮ ಸುಧಾರಣೆಯ ಕಾರ್ಯಗಳು.

(೧) ನಾನು ದಿನಾಲು ಅಥವಾ ವಾರದಲ್ಲಿ ಕೆಲವೊಂದು ವೇಳೆ ಯನ್ನು ಗೊತ್ತುಪಡಿಸಿ ಶಿವಶರಣರ ವಚನಗಳನ್ನು ತಪ್ಪದೆ ಓದುವೆನು. ಮತ್ತು ಷಟ್‌ಸ್ಥಲ ಶಾಸ್ತ್ರದ ಮರ್ಮಗಳನ್ನು ತಿಳಿಯಲು ಪ್ರಯತ್ನಿಸುವೆನು.

(೨) ಪರಮಾತ್ಮನು ಒಬ್ಬನೇ ಇದ್ದಾನೆಂದು ನಾನು ನಂಬುವೆನು. ಮತ್ತು ಅನೇಕ ದೇವತೆಗಳನ್ನು ನಂಬುವದಿಲ್ಲ.

(೩) ನಾನು ಯಾವಾಗಲೂ ಲಿಂಗಧಾರಕನಾಗಿ ಪ್ರತಿ ದಿವಸ ಒಮ್ಮೆಯಾದರೂ ಕ್ರಮಯುಕ್ತವಾಗಿ ಲಿಂಗಪೂಜೆಯನ್ನು ಮಾಡಿ ಲಿಂಗಾ ನುಸಂಧಾನದಲ್ಲಿರುವೆನು

(೪) ನಾನು ಶಿವಶರಣರ ನೈತಿಕ ಮಾರ್ಗವನ್ನು ಶಕ್ಯವಿದ್ದಷ್ಟರ ಮಟ್ಟಿಗೆ ಅನುಸರಿಸುತ್ತ, ನನ್ನ ಆರ್ಥಿಕ ಮಾನಸಿಕ, ಶಾರೀರಿಕ ಹಾನಿ ಯನ್ನುಂಟು ಮಾಡುವ ದುರ್ವ್ಯಸನಗಳನ್ನೂ, ದುಶ್ಚಟಗಳನ್ನೂ, ದುರ್ನ ಡತೆಗಳನ್ನು ಬಿಟ್ಟು ಕೊಡುವೆನು.

(೫) ನಾನು ನನ್ನ ಮಾನಸಿಕ, ಶಾರೀರಿಕ, ಬೌದ್ಧಿಕ ಶಕ್ತಿಯು ಇರುವ ವರೆಗೂ ಅವುಗಳನ್ನು ಸರಿಯಾದ ಮಾರ್ಗದಿಂದ ಉಪಯೋಗಿ ಸುತ್ತ ಕೆಲವೊಂದು ಕಾಯಕ (ಉದ್ಯೋಗ) ವನ್ನು ಮಾಡುತ್ತ ನನ್ನ ಉಪಜೀವನವನ್ನು ಸಾಗಿಸುವೆನು. ನಾನು ಪರಾವಲಂಬಿಯಾಗುವದಿಲ್ಲ.

(೬) ನಿತ್ಯದ ಉಪಜೀವನದ ಉದ್ಯೋಗವನ್ನು ಮಾಡಿದ ಬಳಿಕ ನನಗೆ ಉಳಿದ ವೇಳೆಯನ್ನು ನನ್ನ ಆತ್ಮಸುಧಾರಣೆಗಾಗಿ ಅಥವಾ ನನ್ನ

ಕುಟುಂಬದ ಸುಧಾರಣೆಗಾಗಿ ಅಥವಾ ಸಮಾಜದ ಕೆಲವೊಂದು ಉಪಯುಕ್ತ ಕಾರ್ಯಕ್ಕಾಗಿ ಉಪಯೋಗಿಸುವೆನು.

(೭) ನಾನು ಯಾವ ಕಾರ್ಯದಲ್ಲಿಯೂ, ಜ್ಯೋತಿಷ್ಯ, ಶಕುನ, ಮೊದಲಾದವುಗಳನ್ನು ಕೇಳುವದಿಲ್ಲ ಆದರೆ ಶಿವಶರಣರ ಷಟ್‌ಸ್ಥಲ ಮಾರ್ಗ, ನೀತಿ ಶಾಸ್ತ್ರ ಮತ್ತು ಅನುಭವ ವಿದ್ಯೆ ಇವುಗಳನ್ನು ತಿಳಿದು ಕೊಂಡು ಅವುಗಳಂತೆ ಆಚರಿಸುತ್ತ ನನಗೆ ಉಂಟಾದ ಸ್ವಾನುಭವ ಮತ್ತು ತಿಳುವಳಿಕೆಯಿಂದಲೇ ನಾನು ನನ್ನ ಕಾರ್ಯಗಳನ್ನು ಮಾಡುತ್ತ ಹೋಗುವೆನು.

(೮) ನಾನು ಶುಭಾಶುಭ ಕಾರ್ಯಗಳಿಗೋಸ್ಕರ ಅನಾವಶ್ಯಕ ಖರ್ಚು ಮಾಡುವದಿಲ್ಲ. ಹಾಗೆಯೇ ವೀರಶೈವರಿಗೆ ಸಂಬಂಧಿಸದೆ ಇದ್ದ ಕೆಲವೊಂದು ದೇವತೆಯ ಜಾತ್ರೆ, ಉತ್ಸವ, ಹಬ್ಬಗಳನ್ನು ನಾನು ಪಾಲಿಸುವದಿಲ್ಲ.

(೯) ನಾನು ಮಾಡುವ ಎಲ್ಲ ಕಾರ್ಯಗಳನ್ನು ಶಿವಾರ್ಪಣ ಬುದ್ಧಿಯಿಂದಲೇ ಮಾಡುವೆನು.

(೨) ಕುಟುಂಬ ಸುಧಾರಣೆಯ ಕಾರ್ಯಗಳು.

(೧೦) ನಾನು ಕೆಲವೊಂದು ವೇಳೆಯನ್ನು ಗೊತ್ತುಪಡಿಸಿ ಆಗ ನನ್ನ ಕುಟುಂಬದವರೊಂದಿಗೆ ಶಿವಶರಣರ ತತ್ವಗಳನ್ನು ಓದುವೆನು. ಮತ್ತು ಅಲ್ಲಿ ಆಗ ಬೇರೆಯವರು ಹೇಳಿದ್ದನ್ನು ಮನಮುಟ್ಟಿ ಕೇಳುವೆನು.

(೧೧) ಓದು ಬರಹ ಗೊತ್ತಿಲ್ಲದ ನನ್ನ ಕುಟುಂಬದವರಿಗೆಲ್ಲ ಓದು ಬರಹ ಕಲಿಸುವೆನು ಅಥವಾ ಅವರಿಗೆ ಕಲಿಸುವ ವ್ಯವಸ್ಥೆ ಮಾಡುವೆನು. ಅವರು ಕಲಿತವರಿದ್ದರೆ ಅವರ ಜ್ಞಾನಸಂಪಾದನೆಯ ಕಾರ್ಯಗಳು ಇನ್ನೂ ಹೆಚ್ಚು ಮುಂದುವರಿಯುವಂತೆ ಪ್ರಯತ್ನಿಸುವೆನು.

(೧೨) ನಾನು ನನ್ನ ಗೃಹಕೃತ್ಯಕ್ಕೆ ಬೇಕಾಗುವ ಅವಶ್ಯಕ ಜಿನಸುಗಳನ್ನೂ ಕುಟುಂಬದವರ ಉಡಿಗೆ ತೊಡಿಗೆಗಳನ್ನೂ ಸುವ್ಯವಸ್ಥೆಯಿಂದಲೂ ಸ್ವಚ್ಛತೆಯಿಂದಲೂ ಇಡುವೆನು ಮತ್ತು ಮನೆತನದ ದಿನಚರಿಯ ಕಾರ್ಯಗಳಲ್ಲಿ ಶಿಸ್ತು, ಪದ್ಧತಿ, ಅಚ್ಚುಕಟ್ಟುತನ, ನಿಯಮಿತತನ, ಸ್ವಚ್ಛತೆ, ಇವುಗಳಿರುವಂತೆ ಪ್ರಯತ್ನಿಸುವೆನು.

(೧೩) ಕುಟುಂಬದವರೆಲ್ಲರಿಗೂ ಆರೋಗ್ಯದ ನಿಯಮಗಳನ್ನು ತಿಳಿಸಿಕೊಟ್ಟು ಅವರು ಹಾಗೆ ನಡೆಯುವಂತೆ ನಾನು ಪ್ರಯತ್ನಿಸುವೆನು.

(೧೪) ನಾನು ನನ್ನ ಮನೆಯಲ್ಲಿ ಕೆಲವೊಂದು ಸ್ಥಳವನ್ನು ಗೊತ್ತುಪಡಿಸಿ ಅದನ್ನು ಶಿವಾನುಭವ ಕಾರ್ಯಗಳಿಗೋಸ್ಕರ ಉಪಯೋಗಿಸುವೆನು. ಅದನ್ನು ಶುದ್ಧವಾಗಿಯೂ ಪವಿತ್ರವಾಗಿಯೂ ಇಡುವೆನು. ಅದು ನನ್ನ ಮನೆಯಲ್ಲಿಯ "ಶಿವಾನುಭವ ಮಂಟಪ" ವೆಂದು ಭಾವಿಸುವೆನು. ಮನೆಯಲ್ಲಿ ಹೀಗೆ ವ್ಯವಸ್ಥೆ ಮಾಡುವದು ಶಕ್ಯವಿಲ್ಲದಿದ್ದರೆ ಶಿವಾನುಭವದ ಕಾರ್ಯಗಳು ನಡೆದ ಸಮಯದಲ್ಲಿ ಆಗಿನ ಪೂರ್ತಿಯಾವರೂ ಆ ಸ್ಥಾನವು ಪವಿತ್ರವಾದುದೆಂದು ಭಾವಿಸಿ ಅದರಂತೆ ಆಚರಿಸುವೆನು.

(೧೫) ಈ ಕಾರ್ಯಕ್ರಮ ಪತ್ರಿಕೆಯಲ್ಲಿ ಕಾಣಿಸಿದ ವಿಷಯಗಳಲ್ಲಿ ಕನಿಷ್ಟ ಒಂದನ್ನಾದರೂ ನನ್ನ ಕುಟುಂಬದಲ್ಲಿಯ ಎಲ್ಲ ಸ್ತ್ರೀ ಪುರುಷರು ಆರಂಭದಲ್ಲಿ ಕೈಕೊಂಡು ಅವರು ಹಾಗೆ ನಡೆಯುವಂತೆಯೂ ಮುಂದೆ ಬರಬರುತ್ತ ಅವರು ತಮ್ಮ ಇಚ್ಛೆಗೆ ಬಂದ ಹೊಸ ಹೊಸ ಸುಧಾರಣೆಯ ಕಾರ್ಯಗಳನ್ನು ಕೈಕೊಳ್ಳುತ್ತ ಹೋಗುವಂತೆಯೂ ಅವರಿಗೆ ಪ್ರೋತ್ಸಾಹಿಸುವೆನು.

## ಶಿವಾನುಭವ ಸಂಘಕ್ಕೋಸ್ಕರ ಮಾಡುವ ಕಾರ್ಯಗಳು

(೧೬) ನಾನು ಕೆಲವೊಂದು ಶಿವಾನುಭವ ಸಂಘದ ಸಭಾಸದನಾಗುವೆನು ಮತ್ತು ಅಲ್ಲಿ ಗೊತ್ತುಪಡಿಸಿದ ಕಾರ್ಯಕ್ರಮದಂತೆ ನಡೆಯಲು ನಾನು ಮನಃಪೂರ್ವಕವಾಗಿ ಪ್ರಯತ್ನಿಸುವೆನು.

(೧೭) ಶಿವಾನುಭವ ಸಂಘದ ಸಭಾಸದರೊಡನೆ ನಾನು ಯಾವಾಗಲೂ ಪರಸ್ಪರ ಸಹಕಾರ, ಪರಸ್ಪರ ಪ್ರೇಮ ಮತ್ತು ಬಂಧುಭಾವದಿಂದ ವರ್ತಿಸುವೆನು. ಅವರಲ್ಲಿ ಯಾವ ತರದ ಉಚ್ಚ ನೀಚ ಭಾವವನ್ನು ಕಲ್ಪಿಸುವದಿಲ್ಲ.

(೧೮) ಶಿವಾನುಭವ ಸಂಘದ ವೀರಶೈವ ಸಭಾಸದರು ಬೇರೆ ಬೇರೆ ಪಂಗಡದವರಿದ್ದಲ್ಲಿ ಅವರಲ್ಲಿ ಪರಸ್ಪರ ಲಗ್ನ, ಪರಸ್ಪರ ಊಟ ಉಪಚಾರಗಳು ನಡೆಯುವಂತೆ ಪ್ರೋತ್ಸಾಹಿಸುವೆನು. ಒಂದು ವೇಳೆ ಅವರಲ್ಲಿ ಯಾರಾದರೂ ಈ ಕಾರ್ಯಗಳನ್ನು ಕೈಕೊಂಡರೆ ನಾನು ಅವರಿಗೆ ಎಲ್ಲ ರೀತಿಯಿಂದಲೂ ಸಹಾಯ ಮಾಡುವೆನು.

(೧೯) ನಾನು ಶಿವಶರಣರ ತತ್ವಗಳನ್ನು ಜನತೆಯಲ್ಲಿ ಪ್ರಸಾರ ಮಾಡಲೂ ಹೀಗೆ ಪ್ರಸಾರ ಮಾಡುವಂಥವರ ಕಾರ್ಯಗಳಿಗೆ ನನಗೆ ಶಕ್ಯವಿದ್ದಷ್ಟರ ಮಟ್ಟಿಗೆ ಸಹಾಯ ಮಾಡಲೂ ಪ್ರಯತ್ನಿಸುವೆನು.

(೨೦) ನಾನು ವೀರಶೈವ ಸಮಾಜದಲ್ಲಿ ಧಾರ್ಮಿಕ, ಸಾಮಾಜಿಕ, ವಾಙ್ಮಯಾತ್ಮಕ, ರಾಜಕೀಯ ಮೊದಲಾದ ಪ್ರಯತ್ನಗಳನ್ನು ಮಾಡಿ ಹೋದ ಮಹಾ ಪುರುಷರ ಚರಿತ್ರೆಗಳನ್ನು ತಿಳಿದುಕೊಂಡು ಅವರನ್ನು ಅತ್ಯಂತ ಪೂಜ್ಯಭಾವದಿಂದಲೂ ಆದರದಿಂದಲೂ ಕಾಣುವೆನು.

(೨೧) ಶಿವಾನುಭವ ಸಂಘಗಳು ತಮ್ಮ ಸಭಾಸದರ ಔದ್ಯೋಗಿಕ ಮತ್ತು ಆರ್ಥಿಕ ಸುಧಾರಣೆಗೋಸ್ಕರ ಕೈಕೊಂಡ ಪ್ರಯತ್ನಗಳಿಗೆ ನಾನು ಸಹಾಯ ಮಾಡುವೆನು.

(೨೨) ನಾನು ನನ್ನ ವಾರ್ಷಿಕ ಉತ್ಪನ್ನದಲ್ಲಿ ೧೦೦ರಲ್ಲಿ ೨ಕ್ಕೆ ಕಡಿಮೆಯಿಲ್ಲದಷ್ಟು ಹಣವನ್ನು ನನ್ನ ಕುಟುಂಬದ ಜನರಲ್ಲಿ ವಾಙ್ಮಯ ಪ್ರೀತಿ ಮತ್ತು ಕಲೆಗಳ ಜ್ಞಾನ, ಇವುಗಳನ್ನು ಹೆಚ್ಚಿಸುವದಕ್ಕೋಸ್ಕರ ವೆಚ್ಚ ಮಾಡುವೆನು ಮತ್ತು ಇಂಥ ಕಾರ್ಯಗಳಿಗೆ ಸಹಾಯಕಾರಿಯಾಗುವಂಥ ಇತರರ ಎಲ್ಲ ಪ್ರಯತ್ನಗಳಿಗೂ ನಾನು ಶಕ್ಯವಿದ್ದಷ್ಟು ಸಹಾಯ ಮಾಡುವೆನು.

(೨೩) ನಾನು ನನ್ನ ವಾರ್ಷಿಕ ಉತ್ಪನ್ನದಲ್ಲಿ ೧೦೦ರಲ್ಲಿ ೧ಕ್ಕೆ ಕಡಿಮೆಯಿಲ್ಲದಷ್ಟು ಹಣವನ್ನು ಶಿವಾನುಭವ ಸಂಘಕ್ಕೆ ಅರ್ಪಿಸುವೆನು.

(೨೪) ನಾನು ಶಿವಾನುಭವ ಸಂಘದ ಅಧಿಕಾರ ಸ್ಥಾನಗಳನ್ನು ಪಡೆಯಲು ಯಾವ ತರದ ವಿಶೇಷ ಪ್ರಯತ್ನಗಳನ್ನು ಮಾಡುವದಿಲ್ಲ. ನಾನು ಯೋಗ್ಯತೆಯನ್ನು ನೋಡಿಯೇ ನನ್ನ ಮತವನ್ನು ಕೊಡುವೆನು ಮತ್ತು ಸಂಘದವರು ನನ್ನನ್ನು ಯಾವ ಸ್ಥಾನಕ್ಕೆ ನೇಮಿಸುತ್ತಾರೋ ಅದಕ್ಕೆ ನಾನು ನನ್ನ ಒಪ್ಪಿಗೆ ಕೊಟ್ಟು ಆ ಸ್ಥಾನವನ್ನು ಸ್ವೀಕರಿಸಿ ಮನಃಪೂರ್ವಕವಾಗಿ ಆ ಕಾರ್ಯ ಮಾಡುವೆನು.

—o=•—

# ಬಸವೇಶ್ವರನು ಕನ್ನಡ ವಾಙ್ಮಯದ ಶ್ರೀಮಪುರುಷನು.

( ಈ ವಿಷಯದ ಮೇಲೆ ರಾ॥ ಬ॥ ಪಿ. ಜಿ. ಹಳಕಟ್ಟಿಯವರು ೨೬-೩-೧೯೫೩ ನೇ ದಿವಸ ಧಾರವಾಡ ಆಕಾಶವಾಣಿ ಕೇಂದ್ರದಲ್ಲಿ ಭಾಷಣ ಮಾಡಿದರು ಅದನ್ನು ನಾವು ಕೇಂದ್ರದವರ ಒಪ್ಪಿಗೆಯನ್ನು ಪಡೆದು ಇಲ್ಲಿ ಪ್ರಸಿದ್ಧಿಸಿದ್ದೇವೆ. — ಸಂಪಾದಕ ಶಿವಾನುಭವ. )

೧೨ನೇ ಶತಮಾನದ ಮಧ್ಯಭಾಗದಲ್ಲಿ ಅಸಂಖ್ಯ ವಚನಕಾರರು ಕರ್ನಾಟದಲ್ಲಿ ಉದಯವಾದರು. ಆ ವರೆಗೆ ಕನ್ನಡ ವಾಙ್ಮಯದಲ್ಲಿ ಚಂಪೂ ಕಾವ್ಯದ ಪ್ರಾಬಲ್ಯವು ಅಧಿಕವಾಗಿತ್ತು. ಅವುಗಳು ಪಂಡಿತರಿಗೆ ಮಾತ್ರ ಸುಲಭ ಸಾಧ್ಯವಾದವುಗಳಾಗಿದ್ದವು. ಆದರೆ ಬಸವೇಶ್ವರನ ಕಾಲದಲ್ಲಿ ಪಂಡಿತ ಪಾಮರರೆನ್ನದೆ ಎಲ್ಲರಿಗೂ ಗ್ರಾಹ್ಯವಾದ ತಿಳಿಯಾದ ಒಂದು ಹೊಸವಾಙ್ಮಯವು ಉಂಟಾಯಿತು. ಇದೇ ವಚನವಾಙ್ಮಯವಾಗಿದೆ. ಈ ವಾಙ್ಮಯ ಚಟುವಟಿಕೆಗಳನ್ನು ಪ್ರೋತ್ಸಾಹಿಸಿದವನು ಶ್ರೀ ಬಸವೇಶ್ವರನೇ ಇದ್ದಾನೆ.

## ವಚನಕಾರರು ಸ್ವತಂತ್ರ ವಿಚಾರವುಳ್ಳವರು.

ವಿಚಾರ ಸ್ವಾತಂತ್ರ್ಯತೆಯು ಎಲ್ಲಿ ಇದೆಯೋ ಅಲ್ಲಿ ವಾಙ್ಮಯವು ಅಭಿವೃದ್ಧಿಯನ್ನು ಹೊಂದುತ್ತವೆ. ಆದರೆ ಅಂಧ ಶ್ರದ್ಧೆ ಇದ್ದಲ್ಲಿ ಅದು ಬೆಳೆಯಲಾರದು. ಬಸವೇಶ್ವರನ ಕಾಲದಲ್ಲಿ ಅನೇಕ ವಚನಕಾರರು ಕಲ್ಯಾಣದಲ್ಲಿ ಪ್ರಸಿದ್ಧಿಗೆ ಬಂದರು. ಅವರೆಲ್ಲರೂ ಸ್ವಾತಂತ್ರ ವಿಚಾರವುಳ್ಳವರು. ಇದರಿಂದ ವಚನ ವಾಙ್ಮಯವು ನಾನಾವಿಧವಾಗಿ ಆ ಕಾಲದಲ್ಲಿ ಬೆಳೆಯಿತು. ಈ ವಾಙ್ಮಯದಲ್ಲಿ ನೀತಿ, ಭಕ್ತಿ, ಕ್ರಿಯೆ, ಆಚಾರ, ಜ್ಞಾನ, ಯೋಗ ಮುಂತಾದ ಅನೇಕ ವಿಷಯಗಳಿವೆ. ಈ ಎಲ್ಲ ವಿಷಯಗಳ ಮೇಲೆ ವಿವಿಧ ಗ್ರಂಥಗಳೂ ಗದ್ಯ, ಪದ್ಯಗಳೂ, ವಚನ ವಾಙ್ಮಯದಲ್ಲಿ ಉಂಟಾದವು.

## ಅನುಭಾವ ಗೋಷ್ಠಿಯಲ್ಲಿ ವಿಚಾರ ಸ್ವಾತಂತ್ರ್ಯವು.

ಬಸವೇಶ್ವರನ ಕಾಲದಲ್ಲಿ ಬಹುಜನ ವಿದ್ವಾಂಸರು ಬಸವೇಶ್ವರನ ಕೀರ್ತಿವಾರ್ತೆಗಳನ್ನು ಕೇಳಿ ಅವನ ಮತತತ್ವಗಳನ್ನು ಅರಿಯಲು ಕಲ್ಯಾಣಕ್ಕೆ

ಬರುವವರಾದರು. ಆಂಧ್ರದೇಶದಿಂದ ಪಂಡಿತಾರಾಧ್ಯ ವೇಮನಾರಾಧ್ಯರೂ, ಕಾಶ್ಮೀರ ದೇಶದಿಂದ ಬೊಂತಾದೇವಿ, ಮೋಳಿಗೆಮಾರಯ್ಯನವರೂ, ಕಾಶೀ ಪಟ್ಟಣದಿಂದ ಶಿವಲೆಂಕ ಮಂಚಣ್ಣನೂ ಕರ್ನಾಟಕ ದೇಶದಕ್ಷಿಣ ಬಹು ಜನ ಶಿವಾನುಭಾವಿಗಳೂ ಕಲ್ಯಾಣಕ್ಕೆ ಬರುವವರಾದರು. ಇಷ್ಟರಲ್ಲಿ ಬಸವೇಶ್ವರನ ಪ್ರೇರಣೆಯಿಂದ ಶಿವಾನುಭವ ಮಂಟಪವು ಕಲ್ಯಾಣದಲ್ಲಿ ಸ್ಥಾಪಿತವಾಗಿತ್ತು. ಅದರಲ್ಲಿ ನೆರೆದ ವಿದ್ವಾಂಸರು ತಮ್ಮ ಧರ್ಮ ಚರ್ಚೆಗಳನ್ನು ನಿರಾತಂಕವಾಗಿ ಸಾಗಿಸುವರು. ಅವುಗಳಲ್ಲಿ ಯಾರೂ ಯಾರಿಗೂ ಪ್ರತಿಬಂಧಮಾಡುತ್ತಿದ್ದಿಲ್ಲ. ಈ ಪ್ರಕಾರ ಬಸವೇಶ್ವರನ ಕಾಲದಲ್ಲಿ ವಿಚಾರ ಸ್ವಾತಂತ್ರ್ಯವಿದ್ದುದರಿಂದ ವಚನವಾಙ್ಮಯವು ಪ್ರಗತಿಯನ್ನು ಹೊಂದುತ್ತಲೇ ಬಂದಿತು.

## ವಚನ ವಾಙ್ಮಯದಲ್ಲಿಯ ವಿವಿಧತೆ.

ಈ ಪ್ರಕಾರ ಶಿವಶರಣರು ತಮ್ಮ ವಿಚಾರಗಳನ್ನು ನಿರೂಪಿಸಲು ಸ್ವತಂತ್ರರಾಗಿದ್ದರಿಂದ ಅವರ ವಿವೇಚನಾಪದ್ಧತಿಗಳು ಅವರವರ ವಿಚಾರ ಸರಣಿಗಳಿಗನುಸರಿಸಿ ಭಿನ್ನ ಭಿನ್ನತರನಾದವು. ಇದರಿಂದ ವಚನಗ್ರಂಥಗಳಲ್ಲಿ ವಿವಿಧತೆಯು ಉತ್ಪನ್ನವಾಯಿತು. ವಿವಿಧತೆಯು ವಾಙ್ಮಯದ ಪ್ರಗತಿಗೆ ಯಾವಾಗಲೂ ಪೋಷಕವಾದದ್ದು. ಸಾಂಪ್ರದಾಯಿಕ್ಕನುಸರಿಸಿ ಒಂದೇ ಒಂದು ಪದ್ಧತಿಯನ್ನು ಅನುಸರಿಸಿದ್ದರೆ ಅದರಿಂದ ಜನಪ್ರಿಯವಾದ ವಾಙ್ಮಯವು ಉಂಟಾಗುತ್ತಿದ್ದಿಲ್ಲ.

## ವಾಙ್ಮಯದ ಉದ್ದೇಶವು ಜನ ಸುಧಾರಣೆ

ವಾಙ್ಮಯದ ಉದ್ದೇಶವು ಜನ ಸುಧಾರಣೆಯೇ ಇರುತ್ತದೆ. ಬಸವೇಶ್ವರ ಮೊದಲಾದ ವಚನಕಾರರು ಜನಹಿತವೇಧ್ಯೇಯವುಳ್ಳವರಾಗಿ ಜನರ ಒಲವುಗಳನ್ನೂ ಅವರ ದೋಷಗಳನ್ನೂ ಕಂಡು ಹಿಡಿದು ಯೋಗ್ಯ ಮಾರ್ಗವನ್ನು ಅವರಿಗೆ ಬೋಧಿಸಲು ತತ್ಪರರಾಗಿರುತ್ತಿದ್ದರು. ಅವರು ಬೋಧಿಸುವ ರೀತಿಗಳು ನಾನಾ ವಿಧವಾಗಿವೆ. ಉದಾಹರಣೆಗಾಗಿ ಬಸವೇಶ್ವರನು ಅತ್ಯಂತ ಮೃದು ಸ್ವಭಾವದವನು. ಆದ್ದರಿಂದ ಅವನು ಬಹು ಮೃದು ಭಾಷೆಯಿಂದ ಜನರಿಗೆ ಬೋಧಿಸುತ್ತಾನೆ. ಮಹಾದೇವಿಯಕ್ಕನು ಭಾವನಾಮಯವಾದ ಸ್ವಭಾವದವಳು. ಆದ್ದರಿಂದ ಕವಿತ್ವದ ಭಾವನೆಗಳು ಅವಳ ಉಕ್ತಿಗಳಲ್ಲಿ

ತುಂಬಿ ಹೋಗಿವೆ. ಅಂಬಿಗರ ಚೌಡಯ್ಯನೂ ಮಡಿವಾಳ ಮಾಚಿದೇವನೂ ಸ್ಪಷ್ಟವಾದಿಗಳು. ಆದ್ದರಿಂದ ಅವರು ನಿರ್ದಾಕ್ಷಿಣ್ಯ ರೀತಿಯಿಂದ ನಿಷ್ಠುರ ವಾಗಿ ಬೋಧಿಸುತ್ತಾರೆ. ಜನರು ಭಿನ್ನ ಭಿನ್ನ ರುಚಿಯುಳ್ಳವರು. ಆದ್ದ ರಿಂದ ಅವರು ತಮಗೆ ಸೇರುವಂಥ ವಚನಗ್ರಂಥಗಳನ್ನು ಆಯ್ದುಕೊಂಡು ತಮ್ಮ ಶಿವಾನುಭವದ ಜ್ಞಾನವನ್ನು ಬೆಳಿಸಲು ಶಕ್ಯವಿರುತ್ತದೆ. ವಚನ ವಾಙ್ಮಯದ ವೈಶಿಷ್ಟ್ಯವು ಇದೇ ಆಗಿರುತ್ತದೆ.

## ವಚನಗಳು ಸುಲಭವಾದವುಗಳು

ಬಸವಾದಿ ವಚನಕಾರರು ಜನಸುಧಾರಣೆಯನ್ನು ಮಾಡುವದನ್ನೇ ಮುಖ್ಯ ಉದ್ದೇಶವಾಗಿಟ್ಟುಕೊಂಡಿದ್ದರಿಂದ ಅವರು ಜನರ ಭಾಷೆಯಲ್ಲಿ ತಮ್ಮ ವಿಚಾರಗಳನ್ನು ಬಹು ಸುಲಭವಾಗಿ ಹೇಳುವರು. ಅವರಲ್ಲಿ ಬಹು ಜನರು ವಿದ್ವಾಂಸರೂ ಸಂಸ್ಕೃತ ಜ್ಞಾನಿಗಳೂ ಇದ್ದಾರೆ. ಆದರೆ ಅವರು ತಮ್ಮ ಉಕ್ತಿ ಗಳಲ್ಲಿ ತಮ್ಮ ವಿದ್ವತ್ತೆಯನ್ನು ಪ್ರಕಟಿಸಲು ಎಂದೂ ಪ್ರಯತ್ನಿಸುವದಿಲ್ಲ ಆದ್ದರಿಂದ ಕ್ಲಿಷ್ಟ ಶಬ್ದಗಳನ್ನು ಅವರು ಉಪಯೋಗಿಸುವದಿಲ್ಲ. ತಿಳಿಯಾದ ಸುಲಭಭಾಷೆಯನ್ನು ಯಾವಾಗಲೂ ಉಪಯೋಗಿಸುತ್ತಾರೆ. ಅವರು ಯೋಗ್ಯ ದೃಷ್ಟಾಂತಗಳನ್ನು ಕೊಟ್ಟು ಜನರಿಗೆ ತಿಳಿಯುವಂತೆ ಹೇಳುತ್ತಾರೆ. ಭಾಷೆಯು ಹೀಗೆ ಸುಲಭವಾಗಿದ್ದರೆ ಮಾತ್ರ ವಾಙ್ಮಯವು ತೀವ್ರ ಬೆಳೆಯುತ್ತದೆ. ವಚನ ವಾಙ್ಮಯದ ಬೆಳವಣಿಗೆಗೆ ಇದೇ ಮುಖ್ಯ ಕಾರಣವಾಗಿದೆ.

## ವಾಙ್ಮಯವು ಗೃಹ ಸುಧಾರಣೆಗೆ ಕಾರಣವು

ಯಾವ ವಾಙ್ಮಯವು ಗೃಹ ಸುಧಾರಣೆಗೆ ಪೋಷಕವೋ ಅದು ಬೆಳೆ ಯುತ್ತ ಹೋಗುತ್ತದ. ಸ್ತ್ರೀ ಸುಧಾರಣೆಯೇ ಗೃಹಸುಧಾರಣೆಗೆ ತಳಹದಿಯು ಆದ್ದರಿಂದ ಯಾವ ವಾಙ್ಮಯವು ಸ್ತ್ರೀಯರಿಗೆ ಪ್ರಿಯವಾದುದೋ ಅದರಲ್ಲಿ ಬೆಳವಣಿಗೆ ಇದೆ. ವಚನ ವಾಙ್ಮಯದಲ್ಲಿ ಸ್ತ್ರೀ ವಚನಕಾರರು ಬಹಳ ಜನ ರಾಗಿ ಹೋಗಿದ್ದಾರೆ. ಬಸವೇಶ್ವರನ ಅಕ್ಕನಾದ ನಾಗಲಾಂಬಿಕೆಯೂ ಅವನ ಹೆಂಡಂದಿರಾದ ನೀಲಾಂಬಿಕೆ ಗಂಗಾಬಿಕೆಯರೂ ವಚನಕಾರರಿದ್ದಾರೆ. ಇವ ರಲ್ಲದೆ ತಿಲಕವ್ವೆ, ಜಂಬೂರು ಸತ್ಯಕ್ಕ, ಕಾಶ್ಮೀರ ದೇಶದ ಮಹಾದೇವಿಯಮ್ಮ, ಮುಕ್ತಾಯಕ್ಕ, ಹೀಗೆ ಅನೇಕ ಸ್ತ್ರೀ ವಚನಕಾರರು ಬಸವೇಶ್ವರನ ಕಾಲದಲ್ಲಿ ಆಗಿ ಹೋಗಿದ್ದಾರೆ- ಆಯ್ದಕ್ಕಿ ಮಾರಯ್ಯ ಮತ್ತು ಅವನ ಹೆಂಡತಿ ಲಕ್ಕಮ್ಮ,

ಉರಿಲಿಂಗ ಪೆದ್ದಿ ಮತ್ತು ಅವನ ಹೆಂಡತಿ ಕಾಳವ್ವೆ, ಹಡಪದಪ್ಪಣ್ಣ ಮತ್ತು ಅವನ ಹೆಂಡತಿ ಲಿಂಗಮ್ಮ ಈ ಸತಿಪತಿಗಳೆಲ್ಲರೂ ವಚನಕಾರರು. ಇದರಿಂದ ಬಸವೇಶ್ವರನಕಾಲದಲ್ಲಿ ಸ್ತ್ರೀಪುರುಷರು ಸಂಸ್ಕೃತಿಯ ಉಚ್ಚವಾತಾರಣದಲ್ಲಿದ್ದು ಕೊಂಡು ಹೇಗೆ ಪರಸ್ಪರನಾಗಿ ನಡೆದುಕೊಳ್ಳುತ್ತಿದ್ದರೆಂಬುದನ್ನು ನಾವು ಊಹಿಸಬಹುದಾಗಿದೆ.

## ವಚನ ವಾಙ್ಮಯದಲ್ಲಿ ನಾಡಿನ ಸಂಸ್ಕೃತಿಗಳ ಸಮನ್ವಯವು

ಉಚ್ಚ ವಾಙ್ಮಯವು ನಾಡಿನಲ್ಲಿರುವ ಸಂಸ್ಕೃತಿಯನ್ನು ಅವಹೇಲನೆ ಮಾಡಲಾರದು. ಅವು ಸಂಸ್ಕೃತಿಗಳಲ್ಲಿರುವ ಉಚ್ಚ ತತ್ವಗಳನ್ನು ಗ್ರಹಣ ಮಾಡುತ್ತದೆ. ಬಸವೇಶ್ವರ ಮೊದಲ್ಗೊಂಡು ಎಲ್ಲ ವಚನಕಾರರು ಹೀಗೆಯೇ ಆಚರಿಸಿದ್ದಾರೆ. ಉದಾಹರಣಾರ್ಥವಾಗಿ ಅವರು ಸಾಂಖ್ಯಶಾಸ್ತ್ರದ ತತ್ವ ಗಳನ್ನು ತಮ್ಮ ಕರಣ ಹಸಿಗೆಯ ಗ್ರಂಥಗಳಲ್ಲಿ ತೆಗೆದುಕೊಂಡಿದ್ದಾರೆ. ಯೋಗಶಾಸ್ತ್ರದ ವಿಚಾರಗಳು ಅವರ ಶಿವಯೋಗಾಚರಣೆಯಲ್ಲಿರುತ್ತವೆ. ಬೌದ್ಧಜೈನರ ತತ್ವಗಳನ್ನು ಅವರ ನೈತಿಕ ಮತ್ತು ಭಕ್ತಿಯ ಉಕ್ತಿಗಳಲ್ಲಿ ಕಾಣಬಹುದು. ಉಪನಿಷತ್ತು ಮತ್ತು ವೇದಾಂತದ ತತ್ವಗಳು ಅವರ ಷಟ್ ಸ್ಥಲ ಸಿದ್ಧಾಂತದಲ್ಲಿವೆ. ದ್ರಾವಿಡ ಶೈವ ಧರ್ಮದ ತತ್ವಗಳು ಅವರ ಷಟ್ ತ್ರಿಂಶತ್ ತತ್ವಗಳಲ್ಲಿವೆ. ಈ ಪ್ರಕಾರ ಯಾವ ವಾಙ್ಮಯವು ಸಮಾಜ ಸಮಾಜಗಳಲ್ಲಿ ಭೇದಭಾವವನ್ನು ಎಣಿಸದೆ ಎಲ್ಲರಲ್ಲಿ ಸಮನ್ವಯ ವೃತ್ತಿ ಯನ್ನು ಉಂಟುಮಾಡುತ್ತದೋ ಅದು ದೇಶಕ್ಕೆ ಹಿತಕಾರಿಯಾಗಿರುತ್ತದೆ.

## ಶಿವಶರಣರು ಜಾತಿಭೇದವನ್ನು ಅಳಿಯಲು ಯತ್ನಿಸಿದ್ದಾರೆ

ಬಸವಾದಿ ಶಿವಶರಣರು ವಿಶ್ವಬಂಧುತ್ವ ಭಾವವುಳ್ಳವರು. ಅವರು ಜಾತಿ ಭೇದವನ್ನು ನಷ್ಟಗೊಳಿಸಲು ಬಹಳ ಪ್ರಯತ್ನಿಸಿದ್ದಾರೆ. ಈ ಕಾರ್ಯದಲ್ಲಿ ಅವರು ಬಹಳ ಕಷ್ಟವನ್ನು ಹೊಂದಿದ್ದಾರೆ. ಈ ವಿಷಯದ ಬಗ್ಗೆ ಇರುವ ಅವರ ಉಕ್ತಿಗಳು ಬಹು ಸ್ಪಷ್ಟವಾಗಿವೆ. ಬಸವೇಶ್ವರನು ಅಸ್ಪೃಶ್ಯರನೊಡ ಗೂಡಿ ಶಿವಾನುಭವ ಮಂಟಪವನ್ನು ನಿರಾತಂಕವಾಗಿ ಪ್ರವೇಶಿಸುವನು. ಮತ್ತು ಅವರೊಡನೆ ಸಮವೃತ್ತಿಯಿಂದ ಇರುವನು. ಈ ವಿಷಯಿವಾಗಿ ಅವನು ಯಾವಾಗಲೂ ಬಹುಧೈರ್ಯದಿಂದ ವರ್ತಿಸುತ್ತ ಬಂದಿದ್ದಾನೆ.

## ಕರ್ನಾಟಕದ ನಾಗರಿಕ ಸ್ಥಿತಿ

ಇಂಥ ಉಚ್ಚ ವಿಚಾರಗಳು ಯಾವನಾಡಿನಲ್ಲಿ ಮತ್ತು ಕಾಲದಲ್ಲಿ ಹೊರಬೀಳುತ್ತವೆಯೋ ಅದು ನಾಡಿನ ನಾಗರಿಕತೆಯ ಸ್ಥಿತಿಯನ್ನು ತೋರಿಸುತ್ತದೆ. ಕರ್ನಾಟಕ ಜನತೆಯು ೧೨ನೇ ಶತಮಾನದಲ್ಲಿ ಇಂಥ ಸ್ಥಿತಿಯಲ್ಲಿತ್ತೆಂದು ಕಂಡುಬರುತ್ತದೆ. ಬಸವೇಶ್ವರನು ೧೧೩೪ರಿಂದ ೧೧೬೮ರ ವರೆಗೆ ಜೀವಿಸಿದನು. ಚಾಲುಕ್ಯರ ೬ನೇ ವಿಕ್ರಮಾದಿತ್ಯನು ೫೦ ವರ್ಷ ರಾಜ್ಯವಾಳಿ ೧೧೨೬ ರಲ್ಲಿ ತೀರಿಕೊಂಡನು. ಬಸವೇಶ್ವರನ ತರುವಾಯ ೧೧೮೮ ರಿಂದ ೧೨೦೦ ರ ವರೆಗೂ ಕರ್ನಾಟಕದಲ್ಲಿ ಅಸಂಖ್ಯ ಜೈನ ಗ್ರಂಥಕಾರರಾಗಿ ಹೋಗಿದ್ದಾರೆ. ರಾಮಾನುಜಾಚಾರ್ಯನನ್ನು ಪೋಷಿಸಿದ ವಿಷ್ಣುವರ್ಧನರಾಜನು ಇದೇ ಕಾಲದಲ್ಲಿದ್ದನು. ಈ ಸಂಗತಿಗಳ ಮೇಲಿಂದ ಈ ಶತಮಾನದಲ್ಲಿ ಕರ್ನಾಟಕ ಸಂಸ್ಕೃತಿಯು ಉಚ್ಚ ಸ್ಥಿತಿಯಲ್ಲಿತ್ತೆಂದು ಗೊತ್ತಾಗುತ್ತದೆ. ಹೀಗಿದ್ದರೂ ಶಿವಶರಣರು ಈ ಎಲ್ಲ ಸಂಸ್ಕೃತಿಗಳ ತತ್ವಗಳನ್ನು ತಮ್ಮ ಶಿವಾನುಭವ ತತ್ವಗಳಲ್ಲಿ ಒಳಕೊಂಡು ಅವುಗಳನ್ನು ಪ್ರಸಾರಮಾಡಿದ್ದಾರೆ. ಅವರ ಈ ಪ್ರಸಾರ ಕಾರ್ಯದಿಂದ ಕರ್ನಾಟಕ ವಾಙ್ಮಯದಲ್ಲಿ ಒಂದು ಹೊಸಯುಗವೇ ಉಂಟಾಯಿತೆಂದು ಹೇಳಬಹುದು.

## ಬಸವೇಶ್ವರನ ಜನ್ಮಭೂಮಿ

ಇಂಥ ಸಂಸ್ಕಾರವಾದ ಧಾರ್ಮಿಕ ಮತ್ತು ವಾಙ್ಮಯ ಸುಧಾರಣೆಗೆ ಕಾರಣನಾದವನು ಬಸವೇಶ್ವರನೇ ಇದ್ದಾನೆ. ಈ ಮಹಾಪುರುಷನು ಯಾರು, ಅವನ ಚರಿತ್ರೆ ಯಾವದು ಎಂಬುದನ್ನು ಕರ್ನಾಟಕಸ್ಥರು ಅರಿಯುವದು ಬಹು ಅವಶ್ಯವಾದದ್ದು. ಆದರೆ ಅವನ ಚರಿತ್ರೆಯು ಅತ್ಯಲ್ಪವಾಗಿ ದೊರಕುತ್ತದೆಂದು ಹೇಳಲು ಬಹು ವಿಷಾದವಾಗುತ್ತದೆ.

ತರ್ದವಾಡಿ ಎಂಬುದು ವಿಜಾಪುರ ಜಿಲ್ಲೆಯ ಉತ್ತರ ಭಾಗದ ಪೂರ್ವಕಾಲದ ಹೆಸರು ಇರುತ್ತದೆ. ಉಪ್ಪು ನೀರಿನ ಡೋಣೀ ನದಿಯು ಇಲ್ಲಿ ಕೆಲವೊಂದು ಪ್ರದೇಶದಲ್ಲಿ ಹರಿಯುತ್ತದೆ. ಈ ಪ್ರಾಂತದಲ್ಲಿ ಬಾಗೇವಾಡಿ ಎಂಬ ಗ್ರಾಮವಿದ್ದು ಇದೇ ಬಸವೇಶ್ವರನ ಜನ್ಮಸ್ಥಾನವಾಗಿರುತ್ತದೆ

ಈ ತರ್ದೆವಾಡಿ ನಾಡಿನಲ್ಲಿ ಪೂರ್ವಕಾಲದಲ್ಲಿ ಅಧಿಕಾರಿಗಳಿರತಕ್ಕ ಮುಖ್ಯ ಗ್ರಾಮವು ಮಂಗಳವಾಡವಾಗಿತ್ತು. ಇಲ್ಲಿ ಕಲಚೂರ್ಯ ಬಿಜ್ಜಳನು ಚಾಲುಕ್ಯರಿಗೆ ಮಾಂಡಲಿಕನಾಗಿ ರಾಜ್ಯವಾಳುತ್ತಿದ್ದನು. ಈ ಭಾಗದಲ್ಲಿ ದೇವರದಾಸಿಮಯ್ಯನ ಗ್ರಾಮವಾದ ಮುದನೂರು, ಶಂಕರ ದಾಸಿಮಯ್ಯನಿದ್ದ ನವಿಲೆ, ಅಗ್ಗಣಿಯ ಹೊನ್ನಯ್ಯನಿದ್ದ ಅಗ್ನಿ, ಭೋಗಣ್ಣನಿದ್ದ ಕಂಭಾವಿ, ಕೇಶಿರಾಜನಿದ್ದ ಕೊಂಡಗುಳಿ ರೇವಣಸಿದ್ಧನಿದ್ದ ಮಂಗಳವಾಡ ಇವೆಲ್ಲವು ಶಿವಶರಣರ ಗ್ರಾಮಗಳಾಗಿವೆ. ಇವರಲ್ಲಿ ಬಹು ಜನರು ವಚನಕಾರರಿದ್ದಾರೆ. ಇವರೆಲ್ಲರೂ ಬಸವೇಶ್ವರನಕಿಂತಲೂ ಮೊದಲಿನವರು. ಅವರು ಬೋಧಿಸಿದ ತತ್ವಗಳ ಪರಿಣಾಮವಾಗಿ ಬಸವೇಶ್ವರನು ಬ್ರಾಹ್ಮಣರ ಕರ್ಮಮಾರ್ಗವನ್ನು ತ್ಯಜಿಸಿ ಶಿವಶರಣರ ಮಾರ್ಗವನ್ನು ಅನುಸರಿಸಿದನೆಂದು ಕಂಡು ಬರುತ್ತದೆ.

## ಕೂಡಲಸಂಗಮದಲ್ಲಿ ವಾಸ

ಈ ಪ್ರಕಾರ ಬಸವೇಶ್ವರನು ಬ್ರಾಹ್ಮಣರ ಆಚರಣೆಗಳನ್ನು ತೊರೆಯಲಾಗಿ ಅವನ ಜಾತಿಬಾಂಧವರು ಅವನನ್ನು ಬಹಿಷ್ಕರಿಸಿದರು. ಆಗ ಅವನು ತನ್ನ ಅಕ್ಕ ನಾಗಲಾಂಬಿಕೆ ಮತ್ತು ಅವಳ ಚಿಕ್ಕ ಮಗು ಚನ್ನಬಸವ ಇವರನ್ನೊಡಗೊಂಡು ಕೂಡಲಸಂಗಮ ಕ್ಷೇತ್ರಕ್ಕೆ ಹೋದನು. ಅವನು ಅಲ್ಲಿಗೆ ಹೋದ ಬಳಿಕ ಅವನು ವ್ಯರ್ಥ ವೇಳೆಗಳೆಯದೆ ಶಿವಾನುಭವದ ತತ್ವಗಳ ಪ್ರಚಾರಕಾರ್ಯಗಳಲ್ಲಿ ತೊಡಗುತ್ತಿದ್ದನು.

## ಮಂಗಳವಾಡಕ್ಕೆ ಹೋದದ್ದು

ಬಸವೇಶ್ವರನು ಲೌಕಿಕ ವಿದ್ಯೆಯನ್ನು ನಿರಾಕರಿಸಲಿಲ್ಲ. ಅವನು ಮುಂದೆ ಮಂಗಳವಾಡದಲ್ಲಿ ಬಿಜ್ಜಳನ ಲೆಕ್ಕಬರೆಯುವ ವೃತ್ತಿಯನ್ನು ಕೈಕೊಂಡನು. ಅವನ ತಾಯಿಯ ಸಹೋದರನಾದ ಸಿದ್ದಣ್ಣ ದಂಡೇಶನು ಅಲ್ಲಿ ಮಂತ್ರಿಯಾಗಿದ್ದನು. ಅವನು ತನ್ನ ಮಗಳು ನೀಲಾಂಬಿಕೆಯನ್ನು ಬಸವೇಶ್ವರನಿಗೆ ಕೊಟ್ಟು ಲಗ್ನ ಮಾಡಿದನು. ಮುಂದೆ ಬಸವೇಶ್ವರನು ಬೊಕ್ಕಸದ ಅಧಿಕಾರಿಯಾದನು. ಈ ಕಾಲದಲ್ಲಿ ರಾಜ್ಯದಲ್ಲಿ ಅನೇಕ ರಾಜಕೀಯ ಕ್ರಾಂತಿಗಳು ನಡೆದಿದ್ದವು. ಅವುಗಳಲ್ಲಿ ಬಿಜ್ಜಳನು ಕಲ್ಯಾಣದ ಚಾಲುಕ್ಯರ ರಾಜ್ಯವನ್ನು ಅಪಹರಿಸಲು ಯತ್ನಿಸುತ್ತಿದ್ದನು. ಆದರೆ

ಬಸವೇಶ್ವರನು ಇವುಗಳಲ್ಲಿ ಯಾವ ಅಂಗವನ್ನು ವಹಿಸದೆ ಎಂದಿನಂತೆ ತನ್ನ ಧರ್ಮ ಸಂಶೋಧನ ಮತ್ತು ಧರ್ಮಪ್ರಚಾರ ಕಾರ್ಯಗಳಲ್ಲಿ ತೊಡಗಿದವನಾಗಿದ್ದನು. ಆವನು ಮಂಗಳವೆ ಕಲುಷಿತ ವಾತಾವರಣವುಳ್ಳ ಮಂಗಳನಾಡವನ್ನು ಬಿಟ್ಟು ತನ್ನ ಮೊದಲಿನ ಕೂಡಲಸಂಗಮ ಕ್ಷೇತ್ರಕ್ಕೆ ಬಂದಂತೆ ಕಂಡುಬರುತ್ತದೆ.

## ಕಲ್ಯಾಣದಲ್ಲಿ ವಾಸ.

ಇಷ್ಟರಲ್ಲಿ ಬಿಜ್ಜಳನು ಚಾಲುಕ್ಯರ ರಾಜ್ಯವನ್ನು ಅಪಹರಿಸಿ ತಾನೇ ಚಕ್ರವರ್ತಿಯಾಗಿದ್ದನು. ಈ ಕಾಲದಲ್ಲಿ ಅವನಿಗೆ ಜನತೆಯ ಬೆಂಬಲವು ಬೇಕಾಗಿತ್ತು. ಆದ್ದರಿಂದ ಅವನು ತನ್ನ ಮಂತ್ರಿಯಾದ ಬಲದೇವನ ಮೂಲಕ ಬಸವೇಶ್ವರನನ್ನು ಕಲ್ಯಾಣಕ್ಕೆ ಬರಮಾಡಿಸಿಕೊಂಡು ಅವನಿಗೆ ಬಲದೇವನ ಮಗಳಾದ ಗಂಗಾಂಬಿಕೆಯನ್ನು ಕೊಟ್ಟು ಲಗ್ನ ಮಾಡಿದನು. ಇದಾದ ಬಳಿಕ ಬಿಜ್ಜಳನು ಆರು ವರ್ಷ ಕಲ್ಯಾಣದಲ್ಲಿ ರಾಜ್ಯವಾಳಿದನು. ಈ ಕಾಲದಲ್ಲಿ ಬಸವನು ಮೊದಲು ದಂಡಾಧಿಪತಿಯಾಗಿಯೂ ಆಮೇಲೆ ಮಂತ್ರಿಯಾಗಿಯೂ ಬಿಜ್ಜಳನ ಓಲಗದಲ್ಲಿ ಕೆಲಸ ಮಾಡುತ್ತ ಬಂದನು.

## ಶಿವಾನುಭವ ಮಂಟಪ ಸ್ಥಾಪನೆ.

ಈ ಪ್ರಕಾರ ಬಸವನು ಮಂತ್ರಿಯಾದ್ದರಿಂದ ಅವನ ವರ್ಚಸ್ಸು ನಾಡಿನಲ್ಲಿ ಸ್ವಾಭಾವಿಕವಾಗಿ ಬೆಳೆಯಹತ್ತಿತು. ಅನೇಕ ದೇಶಗಳಿಂದ ಬಹುಜನ ವಿದ್ವಾಂಸರು ಅವನನ್ನು ಕಾಣಲಿಕ್ಕೆ ಕಲ್ಯಾಣಕ್ಕೆ ಬರುವವರಾದರು. ಆಗ ಬಸವೇಶ್ವರನು ಶಿವಾನುಭವಮಂಟಪವನ್ನು ಸ್ಥಾಪಿಸಿ ಅದರ ಮೂಲಕ ಷಟ್‌ಸ್ಥಲ ಶಾಸ್ತ್ರದ ತತ್ವಗಳನ್ನು ಎಲ್ಲಕಡೆಗೂ ಪ್ರಚಾರಮಾಡಹತ್ತಿದನು. ಇದರಿಂದ ವಚನವಾಙ್ಮಯವು ಬೆಳೆಯಹತ್ತಿತು. ನಾನಾವಿಧ ಜಾತಿಮತಪಂಥದವರೂ ಅಧಿಕಾರಿಗಳೂ ಶಿವಾನುಭವದ ಮಾರ್ಗವನ್ನು ಅನುಸರಿಸುವವರಾದರು.

## ಬಿಜ್ಜಳನ ವಿರೋಧ.

ಬಸವೇಶ್ವರನ ಈ ಧರ್ಮಪ್ರಸಾರದ ಕಾರ್ಯಗಳ ಮೂಲಕ ಸನಾತನ ಧರ್ಮಿಗಳೂ ಜೈನರೂ ಬಸವೇಶ್ವರನಿಗೆ ಪ್ರಬಲವಿರೋಧಿಗಳಾದರು. ಅವರು ಬಸವೇಶ್ವರನ ವಿರುದ್ಧ ಬಿಜ್ಜಳನ ಮನಸ್ಸನ್ನು ಕಲುಷಿತ ಮಾಡಲು

ಉದ್ಯುಕ್ತರಾದರು. ಶಿವಶರಣರ ಕ್ರಾಂತಿಕಾರಕ ವಿಚಾರಗಳು ಬಿಜ್ಜಳ ನಿಗೂ ಬೇಡಾಗಹತ್ತಿದವು. ಮುಂದೆ ಅವನು ಬರಬರುತ್ತ ಶಿವಶರಣರ ಬಗ್ಗೆ ವಿರೋಧಭಾವ ತಾಳಿ ಅವರಿಗೆ ನಾನಾತರದ ಆತಂಕಗಳನ್ನು ಒಡ್ಡ ಹತ್ತಿದನು.

## ಬಸವನು ಜಾತಿಭೇದವನ್ನು ನಿರಾಕರಿಸಿದ್ದು-

ಈ ಕಾಲಕ್ಕೆ ಬಸವೇಶ್ವರನು ಜಾತಿಭೇದವನ್ನು ಬಹಿರಂಗವಾಗಿ ನಿರಾಕರಿಸಿದನು. ಅಸ್ಪೃಶ್ಯರೊಡನೆ ಅವನು ಸಾಮರಸ್ಯ ಭಾವದಿಂದ ಇರುವನು. ಇದು ವರ್ಣಾಶ್ರಮಿಗಳನ್ನು ಕೆರಳಿಸಿತು. ಈ ಕಾಲದಲ್ಲಿ ಬ್ರಾಹ್ಮಣನಾದ ಮಧುವರಸನು ಮಚ್ಚಿಗಾರನಾದ ಹರಳಯ್ಯನ ಮಗನಿಗೆ ತನ್ನ ಮಗಳನ್ನು ಕೊಟ್ಟು ಲಗ್ನ ಮಾಡಿದನು. ಇದು ಘೋರ ಘಾತಕವೆಂದು ಬಿಜ್ಜಳನಿಗೆ ತೋರಿತು. ಆಗ ಬಸವೇಶ್ವರನು ಶಿವಶರಣರ ತತ್ವಗಳ ಪ್ರಕಾರ ಇದು ಅಧರ್ಮವಲ್ಲೆಂದು ಬಿಜ್ಜಳನಿಗೆ ಎಷ್ಟು ಹೇಳಿದರೂ ಅವನು ಕೇಳಲಿಲ್ಲ. ಅವನು ಈ ಉಭಯತರನ್ನು ಕರಿಸಿ ಅವರಿಗೆ ಎಳಹೂಟೆ ಶಿಕ್ಷೆಯನ್ನು ವಿಧಿಸಿದನು. ಒಂದು ನೊಗಕ್ಕೆ ಎತ್ತುಗಳನ್ನು ಹೂಡಿ ಅವುಗಳನ್ನು ತಗ್ಗು ದಿಟ್ಟೆಗಳಲ್ಲಿ ಭರದಿಂದ ಓಡಿಸಿ ಅಪರಾಧಿಯನ್ನು ಕೊಲ್ಲಿಸುವದು ಇದಾಗಿದೆ. ಇದು ಬಹು ಕ್ರೂರ ಶಿಕ್ಷೆಯು, ಬಸವೇಶ್ವರನು ಹರಳಯ್ಯ ಮಧುವಯ್ಯಗಳಿಗೆ ಈ ರೀತಿ ಪೀಡಿಸಿ ಕೊಂದುಹಾಕಿದುದನ್ನು ಪ್ರತ್ಯಕ್ಷ ಕಂಡವನಾಗಿ ಇನ್ನುಮುಂದೆ ಕಲ್ಯಾಣದ ರಾಜ್ಯದಲ್ಲಿ ತಾನು ಇರಬಾರದು, ಇಲ್ಲಿ ಶಿವಶರಣರು ತಮ್ಮ ಧರ್ಮದಂತೆ ನಡೆಯುವದು ಶಕ್ಯವಲ್ಲವೆಂದು ಅವನಿಗೆ ತೋರಿತು. ಆಗ ಬಸವೇಶ್ವರನಿಗೆ ಶಿವಶರಣರಿಗೆ ದೇಶತ್ಯಾಗ ಮಾಡದೆ ಗತ್ಯಂತರವಿಲ್ಲವೆಂದು ಅನಿಸಿತು. ಈ ಕಾಲಕ್ಕೆ ಶಿವಶರಣರ ಸಂಖ್ಯೆಯು ನಾಡಿನಲ್ಲಿ ಅತ್ಯಲ್ಪವಾಗಿದ್ದಿತು. ಸನಾನಿಗಳು ಬಹು ಸಂಖ್ಯಾಕರಾಗಿ ಶಿವಶರಣರನ್ನು ಪೀಡಿಸುವದರಲ್ಲಿ ತೊಡಗಿದ್ದರು. ವೀರಶೈವರು ಪಾಲಿಸುವ ಪಂಚಾಚಾರಗಳಲ್ಲಿ ಗಣಾಚಾರವು ಒಂದಾಗಿದೆ. ಇದರ ಪ್ರಕಾರ ಒಂದು ರಾಜ್ಯದಲ್ಲಿ ಶಿವಶರಣರಿಗೆ ತಮ್ಮ ಆಚರಣೆಯಂತೆ ನಡೆಯಲು ಸಾಧ್ಯವಾಗದಿದ್ದಲ್ಲಿ ದೇಶತ್ಯಾಗ ಮಾಡಬೇಕೆಂಬ ನಿಯಮವಿದೆ. ಇದಕ್ಕನುಸರಿಸಿ ಬಸವೇಶ್ವರನು ಮೊದಲು ತಾನು ಕೂಡಲಸಂಗಮಕ್ಕೆ ಓಡಿಹೊರಟು ಹೋದನು ಆದರೆ ಅವನು ಅಂಜಿ ಕೂಡಲಸಂಗಮ ಕ್ಷೇತ್ರಕ್ಕೆ ಹೋಗಿಲ್ಲ. ಇತರ ಶಿವಶರಣರೂ ಅವನ ಸಲಹೆಯನ್ನು ಅನುಸರಿಸುವವ

ರಾದರು. ಅವರಲ್ಲಿ ಪ್ರಮುಖರಾದ ಅಲ್ಲಮಪ್ರಭು, ಮಹಾದೇವಿಯಕ್ಕ ಮೊದಲಾದವರು ಶ್ರೀಶೈಲಪ್ರಾಂತಕ್ಕೆ ಹೋದರು. ಇವರ ತರುವಾಯ ಚನ್ನಬಸವ, ಮಡಿವಾಳಮಾಚಿದೇವ, ಕಿನ್ನರೀ ಬ್ರಹ್ಮಯ್ಯ, ಶೂಲದ ಬ್ರಹ್ಮಯ್ಯ ಮೊದಲಾದ ಬಹುಜನ ಶಿವಶರಣರು ಪಶ್ಚಿಮ ಘಟ್ಟದಲ್ಲಿರುವ ಘೋರಾರಣ್ಯವಾದ ಉಳವಿಯ ಪ್ರದೇಶಕ್ಕೆ ತೆರಳಲು ಉದ್ಯುಕ್ತರಾದರು.

## ಬಿಜ್ಜಳನ ಕೊಲೆ

ಇಷ್ಟರಲ್ಲಿ ಕೆಲವು ದಿವಸಗಳ ಮೇಲೆ ಶಿವಶರಣರನ್ನು ಘಾತಿಸಿದ ಬಿಜ್ಜಳನನ್ನು ಜಗದೇವ ಮಲ್ಲಿ ಬೊಮ್ಮಣ್ಣಗಳು ಕಲ್ಯಾಣದಲ್ಲಿ ಕೊಂದು ಹಾಕಿದರು. ಇದರಲ್ಲಿ ಬಸವೇಶ್ವರನ ಅಂಗವು ಏನೂ ಇರುವದಿಲ್ಲ. ಬಿಜ್ಜಳನ ಕೊಲೆಯು ಪೂರ್ವದಲ್ಲಿಯೇ ಅವನು ಕಲ್ಯಾಣವನ್ನು ಬಿಟ್ಟು ಹೋಗಿದ್ದನು. ದೇಶತ್ಯಾಗ ಮಾಡಲು ಸಲಹೆಯನ್ನಿತ್ತ ಬಸವೇಶ್ವರನಿಗೆ ಬಿಜ್ಜಳನನ್ನು ಕೊಲ್ಲಿಸುವದು ಅನಾವಶ್ಯಕವಾಗಿತ್ತು. ಮುಂದೆ ತೊರಗಲುನಾಡಿನಲ್ಲಿ ಬಿಜ್ಜಳನ ಸೈನ್ಯದೊಡನೆ ಶಿವಶರಣರು ಯುದ್ಧ ನಡಿಸಬೇಕಾಯಿತು. ಅವರನ್ನು ಸಂಪೂರ್ಣವಾಗಿ ಸಂಹಾರಮಾಡಲು ಬಿಜ್ಜಳನ ಪಕ್ಷದವರು ಈಕಾಲದಲ್ಲಿ ನಿಶ್ಚಯಿಸಿದ್ದರು. ಆದ್ದರಿಂದ ಶಿವಶರಣರು ಆತ್ಮರಕ್ಷಣೆಗಾಗಿ ಅವರು ಹೀಗೆ ಮಾಡಬೇಕಾಯಿತು. ಆದರೆ ಈ ಯುದ್ಧಗಳಲ್ಲಿ ಬಸವೇಶ್ವರನ ಅಂಗ ಏನೂ ಇರುವದಿಲ್ಲ.

## ಕೂಡಲ ಸಂಗಮದಲ್ಲಿ ಐಕ್ಯ

ಈ ಮೊದಲಿಗೆಯೇ ಬಸವೇಶ್ವರನು ಕೂಡಲ ಸಂಗಮ ಸ್ಥಾನದಲ್ಲಿ ಸಮಾಧಿಸ್ಥನಾಗಿದ್ದನು. ಅವನು ಹೇಗೆ ತೀರಿಕೊಂಡನೆಂಬುದು ನಮಗೆ ನಿಶ್ಚಿತವಾಗಿ ತಿಳಿದು ಬಂದಿಲ್ಲ. ಆದರೆ ಕೃಷ್ಣಾ ಮತ್ತು ಮಲಾಪಹಾರೀ ನದಿಗಳು ಕೂಡಿದ ಸ್ಥಳದಲ್ಲಿ ಎರಡು ಸಮಾಧಿಗಳಿವೆ. ಅವುಗಳ ಮೇಲೆ ಸಮಾಧಿಯ ಚಿಹ್ನಗಳಿವೆ. ಇವುಗಳಲ್ಲೊಂದು ಬಸವೇಶ್ವರನ ಸಮಾಧಿಯು ಇರಬೇಕೆಂದು ನಾವು ಊಹಿಸುತ್ತೇವೆ.

## ಉಪಸಂಹಾರ

ಈ ಪ್ರಕಾರ ನಾವು ಬಸವೇಶ್ವರನ ಚರಿತ್ರೆಯನ್ನು ಬಹು ಸಂಕ್ಷಿಪ್ತವಾಗಿ ವಿವರಿಸಿದ್ದೇವೆ. ಒಟ್ಟಿಗೆ ಬಸವೇಶ್ವರನು ಕರ್ನಾಟಕದ ವಾಙ್ಮಯ

ದಲ್ಲಿ ಬಹು ಅಗಾಧವಾದ ಕಾರ್ಯಗಳನ್ನು ಮಾಡಿದ್ದಾನೆ. ಈ ವಾಙ್ಮಯದ ಮೂಲಕ ಅವನು ದೇಶದಲ್ಲಿ ಒಂದು ಮಹತ್ತರವಾದ ಕ್ರಾಂತಿಯನ್ನುಂಟು ಮಾಡಿದನು. ಈ ಕ್ರಾಂತಿಗೆ ಅವನ ವಚನಗಳೇ ಮುಖ್ಯ ಕಾರಣವಾಗಿವೆ. ಇವು ಅವನ ಕಾಲದಲ್ಲಿ ಪ್ರತಿಯೊಂದು ಪಟ್ಟಣದಲ್ಲಿ, ಸಣ್ಣ ಗ್ರಾಮದಲ್ಲಿ ಗುಡಿಸಲುಗಳಲ್ಲಿ, ಮಠ ಮನೆಗಳಲ್ಲಿ, ಬೋಧಿಸಲ್ಪಡುತ್ತಿದ್ದವು. ಈ ಕಾಲದಲ್ಲಿ ಅಸಂಖ್ಯ ವಚನಕಾರರು ಉದಯವಾದರು. ಅವರ ವಚನಗಳು ಜನತೆಯಲ್ಲಿ ಒಂದು ಅದ್ಭುತ ಶಕ್ತಿಯನ್ನುಂಟು ಮಾಡಿದವು. ಈ ಶಕ್ತಿಯು ಮೂಲಕ ಶಿವಶರಣರ ಮಾರ್ಗವು ಎಲ್ಲ ಕಡೆಗೂ ಪ್ರಸಾರವಾಗಹತ್ತಿತು. ಇದೆಲ್ಲ ಬಸವೇಶ್ವರನ ವಚನ ವಾಙ್ಮಯದ ಪರಿಣಾಮವೇ ಆಗಿರುತ್ತದೆ.

# ವೀರಶೈವ ಜೀವನಜ್ಯೋತಿ ಶಿವಾನುಭವ

ಲೇಖಕರು:-ವೇ|| ಮಠದ ಪರ್ವತಯ್ಯನವರು ಹಾರ್ಮೋನಿಯಮ್ ಮಾಸ್ತರ
ಕಸ್ಗಲ್ ತಾ. ಮಾನವಿ ಜಿ. ರಾಯಚೂರು

—oooXooo—

(೧)

ಬಸವಾದಿ ಪ್ರಮಥರು ಕಣ್ಮರೆಯಾದಂದಿನಿಂದ ವೀರಶೈವ ಸಮಾಜವು ಕುಂಭ ಕರ್ಣನನಿದ್ರೆಯಲ್ಲಿ ಮಲಗಿದಂತಾಗಿರುವದು. ಇತರ ಸಮಾಜ ಬಂಧುಗಳು ಎಷ್ಟು ಪ್ರಗತಿಯನ್ನು ಹೊಂದಿರುವರೆಂಬುದರಕಡೆಗೆ ನಮ್ಮವರು ಲಕ್ಷವನ್ನೇ ಕೊಟ್ಟಂತೆ ಕಾಣುವದಿಲ್ಲ. ಯಾರಾದರೂ ನಮಗೆ ನಿಮ್ಮ ತತ್ವಗಳಾವು ಎಂದು ಪ್ರಶ್ನೆ ಹಾಕಿದರೆ ಉತ್ತರಕೊಡಲು ನಮ್ಮ ಅನೇಕ ಬಂಧುಗಳಿಗೆ ಬಾಯಿಲ್ಲದಾಗಿದೆ. ಇದು ಅತ್ಯಂತ ಶೋಚನೀಯ ಸಂಗತಿ. ಇಂಥ ಪ್ರಸಂಗದಲ್ಲಿ ಶಿವಾನುಭವ ಸಂಪಾದಕರು ಶರಣಾಂಶ ಸಂಭೂತರಾದ ರಾ|| ಬ|| ಪಿ. ಜಿ. ಹಳಕಟ್ಟಿ ಬಿ. ಎ. ಎಲ್. ಎಲ್. ಬಿ. ವಿಜಾಪೂರ ಇವರು ಸಮಾಜೋದ್ಧಾರಕ್ಕಾಗಿ ಮುಂದುವರಿದು ಎಷ್ಟೋ ಜನ ನೌಕರರನ್ನು ಏರ್ಪಾಡಮಾಡಿ ದೇಶ ಸಂಚಾರ ಮಾಡಿಸಿ ತಾವು ಕೂಡಾ ತಮ್ಮ ಮನೆಮಾರುಗಳನ್ನು ಮರೆತು ಶಿವಶರಣರ ವಚನಗಳನ್ನು ಹುಡುಕಿ ತಂದು ತಮ್ಮ ಹೇರಳವಾದ ದ್ರವ್ಯವನ್ನು ಖರ್ಚುಮಾಡಿ ಬಸವಾದಿ ಪ್ರಮಥರ ವಚನ ಗ್ರಂಥಗಳನ್ನು ಮುದ್ರಣಮಾಡಿ ವೀರಶೈವರ ಕೈಗೆ ಕೊಟ್ಟದ್ದಲ್ಲದೆ ಶಿವಾನುಭವ ಪತ್ರಿಕೆಯ ಮೂಲಕ ಅಷ್ಟಾವರಣ ಪಂಚಾಚಾರ ಷಟ್‌ಸ್ಥಲ ಮುಂತಾದ ಅನೇಕ ಮಹತ್ವ ವಿಷಯಗಳನ್ನು ಪ್ರಚಾರ ಗೈಯ್ಯುತ್ತಿರುವದು ವೀರಶೈವರ ಪುಣ್ಯವೆಂದೇ ಹೇಳಬೇಕಾಗಿದೆ. ಈ ತತ್ವಗಳು ಕೇವಲ ಒಂದು ಸಂಪ್ರದಾಯದವರಿಗೆ ಸಂಬಂಧ ಪಡದೆ ಇಡೀ ಮಾನವ ಸಮಾಜಕ್ಕೆ ಅನ್ವಯಿಸುವಂಥವುಗಳಾಗಿರುತ್ತವೆ. ಇಂಥ ಮಹತ್ವದ ಕಾರ್ಯ ಕೈಕೊಂಡವರ ಮೇಲೆ ಎಲ್ಲವನ್ನು ಹೊರಿಸಿ ನಾವು ನಮ್ಮ ಮನೆ ಮಠಗಳಲ್ಲಿ ಆರಾಮು ಕುಳಿತುಕೊಳ್ಳುವದು ಒಳಿತಲ್ಲ. ಪ್ರತಿಯೊಂದು ಕಡೆಗೆ ಮಠಾಧಿಕಾರಿಗಳು ಶಿವಾನುಭವ ಸಂಘ ಏರ್ಪಾಡಮಾಡಿ ಭಕ್ತಾದಿಗಳಿಗೆ ಅಷ್ಟಾವರಣ ಪಂಚಾಚಾರ ಷಟ್

ಸ್ಥಲ ಮುಂತಾದ ಅನೇಕ ಮಹತ್ವದ ವಿಷಯಗಳನ್ನು ಬೋಧ ಮಾಡಬೇಕು. ಮಠಾಧಿಕಾರಿಗಳು ಈಗ ಇಂತಹ ಕಾರ್ಯಗಳನ್ನು ಮಾಡುವದು ಬಿಟ್ಟು ನನ್ನ ಮಠ ಹೆಚ್ಚು, ನಿನ್ನ ಮಠ ಹೆಚ್ಚು, ನಮ್ಮ ಮಠ ಪೂರ್ವದ್ದು, ನಿಮ್ಮ ಮಠ ಪೂರ್ವದ್ದು ನನ್ನನ್ನೇ ಪೂಜಿಸತಕ್ಕದ್ದು. ಅವರನ್ನು ಪೂಜಿಸಲಾಗದು, ಎಂಬೀ ತರದ ಭಾವವು ಮಠಾಧಿಕಾರಿಗಳಲ್ಲಿ ಕಂಡು ಬರುತ್ತಿದೆ. ಇಂಥಾ ಮಠಾಧಿಕಾರಿಗಳಿಗೆ ಶ್ರೀಮಂತ ಭಕ್ತರು ಪ್ರೋತ್ಸಾಹಕೊಡುವದು ಕಂಡು ಬರುತ್ತದೆ. ಇದು ಸಮಾಜದ ಅವನತಿಯ ಚಿನ್ಹವು. ಈ ತಂಹದ ಅಹಂ ಭಾವವು ಅಜ್ಞಾನ ಅಹಂಕಾರ ತಾಮಸ ಗುಣದ ದ್ಯೋತಕವು. ಇಂತಹ ಅಹಂಭಾವವುಳ್ಳ ಮಠಾಧಿಪತಿಗಳು ಸ್ವತಃ ನಾಶವಾಗುವದಲ್ಲದೆ, ತಮ್ಮನ್ನು ನಂಬಿದ ಸಮಾಜವನ್ನು ವಿನಾಶಪಥದಲ್ಲಿ ತೆಗೆದುಕೊಂಡು ಹೋಗುವರು.

ಕಿರಾತರು ಅಂತ್ಯಜರು ಗುರು ಅನುಗ್ರಹಕ್ಕೆ ಪಾತ್ರರಾಗಿ ಅವರು ಕೂಡಾ ಮಠಗಳನ್ನು ಏರ್ಪಡಿಸಿಕೊಂಡು ಪುನಃ ತಾವು ಶಿಷ್ಯರನ್ನು ಮಾಡಿಕೊಂಡು ಗುರುಗಳಾಗಿ ಮೆರೆಯುತ್ತಿರುವಾಗ ನಮ್ಮಲ್ಲಿ ಹಿಂದುಳಿದ ಮಠಾಧಿಕಾರಿಗಳು ವಿದ್ಯಾವಂತರಾಗಿ ಮುಂದೆಬಂದರೆ ಮಠಾಧಿಕಾರಿಗಳಿಗೆ ಇಷ್ಟೇಕೆ ಮತ್ಸರವೋ ದೇವರೇ ಬಲ್ಲ. ಇನ್ನು ಮೇಲಾದರೂ ಹೀಗಾಗದಂತೆ ಒಳ್ಳೇ ಎಚ್ಚರಿಕೆಯಿಂದ ನಡೆದುಕೊಂಡರೆ ಸಮಾಜ ಸುಧಾರಣೆಯಾಗಬಹುದು. ವೀರಶೈವ ಸಮಾಜ ಬಂಧುಗಳೇ ಶಿವಾನುಭವವು ವೀರಶೈವರ ಜೀವನ ಜ್ಯೋತಿಯು. ಈ ವೀರಶೈವರ ಜೀವನ ಜ್ಯೋತಿಯನ್ನು ಕಾಪಾಡುವದು ಪ್ರತಿಯೊಬ್ಬ ವೀರಶೈವನ ಹಿರಿದಾದ ಹೆಮ್ಮೆ. ಇದೇ ತಮ್ಮ ಕರ್ತವ್ಯವೆಂದು ಯಾವ ವಿವೇಕಶಾಲಿಯಾದರೂ ಮನಗಾಣ ಬಹುದು. ವೀರಶೈವ ಬಂಧುಗಳೇ ನಮ್ಮ ಸಮಾಜದ ಹಣವು ನಿಷ್ಕಾರಣವಾಗಿ ಹಾಳಾಗಿ ಹೋಗುತ್ತಿದೆ. ನಾವುಗಳು ಕೈಲಾದ ಮಟ್ಟಿಗಾದರೂ ಸದುಪಯೋಗಪಡಿಸಲು ಆತುರ ಪಡಬೇಕು. ಶಿವಾನುಭವ ಸಹಾಯ ನಿಧಿಯನ್ನು ಬೆಳಿಸಬೇಕು. ಅನೇಕ ತರುಣರು ವಿದ್ವನ್ಮಣಿಗಳು ತಮ್ಮ ತಮ್ಮ ವಿದ್ಯೆಯನ್ನು ಸಮಾಜದ ಉನ್ನತಿಯ ಕಡೆಗೆ ಉಪಯೋಗಿಸಬೇಕು. ಅಷ್ಟಾವರಣ ಷಟ್‌ಸ್ಥಲ ಪಂಚಾಚಾರ ಭಕ್ತಿಪರವಾದ ಸಣ್ಣ ಸಣ್ಣ ಕಥೆ ಕವನಗಳನ್ನು ಶಿವಾನುಭವ ಪತ್ರಿಕೆಯಲ್ಲಿ ಮುದ್ರಿಸಬೇಕು. ನಾನಾ ರೀತಿಯಿಂದ ಸಮಾಜದಲ್ಲಿ ವಿವೇಕವು ತುಂಬಿ ತುಳುಕುವಂತೆ ಮಾಡಬೇಕು. ಆದರೆ ಅನೇಕರು, ನಮ್ಮ ಸಮಾಜದ ವಿದ್ಯಾವಂತರಲ್ಲಿ ಮಠಾಧಿ

ಕಾರಿಗಳು, ಶ್ರೀಮಂತರು, ಸಮಾಜದ ಕಡೆಗೆ ಕಣ್ಣೆರೆದು ಓ ಕೊಡದೆ ಇದ್ದು ಪರಸಮಾಜದ ಮೆಂಬರುಗಳಾಗಿ ನಮ್ಮನ್ನು ಧಿಃಕ್ಕರಿಸುತ್ತಿರುವದು ತನ್ನಾತ್ಮವೇ ತನಗೆ ಹಗೆ ಎಂಬಂತಾಗಿದೆ. ಇಂಥಾ ಕಷ್ಟ ಕಾಲದಲ್ಲಿಯೂ ಶಿವಾನುಭವವು ತನ್ನ ೨೬ನೇ ವರ್ಷವನ್ನು ದಾಟಿ ೨೭ನೇ ವರ್ಷದಲ್ಲಿ ಶುಭಸೂಚಕವಾದ ಹೆಜ್ಜೆಯನ್ನಿಟ್ಟಿದೆ. ಈ ಜ್ಯೋತಿಯನ್ನು ಕಾಪಾಡಿಕೊಂಡು ಬರಲು ನಮ್ಮ ಸಮಾಜಬಂಧುಗಳು ಉದಾರವಾದ ಸಹಾಯವನ್ನು ನೀಡಿ ಮುಂದೆ ಬಂದದ್ದಾದರೆ ತಮ್ಮ ಸಮಾಜದ ಏಳಿಗೆಯನ್ನು ತೋರಿಸದೆ ಇರಲಾರದು ಈ ಪತ್ರಿಕೆಗೆ ಎಲ್ಲ ಕಡೆಗೂ ಚಂದಾದಾರರಾಗುವಂತೆ ಪ್ರಯತ್ನ ಮಾಡಬೇಕು. ಪ್ರತಿಯೊಂದು ಮಂಗಲ ಕಾರ್ಯದಲ್ಲಿ ಸಹಾಯ ಧನವನ್ನು ಕಳಿಸಿ ಕೊಡಬೇಕು. ಪತ್ರಿಕೆಗೆ ಸಹಾಯ ಮಾಡಿದವರು ತತ್ವಾಭಿಮಾನಿಗಳೆಂದು ಹೇಳಿಕೊಳ್ಳುವದರಲ್ಲಿ ಯಾವ ಅರ್ಥವಿಲ್ಲ. ಅಚ್ಚ ಕನ್ನಡಿಗರ ಜೀವನಜ್ಯೋತಿಯಾಗಿರುವ ಈ ಶಿವಾನುಭವ ಪತ್ರಿಕೆಯು ಎಲ್ಲರ ಮನದ ಮೈಲಿಗೆಯನ್ನು ತೊಳೆದುಬಿಡುವ ಅಮರ ನದಿಯಾಗಿ ಪ್ರವಹಿಸಲಿ. ವೀರಶೈವ ಜೀವನಜ್ಯೋತಿ ಶಿವಾನುಭವವು ಸ್ಥಿರವಾಗಲಿಲ್ಲ. ನಾವೆಲ್ಲರೂ ಹೃದಯ ಪೂರ್ವಕ ಇದರ ಸ್ವಾಗತವನ್ನು ಬಯಸೋಣ.

(೨)

ತಪನ ವಿಶ್ವಾಸಾಸಯೋಗ  
ಜಪವ ವ್ರತವ ನಡಿಸಬಹುದು  
ಗುಪಿತ ಲಿಂಗದಲ್ಲಿ ಮನವನಿಡಲಿಕಾಗದು ॥ ಪಲ್ಲ ॥

ಜಲತಟಗಳಲ್ಲಿ ಪರ್ಣ  
ಶಾಲೆಯನ್ನು ಕಟ್ಟಿಕಂದ  
ಮೂಲ ಫಲವ ಸವಿದು ತಪವಮಾಡಿ ವಿದ್ಯದ  
ಜಾಲವನ್ನು ಕಲಿತು ಇಂದ್ರ-  
ಜಾಲಗಳನು ತೋರಬಹುದು  
ಮೇಲೆ ಲಿಂಗದಲ್ಲಿ ಮನವ ನಿಡಲಿಕಾಗದು ॥ ೧ ॥

ಕುಂಭಕಾದಿ ಯೋಗದಿಂದ
ಕುಂಭಿಣಿಯನು ಸಹಜ ಬಿಟ್ಟು
ಅಂಬರವನು ಏರ ಬಹುದು ಬಾಧಿಯಿಲ್ಲದೆ
ಸಂಭ್ರಮದಲಿ ನಿತ್ಯಕೋಟಿ
ತುಂಬಜಪವ ನಡಿಸ ಬಹುದು
ನಂಬಿ ಲಿಂಗದಲ್ಲಿ ಮನವನಿಡಲಿ ಕಾಗದು ‖ ೨ ‖

ಅನ್ಯವಾಕ್ಯ ಅನ್ಯಜಗವ
ನನ್ಯ ದೈವಗಳನು ಬಿಟ್ಟು
ಉನ್ನತದಲಿ ನಡಿಸ ಬಹುದು ಸಕಲ ವ್ರತವನು
ಚನ್ನ ಷಡಕ್ಷರಾಂಕಲಿಂಗ
ತನ್ನ ತಾನೆ ವಲಿಯದನಕ
ಇನ್ನು ಲಿಂಗದಲ್ಲಿ ಮನವ ನಿಡಲಿ ಕಾಗದು ‖ ೩ ‖

ಏನಾದರೆಯು ಸಾಧಿಸ ಬಹುದು ಮತ್ತೇನಾದರೆಯು ಸಾಧಿಸ ಬಹುದು ತಾನಾರೆಂಬುದ ಸಾಧಿಸಲಾಗದು ಕೂಡಲಸಂಗನ ಕರುಣ ವುಳ್ಳಂಗಲ್ಲದೆ

( ಬಸವಂಣನವರು )

## ಶಿವಾನುಭವ ಪತ್ರಿಕೆ.

೩

ಇಂದಿಗೆ ೮೦೦ ವರ್ಷಗಳ ಹಿಂದಣಕಾಲದಲ್ಲಿ ಅತ್ಯಂತ ಶ್ರೇಷ್ಠವಾದ ಅನಾದಿವೀರಶೈವಮತವು ಜೀರ್ಣವಾಗುತ್ತಿರುವದನ್ನರಿತ ತ್ರಿಕಾಲಜ್ಞಾನಿಗಳು ಚತುರ್ದಶ ಲೋಕಸಂಚಾರಿಗಳು ಬ್ರಹ್ಮಮಾನಸಪುತ್ರರೂ ಆದ ನಾರದ ಮಹರ್ಷಿಗಳು ಒಂದಾನೊಂದು ದಿವಸ ದೇವಾದಿದೇವನಾದ ಪರಮಾತ್ಮನು ತನ್ನ ಕೈಲಾಸ ಸಭೆಯಲ್ಲಿ ಮುಮುಮುನಿಸಿದ್ಧಸಾಧ್ಯರಿಂದಲೂ ಅಮರ ಗಣಂಗಳು ತೆತ್ತೀಸಕೋಟಿ ದೇವರ್ಕಳು ಪುರಾತರು ಮೊದಲಾದ ಅಸಂಖ್ಯಾತ ಜನಗಳ ಸಂದೋಹದೊಡನೆ ರತ್ನಖಚಿತವಾದ ಸಿಂಹಾಸನದಲ್ಲಿ ಮಂಡಿಸಿ ರುವ ವೇಳೆಯಲ್ಲಿ ನಾರದರು ಕೈಲಾಸ ಸಭೆಯನ್ನು ಪ್ರವೇಶ ಮಾಡಿ

ಚಂದ್ರಚೂಡನಿಗೆ ವಂದಿಸಿ, ದೇವಾ ಭೂಲೋಕದಲ್ಲಿ ಪುಣ್ಯವಂತ ವೀರಶೈವ ಮತವು ಹೀನಸ್ಥಿತಿಗೆ ಬಂದಿದೆ, ಎಂದು ನಾರದರು ಹೇಳಿದ ಕೂಡಲೇ ಭಕ್ತಿಭಾಂಡಾರಿಯಾದ ನಮ್ಮ ಜಗದಣ್ಣ ಬಸವಣ್ಣನವರನ್ನು ಕರೆದು ನೀನು ಈಗಿಂದೀಗಲೇ ಭೂಲೋಕಕ್ಕೆ ಹೋಗಿ ಮಾದರಸ ಮಾದಲಾಂಬೆಯರಿಗೆ ಮಗನಾಗಿ ಜನಿಸಿ ಅವರ ಪುತ್ರಕಾಂಕ್ಷೆಯನ್ನು ತೀರಿಸಿ ವೀರಶೈವ ಸಮಾಜೋದ್ಧಾರ ಗೈದು ಬಾ ಎನ್ನಲು ಆಗ ಬಸವೇಶ್ವರನು, ದೇವಾ ನನ್ನೊಬ್ಬನಿಂದ ಮಹತ್ತರವಾದ ವೀರಶೈವ ಸಮಾಜೋದ್ಧಾರವಾಗುದೆಂತು, ಎಂದು ಹೇಳಲಾಗಿ ಪರಮಾತ್ಮನು ನಿನ್ನ ಕಾರ್ಯಕ್ಕಾಗಿ ನನ್ನ ಕೈಲಾಸ ಸಭೆಯುಳ್ಳಿರುವ ಪ್ರಮಥರೆಲ್ಲರನ್ನು ಕಳುಹಿಸುವೆನೆನಲು ಭಕ್ತಿನಿಧಿ ಬಸವೇಶ್ವರನು ಆ ಮಾತಿಗೊಪ್ಪಿ ಪರಮಾತ್ಮನಿಗೆ ನಮಿಸಿ ಆಶೀರ್ವಾದಹೊಂದಿ ಅಲ್ಲಿಂದ ಭೂಲೋಕದಲ್ಲವತರಿಸಿ, ಮಾದರಸ ಮಾದಲಾಂಬೆಯರಿಗೆ ಮಗನಾಗಿ ಜನಿಸಿ ಸಂಗಮೇಶ್ವರನಿಂದ ವೀರಶೈವ ದೀಕ್ಷಾ ಸಂಸ್ಕಾರ ಹೊಂದಿ ವಿಪ್ರಸಂಸ್ಕಾರ ತ್ಯಜಿಸಿ ಬಿಜ್ಜಳನಿಗೆ ಮಂತ್ರಿಯಾಗಿ ಅರವತ್ತು ಕೋಟಿಯ ಧನನಿಧಿಯನ್ನು ಅವನ ಸಿಂಹಾಸನದಡಿಯಲ್ಲಿ ತೋರಿಸಿ ಮಹಾಮಹಿಮನೆಂದೆನಿಸಿ ನಿತ್ಯ ಲಕ್ಷದ ಮೇಲೆ ತೊಂಭತ್ತಾರು ಸಾವಿರ ಜಂಗಮರ ತೃಪ್ತಿಪಡಿಸುತ್ತ ನಿತ್ಯ ಮುನ್ನೂರರವತ್ತು ಪವಾಡಗಳನ್ನು ಗೈಯುತ್ತ ವೀರಶೈವರಿಗೆ ಅಷ್ಟಾವರಣ ಪಂಚಾಚಾರ, ಷಟ್‌ಸ್ಥಲಗಳ ಮಹತ್ವವನ್ನು ಬೋಧಿಸುತ್ತ ಶಿವದೀಕ್ಷೆಯನ್ನು ಕೊಟ್ಟು ವೀರಶೈವ ಸಮಾಜೋದ್ಧಾರ ಕಾರ್ಯಗೈದು ಕೂಡಲ ಸಂಗಮನಾಥನಲ್ಲಿ ಐಕ್ಯಹೊಂದಿದರೆಂಬುದು ಸಕಲರಿಗೂ ಮನವರಿಕೆಯಾದ ಮಾತು.

ಬಸವಾದಿಪ್ರಮಥರು ಕಣ್ಮರೆಯಾದಂದಿನಿಂದ ಪುನಃ ಅನಾದಿವೀರಶೈವ ಸಮಾಜವು ಅಧೋಗತಿಗಿಳಿಯುತ್ತಿರುವದನ್ನು ಕಂಡು ಶರಣಾಂಶ ಸಂಭೂತರಾದ ವಚನಶಾಸ್ತ್ರಪಿತಾಮಹ ರಾ. ಬ. ಫ. ಗು ಹಳಕಟ್ಟಿ ಬಿ. ಎ. ಎಲ್. ಎಲ್. ಬಿ. ವಕೀಲ ವಿಜಾಪುರ ಇವರು ಸಮಾಜೋದ್ಧಾರ ಮಾಡಲು ಟೊಂಕಕಟ್ಟಿ ಧೈರ್ಯಶಾಲಿಗಳಾಗಿ ಸ್ವಾರ್ಥತೆಯನ್ನು ಕಿತ್ತೊಗೆದು ಸಮಾಜ ಹಿತವನ್ನು ಬಯಸಿ ಶಿವಾನುಭವ ಮಾಸಪತ್ರಿಕೆ ಹೊರಡಿಸಿ ಪತ್ರಿಕೆಯ ಮೂಲಕ ಅಷ್ಟಾವರಣ ಪಂಚಾಚಾರ ಷಟ್‌ಸ್ಥಲ ಸದಾಚಾರ ಇನು ಅನಂತನಂತ ಮಹತ್ವದ ವಿಷಯಗಳನ್ನೂ ಶಿವಶರಣರ ಜೀವನ ಚರಿತ್ರೆಗಳನ್ನೂ ಬೋಧಿಸುವದಲ್ಲದೆ ಅಲ್ಲಲ್ಲಿ ಮಠಮಾನ್ಯಗಳಲ್ಲಿರುವ ಶಿವಶರಣರ

ವಚನಗ್ರಂಥಗಳನ್ನು ಶೋಧಿಸಿ ತಂದು ತಪ್ಪುವೊಪ್ಪುಗಳನ್ನು ತಿದ್ದಿ ಸ್ಥಲ ಕಟ್ಟಿಗೆ ಸರಿಯಾಗಿ ಜೋಡಿಸಿ ಹೇರಳವಾಗಿ ದ್ರವ್ಯವನ್ನು ಖರ್ಚುಮಾಡಿ ಶಿವಶರಣರ ವಚನಗಳನ್ನೂ ಶರಣರ ಜೀವನ ಚರಿತ್ರೆಗಳನ್ನೂ ಮುದ್ರಣ ಮಾಡಿ ವೀರಶೈವ ಸಮಾಜಕ್ಕೆ ಕೊಟ್ಟು ಧನ್ಯರನ್ನಾಗಿ ಮಾಡಿದ್ದಕ್ಕಾಗಿ ಶ್ರೀಮಾನ್ ಹಳಕಟ್ಟಿ ವಿಜಾಪುರ ಇವರಿಗೆ ವೀರಶೈವ ಸಮಾಜವು ತುಂಬಾ ಋಣಿಯಾಗಿದೆ.

ಇದಲ್ಲದೆ ಸತತ ಶಿವಾನುಭವ ಮಾಸಿಕಕ್ಕೆ ತಮ್ಮ ವಿದ್ವತ್‌ಶಕ್ತಿಯು ಲೇಖನಗಳನ್ನು ಸಮಾಜ ಮತ್ತು ಪತ್ರಿಕೆಯ ಅಭಿಮಾನ ವಹಿಸಿ ಬರಿಯುತ್ತಿರುವ ಶ್ರೀಯುತ ಮಂಟಮುರಿ ಚನ್ನಪ್ಪನವರು, ಶ್ರೀಮಾನ್ ಸಿಂಪಿ ಲಿಂಗಣ್ಣನವರು, ಮಹರಾಜೇಶ್ರೀ ಕಲ್ಯಾಣಪ್ಪನವರು ಬ್ಯಾಳಿ, ಹುನಗುಂದ ಇನ್ನೂ ಅನಂತನಂತ ಲೇಖನ ಬರಿಯುವ ಮಾಹನೀಯರಿಗೂ ಸಮಾಜವು ತುಂಬಾ ಆಭಾರಿಯಾಗಿದೆ. ವೀರಶೈವ ಬಾಂಧವರೇ, ಶಿವಾನುಭವವು ವೀರಶೈವರ ಆತ್ಮಜ್ಯೋತಿಯು. ಈ ಜ್ಯೋತಿಯೇ ಸಮಾಜದ ಜೀವನಜ್ಯೋತಿಯು. ಈ ಜ್ಯೋತಿಯನ್ನು ಕಾಪಾಡಿಕೊಂಡು ಬರುವದು ಪ್ರತಿಯೊಬ್ಬ ವೀರಶೈವನ ಹಿರಿದಾದ ಹೆಮ್ಮೆಯಾಗಿದೆ. ಇದೇ ನಮ್ಮ ಕರ್ತವ್ಯವೆಂದು ಯಾವ ವಿವೇಕ ಶಾಲಿಯಾದರೂ ಮನಗಾಣಬಹುದು. ಶಿವಾನುಭವವು ೧೯೫೩ನೇ ಇಸ್ವಿಯಲ್ಲಿ ತನ್ನ ೨೬ ವರ್ಷಗಳನ್ನು ದಾಟಿ ೨೭ನೇ ವರ್ಷದಲ್ಲಿ ಶುಭಸೂಚಕವಾದ ಹೆಜ್ಜೆಯನ್ನು ಇಟ್ಟಿರುತ್ತದೆ. ಪ್ರಿಯ್ಯ ಮಿತ್ರರೇ, ವೀರಶೈವ ಬಂಧುಗಳೇ ನಮ್ಮ ಸಮಾಜದ ಹಣವು ನಿಷ್ಕಾರಣವಾದ ಕಾರ್ಯಗಳಿಗೆ ಹಾಳಾಗಿ ಹೋಗುತ್ತದೆ. ನಾವುಗಳೆಲ್ಲರೂ ನಮ್ಮ ನಮ್ಮ ಕೈಲಾದಮಟ್ಟಿಗಾದರೂ ಸದುಪಯೋಗಪಡಿಸಲು ಹಾತೊರೆಯಬೇಕು. ಶಿವಾನುಭವ ಸಹಾಯನಿಧಿಯನ್ನು ಬೆಳಿಸಬೇಕು. ಅನೇಕ ತರುಣರು ವಿದ್ವನ್ಮಣಿಗಳು ತಮ್ಮ ತಮ್ಮ ವಿದ್ಯೆಯನ್ನು ಸಮಾಜದ ಏಳಿಗೆಯ ಕಡೆಗೆ ಉಪಯೋಗಿಸಬೇಕು. ಭಕ್ತಿಪ್ರದಾಯಕವಾದ ಸಣ್ಣ ಸಣ್ಣ ಕಥೆ ಕವನಗಳನ್ನು ಬರೆದು ಶಿವಾನುಭವ ಪತ್ರಿಕೆಯಲ್ಲಿ ಮುದ್ರಣ ಮಾಡಿಸಬೇಕು. ನಾನಾ ರೀತಿಯಿಂದ ಸಮಾಜದ ವಿಚಾರವು ತಂಬಿತುಳುಕುವಂತೆ ಮಾಡಬೇಕು. ಅಂದರೆ ಅನೇಕ ಮಠಾಧಿಕಾರಿಗಳು ನಮ್ಮ ಸಮಾಜದ ಕಡೆಗೆ ಲಕ್ಷಕೊಟ್ಟು ಭಕ್ತಾದಿಗಳಿಗೆ ಅಷ್ಟಾವರಣ ಷಟ್‌ಸ್ಥಲ ಪಂಚಾಚಾರ ಸದಾ

ಚಾರ ಮೊದಲಾದ ನೆಲೆಕಲೆಗಳನ್ನು ಬೋಧಿಸಿ ಭಕ್ತರನ್ನುದ್ಧರಿಸುವದು ಬಿಟ್ಟು ನಾವು ಪೂಜ್ಯರು, ನಾವು ಶಾಸ್ತ್ರಪಾರಂಗತರು, ನಾವು ಸತ್ಕುಲ ಪ್ರಸೂತರು, ನಾವು ಪಂಡಿತರು, ನಾವು ಆಚಾರವಿಚಾರ ಶೀಲರು, ಎಂದು ತಮ್ಮಷ್ಟಕ್ಕೆ ತಾವೇ ತಿಳಿದು ಇತರರನ್ನು ಕೀಳೆಂದು ಭಾವಿಸಿ ಅಹಂಕಾರದಲ್ಲಿ ಮೆರೆಯುತ್ತ ಅಜ್ಞಾನಾಂಧಕಾರದಲ್ಲಿ ಬಿದ್ದು ಸಮಾಜದವರನ್ನು ಧಿಃಕ್ಕರಿಸುತ್ತಿರುವದು ತನ್ನಾತ್ಮವೇ ತನಗೆ ಹಗೆ ಎಂಬಂತಾಗಿದೆ. ಸಮಾಜ ಬಂಧುಗಳೇ ಇನ್ನಾದರೂ ಅಹಂಕಾರ, ಅಸೂಯ, ದಂಭ, ದರ್ಪ, ಕುಚೇಷ್ಟೆ ಕುಯುಕ್ತಿ ನಿಂದೆ ಈ ಗುಣಧರ್ಮಗಳು ಅಧೋಗತಿಗೆ ತಳ್ಳುವವೆಂದು ತಿಳಿದು, ದುರ್ಗುಣಗಳನ್ನು ಹೊಡೆದೋಡಿಸಿರಿ. ಪತ್ರಿಕೆಗೆ ಚಂದಾದಾರರನ್ನು ಹೆಚ್ಚಾಗಿ ಮಾಡಿರಿ. ಏಳಿರಿ, ಪತ್ರಿಕೆಯನ್ನು ನಾನಾ ಮುಖವಾಗಿ ಬೆಳಸಿರಿ. ಸಂಪಾದಕರ ಪಾಲಿಗೇನೇ ಎಲ್ಲಾ ಭಾರವನ್ನು ಹೊರಿಸಬೇಡಿರಿ. ವೀರಶೈವರ ಆತ್ಮಜ್ಯೋತಿ ಶಿವಾನುಭವ ಚಿರಕಾಲಬಾಳಲೆಂದು ಪರಮಾತ್ಮನನ್ನು ಸ್ತುತಿಸಿ ಜಯಘೋಷವನ್ನು ಮಾಡಿರಿ.

# ಮಹಾಶಿವಶರಣೆ ಮಹಾದೇವಿಯಕ್ಕ

—ಬರೆದವರು— ಮಲ್ಲಿಕಾರ್ಜುನ, ಶಿ ಲಕ್ಕೆ.—

(ಪ್ರಕಾಶಕರು— ಬಿ. ಜಿ. ಇಂಗಳೇಶ್ವರ ವೀ, ಸಾ, ಸಮಿತಿ. ಬೆಳಗಾವಿ)

---

ಕರ್ನಾಟಕದ ಅಧ್ಯಾತ್ಮರಂಗದಲ್ಲಿ ಆದರ್ಶವ್ಯಕ್ತಿಯಾದ ಅಕ್ಕನನ್ನು ಕುರಿತು ಬರೆದ ಮೂವತ್ತನಾಲ್ಕು ಪುಟಗಳ (ಏಕಾಂಕ) ನಾಟಕವಿದು. ನಾಟಕಕಾರರು ಹಿನ್ನೆಲೆಯಲ್ಲಿ ಅವಳ ಬಾಲ್ಯವನ್ನು ಸ್ವಲ್ಪದರಲ್ಲಿ ಹೇಳಿ, ಉಡುತಡಿಯ ನಿರ್ಮಲ ಸುಮತಿಯವರ ಮನೆಗಿಳಿಯುತ್ತಾರೆ. "ತನ್ನ ವಿನೋದಕ್ಕಾಗಿ ತಾನೆ ಸೃಷ್ಟಿಸಿದ ಸಕಲ ಪ್ರಪಂಚವನು" ಜಗನ್ನಾಟಕ ಸೂತ್ರಧಾರಿಯ ಜಗನ್ನಾಂದಿಯೊಡನೆ ಈ ನಾಟಕದ ನಾಂದಿಯಾಗುತ್ತದೆ.

ಮದುವೆ ಮಾಡಿಕೊಡುವಂತೆ, ಮಹಾದೇವಿಯ ಮಾತಾಪಿತರ ಮನವೊಲಿಸಲು ಕಾಮುಕ ಕೌಶಿಕನು ತನ್ನ ಊಳಿಗದವನ್ನು ಕಳಿಸುತ್ತಾನೆ. ಕೊನೆಗೆ ಬಲವಂತ ಮಾಡಲೂ ಹೇಳಿರುತ್ತಾನೆ. ಮಹಾದೇವಿಯು ಅರಸನ ಆಹ್ವಾನವನ್ನು ಸ್ವೀಕರಿಸಿ, ರಣರಂಗಕ್ಕೈದುವ ಶೂರ ಸೈನಿಕನಂತೆ ದಿಟ್ಟತನದಿಂದ ಮುಂದುವರಿಯುತ್ತಾಳೆ.

ಅದೊಂದು ರಣರಂಗವಾಗಿ ಕೌಶಿಕನ ವಿಲಾಸಮಂದಿರವು ರಣರಂಗವಾಗಿ ಪರಿಣಮಿಸುತ್ತದೆ. ಆತ್ಮಬಲ ಪಶುಬಲಗಳ ತುಮುಲ ಯುದ್ಧ ನಡೆಯುತ್ತದೆ. ಅಕ್ಕನ ನೈಜವಾದ ಕೆಚ್ಚು ಕಾಣುವದಿಲ್ಲ. 'ಹುಲಿಯ ಬಾಯಿಯಲ್ಲಿ ಸಿಲುಕುವ ಹುಲ್ಲೆ ನಾನಲ್ಲ' ಅಕ್ಕನೆನ್ನುತ್ತಾಳೆ. ಜಯಶೀಲಳಾಗುತ್ತಾಳೆ. ಆದರೆ ಗೆದ್ದೆನೆಂಬ ಅಹಂಭಾವವಿಲ್ಲ. ಅರಸನ ಅಸಹಾಯ ಸ್ಥಿತಿಗಾಗಿ ಮರುಗುತ್ತಾಳೆ. ಕನಿಕರಪಟ್ಟು ಕೇಳಿಕೊಳ್ಳುತ್ತಾಳೆ. 'ಗಾಳಿಯ ಸೊಡರಿನಂತಿರುವ ಸಂಸಾರಕ್ಕೆ ಮರುಳಾಗಬೇಡ" 'ಅಮೇಧ್ಯದ ಹಡಿಕೆ ........" ಗೆ ಇಷ್ಟೇಕೆ ಮೋಹ! ಬತ್ತಲೆಯಾಗುತ್ತಾಳೆ. ವಿಶ್ವರೂಪದರ್ಶನದಿಂದ ಅರ್ಜುನನ ಮೋಹವಳಿದಂತೆ, ಕೌಶಿಕನ ಕಾಮದ ಕಣ್ಣು ಶೀಯಾಗುತ್ತದೆ. ಕಲ್ಯಾಣದತ್ತ ಮೊಗದಿರುಹುತ್ತಾಳೆ. ಮಧ್ಯದಲ್ಲಿ ಜೀವದ

ಗೆಳತಿಯರ ಹಿತವಚನಗಳೂ, ಮಾತಾಪಿತರ ಮಮತೆಯ ಮಾತುಗಳೂ ಕಾಲ್ತೊಡಕಾಗುತ್ತವೆ. "ಅಡಿಯ ಮುಂದಿಡೆ ಸ್ವರ್ಗ" ಎಂಬುದನ್ನು ನೆನೆದು ಧೀರೋದಾತ್ತೆಯಾಗಿ ಮುಂದಡಿಯಿಡುತ್ತಾಳೆ. ಕಲ್ಯಾಣವು ಕಣ್ಣಿಗೆ ಕಾಣುತ್ತದೆ.

ಕಲ್ಯಾಣದ ಅನುಭಾವ ಮಂಟಪ! ಅದೊಂದು ವೀರಶೈವ ಸಂಸ್ಕೃತಿಯ ಕೇಂದ್ರ! ಅಕ್ಕನ ಪರೀಕ್ಷೆಯ ಸುಂದರ ಸನ್ನಿವೇಶವಲ್ಲಿ ಕಾಣಬಹುದು. ಅಕ್ಕನು ಪ್ರಥಮ ಶ್ರೇಣಿಯಲ್ಲಿ ತೇರ್ಗಡೆ ಹೊಂದಿ ಪ್ರಥಮ ಸ್ಥಾನ ಪಡೆಯುತ್ತಾಳೆ. ಅವಳ ಅನುಭಾವವನ್ನು ಕೇಳಿ, ಸಕಲ ಶಿವಶರಣ ಶರಣೆಯರು ತಲೆದೂಗುತ್ತಾರೆ.

ಬಿಜ್ಜಳ ಭೂಪತಿಯ ಕಾಟದಿಂದ ಕಲ್ಯಾಣವು ಕಲಕಾಗಲು ಅಲ್ಲಮಪ್ರಭುವಿನಾಣತಿಯಂತೆ ಅಕ್ಕ ಶ್ರೀಶೈಲದತ್ತ ಸಾಗುತ್ತಾಳೆ. ಕಲ್ಲುಮುಳ್ಳುಗಳನ್ನು ತುಳಿಯುತ್ತಾ ಕಾಡು ನಾಡುಗಳನ್ನು ಸುತ್ತುತ್ತ, ಗಿಡಮರಗಳನ್ನೂ ಗಿಳಿ ಕೋಗಿಲೆಗಳನ್ನೂ ಕೇಳುತ್ತ ಕದಳೀ ವನಕ್ಕೆ ಬರಲು ಅವಳ ಆರಾಧ್ಯ ದೇವನು ಮೈದೋರುತ್ತಾನೆ. ಕೈಚಾಚುತ್ತಾ. "ಲಿಂಗೈಕ್ಯವೆನ್ನೆ........ಸಮರಸವೆನ್ನೆ" ಅಕ್ಕ ಬಯಲಾಗುತ್ತಾಳೆ. ನಾಟಕ ಕೊನೆಗೊಳ್ಳುತ್ತದೆ. ಚನ್ನಮಲ್ಲಿಕಾರ್ಜುನನೆಂಬ ವರಶಿವನು ತನ್ನ ಜಗದ್ವಿಲಾಸ ಸಾಕಾದೊಡೆ ತಾನೇ ಹರಿವನಗರ ಮಾಯಾ ಪಾಶವನು" ಎಂಬಂತೆ.

ಇನ್ನು ನಾಟಕದ ತಂತ್ರದ ವಿಷಯ ಅಕ್ಕನ ಸಮಗ್ರ ಜೀವನಕ್ಕೆ ಸಂಬಂಧಿಸಿದ ಸರಳವಾದ ಸುಂದರವಾದ ಅವಳ ಹದಿನೆಂಟು ವಚನಗಳನ್ನು ಆಯ್ದುಕೊಳ್ಳುವಲ್ಲಿ ಹದವರಿತು ಹಾಸು ಹೊಕ್ಕಾಗಿ ಹೆಣೆಯುವದರಲ್ಲಿ ನಾಟಕಕಾರರು ತುಂಬಾ ಶ್ರಮಿಸಿದ್ದಾರೆ. ಯಶಸ್ವಿಗಳಾಗಿದ್ದಾರೆ. ಅನಾವಶ್ಯಕ ಸನ್ನಿವೇಶಗಳಿಗೆ ಅಸ್ಪದ ಕೊಡದೆ, ಅವಶ್ಯಕವಾದವುಗಳನ್ನು ಬಿಡದೆ, ಕಿರಿಯದರಲ್ಲಿ ಹಿರಿದನ್ನು ತುಂಬುವ ಅವರ ಜಾಣ್ಮೆ ಒಡೆದುಕಾಣುತ್ತದೆ. ಕಾಮುಕ ಕೌಶಿಕನ ಕೈಯಲ್ಲಿ ಸಿಲುಕಿದ ಅಸಹಾಯಳಾದ ಅಬಲೆ ತನ್ನ ಶೀಲಕ್ಕೆಂತು ಚ್ಯುತಿ ತಂದುಕೊಳ್ಳಲಿಲ್ಲೆಂಬ ಜಟಿಲ ಸಮಸ್ಯೆಯನ್ನು ಸರಿಯಾಗಿ ಸರಳವಾಗಿ ಬಿಡಿಸಿದ್ದಾರೆ. ಅನುಭಾವ ಮಂಟಪದಲ್ಲಿ ಅಕ್ಕನ ಪರೀ

ಕ್ಷೆಯು ವಿಷಯವೂ ಹಾಗೆಯೆ ಅಲ್ಲಿ ಶಿವ ಹಾಗು ಶಿವಶರಣರ ಸಂಬಂಧ ವಾಗಿ ಅನುಭಾವವೇರ್ಪಟ್ಟದ್ದೂ ಸಮಂಜಸವಾಗಿದೆ. ಔಚಿತ್ಯ ಪೂರ್ಣ ವಾಗಿದೆ.

ಒಟ್ಟಾರೆ ಈ ಕಿರುನಾಟಕವು ಓದಲು ಸಾಲೆ-ಕಾಲೇಜು ಸಾಹಿತ್ಯ ಸಮಾರಂಭಗಳಲ್ಲಿ ಅಭಿನಯಿಸಲು ತಕ್ಕದ್ದಾಗಿದೆ. ಹನ್ನೆರಡನೆಯ ಶತ ಮಾನದ ವೀರಶೈವ ಸಂಸ್ಕೃತಿಯ ದ್ಯೋತಕವಾಗಿದೆ! ಅದರದೊಂದು ರಸ ಘಟ್ಟಿಯಾಗಿದೆ !!! ೮ ಆಣೆ ಬೆಲೆಮಾತ್ರ ಕೊಂಚ ಹೆಚ್ಚಾಗಿದೆಯೇನೋ

ಇಂಥ ಹಲವಾರು ಸುಕೃತಿಪಳು ಶ್ರೀ ಮಲ್ಲಿಕಾರ್ಜುನ, ಶಿ, ಲಕ್ಕೆ. ಅವರಿಂದ ಬೆಳಕಿಗೆ ಬಂದು ಕನ್ನಡಿಗರ ಕೈಯಲ್ಲಿ ಕುಣಿದಾಡಲಿ.



# ಮುರಕೀಭಾವಿಯಲ್ಲಿ ಮಹತ್ವದ ಶೋಧ!

## ಶಿವಶರಣರು ಇಲ್ಲಿ ವಸತಿಮಾಡಿದ್ದರು !! ನಾಗಲಾಂಬಿಕೆ ಗಂಗಾಂಬಿಕೆಯರ ಮೂರ್ತಿಗಳು ಉಂಟು !!!

(ಲೇಖಕ— ವ್ಹಿ. ಜಿ. ಪಾಟೀಲ ರಿ. ಅ. ಡಿ. ಎ ಇನ್ಸಪೆಕ್ಟರ. ಬೆಳಗಾಂವ)

—※※※※—

ಶಿವಶರಣರು ಉಳುವಿಗೆ ಹೋದ ಮಾರ್ಗದಬಗ್ಗೆ ಶಿವಾನುಭವದಲ್ಲಿ ಓದಿದೆವು. ಅದರಲ್ಲಿ ಮುರಕೀಭಾವಿಯ ಹೆಸರು ಬಂದಿದೆ. ನಾಗನೂರ ಶ್ರೀಗಳವರು ಮುರಕೀಭಾವಿಯಲ್ಲಿ ಶಿವಶರಣರು ಇಳಿಕೊಂಡ ಒಂದು ಮೊರಡಿ ಉಂಟೆಂದೂ, ಅದಕ್ಕೆ ಜನರು ಈಗಲೂ "ಕಲ್ಯಾಣಮಡ್ಡಿ" ಎಂದು ಕರೆಯುತ್ತಾರೆಂದೂ, ಆ ಮೊರಡಿಯಲ್ಲಿ ಒಂದು ಬಿಲ್ವವೃಕ್ಷದ ಕೆಳಗೆ ಎರಡು ಹೆಣ್ಣು ಮೂರ್ತಿಗಳೂ ಅವುಗಳ ಸಮೀಪದಲ್ಲಿ ಒಂದು ಕಲ್ಲಿನ ಮೇಲೆ ಪಾದಗಳೂ ಒಂದು ಭಾವಿಯು ಉಂಟೆಂದು ಹೇಳಿದರು. ಅದನ್ನು ನಾವೀರ್ವರೂ ಹೋಗಿ ಇನ್ನೊಮ್ಮೆ ಸಂಶೋಧನ ದೃಷ್ಟಿಯಿಂದ ನೋಡೋಣ ಎಂದು ಗೊತ್ತುಮಾಡಿಕೊಂಡೆವು. ಆ ಪ್ರಕಾರ ತಾ|| ೧೪—೩—೧೯೫೬ ನೆಯ ದಿವಸ ನಾವೀರ್ವರೂ ಮುರಕೀಭಾವಿಗೆ ( ತಾಲೂಕ ಬೈಲಹೊಂಗಲ ನೇಸರಗಿಯಿಂದ ದಕ್ಷಿಣಕ್ಕೆ ೩ ಮೈಲಿನ ಮೇಲೆ ಅದೆ.) ಹೋಗಿ ಅಲ್ಲಿಯ ಸ್ಥಳಪರೀಕ್ಷಣೆಯನ್ನು ಮಾಡಿ ಸ್ಥಾನಿಕ ದಂತಕಥೆಗಳನ್ನೂ ಕೇಳಿಕೊಂಡೆವು. ಅದರ ವಿವರಣೆ ಕೆಳಗಿನಂತೆ ಅದೆ.

ಮುರಕೀಭಾವಿಯು ಪಶ್ಚಿಮಕ್ಕೆ ಹಳ್ಳದ ಬದಂಡೆಗೆ ಹೊಂದಿ ಒಂದು ತುಂಬಿ ಹೊರಚೆಲ್ಲಿ ಹರಿಯುವ ಭಾವಿಯುಂಟು. ಅದರ ದಂಡೆಯಿಂದ ಕುಸು ಅಂತರದಲ್ಲಿ ಒಂದು ದೊಡ್ಡ ಕಲ್ಲು ಇದ್ದು ಅದರ ಮೇಲೆ ೪ ಪಾದಗಳು ( ಹಿಂಬಡು ಮೇಲೆ ಬೆರಳು ಕೆಳಗಾಗಿರುವ ) ಉಂಟು. ಅದರಿಂದ ಸುಮಾರು ಅರ್ಧ ಫರ್ಲಾಂಗಿನ ಮೇಲೆ, ಒಂದು ಬಿಲ್ವವೃಕ್ಷವಿದ್ದು ಅದರ ಬುಡಕ್ಕೆ ಒಂದು ಎದ್ದುನಿಂತ ಮತ್ತೊಂದು ಕೂತ ಭಂಗಿಯಲ್ಲಿದ್ದ, ಎರಡು ಹೆಣ್ಣು ಮೂರ್ತಿಗಳುಂಟು. ಈ ಕೂತ ಮೂರ್ತಿಗೆ ಜನರು ಬಸವೇಶನ

ಪತ್ನಿಯಾದ "ನೀಲಮ್ಮ" ಎಂದು ಕರೆಯುತ್ತಾರೆ. ಹಾಗೂ ಪೂಜೆ ಮಾಡುತ್ತಾ ಬಂದಿದ್ದಾರೆ. ಎದ್ದುನಿಂತ ಮೂರ್ತಿಯ ಬಗ್ಗೆ ಜನರಿಂದ ಯಾವ ವಿಷಯವೂ ಗೊತ್ತಾಗಲಿಲ್ಲ.

ಬಿಜ್ಜಳನ ದಂಡು ಬೆನ್ನುಹತ್ತಿದಾಗ ಶಿವಶರಣರು ಇದೇ ಮಾರ್ಗದಿಂದ ಉಳವಿಗೆ ಹೋದರೆಂದೂ, ಅಮ್ಮನವರು ಹತ್ತಿದ ಪಾಲಕಿಯ ದಂಡಿಗೆಯು ಇಲ್ಲಿ ಮುರಿಯಿತೆಂದೂ ಅದರಿಂದ ಅವರು ಈ ಭಾವಿಯಮೇಲೆ ವಸತಿಮಾಡಿದರೆಂದೂ, ಅದರಿಂದಲೇ ಈ ಊರಿಗೆ "ಮುರಕೀಭಾವಿ" ಎಂಬ ಹೆಸರು ಬಂದಿತೆಂದೂ ಒಬ್ಬ ವಯೋವೃದ್ಧರು ಹೇಳಿದರು. ಶಿವಶರಣರು ಈ ಮರಡಿಯಲ್ಲಿ ಇಳಕೊಂಡಿದ್ದರಿಂದ ಇದಕ್ಕೆ "ಕಲ್ಯಾಣಮಡ್ಡಿ" ಎಂಬ ಹೆಸರು ಬಿತ್ತೆಂದೂ ತಿಳಿಯಿತು. ಈ ಮೂರ್ತಿಗಳಿಂದ ಪಶ್ಚಿಮಕ್ಕೆ ಅರ್ಧ ಮೈಲಿನ ಮೇಲಿರುವ ಗಾಳಿಮರ್ಡಿಯ (ಎತ್ತರಗುಡ್ಡ) ಮೇಲೆ ವೀರಭದ್ರನ ದೇವಾಲಯವು (ಲಕ್ಕುಂಡಿ ಸೀಮೆಯಲ್ಲಿ) ಈ ಹೊತ್ತಿಗೂ ವಿರಾಜಿಸುತ್ತ ನಿಂತದೆ. ಇದು ಶಿವಶರಣನ ಸೇನಾನಿಯಾದ "ಮಡಿವಾಳ ಮಾಚಿದೇವರ" ಮೂರ್ತಿ ಎಂಬದರಲ್ಲಿ ಸಂದೇಹವಿಲ್ಲ.

ಎತ್ತರವಾದ ಗುಡ್ಡದ ಮೇಲಿರುವ ಮಡಿವಾಳಮಾಚಿದೇವನ ಮೂರ್ತಿ (ವೀರಭದ್ರ) ಕಲ್ಯಾಣಮರ್ಡಿ, ಇದರನಡುವೆ ನೀಲಮ್ಮನಮೂರ್ತಿ, ಇದರ ಸಮೀಪದಲ್ಲೇ ತುಂಬಿ ಹರಿಯುವಭಾವಿ, ಪಾಲಕಿಯ ದಂಡಿಗೆ ಮುರಿದ ಐತಿಹ್ಯ, ಮುರಕೀಭಾವಿ ಎಂಬ ಹೆಸರು, ಇವುಗಳನ್ನು ವಿಚಾರಿಸಿ, ಇಲ್ಲಿಯ ಪ್ರಾಕೃತಿಕ ಸ್ವರೂಪವನ್ನು ನಿರೀಕ್ಷಿಸಿದರೆ ಇಲ್ಲಿ ಶಿವಶರಣರು ವಸತಿಮಾಡಿದ ಸಂಗತಿ ನಿಜವಿರಬೇಕೆಂದು ಒಮ್ಮೆಲೇ ಬೋಧವಾಗುತ್ತದೆ. ಅದರಿಂದ ಇದು ಐತಿಹಾಸಿಕ ಸ್ಥಳವೂ ಶಿವಶರಣರ ಪಾದಸ್ಪರ್ಶದಿಂದ ಪವಿತ್ರ ಕ್ಷೇತ್ರವೂ, ಪವಿತ್ರ ತೀರ್ಥವೂ ಆಗಿದೆ.

### ಮೂರ್ತಿಗಳ ವಿವರಣೆ

೧ನೇದು— ದೊಡ್ಡಮೂರ್ತಿ (ಎದ್ದುನಿಂತಿದೆ) ಎತ್ತರ ೨ ಫೂಟು. ೯ ಇಂಚು, ಅಗಲು ೧೫ ಇಂಚು ಅದೆ. ಮುಖ ಒಡೆದಿದೆ ಇದರ ಎರಡೂ ಕಿವಿಗಳಲ್ಲಿ ದುಂಡಾದ ಆಭರಣಗಳಿವೆ. ಬಲಗೈಯಲ್ಲಿ ಜಪಮಾಲೆಯೂ (ರುದ್ರಾಕ್ಷಿ) ಎಡಗೈಯಲ್ಲಿ ಲಿಂಗವೂ ಉಂಟು. ನಡುವಿನಿಂದ ಪಾದದ ವರೆಗೆ ಪರಕಾರದಂಥ, ಉಡುಗರೆ ಇದ್ದು, ಅದು ನಡುನಡುವೆ ೩ ಸೋಪಾನಗಳಾಗಿ ಕೆತ್ತಲ್ಪಟ್ಟಿದೆ.

ಐದನೇದು— ಸಣ್ಣ ಮೂರ್ತಿ (ಕೂತಸ್ಥಿತಿಯಲ್ಲಿದೆ). ಎತ್ತರ ಸುಮಾರು ೧॥ ಫೂಟು ಅಗಲು ೧ಫೂಟು ಉಂಟು. ಎರಡೂ ಕೈಗಳನ್ನೂ ಎರಡೂ ಮೊಳಕಾಲುಗಳ ಮೇಲೆ ಇಟ್ಟುಕೊಂಡು ಕೂತಸ್ಥಿತಿಯಲ್ಲಿವೆ. ಬಲಗೈಯಲ್ಲಿ ಜಪ ಮಾಲೆಯೂ, ಎಡಗೈಯಲ್ಲಿ ಲಿಂಗವೂ ಉಂಟು. ಸೀರೆಯ ನಿರಿಗೆಗಳು ಸ್ಪಷ್ಟವಾಗಿ ಕಾಣಿಸುತ್ತಿವೆ. ಕೊರಳಲ್ಲಿ ಕೊರಳಿಗೆಹತ್ತಿ ಒಂದು ಸರವಿದೆ. ಅದರ ಕೆಳಗೆ ಮಂಗಲಸೂತ್ರದ ಸರದಂಥ ಸರವಿದೆ. ಅದರ ಕೆಳಗೆ ಚೌಕ (ಲಿಂಗ ಹಾಕುವ) ಅದೆ. ಎರಡೂ ರಟ್ಟೆಗಳಲ್ಲಿ ರುದ್ರಾಕ್ಷಿಯ ಸರಗಳುಂಟು ಬಲಗಾಲಿನ ಬೆರಳುಗಳು ಒಡೆದಿದ್ದು ಎಡಗಾಲಿನ ಬೆರಳುಗಳು ನೆಟ್ಟಗೆ ಇವೆ. ಕುಪ್ಪಸದ ಗುರ್ತು ಸರಿಯಾಗಿದೆ. ಈ ಮೂರ್ತಿಯು ಒಟ್ಟನಲ್ಲಿ ಸ್ಥೂಲಕಾಯದಾಗಿ ಕಾಣುತ್ತದೆ.

ಶಿವಶರಣರು ಇಲ್ಲಿಗೆ ಬರುವ ಮೊದಲೇ "ನೀಲಾಂಬಿಕೆಯು" ಕೃಷ್ಣಾ ತೀರದಲ್ಲಿ ಲಿಂಗೈಕ್ಯರಾದದ್ದರಿಂದಲೂ ಈ ಊರಿಗೆ ಸಮೀಪವಾಗಿರುವ ಮುಗು ಟಖಾನ ಹುಬ್ಬಳ್ಳಿಯಲ್ಲಿ "ಗಂಗಾಂಬಿಕೆಯು" ಲಿಂಗೈಕ್ಯರಾದರೆಂದು, ಇತಿ ಹಾಸವು ಹೇಳುವದರಿಂದಲೂ ಇಲ್ಲಿ ವಸತಿಮಾಡಿದವರು ಜನರು ತಿಳಕೊಂ ಡಂತೆ "ನೀಲಮ್ಮನವರು" ಆಗಿರದೆ "ಗಂಗಾಂಬಿಕೆಯು" ಆಗಿರಬೇ ಕೆಂದೂ, ಆದರಿಂದ ಈ ಮೂರ್ತಿಯು ಗಂಗಾಂಬಿಕೆಯದೇ ಎಂದೂ, ನಮ್ಮ ದೃಢವಾದ ನಂಬಿಗೆಯಾಗಿದೆ. ಆದಕಾರಣ ನಾವು ಈ ಮೂರ್ತಿಯನ್ನು "ಗಂಗಾಂಬಿಕೆ" ಎಂದೇ ಇದರಲ್ಲಿ ಉಲ್ಲೇಖಿಸಿದ್ದೇವೆ.

ಶಿವಶರಣರ ಯುದ್ಧಕಾಲದಲ್ಲಿ ನಾಗಲಾಂಬಿಕೆಯು ಅವರ ಸಂಗಡ ಇದ್ದಳೆಂದೂ ಈ ಮುರಕಿಭಾವಿಯ ಸಮೀಪದಲ್ಲಿರುವ ಆಕೆಯ ಹೆಸರಿನ ಊರಾದ "ನಾಗಲಾಪುರದಲ್ಲಿ" ನಾಗಲಾಂಬಿಕೆಯ ಮೂರ್ತಿಯು ಈ ಹೊತ್ತಿಗೂ ಇರುವದರಿಂದಲೂ ಈ ಗಂಗಾಂಬಿಕೆಯ ಮೂರ್ತಿಯೊಡನೆ ಇರುವ ಮೂರ್ತಿಯು "ನಾಗಲಾಂಬಿಕೆಯದು" ಆಗಿರಬೇಕೆಂದು ನಮಗೆ ತೋರುತ್ತದೆ. ಇದಕ್ಕೂ ಹೆಚ್ಚಿಗೆ ವಿಚಾರಮಾಡುವ ಭಾರವನ್ನು ಇತಿಹಾಸ ಸಂಶೋಧಕರ ಪಾಲಿಗೆ ಬಿಟ್ಟು ಬಿಟ್ಟಿದ್ದೇವೆ. ನಾಗನೂರ ಶ್ರೀಗಳವರ ಉಪದೇಶದಿಂದ ಮುರಕೀಭಾವಿಯ ಜನರು ಈ ಮೂರ್ತಿಗಳ ಮೇಲೆ ಗುಡಿಕಟ್ಟುವ ಕೆಲಸಕ್ಕೆ ಇದೀಗ ಆರಂಭಿಸಿದ್ದಾರೆ. ಈ ಗುಡಿಗೆ ಬೇಕಾ ಗುವ ಕಟ್ಟಿಗೆ ಸಿಮೆಂಟುಗಳನ್ನು ತಾವು ಕೊಡುವದಾಗಿ ಶ್ರೀಗಳವರು ವಾಗ್ದಾನ ಮಾಡಿದ್ದಾರೆ.

ಏಳೆಂಟು ನೂರುವರ್ಷಗಳಿಂದ ಯಾರಿಗೂ ಗೊತ್ತಿಲ್ಲದ ಹಾಳುಬಿದ್ದ ಈ ಸ್ಥಳವು ನಾಗನೂರ ಶ್ರೀಗಳ ಕೃಪಾಬಲದಿಂದ ಸುಪ್ರಸಿದ್ಧ ಕ್ಷೇತ್ರವಾಗಿ ಪರಿಣಮಿಸುವ ಸುಚಿನ್ಹಗಳು ತೋರ ತೊಡಗಿವೆ. ಇದರ ಬಗ್ಗೆ ಇವರನ್ನು ಎಷ್ಟು ಕೊಂಡಾಡಿದರೂ ಕಡಿಮೆಯೇ ಸರಿ. ಇವರ ಅನುಕರಣವನ್ನು ಇತರರು ಮಾಡಲೆಂದು ಹಾರೈಸಿ ಈ ಲೇಖವನ್ನು ಸಮಾಪ್ತಗೊಳಿಸುತ್ತೇನೆ.

**ಟೀಪು:—** ಲೇಖಕರೂ ಶ್ರೀ ನಾಗನೂರು ಮಹಾಸ್ವಾಮಿಗಳೂ ಮೇಲ್ಕಂಡ ಸ್ಥಳವನ್ನು ನಿರೀಕ್ಷಿಸಿ ಸಂಶೋಧನಾತ್ಮಕ ಈ ಲೇಖವನ್ನು ಬರೆದು ಕಳಿಸಿದ್ದಕ್ಕೆ ಸಮಾಜವು ಋಣಿಯಾಗಿದೆ. ಶ್ರೀಗಳವರಂತೆಯೇ ಶಿವಶರಣರ ಸ್ಥಾನಗಳನ್ನು ಸಂಶೋಧಿಸಿ ಅವುಗಳು ನಾಶವಾಗದಂತೆ ಏರ್ಪಾಡು ಮಾಡುವದರಿಂದ ವೀರಶೈವ ಪುರಾತನ ಸಂಸ್ಕೃತಿಯನ್ನು ಉದ್ಧಾರ ಮಾಡಿದಂತೆಯೇ ಸರಿ.

ಸಂಪಾದಕರು.

—oo●oo—

## ಶ್ರೀ ಮಾದೇಶ್ವರ ಕ್ಷೇತ್ರದಲ್ಲಿ ಸಮಾರಂಭ

### ರಾಜ ಪ್ರಮುಖರಿಂದ ನೂತನ ಮಾರ್ಗ ಪ್ರಾರಂಭೋತ್ಸವ

(ಒಬ್ಬ ಪತ್ರವ್ಯವಹಾರಕ)

ಇದೇ ತಾ ೧೪ ರ ಬೆಳಗಿನ ೧೧ ಗಂಟೆಗೆ ಶ್ರೀ ಮಲೇ ಮಾದೇಶ್ವರ ಕ್ಷೇತ್ರಕ್ಕೆ ನೂತನವಾಗಿ ನಿರ್ಮಿತವಾಗಿರುವ ಘಟ ರಸ್ತೆಯ ಪ್ರಾರಂಭೋತ್ಸವವನ್ನು ಮೈಸೂರಿನ ಶ್ರೀ ಮನ್ಮಹಾರಾಜರವರೂ ತಮ್ಮ ಅಮೃತ ಹಸ್ತದಿಂದ ನೆರವೇರಿಸಿದರು. ದೇವಾಲಯದ ಬಿನ್ನಹ ಪತ್ರಗಳು ತಾಳೆ ಬೆಟ್ಟದಲ್ಲಿಯ ಚಿತ್ರವನ್ನು ಪ್ರಭುವರ್ಯಗೆ ಸಮರ್ಪಿಸಲ್ಪಟ್ಟವು. ರಾವ್ ಸಾಹೇಬ ಜಿ. ಪಿ. ಮಲ್ಲಪ್ಪನವರು ಶಾಸನ ಸಭಾಧ್ಯಕ್ಷ ಶ್ರೀ ಎಚ್ ಸಿದ್ದಯ್ಯನವರು ಅನುಕ್ರಮವಾಗಿ ಬಿನ್ನವತ್ತಳೆಗಳನ್ನು ಓದಿ ಪೂರೈಸಿದರು. ಆಸ್ಥಾನ ವಿದ್ವಾನ ಶ್ರೀ ಬಿ. ಶಿವಮೂರ್ತಿಶಾಸ್ತ್ರಿಗಳಿಂದ ವಿರಚಿತವಾದ ಸ್ವಾಗತಗೀತೆಗಳಿಂದ ಸಭೆ ಪ್ರಾರಂಭವಾಯಿತು. ಬಿನ್ನಹ ಪತ್ರಗಳಲ್ಲಿ ಶ್ರೀ ಕ್ಷೇತ್ರಕ್ಕೆ ಸಂಬಂಧಪಟ್ಟ ವಿಷಯಗಳು ಸಮಾವೇಶವಾಗಿದ್ದವು. ರಾಜಪ್ರಮುಖರು ಕನ್ನಡದಲ್ಲಿಯೇ ಉತ್ತರವಿತ್ತರು. ರಾಷ್ಟ್ರಗೀತೆಯೊಡನೆ ಸಭೆ ಮುಕ್ತಾಯವಾಯಿತು.

ಈ ಸಮಾರಂಭಕ್ಕೆ ಬೆಂಗಳೂರಿಂದ ಶ್ರೀಗಳಾದ ಎಚ್ ಸಿದ್ಧಯ್ಯ ಟಿ, ಸಿದ್ಧಲಿಂಗಯ್ಯ. ಬಿ. ಶಿವಮೂರ್ತಿಶಾಸ್ತ್ರೀ, ಧರ್ಮ ಪ್ರಕಾಶ, ಎನ್ ರುದ್ರಯ್ಯ, ಯಜಮಾನ. ಕಂಚಪ್ಪ. M. L. A. ಸೂಲರು ಸಿದ್ಧಪ್ಪ ಲಕ್ಷ್ಮೀದೇವ ತಮಣ್ಣ ನೇರಿಳೆ ಮಾದಯ್ಯ, ವಿರುಪಾಕ್ಷಯ್ಯ, ಕೊಯಿಮತ್ತೂರಿನ ಮುಜರಾಯ ಡೆಪ್ಯುಟಿ ಕಮೀಷನರ, ದೇವಾಲಯದಲ್ಲಿ ಧರ್ಮದರ್ಶನಗಳು ಇತ್ಯಾದಿ ಮಹನೀಯರು ಆಗಮಿಸಿದ್ದರು.

### ಶ್ರೀ ಮಾದೇಶ್ವರ ದೇವಾಲಯದಲ್ಲಿ ಶ್ರೀ ಮನ್ಮಹಾರಾಜರಿಂದ ಪೂಜಾದಿಗಳು

ರಸ್ತೆಯ ಪ್ರಾರಂಭೋತ್ಸವವನ್ನು ನೆರವೇರಿಸಿದ ಮೇಲೆ ಶ್ರೀಮನ್ಮಹಾರಾಜರವರೂ ತಮ್ಮ ಪೂಜ್ಯ ಶ್ರೀಅವರಾದ ಶ್ರೀ ಮದ್ಯುವರಾಣಿಯವರು,

ಸುಪುತ್ರಿ ಕುಮಾರಿ ಗಾಯತ್ರಿದೇವಿ, ಮತ್ತು ತಮ್ಮ ಹೂಜೂರಸೆಕ್ರೆ, ಪ್ರವೇಟ ಸಕ್ರಟರಿ, ಪೇಲೆಸ್ ಕಂಟ್ರೋಲರು, ಸರ್ದಾರಗಳು ಸಮೇತ ಶ್ರೀ ಮಾದೇಶ್ವರಸ್ವಾಮಿಯವರ ದೇವಾಲಯಕ್ಕೆ ಬರಮಾಡಿಸಿದರು. ದೇವಾಲಯು ಸ್ವಾಮಿಯವರು ಭಕ್ತಮಂಡಳಿಯವರು ಸಕಲ ರಾಜ ಮರ್ಯಾದೆಗಳೊಡನೆ ಸ್ವಾಗತಿಸಿದರು. ಮಂಗಳವಾದ್ಯಗಳು ಘೋಷಗಳು ಮೊಳಗುತ್ತಿದ್ದವು. ಅರ ಮನೆಯ ಪರವಾಗಿ ಶ್ರೀ ಸ್ವಾಮಿಯವರ ಸನ್ನಿಧಿಗೆ ಮರ್ಯಾದೆಪೂರ್ಣವಾದ ಸೇವೆಯೂ ಕಾಣಿಕೆಯೂ ಸಲ್ಲಿಸಲ್ಪಟ್ಟವು. ಶ್ರೀಮನ್ಮಹಾರಾಜರಿಗೆ ಶ್ರೀಕ್ಷೇತ್ರಕ್ಕೆ ಸಂಬಂಧವ್ರೂ ಐತಿಹಾಸಿಕ ಮತ್ತು ಪೌರಾಣಿಕ ಸಂಗತಿಗಳನ್ನೂ ಪಂಡಿತರತ್ನ ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳು ಅರಿಕೆ ಮಾಡಿದರು. ಪೂಜಾನಂತರ ಮಹಾಪ್ರಭುಗಳು ಶ್ರೀ ಭಕ್ತಮಂಡಳಿಯವರಿಗಾಗಿ ಹಣ ಸಂಕರ್ಷಣೆ ನಡಿ ಸಿದರು. ದೇವಾಲಯದ ಸಮಿತಿಯವರು ಶ್ರೀ ಮನ್ಮಹಾರಾಜರಿಗೆ ಭೋಜನ ಸಮಾರಂಭವನ್ನು ಏರ್ಪಡಿಸಿದರು.

ಸಂಜೆ ನಾಲ್ಕುವರೆ ವರೆಗೆ ಶ್ರೀಮನ್ಮಹಾರಾಜರೊಂದಿಗೆ ಭಕ್ತಮಂಡಳಿ ಯವರು ಫೋಟೋ ತಗೆದುಕೊಂಡನಂತರ ಶ್ರೀ ಮನ್ಮಹಾರಾಜರವರೂ ಆಗ ಮಿಸಿದರು. ಮಹಾಶಯರು ಶ್ರೀಕ್ಷೇತ್ರದಿಂದ ಶ್ರೀ ಮಾದೇಶ್ವರ ಸ್ವಾಮಿಯ ವರ ಫೋಟೋದೊಡನೆ ನಿರ್ಮಿಸಿದರು.

## ಶ್ರೀ ಶಾಸ್ತ್ರಿಗಳಿಗೆ ರಾಜ ಸನ್ಮಾನ

ಆಸ್ಥಾನ ವಿದ್ವಾನ ಪಂಡಿತರತ್ನಂ ಬಿ. ಶಿವಮೂರ್ತಿ ಶಾಸ್ತ್ರಿಗಳಿಗೆ ಶ್ರೀ ಮಾಲೆಯ ಮಾದೇಶ್ವರ ಸ್ವಾಮಿಯವರ ಚರಿತ್ರೆ ಸಾಹಿತ್ಯ, ಸಂಸ್ಕೃತಿ ಸೇವೆಯೂ ತಮ್ಮ ಮೆಚ್ಚಿಗೆ ಸೂಚಿಸಲೂ ಶ್ರೀ ಮನ್ಮಹಾರಾಜರವರ ಸನ್ನಿಧಿಯಿಂದ ಶ್ರೀ ಶಿವಮೂರ್ತಿ ಶಾಸ್ತ್ರಿಗಳಿಗೆ ಬೆಲೆ ಬಾಳತಕ್ಕ ಒಂದು ಜೊತ ಕಾಶ್ಮೀರಶಾಲನ್ನು ಅನುಗ್ರಹಿಸಲ್ಪಟ್ಟಿತು. ಹಾಗೆಯೆ ದೇವಾಲಯದ ಕಾರ್ಯಗಳಲ್ಲಿ ವೈದಿಕರಾಗಿದ್ದ ತುಮಕೂರು ಶ್ರೀ ಮಲ್ಲಿನಾಥ ಶಾಸ್ತ್ರಿಗಳಿಗೆ ಶ್ರೀಮನ್ಮಹಾರಾಜರಿಂದ ಸಂಭಾವನೆ ಅನುಗ್ರಹಿಸಲ್ಪಟ್ಟಿತು.

---

ಶ್ರೀ ಮಲೆಯ ಮಾನೇಶ್ವರಸ್ವಾಮಿ ಬೆಟ್ಟದಲ್ಲಿ ನೂತನವಾಗಿ ನಿರ್ಮಿತವಾಗಿರುವ
ಮಾರ್ಗದ ಪ್ರಾರಂಭೋತ್ಸವವನ್ನು ತಮ್ಮ ಅಮೃತ ಹಸ್ತದಿಂದ
ಮೈಸೂರು ಮಹಾರಾಜರೂ ಕರ್ಣಾಟಕ ರತ್ನಸಿಂಹಾಸನಾಧೀಶ್ವರರೂ ಆದ
ಶ್ರೀ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್
ಜಿ. ಸಿ. ಬಿ., ಜಿ. ಸಿ. ಎಸ್. ಐ.,

ಮಹಾಸ್ವಾಮಿಯವರು ನೆರವೇರಿಸುವ ಸಂದರ್ಭದಲ್ಲಿ
ವಿರಚಿತವಾಗಿ ಪಠಿಸಲ್ಪಟ್ಟ

# ಮಂಗಲಗೀತೆಗಳು.



ಕಂದ॥ ಶ್ರೀ ಮಾದೇಶ್ವರ ಭವಹರ ।
ಸೋಮೇಶ್ವರರೂಪ ಶರಣ ಸಂಕುಲದೀಪಾ ॥
ಭೂಮಿಪ ಜಯಚಾಮೇಂದ್ರಂ ।
ಗೀಮಹಿಯೊಳ್ ಶುಭಮನಿತ್ತು ಪೊರೆ ಕೃಪೆಯಿಂದಂ ॥೧॥

ಭಾ॥ಷ॥ ಪೂರ್ವಘಟ್ಟದ ಮಧ್ಯಭಾಗದ ।
ಪೂರ್ವಮಪ್ಪಂತಿರ್ಪ ತಾಣದಿ ।
ಸರ್ವ ಸುರಮನುಮುನಿ ಸುಪೂಜಿತನೆನಿಸಿ ಮೆರೆದಿರ್ಪ ॥
ಸರ್ವಮಂಗಲೆಯರಸ ಗೆಣೆಯಿವ ।
ನುರ್ವಿಯೊಳಗೆಂಬಂತೆ ರಾಜಿಪ ।
ಶಾರ್ಕನಿಧಿ ಮಾದೇಶ ಪೊರೆ ಜಯಚಾಮ ಭೂಪತಿಯಂ ॥೨॥

ಮಲೆಯ ಮಾದೇಶ್ವರನ ಬೆಟ್ಟಕೆ ।
ಸುಲಲಿತದ ಮಾರ್ಗವನು ವಿರಚಿಸಿ ।
ನೆಲದೊಳೆಲ್ಲಾ ಯಾತ್ರಿಕರು ಸುಖದಿಂದ ಬರ್ಪಂತೆ ॥
ಒಲಿದು ದೇವಸ್ಥಾನ ಸಮಿತಿಯು ।
ಇಳೆಯೊಳಗೆ ಸತ್ಕೀರ್ತಿಯಾಂತರು ।
ತಿಳಿಯಲಿವರಿಂ ಧನ್ಯರಾರೀ ಧಾತ್ರಿವಳಯದೊಳು ॥೩॥

ಇಳೆಯ ಪಾವನ ಕ್ಷೇತ್ರಮೆನಿಸಿದ ।
ಮಲೆಯ ಮಾದೇಶ್ವರನ ಬೆಟ್ಟದೊ ।
ಳಿಳಿದು ವಸತಿಯ ಕಲ್ಪಿಸಲು ಸೌಕರ್ಯಮಪ್ಪಂತೆ ॥

ಕಲಿಯು ಜಯಚಾಮೇಂದ್ರ ಭೂಪತಿ ।
ಯೊಲಿದು ಛತ್ರಮನೊಂದನಾಗಿಪ ।
ಭಳಿರೆ! ತಾನೇಂ ಸುಕೃತಿಯೋ ಮೈಸೂರು ಭೂಮಿಪನು ॥೪॥

ಇಂದು ಜಯಚಾಮೇಂದ್ರ ಜನಪತಿ ।
ಬಂದು ಘನ ಮಾದೇಶ ಸನ್ನಿಧಿ ।
ಗೊಂದೆ ಮನದಿಂ ಮಲೆಯ ಮಾರ್ಗವ ಮೊದಲುಗೊಳಿಸಿದನು ॥

ತಂದೆ ಸಿರಿ ಮಾದೇಶ ತಾನಿದ ।
ರಿಂದ ಸಂತಸಗೊಂಡು ನಲಿವನು ।
ನಂದಿವಾಹನ ಪೊರೆವನ್ನೈ ಜಯಚಾಮ ಭೂಪತಿಯಂ ॥೫॥

ಸಾಂಗತ್ಯ॥ ಮಲೆಯ ಮಾದೇಶನೆ ಯಿಳೆಯ ಪಾಲಿಸುವನೆ ।
ನೆಲದೊಳು ಮಳೆಬೆಳೆಗಳ ನಿತ್ತು ।
ಸಲಹು ಕರ್ನಾಟಕ ನೆಲದಾಣ್ಮನೆನಿಸಿಹ ।
ಚೆಲುವ ಮೈಸೂರು ಭೂಮೀಂದ್ರನಂ ॥೬॥

ಬರೆದ ಕವಿ:— ಆಸ್ಥಾನ ವಿದ್ವಾನ್, ಪಂಡಿತರತ್ನಂ, ಕೀರ್ತನಾಚಾರ್ಯ
ಬ. ಶಿವಮೂರ್ತಿಶಾಸ್ತ್ರಿಗಳು.

ಸಂಪಾದಕರು:— 'ಶರಣ ಸಾಹಿತ್ಯ,' ಬೆಂಗಳೂರು.

********

## ***** ಎಂದಿಪ್ಪೆನೊ ? *****

********

***

**

*

(ಕವಿ. ರಾ|| ಬ|| ಶ್ರೀಗುರುಸಿದ್ಧ ಶಿವಾಚಾರ್ಯಸ್ವಾಮಿ " ನಿರಂಜನಾಲಯ ")
ಗುರುವಿನಹುರಮಠ

ಎನ್ನೊಳೀತಕೆ ಮುನಿಸು ಎಲೆ ಸ್ವಾಮಿಯೇ !
ಪುರಹರನೆ ! ಭವಹರನೆ ! ಚಿನ್ನಾದ ಚಿಲ್ಲಿಂಗವೇ- !!
ವಾದಕ್ಕೆ ನಿಲುಕದಿಹ, ವೇದಕ್ಕೆ ಸಿಲುಕದಿಹ
ತರ್ಕಕ್ಕೆ ಬಗ್ಗದಿಹ ವಿತರ್ಕನೆ !
ಯಾಗಕ್ಕೆ ಕಾಣದಿಹ, ಬರಿಯೋಗಕ್ಕೆ ಬಾರದಿಹ,
ಶರಣಜನ ಸಂಪ್ರೀತನೆ !
ಶಾಸ್ತ್ರಕ್ಕೆ ಸಿಕ್ಕದಿಹ, ಸೂತ್ರಕ್ಕೆ ಬಾರದಿಹ ಸದ್ಭಕ್ತಹೃದಯೇಶನೆ !!
ಕೇದಗೆಯ ವನದಲ್ಲಿ ಸಂಪಿಗೆಯ ಬನದಲ್ಲಿ
ಮಲ್ಲಿಗೆಯತನಿಯಲ್ಲಿ ತಿಂಗಳಿನಚಲುಬೆಳಗಿನಲ್ಲಿ
ನಿಮ್ಮಕಾಣಲು ತೊಳಲಿ ಬಳಲಿ ಬಸವಳಿದೆನು
ಹೊಳೆವ ಕೆಂಜೆಡೆಯುಳ್ಳ ಪ್ರಭುವೆ !
ದಿವ್ಯಭಸಿತ ಭೂಷಿತವಿಭುವೆ
ಶರಣರು ಸತತ ಸೇವಿಸುವ ಗುರುವೆ
ಈರೇಳು ಲೋಕಗಳ ಪಾಲಿಪಾ ಪ್ರಭುವೆ
ಸದಮಲರ ಹೃದಯಾಕಾಶದೊಳು ಶೋಭಿಸುವ ಬೆಳಗೆ !!
ಘನವಾದ ನಿಮ್ಮಡಿಯ ಅಣುವಾಗಿ ಪೂಜಿಸುವೆ,
ಪೊಡಮಡುವೆ ವಾಮಪೀಠದಿ ನೆಲಸಪ್ಪ ಕಂದೆ !
ಮನವಾಂತುಶಮೆಯೆಂಬ ಉದಕವ ನೆರೆವೆ,
ದಮೆಯೆಂಬ ಭಸಿವತನು ಪೂಜಿಸುವೆ,

ಶಾಂತಿ ಗಂಧಾಕ್ಷತೆಯ ಅಚ್ಚುವೆನು ಬಾಬಾ !!
ಚೆಂಗುಲಾಬಿಯ ತರುವೆ,
ಅರೆಬಿರಿದಮಲ್ಲಿಗೆಯ ತರುವೆ
ಕಂಪೀವ ಸಂಪಿಗೆಯ ತರುವೆ-
ಜಾಜಿಯನು ಮುಡಿಸುವೆನು-
ವರಬಿಲ್ವಪತ್ರಗಳ ಧರಿಸುವೆನು ಬಾಬಾ !!
ಧೂಪವನು ಬೀಸುವೆನು-ದೀಪವ ಬೆಳಗುವೆನು-
ಗಂಟೆಯನು ನುಡಿಸುವೆ--ಜಾಗಟೆಯ ಬಾರಿಸುವೆ-
ತತ್ವಚಯನೈವೇದ್ಯನೀಡುವೆನು ಬಾರಪ್ಪಲಿಂಗವೆ !!
ಗಾಳಿಯನು ಬೀಸುವೆನು
ಸುಖಾಸನವ ಮಾಡುವೆನು
ಮಲಗಪ್ಪಲಿಂಗವೆ ! ಬಾಗಿಲನು ಕಾಯ್ದಿಪ್ಪೆನು !!
ಎನ್ನಪ್ಪ ! ಎನ್ನಯ್ಯ ಮೃಡನೆ !!
ಪುರಹರನೆ ! ಭವಹರನೆ ಶಿವನೆ !!
ಎನ್ನಕಂಗಳಬರವು ಹಿಂಗುವುದು ಎಂದಿಗೋ ?
ಎನ್ನಕಂಗಳ ಕಡೆಗೋಡಿ ಹರಿವುದು ಎಂದಿಗೋ ?
ನಿನ್ನ ನೋಟವೆ ನೋಟ ! ನಿನ್ನಕೂಟವೇ ಕೂಟ !
ನೋಟ-ಕೂಟ ಒಂದಾಗಿ ಎಂದಿಪ್ಪೆನೋ ?
ನೋಟವೇಕೂಟವಾಗಿ-ಕೂಟವೇಪ್ರಾಣವಾಗಿ
ಸಮರತಿಯ ಸುಖದಲ್ಲಿ ಎಂದಿಪ್ಪೆನೋ ?

" ಓಂನಲ್ "

—⊃)(⊂—

# ನಮ್ಮ ಧರ್ಮ.

(ಲೇ:— ಶ್ರೀ. ಪಾಟೀಲ ಕೆ. ಎಚ್. ಕಡಣಿ.)

ಅನಾದಿ ಕಾಲದಿಂದಲೂ ಧರ್ಮದ ರಕ್ಷಣೆಯನ್ನು ಪ್ರಾಣವನ್ನು ತೃಣ ಣದಂತೆ ಎಣಿಸುತ್ತ ಮಾಡಿದೆವೆಂದು, ದುರಭಿಮಾನದ ಮೂರುತಿಗಳಾದ ಎಷ್ಟೋ ಜನ ಡಂಬ ಕೊಚ್ಚುತ್ತ ಉಬ್ಬುಗೊಳ್ಳುತ್ತಾರೆ. ಅವರದೇ ಆದ ಅಭಿಮಾನವು ಅವಿರೋಧವಾಗಿ ಮಾನವಮರ್ಯಾದೆಗಳನ್ನು ಆವರಿಸಿ ಬಂದಿದೆ. ಧರ್ಮದ ಹೆಸರಿನಲ್ಲಿ ಸಮಾಜಕ್ಕೆ ಕೆಸರನ್ನೆತ್ತುವಷ್ಟು ನಮ್ಮನ್ನು ದುರಭಿ ಮಾನವು ತೀವ್ರ ಅಭಿಮಾನಿಗಳನ್ನಾಗಿ ಮಾಡಿದೆ. ಅಮರರ, ಅಮರತ್ವ ಕಳೆಯನ್ನು ತಿಳಿದು ಮತ್ತೆ ಕಳೆದು ಕೂಡ್ರಿಸಿದೆ. ದುರಭಿಮಾನ ರಹಿತ ಶ್ರದ್ಧೆಯ ಸೇವಾ ಜನಕ್ಕೆ ಭಕ್ತ ಪ್ರಲ್ಹಾದರೆಂದು ಹರಿಸಿದೆ. ಶೀರ ಮುಠಾ ಳರ ಮುಗ್ಧ ಭಕ್ತಿಗೆ ಮಾರುಹೋಗಿದೆ. ಭಕ್ತಿ ಶ್ರದ್ಧೆ ಸಂಯಮ ಸಮತಾ ವಾದಿಗಳ ಸಮಾಜದಲ್ಲಿ ಅಂಧ ಮುಠಾಳರಿಗೂ ಒಂದಿನಿತು ಸ್ಥಾನವನ್ನು ಕೊಡಿಸಿದೆ ಈ ನಮ್ಮ ಧರ್ಮ.

ನಮ್ಮ ಧರ್ಮದ ಆಧಾರವು ಅಂಧಶ್ರದ್ಧೆಯಲ್ಲ. ಅಂಧ ಶ್ರದ್ಧೆಯನ್ನು ಆಶ್ರಯಿಸಲು ಅದು ಬಯಸಲೂ ಇಲ್ಲ. ಬಯಸಿ ಉದಾಸೀನತೆಯ ಉಸಿ ರನ್ನೇಕೆ ಎತ್ತಬೇಕೆಂದಿತು ಅಕಬರನ ಧರ್ಮದಂತೆ. ನಮ್ಮ ಧರ್ಮದ ಅಸ್ತಿವಾರ ಪ್ರೇಮದ ಮೇಲೆ ಮಂಡಿಗೆ ಊರಿದೆ. ಅಂತೆಯೇ ಅದು ಹೃದಯದ ಏಕಾಗ್ರತೆಯ ಅನುರಾಗದ ಅಂತಿಮ ಪಾಪಟಿಗೆಯಾದ ಪ್ರೇಮ ವನ್ನು ಆಶ್ರಯಿಸಿತು. ನಮ್ಮ ಧರ್ಮದಾಸ್ಯ ವಿಲಾಸಕ್ಕೆ ಎಂದೂ ಆಸ್ಪದ ಕೊಡದು. ಮೇಲು ಕೀಳು ಎಂಬ ಭೇದಭಾವವನ್ನು ಹಿಂದೊಗೆದು ಇಂದು ತನ್ನ ಶಾಂತ ಕರುಣಾಮಯ ಭಕ್ತಿಸಂಗಮದ ಏಕತೆಯಲ್ಲಿ ಮಾನವ ಕೋಟಿಯನ್ನೇ ಸ್ವಾಗತಿಸಲು ಎದುರು ನೋಡುತ್ತಲಿರುವದು. ನಮ್ಮ ಧರ್ಮ ಸಮಸ್ತ ಜನಜೀವನದ ಜೀವಾಳವಾದ ಪ್ರೇಮವನ್ನೇ ಸುತ್ತುವರಿಗೊಂಡಿದೆ. ವಿಶ್ವಶಾಂತಿ ದ್ಯೋತಕವಾಗಿದೆ. ಅದಕ್ಕಾಗಿಯೇ ಅದು ಅಪಾರಶಕ್ತಿಯ ಅಭಯವನ್ನು ಸಂಪಾದಿಸಿದೆ. ಪರಾಜಯವೆಂಬುದೇ ಇಲ್ಲ. ನಮ್ಮ ಧರ್ಮ

ಅದೆಷ್ಟೋ ಶತಮಾನಗಳಿಂದ ಪರಧರ್ಮಗಳ ವಿರೋಧವನ್ನು ಅವಿರೋಧ ವಾಗಿ ಸಹನ ಮಾಡುತ್ತ ಬಂದಿದೆ. ಅದೆಷ್ಟೋ ಕಠಿಣ ಪ್ರಸಂಗಗಳನ್ನು ಎದುರಿಸಿದೆ. ಸಂಕಟಗಳ ಇದಿರಿನಲ್ಲಿ ಎದುರಾಗಿ ನಿಲ್ಲುವವರಿಗೆ ವಿಜಯ ಎಂದು ಸಾರಿ ಹೇಳಿದೆ. ಬಲವಾದ ಸಂಘಟನೆಗಳುಳ್ಳ ಸಮಾಜಗಳನ್ನು ಕಟ್ಟಿಸಿ, ಅನ್ಯಾಯದ ಆಧಾರದ ಮೇಲೆ ಮಲೆತು ಬಂದ ಸರಕಾರವನ್ನು ಸರಿಸಿ ನ್ಯಾಯಮಾರ್ಗ ಪ್ರವರ್ತಕ ಕಟ್ಟಳೆಯ ಕಾನೂನಿನ ಕಾರಬಾರಕ್ಕೆ ಎಡೆಗೊಟ್ಟದೆ.

ಅದನ್ನು ಪ್ರಾಣಕ್ಕಿಂತಲೂ ಪ್ರಿಯವಾಗಿ ಸಂರಕ್ಷಿಸಲು ವಜ್ರಮುಷ್ಠಿ ಯನ್ನು ತಳೆದಿದೆ. ಇಂಥ ಧರ್ಮದ ಮೇಲೆ ಶ್ರದ್ಧೆ ಬೇಕು. ಆ ಭಕ್ತಿಯ ಪುರಕ್ಕೆ ಇಳಿದು ಬಂದಿರಬೇಕು. ಆ ಭಕ್ತಿಗೆ ಪ್ರೇಮವು ಬೆನ್ನೆಲುಬಾಗಿ ನಿಂತಿರಬೇಕು. ಅಂದರೇನೇ ಆ ಭಕ್ತಿಗೆ ಆ ಶ್ರದ್ಧೆಗೆ ಬೆಲೆಯಿದೆ. ಧರ್ಮ ದಲ್ಲಿ ಪ್ರೇಮದ ಅಭಾವವನ್ನು ನಾವು ಎಂದೂ ತೋರಬಾರದು ಇಲ್ಲದೇ ಹೋದರೆ ಧರ್ಮದಲ್ಲಿ ಸುಖದ ಆಭಾಸವೇ ಸರಿ ನಮಗೆ. ಆದುದರಿಂದ ನಾವು ಎಂದೂ ನಮ್ಮ ಧರ್ಮದಿಂದ ವಿದ್ರೋಹಗೊಂಡ ಖಿನ್ನ ಮನಸ್ಕ ರಾಗಬಾರದು. ಯಾಕೆಂದರೆ ಒಮ್ಮೆ ವಿದ್ರೋಹಗೊಂಡ ಮನ ಧರ್ಮದ ತಿರುಳನ್ನು ತಿಳಿಯದಲೇ ಪ್ರತಿಕಾರ ಹೂಡಲು ಪ್ರಾರಂಭಿಸುವದು. ನಾಸ್ತಿ ಕರನ್ನು ಪ್ರತಿಭಟನೆಗಾಗಿ ಹುರಿದುಂಬಿಸುವದು. ತೀವ್ರ ಪ್ರಕೋಪಸ್ಥಿತಿಯನ್ನು ಆಸ್ತಿಕರ ಮತ್ತು ನಾಸ್ತಿಕರ ನಡುವೆ ತಂದೊಡ್ಡುವದು. ಧರ್ಮ ಮತ್ತು ಸಮಾಜದ ಬಂಧನಗಳನ್ನು ಮುರಿದೊಗೆಯಲು ಪ್ರೇರೇಪಿಸುವದು ಸಮಾ ಜದ ಸ್ತೋತ್ರಾದ ಧರ್ಮದ ಅವಹೇಳನ ಮಾಡುವದು ಧರ್ಮ ಕರ್ಮ ಕುಲ ಮರ್ಯಾದೆ ಪಾಷಂಡಿಗಳ ಪವಾಡ ಎಂದು ಬೋಧಿಸುವದು. ಇಹವೇ ಸುಖಶಾಂತಿಯ ತವರುಮನೆ ಪರವೆಲ್ಲಿಯದು ಯಾರು ಕಂಡಿರು ವರು, ಎಂದೆನ್ನುವದು. ಭಾಗ್ಯದ ಬಟ್ಟಲ ಬರಿದಾಗುವವರೆಗೆ ಭೋಗ ವಿಲಾಸದಲ್ಲಿ ಕಾಲಕಳೆಯಿರಿ ಎಂದೆನ್ನುವದು. ಇಂಥದು ಸತ್ಯದ ಸೋಪಾ ನವನ್ನೆಂದೂ ಏರದು. ಎಂದೆಂದು ಧರ್ಮ ತತ್ವಗಳು ತ್ರಿಕಾಲ ಅಬಾಧಿತ ವೆಂದು ಬಗೆದು, ಪ್ರೇಮ ಶ್ರದ್ಧೆ, ವಿನಯಗಳಿಂದ ಗುರುಹಿರಿಯರಲ್ಲಿ ವಿಶ್ವಾಸ ವಿಟ್ಟು ನಡೆದುಕೊಂಡು ಹೋದದ್ದಾದರೆ ನಮ್ಮ ಧರ್ಮದ ಶ್ರೇಯಸ್ಕರ ವನ್ನು ನಾವಿಂದು ಉಳಿಸಿದಂತಾಗುವದಿಲ್ಲವೇ? ನಮ್ಮ ಧರ್ಮವು ಶಾಂತಿ ಸಮತೆ, ಸಮನ್ವಯ, ಭೂತದಯೆಗಳ ಆಗರವಾಗಿರಬೇಕು. ಇಲ್ಲದೆ

ಜೋದರಿ ಬಿಕ್ಷುಕನು ಒಂದು ದ್ವಾರದ ಬಿಕ್ಷೆಯ ತೃಪ್ತನಾಗದೆ ಅಲೆದಾಡುವಂತೆ ಧರ್ಮತತ್ವಗಳ ನಿಷ್ಕರ್ಷಕ್ಕಾಗಿ ಅಲೆದಾಡಬೇಕಾಯಿತು. ಕಾರಣ ನಮ್ಮ ಹೊಸ ಮನ್ವಂತರದ ಧರ್ಮವು ಹಳೆತರ ಮೇಲೆ ಆಸ್ತಿವಾರವಿಟ್ಟಿದ್ದರೂ ಹೊಸತರದನ್ನು ಆದರದಿಂದ ಬರಮಾಡಿಕೊಳ್ಳಬೇಕು. ಅಂದರೇನೇ ನಮ್ಮ ಭಾವೀ ಜನಾಂಗದ ಮಾನವ್ಯತೆಗೆ ಒಂದು ಮಿರುಗು ಬರುತ್ತದೆ. ಇಂದು ಮಿರುಗಿ ಮರೆಯಾಗದ ಹೊಸ ಧರ್ಮದ ಮನ್ವಂತರವಾಗಬೇಕು. ಅಂಥ ಧರ್ಮವೇ ನಮಗಿಂದು ಬೇಕು.

—ooo●ooo—

# ಭಜಿಸಿರಣ್ಣ

[ಪ್ರ॥ ಬ್ರ ॥ ಗುರುಸಿದ್ಧ ಶಿವಾಚಾರ್ಯಸ್ವಾಮಿಗಳು. ಗುರುವಿನಪುರಮಠ.]

—ooo][ooo—

ಭಜಿಸಿರಣ್ಣ ಗುರುವನು ಭಕ್ತಿಯಿಂದಲಿ
ತ್ಯಜಿಸಿರಣ್ಣ ಕಾಮ-ಕ್ರೋಧವ ॥
ಕತ್ತಲೆಕಳೆದು ಬೆಳಕನು ಸೃಜಿಸುವ
ಬಡತನನೀಗಿ-ಸಿರಿತನನೀಡುವ
ಬಂಧದಿಂಕಳಿಚಿ-ಸ್ವಾತಂತ್ರಕೊಡುವ
ಮಹತೋಮಹಿಮನ-ಭಜಿಸಿರಣ್ಣ.... ॥೧॥
ಕಾಮಕ್ರೋಧಗಳ ಕಾಲಲಿ ಒರಸಿ
ಮತ್ಸರ ಮದಗಳ ಶಿರಗಳಕೊರಸಿ,
ದುಃಖವಹ್ನಿಯಲಿ ಶಾಂತಿಜಲಬೆರೆಸಿ
ತುಷ್ಟಿಯ ನೀಡುವ - ಮಹತೋಮಹಿಮನ- ಭಜಿಸಿರಣ್ಣ ॥೨॥
ಹುಟ್ಟುಸಾವುಗಳ ಕುಲವನು ಕೆಡಿಸಿ
ಹಿಂಸೆ ಬಲುಮೆಗಳಬಲವನು ಕುಂದಿಸಿ
ದುಷ್ಟ ವ್ಯಸನಗಳ ದಂಡನು ಬಂಧಿಸಿ - ಶಾಂತಿಯ
ನೀಡುವಪರಮ ಕಾರುಣಿ ಕನ-ವರ ಮಹದೇವನ ಭಜಿಸಿರಣ್ಣ ॥೩॥
ಸತ್ಯಶಾಂತಿಯಡೆ ಮನವನು ತೆರಳಿಸಿ
ಜ್ಯೋತಿ ಪ್ರಕಾಶದ ಪ್ರಭೆಯನು ತೋರಿಸಿ
ಹೃದಯದಿಹುರುಪಿನಸರಿಯನು ಸುರಿಸಿ
ಪ್ರೇಮದಿಂದ ಸಲಹುವಜಗಧೀಶ್ವರನಾ-ಭಜಿಸಿರಣ್ಣಾ ॥೪॥
ಭಕ್ತರ ಪಾಲಿಪ ಪರಮ ಗುರುವ !
ಮುಕ್ತಿಯ ನೀವಜಗದ್ಗುರುವ !
ಲೋಕವಪಾಲಿಪ ಮಹಾಗುರುವ !
ಹೃದಯ ಮಧ್ಯದಿ ನೆಲಸಿರುವ ಮಹಾಪ್ರಭೆಯ ಭಜಿಸಿರಣ್ಣ ॥೫॥



# ಧನ್ಯ ತೋಂಟದಾರ್ಯ

(ಕವಿ. ಡಾ॥ ಬಿ॥ ಶ್ರೀ ಗುರು ಸಿದ್ಧ ಶಿವಾಚಾರ್ಯಸ್ವಾಮಿಃ ಗುರುವಿನಪುರಮಠ)

—೦೦(೦)೦೦—

(ಮೈಸೂರು ಜಿಲ್ಲಾ, ನಂಜನಗೂಡು ತಾಲ್ಲೂಕು, ದೇವನೂರು ದಿವ್ಯ ಜ್ಯೋತಿಗುರು ಸ್ವಾಮಿಯವ ಕರಸಂಜಾತರಾದ ತ॥ ಬ॥ ಶ್ರೀ ತೋಂಟ ದಾರ್ಯ ಮಹಾಸ್ವಾಮಿಯ ಪವಿತ್ರ ಜೀವನವನ್ನ ಕುರಿತಾದುದು.)

—೦೦೦೦೦೦—

ಧನ್ಯ ! ಧನ್ಯ ! ತೋಂಟದಾರ್ಯ !!
ಮಾನ್ಯ ನಿನ್ನ ಜನಸೇವೆ-
ಅನ್ಯರೆಂಬ ಭಾವವಿಲ್ಲ ಸಮತೆ ಜೀವಿಯೇ !
ಶೂನ್ಯ ಪದವ ಪಡೆದ ಶಾಂತಸುಸ್ವಭಾವಿಯೇ !! ||೧||

ಪರಮ ಬ್ರಹ್ಮಚರ್ಯವ್ರತವ
ನಿರುತ ನಿಷ್ಠೆಯಿಂದ ಚರಿಸಿ
ಶರಣನಾಗಿ ಸೇವೆಗೈವ ನೀನೆವಂಧ್ಯನು !
ಅಸಮಾನ ಚರಿತನೀನು ಪರಮ ಪೂಜ್ಯನು !! ||೨||

ಬಸವಬೋಧೆಯನ್ನು ಬೀರಿ
ಅಂತರನಾಗಿ ಸೇವೆಮಾಡಿ
ಪುರಾತನ ಪೂಜೆಮೊದಲು ಮಾಡಿದೆ !
ದಿವ್ಯತತ್ವ ಬೆಳಗಲು ಜಗದಿ ಬಂದಿಹೆ !! ||೩||

ಬಸವ ಬುದ್ಧ ಸಿದ್ಧರಾಮ
ಚನ್ನಬಸವ ಗುಹೇಶ್ವರನಂತೆ
ಶುದ್ಧವಾಕ್ಯ ಸಿದ್ಧಿಪಡೆದ ಮಹಾ ಮಹಾತ್ಮನೇ !
ಪ್ರಖ್ಯಾತಿವೆತ್ತ ವಿಖ್ಯಾತಿ ಪುರುಷನೆ !! ||೪||

ಹಳ್ಳಿ ಹಳ್ಳಿಹಳ್ಳಿ ತಿರುಗಿ
ಶಿವತತ್ವವನ್ನು ಹರಡಿ
ಗುರುಮಲ್ಲದೇವನಂತೆ ನಿತ್ಯ ಬೆಳಗಿದೆ !
ಅಚ್ಚಳಿಯದ ಜ್ಯೋತಿಯಾಗಿ ತೋರಿ ಬೆಳಗಿಹೆ !! ||೫||

ಕರುನಾಡಿನ ವಿಖ್ಯಾತಿ ಪುರುಷನಿನಗೆ ಮಂಗಲಂ
ಭಕ್ತಜನರ ದಿವ್ಯಪ್ರಭೆಯು ನಿನಗೆ ಮಂಗಲಂ
ತ್ರಿವಿಧವನ್ನು ಮೆಟ್ಟಿ ಮೆರೆದಯೋಗಿ ಮಂಗಲಂ
ಶ್ರೀಗುರು ಸ್ವಾಮಿ ಕರಸಂಜಾತ ಮಹಾಮಂಗಲಂ ॥೬॥

——ooooooooo——

# ವೇಮಣ್ಣನ ಜ್ಞಾನಯೋಗದ ಪದ್ಯಗಳು

ಕರ್ನಾಟಕವು ಆಂಧ್ರ ದೇಶದ ವಾಙ್ಮಯದ ಮೇಲೆ ಯಾವಾಗಲೂ ಬಹಳ ಪರಿಣಾಮ ಮಾಡುತ್ತ ಬಂದಿದೆ. ಆಂಧ್ರದೇಶದ ಪಂಡಿತಾರಾಧ್ಯನು ಶಿವಶರಣರ ಸಂಸ್ಕೃತಿಯನ್ನು ಆಂಧ್ರ ವಾಙ್ಮಯದ ಮೂಲಕ ತೆಲಗು ನಾಡಿನಲ್ಲಿ ಪಸರಿಸಿದನು. ವೇಮಣ್ಣನು ಮೊದಲು ರಾಜಮನೆತನಕ್ಕೆ ಸೇರಿದವನಾಗಿದ್ದನು. ಅವನು ಮೊದಲು ವ್ಯಸನಾಧೀನನಾಗಿದ್ದನು ಆದರೆ ಅವನು ತನ್ನ ವ್ಯಸನಗಳನ್ನು ತೊರೆದು ಆಂಧ್ರಭಾಷೆಯಲ್ಲಿ ಅಸಂಖ್ಯ ನೈತಿಕ ಪದ್ಯಗಳನ್ನು ರಚಿಸಿದನು. ಅವುಗಳಿಗೂ ಸರ್ವಜ್ಞನ ಪದ್ಯಗಳಿಗೂ ಬಹಳ ಹೋಲಿಕೆ ಇದೆ. ಅವನ ನೂರಾರು ಪದ್ಯಗಳನ್ನು ಶ್ರೀ ಭೀಮರಾಜು ಎಂಬ ಕವಿಯು ಕನ್ನಡದಲ್ಲಿ ಭಾಷಾಂತರಿಸಿದ್ದು ಅವುಗಳು ಶಿವಾನುಭವ ಗ್ರಂಥಮಾಲೆಯಲ್ಲಿ ಪ್ರಸಿದ್ಧಿಸಲ್ಪಟ್ಟಿವೆ. ಅವು ಬಹಳ ಮಾರ್ಮಿಕವಾದ ಸುಲಭ ಪದ್ಯಗಳು ಆಗಿವೆ. ಇವುಗಳಲ್ಲಿ ವೀರಶೈವ ಧರ್ಮದ ತತ್ವಗಳು ಚನ್ನಾಗಿ ಹೊರಪಟ್ಟಿವೆ. ಪ್ರತಿಗಳು ಹಿತಚಿಂತಕ ಪ್ರೆಸ್ ವಿಜಾಪುರದಲ್ಲಿ ದೊರೆಯುತ್ತವೆ. ಬೆಲೆ ೧—೭—೦

R. N. B. 2554

# ಶಿವಾನುಭವ

ಸಂಪುಟ ೭ ] —ooo●ooo— [ ಸಂಚಿಕೆ ೬




ಸಂಪಾದಕರು:— ಫ. ಗು. ಹಳಕಟ್ಟಿ, ಬಿ. ಎ. ಎಲ್. ಎಲ್. ಬಿ.

ವಾ. ಚಂ. ೫-೧೨-೦ ] ವಿಜಾಪುರ [ ಜೂನ ೧೯೩೪

# ವಿಷಯಾನುಕ್ರಮಣಿಕೆ.





ಶಿವಾನುಭವ ಮಾಸ ಪತ್ರಿಕೆ

ವಿಜಯಪುರ.

ವಾರ್ಷಿಕಚಂದಾ ೫—೧೨—೦

# ಶಿವಾನುಭವ

ವರ್ಷ ೨೭ | ಜೂನ ೧೯೫೩ | ಸಂಚಿಕೆ ೬

## ಬಸವೇಶ್ವರ ಸ್ತೋತ್ರ

( ಸಂಗ್ರಾಹಕಃ— ಶ್ರೀ ಆನಂದ ಕವಿಗಳು ಕುರುಗುಂದ )

—೦●೦—

[ಪಾಲ್ಕುರಿಕೆ ಶ್ರೀ ಸೋಮನಾಥ ಕವಿಗಳ ಸಂಗ್ರಹದಿಂದ ಆಯ್ದುಕೊಂಡುದು]

(೧)

॥ ಕಂದ ॥

ಬಸವಂ ಭಕ್ತಿಗೆ ಮೂಲಂ ।
ಬಸವಂ ಕಾಲಂಗೆ ಕಾಲನನುಪಮಶೀಲಂ ॥
ಬಸವಂ ಜಂಗಮಲೋಲಂ ।
ಬಸವಾ ! ರಕ್ಷಿಪುದು ! ಎನ್ನ ಸಂಗನಬಸವಾ !

(೨)

ಪ್ರಣವದ ಬಳ್ಳಿ ಬಕಾರಂ ।
ಪ್ರಣವದ ನಾದಾನು ಸಾರ ಸಾರ ಸಕಾರಂ ॥
ಪ್ರಣವದ ಬಿಂದು ವಕಾರಂ ।
ಪ್ರಣವಂ ಬಸವಾಕ್ಷರತ್ರಯಂ ಬಸವೇಶಾ ॥

(೩)

'ಬಾ'ಗುರು ಬಹುಳ ಬ್ರಹ್ಮಂ ।
'ಸಾ'ಗುರು ಸಾಕಾರ ತತ್ವಸಂಗ್ರಹವಕ್ಕುಂ ॥

'ವಾ'ಗುರು ವಚನ ಮಹತ್ವ ।
ಕ್ಯಾಗರ ಬಸವಾಕ್ಷರತ್ರಯಂ ಬಸವೇಶಾ ॥

(೪)

ಬಾ ! ಎನೆ ಬಂಧಸವಳಿವುದು ।
ಸಾಯೆನೆ ಸಾಯುಜ್ಯ ಸಕಲ ಸಂಪದವಕ್ಕುಂ ॥
ವಾಯೆನೆ ನಿರವಯ ಪದಮುಂ ।
ಮಾಯಾ ರಹಿತಂ ಬಸವನೆ ನಿನ್ನಯನಾಮಂ ॥

(೫)

ಖಸಿರೋಳ್ ಬರಲೀಯದು "ಬಾ" ।
ಶಶಿಧರನಂ ಸಾರಿಸುವದು 'ಸಾ' ಶಿವಪದಮಂ ॥
ವಶವರ್ತಿ ಮಾಡುವದು 'ವಾ' ।
ಬಸವಾ ! ಶರಣೆಂಬುದಕ್ಕೆ ಫಲವಿದು ಬಸವಾ ॥

(೬)

ಮಧುರಂ ಶ್ರುತಿಗಳು ಮಿಗೆಮಿಗೆ ।
ಮಧುರಂ ಮಂತ್ರಂಗಳವಕೆ ಪಂಚಾಕ್ಷರಿತಾಂ ॥
ಮಧುರಂ ಪಂಚಾಕ್ಷರಿಗಂ ।
ಮಧುರಂ ಬಸವಾಕ್ಷರ ತ್ರಯಂ ಬಸವೇಶಾ ॥

(೭)

ಮರಿದೊಮ್ಮೆ ಬಸವನೆಂದೊಡೆ ।
ಮರು ಜನ್ಮಗಳಿಲ್ಲ ದುರಿತವಿಘ್ನಗಳಿಲ್ಲೈ ॥
ಕರಿಗೊರಲನೊಲ್ದು ಸಲಹುವ ।
ಬರಿಜಿಹ್ವೆಯೊಳಿರದೆ ಬಸವನಾಮವ ಜಪಿಸೈ ॥

(೮)

ಅಘವನ ದಾಹಂ ಬಸವಾ ।
ಅಘಕುಲ ನಿಸ್ಸೀಮ ಭೀಮನಾಮಂ ಬಸವಾ ॥

ಅಘಜಲ ವಡಬಂ ಬಸವಾ ।
ಅಘತಿವಿರದ್ಯುಮಣಿ ಬಸವ ಅಮನಮಾ ! ಬಸವಾ !

(೯)

ಭಕ್ತಿಗೆ ವದನ ಕಲಾಜ್ಞತೆ !
ಶಕ್ತಿಗೆ ಮಂತ್ರಂಗಳವಕೆ ಪಂಚಾಕ್ಷರಿ ತಾಂ ॥
ಶಕ್ತಿಗೆ ಭಕ್ತಿಗೆ ಯುಕ್ತಿಗೆ ।
ಮುಕ್ತಿಗೆ ಬಸವಾಕ್ಷರತ್ರಯಂ ಬಸವೇಶಾ ॥

(೧೦)

ಬಸವಾ ! ಎಂದೊಡೆ ಪಾಪಂ ।
ದೆಸೆಗೆಟ್ಟೋಡುವದು ಕರ್ಮ ನಿರ್ಮಲವಹುದೈ ॥
ಶಶಿಧರನೇರುವ ವಾಹನ ।
ದಶದಿಕ್ಕಿನ ಪ್ರಮಥರೊಡೆಯ ಸಂಗನಬಸವಾ ॥

(೧೧)

ಬಸವನ ನಾಮಾಮೃತಮಂ ।
ರಸಪುರ ವಶನಾಗಿ ಸವಿದು ಪುದಿಮೊಲನಿಶಂ ॥
ಬಸವಾ ! ಬಸವಾ ! ಬಸವಾ ! ।
ಬಸವಾ ! ಎನುತಿರ್ದೆನಯ್ಯ ಸಂಗನಬಸವಾ ॥

(೧೨)

ಬಸವಾ ಎಂಬತ್ರ್ಯಕ್ಷರ ।
ಪೊಸತೆನಿಸುವರಜತ ಗಿರಿಯ ಮಹಿಮೆಯತೋರಲು ॥
ಶಶಿಧರನ ಶರಣ ಸಂಕುಳ !
ದೊಸಗೆಯ ನಡುವಿರಿಸಿ ತೋರ್ಕುಮ ಬಸವನ ನಾಮಂ ॥

ಒಸಗೆ=ಉತ್ಸವ (ಹಬ್ಬ)

(೧೩)

ಸದ್ಯೋಜಾತನೆ ಬಸವಂ ।
ಸಿದ್ಧಂತತ್ಪುರುಷ ವಾಮದೇವನೆ ಬಸವಂ ॥
ಹೊದ್ದೀಶಾನ್ಯ ಘೋರಂ ।
ರುದ್ರಮಯ ಭುವನ ಸುವಿನುತ ಭರ್ಗ ಬಸವಂ ॥

ಭರ್ಗಂ=ಚೈತನ್ಯ, ಜ್ಞಾನಸ್ವರೂಪ, ಶಿವ,

(೧೪)

ಗುರುಬಸವ ಲಿಂಗಬಸವಂ ।
ಚರಬಸವಂ ತೀರ್ಥ ಬಸವನಗಣಿತ ಮಹಿಮೊ ।
ತ್ಕರ ಸುಪ್ರದ ಬಸವಂ ।
ಶರಣಯ್ಯಾ ಶರಣು ! ಶರಣು ! ಸಂಗನಬಸವಾ ॥

---

# ಕರ್ನಾಟಕದ ಕಲಚುರಿಗಳು

(ಲೇ:- ಶ್ರೀ. ದೇಸಾಯಿ ಪಾಂಡುರಂಗರಾಯರು, ಎಂ. ಎ., ಉದಕಮಂಡಲ)

[ಶ್ರೀ ಬಸವೇಶ್ವರನ ಚರಿತ್ರೆಯನ್ನು ಕಂಡುಹಿಡಿಯುವದು ಈ ಕಾಲಕ್ಕೆ ಅತ್ಯಂತ ಮಹತ್ವದ್ದಿದೆ. ಅವನ ಚರಿತ್ರೆಯು ಬಿಜ್ಜಳನ ಚರಿತ್ರೆಗೆ ನಿಕಟ ಸಂಬಂಧವುಳ್ಳದು. ಬಿಜ್ಜಳನ ನಿಜೇತಿಹಾಸವು ತಿಳಿದಲ್ಲಿ ಬಸವೇಶ್ವರನ ಚರಿತ್ರೆಯ ಮೇಲೆಯೂ ಪ್ರಕಾಶ ಬೀಳಹತ್ತುವದು. ಆದರೆ ಬಿಜ್ಜಳನ ಚರಿತ್ರೆಯನ್ನು ಶ್ರೀ ದೇಸಾಯಿ ಪಾಂಡುರಂಗರಾಯರು ಕರ್ನಾಟಕ ಪರಿಷತ್ ಪತ್ರಿಕೆಯಲ್ಲಿ ಬಹು ಚನ್ನಾಗಿ ವಿಶದಪಡಿಸಿದ್ದಾರೆ. ಶಿಲಾಶಾಸನಗಳ ಆಧಾರಗಳನ್ನು ಅವರು ವಿಪುಲವಾಗಿ ಅದರಲ್ಲಿ ಸಂಗ್ರಹಿಸಿದ್ದಾರೆ. ಶಿವಾನುಭವ ಪತ್ರಿಕೆಯ ಉದ್ದೇಶಗಳಲ್ಲಿ ಸಂಶೋಧನವೇ ಮುಖ್ಯವಾದದ್ದು. ಆದ್ದರಿಂದ ನಾವು ಶ್ರೀ ದೇಸಾಯಿ ಇವರ ಲೇಖವನ್ನು ಇದ್ದಕ್ಕಿದ್ದ ಹಾಗೆ ಈ ಪತ್ರಿಕೆಯಲ್ಲಿ ಪ್ರಕಟಿಸಿದ್ದೇವೆ. ಮುಂದೆ ನಾವು ಬಸವೇಶ್ವರನ ಚರಿತ್ರೆಯ ಮೇಲೆ ಈ ಲೇಖದಿಂದ ಯಾವ ಪ್ರಕಾಶವು ಬೀಳುವದೆಂಬುದನ್ನು ಚರ್ಚಿಸಲಿರುವೆವು. ಇದರಲ್ಲಿ ವಾಚಕರು ತಮಗೆ ಕಂಡುಬಂದ ಸಂಗತಿಗಳನ್ನು ಪತ್ರಿಕೆಯಲ್ಲಿ ಚರ್ಚಿಸಬಹುದು. —ಸಂಪಾದಕ.]

## ಬಿಜ್ಜಳ (೧೧೪೦-೬೭).

### ರಾಜ್ಯಕ್ರಾಂತಿ.

ಬಿಜ್ಜಳನು ಮಂಗಳವೇಡದ ಮಂಡಲರಾಜ್ಯದ ಸಿಂಹಾಸನವನ್ನೇರಿದಾಗ ರಾಜಮಂಡಲದಲ್ಲಿ ತಾನೊಬ್ಬ ಮಹಾರಾಜನೆಂದೇ ಭಾವಿಸಿಕೊಂಡಂತೆ ತೋರುತ್ತದೆ. ಆತನ ಮನೆತನವು ಚಾಲುಕ್ಯಸಾಮ್ರಾಜ್ಯದಲ್ಲಿ ಉನ್ನತವಾದ ಗೌರವವನ್ನು ಪಡೆದಿದ್ದಿತು. ಬಿಜ್ಜಳನು ಆಳತೊಡಗಿದಾಗ ಚಾಲುಕ್ಯ ಇಮ್ಮಡಿ ಜಗದೇಕಮಲ್ಲನು ಆದಾಗ ಪಟ್ಟಕ್ಕೆ ಬಂದಿದ್ದನು. ಕಲಬುರ್ಗಿ ಜಿಲ್ಲೆಯ ತೆಂಗಳಿ ಎಂಬ ಗ್ರಾಮದಲ್ಲಿ ದೊರೆತ ಒಂದು ಶಿಲಾಶಾಸನದಿಂದ ಜಗದೇಕಮಲ್ಲನ ತಂದೆಯಾದ ಮುಮ್ಮಡಿ ಸೋಮೇಶ್ವರನು ಚಂದಲದೇವಿಯ ಮಗನೆಂದು ಗೊತ್ತಾಗುತ್ತದೆ. ಇವರಿಂದ ಸೋಮೇಶ್ವರನು

ಬಿಜ್ಜಳನ ಸೋದರಮಾವನೆಂದು ನಿಷ್ಪನ್ನವಾಗುವುದು. ಇಂತು ಸೋದರತ್ತೆ ಸೋದರಮಾವನ ಮಕ್ಕಳಾದ ಬಿಜ್ಜಳ-ಜಗದೇಕಮಲ್ಲರು ಹೆಚ್ಚುಕಡಿಮೆ ಸಮಾನ ವಯಸ್ಕರೇ ಆಗಿರಬೇಕು. ಮುತ್ತಗಿಯ ಸಂಗಮೇಶ್ವರ ದೇವಾಲಯದಲ್ಲಿಯ ಜಗದೇಕಮಲ್ಲನ ಆಳಿಕೆಯ ೧೧ನೆಯ ವರ್ಷದ ಎಂದರೆ ೧೧೪೭ನೆಯ ಕ್ರಿ. ವ. ದ ಒಂದು ಶಾಸನದಲ್ಲಿ 'ಮಹಾಮಂಡಳೇಶ್ವರಂ ಕುಮಾರ ಬಿಜ್ಜಳದೇವರಸ' ಎಂದು ಈತನನ್ನು ನಿರ್ದೇಶಿಸಿದೆ. ಆಳುವ ಅರಸನಿಗಿಂತ ಕಿರಿಯರಾದ ರಾಜಪುತ್ರರನ್ನು ಸಾಮಾನ್ಯವಾಗಿ 'ಕುಮಾರ' ಎಂದು ಸಂಬೋಧಿಸುವ ವಾಡಿಕೆ ಇದ್ದಂತೆ ಕಂಡುಬಂದಿದೆ. ಇಂತಹ ಗೌರವಕ್ಕೆ ಬಿಜ್ಜಳನು ಅರ್ಹನಾಗಿದ್ದನು.

ಇದುವರೆಗೆ ಚರ್ಚಿಸಿದ ಚಾಳುಕ್ಯ ಮತ್ತು ಕಲಚುರಿ ಮನೆತನಗಳ ಅನುವಂಶಿಕ ಸಂಬಂಧವನ್ನು ಕ್ಷಿಪ್ರಾವಲೋಕನಾರ್ಥವಾಗಿ ಹೀಗೆ ಎತ್ತಿ ತೋರಿಸಬಹುದು.




ಬಿಜ್ಜಳನು ಮೊದಲುಬಾರಿ ಕಾಣಿಸಿಕೊಂಡುದು ೧೧೪೨ನೆಯ ಕ್ರಿ. ವ. ದ ಮಳಸಂಗದ ಶಾಸನದಲ್ಲಿ. ಅದರ ವಿವರಗಳನ್ನು ಈ ಹಿಂದೆ ಪರಿಶೀಲಿಸಿದ್ದೇವೆ. ಆ ಬಳಿಕ ಸಾತಾರಾ ಜಿಲ್ಲೆಯ ಮ್ಹಸವಡ ಗ್ರಾಮದ ೧೧೪೭ನೆಯ ಕ್ರಿ. ವ. ದ ಶಿಲಾಲೇಖದಲ್ಲಿ ಆತನು ದರ್ಶನಕೊಡುತ್ತಾನೆ. ಆಗ ಆತನ ಸ್ಥಿರ ಶಿಬಿರವು ಮಂಗಳವಾಡದಲ್ಲಿ ಇದ್ದಿತೆಂದು ತಿಳಿಯುತ್ತದೆ.

ಇದೇ ವರ್ಷದ ಮೇಲೆ ನಿರ್ದೇಶಿಸಿದ ಮುತ್ತಗಿಯ ಶಾಸನದಿಂದ ಆತನು ತರ್ದವಾಡಿ ಸಾಸಿರನಾಡಿನ ಎಂದರೆ ವಿಜಾಪುರ ಪ್ರದೇಶದ ಮೇಲಾಧಿಕಾರಿಯಾಗಿದ್ದನೆಂದು ತೋರುತ್ತದೆ. ಪ್ರಸ್ತುತ ಶಾಸನದಲ್ಲಿ ಮನೆವೆರ್ಗಡೆ ದಂಡನಾಯಕ ಬಮ್ಮಣ್ಣಯ್ಯನ ಬಿನ್ನಹವನ್ನು ಮನ್ನಿಸಿ ಜಗದೇಕಮಲ್ಲನು ಮುತ್ತಗೆಯ ಶಿವಲಿಂಗ ದೇವರಿಗೆ ನಾಗವಾಡ ಎಂಬ ಗ್ರಾಮವನ್ನು ದತ್ತಿಯಾಗಿ ಬಿಟ್ಟನೆಂಬುದಾಗಿಯೂ ಸಮಸ್ತ ಪ್ರಧಾನರ ಮತ್ತು ಕುಮಾರ ಬಿಜ್ಜಲದೇವರರಸ ಸಮ್ಮತಿಯಿಂದ ಆ ದತ್ತಿಯನ್ನು ಪಡೆದು ಆಮೇರೆಗೆ ಶಾಸನಪತ್ರವನ್ನು ಬರೆಯಲಾಯಿತೆಂಬುದಾಗಿಯೂ ನಿರೂಪಿಸಿದೆ. ಅನಂತರ ನಾಲ್ಕು ವರ್ಷಗಳ ಅವಧಿಯಲ್ಲಿ ಎಂದರೆ ೧೧೫೧ನೆಯ ಕ್ರಿ. ವ. ದಲ್ಲಿ ಬಿಜ್ಜಳನು ಇದೇ ತರ್ದವಾಡಿ ಸಾವಿರದ ಪ್ರದೇಶವನ್ನು ಆಳುತ್ತಿದ್ದನೆಂದು ವಿಜಾಪುರದ ಒಂದು ಶಾಸನದಿಂದ ತಿಳಿಯುತ್ತದೆ."

ಈ ಹೊತ್ತಿಗೆ ಚಾಲುಕ್ಯ ಆಡಳಿತ ಕ್ರಮದಲ್ಲಿ ಇನ್ನೊಂದು ಸ್ಥಿತ್ಯಂತರವು ಉಂಟಾಯಿತು. ಜಗದೇಕಮಲ್ಲನು ಮೃತನಾಗಿ ಆತನ ತಮ್ಮನಾದ ಮುಮ್ಮಡಿ ತೈಲಪನು ನೂರ್ಮಡಿ ತೈಲಪ, ತ್ರೈಲೋಕ್ಯಮಲ್ಲ ಮುಂತಾದ ಬಿರುದಗಳನ್ನು ಎತ್ತಿಕೊಂಡವನಾಗಿ ಕ್ರಿ. ವ. ೧೧೫೦ ರಿಂದ ಚಾಲುಕ್ಯ ಸಾಮ್ರಾಜ್ಯವನ್ನು ಆಳತೊಡಗಿದನು. ಇಂತು ಬಿಜ್ಜಳನು ಚಾಲುಕ್ಯ ಚಕ್ರೇಶ್ವರರ ಮೂರು ಆಳಿಕೆಗಳನ್ನೂ ಅವುಗಳ ಏಸಿರಿಯನ್ನೂ ತನ್ನ ಕಣ್ಣಮುಂದೆ ಕಂಡಂತಾಯಿತು. ಒಬ್ಬನು ತನ್ನ ಸೋದರಮಾವ ಮುಮ್ಮಡಿ ಸೋಮೇಶ್ವರ; ಎರಡನೆಯವನು ಆತನ ಮಗ ಜಗದೇಕಮಲ್ಲ; ಮೂರನೆಯವನು ಈ ತೈಲಪ. ತೈಲಪನು ಬಿಜ್ಜಳನಗಿಂತ ವಯಸ್ಸಿನಲ್ಲಿ ಚಿಕ್ಕವನಾಗಿರಬಹುದು. ಈ ಕಾಲಕ್ಕೆ ತನ್ನ ಶೌರ್ಯ, ಸಾಹಸ, ಕತೃತ್ವ ಮತ್ತು ರಾಜನೀತಿಕೌಶಲ, ಮುಂತಾದ ಗುಣಗಳ ಮೂಲಕ ಬಿಜ್ಜಳನು ರಾಜಕೀಯ ರಂಗದಲ್ಲಿ ಪ್ರಸಿದ್ಧಿಯನ್ನು ಪಡೆದಿದ್ದನು.

ಇದೇ ಹೊತ್ತಿಗೆ, ಚಾಲುಕ್ಯ ಆಡಳಿತದಲ್ಲಿ ಮಾರ್ಪಾಟು ಉಂಟಾದಂತೆ, ಬಿಜ್ಜಳನ, ಆತನ ಸಮೀಪದ ಬಂಧುಗಳ ಮತ್ತು ಅಂತರಂಗದ ಪರಿವಾರದವರ ಮನೋವೃತ್ತಿಯಲ್ಲಿ ಒಂದು ಬಗೆಯ ಪರಿವರ್ತನೆ ಉಂಟಾಗಿರಬೇಕು ಎಂದು ಊಹಿಸಲು ಸಾಕಷ್ಟು ನಿದರ್ಶನಗಳು ಸಿಕ್ಕುತ್ತವೆ. 'ಈ ತೈಲಪನಿಗೇಕೆ ಅಧಿರಾಜ್ಯ? ತನಗೇಕೆ ಆತನ ಅಂಕಿತದಲ್ಲಿಯ ಈ ಅಧೀನತೆ? ಆತನು ತನಗಿಂತ ಯಾವ ವಿಧದಿಂದ ಉತ್ತಮನು? ಚಾಲು

ಕ್ಯರ ರಕ್ತವು ತನ್ನ ರಕ್ತದಲ್ಲಿಯೂ ಮಿಶ್ರಿತವಾಗಿದೆ. ತನ್ನ ಕುಲಚುರಿ ಕುಲವೇನು ಸಾಮಾನ್ಯವೇ? ತನ್ನ ವಂಶಿಕರು, ಪೂರ್ವಿಕರು ಸ್ವತಂತ್ರ ರಾಜರಾಗಿ ಬಾಳಿದವರು. ತಾನುಮಾತ್ರ ಮಾಂಡಲಿಕ? ಬಲಹೀನರೇ ಮಾಂಡಲಿಕರಾಗಿ ಬಿದ್ದುಕೊಂಡಿರಬೇಕು ತಾನು ಬಲಹೀನನೆ? ಸರ್ವಥಾ ಅಲ್ಲ. ಬಲಿಷ್ಠರು ಭೂಮಿಯನ್ನು ಉಪಭೋಗಿಸುವ ಬಾಧ್ಯತೆಯುಳ್ಳವರು. ತನ್ನಂತಹ ಬಲಶಾಲಿಗೆ ಸ್ವತಂತ್ರ ಸಿಂಹಾಸನವೇ ತಕ್ಕದು. ಎಂಬೀಪರಿಯ ಮಹತ್ವಾಕಾಂಕ್ಷೆಯ ವಿಚಾರಗಳಿಂದ ಉದ್ದೀಪಿತನಾಗಿ ಬಿಜ್ಜಳನು ಕಾರ್ಯ ಪ್ರವೃತ್ತನಾಗಿರಬೇಕು. ಈ ಮಾತಿಗೆ ಆಧಾರವಾಗಿ ಒಂದು ಶಾಸನ ಭಾಗ ವನ್ನು ಉದಾಹರಿಸುವೆ.

> ಕಳಚುರಿ ವಂಶದ ಆದಿನೃಪರ್ ಎಲ್ಲರುಂ ಉತ್ತಮ ಚಕ್ರವರ್ತಿಗಳ್ । ಬಳಿಕ ಕೆಲರ್ ಸ್ವಬಾಹುಬಲವಿಲ್ಲದೆ ಮಂಡಳಿಕರ್ಕಳ್ ಆದರ್ । ಅಂ ಬಳಯುತನಾದೆಂ । ಇನ್ ಎನಗೆ ಮಂಡಳಿಕತ್ವಂ ಅಯುಕ್ತಂ' ಎಂದು ಅಜೇಯ ಬಿಜ್ಜಲಂ ದೋರ್ಬಳದೊಳ್ ಸಕಳೋರ್ವಿಗಂ ಚಕ್ರವರ್ತಿ ಆದಂ ॥

ಈ ತನ್ನ ಸಂಕಲ್ಪಕ್ಕೆ ಅನುಗುಣವಾಗಿ ಬಿಜ್ಜಳನು ಒಂದೊಂದಾಗಿ ಮುಂದು ಮುಂದಕ್ಕೆ ಹೆಜ್ಜೆಯನ್ನಿಡಲು ಪ್ರಾರಂಭಿಸಿದನು. ಸೂಕ್ಷ್ಮವಾಗಿ ಪರೀಕ್ಷಿಸಿದರೆ ಈ ಹೆಜ್ಜೆಯ ಕುರುಹುಗಳನ್ನು ನಾವು ಶಾಸನಗಳಲ್ಲಿ ಕಂಡು ಹಿಡಿಯಬಹುದಾಗಿದೆ. ಒಮ್ಮೆ ತನ್ನ ಪ್ರಶಸ್ತಿಯಲ್ಲಿಯ ಮಹಾಮಂಡಲೇಶ್ವರ ಎಂಬ ಅಧೀನತ್ವದ ಬಿರುದನ್ನು ಬಿಟ್ಟುಬಿಡುವದು. ಇನ್ನೊಮ್ಮೆ ಅಧಿರಾಜ ತೈಲಪನ ಆಳಿಕೆಯನ್ನು ನಿರ್ದೇಶಿಸದೆ ಇರುವದು. ತನ್ನನ್ನು ಚಕ್ರವರ್ತಿ ಎಂದುಕೊಂಡರೆ ಯಾರಾದರೂ ಆಕ್ಷೇಪಿಸಬಹುದು? ಭುಜಮುಳಮಲ್ಲ ತ್ರಿಭುವನಮಲ್ಲ, ಭುವನೈಕವೀರ, ಭುಜಬಳ ಚಕ್ರವರ್ತಿ, ಮಹಾಭುಜಬಳ ಚಕ್ರವರ್ತಿ, ಎಂಬುದಾಗಿ ಹೇಳಿಕೊಂಡರೆ ಏನು ಆಕ್ಷೇಪಣೆ? ಮಹಾರಾಜಾಧಿರಾಜ ಎಂಬ ಬಿರುದನ್ನು ಮೆರೆಸಿದರೆ ಚಕ್ರೇಶ್ವರನಿಗೆ ಹಾನಿ ಇಲ್ಲವಷ್ಟೆ? ತನ್ನ ಆಳಿಕೆಯ ಸ್ವತಂತ್ರವಾದ ಕಾಲಗಣನೆಯನ್ನು ಸ್ಥಾಪಿಸುವ. ತನ್ನ ತಂದೆ ಪೆರ್ಮಾಡಿ ಹಾಗೆ ಮಾಡಲಿಲ್ಲವೆ? ಇವೇ ಮುಂತಾದವು ಈ ಹೆಜ್ಜೆಯ ಕುರುಹುಗಳೆನ್ನಬಹುದು.

ಬಿಜ್ಜಳನು ತೈಲಪನ ಅಧಿರಾಜ್ಯದ ನೊಗವನ್ನು ಕಿತ್ತೊಗೆಯುವ ನಿರ್ಧಾರವನ್ನು ಕ್ರಿ. ಶ. ೧೧೫೬—೫೭ ರಲ್ಲಿ ಮಾಡಿರಬೇಕೆಂಬುದಾಗಿಯೂ

ಮತ್ತು ಇದರ ಪ್ರಥಮ ನಿರ್ದೇಶನವು ಮುಂದಿನ ವರ್ಷದ ಅಣ್ಣಿಗೇರಿಯ ಶಾಸನದಲ್ಲಿ ಸಿಕ್ಕುತ್ತದೆ ಎಂಬುದಾಗಿಯೂ ಫ್ಲೀಟನು ತೋರಿಸಿದ್ದಾನೆ. ಆದರೆ ಬಿಜ್ಜಳನು ಇಂತಹ ಪ್ರಯತ್ನವನ್ನು ಇದಕ್ಕೂ ಮೂರು ವರ್ಷ ಹಿಂದೆಯೇ ಮಾಡಿರಬೇಕು ಎಂದು ತೋರಿಸಲು ಒಂದು ಶಾಸನದ ಆಧಾರವು ದೊರೆಯುತ್ತದೆ. ಇದು ಜಮಖಂಡಿ ತಾಲೂಕಿನ ಚಿಕ್ಕಲಗಿ ಗ್ರಾಮದ ಶಿಲಾಶಾಸನ. ಈ ಶಾಸನವು ಅನೇಕ ದೃಷ್ಟಿಯಿಂದ ಅರ್ಥಪೂರ್ಣವಾಗಿದೆ. ಇದರ ಕಾಲ ಕ್ರಿ. ವ. ೧೧೫೭. ಈ ಕಾಲದಲ್ಲಿ ಚಾಲುಕ್ಯ ತೈಲಪನು ಆಳುತ್ತಿದ್ದನೆಂಬುದು ಸ್ಪಷ್ಟವಿದ್ದರೂ ಈ ಶಾಸನದಲ್ಲಿ ಆತನ ಆಳಿಕೆಯ ನಿರ್ದೇಶವಿಲ್ಲ. ಈ ಶಾಸನವು ಇದ್ದಕ್ಕಿದ್ದಹಾಗೆ 'ಸಮಸ್ತ ಪ್ರಶಸ್ತಿ ಸಹಿತನಾದ ಮಹಾಭುಜಬಳ ಚಕ್ರವರ್ತಿ ( ಈ ಆಡಂಬರದ ಬಿರುದಿನ ವೈಶಿಷ್ಟ್ಯವನ್ನು ನಾವು ಲಕ್ಷಿಸಬೇಕು. ) ಬಿಜ್ಜಣದೇವರಸನು ಮತ್ತು ವೈಳವಿದೇವ ಕುಮಾರನು ಸುಖಸಂಕಥಾ ವಿನೋದದಿಂದ ರಾಜ್ಯಂಗೈಯ್ಯುತ್ತಿದ್ದರೆಂದು ನಿವೇದಿಸುತ್ತದೆ. ಈ ವೈಳವಿದೇವನ ವಿಚಾರವನ್ನು ಮುಂದು ನೋಡುವ.

ಅನಂತರ 'ಐನೆಯ ಈಶ್ವರ ಸಂವತ್ಸರದ ಕಾರ್ತಿಕ ಶುದ್ಧ ನವಮೀ ಸೋಮವಾರದಂದು' ಬಿಟ್ಟ ದತ್ತಿಯ ವಿವರಗಳು ಬರುತ್ತವೆ. ಇಲ್ಲಿ ಐನೆಯ ವರ್ಷವು ಬಿಜ್ಜಳನ ರಾಜ್ಯ ವರ್ಷವೆಂದೇ ಅಭಿಪ್ರಾಯವಾಗುತ್ತದೆ. ಈ ಮೇಲಿಂದ ಶ್ರೀ ಮುಖವು ಆತನ ಒಂದನೆಯ ವರ್ಷವಾಗುವದು. ಇಂತು ಬಿಜ್ಜಳನ ಸ್ವತಂತ್ರ ರಾಜ್ಯ ಸ್ಥಾಪನೆಯು ಪ್ರಾರಂಭವು ಕ್ರಿ. ವ. ೧೧೫೩ ರಲ್ಲಿಯೇ ನಡೆಗಂತೆ ವ್ಯಕ್ತವಾಗುತ್ತದೆ. ಈ ಅಂಶವು ಮುಂದೆ ಇನ್ನೊಂದು ಸಂದರ್ಭದಲ್ಲಿ ನಮಗೆ ಸಹಾಯಕವಾಗಲಿದೆ. ಈ ವೇರೆಗೆ ಮೊದಲು ಮೂಲಿಯಲ್ಲಿ ತಲೆದೋರಿ ಅನಂತರ ಪ್ರಾಮುಖ್ಯತೆಯಿಂದ ೧೧೫೬—೫೭ ನೆಯ ಕ್ರಿ.ವ. ದಿಂದ ಮುಂದುವರಿದಂತೆ ಪ್ರಕಟವಾದ ಕಳಚುರಿ ಕಾಲಗಣನೆಯ ಉಗಮವನ್ನು ಅದಕ್ಕೂ ಮೂರು ಸಂವತ್ಸರ ಪೂರ್ವದಲ್ಲಿ ಕಂಡುಹಿಡಿಯಬಹುದಾಗಿದೆ. ಚಿಕ್ಕಲಗಿ ಶಾಸನದಲ್ಲಿ 'ರಾಯ ಸಮುದ್ಧರಣಂ' ಎಂಬ ಬಿರುದನ್ನು ಬಿಜ್ಜಳನಿಗೆ ಕೊಟ್ಟಿದೆ. ಇದರ ಬಲದಿಂದ ಬಿಜ್ಜಳನು ಯಾವದೋ ಒಂದು ವಿಪತ್ತಿಯಲ್ಲಿ ತೈಲಪನಿಗೆ ಹೆಚ್ಚಿನ ಸಹಾಯ ಮಾಡಿರಬೇಕೆಂತಲೂ ಅದರ ಮೂಲಕ ಆತನು ಬಿಜ್ಜಳನಿಗೆ ಒಂದು ಬಗೆಯ ವಿಶೇಷಾಧಿಕಾರವನ್ನು ಸಲ್ಲಿಸಿರಬೇಕೆಂತಲೂ ಊಹಿಸಬಹುದು.

ಕ್ರಿ. ವ. ೧೧೫೬ ರಿಂದ ೧೧೬೨ನೆಯ ವರೆಗಿನ ಆರೇಳು ವರ್ಷಗಳ ಅವಧಿಯಲ್ಲಿ ಬಿಜ್ಜಳನು ಚಾಳುಕ್ಯ ರಾಜ್ಯವನ್ನು ವ್ಯವಸ್ಥಿತವಾಗಿ ಆಕ್ರಮಿಸುತ್ತ ಕ್ರಿ. ವ. ೧೧೬೨—೬೩ ಎನ್ನುವಷ್ಟರಲ್ಲಿ ಅವನ್ನು ಸಂಪೂರ್ಣವಾಗಿ ಅಪಹರಿಸಿದನು. ಈ ವಿಷಯವನ್ನು ಫ್ಲೀಟ ಮತ್ತು ಶ್ರೀ ಗೋವಿಂದ ಪೈಗಳು ಅನೇಕ ಶಾಸನಗಳ ಆಧಾರವನ್ನು ತೋರಿಸಿ ಸಮರ್ಪಕವಾಗಿ ವಿವರಿಸಿದ್ದಾರೆ. ಇಂತು ಚಾಲುಕ್ಯ ರಾಜ್ಯದಲ್ಲಿ ಆಕ್ರಮಣವನ್ನು ನಡೆಸಿದ ಬಿಜ್ಜಳನ ಮಹತ್ವಾಕಾಂಕ್ಷಿ ಬುದ್ಧಿಗೆ, ಇದು ನ್ಯಾಯ, ಅದು ಅನ್ಯಾಯ, ಅದು ನೀತಿ ಇದು ಅನೀತಿ ಎಂಬ ವಿವೇಕವೇ ಸೋಂಕಲಿಲ್ಲವೆಂದು ತೋರುತ್ತದೆ. ರಾಜ್ಯಸಾಧನೆಯೊಂದೇ ಆತನ ಗುರಿ. 'ವೀರನಿಗೆ ಸಿರಿ' ಎಂಬುದೇ ಆತನ ರಾಜನೀತಿಯ ಮುಖ್ಯ ಸೂತ್ರವಾಗಿದ್ದಿತು. ಈ ಸೂತ್ರವನ್ನು ಘೋಷಿಸಿ ಆತನೀ ರಾಜ್ಯಾಪಹಾರವನ್ನು ಒಂದು ಶಾಸನವು ಹೀಗೆ ಸಮರ್ಥಿಸುತ್ತದೆ.

ಪುಸಿಯಲ್ತು ವೀರಭೋಜ್ಯಾ
ವಸುಂಧರಾಯೆಂಬ ವಾಕ್ಯಮಂ ಧರೆಯುಂ ಸಾ
ಧಿಸಿದಂ ತೆಂಕಬ್ಬಿಯೆ ಬಡ
ಗ ಸೀಮೆ ಚಾಳುಕ್ಯ ಕಟಕವೆನೆ ಬಿಜ್ಜನೃಪಂ ||

ಈ ಶಾಸನಕಾಲ ಕ್ರಿ. ವ. ೧೧೫೯. ಬಳಿಕ ಮೂರು ಸಂವತ್ಸರಗಳೆನ್ನುವಷ್ಟರಲ್ಲಿ ಹೆಚ್ಚುಕಡಿಮೆ ಚಾಲುಕ್ಯ ರಾಜ್ಯವೆಲ್ಲ ಬಿಜ್ಜಳನ ವಶವಾಯಿತು. ಇದೆಂತಹ ಅದ್ಭುತಕಾರ್ಯ! ಯಃಕಶ್ಚಿತನಾದ ಒಬ್ಬ ಮಾಂಡಲಿಕನೆಂದರೇನು ? ಒಂದು ಸಾಮ್ರಾಜ್ಯಕ್ಕೊಡೆಯನಾಗುವುದೆಂದರೇನು! ಒಂದು ಸಾಮ್ರಾಜ್ಯಕ್ಕೊಡೆಯನಾಗುವುದೆಂದರೇನು ? ಸು. ೧೧೬೨ನೆಯ ಕ್ರಿ. ವ. ದ. ಇನ್ನೊಂದು ಶಾಸನವು ಬಿಜ್ಜಳನ ಈ ಕೃತಕೃತ್ಯವನ್ನು ಹೀಗೆ ಪ್ರಶಂಸಿಸುತ್ತದೆ:

ಕೊಡದಿನುದಯಿಸಿದಗಸ್ತ್ಯಂ
ಕಡಲಂ ಪೀರ್ದಂತೆ ಮಂಡಳೇಶ್ವರ ರಾಜ್ಯ
ಕ್ಕೊಡೆಯನೆನೆ ಪುಟ್ಟಿ ವೀರದಿ
ನೆಡೆಗೊಂಡಂ ಸಕಳಧಾತ್ರಿಯಂ ಬಿಜ್ಜನೃಪಂ |

ಬಿಜ್ಜಳನು ಯಾವ ವಿಧಾನದಿಂದ ತನ್ನ ಕಾರ್ಯವನ್ನು ಸಾಧಿಸಿದನು ಎಂಬ ವಿವರಗಳನ್ನು ಅದೇ ಶಾಸನದಲ್ಲಿ ಸ್ವಾರಸ್ಯವಾಗಿ ವರ್ಣಿಸಿದೆ

ಆತನು ಮೊದಲು ಚಿಕ್ಕ ಚಿಕ್ಕ ಸಾಮಂತರನ್ನು ಸದೆಬಡಿದನು. ಅನಂತರ ಮಂಡಲಾಧಿಕಾರಿಗಳನ್ನು ಹತ್ತಿಕ್ಕಿದನು. ಬಳಿಕ ಅಧಿರಾಜರ ಬೇರನ್ನು ಕತ್ತರಿಸಿದನು. ಇಂತು ಚಕ್ರಾಧಿಪತಿಯಾದನು. ಇದಕ್ಕೆ ಕಾರಣವಾವುದು? 'ನೊಸಲೊಳ್ ಸಾಮ್ರಾಜ್ಯಪಟ್ಟಂ;' ವಿಧಿ ಆತನ ಹಣೆಯಲ್ಲಿ ಸಾಮ್ರಾಜ್ಯಪಟ್ಟವನ್ನು ಬರದಿದ್ದನು! ಈ ಶಾಸನ ಭಾಗವು ಹೀಗಿದೆ:

ನೊಸಲೊಳ್ ಸಾಮ್ರಾಜ್ಯಪಟ್ಟಂ ನೆಲಸಲ್ ಒಡನೆ ದೋರ್ಗರ್ವದಿಂ ಮನ್ನೆಯರ್ಗೆ ಉ
ಬ್ಬಸಮಂ ತಾಂ ಮಾಡಿದಂ ಮತ್ತಿರಿಯಿರೆ ಚಲದಿಂ ಮಂಡಳೀಶರ್ಗೆ ಬೇರೋಳ್
ಬಿಸಿನೀರಂ ಪೊಯ್ದನ್ ಅಂತನ್ತು ಇರೆಯಿರೆ ಬಳಿಯಂ ರಾಯರಂ ಕೂಡೆ ನಿರ್ಮೂ-
ಳಿಸಿದಂ ಚಕ್ರಾಧಿನಾಥೋಜ್ಜ್ವಳಮುಖತಿಳಕಂ ಬಿಜ್ಜಲಕ್ಷೋಣಿಪಾಳಂ ||

ಈ ಮೊದಲಾದ ಶಾಸನಗಳಲ್ಲಿಯ ವರ್ಣನೆಯನ್ನು ಪರಿಶೀಲಿಸಿದರೆ ಬಿಜ್ಜಳನು ಚಾಲುಕ್ಯರಾಜ್ಯಾಪಹರಣ ಮಾಡುವಲ್ಲಿ ಹಿಂಸಾಮಾರ್ಗವನ್ನು ಅನುಸರಿಸಿ ಬಗೆಬಗೆಯ ಆಕ್ರಮಗಳನ್ನೂ ಅತ್ಯಾಚಾರಗಳನ್ನೂ ಎಸಗಿದನೆಂದು ವ್ಯಕ್ತವಾಗುತ್ತದೆ. ಕೊನೆಯದಾಗಿ ತೈಲಪನನ್ನೂ ಚಾಲುಕ್ಯ ಸಿಂಹಾಸನದ ಬೇರೆ ಬಾಧ್ಯಸ್ಥರನ್ನೂ ತನ್ನ ದಾರಿಯಿಂದ ದೂರಮಾಡಲು ಆತನು ಘೋರ ರಕ್ತಪಾತಕ್ಕೂ ರಾಜವಧೆಗೂ ಹೇಸಲಿಲ್ಲ. ಈ ಅಂಶವು ಎರಡು ಶಾಸನಗಳ ಆಧಾರದಿಂದ ಸ್ಪಷ್ಟವಾಗುತ್ತದೆ. ಇವು ಕಲಬುರ್ಗಿ ಜಿಲ್ಲೆಯ ಹರಸೂರು ಮತ್ತು ಕಾಳಗಿ ಗ್ರಾಮದ ಶಾಸನಗಳು. ಇವುಗಳ ಕಾಲ ರಾಯಮುರಾರಿ ಸೋವಿದೇವನ ಆಳಿಕೆಯ ೧೧೭೨ ಮತ್ತು ೧೧೭೩ ನೆಯ ಕ್ರಿಸ್ತ ವರ್ಷ. ಈ ಶಾಸನಗಳ ಕೆಲಭಾಗವು ಎರಡರಲ್ಲಿಯೂ ಒಂದೇ ವಿಧವಾಗಿದೆ. ಹರಸೂರ ಶಾಸನವನ್ನು ಈ ಮೊದಲು ಅನೇಕ ಬಾರಿ ಸಂದರ್ಶಿಸಲಾಗಿದೆ. ಈ ಶಾಸನಗಳಲ್ಲಿ ಬಿಜ್ಜಳನ ರಾಜ್ಯ ಸಂಪಾದನೆಯ ವಿಧಾನವನ್ನು ಹೀಗೆ ವಿವರಿಸಿದೆ:

ಆ ಪೆರ್ಮಾಡಿ ನೃಪಾಳಂ
ಗಾಪಾದಿತ ಸಕಳ ಕುಂತಳೋರ್ವೀರಾಜ್ಯಂ
ವ್ಯಾಪಾದಿತ ಚಾಳುಕ್ಯ ಮ
ಹೀಪಾಳಕ ನಿಕರನಾದನಾ ಬಿಜ್ಜನೃಪಂ||

ಈ ಕಂದ ಪದ್ಯದಲ್ಲಿಯ 'ವ್ಯಾಪಾದಿತ ಚಾಳುಕ್ಯ ಮಹೀಪಾಳಕ ನಿಕರನ್' ಎಂದು ಬಿಜ್ಜಳನನ್ನು ವಿಶೇಷಿಸುವ ಪದವನ್ನು ನಾವು ಲಕ್ಷಿಸಬೇಕು. ಇದರಲ್ಲಿ ಬಿಜ್ಜಳನು ಚಾಳುಕ್ಯ ಮನೆತನದ ಅನೇಕ ರಾಜಪುತ್ರರನ್ನು ಕೊಲೆ ಮಾಡಿದನು ಎಂದು ಸ್ಪಷ್ಟವಾಗಿ ಹೇಳಿದೆ. ಈ ಕೊಲೆಗಡುಕನ ಕ್ರೂರ ಖಡ್ಗಕ್ಕೆ ಸ್ವತಃ ಮುಮ್ಮಡಿ ತೈಲಪನೂ ಆತನ ಬಾಂಧವರೂ ಆಹುತಿಯಾಗಿರಬೇಕು. ಬಿಜ್ಜಳನು ಕ್ರಿ. ವ. ೧೧೬೨ ರಲ್ಲಿ ಚಾಲುಕ್ಯ ಸಾಮ್ರಾಜ್ಯದ ಅಧಿಪತಿಯಾದನೆಂದು ಅನೇಕ ಶಾಸನಾಧಾರದಿಂದ ಸಿದ್ಧವಾಗುತ್ತದೆ. ಈ ಮುಂದಿನ ಕಾಲದ ತೈಲಪನ ಶಾಸನಗಳು ದೊರೆತಿಲ್ಲವಾದುದರಿಂದಲೂ, ೧೧೬೩ನೆಯ ಕ್ರಿ. ವ. ದ ಅನಮಕೊಂಡ ಶಾಸನದಲ್ಲಿ ತೈಲಪನು ಮೃತ್ಯುವಶನಾಗಿದ್ದ ಸಂಗತಿ ಉಕ್ತವಾಗಿರುವುದರಿಂದಲೂ ಕ್ರಿ. ವ. ೧೧೬೨ ರಲ್ಲಿ ಬಿಜ್ಜಳನು ನೆರವೇರಿಸಿದ ಚಾಲುಕ್ಯ ರಾಜ್ಯಾಪಹಾರದ ಒಳಸಂಚಿನ ಗಲಭೆಯಲ್ಲಿ ತೈಲಪನು ಹತನಾದನೆಂದು ಗ್ರಹಿಸಬಹುದಾಗಿದೆ.

ಇಂತು ಬಿಜ್ಜಳನ ಆಸುರೀ ಮಹತ್ವಾಕಾಂಕ್ಷೆ ಈಡೇರಿತು. ಮೂರು ತಲೆಮಾರುಗಳ ಹಿಂದೆ ಜೋಗನು ಮತ್ತು ವಿಕ್ರಮಾದಿತ್ಯರು ಪ್ರೇಮದಿಂದ ನೆಟ್ಟು, ಸೌಹಾರ್ದದಿಂದ ಸಂವರ್ಧಿಸಿದ ಕಲಚುರಿ-ಚಾಲುಕ್ಯ ಕುಲಗಳ ಬಾಂಧವ್ಯದ ಅಮೃತ ವೃಕ್ಷವು ಬಿಜ್ಜಳನೆಂಬ ವಿಷಮಯ ಫಲವನ್ನು ನೀಡಿತು. ಅದು ಒಂದು ಮಹಾಸಾಮ್ರಾಜ್ಯವನ್ನು ನಾಶಮಾಡುವುದಲ್ಲದೆ ಪರಿಪರಿಯ ಅನರ್ಥ ಪರಂಪರೆಯನ್ನು ನಿರ್ಮಿಸಿತು. ಈ ಮುಂದಿನ ಈ ವಂಶದ ಚರಿತ್ರೆಯನ್ನು ನೋಡಿದರೆ ಈ ಅನರ್ಥ ಪರಂಪರೆಯ ಕಲ್ಪನೆ ಬರುವಂತಿದೆ.

## ಬಿಜ್ಜಳ (೧೧೪೦-೧೧೬೭.)

## ಮತಕ್ರಾಂತಿ ಮತ್ತು ರಾಜ್ಯಭಾರ

### ೧. ಮತಕ್ರಾಂತಿ

ಬಿಜ್ಜಳನು ಅನುಸರಿಸಿದ ಆಕ್ರಮಣ ನೀತಿಯ ಫಲವಾಗಿ ಚಾಲುಕ್ಯ ಸಾಮ್ರಾಜ್ಯದಲ್ಲಿ ಆಂದೋಲನದ ಅಲೆಗಳು ಎದ್ದು, ಅವು ರಾಜಕೀಯ ಪ್ರಪಂಚವನ್ನು ಆವರಿಸಿಕೊಳ್ಳುತ್ತಿರುವಾಗ, ಇನ್ನೊಂದು ಬಗೆಯ ಆಂದೋಲನವು ಅದೇ ಕಾಲದಲ್ಲಿ ಹುಟ್ಟಿ ಬೆಳೆದು ಅದರ ಅಲೆಗಳು ಸಾಮಾಜಿಕ ಮತ್ತು ಮತೀಯ ರಂಗದಲ್ಲಿ ಅಲ್ಲೋಲ ಕಲ್ಲೋಲವನ್ನು ಉಂಟುಮಾಡಿ

ದವು. ಈ ಎರಡನೆಯ ಆಂದೋಲನದ ಉಗಮಸ್ಥಾನವು ಬೇರೊಂದು ಪ್ರದೇಶದಲ್ಲಿದ್ದರೂ ಅದರ ಅಭಿವೃದ್ಧಿಯ ಕಾಲದಲ್ಲಿ ಅದಕ್ಕೂ ಬಿಜ್ಜಳ ನಿಗೂ ನಿಕಟವಾದ ಸಂಬಂಧವು ಪ್ರಾಪ್ತವಾಯಿತು. ಮೊದಲು ಸಹಾಯಕನಂತೆ ತೋರಿದ ಬಿಜ್ಜಳನು ಮುಂದೆ ಈ ಆಂದೋಲನದ ವಿರೋಧಿಯಾದನು. ಈ ವಿರೋಧವು ಉಗ್ರವಾದ ಘರ್ಷಣೆಯ ಸ್ವರೂಪವನ್ನು ತಾಳಿ ಅದರ ಕಿಡಿಗಳು ಸರ್ವತ್ರ ವ್ಯಾಪಿಸಿ ಹೊಗೆಯ ಮೋಡಗಳನ್ನು ಎಬ್ಬಿಸಿದವು.

ಈ ಆಂದೋಲನದ ಜನಕನು ಬಸವೇಶ್ವರನು. ಬಸವೇಶ್ವರನ ನೇತೃತ್ವದಲ್ಲಿ ಉದಯಿಸಿದ ಈ ಕ್ರಾಂತಿಯ ಮೂಲ ಕಾರಣವು ಭಿನ್ನ ಧರ್ಮೀಯತೆ ಆಗಿರದೆ ಮತಭಿನ್ನತೆ ಆಗಿದ್ದಿತು. ಇದು ವೀರಶೈವವೆಂಬ ಹೆಸರಿನಿಂದ ಪ್ರಸಿದ್ಧವೆತ್ತಿದೆ. ಈ ಕಾಲದಲ್ಲಿ ವೈದಿಕ ಸಂಪ್ರದಾಯನಿಷ್ಠವೆಂದು ಹೇಳಿಕೊಳ್ಳುವ ವರ್ಣಾಶ್ರಮ ಪ್ರಧಾನ ಧರ್ಮದಲ್ಲಿ ಸಂಕುಚಿತವಾದ ಜಾತಿಗಳ ಭಾವನೆ, ಶುಷ್ಕಕರ್ಮಗಳ ಮತ್ತು ನಿರ್ಜೀವ ಆಚಾರಗಳ ಆಡಂಬರವು ಬೆಳೆದು ಅದು ತನ್ನ ನಿಜವಾದ ಸತ್ವವನ್ನು ಕಳೆದುಕೊಳ್ಳುತ್ತಲಿತ್ತು. ಇದರ ಸತ್ವಹೀನತೆಯಿಂದ ಜಿಗುಪ್ಸೆಗೊಂಡ ಬಸವೇಶ್ವರನು ಅದಕ್ಕೆ ವಿರೋಧಿಯಾಗಿ ನಿಂತು ನವೀನವಾದ ತನ್ನ ಮತದ ಪ್ರಚಾರವನ್ನು ಆರಂಭಿಸಿದನು. ಶಿವಭಕ್ತಿಯೇ ಈ ನವಮತದ ಅಡಿಗಲ್ಲು. ಶಿವಭಕ್ತರೆಲ್ಲರು ಸಮಾನರು; ಅವರಲ್ಲಿ ಜಾತಿ ಮೂಲಕ ಉಚ್ಚ ನೀಚರೆಂಬ ಭೇದವಿಲ್ಲ. ಎಂಬುದು ಈ ನವಮತದ ಮುಖ್ಯ ತತ್ವ ಮತ್ತು ಆಚರಣೆ.

ವೀರಶೈವ ಕ್ರಾಂತಿಯ ವಿಚಾರವಾಗಿ, ಬಸವೇಶ್ವರ ಮತ್ತು ಬಿಜ್ಜಳರ ವಿಚಾರವಾಗಿ ಬಿಜ್ಜಳನ ಮತದ ವಿಚಾರವಾಗಿ, ಈಗಾಗಲೇ ಅನೇಕ ಚರ್ಚೆಗಳು ನಡೆದಿವೆ. ಬಸವೇಶ್ವರನ ಜೀವನದಲ್ಲಿಯ ಹಲವಾರು ಘಟನೆಗಳ ಐತಿಹಾಸಿಕತೆಯನ್ನು ಶ್ರೀಮಾನ್ ಗೋವಿಂದ ಪೈಗಳು ಶಾಸನಗಳ ಆಧಾರದಿಂದ ತೋರಿಸಿಕೊಟ್ಟಿದ್ದಾರೆ. ಈ ಸಂದರ್ಭದಲ್ಲಿ ಬಸವೇಶ್ವರನ ಕೆಲವು ವಚನಗಳನ್ನು ಎತ್ತಿಕೊಂಡು ಅವುಗಳಿಂದ ಸೂಚಿತವಾಗಬಹುದಾದ ಅಭಿಪ್ರಾಯದ ಬಲದಿಂದ ಶ್ರೀಯುತರು ಕೆಲವು ಊಹೆಗಳನ್ನು ರಚಿಸಿರುತ್ತಾರೆ. ಅವುಗಳ ಸಮರ್ಪಕತೆ ಸಿದ್ಧವಾಗಬೇಕಾಗಿದೆ. ಈ ಹಿಂದಿನ ಅನ್ವೇ

ಷಕರ ಪ್ರತಿಪಾದನೆಯಲ್ಲಿ ಸಂದಿಗ್ಧ ಅಪೂರ್ಣ ಮತ್ತು ಅಸಮರ್ಥನೀಯ ವೆಂದು ನನಗೆ ತೋರಿದ ಒಂದೆರಡು ಅಂಶಗಳನ್ನು ಮಾತ್ರ ಸಂಗಡಿಸಿ ಇಲ್ಲಿ ಸ್ವಲ್ಪ ದೂರಕ್ಕೆ ಚರ್ಚಿಸುವೆ.

ಸ್ವಯಂ ಬಸವೇಶ್ವರನ ಮುಖದಿಂದ ಆ ಆ ಸಂದರ್ಭಗಳಲ್ಲಿ ಹೊರ ಹೊಮ್ಮಿ ಅನಂತರ ಸಂಕಲಿತವಾಗಿ ಬಸವೇಶ್ವರ ವಚನಗಳನ್ನು ಪರೀಕ್ಷಿ ಸಿದರೆ ವೀರಶೈವ ಮತದ ಮೂಲ ಸ್ಫೂರ್ತಿಯು ವಿಶದವಾಗಿ ನಮಗೆ ಬೆಳಕು ದೊರೆಯುತ್ತದೆ. ಬಸವೇಶ್ವರನು ಅತ್ಯಂತಿಕ ಶಿವಭಕ್ತನಾಗಿದ್ದನು; ಮಾತ್ರವಲ್ಲದೆ ಶಿವಭಕ್ತರೆಲ್ಲರು ಸ್ವಕೀಯರು ಎಂಬ ಆತ್ಮೀಯ ಭಾವನೆ ಆತನದಾಗಿದ್ದಿತು. ನೂತನವಾದ ತನ್ನೀಭಕ್ತಿಯ ಸಂದೇಶದಿಂದ ಆತನು ಶಿವಭಕ್ತರ ಒಂದು ಮಹಾ ಸಂಘವನ್ನೇ ನಿರ್ಮಾಣ ಮಾಡಿದನು. ಬಸ ವೇಶ್ವರನು ತನ್ನ ವಚನಗಳಲ್ಲಿ ಗತಾನುಗತಿಕ ವೈದಿಕರನ್ನೂ ಸಂಪ್ರದಾಯ ಶರಣ ಬ್ರಾಹ್ಮಣರನ್ನೂ ನಿಂದಿಸಿದ್ದಾನೆ. ಪುರಾತನ ಸಂಪ್ರದಾಯದವರು ಈ ಹೊಸ ವಿಚಾರಗಳನ್ನು ಒಪ್ಪಲಿಲ್ಲ. ಮಾತ್ರವಲ್ಲ, ಅವುಗಳನ್ನು ವಿರೋ ಧಿಸಿದರು. ಪುರಾತನ ಸಂಪ್ರದಾಯವನ್ನು ಪುರಸ್ಕರಿಸುವವರು ಹೆಚ್ಚಾಗಿ ಬ್ರಾಹ್ಮಣ ಸಮಾಜದವರೇ ಆಗಿದ್ದುದರಿಂದ ಬಸವೇಶ್ವರನ ವೀರಮಾಹೇ ಶ್ವರರಿಗೂ ಬ್ರಾಹ್ಮಣರಿಗೂ ವೈಮನಸ್ಯವು ಉಂಟಾಯಿತು. ಸ್ವತಃ ಬಸ ವೇಶ್ವರನಾದರೋ ಇಂತಹ ಪುರಾತನ ಸಂಪ್ರದಾಯದ ಬ್ರಾಹ್ಮಣ ಕುಲ ದಲ್ಲಿ ಹುಟ್ಟಿದವನು. ಇಂತು ಒಂದೇ ಸಮಾಜದಲ್ಲಿ ಹೊಸ ಮತ್ತು ಹಳೆಯ ಪಂಥಗಳೆಂಬ ಪಂಗಡಗಳು ಹುಟ್ಟಿ ಬೆಳೆದರೆ ಅವುಗಳ ವಿರೋ ಧವು ಮತ್ಸರಾಸೂಯೆಯೆಂಬ ಅಗ್ನಿಯಿಂದ ಪ್ರಜ್ವಲಿತವಾಗಿ, ಒಮ್ಮೊಮ್ಮೆ ಭಿನ್ನಧರ್ಮಗಳಲ್ಲಿಯ ವೈರಕ್ಕಿಂತ ಪ್ರಖರ ಸ್ವರೂಪವನ್ನು ತಳೆಯುವುದು. ಇಂತಹ ಸನ್ನಿವೇಶವು ವೀರಶೈವದಿಂದ ಉಂಟಾಯಿತು. ಇದನ್ನು ಸಂಕ್ಷೇಪ ವಾಗಿ ಪರಿಶೀಲಿಸುವ.

ತನ್ನ ಶೈವನಿಷ್ಠೆಯ ಸಾಧನಭೂಮಿಯಾದ ಕಪ್ಪಡಿಯಿಂದ ಮಂಗಳ ವಾಡಕ್ಕೆ ತೆರಳಿದ ಬಸವೇಶ್ವರನಿಗೆ ಮೊದಮೊದಲು ಬಿಜ್ಜಳನಿಂದ ಹೆಚ್ಚಿನ ಸಹಾಯವು ಒದಗಿತು. ಬಿಜ್ಜಳನು ತೇಜಸ್ವಿಯಾದ ಈ ತರುಣನನ್ನು ಅಧಿಕಾರಾದರಗಳಿಂದ ಸನ್ಮಾನಿಸಿ ಪ್ರೋತ್ಸಾಹಿಸಿದನು. ರಾಜ್ಯಾಂಗದಲ್ಲಿಯೂ ಸಮಾಜದಲ್ಲಿಯೂ ಬಸವೇಶ್ವರನ ಪ್ರತಿಷ್ಠೆ ಬೆಳೆಯಿತು. ಈ ಸುಸಂಧಿ ಯನ್ನು ಆತನು ತನ್ನ ನವಮತ ಪ್ರಸಾರಕ್ಕೆ ಪೂರ್ತಿಯಾಗಿ ಉಪಯೋ

ಗಿಸಿಕೊಂಡನು. ಅಲ್ಪಾವಧಿಯಲ್ಲಿಯೇ ಈ ನವಮತದ ಪರಿಣಾಮಗಳು ಗೋಚರವಾದುವು. ಪುರಾತನ ಸಂಪ್ರದಾಯದವರು ಮತ್ತು ನವಮತೀಯರು ಎಂಬ ಭೇದಗಳು ಸಮಾಜದಲ್ಲಿ ಹುಟ್ಟಿದವು. ಈ ಭೇದಗಳು ಬಣಗಳಾಗಿ, ಬಣಗಳು ಪಕ್ಷಗಳ ರೂಪ ತಾಳಿ, ಪಕ್ಷಗಳು ಪ್ರತಿಪಕ್ಷಗಳಾಗಿ ಮಲೆತು ನಿಂತವು. ಬಿಜ್ಜಳನು ಪುರಾತನ ಸಂಪ್ರದಾಯದ ಪುರಸ್ಕಾರಕನಾದನು. ಬಿಜ್ಜಳನಿಗೆ ಬಸವೇಶ್ವರನಲ್ಲಿ ಜಿಗುಪ್ಸೆ ಹುಟ್ಟಿತು. ಬೇಗನೇ ಅದು ವಿತುಷ್ಟಿಯಲ್ಲಿ ಪರಿಣಮಿಸಿತು. ಈ ಘಟನೆಗಳು ಬಿಜ್ಜಳನು ಚಾಲುಕ್ಯ ರಾಜ್ಯಾಪಹಾರ ಮಾಡುವದಕ್ಕೆ ಮುಂಚೆ, ಇನ್ನೂ ಮಹಾಮಂಡಲೇಶ್ವನಾಗಿದ್ದುಕೊಂಡು ಮಂಗಳವಾಡದಲ್ಲಿ ರಾಜ್ಯಭಾರ ನಡೆಸುತ್ತಿರುವ ಕಾಲದಲ್ಲಿ ಸಂಭವಿಸಿರಬೇಕು. ಹರಿಹರನ 'ಬಸವರಾಜ ದೇವರ ರಗಳೆ' ಯಲ್ಲಿ ಈ ಪರಿಸ್ಥಿತಿಯು ಸ್ಪಷ್ಟವಾದ ಚಿತ್ರವು ದೊರೆಯುತ್ತದೆ. ಅದರ ಯಥಾರ್ಥ ಕಲ್ಪನೆ ಬರುವುದಕ್ಕೋಸುಗ ಹತ್ತನೆಯ ಸ್ಥಳದ ಕೆಲಭಾಗವನ್ನು (ಪುಟ ೬೭—೬೮) ಇಲ್ಲಿ ಉದಾಹರಿಸುವೆ.

"ಇತ್ತಲೊಡನೆ ಬರುತ್ತಿರ್ಪ ವೈಷ್ಣವರ ಬೇಹಿನ ಸಾಹಸಿಗನೊರ್ವಂ ಪುರಕೆ ಪರಿತಂದು ಬಸವನ ಚರಿತ್ರಮನಜ್ಞಾನಿಗಳಪ್ಪವಿಪ್ರಕುಲಕ್ಕೆ ಪೇಳೆ; ಕೇಳ್ದು ಸಂಭ್ರಮದಿಂದ ಸಡಗರಿಸುತ್ತಂ, ನಾರಣಕ್ರಮಿತಂ ಕೃಷ್ಣ ಪೆದ್ದಿ ವಿಷ್ಣುಭಟ್ಟಂ ಕೇಶವಭಟ್ಟಂ ವಿಷ್ವಕ್ ಸೇನಭಟ್ಟಂ ಮುರಾರಿಕ್ರಮಿತಂ ಸೌರಿ ಪೆದ್ದಿ ಮುಕುಂದಭಟ್ಟಂ ಪದ್ಮನಾಭ ಕ್ರಮಿತಂ ಗೋವಿಂದ ಪಂಡಿತಂ ಧರಣೀಧರಭಟ್ಟಂ ವೈಕುಂಠಪೆದ್ದಿ ಜಲಶಯನಕ್ರಮಿತಂ ದಶಾವತಾರಭಟ್ಟಂ ಜನಾರ್ದನಪೆದ್ದಿ ವಾಸುದೇವ ಘೈಸಂ ಅಚ್ಯುತಕ್ರಮಿತಂ ದಾಮೋದರಭಟ್ಟಂ ಮೊದಲಾದ ಛಾಂದಸರು ವೇದಜಡರು ಮಟ್ಟಯ ಮರುಳ್‌ಗಳು ವೃಥೋತ್ಸಾಹಿಗಳು ಹೆಪ್ಪೇಳಿಗಳು ದರ್ಭೆಯ ನಿರ್ಭಾಗ್ಯರೆಲ್ಲಂ ನೆನೆದರ ಮನೆಗೆ ಒಂದು—ದೇವ ದೇವ ಎಲೆ ಭೂಪ, ಎಲೆಲೆ ಬಿಜ್ಜಳ, ಬಸವನ ನಡೆವಳಿ ದಿನದಿನಕ್ಕೆ ವಿಪರೀತ ಮಾಗಿರ್ದಪುದು. ಹಿರಿಯ ಮಾಹೇಶ್ವರರೆಂದು ಬೆರಿಸಿಕೊಂಡಿಪ್ಪುದಂತಲ್ಲದೆ ಇಂದೀಗಳಿಗೆಯೊಳು ಹೊಲೆಗೇರಿಯೊಳೊರ್ವಂ ಪೊಲೆಯನಂದಡೆ ಕೋಪಂ—ಹಿರಿಯ ಭಕ್ತನ ಮನೆಯೊಳಗುಂಡುದಲ್ಲದೆ ನಿನ್ನೋಲಗದೊಳು ಪೊಲೆಗಲಸಲುಂ ಬಂದಪಂ. ಇಂತಾದಡೆವಗಿಂಲ್ಬಾರದು—ಎಂದು ಪೇಳ್ವರಂ ಸಂತೈಸಿ, ಬಸವನಂ ಕರೆಯಿಮೆಂದರಸಾಳ್ಗಳಂ ಕಳೆಯುತ್ತಂ; ಬಸವರಾಜಂ ಬಂದೋಲಗದ ಮನೆಯಂ ಪೊಗುವನೆಂದು

ರಾಜಾಂಗಣದ ಬಯಲೊಳು ಒಡ್ಡೋಲಗಂ ಗೊಟ್ಟು ಕುಳ್ಳಿರಲು; ಅಲ್ಲಿಗೆ ಜಂಗಮದಶಾವಸ್ಥಂ ಜಂಗಮ ಪ್ರಾಣಿಯೆನಿಪ ಸಂಗನಬಸವಂ ಬಂದು ನಿಂದಿರೆ, 'ಬಿಜ್ಜಳಂ ಕಂಡು—ಎಲೆ ಬಸವಣ್ಣ, ಸುವರ್ಣಂ ಕಮ್ಮಿತಾದ ತೆ ವಿಪ್ರಕುಲಕನಕೂಲವುಪ್ಪ ಶಿವಭಕ್ತಿ ಪೊದ್ದಿರ್ದು ಸದಾಚಾರದಿಂ ಸುಖಿಯಾಗಿರ್ಪುದನೊಲ್ಲದೆ ಇಲ್ಲಿ ಬಂದು ಎಲ್ಲರಂ ಗೋಜಾಗತಂ ಮಾಳ್ಪುದು ಮಾರ್ಗವಲ್ಲ—ಎಂದರಸನುಂ ವಿಪ್ರಪ್ರಕರಂ ನುಡಿಯೆ, ಬಸವರಾಜಂ ಕೇಳ್ದು—ಎಲೆ ಬುದ್ಧಿಯುಲ್ಲದ ಭೂಪ, ಎಂಗಿವಿಯ ಮರುಳೆ, ನಾರಣಕ್ರಮಿತರ ಕೇರಿಯಿಂ ಪೊಕ್ಕೆನೆ? ಮುಕುಂದಭಟ್ಟರ ಮನೆಯೊಳುಂಡೆನೆ? ಗೌರಿ ಪೆದ್ದಿಗೇ ಸಾರಿಸಿಂದೆನೆ? ದಾಮೋದರಭಟ್ಟಂ ಪ್ರೇಮದಿಂ ನೋಂಕಿದೆನೆ? ಕೇಶವ ಪೈಸರ ವಾಸನೆಯುಂಟೆ? ಹೇನನರಿಯದ ಹೊಲೆಯರ ಮನೆಯಂ ಹೊಕ್ಕುಂಡುದಿಲ್ಲ—ಎಂದು ಶಿವಪ್ರೇರಕಂ ನುಡಿದ ಮಾತಿನೊಡನೆ ಬಿಜ್ಜಳಂ ಕೋಪದೊಳುರಿದು—ಇಂತು ನುಡಿವರೆ, ಭಂಡಾರಿ ಬಸವ? ವೇದಶಾಸ್ತ್ರ ಪುರಾಣಾಗಮ ಯಜ್ಞವಿಧಿಯಿಂ ನಡೆವ ವಿಪ್ರರ ಹೊಲೆಯರೆಂದು ಶಿವಭಕ್ತನಾದ ಹೊಲೆಯನಂ ಉತ್ತಮನೆಂಬುದಕ್ಕೆ ಪ್ರಮಾಣವೇನು? ವಿಪ್ರರ ಮೈಯಂ ಕೊಯ್ಯೆ ನೆತ್ತರ್ ಸುರಿದು, ಭಕ್ತರ ಮೈಯೊಳು ಪಾಲ್ ಸುರಿದಪುದೆ? ಬೇಡ, ಬೇಡ,

ಮೇಲಿನ ಅವತರಣಿಕೆಯಲ್ಲಿ ನಾವು ಬಸವೇಶ್ವರನ ನವಮತ ಪ್ರಚಾರದ ಸ್ವರೂಪವನ್ನು ಕಾಣುತ್ತೇವೆ. ಬಿಜ್ಜಳನು ವೈದಿಕ ಸಂಪ್ರದಾಯದ ಅಭಿಮಾನದಿಂದ ಪುರಾತನ ವಾದಿಗಳ ಪಕ್ಷವನ್ನು ಪ್ರೋತ್ಸಾಹಿಸುತ್ತಿದ್ದ ಸನ್ನಿವೇಶವನ್ನು ಅವಲೋಕಿಸುತ್ತೇವೆ. ಈ ನವೀನ ಮತ್ತು ಪುರಾತನಗಳಲ್ಲಿಯ ಕಲಹವು ಉಗ್ರರೂಪವನ್ನು ತಳೆದು ಶತ್ರುತ್ವದಲ್ಲಿ ಪರಿವರ್ತನ ಹೊಂದಿದ ವಿಷಮತೆಯ ಅರಿವು ನಮ್ಮ ಅನುಭವಕ್ಕೆ ಬರುತ್ತದೆ. ಪುರಾತನ ವಾದಿಗಳ ಮೇಲೆ 'ಛಾಂದಸರು, ವೇದಜಡರು, ಹೊಟ್ಟೆಯ ಮರುಳಗಳು, ವ್ಯರ್ಥೋತ್ಸಾಹಿಗಳು, ಹೆಬ್ಬೇಳಿಗಳು, ದರ್ಭೆಯ ನಿರ್ಭಾಗ್ಯರು' ಎಂದು ಮುಂತಾಗಿ ಸುರಿಸಿದ ಉಪಹಾಸದ ಮಳೆಯನ್ನು ನಾವು ಗಮನಿಸಬೇಕಾದುದು. 'ಓಲಗದೊಳು ಪೊಲೆಗಲಸಲುಂ ಬಂದ' ಸಂಗನಬಸವನನ್ನು ತನ್ನ ಅರಮನೆಯ ಓಲಗದಲ್ಲಿ ಕರೆಯಿಸಿಕೊಳ್ಳದೆ, ಬಿಜ್ಜಳನು ತಾನೇ ಹೊರಗೆ ಬಂದು ಅಸ್ಪೃಶ್ಯನೆಂದೆಣಿಸಿದ ಅತನಿಗಾಗಿ 'ರಾಜಾಂಗ

ಣದ ಬಯಲೊಳು ಒಡ್ಡೋಲಗಂಗೊಟ್ಟು' ಕಟುವಾಗಿ ನಿರ್ಭರ್ತ್ಸನೆ ಮಾಡುತ್ತಿರುವ ದೃಶ್ಯವನ್ನು ನಾವು ನೆನೆಯಬೇಕಾದುದು.

ಈ ಮೊರೆಗೆ ಈ ಕಾಲಕ್ಕೆ ಬಿಜ್ಜಳ ಬಸವೇಶ್ವರರಲ್ಲಿಯ ವಿತುಷ್ಟವು ವಿಕೋಪಕ್ಕೆ ಹೋಗಿ ಸಂಗ್ರಾಮಕ್ಕೆ ಅಣಿಯಾಗಿದ್ದಿತು. ಸಮರೋನ್ಮುಖವಾದ ಸೇನೆಗಳಲ್ಲಿ ಒಂದು ಕಡೆ ವೈಷ್ಣವ, ಶೈವ, ಮೊದಲಾದ ಭೇದಭಾವವಿಲ್ಲದ ಪುರಾತನವಾದಿಗಳೆಲ್ಲರೂ ಒಂದುಗೂಡಿದ್ದರು; ಇಂತಹರ ಧುರೀಣ ಬಿಜ್ಜಳ. ಇನ್ನೊಂದು ಕಡೆ 'ಶಿವಭಕ್ತಿ ತಲೆಗೇರಿದ' ನವವಾದಿಗಳ ಹಿರಿಬಳಗ; ಇವರ ನಾಯಕ ಬಸವೇಶ್ವರ. ಮೊದಲನೆಯುದು ಮತ ಜಾತಿ ಸಂಪ್ರದಾಯಗಳ ಬಿಗುವಾದ ಕಟ್ಟುನಿಟ್ಟುಗಳ ಕಣದಲ್ಲಿ ಭದ್ರವಾಗಿ ಕಾಲೂರಿಕೊಂಡು ನಿಂತುದು. ಎರಡನೆಯುದು ಇಂತಹ ನಿಬಂಧಗಳನ್ನು ಲೆಕ್ಕಿಸದೆ ಒಂದು ಬಗೆಯ ಜಾತಿ ಸಂಕರವನ್ನು ಹುಟ್ಟಿಸಲು ಹಾತೊರೆದು 'ಶಿವಭಕ್ತ' ಎಂಬ ಹೊಸದಾದ ಒಂದು ಜಾತಿಯನ್ನು ಕಟ್ಟಲು ಮುಂದುವರಿದುದು. ಬಿಜ್ಜಳ—ಬಸವೇಶ್ವರರ ಈ ದ್ವಂದ್ವ ಯುದ್ಧದಲ್ಲಿ ಜೈನರಿಗೆ ಯಾವೊಂದು ಬಗೆಯ ಸ್ಥಾನವೂ ಇರಲಿಲ್ಲ. ಬಿಜ್ಜಳನಾದರೋ ಪುರಾತನ ಮಾರ್ಗದ ಶಿವಭಕ್ತ; ಆತನು ಜೈನನಲ್ಲವೇ ಅಲ್ಲ. ಅಂದ ಬಳಿಕ ಜೈನ ಪಕ್ಷಪಾತವೆಲ್ಲಿಯದು? ಈ ನವಮಾರ್ಗದ ಶಿವಭಕ್ತರು ತಮ್ಮ ಮತಪ್ರಸಾರದ ಆಂದೋಲನವನ್ನು ರಭಸದಿಂದ ಮುಂದೂಡಿದಾಗ ಆ ಬಿರುಗಾಳಿಯಲ್ಲಿ ಮುಂದೆ ಜೈನ ಮತೀಯರೂ ಸಿಲುಕಿ ಗಾಸಿಯಾದರು. ಆದರೆ ಅದು ಆನುಷಂಗಿಕವಾಗಿ; ಏಕೆಂದರೆ ವೀರಶೈವದ ನೇರವಾದ ಇದಿರಾಳಿ ಜೈನವಲ್ಲ; ಪುರಾತನವಾದಿ.

ಬಿಜ್ಜಳ-ಬಸವೇಶ್ವರರಲ್ಲಿಯ ವಿತುಷ್ಟವು ಇಂತಹ ವಿಷಮಕ್ಕೆ ಇಳಿದ ಬಳಿಕ, ಮುಂದೆ ಬಸವೇಶ್ವರನು ಮಂಗಳವಾಡದ ಬಿಜ್ಜಳನ ಆಸ್ಥಾನದಲ್ಲಿರುವುದು ದುಸ್ತರವೇ ಆಗಿರಬೇಕು. ಅಲ್ಪ ಕಾಲದಲ್ಲಿಯೇ ಆತನು ಅಲ್ಲಿಂದ ಹೊರಟು ಬಿಟ್ಟಿರಬೇಕು. ಬಸವೇಶ್ವರ ವಚನಗಳಲ್ಲಿ ದೊರೆಯುವ,

೧. ಭವಿ ಬಿಜ್ಜಳನ ಗದ್ದುಗೆಯ ಕೆಳಗೆ ಕುಳ್ಳಿರ್ದು ಓಲೈಸಿಹೆನೆಂದು ನುಡಿವರಯ್ಯಾ !

೨. ಬಿಜ್ಜಳನ ಭಂಡಾರ ಎನಗೇಕಯ್ಯಾ !

೩. ಆಸೀ ಬಿಜ್ಜಳಂಗೆ ಅಂಜುವೆನೆ ?

ಎಂಬೀ ಮಾತುಗಳು ಇಂತಹ ಸಂದರ್ಭಗಳಲ್ಲಿ ಆತನು ನುಡಿದ ಉದ್ಗಾರ ಗಳಾಗಿರಬೇಕು.

ಇಲ್ಲಿ ನಾವು ಮುಖ್ಯವಾಗಿ ಲಕ್ಷಿಸಬೇಕಾದ ಅಂಶವೆಂದರೆ ಇಂತಹ ವಚನಗಳು ಶಾಸನಗಳಂತೆ ನಿಶ್ಚಿತವಾದ ಚಾರಿತ್ರಿಕ ಆಧಾರಗಳಾಗಲಾರ ವೆಂಬುದು. ಅವುಗಳಿಂದ ಚಾರಿತ್ರಿಕ ಘಟನೆಗಳ ಅಸ್ಪಷ್ಟ ಸೂಚನೆ ಮಾತ್ರ ದೊರೆಯುತ್ತದೆ. ಅನ್ಯ ಪ್ರಮಾಣಗಳ ವಿರೋಧವು ಬಾರದೇ ಇದ್ದರೆ, ಚಾರಿತ್ರಿಕ ಘಟನೆಗಳನ್ನು ಊಹಿಸಲು ಅವುಗಳಿಂದ ಕೆಲಮಟ್ಟಿಗೆ ನೆಂವೂ ಆಗುವುದು.

ಇಂತಹ ಇನ್ನೊಂದು ವಚನವನ್ನು ಎತ್ತಿಕೊಂಡು ಶ್ರೀ ಗೋವಿಂದ ಪೈಗಳು ಜಟಿಲವಾದ ಊಹೆಯ ಕಟ್ಟಡವನ್ನು ನಿಲ್ಲಿಸಿದ್ದಾರೆ. ಅವರಾ ಊಹೆಗಳ ಸಮರ್ಪಕತೆ ನನಗೆ ಇನ್ನೂ ಒಪ್ಪಿಗೆರುವದಿಲ್ಲವಾದುದರಿಂದಲೂ ಊಹಿಸುವುದೇ ಆದರೆ ಇನ್ನೊಂದು ವಿಧದ ಅಭಿಪ್ರಾಯ ಹೆಚ್ಚು ಸಮಂ ಜಸವಾದೀತೆಂದು ನನಗೆ ಅನಿಸಿದುದರಿಂದಲೂ ಆ ಅಂಶವನ್ನು ನಾನಿಲ್ಲಿ ಚರ್ಚಿಸಬೇಕಾಗಿದೆ. ಆ ವಚನವು ಹೀಗೆ,

> ಅರಸು ವಿಚಾರ ಸಿರಿಯು ಶೃಂಗಾರ ಸ್ಥಿರವಲ್ಲ ಮಾನವ. ಕೆಟ್ಟಿತ್ತು ಕಲ್ಯಾಣ ಹಾಳಾಯಿತ್ತು ನೋಡಯ್ಯ. ಒಬ್ಬ ಜಂಗಮದಭಿಮಾನ ದಿಂದ ಚಾಳುಕ್ಯರಾಯನ ಆಳಿಕೆ ತೆಗೆಯಿತ್ತು, ಸಂದಿತ್ತು ಕೂಡಲ ಸಂಗಮದೇವ ನಿಮ್ಮ ಕವಳಿಕೆಗೆ

ಇದರ ಆಧಾರದಿಂದ ಶ್ರೀ. ಪೈಗಳು ಹೀಗೆ ತರ್ಕಿಸಿದ್ದಾರೆ. ೧ ಕಲ್ಯಾ ಣದಲ್ಲಿ ಮುಮ್ಮಡಿ ತೈಲಪನ ಕ್ರೌರ್ಯದಿಂದ ವೀರಶೈವರಿಗೆ ಉಪದ್ರವು ಸಂಭವಿಸಿತು. ಆಗ ಬಸವೇಶ್ವರನು ತಾನು ಓಲಗಿಸುತ್ತಿದ್ದ ಬಿಜ್ಜಳನನ್ನು ಪ್ರೋತ್ಸಾಹಿಸಿ ಆ ಚಾಲುಕ್ಯ ರಾಜ್ಯವನ್ನು ಅಪಹರಿಸಿದನು. ೨ ಈ ಸಹಾ ಯಕ್ಕಾಗಿ ಚಕ್ರಾಧಿಪತಿಯಾದ ಬಿಜ್ಜಳನು ಬಸವೇಶ್ವರನಿಗೆ ಸರ್ವಾಧಿಕಾ ರವನ್ನು ಕೊಟ್ಟನು. ೩. ಇದರಿಂದಾಗಿ ಬಸವೇಶ್ವರನ ಪ್ರತಿಷ್ಠೆ ಅತಿಶಯ ವಾಗಿ ಬೆಳೆಯಿತು. ಅತನ ಪ್ರಭಾವದ ಮುಂದೆ ಬಿಜ್ಜಳನ ಪ್ರತಿಷ್ಠೆ ಕುಂದಿತು. ಬಸವೇಶ್ವರನ ಈ ವರ್ಚಸ್ಸಿಗೆ ಹೆದರಿ ಮುಂದೆ ಈತನೂ ತನ್ನ ಸಿಂಹಾಸನವನ್ನು ಆಕ್ರಮಿಸಿಯಾನು ಎಂದು ಯೋಚಿಸಿ ಬಿಜ್ಜಳನು ಬಸವೇಶ್ವರನನ್ನು ಕೊಲ್ಲಿಸಲು ಹೊಂಚುಹಾಕಿದನು.

ಈ ತರ್ಕಸರಣಿಯಂತೆ ಬಿಜ್ಜಳನ ಚಾಲುಕ್ಯ ರಾಜ್ಯಾಪಹರಣದ ದ್ರೋಹ ಕಾರ್ಯದಲ್ಲಿ ಬಸವೇಶ್ವರನೂ ಅಪ್ರತ್ಯಕ್ಷವಾಗಿ ಅಂಶತಃ ಭಾಗಿಯಾಗುತ್ತಾನೆ. ಶ್ರೀ ಪೈಗಳು ತವಿಸ್ಮಾ ವಾದವನ್ನು ಅಭಿಮಾನ ಎಂದರೆ ಹಿಂಸಾ ಎಂಬ ಅರ್ಥದ ಅಸ್ತಿವಾದವನ್ನೇ ಎತ್ತಿ ಹಿಡಿದಿರುವರು. ಈ ಅರ್ಥವು ಅಪ್ರಸಿದ್ಧವಾಗಿರುವದಲ್ಲದೆ, ಪ್ರಸ್ತುತ ಸಂದರ್ಭದಲ್ಲಿ ಅಪ್ರಸ್ತುತವೂ ಅನಾವಶ್ಯಕವೂ ಆಗಿದೆ. ಐತಿಹಾಸಿಕ ಘಟನೆಗಳ ಓಘಕ್ಕೆ ಅನುಗುಣವಾಗಿ ನನಗೆ ತೋರುವ ಈ ವಚನದ ಅಭಿಪ್ರಾಯವು ಹೀಗೆ.

ಹಿಂದೆ ಸೂಚಿಸಿದಂತೆ ಭಿನ್ನ ಮತಾಭಿಮಾನದ ಮೂಲಕ ಬಸವೇಶ್ವರನಿಗೆ ಬಿಜ್ಜಳನೊಡನೆ ಹಗೆತನ ಉಂಟಾಯಿತು. ಇನ್ನು ಮುಂದೆ ಬಿಜ್ಜಳನ ಓಲಗದಲ್ಲಿ ಇರುವದು ಅಯುಕ್ತವೆಂದು ಮನದಂದ ಬಸವೇಶ್ವರನು ಬೇಗನೆ ಮಂಗಳವಾಡದಿಂದ ಕಲ್ಯಾಣ ರಾಜಧಾನಿಗೆ ಬಂದಿರಬೇಕು. ಅಲ್ಲಿ ಮುಮ್ಮಡಿ ತೈಲಪನ ಮುಂದೆ ಬಿಜ್ಜಳನ ವಿರುದ್ಧವಾಗಿ ಆತನೂ ಆತನ ಪಕ್ಷದ ಪುರಾತನ ವಾದಿಗಳೂ ವೀರಶೈವರ ಮೇಲೆ ಮಾಡುತ್ತಿರುವ ಅಕ್ರಮ ಅತ್ಯಾಚಾರಗಳನ್ನು ವರ್ಣಿಸಿ ದೂರಿಕೊಂಡಿರಬೇಕು. ಈ ಹೊತ್ತಿಗೆ ಬಿಜ್ಜಳನ ಆಕ್ರಮಣಪರ ಚಟವಟಿಕೆಗಳಿಂದ ತ್ರಸ್ತನಾದ ತೈಲಪನು ರಾಜಕೀಯ ದೃಷ್ಟಿಯಿಂದ ಇದೊಂದು ಸುಸಂಧಿಯೇ ತನಗೆ ಒದಗಿತೆಂದು ಬಗೆದಿರಬೇಕು. ಬಸವೇಶ್ವರನಾದರೋ ಸಾಮಾನ್ಯ ಪುರುಷನಲ್ಲ; ಕೀರ್ತಿವೆತ್ತ ದಂಡನಾಥ; ಬಿಜ್ಜಳನ ಆಶ್ರಯದಲ್ಲಿದ್ದವನು; ಆತನಿಗೆ ಪ್ರತಿಪಕ್ಷಿಯಾಗಿ ತನ್ನಲ್ಲಿಗೆ ಬಂದಿದ್ದಾನೆ. ಈತನಿಗೆ ಅನೇಕ ಅನುಯಾಯಿಗಳ ಬೆಂಬಲವಿದೆ. ಹೀಗೆ ಯೋಚಿಸಿ ಬಸವೇಶ್ವರನ ಮತ್ತು ಶಿವಭಕ್ತ ಜಂಗಮರ ಅಭಿಮಾನ ಹಿಡಿದು ತೈಲಪನು ಬಿಜ್ಜಳನ ಮೇಲೆ ದಂಡಕ್ರಮವನ್ನು ತೆಗೆದುಕೊಳ್ಳಲು ಅಣಿಯಾಗಿರಬೇಕು.

ಇದೇ ಸಮಯಕ್ಕೆ ತನ್ನ ಆಕ್ರಮಣ ಯೋಜನೆಯನ್ನು ಪೂರ್ತಿಗೊಳಿಸಲು ಸುಸಜ್ಜಿತನಾಗಿದ್ದ ಬಲಾಢ್ಯ ಬಿಜ್ಜಳನಾದರೂ ತೈಲಪನ ಆ ದಂಡೋಪಾಯವನ್ನು ಪ್ರತಿಭಟಿಸಿ ತೈಲಪನ ಮೇಲೆ ಏರಿಹೋಗಿ ಚಾಲುಕ್ಯ ರಾಜಧಾನಿಯನ್ನು ಕೈವಶ ಮಾಡಿಕೊಂಡಿರಬೇಕು. ಈ ಹಾಹಾಕಾರಣೆಯಲ್ಲಿ ಮತ್ತು ಈ ಪೂರ್ವದಿಂದ ಕೊಂಚು ಹಾಕಿ ಹಂಚಿಕೆಯಿಂದ ರಚಿಸಿದ ಒಳಸಂಚಿನಲ್ಲಿ ಸಿಲುಕಿ ತೈಲಪನು ಮೊದಲುಗೊಂಡು ಚಾಲುಕ್ಯ ಕುಲದ ಅನೇಕ ರಾಜಪುತ್ರರು ಹತರಾಗಿರಬೇಕು. ಇದರಿಂದ ಕಲ್ಯಾಣ

ರಾಜಧಾನಿಯಲ್ಲಿ ಕೆಲಕಾಲ ಅಸ್ಥಿರತೆ ಮತ್ತು ಅರಾಜಕತೆಯು ಆವರಣವು ಹರಡಿರಬೇಕು. ಈ ರಕ್ತಮಯ ರಾಜ್ಯಕ್ರಾಂತಿಯಲ್ಲಿ ಮತ್ತು ಅನಾಯಕತೆಯ ಗಲಭೆಯಲ್ಲಿ ಬಹುಕಾಲ ಚಾಲುಕ್ಯರ ರಾಜಧಾನಿಯು ಐಸಿರಿಯನ್ನು ಉಪಭೋಗಿಸಿ ಮೆರೆದ ಆ ಕಲ್ಯಾಣ ನಗರ ತನ್ನ ಪೂರ್ವ ವೈಭವವನ್ನೆಲ್ಲ ಕಳೆದುಕೊಂಡು ಮಸಣದ ಭೀಷಣತೆಯನ್ನು ತಳೆದಿರಬೇಕು. ಇದನ್ನು ಕಣ್ಣಾರೆ ಕಂಡು ವಿರಾಗಿಯಾದ ಬಸವೇಶ್ವರನು ಸಿರಿಯ ಅಸ್ಥಿರತೆಯನ್ನು ಸ್ವಾನುಭವದಿಂದ ಸೋದಾಹರಣವಾಗಿ ಬಿಂಬಿಸುವಂತೆ ಹೀಗೆ ವರ್ಣಿಸುತ್ತಾನೆ.

> ಮಾನವ, ಅರಸು ವಿಚಾರ ಸಿರಿಯು ಶೃಂಗಾರ ಸ್ಥಿರವಲ್ಲ ನೋಡಯ್ಯ! ಕಲ್ಯಾಣ ಕೆಟ್ಟಿತ್ತು, ಹಾಳಾಯಿತ್ತು, ಚಾಳುಕ್ಯರಾಯನ ಆಳಿಕೆ ಒಬ್ಬ ಜಂಗಮದ ಅಭಿಮಾನದಿಂದ ತೆಗೆಯಿತ್ತು. ಕೂಡಲ ಸಂಗಮದೇವ ನಿಮ್ಮ ಕಳೆಗಳೆಕೆಗೆ ಸಂದಿತ್ತು.

ಈ ಮತ ಕ್ರಾಂತಿಯ ಚರಿತ್ರೆ ಪ್ರಸ್ತುತ ಅನ್ವೇಷಣದ ಮುಖ್ಯಾಂಶವಲ್ಲದುದರಿಂದ ಈ ಕಥೆಯನ್ನು ಇಲ್ಲಿಗೆ ನಿಲ್ಲಿಸಿ ಮತ್ತೆ ಬಿಜ್ಜಳನ ಆಳಿಕೆಯತ್ತ ಹೊರಳುವ.

## ೨. ಬಿಜ್ಜಳನ ಆಳಿಕೆ.

### (೧೧೬೨—೬೭)

ಚಾಲುಕ್ಯ ಸಿಂಹಾಸನವನ್ನು ಆಕ್ರಮಿಸಿದ ಅನಂತರ ಬಿಜ್ಜಳನು ೫-೬ ವರ್ಷ ಹಾಗೆ ಹೀಗೆ ಆಳಿದನು. ಅನ್ಯಾಯದಿಂದ ಗಳಿಸಿದ ಆತನ ರಾಜ್ಯದಿಂದ ಯಾರಿಗೂ ಸುಖವಾಗಲಿಲ್ಲ. ಎಣಿಸಿದುದಕ್ಕಿಂತ ಮುಂಚಿತವಾಗಿ ಅತ್ಯಲ್ಪ ಕಾಲದಲ್ಲಿ ಆತನು ಬಿತ್ತಿದ ವಿಷಬೀಜಗಳು ಮರವಾಗಿ ಬೆಳೆದು ಕಹಿ ಹಣ್ಣುಗಳನ್ನು ನೀಡಿದುವು. ಅವುಗಳನ್ನು ಆತನು, ಆತನ ಸಂತತಿಯವರು, ಪರಿವಾರವು, ಸಂಬಂಧಿಕರು ಎಲ್ಲರೂ ಉಣ್ಣಬೇಕಾಯಿತು. ವಿಧಿಯ ನಿಯಮಗಳು ಇನಿತು ಕಠೋರವಾದುವು!

ಕೊಲೆಪಾತಕದಿಂದ ಸಂಪಾದಿಸಿದ ರಾಜ್ಯದ ಭಾರವನ್ನು ತೂಗಿಸಿಕೊಂಡು ಹೋಗುವ ಹೊಣೆ ಒಂದು ಕಡೆ. ಪರಚಕ್ರದ ಭಯದಿಂದ ಅದನ್ನು

ರಕ್ಷಿಸಬೇಕಾದ ಹೊಣೆ ಇನ್ನೊಂದು ಕಡೆ. ಹಠಾತ್ತಾಗಿ ಉಚ್ಚಾಟನ ಮಾಡಿದ ಚಾಲುಕ್ಯ ಕುಲದ ಅಳಿದುಳಿದ ರಾಜಪುತ್ರರು ನಿಸ್ಪೃಹರಾಗಿ ಕಾಲಕಳೆಯುತ್ತಿದ್ದರೂ ಅವರ ಪಕ್ಷವನ್ನು ಎತ್ತಿಹಿಡಿದು ಮತ್ತೆ ಅವರನ್ನು ಪ್ರತಿಷ್ಠಿಸಬೇಕೆಂದು ಹವಣಿಸುತ್ತಿದ್ದ ಅಧಿಕಾರಿಗಳು ಆ ರಾಜ್ಯದಲ್ಲಿ ಇಲ್ಲವೆ ಇಲ್ಲ. ತಮ್ಮ ಪ್ರತಿಭಟನೆಯನ್ನು ಮೀರಿ ಜಯಶೀಲನಾದ ಬಿಜ್ಜಳನನ್ನು ಜರ್ಜರಿತನನ್ನಾಗಿ ಮಾಡಲು ಮತಪ್ರಸಾರದ ಮೂಲಕ ಪಕ್ಷ ಸಂಘಟನೆಯಲ್ಲಿ ನಿರತರಾದ ವೀರಶೈವ ಬಲವು ಆ ರಾಜ್ಯದಲ್ಲಿ ಉಪೇಕ್ಷಣೀಯವಾಗಿರಲಿಲ್ಲ. ಕಲಚುರಿ ರಾಜಪರಿವಾರದಲ್ಲಿ ಅನೇಕರು ಬಿಜ್ಜಳನ ಆಕಸ್ಮಿಕವಾದ ಅಭ್ಯುದಯದಿಂದ ಮತ್ಸರಗ್ರಸ್ತರಾಗಿ ತಮಗಾದರೂ ಅಂತಹ ಸುಸಂಧಿ ಒದಗುವದೇ ಎಂದು ಕಾಯುತ್ತಿದ್ದರು. ಇಂತಹ ಸಂಕೀರ್ಣ ಅಸ್ಥಿರತೆಯ ಪರಿಸ್ಥಿತಿಯಲ್ಲಿ ಬಿಜ್ಜಳನ ರಾಜ್ಯನೌಕೆ ತೇಲಿಕೊಂಡು ಹೋಗುತ್ತಿದ್ದಿತು.

ಚಾಲುಕ್ಯ ರಾಜ್ಯಾಪಹರಣದ ವ್ಯೂಹದಲ್ಲಿ ಅನೇಕ ಮಂತ್ರಿಗಳ, ಸಾಮಂತರ ಮತ್ತು ದಂಡನಾಯಕರ ಸಹಾಯವು ಬಿಜ್ಜಳನಿಗೆ ಒದಗಿರಬೇಕು. ಇಂತಹರಲ್ಲಿ ಒಬ್ಬನನ್ನು ಕುರಿತು ಸ್ವಲ್ಪ ದೂರಕ್ಕೆ ಇಲ್ಲಿ ಪ್ರಸ್ತಾವಿಸಬೇಕಾಗಿದೆ. ಏಕೆಂದರೆ ಮುಂದೆ ನಡೆಯಲಿರುವ ಇನ್ನೊಂದು ರಾಜ್ಯಕ್ರಾಂತಿಯ ಗಲಭೆಯಲ್ಲಿ ಈತನು ಕಾಣಿಸಿಕೊಳ್ಳುತ್ತಾನೆ. ಈತನು ಕಸಪಯ್ಯ ನಾಯಕ. ಈ ನಾಯಕನು ಮೊದಲಿನಿಂದಲೂ ಬಿಜ್ಜಳನ ವಿಶ್ವಾಸಪಾತ್ರನಾಗಿ ಆತನ ಮಹತ್ವಾಕಾಂಕ್ಷೆಗೆ ಪುಟವಿಕ್ಕುತ್ತ ಆತನ ಆಕ್ರಮಣ ನೀತಿಯನ್ನು ಪ್ರೋತ್ಸಾಹಿಸುತ್ತಿದ್ದಂತೆ ತೋರುತ್ತದೆ. ಬಿಜ್ಜಳನ ಅಪ್ಪಣೆಯಂತೆ ಈತನು ಕ್ರಿ. ಶ. ೧೧೫೦ರಲ್ಲಿ ಬನವಾಸಿ ಪ್ರದೇಶವನ್ನು ಆಳುತ್ತಿದ್ದನು. ರಾಜ್ಯಭಾರ ಕುಶಲ, ಬಿಜ್ಜಳನ ವಿಶ್ವಾಸದ ಮಂತ್ರಿ, ಮುಂತಾಗಿ ಈತನನ್ನು ಶಾಸನಗಳಲ್ಲಿ ವರ್ಣಿಸಿದೆ. ಬಿಜ್ಜಳನ ಅಳಿಯನೂ ಕಸಪಯ್ಯನಾಯಕನ ಬೀಗನೂ ಆದ ಬಂದಣಿಕೆಯ ಬರ್ಮರಸನು ಈ ನಾಯಕನ ಆಜ್ಞೆಯಿಂದ ಬನವಾಸಿ ಭಾಗದ ಆಡಳಿತವನ್ನು ನೋಡುತ್ತಿದ್ದನೆಂದು ಇನ್ನೂ ಕೆಲವು ಶಾಸನಗಳು ಹೇಳುತ್ತವೆ. ಇದನ್ನು ನೋಡಿದರೆ ಕಸಪಯ್ಯ ನಾಯಕನು ಬಿಜ್ಜಳನು ಅಂತರಂಗದ ಸಚಿವ ಮತ್ತು ಪ್ರತಿಷ್ಠಾವಂತ ಅಧಿಕಾರಿಯಾಗಿದ್ದನೆಂದು ವ್ಯಕ್ತವಾಗುತ್ತದೆ.

ಬಿಜ್ಜಳನ ಆಳಿಕೆಯ ಪೂರ್ವಭಾಗದಲ್ಲಿ, ಆತನು ಇನ್ನೂ ಮಹಾಮಂಡಳೇಶ್ವರನಾಗಿರುವ ಕಾಲದಲ್ಲಿ, ಆತನ ಸ್ಥಿರ ರಾಜಧಾನಿ ಮಂಗಳವಾಡವಾಗಿತ್ತೆಂದು ಮ್ಹಸವಡ ಶಾಸನದಿಂದಲೂ ಬಸವರಾಜದೇವರ ರಗಳೆಯಿಂದಲೂ ತಿಳಿಯುತ್ತದೆ. ವಿಜಾಪುರ ಜಿಲ್ಲೆಯ ಇಂಡಿ ತಾಲೂಕಿನ ಸಂಖ ಗ್ರಾಮದ, ಕಾಲನಿರ್ದೇಶವು ಸವೆದುಹೋದ, ಆದರೆ ಭಾವಸಂವತ್ಸರದ, ಕ್ರಿ. ಶ. ೧೧೫೪-೫೫ ಕ್ಕೆ ಅನ್ವಯಿಸಬಹುದಾದ ಒಂದು ಶಾಸನದಲ್ಲಿ ಬಿಜ್ಜಳನು ಮಂಗಳವೇಡದಲ್ಲಿ ಆಳುತ್ತಿದ್ದನೆಂದು ಹೇಳಿದೆ. ಜತ್ ತಾಲೂಕಿನ ಸಿಧನಾಥ ಗ್ರಾಮದ ೧೧೬೧-೬೨ನೆಯ ಕ್ರಿ. ಶ. ದ ಇನ್ನೊಂದು ಶಾಸನದಲ್ಲಿ ಮಂಗಳವಾಡವು ಆತನ ರಾಜಧಾನಿಯೆಂದು ಉಕ್ತವಾಗಿದೆ. ಅನಂತರದ ಆತನ ಆಳಿಕೆಯ ಶಾಸನಗಳಲ್ಲಿ ಕಲ್ಯಾಣವು ಆತನ ರಾಜಧಾನಿಯಾಗಿದ್ದ ನಿರ್ದೇಶಗಳು ದೊರೆಯುತ್ತವೆ.

ಬಿಜ್ಜಳನಿಗೆ ಏಚಲದೇವಿಯೆಂಬ ಪತ್ನಿಯಿಂದ ವಜ್ರದೇವ ಮತ್ತು ಸಿರಿಯಾದೇವಿ ಎಂಬ ಇಬ್ಬರು ಮಕ್ಕಳು ಆದರು. ಸಿರಿಯಾದೇವಿಯನ್ನು ಯಲಬುರ್ಗಿಯ ಸಿಂದ ವಂಶದ ಆಚುಗಿಯ ಮಗ ಚಾವುಂಡನಿಗೆ ಕೊಟ್ಟಿದ್ದಿತು. ವಜ್ರದೇವನು ಬಿಜ್ಜಳನ ಹಿರಿಯ ಮಗನಾಗಿದ್ದು ಕಿರಿವಯಸ್ಸಿನಲ್ಲಿ ಮೃತನಾದನೆಂದು ತೋರುತ್ತದೆ. ರೋಣ ಮತ್ತು ಸೂಡಿಯ ಶಾಸನಗಳ ಅಲ್ಲದೆ ಆತನು ಬೇರೆಲ್ಲಿಯೂ ಕಾಣಿಸಿಕೊಳ್ಳುವುದಿಲ್ಲ. ೧೧೮೦ ನೆಯ ಕ್ರಿ. ಶ. ದ ಸೂಡಿಯ ಶಾಸನದಲ್ಲಿ ಸಿರಿಯಾದೇವಿ ಬಿಜ್ಜಳನೊಡನೆ ಆತನನ್ನೂ ಸ್ಮರಿಸಿರುವುದರಿಂದ ಬಿಜ್ಜಳನಂತೆ ವಜ್ರದೇವನಾದರೂ ಆ ವೊದಲೇ ತೀರಿಕೊಂಡಿರಬೇಕು. ಕಲಿದೇವ ಇಲ್ಲವೆ ಕರ್ಣನೆಂಬ ಬಿಜ್ಜಳನ ಮೊಮ್ಮಗನು ಕೆಲವು ಶಾಸನಗಳಲ್ಲಿ ಕಾಣಿಸಿಕೊಳ್ಳುತ್ತಾನೆ. ಈತನ ವಿಚಾರ ಮುಂದೆ ಬರುವುದು. ಈತನು ವಜ್ರದೇವನ ಮಗನೆಂದು ಊಹಿಸಬಹುದಾಗಿದೆ. ರಾಯಮುರಾರಿ ಸೋವಿದೇವ, ಸಂಕಮ, ಆಹವಮಲ್ಲ, ಮತ್ತು ಸಿಂಘಣ, ಈ ನಾಲ್ವರು ಬಿಜ್ಜಳ ಪುತ್ರರು ಸುಪರಿಚಿತರಾಗಿದ್ದಾರೆ. ಆದರೆ ರಾಯಮುರಾರಿ ಸೋವಿದೇವನಿಗಿಂತ ಚಿಕ್ಕವನಾಗಿದ್ದ ಮಲ್ಲುಗಿ, ಪೆರ್ಮಾಡಿ ಇಲ್ಲವೆ ಮಲ್ಲಿಕಾರ್ಜುನನೆಂಬ ಇನ್ನೊಬ್ಬ ಮಗನ ವಿಚಾರವು ಕೆಲವು ಶಾಸನಗಳಿಂದ ಪ್ರಕಾಶಿತವಾಗುತ್ತದೆ. ಈ ವಿಷಯ ಮುಂದೆ ಬರುವುದು. ಬಿಜ್ಜಳನಿಗೆ ಇನ್ನೂ ಒಬ್ಬ ಮಗಳಿದ್ದು ಅವಳು ಮೇಲೆ ಉಲ್ಲೇಖಿಸಿದ ಬಂದಣಿಕೆಯ ಬರ್ಮರಸನನ್ನು ಮದುವೆಯಾಗಿದ್ದಳು. ಈ ಬರ್ಮರಸನು ಸಗರಕುಲೋತ್ಪನ್ನನು ಮತ್ತು ಮುಂಜಲದೇವನ ಮಗನು ಆಗಿದ್ದನು.

ಶಿಕಾರಪುರ ೯೨ನೆಯ ಅಂಕದ ಶಾಸನದಲ್ಲಿ ಹೇಳಿದಂತೆ ಬಿಜ್ಜಳನು ೧೧೬೭ನೆಯ ಕ್ರಿ. ವ. ದಲ್ಲಿ ಕಲಚುರಿ ರಾಜ್ಯವನ್ನು ರಾಯಮುರಾರಿ ಸೋವಿದೇವನ ಕೈಯಲ್ಲಿ ಒಪ್ಪಿಸಿ ನಿವೃತ್ತನಾದನು. ಈ ನಿವೃತ್ತಿಯ ಕಾರಣವು ಸ್ಪಷ್ಟವಿಲ್ಲವಾದರೂ ರಾಜಕೀಯ, ಮತೀಯ ಮತ್ತು ಮನೆತನದಲ್ಲಿಯ ಪ್ರತಿಕೂಲ ಪರಿಸ್ಥಿತಿಯ ಮೂಲಕ ಅದು ಅಪರಿಹಾರ್ಯವಾದಂತೆ ತೋರುತ್ತದೆ. ಮುಂದೆ ಸ್ವಲ್ಪಕಾಲದಲ್ಲಿ ಬಿಜ್ಜಳನು ವೀರಶೈವ ಅನುಯಾಯಿಗಳಿಂದ ಹತನಾದನು. ಶಿಕಾರಿಪುರ ೯೨ ಅಂಕದ ಈ ಶಾಸನದಲ್ಲಿ ಸರ್ವಧಾರಿ ಸಂವತ್ಸರವು ೧೬ನೆಯ ಕಲಚುರಿ ವರ್ಷವೆಂದು ಉಕ್ತವಾಗಿದೆ. ಇದು ತಪ್ಪೆಂದು ಹೇಳಿ, ಈ ಸಂವತ್ಸರವು ೧೩ನೆಯ ಕಲಚುರಿ ವರ್ಷವಾಗುತ್ತದೆಂದು ಫ್ಲೀಟ ಮತ್ತು ಶ್ರೀ. ಪೈಗಳು ಸೂಚಿಸಿದ್ದಾರೆ. ಆದರೆ ಇಂತಹ ತಿದ್ದುಪಡಿಯ ಅಗತ್ಯವಿಲ್ಲ. ಏಕೆಂದರೆ ನಾನು ಹಿಂದೆ ವಿವೇಚಿಸಿದಂತೆ ಚಿಕ್ಕಲಗಿ ಶಾಸನಾಧಾರದಿಂದ ಬಿಜ್ಜಳನ ಕಾಲಗಣನೆ ಶ್ರೀಮುಖ ಸಂವತ್ಸರದಲ್ಲಿಯೇ ಪ್ರಾರಂಭವಾಗಿದ್ದಿತು. ಶ್ರೀಮುಖದಿಂದ ಸರ್ವಧಾರಿ ಸರಿಯಾಗಿ ೧೬ನೆಯ ವರ್ಷವಾಗುತ್ತದೆ. ಇಂತು ಶಿಕಾರಿಪುರದ ಈ ಶಾಸನವು ಚಿಕ್ಕಲಗಿ ಶಾಸನಕ್ಕೆ ಪೋಷಕವಾಗಿ ನಿಲ್ಲುತ್ತದೆ.

ಬಿಜ್ಜಳನು ರಾಜ್ಯತ್ಯಾಗಮಾಡಿ ಮುಂದೆ ಸ್ವಲ್ಪಕಾಲ ಕ್ರಿ. ವ. ೧೧೬೮ ಮಾರ್ಚ ೯ ತಿಂಗಳ ವರೆಗ ಜೀವಿಸಿದ್ದಂತೆ ನದಿಹರಳಹಳ್ಳಿಯ ಶಾಸನದಿಂದ ತಿಳಿಯುತ್ತದೆ. ಮುಂದೆ ಸ್ವಲ್ಪ ದಿನಗಳಲ್ಲಿ, ವೀರಶೈವ ಪುರಾಣಗಳು ಹೇಳುವಂತೆ, ಮೊಲ್ಲೆ ಬೊಮ್ಮಣ್ಣ ಮತ್ತು ಜಗದೇವ ಎಂಬ ವೀರಶೈವ ಭಕ್ತರಿಂದ ಆತನು ಹತನಾಗಿರಬೇಕು.

ಬಿಜ್ಜಳನ ಪ್ರಶಸ್ತಿಯಲ್ಲಿ ಶನಿವಾರಸಿದ್ಧಿ ಮತ್ತು ಗಿರಿದುರ್ಗಮಲ್ಲ ಎಂಬ ಬಿರುದುಗಳು ಕಾಣಸಿಕೊಳ್ಳುತ್ತವೆ. ಇವುಗಳನ್ನು ಕುರಿತು ಸ್ವಲ್ಪ ವಿವೇಚಿಸುವದು ಯುಕ್ತ. ಈ ಬಿರುದುಗಳು ಬಿಜ್ಜಳನ ಪೂರ್ವಜರ ಪ್ರಶಸ್ತಿಯಲ್ಲಿ ದೊರೆಯುವುದಿಲ್ಲ. ಮಾತ್ರವಲ್ಲ, ಸ್ವತಃ ಬಿಜ್ಜಳನ ಮೊದಮೊದಲಿನ ಶಾಸನಗಳಲ್ಲಿಯೂ ಇವು ದೃಷ್ಟಿಗೋಚರವಾಗುವುದಿಲ್ಲ. ಆದುದರಿಂದ ಬಿಜ್ಜಳನು ಇವುಗಳನ್ನು ಯಾವುದೋ ಒಂದು ಸಂದರ್ಭದಲ್ಲಿ ಎತ್ತಿ ಕೊಂಡಿರಬೇಕು ಎಂದು ಊಹಿಸಬೇಕಾಗುತ್ತದೆ.

ಮೂಲದಲ್ಲಿ ಈ ಬಿರುದುಗಳನ್ನು ಕೊಲ್ಹಾಪುರದ ಶಿಲಾಹಾರರು ಧರಿಸಿದ್ದಂತೆ ಕಂಡುಬಂದಿವೆ. ಗಂಡರಾದಿತ್ಯ ಮತ್ತು ಆತನ ಮಗ ವಿಜಯಾ

ದಿತ್ಯ ಇವರ ಶಾಸನಗಳಲ್ಲಿ ಶನಿವಾರ ಸಿದ್ಧಿ ಮತ್ತು ಗಿರಿದುರ್ಗಲಂಘನ ಎಂಬೀ ಬಿರುದುಗಳು ಜೊತೆಯಾಗಿ ತಲೆದೋರುತ್ತವೆ. ಗಿರಿದುರ್ಗಮಲ್ಲ ಮತ್ತು ಗಿರಿದುರ್ಗಲಂಘನ ಇವು ಸಮಾನಾರ್ಥವಾಗಬಹುದು. ಚಾಲುಕ್ಯ ಇರಿವ ಬೆಡಂಗನ ಮಹಾಸಾಮಂತನಾದ ಶೋಭನರಸನು ಒಂಟಿಯಾಗಿ ಗಿರಿದುರ್ಗ ಮಲ್ಲ ಎಂಬ ಬಿರುದನ್ನು ಧರಿಸಿದ್ದಂತೆ ೧೦೦೩ನೆಯ ಕ್ರಿ. ವ. ದ ಒಂದು ಶಾಸನದಿಂದ ವ್ಯಕ್ತವಾಗುತ್ತದೆ ಹಿಂದೆ ಪರಾಮರ್ಶಿಸಿದ ೧೧೫೭ ನೆಯ ಕಿ. ವ. ದ ಚಿಕ್ಕಲಕಿ ಶಾಸನದಲ್ಲಿ ಬಿಜ್ಜಳನಿಗೆ ಈ ಬಿರುದುಗಳು ಉಕ್ತವಾಗಿಲ್ಲ. ಆದರೆ ೧೧೫೮ನೆಯ ಕ್ರಿ. ವ. ದ ಶಿಕಾರಿಪುರ ೧೪ ಅಂಕದ ಶಾಸನದಲ್ಲಿ ಇವು ಬಿಜ್ಜಳನಿಗಾಗಿ ಹೇಳಲ್ಪಟ್ಟಿವೆ. ಆದುದರಿಂದ ಕ್ರಿ. ವ. ಸು. ೧೧೫೭-೫೮ರಲ್ಲಿ ಬಿಜ್ಜಳನು ಇವುಗಳನ್ನು ಧರಿಸಿರಬೇಕು ಎಂದು ತೋರುತ್ತದೆ.

ಬಿಜ್ಜಳ ಮತ್ತು ಶಿಲಾಹಾರ ವಿಜಯಾದಿತ್ಯ ಸಮಕಾಲಿಕರಾಗುತ್ತಾರೆ. ವಿಜಯಾದಿತ್ಯನ ಮಗನಾದ ಶಿಲಾಹಾರ ಇಮ್ಮಡಿ ಭೋಜನ ಒಂದು ತಾಮ್ರ ಶಾಸನದಲ್ಲಿ ವಿಜಯಾದಿತ್ಯನ ಸ್ನೇಹ ಮತ್ತು ಸಹಾಯಬಲದಿಂದ ಬಿಜ್ಜಳನು ಸಾಮ್ರಾಜ್ಯವನ್ನು ಸಂಪಾದಿಸಲು ಸಮರ್ಥನಾದನೆಂದು ಹೇಳಿದೆ. ಇದರಿಂದ ಬಿಜ್ಜಳನಿಗೂ ವಿಜಯಾದಿತ್ಯನಿಗೂ ನಿಕಟ ಸಂಬಂಧವಿದ್ದಿತು ಎಂದು ನಿಷ್ಪನ್ನವಾಗುತ್ತದೆ. ಈ ಸ್ನೇಹದ ಮೂಲಕವಾಗಲಿ, ಇಲ್ಲವೆ ಮೊದಲು ವಿರೋಧಿಯಾಗಿದ್ದ ವಿಜಯಾದಿತ್ಯನನ್ನು ಸೋಲಿಸಿ ಬಳಿಕ ಸಖ್ಯದಿಂದ ಆತನ ಬೆಂಬಲವನ್ನು ಪಡೆದುದರಿಂದಾಗಲಿ, ಬಿಜ್ಜಳನು ಶಿಲಾಹಾರರ ಈ ಬಿರುದು ಗಳನ್ನು ತನಗೆ ಸಲ್ಲಿಸಿಕೊಂಡಂತೆ ತೋರುತ್ತದೆ. ಈ ಘಟನೆ ಮೇಲೆ ಸೂಚಿಸಿದಂತೆ ಕ್ರಿ. ವ. ೧೧೫೭—೫೮ರಲ್ಲಿ ಎಂದರೆ ಬಿಜ್ಜಳನ ರಾಜ್ಯಾಪಹರಣ ಏರಿಕೆಯ ಕಾಲದಲ್ಲಿ ಹೊಂದಿಕೆಯಾಗುತ್ತದೆ.

## ರಾಯಮುರಾರಿ ಸೋವಿದೇವ

### (ಕ್ರಿ. ನ. ೧೧೬೭-೬೮)

ಬಿಜ್ಜಳನ ರಾಜ್ಯತ್ಯಾಗವು ಆತನಿಗಾಗಲಿ ಆತನ ಉತ್ತರಾಧಿಕಾರಿಯಾದ ರಾಯಮುರಾರಿ ಸೋವಿದೇವನಿಗಾಗಲಿ ಉಪಕಾರವಾಗಲಿಲ್ಲ. ಏಕೆಂದರೆ ನಡೆಯತಕ್ಕ ಅನರ್ಥಗಳು ನಡೆದೇಹೋದುವು. ಬಿಜ್ಜಳನ ಕೊಲೆಯ ಸಂಗತಿಯನ್ನು ಮೇಲೆ ಹೇಳಿದೆ. ಸೋವಿದೇವನಿಗೆ ಒದಗಿದ ಗಂಡಾಂತರಗಳನ್ನು ಇದೀಗ ಅವಲೋಕಿಸುವ. ಸೋವಿದೇವನು ಬಿಜ್ಜಳನ ಜ್ಯೇಷ್ಠ ಪುತ್ರನೂ ಕಲಚುರಿ

ಸಿಂಹಾಸನದ ನ್ಯಾಯವಾದ ಬಾಧ್ಯಸ್ಥನೂ ಆಗಿರಲಿಲ್ಲವೆಂದು ಊಹಿಸಲು ಕಾರಣಗಳು ಇಲ್ಲದೆ ಇಲ್ಲ. ಸಾಹಸಿಯೂ ತನಗೆ ಅನುಕೂಲವರ್ತಿಯೂ ಆಗಿದ್ದರಿಂದ ಬಿಜ್ಜಳನು ಜ್ಯೇಷ್ಠಪುತ್ರನಾಗಿರಲಿಕ್ಕಿಲ್ಲವೆಂಬ ವಿಚಾರದಲ್ಲಿಯ ನಿದರ್ಶನಗಳು ಈ ಮುಂದಿನ ನಿರೂಪಣೆಯಲ್ಲಿ ಪ್ರಕಟವಾಗುವವು. ಸೋವಿದೇವನು ಬಿಜ್ಜಳನ ಇನ್ನೊಬ್ಬ ಮಗನಾದ ಮೈಳುಗಿಯಂತೆ ತನ್ನ ತಂದೆಯ ಕಾಲದ ಶಾಸನಗಳಲ್ಲಿ ಕಾಣಿಸಿಕೊಳ್ಳುವುದಿಲ್ಲ.

ಬಿಜ್ಜಳನ ಯೋಜನೆಯಂತೆ ಆತನ ಉತ್ತರಾಧಿಕಾರವು ಮತ್ತು ಕಲಚುರಿ ಸಿಂಹಾಸನದ ಒಡೆತನವು ಸೋವಿದೇವನಿಗೆ ಪ್ರಾಪ್ತವಾಯಿತು. ಆದರೆ ಇದರಿಂದ ಸೋವಿದೇವನ ರಾಜ್ಯಭಾರದ ಮಾರ್ಗವು ನಿರಾತಂಕವಾಗಲಿಲ್ಲ. ಬಿಜ್ಜಳನ ತರುವಾಯ ಸೋವಿದೇವನು ಆಳಿದನೆಂದು ಹೇಳುವ ಶಾಸನಗಳು ಹಲವಾಗಿದ್ದರೂ ಬಿಜ್ಜಳನ ಪಶ್ಚಾತ್ ಬೇರೆಯವರ ಆಳಿಕೆಗಳನ್ನು ನಿರ್ದೇಶಿಸುವ ಶಾಸನಗಳು ಕೆಲವಿವೆ. ಇವುಗಳ ಪ್ರಾಮಾಣ್ಯವನ್ನು ಸಂದೇಹಿಸಬೇಕಾಗಿಲ್ಲ. ಓರೆಮರೆಯಾಗಿದ್ದರೂ ನಿಶ್ಚಿತವಾಗಿ ಶ್ರುತಿಪಥಕ್ಕೆ ಬರುವ ಈ ಶಾಸನಗಳ ಕರೆಗನ್ನು ನಾವು ಅಲಕ್ಷಿಸುವಂತೆ ಇಲ್ಲ. ಏಕಂದರೆ ಇಂತಹ ವ್ಯಕ್ತಾವ್ಯಕ್ತ ಪ್ರಕಾಶದ ಕಿರಣಗಳಿಂದ ಕತ್ತಲೆಕವಿದ ನಮ್ಮ ಚರಿತ್ರೆಯ ದಾರಿ ಸ್ವಲ್ಪ ದೂರಕ್ಕೆ ಗೋಚರವಾಗುತ್ತದೆ;

ಬಿಜ್ಜಳನ ತರುವಾಯ ಆತನ ತಮ್ಮನಾದ ಮೈಳುಗಿ ಅನಂತರ ಬಿಜ್ಜಳನ ಮೊಮ್ಮಗನಾದ ಕಂಪರ ಇಲ್ಲನೆ ಕಲಿದೇವ, ಈ ಇಬ್ಬರ ರಾಜ್ಯಭಾರ ಮಾಡಿದರೆಂದು ಶಿಕಾರಿಪುರ ೧೯೭ ದಾವಣಗೆರೆ ೪೪ ಹಾಗೂ ಸವೆದುಹೋದ ಹೊನ್ನಾಳಿ ಈ ಶಾಸನಗಳಿಂದ ತಿಳಿದುಬರುತ್ತದೆ. ಶಿಕಾರಿಪುರ ೧೯೭ ಅಂಕದ ಶಾಸದಲ್ಲಿ ಈ ವರ್ಣನಾಭಾಗವು ಹೀಗಿದೆ:

> ಜಂಗಮಂ ಸಂಪ್ರೀತಿಯಿಂ ಬಿಜ್ಜಲನೃಪತಿಯ ತಮ್ಮಂ ಭುಜಾಗರ್ವದಿಂ
> ಮೈಳುಗಿ ದೇವಂ ಪಾಲಿತ್ತಂ ಮೇಜಿಸಿದ ಬಳಿಕವಾ ಬಿಜ್ಜಲೋರ್ವೀಶ
> ಪೌತ್ರಂ ಶ್ರೀಗುಣೀಭೂತಪ್ರತಾಪಂ ತಳೆದ ನೆಳೆಯನಾ ಕನ್ದರ ಕ್ಷೋಣಿಪಂ
> ತಜ್ಜಗತೀನಾಥಾನುತಾತಂ ಬಳಿಕವನಿಯಂ ತಾಳ್ದಿದಂ ಸೋವಿದೇವಂ॥

ದಾವಣಗೆರೆ ೪೪ರಲ್ಲಿ ಈ ಅಂಶಗಳನ್ನು ಹೀಗೆ ವರ್ಣಿಸಿವೆ.

> ಆವಿಭುವಿನನುಜನಖಿಳ ಕ
> ಳಾವಿಭವಂ ಪೆಂಪುವೆತ್ತ ಸದ್ಗುಣ ವೃಂದ

> ಕ್ಷಾವಾಸನೆನಿಸಿ ತಳೆದಂ
> ಭೂವಧುವಂ ಭುಜದೊಳೆಸೆಯೆ ವ್ಮೈಳುಗಿದೇವಂ

ಮುಂದೆ ಬಿಜ್ಜಳನ ತಮ್ಮನಾದ ಈ ವ್ಮೈಳುಗಿದೇವನ ಉದಗ್ರವಿಕ್ರಮವನ್ನು ಪ್ರಶಂಸಿಸುವ ಒಂದು ಪದ್ಯವಿದೆ. ಅನಂತರ ಬಿಜ್ಜಳನ ಮೊಮ್ಮಗನ ಸಮಾಚಾರವು ಈ ಕೆಳಗಿನಂತೆ ವಿವರಿಸಿದೆ.

> ಆತನ ಮರ್ಮಂ ಭುವನ
> ಖ್ಯಾತಯಶಂ ಕಲಿದೇವನರ್ಣವಮಹಿಮಂ
> ನೀತಿನಿಧಿಯೆನಿಸಿ ನೆಗಲ್ದಂ
> ಭೂತಳದೊಳು ಸಾಹಸಾಂಕನಪಗತಶಂಕಂ ||

ಮೇಲಿನ ಶಾಸನಭಾಗಗಳಲ್ಲಿ ಬಿಜ್ಜಳನ ತಮ್ಮನಾದ ವ್ಮೈಳುಗಿ ರಾಜ್ಯಭಾರ ಮಾಡಿದ ಸಂಗತಿಯನ್ನು ಸ್ಪಷ್ಟವಾಗಿ ಹೇಳಿದೆ. ಈ ವ್ಮೈಳುಗಿ ಶೂರನೂ ಸಾಹಸಿಯೂ ಆಗಿರಬೇಕು ಎಂಬ ಅಂಶವನ್ನಾದರೂ ಅವುಗಳಿಂದ ಗ್ರಹಿಸಬೇಕಾಗಿದೆ. ಇದೇ ಮೇರೆಗೆ ವ್ಮೈಳುಗಿಯ ಪಾಶ್ಚಾತ್ ಆಳಿದ ಕನ್ದರ ಅಥವ ಕಲಿದೇವನಾದರೂ ಪ್ರಸಿದ್ಧಿಯನ್ನು ಪಡೆದಿದ್ದನು ಎಂದು ತಿಳಿದುಬರುತ್ತದೆ. ಈ ಸಂದರ್ಭದಲ್ಲಿ 'ತ್ರಿಗುಣೀಭೂತ ಪ್ರತಾಪಂ, ಖ್ಯಾತಯಶಂ, ಸಾಹಸಾಂಕಂ' ಮುಂತಾದ ಕಂದರನ ಸ್ತುತಿ ಪರ ವಿಶೇಷಣಗಳನ್ನು ನಾವು ಲಕ್ಷಿಸಬೇಕು. ಹೀಗೆ ಈ ಇಬ್ಬರು ಆಳಿದುದೇ ಆದರೆ ಯಾವಾಗ ಆಳಿದರು ? ಮತ್ತು ಎಷ್ಟು ಕಾಲ ಆಳಿದರು ? ಎಂಬ ಪ್ರಶ್ನೆಗಳು ಹುಟ್ಟುತ್ತವೆ. ಈ ಪ್ರಶ್ನೆಗಳಿಗೆ ಸರಿಯಾದ ಉತ್ತರಗಳು ಸಿಕ್ಕುತ್ತವೆಯೇ ನೋಡುವ.

ಬಿಜ್ಜಳ ಮತ್ತು ಸೋವಿದೇವ ,ಇವರ ಆಳಿಕೆಗಳ ಮಧ್ಯದಲ್ಲಿ ವ್ಮೈಳುಗಿ ಕಂದರರು ಆಳಿದ ವಿವರಗಳು ಶಾಸನಗಳಲ್ಲಿ ಉಕ್ತವಾಗಿರುವದರಿಂದ ಬಿಜ್ಜಳನ ಪಶ್ಚಾತ್ ಕೆಲಕಾಲವಾದರೂ ಇವರು ಆಳಿರಬೇಕು, ಇಲ್ಲವೆ ಆಳಲು ಪ್ರಯತ್ನಿಸಿರಬೇಕು, ಎಂದು ನಿಷ್ಪನ್ನವಾಗುತ್ತದೆ. ಹಾಗಾದರೆ ಶಿಕಾರಿಪುರ ೯೨ನೆಯ ಶಾಸನದಲ್ಲಿ ಹೇಳಿದ ಸಂಗತಿ—ಬಿಜ್ಜಳನು ಸೋವಿದೇವನಿಗೆ ತನ್ನ ಸಿಂಹಾಸನವನ್ನು ಬಿಟ್ಟ ವಿಷಯ—ಸುಳ್ಳೇ ? ಪರಮರ್ಶಿಸಿ ನೋಡಿದರೆ ಅದು ಸುಳ್ಳಲ್ಲ; ಮಾತ್ರವಲ್ಲ, ಆತನು ಹಾಗೆ ಮಾಡಿದುದರ ಪರಿಣಾಮವೇ ಈ ಮುಂದಿನ ಗೊಂದಲದ ಮೂಲವೆಂದು ಊಹಿಸಬಹುದಾಗಿದೆ.

ಸಂದಿಗ್ಧವಾದ ಈ ಸನ್ನಿವೇಶದಲ್ಲಿ ಈ ಹಿಂದೆ ಹಲವು ಬಾರಿ ಸಂದರ್ಭಿಸಿದ ಹರಸೂರು ಗ್ರಾಮದ ಭೋಗೇಶ್ವರ ದೇವಾಲಯದಲ್ಲಿಯ ಶಾಸನದಿಂದ ನಮಗೆ ನೇರವಾದ ಬೆಳಕು ದೊರೆಯುತ್ತದೆ. ಈ ಶಾಸನ ಕಾಲ ಕ್ರಿ. ಶ. ೧೧೭೨, ಜಾನೆವರಿ ೧೩. ಇದು ಸೋವಿದೇವನ ಆಳಿಕೆಯನ್ನು ನಿರ್ದೇಶಿಸುತ್ತದೆ. ಸೋವಿದೇವನು ಆಳಲು ಪ್ರಾರಂಭಿಸಿದ ೩-ಆ ವರ್ಷದ ಅವಧಿಯಲ್ಲಿ ಈ ಶಾಸನವನ್ನು ಒಕ್ಕಣಿಸಿದುದರಿಂದ ಇದು ವಿಶ್ವಸನೀಯವೂ ಇತರ ಶಾಸನಗಳಿಗಿಂತ ಹೆಚ್ಚು ಪ್ರಮಾಣಭೂತವೂ ಆಗಿದೆ. ಇದರಲ್ಲಿ ಸೋವಿದೇವನ ವಿಶ್ವಸ್ತ ದಂಡನಾಥನಾದ ಮಾಧವನೆಂಬಾತನನ್ನು ವರ್ಣಿಸುವ ಸಂದರ್ಭದಲ್ಲಿ ಈ ಮುಂದಿನ ಎರಡು ಪದ್ಯಗಳು ಬರುತ್ತವೆ. ಸವೆದು ಹೋದ ಕಾಳಗಿ ಗ್ರಾಮದ ಶಾಸನದಲ್ಲಿಯೂ ಈ ಪದ್ಯಗಳಿದ್ದಂತೆ ತಿಳಿಯಬಹುದಾಗಿದೆ.

ಕಳಚುರಿ ನೃಪಕುಳ ರಾಜ್ಯಂ
ಬಳವದ್ ದುರ್ಮಂತ್ರಿ ಕಸಪಯಾದಿಗಳಿಂದಂ
ಗಳಕಾಳವಾಗಿರೆ ನಿಜದೋ
ರ್ಬ್ಬಳದಿಂದಳವಡಿಸಿ ಮಾಧವಂ ಪೆಸರ್ ವಡೆದಂ ||

ಅದೆನ್ತೆನೆ ||

ಆಕ್ರಮಿಸಿ ರಾಜ್ಯಲಕ್ಷ್ಮಿಯು
ನಕ್ರಮದಿಂದಾಳ್ದ ಕರ್ಣನಂ ಕೊಂದು ಧರಾ
ಚಕ್ರಮನಳವಡಿಸಿಟ್ಟನ
ನುಕ್ರಮದಿಂ ಸೋಮ ನೃಪನ ಭುಜ ಮಂಡಳದೊಳ್ ||

(ಪಂಕ್ತಿ. ೩೫-೩೮)

ಮುಂದೆ 'ಕಳಚುರಿ ಭೂಪಾಳ ವಿಪುಳ ರಾಜ್ಯೋದ್ಧರಣಂ' ಎಂಬ ಬಿರುದಿನಿಂದ ಈ ಮಾಧವನನ್ನು ಹೊಗಳಿದೆ.

ಈ ಶಾಸನ ಭಾಗದಿಂದ ಕೆಳಗಿನ ಸಂಗತಿಗಳು ವ್ಯಕ್ತವಾಗುತ್ತವೆ.

೧. ಸೋವಿದೇವನ ಆಳಿಕೆಯಲ್ಲಿ ಕಲಚುರಿ ರಾಜ್ಯದಲ್ಲಿ ಗೊಂದಲವೂ ಅನಾಯಕ ಸ್ಥಿತಿಯೂ ಉಂಟಾಯಿತು. ಇದಕ್ಕೆ ಕಾರಣವಾದವರು ಕಸಪಯ, ಮುಂತಾದ ದುಷ್ಟ ಮಂತ್ರಿಗಳು.

೨. ಈ ಸನ್ನಿವೇಶದಲ್ಲಿ ಅಧಿಕಾರಿಯಾದ ಕರ್ಣನೆಂಬುವನು ಕಲಚುರಿ ರಾಜ್ಯವನ್ನು ಅಪಹರಿಸಿ ರಾಜ್ಯಭಾರ ಮಾಡಿದನು.

೩. ಇಂತಹ ಅನಾಯಕ ಪರಿಸ್ಥಿತಿಯಲ್ಲಿ ಮಾಧವನು ಮುಂಸೆ ಬಂದು ಪರಾಕ್ರಮದಿಂದ ಅತ್ಯಾಚಾರಿಗಳನ್ನು ಹತ್ತಿಕ್ಕಿ ರಾಜ್ಯದಲ್ಲಿ ವ್ಯವಸ್ಥೆಯನ್ನು ನೆಲೆಗೊಳಿಸಿದನು. ಕಲಚುರಿ ಸಿಂಹಾಸನವನ್ನು ಆಕ್ರಮಿಸಿದ ಕರ್ಣನನ್ನು ಕೊಂದು ಮತ್ತೆ ಮೊದಲಿನಂತೆ ಸೋವಿದೇವನ ಸ್ವಾಮಿತ್ವವನ್ನು ಸ್ಥಾಪಿಸಿದನು. ಈ ಮೇರೆಗೆ ಸೋವಿದೇವನ ಪಕ್ಷ ಹಿಡಿದ ಮಾಧವನು ಕಲಚುರಿ ರಾಜ್ಯವನ್ನು ಉದ್ಧರಿಸಿದನು.

ವರ್ಣನೆಯ ರೀತಿಯನ್ನು ನೋಡಿದರೆ ಮೇಲಿನ ಎರಡು ಪದ್ಯಗಳಲ್ಲಿ ಎರಡು ಸನ್ನಿವೇಶಗಳು ಉಕ್ತನಾದಂತೆ ಕಂಡು ಹಿಡಿಯಬಹುದು. ಮೊದಲನೆಯ ಸನ್ನಿವೇಶವು ಅಷ್ಟು ಸ್ಫುಟವಾಗಿಲ. ಅದನ್ನು ಮೇಲ್ಕಂಡ ಶಿಕಾರಿಪುರ ೧೯೭ ಮತ್ತು ದಾವಣಗೆರೆ ೪೪ ಈ ಶಾಸನಗಳ ಸಹಾಯದಿಂದ ಸ್ಫುಟಮಾಡಿಕೊಳ್ಳಬಹುದು. ಎರಡನೆಯ ಸನ್ನಿವೇಶವು ಆ ಎರಡು ಶಾಸನಗಳಿಗಿಂತ ವಿಶದವಾಗಿ ಇಲ್ಲಿ ವಿವರಿಸಿದೆ. ಅಂತೂ ಈ ಶಾಸನಗಳ ಹೇಳಿಕೆಯನ್ನು ಸಾಕಲ್ಯದಿಂದ ಪರಿಶೀಲಿಸಿದರೆ ದೊರೆಯುವ ಚಿತ್ರವು ಹೀಗೆ.

ಬಿಜ್ಜಳನು ರಾಜ್ಯತ್ಯಾಗಮಾಡಿ ಅನಧಿಕಾರಿಯಾದ ಸೋವಿದೇವನಿಗೆ ಪಟ್ಟಕಟ್ಟಿದುದು ಆತನ ಬಂಧುಗಳಿಗೆ ರುಚಿಸಲಿಲ್ಲ. ಇಂತಹ ಒಂದು ಸಂಧಿಗಾಗಿ ಕಾದುಕೊಂಡಿದ್ದ ಹಲವರು ತಮ್ಮ ತಮ್ಮ ಪಕ್ಷಗಳನ್ನು ಸಂಘಟಿಸಿ ದೊಂಬಿಯನ್ನು ಎಬ್ಬಿಸಿದರು. ಸೋವಿದೇವನ ವಿರುದ್ಧವಾಗಿ ಮೊದಲು ಬಂಡಾಯವನ್ನು ಹೂಡಿದವನು ಬಿಜ್ಜಳನ ತಮ್ಮ ಮೈಳುಗಿ. ಈತನು ಬಲಿಷ್ಠನಾಗಿದ್ದು, ಬಿಜ್ಜಳನ ಆಳಿಕೆಯಲ್ಲಿ ಅನುಭವಸ್ಥರೂ ವಿಶ್ವಸ್ತರೂ ಆದ ಕಸಪಯ್ಯ, ಮೊದಲಾದ ಮಂತ್ರಿಗಳು ಈತನಿಗೆ ಬೆಂಬಲವಾಗಿದ್ದರು. ಮೈಳುಗಿ ಕಲಚುರಿ ರಾಜ್ಯಕ್ಕೆ ತಾನೆ ಉತ್ತರಾಧಿಕಾರಿಯೆಂದು ಘೋಷಣೆಮಾಡಿ ಸ್ವಲ್ಪಕಾಲ ಗೊಂದಲದಲ್ಲಿ ಆಳಿರಬೇಕು. ಅಷ್ಟರಲ್ಲಿ ಬಿಜ್ಜಳನ ಮೊಮ್ಮಗನು ಹಿರಿಯ ಮಗನ ಮಗನು ಮೈಳುಗಿಯನ್ನು ಪ್ರತಿಭಟಿಸಿ ಮುಂದೆ ಬಂದಿರಬೇಕು. ಬಿಜ್ಜಳನ ಹಿರಿಯ ಮೊಮ್ಮಗನಾದುದರಿಂದ ತಾನೇ ಕಲಚುರಿ ರಾಜ್ಯಕ್ಕೆ ಬಾಧ್ಯಸ್ಥನು ಎಂದು ಈತನು ಹೆಚ್ಚಿನ ಅಟ್ಟಹಾಸವನ್ನು ತೋರಿರಬೇಕು. ಈತನು ಪ್ರೌಢನು, ಪರಾಕ್ರಮಿಯು ಮತ್ತು ರಾಜ್ಯದಲ್ಲಿ ಪ್ರತಿಷ್ಠೆಯುಳ್ಳವ

ನಾಗಿದ್ದುದರಿಂದ ಅನೇಕ ನಾಯಕರು ಈತನ ಪಕ್ಷವನ್ನು ಸೇರಿರಬೇಕು. ಈತನಾದರೂ ಪ್ರತಿಪಕ್ಷಿಗಳ ಕೋಲಾಹಲದಲ್ಲಿ ಸ್ವಲ್ಪಕಾಲ ರಾಜ್ಯವಾಳಿ, ಮುಂದೆ ಬೇಗನೆ ಸೋವಿದೇವನ ದಂಡನಾಥನಾದ ಮಂತ್ರಿಮಾಧವನಿಂದ ಹತನಾಗಿರಬೇಕು. ಬಳಿಕ ಎಲ್ಲ ಪ್ರತಿಸ್ಪರ್ಧಿಗಳ ಸದ್ದನ್ನು ಅಡಗಿಸಿ ಜಯಶೀಲನಾದ ಸೋವಿದೇವನು ಮತ್ತೆ ತನ್ನ ಪಿತೃದತ್ತ ರಾಜ್ಯವನ್ನು ಆಳಲುಕೊಡಗಿರಬೇಕು

ಈ ಘಟನೆಗಳೆಲ್ಲ ಅತ್ಯಲ್ಪಕಾಲವೆಂದರೆ ಕ್ರಿ. ಶ. ೧೧೬೭ ರ ಉತ್ತರಾರ್ಧ ಮತ್ತು ೧೧೬೮ ರ ಆರಂಭದ ೬-೭ ತಿಂಗಳುಗಳ ಅವಧಿಯಲ್ಲಿ ಸಂಭವಿಸಿರಬೇಕು. ಇಲ್ಲವೆ, ಹೆಚ್ಚೆಂದರೆ ಕ್ರಿ. ಶ. ೧೧೬೭ ರಿಂದ ೧೧೭೦ ರ ವರೆಗಿನ ಕಾಲಾವಧಿಯಲ್ಲಿ ನಡೆದು ಮುಗಿದಿರಬೇಕು. ಕಲಚುರಿ ರಾಜ್ಯದ ಬೇರೆ ಬೇರೆ ಭಾಗಗಳಲ್ಲಿ ಈ ಪ್ರತಿಸ್ಪರ್ಧಿಗಳು ಆಳಿರಬಹುದಾದರಿಂದ ಸೋವಿದೇವನ ಆಳಿಕೆ ಒಂದು ವಿಧದಿಂದ ಅಖಂಡವಾಗಿ ಮುಂದುವರಿದಂತೆ ತೋರಿದರೆ ಅಚ್ಚರಿಯಲ್ಲ.

ಬಿಜ್ಜಳನ ಈ ಮೊಮ್ಮಗನ ಹೆಸರು ಮೂರು ಶಾಸನಗಳಲ್ಲಿ ಮೂರು ವಿಧವಾಗಿ ಕಂಡಿದ್ದರೂ ಅವುಗಳನ್ನು ಒಬ್ಬನಿಗೆ ಸಮನ್ವಯ ಮಾಡಬಹುದು ಹರಸೂರ ಶಾಸನದಲ್ಲಿ ಹೇಳಿದಂತೆ ಆತನ ಹೆಸರು ಕರ್ಣನೆಂದಿರಬೇಕು. ಅದರ ತದ್ಭವ ಕನ್ನರನೆಂದಾಗುತ್ತದೆ; ಕರ್ಣ–ಕನ್ನ–ಕನ್ನರ. ಶೂರತನದ ಮೂಲಕ ಈತನಿಗೆ ಕಲಿದೇವ ಎಂಬ ಇನ್ನೊಂದು ಹೆಸರೂ ರೂಢಿಯಲ್ಲಿರಬೇಕು. ಹಾಗಿರದಿದ್ದರೆ ಪದ್ಯದ ಬಂಧದಲ್ಲಿ ಹೊಂದಿಕೆಯಾಗದಂತಹ ಅಂತಹ ಹೆಸರನ್ನು ಶಾಸನಕಾರನು ಬಳಸುತ್ತಿರಲಿಲ್ಲ. ಇದು ಶಾಸನ ಲೇಖಕನ ಇಲ್ಲವೆ ಕೊರೆದವನ ಪ್ರಮಾದವೆಂದು ಕಲ್ಪಿಸುವುದು ಯೋಗ್ಯವಾಗಲಾರದು. ರಾಘವಾಂಕನ ಸಿದ್ಧರಾಮನ ಚರಿತದಲ್ಲಿ ಬಿಜ್ಜಳನ ತಮ್ಮನಾದ ಕರ್ಣದೇವನು ತನಗೆ ಪಟ್ಟಗಟ್ಟಲು ಸಿದ್ಧರಾಮನ ಸಹಾಯ ಕೇಳಿದನೆಂದು ವರ್ಣಿಸಿದೆ. ಶಾಸನಸ್ಥ ಕರ್ಣಕಂದರರು ಮತ್ತು ಈ ಕರ್ಣದೇವ ಇವರು ಅಭಿನ್ನ ವ್ಯಕ್ತಿಗಳಾಗಿರಬೇಕು. ರಾಘವಾಂಕನ ಕಾಲಕ್ಕೂ ಈ ಘಟನೆಗಳು ನಡೆದ ಕಾಲಕ್ಕೂ ಒಂದು ತಲೆಮಾರಿನಷ್ಟಾದರೂ ಅಂತರವಿರುವದರಿಂದ, ಹಾಗೂ ಬಿಜ್ಜಳನ ತಮ್ಮ ಮತ್ತು ಮೊಮ್ಮಗ ಇಬ್ಬರೂ ಸುಮಾರಾಗಿ ಏಕ ಸಮಯದಲ್ಲಿ ಸರಿಸಮಾನತೆಯಿಂದ ಈ ಬಹುನಾಯಕತ್ವದ ಕೋಲಾಹಲದಲ್ಲಿ ಭಾಗಿಯಾದುದರಿಂದ, ಕೃತಿಯ ಲೇಖಕನಾದ ರಾಘವಾಂಕನಿಗೆ ಈ ಕರ್ಣದೇವನು ಬಿಜ್ಜಳನ ತಮ್ಮನೋ, ಮಮ್ಮನೋ

(ಮೊಮ್ಮಗನೋ), ಎಂಬ ಸರಿಯಾದ ಕಲ್ಪನೆ ಇಲ್ಲದೆ ಆತನು ಕರ್ಣದೇವನು ಬಿಜ್ಜಳನ ತಮ್ಮನೆಂದು ಉಸಿರಿಸುವರಲ್ಲಿ ವಿಚಿತ್ರವೇನೂ ಇಲ್ಲ.

ಬಸವೇಶ್ವರನ ಕಾಲನಿರ್ಣಯವೆಂಬ ಉಪನ್ಯಾಸದಲ್ಲಿ ಶ್ರೀ ಗೋವಿಂದ ಪೈಯವರು ಈ ಸಮಸ್ಯೆಯನ್ನು ಚರ್ಚಿಸಿ ಕೆಲವು ಊಹೆಗಳನ್ನು ಮಾಡಿದ್ದಾರೆ. ಆ ಊಹೆಗಳಲ್ಲಿಯ ಒಂದೆರಡು ಮಾತುಗಳ ಸಮರ್ಪಕವಾಗದೆ ಇದ್ದರೂ ಮಿಕ್ಕುವ ಯಥಾರ್ಥವಾದುದೇ ಎಂಬ ಮಾತು ಕಾಳಗಿ ಮತ್ತು ಹರಸೂರ ಶಾಸನಗಳ ಅಧಿಕಾರದಿಂದ ಸಿದ್ಧವಾಗುತ್ತದೆ. ಕಲಚುರಿ ವಂಶಕ್ರಮದಲ್ಲಿ ವಜ್ರದೇವನು ಬಿಜ್ಜಳನ ಕೊನೆಯ ಮಗನೆಂದು ತೋರಿಸಿ ಕರ್ಣದೇವನು ಬಿಜ್ಜಳನ ಅಜ್ಞಾತ ಜ್ಯೇಷ್ಠ ಪುತ್ರನ ಮಗನಾಗಿರಬೇಕೆಂದು ಶ್ರೀಯುತರು ಸೂಚಿಸಿದ್ದಾರೆ. ಸನಗಾದರೂ ಈ ವಜ್ರದೇವನೇ ಬಿಜ್ಜಳನ ಹಿರಿಯ ಮಗನಾಗಿದ್ದು ಕರ್ಣದೇವನು ಆತನ ಮಗನಾಗಿರಬೇಕೆಂದು ತೋರುತ್ತದೆ. ವಜ್ರದೇವನು ಬಿಜ್ಜಳನ ರಾಜ್ಯತ್ಯಾಗಕ್ಕಿಂತ ಮುಂಚೆ ತನ್ನ ಪೂರ್ವವಯಸ್ಸಿನಲ್ಲಿ ಮೃತನಾಗಿರಬೇಕು. ಇದುವೆ ಆತನು ಹೆಚ್ಚಾಗಿ ಶಾಸನಗಳಲ್ಲಿ ಕಾಣಿಸಿಕೊಳ್ಳದೆ ಇರುವುದರ ಕಾರಣವಾಗಿರಬೇಕು.

ರಾಯಮುರಾರಿ ಸೋಮದೇವನ ಕಾಲದ ಮತ್ತು ಈಚೆಯವಾದ ಅನೇಕ ಶಾಸನಗಳು ಆತನ ಪ್ರತಾಪಾತಿಶಯ, ರಾಜ್ಯದ ವೈಭವ, ಮುಂತಾದ ವಿಷಯಗಳನ್ನು ಆಡಂಬರವಾಗಿ ವರ್ಣಿಸುತ್ತವೆ ಆದರೆ ಇಂತಹ ವರ್ಣನೆಗಳು ಅತಿರಂಜಿತವೆಂದೇ ತಿಳಿಯಬೇಕಾಗುತ್ತದೆ. ಏಳೆಂಟು ಸಂವತ್ಸರಗಳು ಮಾತ್ರ ಆಳಿದ ಸೋವಿದೇವನ ರಾಜ್ಯಪರಿಪಾಲನೆ ಗೊಂದಲದಲ್ಲಿ ಆರಂಭಿಸಿ ಗೊಂದಲದಲ್ಲಿ ಮುಂದುವರಿದು ಗೊಂದಲದಲ್ಲಿ ಮುಗಿತಾಯ ಹೊಂದಿತು. ತನ್ನ ತಂದೆಯ ಕೊಲೆಯ ಸೇಡನ್ನು ತೀರಿಸಲು ಆತನು ಮಾಡಿದ ಪ್ರಯತ್ನಗಳು ಸಫಲವಾಗಲಿಲ್ಲ. ವೀರಶೈವ ಅನುಯಾಯಿಗಳ ಸಂಘಬಲವು ದಿನದಿನಕ್ಕೆ ಪ್ರವರ್ಧಮಾನವಾಯಿತು. ಈ ಹಿಂದೆ ನೋಡಿರುವಂತೆ, ಕರ್ಣದೇವನಿಗೆ ಪಟ್ಟಗಟ್ಟುವಂತೆ ಆತನ ಪಕ್ಷದವರು ಸಿದ್ಧರಾಮನ ಬೆಂಬಲವನ್ನು ಪಡೆಯಲು ಪ್ರಯತ್ನಿಸಿದರು. ಈ ವಿಷಯವನ್ನು ಪರಾಮರ್ಶಿಸಿದರೆ ವೀರಶೈವ ಸಂಘದವರು ರಾಜಕೀಯ ರಚನೆಯಲ್ಲಿ ಸಹಾಯವನ್ನು ನೀಡತಕ್ಕಂತಹ ಸಾಮರ್ಥ್ಯವುಳ್ಳವರಾಗಿದ್ದರು; ಸಾಮಾಜಿಕ ಪ್ರತಿಷ್ಠೆಯನ್ನು ಪಡೆದಿದ್ದರು, ಮತ್ತು ಸೋವಿದೇವನ ಆಳಿಕೆಗೆ ವಿರೋಧಿಗಳಾಗಿದ್ದರು. ಎಂಬಂಶಗಳು ವ್ಯಕ್ತವಾಗುತ್ತವೆ.

ಈ ಮೇರೆಗೆ ಜನತೆಯ ಅಸಂತೋಷ, ಅಧಿಕಾರಿ ನಾಯಕರುಗಳ ಅಸಹಕಾರ ಮತ್ತು ಜ್ಞಾತಿಬಾಂಧವರ ವಿಕುಷ್ಟಿ, ಎಂಬೀ ತ್ರಿವಿಧ ಬಾಧೆಗಳಿಗೆ ಗುರಿಯಾಗಿ ಹಾಗೂ ಹೀಗೂ ಕಾಲವನ್ನು ತಳ್ಳುತ್ತಿದ್ದ ಸೋವಿದೇವನು ತನ್ನ ಆಳಿಕೆಯ ಅಂತಿಮಭಾಗದಲ್ಲಿ ಇನ್ನೊಂದು ರಾಜಕೀಯ ಅವಾಂತರದಲ್ಲಿ ಬೇಗೆಯನ್ನು ಇದಿರಿಸಬೇಕಾಯಿತು. ಈ ಅವಾಂತರದ ಸಂಚಾಲಕರೋ ಆತನ ಸೋದರರು. ಇದರ ವಿವರಗಳನ್ನು ಇದೀಗ ಪರಿಶೀಲಿಸಲಿರುವೆವು. ಈ ಬೇಗೆಯನ್ನು ನಂದಿಸುವ ಪ್ರಯತ್ನದಲ್ಲಿ ಸೋವಿದೇವನ ಜೀವನ ದೀಪವು ನಂದಿ ಹೋದಂತೆ ತೋರುತ್ತದೆ.

## ೨. ಮಲ್ಲಿಕಾರ್ಜುನ

(ಕ್ರಿ.ಶ. ೧೧೭೫-೭೬)

ಮಲ್ಲಿಕಾರ್ಜುನನು ರಾಯಮುರಾರಿ ಸೋವಿದೇವನ ತಮ್ಮನು; ಬಿಜ್ಜಳನ ಮೂರನೆಯ ಮಗನು. ಈತನ ಅಸ್ತಿತ್ವ ಮತ್ತು ಕರ್ತೃತ್ವದ ವಿಚಾರವು ಸಾಕಷ್ಟು ಪ್ರಮಾಣದಲ್ಲಿ ಅನ್ವೇಷಕರ ಲಕ್ಷ್ಯಕ್ಕೆ ಬಂದಿರುವುದಿಲ್ಲ. ಈ ಕಾರಣದಿಂದ ಈತನ ವಿಷಯವನ್ನು ಹೆಚ್ಚು ವಿವರವಾಗಿ ಇಲ್ಲಿ ಪ್ರಸ್ತಾಪಿಸಬೇಕಾಗಿದೆ. ಮಲ್ಲುಗಿ, ಮೈಳುಗಿ, ಮೈಳವಿ, ಮೊದಲಾದ ರೂಪಾಂತರದ ಹೆಸರುಗಳಿಂದ ಈತನು ಶಾಸನಗಳಲ್ಲಿ ನಿರ್ದಿಷ್ಟನಾಗುತ್ತಾನೆ. ಈತನಿಗೆ ಅನ್ವಯಿಸುವ ಶಾಸನಸ್ಥವಾದ ಒಂಬತ್ತು ನಿರ್ದೇಶಗಳು ನನಗೆ ದೊರೆತಿವೆ. ಇವುಗಳಲ್ಲಿ ಮೂರು ಈತನು ಇನ್ನೂ ರಾಜಕುಮಾರನಾಗಿದ್ದ ಸಂದರ್ಭದವು. ಮೂರು ಈತನು ಸಾಕ್ಷಾತ್ ರಾಜ್ಯಭಾರ ಮಾಡುತ್ತಿರುವಾಗ ಈತನ ಆಳಿಕೆಯನ್ನು ಪ್ರಸ್ತಾಪಿಸುವಂತಹವು. ಮಿಕ್ಕ ಮೂರು ಆಮೇಲಣ ಸಂಕಮನ ಆಳಿಕೆಯವು. ಇವುಗಳಲ್ಲಿ ಕೊನೆಯ ಮೂರನ್ನು ಮೊದಲು ಎತ್ತಿಕೊಂಡು ಪರೀಕ್ಷಿಸುವ.

ಹಿಂದೆ ವಿಮರ್ಶಿಸಿದ, ಬಿಜ್ಜಳನ ತಮ್ಮ ಮೈಳುಗಿ ಮತ್ತು ಮೊಮ್ಮಗ ಕರ್ಣದೇವ ಇವರ ಆಳಿಕೆಯನ್ನು ವಿವರಿಸುವ ಶಿಕಾರಿಪುರ ೧೯೭ ಮತ್ತು ದಾವಣಗೇರೆ ೪೪ ಶಾಸನಗಳಲ್ಲಿ ಮೈಳುಗಿ ಇಲ್ಲವೆ ಮಲ್ಲುಗಿ ಎಂಬವನು ಸೋವಿದೇವನ ತಮ್ಮನಾಗಿದ್ದನೆಂಬ ಸಂಗತಿಯನ್ನು ಹೇಳಿ ಆತನು ಸೋವಿದೇವನ ಪಶ್ಚಾತ್ ಆಳಿದನೆಂದು ಸ್ಫುಟವಾಗಿ ವರ್ಣಿಸಿದೆ: ಅದು ಹೀಗೆ. ಶಿಕಾರಿಪುರ ೧೯೭ನೆಯ ಶಾಸನ; ಸೋವಿದೇವನು ಆಳಿದ ತರುವಾಯ.

ಆತನ ತಮ್ಮನೂರ್ಜಿತಗುಣಂ ವಿಭು ಮೈಲುಗಿ ದೇವ ನಾಳ್ದಗಂ
ಭೂತಳಮಂ ಬಳಿಕ್ಕಮವನಿಂ ಕಿಱಿಯಾತ ನೆಸಪ್ಪನಾದೊಡಂ

ಎಂದು ನಿರೂಪಿಸಿ ಮುಂದೆ ಸಂಕಮನು ಆಳಿದನೆಂದು ಹೇಳಿದೆ.

ದಾವಣಗೆರೆ ಳಳ ನೇಯ ಶಾಸನ; ಸೋವಿದೇವನ ರಾಜ್ಯಕ್ರಮವನ್ನು ವರ್ಣಿಸಿಯಾದ ಬಳಿಕ,

ಕದನ ಕ್ರಿಡಾಲಂಪಟ
ನುದಾತ್ತ ವಿಭವಾಮರೇಂದ್ರನುದ್ವೃತ್ತಭುಜಂ
ಸದಮಳಗುಣ ನೀಧರೆಯೊಳು
ತದನುಜನೆನೆ ನೆಗಳ್ದನೆಸೆಯೆ ಮಲ್ಲುಗಿ ದೇವಂ ||

ಎಂಬುದಾಗಿ ಮಲ್ಲುಗಿಯನ್ನು ಪ್ರಶಂಸಿಸಿ, ಅನಂತರ ಸಂಕಮನ ಅರಸುತನವನ್ನು ನಿರೂಪಿಸಿದೆ. ಇದೇ ವಿಧವಾದ ವಿವರಗಳು ಸೊಲ್ಲಾಪುರ ತಾಲೂಕಿನ ಮಾರ್ಡೀ ಎಂಬ ಗ್ರಾಮದ ಸಂಸ್ಕೃತ ಶಾಸನದಲ್ಲಿಯೂ ಕಾಣಿಸಿಕೊಳ್ಳುವುವು. ಈ ಶಾಸನದಲ್ಲಿ ಮಲ್ಲುಗಿಯನ್ನು ವರ್ಣಿಸಿದುದು ಇಂತಿದೆ.

ತತ ಆಕ್ರಾಂತ ದಿಕ್ ಚಕ್ರಶ್ಚಕ್ರವರ್ತೀಸ ಮಲ್ಲುಗಿ: |
ಸಮಾಚಕ್ರಾಮ ಸರ್ವೋರ್ವೀಂ ಪ್ರವಿದಗ್ಧಾ ಮಹಾವಿವ ||

'ಅತ್ಯಲ್ಪ ಕಾಲದಲ್ಲಿ ಅಖಿಲ ರಾಜ್ಯವನ್ನು ಆಕ್ರಮಣ ಮಾಡಿ ಚಕ್ರವರ್ತಿಯಾದನು' ಎಂಬುದಾಗಿ ಈ ಶ್ಲೋಕದಲ್ಲಿ ಮಲ್ಲಗಿಯನ್ನು ಸ್ತುತಿಸಿದೆ. ಇದನ್ನು ನಾವು ಲಕ್ಷಿಸಬೇಕಾದುದು.

ಬಳಿಕ ಮಲ್ಲುಗಿಯ ಸಮಕಾಲಿಕ ಶಾಸನಗಳನ್ನು ಅವಲೋಕಿಸುವ ಮೊತ್ತಮೊದಲನೆಯದು ೧೧೫೭ ನೆಯ ಕ್ರಿ. ಶ. ದ ಬಿಜ್ಜಳನ ೫ ನೆಯ ವರ್ಷವನ್ನು ಗುರುತಿಸುವ ಹಿಂದೆ ಚರ್ಚಿಸಿದ ಚಿಕ್ಕಲಕಿ ಗ್ರಾಮದ ಶಾಸನ. ಇದರಲ್ಲಿ ಬಿಜ್ಜಳನ ಸ್ವತಂತ್ರ ರಾಜ್ಯಾಧಿಕಾರವನ್ನು ನಿರ್ದೇಶಿಸಿ ಜೊತೆಗೆ ಮೈಳವಿದೇವ ಕುಮಾರನೂ 'ರಾಜ್ಯಂ ಗೆಯ್ಯುತ್ತಿರ್ದ' ವರ್ತಮಾನವನ್ನು ನಿರೂಪಿಸಿದೆ. ಈ ಮೈಳುವಿ ಮಲ್ಲುಗಿ ಅಥವಾ ಮೈಲುಗಿಯೇ ಆಗಿರಬೇಕು. ಇದರಿಂದ ಈತನು ಪ್ರಬುದ್ಧನೂ ತಂದೆಗೆ ಸಹಕಾರಿಯೂ ಪ್ರೀತಿಪಾತ್ರನೂ ಆಗಿದ್ದಂತೆ ಸುಷ್ಪವಾಗುತ್ತದೆ. ಎರಡನೆಯದು ವಿಜಾಪೂರ ಜಿಲ್ಲೆಯ ಬಾಬಾನಗರ ಗ್ರಾಮದಲ್ಲಿ ಸವೆದುಹೋದ ಶಾಸನ. ಇದು

ಬಿಜ್ಜಳನ ಆಳಿಕೆಯ ೧೧೬೦—೬೧ ನೆಯ ಕ್ರಿ; ವ. ಕ್ಕೆ ಸಂಬಂಧಿಸಿದುದು. ಇದರಲ್ಲಿ ಮೈಳುಗಿಯ ಉಲ್ಲೇಖವು ಬರುತ್ತದೆ. ಮೂರನೆಯದು ಅದೇ ಜಿಲ್ಲೆಯ ಸಿಂದಗಿ ತಾಲೂಕಿನ ಕೊಂಡಗೂಳಿ ಊರಲ್ಲಿ ದೊರಕಿದೆ. ಇದರ ಕಾಲ ಬಿಜ್ಜಳನ ಆಳಿಕೆಯ ೧೧ನೇಯ ವರ್ಷ, ವ್ಯಯ ಸಂವತ್ಸರ ಎಂದರೆ ಕ್ರಿ. ವ. ೧೧೬೬. ಖಿಲವಾದ ಈ ಶಾಸನದಲ್ಲಿ ಶ್ರೀಮತಿ ಕುಮಾರ ಮಲುಗಿ ಎಂಬ ನಿರ್ದೇಶವು ಸಿಕ್ಕುತ್ತದೆ.

ಆನಂತರ ವಿಜಾಪೂರ ಮ್ಯುಜಿಯಂ ದಲ್ಲಿಯ ಒಂದು ಶಾಸನವು ಕಳಚೂರ್ಯ ಪ್ರತಾಪ ಚಕ್ರವರ್ತಿ ಮಲ್ಲಿಕಾರ್ಜುನ ದೇವರ ವಿಜಯ ರಾಜ್ಯಂ.......... ಸಲುತ್ತಮಿರೆ ! ಮಾಸನೂರ, ನೆಲೆವೀಡಿನೊಳ್ ಸುಖ ಸಂಕಥಾ ವಿನೋದದಿಂ ರಾಜ್ಯಂ ಗೆಯ್ಯುತ್ತಮಿರೆ !, ಎಂದು ಹೇಳಿ ಮಲ್ಲಿಕಾರ್ಜುನನು ಎಂದರೆ ಮೈಳುಗಿಯು ಸ್ವತಂತ್ರ ರಾಜ್ಯಭಾರ ಮಾಡುತ್ತಿರುವ ಸಂಗತಿಯನ್ನು ಪ್ರಕಟಗೊಳಿಸುತ್ತದೆ. ಈ ಶಾಸನ ಕಾಲ ಶಕ ೧೦೯೮ ನೆಯ ದುರ್ಮುಖಿ ಸಂವತ್ಸರ ಮಾರ್ಗಶಿರ ಬಹಳ ೮, ಎಂದರೆ ಕ್ರಿ. ವ. ೧೧೭೬ ನವಂಬರ ೨೫. ಇದೇ ದುರ್ಮುಖಿ ಸಂವತ್ಸರದಲ್ಲಿ ಮಲ್ಲುಗಿ ಆಳುತ್ತಿದ್ದನೆಂದು ನಿರೂಪಿಸುವ ಮತ್ತು ಅದು ಆತನ ಆಳಿಕೆಯ ಎರಡನೆಯ ವರ್ಷವಾಗಿತ್ತೆಂದು ವಿವರಿಸುವ ಇನ್ನೆರಡು ಶಾಸನಗಳು ದೊರೆತಿವೆ. ಒಂದರ ಕಾಲ ಕ್ರಿ. ವ. ೧೧೭೬ ನವಂಬರ ೮; ಇದು ಕಳಚುರ್ಯ ಚಕ್ರವರ್ತಿ ಮಲ್ಲುಗಿದೇವನ ಆಳಕೆಯ ೨ನೆಯ ಸಂವತ್ಸರವೆಂದು ಶಾಸನದಲ್ಲಿ ಹೇಳಿದೆ. ಇನ್ನೊಂದು ವಿಜಾಪೂರ ಜಿಲ್ಲೆಯ ಇಂಡಿ ತಾಲೂಕಿನ ತೆನಿಹಳ್ಳಿ ಗ್ರಾಮದ ಶಾಸನ. ಇದರ ಮಿತಿ ಕ್ರಿ. ವ. ೧೧೭೬ ಡಿಸೆಂಬರ ೨ ಗುರುವಾರ. ಇದು ಭುವನೈಕ ಚಕ್ರವರ್ತಿ ಮಲ್ಲುಗಿದೇವ ವರ್ಷದ ೨ನೆಯ ದುರ್ಮುಖಿ ಮುಂತಾದ ವಿವರಗಳು ಶಾಸನದಲ್ಲಿ ಉಕ್ತವಾಗಿವೆ.

ಈ ಮೇಲಿನ ವಿವರಣೆಯಿಂದ ಮಲ್ಲಿಕಾರ್ಜುನನು ಕ್ರಿ. ವ. ೧೧೭೫ ರಲ್ಲಿ ತನ್ನ ಆಳಿಕೆಯನ್ನು ಪ್ರಾರಂಭಿಸಿದನೆಂತಲೂ ಮನ್ಮಥ ಸಂವತ್ಸರವು ಆತನ ಆಳಿಕೆಯ ಪ್ರಥಮವರ್ಷವೆಂಬುದಾಗಿಯೂ ವ್ಯಕ್ತವಾಗುತ್ತದೆ. ಇದೇ ಮನ್ಮಥ ಮತ್ತು ದುರ್ಮುಖಿ ಸಂವತ್ಸರಗಳಲ್ಲಿ ಸೋವಿದೇವನು ಆಳುತ್ತಿದ್ದನೆಂದು ಹೇಳುವ ಶಾಸನಗಳು ಸಿಕ್ಕುತ್ತವೆ, ಅವುಗಳಿಂದ ಸೋವಿದೇವನ ಆಳಿಕೆ ಕ್ರಿ. ವ. ೧೧೭೬ ರ ವರೆಗೆ ಮುಂದುವರಿದಿತ್ತು ಎಂದು ತಿಳಿಯುತ್ತದೆ. ಈ ಅಂಶಗಳನ್ನು ಪರ್ಯಾಲೋಚಿಸಿದರೆ ಮಲ್ಲಿಕಾರ್ಜುನನು ತನ್ನ

ಅಣ್ಣ ಸೋವಿದೇವನು ಇನ್ನೂ ಆಳುತ್ತಿರುವಾಗಲೇ ತನ್ನ ಸ್ವತಂತ್ರ ಆಳಿಕೆಯನ್ನು ಪ್ರಾರಂಭಿಸಿದನು ಎಂದು ನಿಷ್ಪನ್ನವಾಗುತ್ತದೆ. ಇದೊಂದು ವಿಚಿತ್ರವಾಗಿ ತೋರುವ ವಿಷಯ. ಸೋವಿದೇವ ಮತ್ತು ಮಲ್ಲಿಕಾರ್ಜುನರು ತಮ್ಮೊಳಗೆ ರಾಜ್ಯವನ್ನು ಹಂಚಿಕೊಂಡು ಆಳುತ್ತಿರಬೇಕು ಎಂದು ಊಹಿಸಲು ಅವಕಾಶವಿಲ್ಲ. ಏಕೆಂದರೆ ಒಂದೇ ಪ್ರದೇಶದಲ್ಲಿ ಎಂದರೆ ವಿಜಾಪೂರ ಜಿಲ್ಲೆಯಲ್ಲಿ ಅವರಅಭಿನ್ನ ಆಳಿಕೆಯ ಶಾಸನಗಳು ದೊರೆತಿವೆ. ಮಲ್ಲಿಕಾರ್ಜುನನು ಸೋವಿದೇವನ ಸಮ್ಮತಿಯಿಂದ ಆತನ ರಾಜ್ಯಭಾರದಲ್ಲಿ ಸಹಭಾಗಿಯಾಗಿ ಆಳುತ್ತಿದ್ದನು ಎಂದು ಊಹಿಸಲು ಯಾವ ಆಧಾರವೂ ಇಲ್ಲ. ಆದುದರಿಂದ ಇದೊಂದು ವಿಲಕ್ಷಣ ಘಟನೆಯೇ ಆಗಿ ನಿಲ್ಲುತ್ತದೆ.

ಈ ವೈಚಿತ್ರ್ಯವನ್ನು ಇನ್ನಷ್ಟು ವಿಚಿತ್ರವಾಗಿಸುವ ವಿಷಯ ಇನ್ನೊಂದಿದೆ. ಸೋವಿದೇವ ಮತ್ತು ಮಲ್ಲಿಕಾರ್ಜುನರ ತಮ್ಮನಾದ ಸಂಕಮನು ಇದೇ ಮನ್ಮಥ ದುರ್ಮುಖಿ ಸಂವತ್ಸರಗಳಲ್ಲಿ ಸ್ವತಂತ್ರವಾಗಿ ಆಳುತ್ತಿದ ಸಂಗತಿ ಕೆಲವು ಶಾಸನಗಳಲ್ಲಿ ಉಕ್ತವಾಗಿದೆ. ವಾಸ್ತವಿಕವಾಗಿ ನೋಡಿದರೆ ಹೇಮಳಂಬಿ ಸಂವತ್ಸರವು ಸಂಕಮನ ಆಳಿಕೆಯ ೧ನೆಯ ವರ್ಷವು ಆಗತಕ್ಕದ್ದು. ಆದರೆ ಆದರ ಹಿಂದಿನ ದುರ್ಮುಖಿ ಸಂವತ್ಸರವನ್ನು ಒಂದನೆಯ ವರ್ಷವೆಂದು ಕೆಲಶಾಸನಗಳು ಹೇಳಿದರೆ, ಇನ್ನೂ ಕೆಲವು ಅದು ಎರಡನೆಯ ವರ್ಷವೆಂದು ಹೇಳುತ್ತವೆ. ವಿಜಾಪುರ ಜಿಲ್ಲೆಯ ಮನಗೋಳಿ ಗ್ರಾಮದ ಒಂದು ಶಾಸನದಲ್ಲಿ ವಿಳಂಬಿ ಸಂಕಮನ ಮೂರನೆಯ ವರ್ಷವೆಂದು ಉಕ್ತವಾಗಿದೆ. ಇವುಗಳ ಆಧಾರದಿಂದ ಸಂಕಮನಾದರೂ ಮನ್ಮಥ ಮತ್ತು ದುರ್ಮುಖಿ ಸಂವತ್ಸರಗಳಲ್ಲಿ ಕಲಚುರಿ ರಾಜ್ಯದ ಮೇಲೆ ತನ್ನ ಅಧಿಕಾರವನ್ನು ಹೇಳಿಕೊಳ್ಳುತ್ತಿದ್ದನೆಂಬ ವಿಷಯವು ನಿಷ್ಪನ್ನವಾಗುತ್ತದೆ. ಸೋವಿದೇವ ಮಲ್ಲಿಕಾರ್ಜುನರ ಶಾಸನಗಳಂತೆ ಈತನ ಇಂತಹ ಶಾಸನಗಳ ಕ್ಷೇತ್ರವಾದರೂ ವಿಜಾಪುರ ಪ್ರದೇಶವಾಗಿದ್ದ ಅಂಶವು ಲಕ್ಷಣೀಯವಾಗಿದೆ.

ಹೀಗೆ ಸೋವಿದೇವನ ಆಳಿಕೆಯ ಕೊನೆಯ ಒಂದೆರಡು ವರ್ಷಗಳಲ್ಲಿ ಆತನ ತಮ್ಮಂದಿರಿಬ್ಬರು ಸ್ವತಂತ್ರವಾಗಿ ತಮ್ಮ ತಮ್ಮ ಆಳಿಕೆಗಳನ್ನು ನಡೆಸಿದ ಸನ್ನಿವೇಶವನ್ನು ಪರಿಶೀಲಿಸಿದರೆ, ಅವರು ಆತನ ವಿರುದ್ಧವಾಗಿ ಬಂಡಾಯವನ್ನು ಹೂಡಿ ಕಲಚುರಿ ಸಿಂಹಾಸನವನ್ನು ಆಕ್ರಮಿಸು

ಹೊಂಚನ್ನು ಹೂಡಿದ್ದರು ಎಂಬ ಒಂದೇ ಅಂಶವು ಸೂಚಿತವಾಗುತ್ತದೆ. ಮಾರ್ಡಿ ಶಾಸನದಲ್ಲಿಯು ಮಲ್ಲುಗಿಯ ವರ್ಣನೆ ಈ ಊಹೆಗೆ ಪೋಷಕವಾಗಿದೆ. ವಿಜಾಪುರ ಮ್ಯೂಜಿಯಂ ಶಾಸನದಂತೆ ಮಲ್ಲಿಕಾರ್ಜುನನ ನೆಲೆವೀಡು ಮಾಸನೂರು ಆಗಿದ್ದಿತು. ಇದೊಂದು ಗಣ್ಯಸ್ಥಳವಾಗಿರಬೇಕು.

ಮಲ್ಲಿಕಾರ್ಜುನನ ರಾಜಧಾನಿಯಾಗಿದ್ದ ಮಾಸನೂರು ಗ್ರಾಮದ ವಿಚಾರವಾಗಿ ಹೆಚ್ಚಿನ ಕೆಲಸಂಗತಿಗಳನ್ನು ಇಲ್ಲಿ ಪರಿಶೀಲಿಸಬಹುದಾಗಿದೆ. ಹರಿಹರನ ರೇವಣಸಿದ್ಧೇಶ್ವರದೇವರ ರಗಳೆಯಲ್ಲಿ ಪ್ರಾಮುಖ್ಯತೆಯಿಂದ ವರ್ಣಿಸಲಾದ ಮಾಸನೂರು ಇದೇ ಗ್ರಾಮವಾಗಿರಬೇಕು. ಹರಿಹರನ ಮಾಸನೂರು ನದೀತೀರದಲ್ಲಿ ಇದ್ದಿತು ಎಂಬುದು ಅದರ ವರ್ಣನೆಯಿಂದ ಸ್ಪಷ್ಟವಾಗುತ್ತದೆ. ಈ ಮಾಸನೂರು ಪಂಢರಪುರದಿಂದ ಆಗ್ನೇಯಕ್ಕೆ ೧೫ ಮೈಲು ದೂರದಲ್ಲಿ ಭೀಮಾನದೀತೀರದಲ್ಲಿರುವ ಇಂದಿನ ಸೋಲಾಪುರ ಜಿಲ್ಲೆಯ ಮಾಸನೂರ ಎಂಬ ಗ್ರಾಮವಾಗಿರಬೇಕು. ಇಲ್ಲಿ ಪ್ರಾಚೀನ ಅವಶೇಷಗಳು ಸಿಕ್ಕುತ್ತವೆ. ಇದು ಮಂಗಳವೇಢಕ್ಕೆ ಹತ್ತಿರವಾಗಿದೆ. ಮೇಲೆ ಕಾಣಿಸಿದ ಮಾರ್ಡೀ ಗ್ರಾಮವು ಇದೇ ಪ್ರದೇಶದಲ್ಲಿಯದು. ಇದನ್ನೆಲ್ಲ ನೋಡಿದರೆ ಮಲ್ಲಿಕಾರ್ಜುನನು ಸೋಲಾಪುರ ಮತ್ತು ವಿಜಾಪುರ ಜಿಲ್ಲೆಗಳ ಪ್ರದೇಶವನ್ನು ಆಕ್ರಮಿಸಿ ಇಂದಿನ ಮಾಸನೂರ ಗ್ರಾಮವನ್ನು ತನ್ನ ರಾಜಧಾನಿಯಾಗಿ ಆರಿಸಿಕೊಂಡು ಸ್ವಲ್ಪಕಾಲ ಆಳಿದನೆಂದು ಹೇಳಬಹುದು. ಮಲ್ಲಿಕಾರ್ಜುನನು ಮುಂದೆ ಯಾವ ಗತಿಯನ್ನು ಹೊಂದಿದನು ಎಂಬ ವಿಷಯ ಅಜ್ಞಾತವಾಗಿದೆ.

## ೩. ಶಂಕಮದೇವ

(ಕ್ರಿ. ಶ. ೧೧೭೫-೮೦)

## ೪. ಆಹವಮಲ್ಲ

(ಕ್ರಿ. ಶ. ೧೧೮೦-೮೩)

ಮಲ್ಲಿಕಾರ್ಜುನನ ಅನಂತರ ಆತನ ತಮ್ಮಂದಿರಾದ ಸಂಕಮದೇವ ಮತ್ತು ಆಹವಮಲ್ಲರು ಅನುಕ್ರಮವಾಗಿ ಆಳಿದರು. ಅವರ ಆಳಿಕೆಯ ವಿಚಾರವಾಗಿ ಇಲ್ಲಿ ಚರ್ಚಿಸಬೇಕಾದಂತಹ ಹೆಚ್ಚಿನ ಸಂಗತಿಗಳೇನೂ ಇಲ್ಲ. ಅವರ ಆಳಿಕೆಗಳಿಗೆ ಸಂಬಂಧಪಟ್ಟ ಶಾಸನಗಳಲ್ಲಿ ಆಡಂಬರದ ವರ್ಣನೆಗಳು ಬರುತ್ತವೆ. ಆದರೆ ಅವು ಸಾಂಪ್ರದಾಯಿಕ ಮತ್ತು ಸ್ತುತಿಪರವಾದುವು ಎಂದು ಎಣಿಸಬೇಕಾಗುತ್ತದೆ. ಈ ಕಾಲಕ್ಕೆ ಕಲಚುರಿಗಳ ಪ್ರಭಾ

ಹವು ದಿನದಿನಕ್ಕೆ ಕುಗ್ಗುತಲಿದ್ದಿತು. ಚಾಲುಕ್ಯ ಪಕ್ಷದವರ ಬಲ ಮತ್ತು ಸಂಘಟನೆ ವೃದ್ಧಿಂಗತವಾಗುತಲಿದ್ದುವು. ಅನೇಕ ನಾಯಕರು ಅಲ್ಲಲ್ಲಿ ಪ್ರಬಲಿಸಿ ತಮ್ಮ ತಮ್ಮ ಅಧಿಕಾರವನ್ನು ಬೆಳೆಸಿಕೊಳ್ಳಲು ಸಾಹಸಪಡುತ್ತಿದ್ದರು. ಈ ಎಲ್ಲ ಚಟವಟಿಕೆಗಳ ದೃಶ್ಯಫಲವು ಕ್ಷಿಪ್ರದಲ್ಲಿಯೇ ಗೋಚರವಾಯಿತು. ಆಹವದುಲ್ಲನ ಆಳಿಕೆಯ ಕೊನೆಯ ಭಾಗದಲ್ಲಿ ಚಾಲುಕ್ಯ ಪಕ್ಷದವರು ಕಲಚುರಿಗಳ ಮೇಲೆ ಏರಾಟವನ್ನು ಹೂಡಿ ಜಯಶೀಲರಾಗುತ್ತ ನಡೆದಂತೆ ತೋರುತ್ತದೆ.

## ೫ ಸಿಂಘಣದೇವ

### ( ಕ್ರಿ. ಶ. ೧೧೮೩-೮೪ )

ಸಿಂಘಣನು ಬಿಜ್ಜಳನ ಕನಿಷ್ಠ ಪುತ್ರನು; ಸ್ವತಂತ್ರವಾಗಿ ರಾಜ್ಯವನ್ನು ಆಳಿದ ಕಲಚುರಿ ಮನೆತನದ ಕೊನೆಯ ರಾಜನು. ಈತನು ಸುಮಾರು ಒಂದು ವರ್ಷ ಆಳಿದನು. ಇಪ್ಪತ್ತು ವರ್ಷಗಳ ಹಿಂದೆ ನಾನಾ ಉಪಾಯಗಳಿಂದ ಈತನ ತಂದೆ ಸಂಪಾದಿಸಿದ ಕರ್ನಾಟಕದ ಒಡೆತನವು ಈತನಿಗೆ ಎರವಾಯಿತು. ಇದೊಂದೇ ಈತನ ಕಾಲದ ಮಹತ್ವದ ಘಟನೆ. ಈ ಹೊತ್ತಿಗೆ ಚಾಲುಕ್ಯ ಪಕ್ಷದವರು ಸಂಘಟಿತ ಶಕ್ತಿಯಿಂದ ಕಲಚುರಿ ರಾಜ್ಯದ ಮೇಲೆ ಏರಾಟ ಮಾಡಿದರು. ಬಲಹೀನನೂ ನಿರಭಿಮಾನಿಯೂ ಆದ ಸಿಂಘಣನು ಹೆಚ್ಚಿನ ಹೋರಾಟಕ್ಕೆ ಅಣಿಯಾಗದೆ ಸುಲಭವಾಗಿ ರಾಜ್ಯವನ್ನು ಬಿಟ್ಟುಕೊಟ್ಟನು. ಮುಮ್ಮಡಿ ತೈಲಪನ ಮಗನಾದ ಚಾಲುಕ್ಯ ನಾಲ್ವಡಿ ಸೋಮೇಶ್ವರನು ಮತ್ತೆ ತನ್ನ ತಂದೆಯ ರಾಜ್ಯದಲ್ಲಿ ಪ್ರತಿಷ್ಠಿತನಾದನು.

ವಿಜಾಪೂರ ಜಿಲ್ಲೆಯ ಮುದ್ದೇಬಿಹಾಳ ತಾಲೂಕಿನ ಮಿಣಜಿಗಿ ಗ್ರಾಮದ ಕ್ರಿ. ಶ. ೧೧೮೪ ನವಂಬರ ೫ ಸೋಮವಾರದಂದಿನ ಶಾಸನದಲ್ಲಿ ಚಾಲುಕ್ಯ ಮನೆತನದ ತ್ರಿಭುವನಮಲ್ಲ ವೀರ ನಾಲ್ವಡಿ ಸೋಮೇಶ್ವರನ ಆಳಿಕೆಯನ್ನು ನಿರೂಪಿಸಿ ಆತನ ಅಂಕಿತನಾದ ಕಳಚುರ್ಯ ಸಿಂಹಭೂಪಾಲನು ಸಿಂಘಣನೆ ಆಗಿದ್ದು ಆತನು ಸೋಮೇಶ್ವರನ ಪ್ರಭುತ್ವವನ್ನು ಅಂಗೀಕರಿಸಿ ಆತನಿಗೆ ಅಧೀನನಾಗಿ ಬಾಳಿದನೆಂದು ತೋರುತ್ತದೆ. ಈ ಮುಂದೆ ಸಿಂಘಣನು ಚರಿತ್ರೆಯ ರಂಗದಲ್ಲಿ ಮರೆಯಾಗುತ್ತಾನೆ.

**ಇಂತು ಕಲಚುರಿಗಳ ಸ್ವತಂತ್ರ ಆಳಿಕೆ ಸಮಾಪ್ತವಾಯಿತು.**

---

# ವೀರಶೈವ ಮತಗ್ರಂಥ

—ಲೇಖಕ:— ಶಿವಮೂರ್ತಿ—

ವೀರಶೈವ ಮತವನ್ನು ಬಿಡಿಬಿಡಿಯಾಗಿ ಪ್ರತಿಪಾದಿಸುವ ಗ್ರಂಥಗಳನೇಕವುಂಟು. ಆದರೆ ಅವುಗಳನ್ನು ಐತಿಹಾಸಿಕ ದೃಷ್ಟಿಯಿಂದಲೂ ಶಾಸ್ತ್ರೀಯ ದೃಷ್ಟಿಯಿಂದಲೂ ವಿವರವಾಗಿ ಬಹು ಸುಲಭ ಶೈಲಿಯಲ್ಲಿ ಹೇಳುವ ಗ್ರಂಥವೊಂದೂ ಇಲ್ಲದ್ದರಿಂದ, ವೀರಶೈವ ಸಮಾಜಕ್ಕೆ ಬಹು ದೊಡ್ಡ ಕೊರತೆಯಾಗಿದೆ. ಈ ಕೊರತೆಯನ್ನು ಹೋಗಲಾಡಿಸದಿದ್ದರೆ ಈಗ ಉಪಲಬ್ಧವಾಗಿರುವ ಯಾವ ಗ್ರಂಥಗಳಿಗೂ ಮಹತ್ವಬರಲಾರದು. ಆ ಗ್ರಂಥಗಳ ಮಹತ್ವವು ಕಡಿಮೆಯಾದರೆ ಅವು ಕಾಲಾಂತರದಿಂದ ನಾಮಶೇಷವಾಗಿ ಹೋಗಬಹುದು. ಆದ್ದರಿಂದ ಆ ಎಲ್ಲ ಪ್ರಾಚೀನ ಗ್ರಂಥಗಳ ಸಂರಕ್ಷಣೆಯಾಗಬೇಕಾದರೆ ಅವುಗಳ ಆಧಾರದಿಂದ ಒಂದು ಸುಲಭ ಶೈಲಿಯ ಮತಗ್ರಂಥವನ್ನು ರಚಿಸುವದು ಅತ್ಯವಶ್ಯಕವಾಗಿದೆ. ಸುಲಭ ಶೈಲಿಯೆಂದರೆ ಓದುಬರಹಬಲ್ಲ ತೀರ ಸಾಮಾನ್ಯ ಮನುಷ್ಯನಿಗೂ ಕೂಡ ಅದು ಸುಲಭವಾಗಿ ತಿಳಿಯಬೇಕು.

ಈ ವರೆಗೆ ಉಪಲಬ್ಧವಿದ್ದ ವೀರಶೈವ ಮತವನ್ನು ಪ್ರತಿಪಾದಿಸುವ ಗ್ರಂಥಗಳೆಂದರೆ— ಶರಣರ ವಚನಗಳು, ಶಿವಾಗಮಗಳು, ಕಾವ್ಯಪುರಾಣಗಳು, ಶರಣರ ಜೀವನ ಚರಿತ್ರೆಗಳು, ಕೈವಲ್ಯಗಳು, ಕಾಲಕಾಲಕ್ಕೆ ವಿದ್ವಾಂಸರು, ಅಷ್ಟಾವರಣ, ಪಂಚಾಚಾರ, ಷಟ್ಸ್ಥಲ, ನೂರೊಂದು ಸ್ಥಲ, ಭಕ್ತಿ ಜ್ಞಾನ ವೈರಾಗ್ಯ ಮುಂತಾದ ವಿಷಯಗಳಮೇಲೆ ಬರೆದ ಗ್ರಂಥಗಳು, ವಿವೇಕ ಚಿಂತಾಮಣಿ, ಶೂನ್ಯಸಂಪಾದನೆ, ಕ್ರಿಯಾಸಾರ, ಸಿದ್ಧಾಂತ ಶಿಖಾಮಣಿ, ವೀರಶೈವ ಸಾರಸಂಗ್ರಹ, ಮುಂತಾದ ಕನ್ನಡ ಸಂಸ್ಕೃತ ಗ್ರಂಥಗಳು, ಇದಲ್ಲದೆ 'ಶಿವಾನುಭವ', 'ಶರಣಸಂದೇಶ', 'ಸುಕುಮಾರ', 'ಸಾವಧಾನ', ಮೊದಲಾದ ಪತ್ರಿಕೆಗಳಲ್ಲಿ ಆಗಾಗ್ಗೆ ಪ್ರಕಟವಾದ ವಿದ್ವಾಂಸರ ಲೇಖಗಳು— ಇವೆಲ್ಲ ಗ್ರಂಥಲೇಖನಾದಿಗಳನ್ನು ಒತ್ತಟ್ಟಿಗೆ ಶೇಖರಿಸಿ ಆ ಗ್ರಂಥಗಳ ಆಳವಾದ ಅಭ್ಯಾಸ ಮತ್ತು ವಿಮರ್ಶೆಮಾಡಲು ಕನಿಷ್ಠ ೫ ಜನ ವಿದ್ವಾಂಸರದೊಂದು ಅಭ್ಯಾಸಮಂಡಳವನ್ನು ಒತ್ತಟ್ಟಿಗೆ ಸ್ಥಾಪಿಸಬೇಕು. ಆ ಜನರು ಮೇಲ್ಕಂಡ ಗ್ರಂಥಗಳ ಬಗ್ಗೆ ತಮ್ಮ ವಿಮರ್ಶೆಯನ್ನು

ಒಂದು ಅಧಿಕೃತವಾದ ಮಾಸಿಕದಲ್ಲಿ ಕೊಡುತ್ತ ಹೋಗಬೇಕು. ಹೀಗೆ ಮಾಡುವದರಿಂದ ಎಷ್ಟೋ ಐತಿಹಾಸಿಕ ಸಂಗತಿಗಳೂ ಮತಮತಾಂತರಗಳಲ್ಲಿರುವ ಭೇದಗಳೂ, ಮಹತ್ವವಾದ ಸಾಮಾನ್ಯ ತತ್ವಗಳೂ ಹೊರಬೀಳುವವು. ಅಂಥ ವಿಷಯಗಳನ್ನು ಕ್ರೋಡೀಕರಿಸಿ ಸುಲಭ ಭಾಷೆಯಲ್ಲಿ ಒಂದು ದೊಡ್ಡ ಆಧಾರ ಗ್ರಂಥವನ್ನು ರಚಿಸಿದರೆ ಸಮಾಜಕ್ಕೆ ಒಂದು ದೊಡ್ಡ ಸಹಾಯವಾದಂತಾಗುವದು. ಆದರೆ ಅಯಾಯ ಗ್ರಂಥವಿಮರ್ಶೆಗೆ ಆಳವಾಗಿ ಅಭ್ಯಾಸಮಾಡುವಂಥ ಅನುಭವಿಕ ವಿದ್ವಾಂಸರೇ ಬೇಕು ಹರಕು ಮುರಕು ಜ್ಞಾನವಿದ್ದವರಿಂದ ಈ ಕಾರ್ಯವು ಸಾಧ್ಯವಾಗಲಾರದು.

ವೀರಶೈವ ಮತವನ್ನು ಪ್ರತಿಪಾದಿಸುವಾಗ ಇತರ ಮತಗಳಿಗೆ ಅದನ್ನು ಹೋಲಿಸಿ ಪರಸ್ಪರ ಮತಗಳಲ್ಲಿ ಕಂಡುಬರುವ ಸಾಮ್ಯ ವೈಷಮ್ಯಗಳನ್ನು ಸೂಚಿಸಿ ವೀರಶೈವ ಮತವನ್ನು ಪ್ರಸ್ಥಾಪಿಸುವದೂ ಕೂಡ ಮಹತ್ವದ ಸಂಗತಿಯಾಗಿದೆ. ಬೌದ್ಧ, ಜೈನ, ಶೈವ, ವೈಷ್ಣವ, ಶಾಕ್ತ, ಕ್ರೈಸ್ತ, ಇಸ್ಲಾಂ, ದ್ವೈತ, ಅದ್ವೈತ, ವಿಶಿಷ್ಟಾದ್ವೈತ, ನೊದಲಾದ ಮತಗಳನ್ನು ಪ್ರತಿಪಾದಿಸುವ ಗ್ರಂಥಗಳನೇಕವುಂಟು. ಆದ್ದರಿಂದ ಆಯಾಯ ಮತಗಳ ಅಭ್ಯಾಸವೂ ವಿಮರ್ಶೆಯೂ ಕೂಡ ವೀರಶೈವ ಮತಗ್ರಂಥ ರಚನೆಗೆ ಪೋಷಕವಾಗಿರುತ್ತದೆಂಬ ಮಾತನ್ನು ನಿರ್ಲಕ್ಷಿಸಲಾಗದು ಅದೇ ಮೇರೆಗೆ ಆಧುನಿಕ ತತ್ವಜ್ಞಾನ ಮಾನಸಶಾಸ್ತ್ರಗಳೂ ಕೂಡ ವೀರಶೈವ ಮತದ ಮೇಲೆ ತಮ್ಮ ಬೆಳಕನ್ನು ಕೆಡವುತ್ತವೆ. ಆದ್ದರಿಂದ ಅಂಥ ಯಾವತ್ತೂ ಗ್ರಂಥಗಳ ಅಭ್ಯಾಸದಿಂದ ನಮ್ಮ ಭಾವೀ ಗ್ರಂಥಕ್ಕೆ ಮೆರಗು ಉಂಟಾಗುವದೆಂಬವನ್ನು ನಾವು ಲಕ್ಷಿಸತಕ್ಕದ್ದು.

ಐತಿಹಾಸಿಕ ದೃಷ್ಟಿಯಿಂದ ವೀರಶೈವ ಮತವನ್ನು ಪ್ರತಿಪಾದಿಸುವಾಗ ಅನೇಕ ಅಸಂಗತವಿಷಯಗಳು ನಮಗೆ ದೃಗ್ಗೋಚರವಾಗುವವು. ಉದಾಹರಣಾರ್ಥ ವೀರಶೈವ ಮತವನ್ನು ಪಂಚಾಚಾರ್ಯರು ಸ್ಥಾಪಿಸಿದರೆಂದು ಕೆಲವರು ಹೇಳುವರು. ಮತ್ತೆ ಕೆಲವರು ಬಸವಾದಿ ಪ್ರಮಥರು ಸ್ಥಾಪಿಸಿದರೆಂದು ಹೇಳುವರು ಬೇರೆ ಕೆಲವರು ಅದು ಪರಮಾತ್ಮನಿಂದಲೇ ಪ್ರಣೀತವಾದುದೆಂದೆನ್ನುವರು. ಪಂಚವಕ್ತ್ರ ಗಣೇಶ್ವರನಿಂದ ಅದು ಸ್ಥಾಪಿತವಾಯಿತೆಂದು ಮತ್ತೆ ಕೆಲವರು ಪ್ರತಿಪಾದಿಸುವರು. ವೇದಕಾಲಕ್ಕಿಂತಲೂ ಪೂರ್ವದಿಂದ ಹಿಡಿದು ಅದರ ಅಸ್ತಿತ್ವವುಂಟೆಂದು ಕೆಲವರ ಪ್ರತಿಪಾದನೆಯಿದೆ. ಏನೇ. ಇರಲಿ ಐತಿಹಾಸಿಕ ದೃಷ್ಟಿಯಿಂದ ಯಾವದು ಸತ್ಯವೆಂಬ್ಬು

ದನ್ನು ಸಂಶೋಧಿಸುವದು ನಮ್ಮ ಕರ್ತವ್ಯ. ವೀರಶೈವ ಮತವು ಯಾವಾ ಗಲೂ ಒಂದೇ ಸ್ವರೂಪದ್ದಿದೆಯೇ ಹೇಗೆ? ಇಲ್ಲದಿದ್ದರೆ ಯಾವ ಯಾವ ಕಾಲಕ್ಕೆ ಯಾವ ಯಾವ ಮಾರ್ಪಾಟಗಳನ್ನು ಹೊಂದಿದೆ? ಇಂಥ ವಿಷಯ ಗಳನ್ನು ಕೂಡ ಅಭ್ಯಾಸಿಸಿ ಕ್ರಮಬದ್ಧವಾಗಿ ಪ್ರಕಟಿಸುವದು ಅತ್ಯಗತ್ಯ.

ಇನ್ನು ತಾತ್ವಿಕದೃಷ್ಟಿಯಿಂದ ವಿಚಾರಿಸುವಲ್ಲಿ ಷಟ್‌ಸ್ಥಲವನ್ನು ಒಂದೊಂದು ಸ್ಥಲಕ್ಕೆ ಆರಾರರಂತೆ ೩೬ ವಿಭಾಗಗಳನ್ನು ಮಾಡಿ ಈ ೩೬ ವಿಭಾಗಗೆಳಲ್ಲಿ ಒಂದೊಂದಕ್ಕೆ ಪುನಃ ೬ ಒಳಭೇದಗಳನ್ನು ಹೇಳಿ ಒಟ್ಟು ೨೧೬ ವಿಭಾಗಗಳಾಗಿ ನಿರ್ಮಿಸಿ ವಿವರಿಸುವದೊಂದು ಪದ್ಧತಿಯಿದ್ದರೆ ಇನ್ನೊಂದು ಪದ್ಧತಿಯಲ್ಲಿ ಭಕ್ತಸ್ಥಲದಿಂದ ಐಕ್ಯಸ್ಥಲದ ವರೆಗೆ ಒಟ್ಟು ೧೦೧ ಸ್ಥಲಗಳನ್ನು ಮಾಡಿ ವಿವೇಚಿಸುವ ಪದ್ಧತಿಯು ಉಂಟು. ಅದ ರಂತೆ ಪಾತಂಜಲಿಯ ಯೋಗವು ಕೂಡ ನಮ್ಮ ಲಿಂಗಾನುಷ್ಠಾನದಲ್ಲಿ ಸಮಾವೇಶವಾಗುತ್ತದೆಂದು ಕೆಲವರು ಪ್ರತಿಪಾದಿಸಿದರೆ ಉಳಿದವರು ಪಾತಂಜ ಲಿಯ ಯೋಗಕ್ಕೂ ನಮ್ಮ ಶಿವಯೋಗಕ್ಕೂ ಸಂಬಂಧವೇ ಇಲ್ಲವೆಂದು ಪ್ರತಿಪಾದಿಸುವರು. ಈ ಎರಡೆರಡು ವಿವೇಚನೆಗಳಲ್ಲಿ ಹೆಚ್ಚು ಸಾಧುವಾದು ದಾವುದು? ಅಥವಾ ಎರಡೂ ಪ್ರತಿಪಾದನೆಗಳೂ ನಿಜವಾಗಿ ಒಂದೆಯೇ ಹೇಗೆ? ಇದನ್ನು ವಿಮರ್ಶಿಸುವದು ಕೂಡ ಅಗತ್ಯವಾಗಿದೆ. ಅದರಂತೆ ಕೆಲವು ಗ್ರಂಥಗಳಲ್ಲಿ ಆಚಾರ, ವ್ರತ, ನೇಮ, ಶೀಲಾದಿಗಳಿಗೆ ಪ್ರಾಮು ಖ್ಯತೆಯನ್ನು ಕೊಟ್ಟಿರುವರು. ಬೇರೆ ಕೆಲವು ಗ್ರಂಥಗಳು ಭಕ್ತಿ-ನೀತಿಗ ಳಿಗೆ ಮಹತ್ವ ಕೊಟ್ಟಿರುವವು. ಇನ್ನುಳಿದವುಗಳು ಮಂತ್ರಯೋಗಗಳ ನ್ನೆತ್ತಿ ಹಿಡಿದಿರುವವು. ಹೀಗಾಗಿ ಒಂದಕ್ಕೊಂದು ತಾಳುಮೇಳವಿಲ್ಲದಂತೆ ಕಂಡುಬರುತ್ತದೆ. ಆದರೆ ಅವೆಲ್ಲವುಗಳಲ್ಲಿ ಸಮನ್ವಯ ಸ್ಥಿತಿಯನ್ನು ಕಂಡು ಕೊಳ್ಳುವದು ಶಕ್ಯವೇ? ಎಂಬುದನ್ನು ವಿಮರ್ಶಿಸುವದು ಅಗತ್ಯವು. ಒಟ್ಟಿನ ಮೇಲೆ ವಿವಿಧತೆಯಲ್ಲಿ ಏಕತ್ವವನ್ನೂ ಏಕತ್ವದಲ್ಲಿ ವಿವಿಧತೆಯನ್ನೂ ಸಮಂಜಸ ವಾಗಿ ಕಂಡುಹಿಡಿದು ಅವುಗಳನ್ನು ಪ್ರಕಟಿಸುವದು ಯುಕ್ತಿಯುಕ್ತವಾಗಿದೆ.

ಒಬ್ಬ ವ್ಯಕ್ತಿಯು ಮೇಲ್ಕಂಡ ವಿವಿಧ ಗ್ರಂಥಗಳನ್ನೆಲ್ಲ ಕೊಂಡು ಕೊಳ್ಳುವದು ಶಕ್ಯವಿಲ್ಲ. ಒಬ್ಬ ದಯಾಳುವಾದ ಶ್ರೀಮಂತನು ಒಂದು ವೇಳೆ ಕೊಂಡುಕೊಂಡರೂ ಅದರಿಂದ ಪ್ರಯೋಜನವೇನೂ ಆಗಲಾರದು. ಯಾಕಂದರೆ ಒಬ್ಬನು ಅವುಗಳನ್ನು ಓದಿ ವಿಮರ್ಶೆ ಮಾಡಲು ಶಕ್ಯವಿಲ್ಲ. ಆಯಾಯ ಗ್ರಂಥಗಳನ್ನು ಪ್ರತ್ಯೇಕವಾದದ್ದೊಂದು ಗ್ರಂಥ ಭಾಂಡಾರ

ದಲ್ಲಿ ಶೇಖರ ಮಾಡುವದೂ ಉಪಯೋಗದ್ದಲ್ಲ. ಯಾಕೆಂದರೆ ಅದಕ್ಕೆ ಸರಿಯಾಗಿ ಒಬ್ಬ ವ್ಯವಸ್ಥಾಪಕ ಮತ್ತು ಚಾಕರನು ಬೇಕು. ಅವರ ಪಗಾರ ಸಾದಿಲವಾರದ ವೆಚ್ಚ ಮುಂತಾದ್ದನ್ನು ನೋಡಿಕೊಳ್ಳಬೇಕಾಗುತ್ತದೆ. ರಾಜಕೀಯ ಸಂಗತಿಗಳ ಕಡೆಗೇ ಹೆಚ್ಚು ಲಕ್ಷವಿದ್ದ ಜನಗಳಲ್ಲಿ ಧಾರ್ಮಿಕ ಗ್ರಂಥಗಳ ಅಭ್ಯಾಸ ಮಾಡುವವರಾರು ? ಸುಮ್ಮನೆ ದುಡ್ಡು ಮಾತ್ರ ವ್ಯರ್ಥವಾಗುವದು. ಆದ್ದರಿಂದ ಸಾರ್ವಜನಿಕ ಕಾಲೇಜಗಳಲ್ಲಿ ಇಂಥ ಗ್ರಂಥಗಳನ್ನು ಶೇಖರಿಸಿ ಅದಕ್ಕೆ ಧಾರ್ಮಿಕ ಗ್ರಂಥ ಸಂಶೋಧನ ಶಾಖೆಯೆಂದು ಹೆಸರಿಟ್ಟು ಆಯಾಯ ಸಂಶೋಧಕರಿಗೆ ಅಭ್ಯಾಸಮಾಡಿ ಲೇಖಗಳನ್ನು ಅಥವಾ ಹೊಸ ಗ್ರಂಥಗಳನ್ನು ಪ್ರಕಟಿಸಲು ಅನುವು ಕೊಟ್ಟರೆ ಸಮಾಜಕ್ಕೆ ದೊಡ್ಡ ಹಿತವನ್ನು ಮಾಡಿದಂತಾಗುವದು. ಆದ್ದರಿಂದ ವೀರಶೈವರಿಂದ ಸ್ಥಾಪಿತವಾಗಿ ನಡೆಯುತ್ತಿರುವ ಕಾಲೇಜಗಳಲ್ಲಿ ಧಾರ್ಮಿಕ ಗ್ರಂಥಗಳನ್ನು ಒತ್ತಟ್ಟಿಗೆ ಶೇಖರಿಸಿಡುವದು ಅತ್ಯಂತ ಮಹತ್ವದ ಸಂಗತಿಯಾಗಿದೆ.

ವಚನ, ಪುರಾಣ, ಕಾವ್ಯ, ಆಗಮಾದಿ ಗ್ರಂಥಗಳು ಸಾಮಾನ್ಯರಿಗೆ ತಿಳಿದುಕೊಳ್ಳಲು ಕಠಿಣವಾಗಿರುತ್ತವೆ. ಪಂಡಿತರಷ್ಟೇ ಅವುಗಳನ್ನೋದಿ ತಿಳಿದುಕೊಳ್ಳಬಹುದು. ನಮ್ಮಲ್ಲಿ ಎಷ್ಟೋ ಜನ ಸಂಸ್ಕೃತ ಪಂಡಿತರೂ, ಶಾಸ್ತ್ರಿಗಳೂ, ಸ್ವಾಮಿಗಳೂ ಇದ್ದಾಗ್ಯೂ ಆಗಮ, ಕ್ರಿಯಾಸಾರ, ಸಿದ್ಧಾಂತ ಶಿಖಾಮಣಿ ಮೊದಲಾದ ಸಂಸ್ಕೃತ ಗ್ರಂಥಗಳನ್ನು ಓದಿದವರು ಬಹುವಿರಳ. ಓದಿದವರಲ್ಲಿ ಅವುಗಳ ತತ್ವವನ್ನು ಸುಲಭವಾದ ಶೈಲಿಯಲ್ಲಿ ಸಾಮಾನ್ಯರಿಗೆ ತಿಳಿಸಿದವರು ಮತ್ತಿಷ್ಟು ವಿರಳ. ಅದೇ ಮೇರೆಗೆ ಕನ್ನಡ ಭಾಷೆಯಲ್ಲಿ ಪಾಂಡಿತ್ಯವನ್ನು ಪಡೆದವರು ಪದವಿಗಳನ್ನು ಹೊಂದಿದವರು ಅನೇಕರಿರಬಹುದು. ಆದರೆ ಅವರಲ್ಲಿ ವಚನಗ್ರಂಥಗಳ ಆಳವಾದ ಅಭ್ಯಾಸ ಮಾಡಿದವರೂ ಆ ಮೂಲಕ ಲೇಖನ ಗ್ರಂಥಗಳನ್ನು ರಚಿಸಿದವರೂ ಬಹುವಿರಳ.

ಕಳೆದ ಮಾಘಮಾಸದಲ್ಲಿ ಧಾರವಾಡ ಶ್ರೀಮುರಘಾಮಠದಲ್ಲಿ 'ಶಿವಾನುಭವ ಸಮ್ಮೇಲನವು' ಕೂಡಿದಾಗ ಸಮಾಜದ ಅನೇಕ ಪ್ರಮುಖ ವ್ಯಕ್ತಿಗಳು ಆಗಮಿಸಿದ್ದರು. ಆಕಾಲಕ್ಕೆ ನಮ್ಮ ಪ್ರಾಚೀನ ಗ್ರಂಥಗಳ ಆಧಾರವನ್ನಿಟ್ಟುಕೊಂಡು ಸಶಾಸ್ತ್ರೀಯವಾಗಿ ವೀರಶೈವ ಮತಗ್ರಂಥವನ್ನು ಸುಲಭ

ಶೈಲಿಯಲ್ಲಿ ರಚಿಸಬೇಕೆಂದು ಸರ್ವಾನುಮತದಿಂದ ಠರಾವು ಪಾಸುಮಾಡಿ
ದ್ದಾರೆ. ಈ ಠರಾವನ್ನು ಕಾರ್ಯರೂಪದಲ್ಲಿ ತರುವದು ಅತ್ಯಂತ ಮಹ
ತ್ವದ ವಿಷಯವಾಗಿದೆ.

ಈ ಭಾವಿ ವೀರಶೈವಮತಗ್ರಂಥದ ಮೊದಲನೆಯ ಆವೃತ್ತಿಯು ಒಂದು
ವೇಳೆ ಸರ್ವಾಂಗಸುಂದರವಾಗಿ ಬೆಳಗಲಿಕ್ಕಿಲ್ಲ. ಅದರಲ್ಲಿ ಕೆಲವು ಲೋಪ
ದೋಷಗಳು ಕಂಡುಬರಬಹುದು. ಆದರೆ ಅಂಥ ಗ್ರಂಥ ಪ್ರಕಟನೆಯಿಂದ
ಹೆಚ್ಚಿನ ಸಂಶೋಧನೆಗಳಿಗೆ ಅನುವು ಮಾಡಿಕೊಟ್ಟಂತಾಗುವದಲ್ಲದೆ ಮುಂದಿನ
ಆವೃತ್ತಿಯಲ್ಲಿ ಅದರ ಲೋಪದೋಷಗಳನ್ನು ತಿದ್ದಿ ಹೆಚ್ಚಿನ ಸಂಗತಿಗ
ಳನ್ನು ಸೇರ್ಪಡಿಸಲು ಅವಕಾಶವುಂಟಾಗುತ್ತದೆ. ಆದ್ದರಿಂದ ಈ ಕಾರ್ಯಕ್ಕೆ
ವಿಳಂಬ ಮಾಡುವದು ತಕ್ಕದ್ದಲ್ಲ.

ಹುಳಹತ್ತಿ ನಾಶಹೊಂದುತ್ತಿದ್ದ ತಾಡವಾಲೆಯ ಗ್ರಂಥಗಳನ್ನು
ಸಂಶೋಧಿಸಿ ರಾ|| ಬ|| ಹಳಕಟ್ಟಿಯವರು ವಚನಶಾಸ್ತ್ರದ ೧. ೨. ೩. ಭಾಗ
ಗಳನ್ನು ಪ್ರಕಟಿಸಿರುವರು. ಎಷ್ಟೋ ಶರಣರ ವಚನಗಳನ್ನು ಪ್ರತ್ಯೇಕ
ವಾಗಿ ಪ್ರಕಟಿಸಿರುವರು. ಅದಲ್ಲದೆ ವೀರಶೈವ ಮತತತ್ವಗಳನ್ನೊಳಕೊಂಡ
ಅನೇಕ ಶರಣರ ಜೀವನ ಚರಿತ್ರೆಗಳನ್ನು ಕೂಡ ಹೊರಗೆಡವಿದ್ದಾರೆ.
ಈ ವಚನಗಳ ಪ್ರಸಾರವು ನಾನಾ ಮುಖದಿಂದ ಸಮಾಜದಲ್ಲಿ ಆಗಿ
ಹೋಗಿದೆ. ಕಾವ್ಯ ಗಾಯನ, ನಾಟಕ, ವ್ಯಾಖ್ಯಾನ, ರೇಡಿಯೋ, ಪತ್ರ
ಪುಸ್ತಕ ಮುಂತಾದವುಗಳ ಮೂಲಕ ವಚನಗಳು ಪ್ರಸಾರವಾಗಿವೆ. ಅದ
ರಂತೆ ಅಕ್ಕನ ಬಳಗ, ಶಿವಾನುಭವ ಮಂಟಪ, ಬಸವ ಜಯಂತಿ ಮುಂತಾದ
ಉತ್ಸವಗಳಲ್ಲಿ ವಚನಗಳ ಬೆಳಕು ಹೊರಹೊಮ್ಮಿದೆ. ವಚನಗಳಲ್ಲಿ ಜೀವನ
ಕಳೆಯು ತುಂಬಿಕೊಂಡಿರುವದರಿಂದ ಅವು ನೇರವಾಗಿ ನಮ್ಮ ಹೃದಯಕ್ಕೆ
ನಾಟುತ್ತವೆ. ಆದ್ದರಿಂದ ಅವುಗಳ ನಿತ್ಯ ಪಠಣವೂ ಶ್ರವಣ ಮನನ
ನಿಧಿಧ್ಯಾಸಗಳೂ ನಮ್ಮ ಪ್ರಾಪಂಚಿಕ ಅಧ್ಯಾತ್ಮಿಕೋನ್ನತಿಗೆ ಯಥೇಷ್ಟ
ವಾಗಿ ಸಹಾಯ ಮಾಡುತ್ತವೆಂಬ ಮಾತು ನಿರ್ವಿವಾದವಾದದ್ದು.
ಆದಾಗ್ಯೂ ಎಲ್ಲಿ ನೋಡಿದಲ್ಲಿ ವಚನಗಳ ಕಿಂಚಿತ್ ಜ್ಞಾನವು ಮಾತ್ರ
ಕಂಡುಬರುತ್ತದಲ್ಲದೆ ಆಳವಾದ ಶಾಸ್ತ್ರೀಯ ಅಭ್ಯಾಸವು ಕಾಣುವದಿಲ್ಲ.
ವಚನತತ್ವಕ್ಕನುಸರಿಸಿ ಅಷ್ಟಾವರಣ; ಪಂಚಾಚಾರ, ಷಟ್‌ಸ್ಥಲಗಳನ್ನು
ವಿವರಿಸುವ ಸುಲಭ ಶೈಲಿಯ ಗ್ರಂಥಗಳಾವೂ ಇಲ್ಲವೇ ಇಲ್ಲ. ಪಂಡಿತ

ರಾರೂ ವಚನಗಳ ಆಳವಾದ ಅಭ್ಯಾಸ ಮಾಡಬೇಕೆಂದು ಮನಸ್ಸು ಮಾಡಿಲ್ಲ. ಸಾಮಾನ್ಯರಿಗಂತೂ ಅವು ತಿಳಿಯುವದಿಲ್ಲ. ಹೀಗಾಗಿ ವಚನಗಳ ಪರಿಸ್ಥಿತಿಯು ಇದ್ದಕ್ಕಿದ್ದಂತೆ ಮಲೆತು ಹೋಗಹತ್ತಿದೆ. ಈ ಯಾಂತ್ರಿಕ ಸ್ವರೂಪವು ಮುಂದೆ ತಲೆಬೇಸರಾಗಿ ವಚನ ವಾಙ್ಮಯವು ಕಣ್ಮರೆಯಾಗುವ ಸಂಭವವುಂಟು. ಆದುದರಿಂದ ಅಮೌಲ್ಯವಾದ ವಚನ ಭಾಂಡಾರವನ್ನು ಕಾಯ್ದುಕೊಳ್ಳುವ ಉತ್ತಮ ಉಪಾಯವೆಂದರೆ ಅವುಗಳೊಳಗೆ ಒದಗಿದ ತತ್ವಗಳನ್ನು ಅನುಭಾವಿಗಳು ವಿವರವಾಗಿ ವಿಮರ್ಶಿಸಬೇಕು. ಒಂದೇ ಒಂದು ಭಗವದ್ಗೀತೆಯ ಮೇಲೆ ಜ್ಞಾನೇಶ್ವರ, ಟಿಳಕ, ಗಾಂಧಿ ಮೊದಲಾದ ಮಹನೀಯರು ತಮ್ಮ ಅಗಾಧ ಬುದ್ಧಿ ಸಾಮರ್ಥ್ಯದಿಂದ ಟೀಕೆ ಟಿಪ್ಪಣಿಗಳನ್ನು ಬರೆದದ್ದರಿಂದಲೇ ಭಗವದ್ಗೀತೆಗೆ ಹೆಚ್ಚು ಮಹತ್ವಬಂದಿದೆ. ಅದೇ ರೀತಿಯಾಗಿ ವಚನಗಳ ಶಾಸ್ತ್ರಾನುಗುಣವಾದ ವಿಮರ್ಶಾತ್ಮಕ ಪ್ರತಿಪಾದನೆಯಿಂದ ವಚನಗಳ ಯೋಗ್ಯತೆಯೂ ಹೆಚ್ಚುತ್ತದೆ. ಗ್ರಂಥದ ಭಾಷೆಯು ಸುಲಭವಾದರೆ ವಾಚಕರ ಸಂಖ್ಯೆಯೂ ಬೆಳೆಯುತ್ತದೆ. ಕಾರಣ ವಚನಗಳ ಆಧಾರದಿಂದಾಗಲಿ, ಹಿಂದಿನ ಸಂಸ್ಕೃತ ಹಾಗೂ ಕನ್ನಡ ಧಾರ್ಮಿಕ ಗ್ರಂಥಗಳ ಸಹಾಯದಿಂದಾಗಲಿ ವೀರಶೈವ ಮತವನ್ನು ಪ್ರತಿಪಾದಿಸುವ ಒಂದು ಅಧಿಕೃತ ಗ್ರಂಥವನ್ನು ಅನುಭವಿಕರಾದ ಕೆಲವರು ಕಂಕಣಬದ್ಧರಾಗಿ ಪ್ರಕಟಿಸಬೇಕೆಂದು ಹಾರೈಸುತ್ತೇನೆ.

---

# ಶಿವಸ್ಮರಣೆ

( ಲೇಖಕ:- ಪ. ಗಂ. ಅಂಗಡಿ, ಸಂಗೊಳ್ಳಿ. )
"ಕನ್ನಡಕಾವ"

[ ಮುಂಜಾನೆ ಸ್ನಾನ-ಪೂಜೆ ಮಾಡಿಕೊಂಡು, ದಿನಂಪ್ರತಿ ದೇವರ ಗುಡಿಗಳಿಗೆ ಹೋಗುವ ರೂಢಿ ನನ್ನದು. ಇದುವಿಲ್ಲದಿದ್ದರೆ ಮನಕ್ಕೆ ಶಾಂತಿ ಇಲ್ಲ. ಪರಮಾತ್ಮನ ಧ್ಯಾನವೇ ನನ್ನ ಸರ್ವಸ್ವವು. ೭—೫—೫೩ನೆಯ ದಿವಸ ರಾತ್ರಿ ನನ್ನ ಕನಸಿನಲ್ಲಿ ಪರಮೇಶ್ವರನನ್ನು ಕಂಡಂತೆ ಆಯಿತು. ಆಗ ಅವನ ತೇಜಃಪುಂಜವಾದ ಚಿನುಮಯ ದಿವ್ಯ ಮೂರುತಿಯ ಜ್ಯೋತಿಯ ಬೆಳಕನು ಕಣ್ಣಾರೆ ಕಂಡೆನು. ಮನವು ತಣಿಯಿತು. ಎಚ್ಚರಾದೆನು. ಆದರೆ ಅವನ ಚಿನುಮಯ ದಿವ್ಯ ಮೂರುತಿ ಮೃಗಜಲದಂತೆ ಮಾಯವಾಯಿತು. "ಪರಮಾತ್ಮನೇ ನೀನೆಲ್ಲಿರುವೆಯಯ್ಯಾ ? ಸದಾ ಹುಡುಕುತಲಿರುವೆ ಗಡನೆ ಬಾರೋ ಷಡಗರದಿಂದ ಪೂಜಿಸುವೆ ಎಂದು ನಾನೊಂದುತಲಿರುವೆ!" ಆ ದಿವಸ ನನ್ನ ಮನವು ಅವನನ್ನು ಹಿಡಿಯಿತು. ಹಿಡಿದ ಮನವನ್ನು ಹಿಗ್ಗಿಸಲು ಬರೆದ "ಶಿವಸ್ಮರಣೆ" ಯು ಇದು. ]

— ಪ. ಗಂ. ಅಂಗಡಿ.

ರಾಗಃ- ಶಂಕರಾಭರಣ ಆದಿ ತಾಳ.

ಎಷ್ಟು ಬಣ್ಣಿಸಲಿ । ಎಷ್ಟು ಧ್ಯಾನಿಸಲಿ ।।
ನಿನ್ನ ದಿವ್ಯ ನಾಮವ ನಾನು ।। ಪಲ್ಲ ।।
ಹಗಲು ರಾತ್ರಿಯೆನ್ನದಲೆ ಭಜಿಸುತ ।
ಮಿಗೆ ತೋಷದಿ ನೆನೆವೆ ನಾನು ।೧।

ಎನ್ನ ಚಿನುಮಯ ದಿವ್ಯ ಮೂರುತಿ !
ನಿನ್ನ ದಿವ್ಯ ರೂಪವ ತೋರೋ ।।

ಕನಸು ಮನಸಿನಲಿ ನಿನ್ನ ಜ್ಯೋತಿಯು!
ಬಿಡದೆ ಸ್ಥಾಪಿಸಿ ಮಮ ದೇವಾ ॥ ೨ ॥

ಎಲ್ಲಿರುವಿಯೋ ನೀ ವಿಶ್ವದಾತನೇ !
ಬಲ್ಲಹ ನಿಜ ಭಕುತರ ತಾತಾ ॥
ಸೊಲ್ಲು ಸೊಲ್ಲು ನಿನ್ನಯ ನೆನಪು !
ತಲ್ಲಣಿಸುವ ತೈಜೋದಾತ್ಮ ಬಿಡದೆ ಸ್ಥಾಪಿಸಿ ಮಮದೇವಾ
॥ ೩ ॥

ಹುಡುಕುತಲಿರುವೆ ಗುಡಿ ಗುಂಡಾರದಿ !
ಮಿಡುಕಿ ಮಿಡುಕಿ ನಾ ದುಃಖಿಸುವೆ ॥
ಪೊಡವಿ ದಾತನೇ ಗಡನೆ ಬಾರೋ ನೀ!
ಸಡಗರದಾ ನಾಂ ಪೂಜಿಸುವೆ ॥ ೪ ॥

ಮಂದ ಮತಿಯು ನಾ ನೊಂದುತಲಿರುವೆ !
ಇಂದು ತಾಪ ನಂದಿಸೊ ದೇವಾ ॥
ಸುಂದರಾಂಗನೆ ಬಂಧುರ ದೇವಾ !
ಮುಂದು ಗಣೆನಾ ಸುಖದೇವಾ ॥ ೫ ॥

—ooOoo—

ಇಂಥ ಜಾರಿಣಿಯಾಗಿದ್ದರೆ ಬಸವೇಶ್ವರನ ಮತ್ತು ಅವಳ ಹೆಸರಿಗೆ ಕಲಂಕವು ಬರುತ್ತಿತ್ತು. ಅವಳು ಯಾವಾಗಲೂ ಶಿವಶರಣರೊಡನೆ ಇದ್ದು ಅವರ ಹೋರಾಟಗಳಲ್ಲಿ ಅಂಗವಹಿಸಿದ್ದಾಳೆ. ಅವಳು ಅವರನ್ನು ಬಿಟ್ಟು ಹೋರೆ ದಿಲ್ಲ. ಉಳಿವಿಯಲ್ಲಿ ಶಿವಶರಣರ ಅಂತ್ಯವಾದ ಬಳಿಕ ಸಹ ಅವಳು ಧೈರ್ಯ ಗೆಡದೆ ತರೀಕೆರೆ ಪ್ರಾಂತಕ್ಕೆ ಹೋಗಿ ಅಲ್ಲಿ ವೈರಿಗಳ ಕೂಡ ಹೋರಾಟ ನಡಿಸಲು ಸಿದ್ಧಳಾಗಿದ್ದಾಳೆ. ಇಂಥವಳ ಕೂಡ ಜೈನರು ವೈರಭಾವವನ್ನು ತಾಳುವದು ಸ್ವಾಭಾವಿಕವಾಗಿದೆ. ಆದ್ದರಿಂದ ಅವಳ ನೀತಿಗೆ ಭಂಗ ಬರು ವಂಥ ಕಥೆಗಳನ್ನು ಅವರು ಕಲ್ಪಿಸಿ ತಮ್ಮ ಗ್ರಂಥಗಳಲ್ಲಿ ಹಾಕಿದ್ದಾರೆ.

**ಪದ್ಮಾವತಿ:—** ಬಸವೇಶ್ವರನಿಗೆ ಪದ್ಮಾವತಿ ಎಂಬ ಹೆಸರಿನ ತಂಗಿ ಯೊಬ್ಬಳಿದ್ದಳೆಂದು ಜೈನರು ತಮ್ಮ ಗ್ರಂಥಗಳಲ್ಲಿ ಉಲ್ಲೇಖಿಸುವದುಂಟು. ಆದರೆ ಅವನಿಗೆ ಪದ್ಮಾವತಿ ಎಂಬ ತಂಗಿ ಇದ್ದುದು ಶಿವಶರಣರ ಯಾವ ಗ್ರಂಥದಲ್ಲಿಯೂ ಬಂದಿರುವದಿಲ್ಲ. ಈಕೆಯು ಒಬ್ಬ ಕಾಲ್ಪನಿಕ ಸ್ತ್ರೀಯೇ ಹೊರ್ತು ಬೇರೊಂದಿಲ್ಲ. ಜೈನರ ಒಂದು ಗ್ರಂಥದಲ್ಲಿ ಇವಳು ಸುಂದರ ಸ್ತ್ರೀಯಳಾದ್ದರಿಂದ ಇವಳನ್ನು ಬಿಜ್ಜಳನು ಲಗ್ನವಾದನೆಂದು ಹೇಳಿದೆ. ಆದರೆ ಇವಳು ಇಟ್ಟುಕೊಂಡ ಸ್ತ್ರೀಯಳೆಂದು ಅದರಲ್ಲಿ ಇಲ್ಲ. ಆದರೂ ಬೇರೆ ಗ್ರಂಥಗಳಲ್ಲಿ ಒಟ್ಟಿಗೆ ಜೈನ ಗ್ರಂಥಕಾರರಲ್ಲಿ ಈ ಬಗ್ಗೆ ಏಕಾಭಿಪ್ರಾಯವಿಲ್ಲ. ಹೀಗೆ ವಿವರಿಸಿದ ಅಸತ್ಯ ಸಂಗತಿಗಳನ್ನು ನಮ್ಮ ಆಧುನಿಕ ಇತಿಹಾಸ ಜ್ಞರು ನಂಬಿ ತಮ್ಮ ಗ್ರಂಥಗಳಲ್ಲಿ ಉಲ್ಲೇಖಿಸುವದು ಅತ್ಯಂತ ಖೇದಕ ರವಾಗಿರುತ್ತದೆ.

ಕೆಲವು ಜೈನ ಗ್ರಂಥಕಾರರು ಬಿಜ್ಜಳನಿಗೆ ನೀಲಾಂಬಿಕೆ ಎಂಬ ತಂಗಿಯು ಇದ್ದು ಅವಳನ್ನು ಅವನು ಬಸವೇಶ್ವರನಿಗೆ ಕೊಟ್ಟು ಲಗ್ನ ಮಾಡಿದನೆಂದು ಹೇಳಿದ್ದಾರೆ. ಈಕೆಯು ಸಿದ್ದಣ್ಣ ಮಂತ್ರಿಯ ಮಗಳಾದ ನೀಲಾಂಬಿಕೆಯು. ಆದರೆ ಅವಳು ಬಿಜ್ಜಳನ ತಂಗಿಯಾಗಿರದೆ ಅವಳೂ ಬಿಜ್ಜಳನೂ ಚಿಕ್ಕಂದಿ ನಿಂದ ಕೂಡಿ ಬೆಳೆದವರಿದ್ದರೆಂದು ವೀರಶೈವ ಗ್ರಂಥಗಳಲ್ಲಿ ಉಲ್ಲೇಖಗಳಿವೆ. ಈ ವಿಷಯವನ್ನು ಕುರಿತು ನೀಲಾಂಬಿಕೆಯ ಚರಿತ್ರೆಯಲ್ಲಿ ನಾವು ಸವಿಸ್ತಾ ರವಾಗಿ ನಿರೂಪಿಸಿದ್ದೇವೆ. ಅವಳು ಬಿಜ್ಜಳನ ತಂಗಿಯಾಗಿರುವದಿಲ್ಲ.

ಜೈನ ಗ್ರಂಥಕಾರರು ಬಸವೇಶ್ವರನ ಹೆಸರಿಗೆ ಕುಂದು ತರುವ ಉದ್ದೇಶ ದಿಂದ ಅವನ ನೈತಿಕ ನಡೆಗಳ ಬಗ್ಗೆ ಈ ತೆರದ ಅನೇಕ ಆರೋಪಗಳನ್ನು

ಮಾಡಿದ್ದುಂಟು. ಅವುಗಳನ್ನು ನಾವು ಬಸವೇಶ್ವರನ ಚರಿತ್ರೆಯಲ್ಲಿ ಹೆಚ್ಚಿಗೆ ಚರ್ಚಿಸುವೆವು.

ಈ ವರೆಗೆ ನಾವು ಚನ್ನಬಸವ, ನೀಲಾಂಬಿಕೆ, ನಾಗಲಾಂಬಿಕೆ ಇವರ ಚರಿತ್ರೆಗಳ ವಿಷಯವಾಗಿ ಹೇಳಬೇಕಾದುದರಿಂದ ಅವರ ಬಗ್ಗೆ ಮಾತ್ರ ಜೈನಗ್ರಂಥಕಾರರು ನುಡಿದ ಅಸತ್ಯ ಸಂಗತಿಗಳನ್ನು ನಾವು ಇಲ್ಲಿ ಉಲ್ಲೇಖಿಸಿದ್ದೇವೆ.

---

## ರುದ್ರಮುನಿ.

ರುದ್ರ ಮುನಿಯು ವೀರಶೈವ ಮಹಾಪುರುಷರಲ್ಲಿ ಒಬ್ಬನಾಗಿದ್ದಾನೆ. ವೀರಶೈವ ಸಮಾಜಕ್ಕೆ ವಿಪತ್ಕಾಲವು ಬಂದ ಕಾಲದಲ್ಲಿ ಅವನು ಮುಂದು ವರಿದು ಅವರಿಗೆ ಯೋಗ್ಯ ಮಾರ್ಗವನ್ನು ತೋರಿಸಿದ್ದಾನೆ. ಯಾವಾಗ್ಗೆ ಶಿವಶರಣರಿಗೆ ವಿರೋಧಿಗಳ ಸಂಖ್ಯೆಯು ಹೆಚ್ಚಾಗಿ ಅವರಿಗೆ ಉಳಿಗಾಲವು ಅಸಂಭವವಾಗಿ ತೋರಹತ್ತಿತೋ, ಆಗ ರುದ್ರಮುನಿಯು ಮುಂದುವರಿದು ಅವರೆಲ್ಲರಲ್ಲಿ ಒಗ್ಗಟ್ಟನ್ನು ಹುಟ್ಟಿಸಿ ಅವರು ಸ್ವಾವಲಂಬಿಗಳಾಗಲು ಪ್ರಯತ್ನಿಸಿದನು. ಬಸವೇಶ್ವರನು ಕೂಡಲ ಸಂಗಮಕ್ಕೆ ತೆರಳಿದ ಬಳಿಕ ಶಿವಶರಣರಿಗೆ ಅತ್ಯಂತ ಕಠಿಣ ಕಾಲವು ಪ್ರಾಪ್ತವಾಯಿತು. ಒಂದು ಕಡೆಗೆ ಬಲಾಢ್ಯನಾದ ಬಿಜ್ಜಳನು ರಾಜ್ಯಪದಾರೂಢನಾಗಿದ್ದನು. ಮತ್ತೊಂದು ಕಡೆಗೆ ಅಲ್ಪಸಂಖ್ಯಾಕರಾದ ಶಿವಶರಣರು. ದುರ್ಬಲರು. ಹೀಗೆ ಪರಿಸ್ಥಿತಿಯು ಉಂಟಾಗಿತ್ತು. ಹರಳಯ್ಯ ಮಧುವಯ್ಯಗಳು ಘಾತಿಸಲ್ಪಟ್ಟಬಳಿಕ ಶಿವಶರಣರಿಗೆ ತಮ್ಮ ಷಟ್‌ಸ್ಥಲ ಮಾರ್ಗದಂತೆ ನಡೆಯುವದು ಕಠಿಣವಾಗಹತ್ತಿತು. ಇಂಥ ಸಮಯದಲ್ಲಿ ಬಸವೇಶ್ವರನು ಶಿವಶರಣರಿಗೆ ಕಲ್ಯಾಣ ರಾಜ್ಯದಲ್ಲಿ ನಿಮ್ಮ ಧರ್ಮದಂತೆ ನಡೆಯುವದು ಶಕ್ಯವಿಲ್ಲ, ನೀವು ಗುಹೆ ಗಂಹರಗಳಿಗೂ ಅರಣ್ಯ ಪ್ರದೇಶಗಳಿಗೂ ಹೋಗಿ ವಾಸಿಸಿರಿ, ಎಂದು ತನ್ನ ಸಂದೇಶವನ್ನು ಪ್ರಕಟಿಸಿ ತಾನು ಕೂಡಲ ಸಂಗಮಕ್ಕೆ ತೆರಳಿದನು. ಇದು ಎಂಥಬಿಕ್ಕಟ್ಟಿನ ಸಮಯವೆಂಬುದನ್ನು ವಾಚಕರು ಊಹಿಸತಕ್ಕದ್ದು. ಆಗ ರುದ್ರಮುನಿಯು ಮುಂದುವರಿದು ತನ್ನ ಗ್ರಾಮವಾದ ಮಂಗಳವಾಡವನ್ನು ಬಿಟ್ಟು ಕಲ್ಯಾಣಕ್ಕೆ

ಬಂದು ವಾಸಿಸುವವನಾದನು. ನಿರಾಶಾಭರಿತರಾದ ಶಿವಶರಣರಿಗೆ ಪ್ರೋತ್ಸಾಹ ವನ್ನಿತ್ತನು. ಇದರಲ್ಲಿ ಅವನಿಗೆ ಚನ್ನ ಬಸವ, ಮಡಿವಾಳ ಮಾಚಿದೇವ, ಇವರು ತಮ್ಮ ಸಹಾಯವನ್ನಿತ್ತರು. ರುದ್ರಮುನಿಯು ಅವರನ್ನೊಡಗೊಂಡು ಶಿವಶರಣರಿಗೆ ಉತ್ತೇಜನ ಕೊಟ್ಟು ಅವರನ್ನು ಹುರಿದುಂಬಿಸಿದನು. ಈ ಮೂವರು ಮುಂದೆ ಶಿವಶರಣರು ಕಲ್ಯಾಣವನ್ನು ಬಿಟ್ಟು ಶ್ರೀಶೈಲಕ್ಕಾಗಲಿ ಇಲ್ಲವೆ ಉಳಿವಿಯ ಅರಣ್ಯಕ್ಕಾಗಲಿ ಹೋಗಬೇಕೆಂದು ಉಪದೇಶಿಸಿದರು. ಶ್ರೀಶೈಲ ಪರ್ವತವು ಕಲ್ಯಾಣದಿಂದ ಬಹಳ ದೂರದಲ್ಲಿದೆ. ಆದ್ದರಿಂದ ಇತ್ತ ಕಡೆಗೆ ಹೋಗುವದು ಶಿವಶರಣರಿಗೆ ಹೆಚ್ಚಿಗೆ ಸುರಕ್ಷಿತವೆನಿಸಿತು. ಅಲ್ಲಮ ಪ್ರಭುವು ಮಹಾದೇವಿ ಅಕ್ಕಗಳು ಅಸಂಖ್ಯ ಶಿವಶರಣರನ್ನು ಕೂಡಿಕೊಂಡು ಈ ಕಡೆಗೆ ತೆರಳಿದರು. ಆದರೆ ಗಟ್ಟಿಗರೂ ಯೋದ್ಧರೂ ಶಕ್ತಿಸಾಹಸವುಳ್ಳ ವರೂ ಆದ ಶಿವಶರಣರು ಉಳಿವಿಯ ಪ್ರದೇಶದ ಕಡೆಗೆ ತೆರಳಿದರು. ಬನವಾಸಿ ಪ್ರಾಂತವು ಚಾಲುಕ್ಯರ ರಾಜ್ಯದಲ್ಲಿ ಮುಖ್ಯವಾಗಿತ್ತು. ಇಲ್ಲಿ ಅವರ ಒಬ್ಬ ಮಹಾ ಮಾಂಡಲಿಕನು ಯಾವಾಗಲೂ ಇದ್ದುಕೊಂಡು ರಾಜ್ಯ ವಾಳುತ್ತಿದ್ದನು. ಬನವಾಸಿ ನಾಡು ಹೊಯ್ಸಳ ರಾಜ್ಯದ ಮಗ್ಗುಲಲ್ಲಿದ್ದು ಉಳವಿಯ ಪ್ರದೇಶವು ಇಲ್ಲಿಗೆ ಸಮೀಪದಲ್ಲಿ ಇರುತ್ತದೆ. ಶಿವಶರಣರು ಈ ಸ್ಥಲದಲ್ಲಿ ಕೆಲವುಕಾಲ ಕಾದುಕೊಂಡಿದ್ದು ಯೋಗ್ಯ ಸಮಯವು ಕಂಡಕೂ ಡಲೇ ಬಿಜ್ಜಳನ ರಾಜ್ಯದಲ್ಲಿ ನುಗ್ಗಲು ಅನುಕೂಲವಾಗಿತ್ತು. ಆದ್ದರಿಂದ ಯುದ್ಧ ಸಮರ್ಥರಾದ ಶಿವಶರಣರಲ್ಲಿ ಬಹುಜನರು ಈ ಪ್ರಾಂತದ ಕಡೆಗೆ ಹೋಗಲು ಉದ್ಯುಕ್ತರಾದರು.

ರುದ್ರಮುನಿಯು ರೇವಣಸಿದ್ಧೇಶ್ವರನ ಮಗನಾಗಿದ್ದನು. ಅವನ ಆರಂಭದ ಜೀವನ ಚರಿತ್ರೆಯು ಅತ್ಯಂತ ಮಹತ್ವದ್ದಾಗಿದೆ. ಇದನ್ನು ನಾವು ಇಲ್ಲಿ ಮೊದಲು ವಿವರಿಸುವದು ಅವಶ್ಯವಾಗಿದೆ.

ರೇವಣಸಿದ್ಧೇಶ್ವರನು ಹೈದ್ರಾಬಾದ ಸಂಸ್ಥಾನದಲ್ಲಿ ಹೈದ್ರಾಬಾದ-ವರಂಗಲ್ಲಿಗೆ ಹೋಗುವ ರೇಲ್ವೆ ಮಾರ್ಗದ ಮೇಲಿರುವ ಏಳೇರು ಎಂಬ ಸ್ಟೇಶನ್ನಿಗೆ ಸಮೀಪವಾಗಿರುತ್ತದೆ. ಇದು ಆಂಧ್ರ ದೇಶವಾಗಿರುತ್ತದೆ. ಇಲ್ಲಿ ಸೋಮೇಶ್ವರ ದೇವಾಲಯವು ಬಹು ಪ್ರಸಿದ್ಧವಾದದ್ದು. ಈ ಸೋಮೇಶ್ವರ ಲಿಂಗದಲ್ಲಿ ರೇವಣಸಿದ್ಧೇಶ್ವರನು ಉದ್ಭವಿಸಿದನೆಂದು ವೀರಶೈವ ಪುರಾಣ ಗಳಲ್ಲಿ ವರ್ಣನೆ ಇರುತ್ತದೆ. ಈ ಪಟ್ಟಣವು ಪುರಾತನ ಕಾಲದಿಂದಲೂ ಶೈವಮಾರ್ಗಿಗಳ ಆವಾಸ ಸ್ಥಾನವಾಗಿತ್ತು.

ರೇವಣ ಸಿದ್ಧೇಶ್ವರನು ೧೨ನೇ ಶತಮಾನದ ಆದಿ ಭಾಗದಲ್ಲಿ ಪ್ರಸಿದ್ಧಿಗೆ ಬಂದನು. ಇಷ್ಟರಲ್ಲಿ ವೀರಶೈವ ಮಾರ್ಗವನ್ನು ಪ್ರಚುರಕ್ಕೆ ತಂದ ದಾಸಿ ಮಯ್ಯನು ಪೊಟ್ಟಲ ಕೆರೆಯಲ್ಲಿ ಪ್ರಸಿದ್ಧಿಗೆ ಬಂದು ಮುಂದೆ ಅವನು ಶಿವ ಶರಣರ ತತ್ವಗಳನ್ನು ಪ್ರಚಾರ ಮಾಡುತ್ತ ತನ್ನ ಗ್ರಾಮವಾದ ಮುದನೂ ರಿಗೆ ಬಂದು ವಾಸಮಾಡಹತ್ತಿದ್ದನು. ಇವನು ನಡಿಸಿದ ಧರ್ಮ ಜಾಗ್ರತಿಯು ಮೂಲಕ ಶಿವಶರಣರ ವಿಚಾರಗಳು ಮಂಗಳವಾಡಿನಲ್ಲಿ ಪ್ರಸಾರವಾಗುತ್ತಲೇ ಬಂದವು. ಈ ಭಾಗದಲ್ಲಿ ಅನೇಕ ಶಿವಶರಣರು ಅಲ್ಲಲ್ಲಿ ಉದಯವಾದರು. ಇವರು ಸೊನ್ನಲಿಗೆಯು ಸಿದ್ಧರಾಮ, ಹಿಪ್ಪರಿಗೆಯ ಮಾಚಿದೇವ, ಕೆಂಭಾವಿಯ ಭೋಗಣ್ಣ, ಚಿಮ್ಮಲಿಗೆಯ ಚನ್ನರಾಮ ಮುಂತಾದವರಿದ್ದು ಇವರು ಶಿವಶರಣರ ತತ್ವಗಳನ್ನು ವಚನಗಳ ಮೂಲಕ ಪ್ರಸಾರ ಮಾಡುತ್ತ ಬಂದರು. ರೇವಣ ಸಿದ್ಧೇಶ್ವರನು ಇಲ್ಲಿ ನಡೆದ ಈ ಚಟುವಟಿಕೆಗಳನ್ನು ತಿಳಿದು ಅವನು ತರ್ದೆವಾಡಿ ಪ್ರಾಂತಕ್ಕೆ ಬಂದು ಮಂಗಳವಾಡದಲ್ಲಿ ಇರಹತ್ತಿದನು.

ಇಷ್ಟರಲ್ಲಿ ರೇವಣಸಿದ್ಧೇಶ್ವರನು ಜ್ಞಾನಿಯೂ ಉಚ್ಚ ಸಿದ್ಧ ಪುರುಷನೂ ಎಂದು ನಾಡಿನಲ್ಲಿ ಪ್ರಸಿದ್ಧನಾಗಿದ್ದನು. ಅವನು ಇಲ್ಲಿಗೆ ಬಂದ ಬಳಿಕ ಅವನು ಪೂರ್ಣವಾಗಿ ವೀರಶೈವ ಮತಾವಲಂಬಿಯಾಗಿರಬೇಕೆಂದು ತೋರು ತ್ತದೆ. ಅವನು ತರ್ದೆವಾಡಿ ಪ್ರಾಂತ ಎಂದರೆ ಈಗಿನ ವಿಜಾಪುರ ಜಿಲ್ಹೆಯ ಉತ್ತರ ಭಾಗದಲ್ಲಿ ಹೊತ್ತಿ, ಇಂಗಳೇಶ್ವರ ಈ ಸ್ಥಳಗಳಲ್ಲದೆ ಪಶ್ಚಿಮಕ್ಕೆ ಸಾತಾರಾ ಜಿಲ್ಹೆಯಲ್ಲಿ ಅನೇಕ ಸ್ಥಳಗಳಲ್ಲಿ ಸಂಚರಿಸಿದ ಕುರುಹುಗಳು ಅಂದರೆ ಅವನ ಹೆಸರಿನ ದೇವಾಲಯಗಳೂ ಸ್ಥಾನಗಳೂ ಈಗಲೂ ಇಲ್ಲಿ ದೊರಕುತ್ತವೆ.

ಈ ಕಾಲದಲ್ಲಿ ಕಲಚೂರ್ಯರ ಬಿಜ್ಜಳ ರಾಜನು ಮಂಗಳವಾಡದ ಪ್ರದೇಶವನ್ನು ಚಾಲುಕ್ಯರ ಮಾಂಡಲಿಕನಾಗಿ ಆಳುತ್ತಿದ್ದನು. ರೇವಣಸಿದ್ಧೇಶ್ವರನು ಬಿಜ್ಜಳನ ಪ್ರೀತಿ ವಿಶ್ವಾಸವನ್ನು ಹೊಂದಿದವನಾಗಿ ಅವನ ಆಸ್ಥಾನ ದಲ್ಲಿರುತ್ತಿದ್ದನು. ಇದರಿಂದ ಅವನ ಕೀರ್ತಿಯು ನಾಡಿನಲ್ಲಿ ವೃದ್ಧಿಂಗತ ವಾಗಹತ್ತಿತು. ಮುಂದೆ ಅವನು ಪರದೇಶ ಪ್ರವಾಸವನ್ನು ಕೈಕೊಳ್ಳುವವ ನಾದನು. ಅವನು ಮೊದಲು ಸಾತಾರಾ ಜಿಲ್ಹೆಯಲ್ಲಿರುವ ರೇಣಾವಿ ಎಂಬ ಗ್ರಾಮದಲ್ಲಿ ಕೆಲಕಾಲವಿದ್ದು ಮುಂದೆ ಬೆಳಗಾವ ಜಿಲ್ಹೆಯಲ್ಲಿರುವ ಬೆಲ್ಲದ ಬಾಗೇವಾಡಿಯ ಸಮೀಪದಲ್ಲಿ ತಪಸ್ಸನ್ನಾಚರಿಸಿ ಆಮೇಲೆ ಹಾವೇರಿ ತಾಲೂ ಕಿನಲ್ಲಿ ಬನವಾಸಿಗೆ ಸಮೀಪವಾಗಿ ಕೆಲವು ಕಾಲ ಕಳೆದು ಆಮೇಲೆ ಅವನು

ಚೋಳ ರಾಜ್ಯವನ್ನು ಪ್ರವೇಶಿಸಿ ಕಾಂಚೀಪಟ್ಟಣದ ರಾಜನಾದ ಸತ್ಯೇಂದ್ರ ಚೋಳನ ಆಶ್ರಯದಲ್ಲಿರಹತ್ತಿದನು. ಆಗ ಅವನು ರಾಜನ ಕನ್ನಿಕೆಯಾದ ಮಹಾದೇವಿ ಎಂಬುವಳನ್ನು ಲಗ್ನವಾಗಿ ಅವಳನ್ನು ಕರೆದುಕೊಂಡು ಮಂಗಳ ವಾಡಕ್ಕೆ ಬಂದು ಇರಹತ್ತಿದನು.

ಇಷ್ಟರಲ್ಲಿ ರೇವಣ ಸಿದ್ಧೇಶ್ವರನು ಮಹಿಮಾಶಾಲಿಯೆಂದು ದೇಶದಲ್ಲಿ ಪ್ರಸಿದ್ಧಿಯನ್ನು ಹೊಂದಲು ಅವನಿಗೆ ಬಹುಜನರು ತಮ್ಮ ಕನ್ನಿಕೆಯರನ್ನು ಕೊಟ್ಟು ಲಗ್ನ ಮಾಡಿದರು. ರೇವಣಸಿದ್ಧೇಶ್ವರನು ತನ್ನ ಎಲ್ಲ ಹೆಂಡಂದಿ ರನ್ನು ಕರೆದುಕೊಂಡು ಮಂಗಳವಾಡದಿಂದ ಅನತಿ ದೂರದಲ್ಲಿದ್ದ ಮಾಸನೂರು ಎಂಬ ಗ್ರಾಮಕ್ಕೆ ಬಂದು ಆದರ ಸಮೀಪದಲ್ಲಿರುವ ಕೆಲವೊಂದು ಬಯಲು ಪ್ರದೇಶದಲ್ಲಿ ಕೆರೆಯನ್ನು ಕಟ್ಟಿಸಬೇಕೆಂದು ಆಲೋಚಿಸಿ ಬಹುಜನರನ್ನು ಇಲ್ಲಿ ನಿಯೋಜಿಸಿದನು. ಇವರಲ್ಲಿ ಅವನ ಹೆಂಡತಿಯಾದ ಚೋಳರಾಜನ ಪುತ್ರಿಯೂ ಇದ್ದಳು. ಅವಳು ಕೆರೆಗೆ ಮಣ್ಣನ್ನು ಹೊರಲಾರದೆ ತನ್ನ ತವರೂರಿಗೆ ಹೋಗುವೆನೆಂದು ತನ್ನ ಪತಿಗೆ ಹೇಳಲು ರೇವಣಸಿದ್ಧನು ತನ್ನ ವಸ್ತುವನ್ನು ಕೊಟ್ಟು ಹೋಗೆಂದು ಅವಳಿಗೆ ತಿಳಿಸಿದನು. ಆಗ ಅವಳು ಕೂಡಲೆ ತನ್ನ ಚಳ್ಳುಗುರಿನಿಂದ ತನ್ನ ಉದರವನ್ನು ಸೀಳಿ ಒಳಗಿದ್ದ ಶಿಸು ವನ್ನು ಕೊಟ್ಟು ಹೋಗಲು ರೇವಣಸಿದ್ಧನು ಆ ಶಿಸುವನ್ನು ಹೊಸಪಡುಗ ದಲ್ಲಿ ಇಟ್ಟು ಅದನ್ನು ಕೆರೆಯ ಏರಿಯಲ್ಲಿ ಭೂಗತ ಮಾಡಲು ಆ ಶಿಸುವು ಮೂರು ತಿಂಗಳು ತಾಯಿಯ ಗರ್ಭದಲ್ಲಿ ಆರು ತಿಂಗಳು ಭೂಮಿಯಲ್ಲಿ ಇದ್ದಿತು. ಹೀಗೆ ಅದಕ್ಕೆ ನವಮಾಸ ತುಂಬಲು ಸಿಡಿಲಿನಂತೆ ಭೂಮಿಯು ಗರ್ಜಿಸಿ ಇಬ್ಭಾಗವಾಗಲು ಆ ಪಡುಗ ಒಡೆದು ಅದರ ಕಂಠ ಶಿಸುವಿನ ಕೊರಳಲ್ಲಿ ಸಿಕ್ಕಲು ಆ ಕಂಠವನ್ನು ಧರಿಸಿಕೊಂಡು ಅದು ಹೊರಗೆ ಬರಲು ಆ ಶಿಸುವು ಭಸ್ಮ, ರುದ್ರಾಕ್ಷಿ, ಲಿಂಗಧಾರಣ ಸಹಿತವಾಗಿ ಹೊರಗೆ ಬಂದುದನ್ನು ರೇವಣಸಿದ್ಧನು ನೋಡಿ ಪರಮ ಸಂತೋಷಿತನಾಗಿ ಈ ಶಿಸುವು ಅನಾದಿ ಜಂಗಮ ರೂಪವೆಂದು ತಿಳಿದು ಅದಕ್ಕೆ ರುದ್ರ ಮುನಿ ಎಂಬ ನಾಮವನ್ನು ಕೊಟ್ಟು ಸಂರಕ್ಷಿಸಿದನು.

ಹೀಗೆ ಐತಿಹ್ಯವಿದ್ದು ಇದರ ಮೇಲಿಂದ ರುದ್ರ ಮುನಿಯು ಅಸಾಧಾ ರಣ ರೀತಿಯಿಂದ ಜನಿಸಿದನೆಂದು ಪುರಾಣಕರ್ತರು ಹೇಳುವಲ್ಲಿ ಇದು ಅವನ ಭಾವೀ ಮಹತ್ವಪೂರ್ಣ ಜೀವನದ ದ್ಯೋತಕವೆಂದು ಹೇಳುವದೇ ಅವರ ಉದ್ದೇಶವಾಗಿರಬೇಕು.

ರೇವಣಸಿದ್ಧೇಶ್ವರನು ಕಟ್ಟಿಸಿದ ಕೆರೆಯು ಭೀಮಾ ನದಿಗೆ ಸಮೀಪವಾಗಿದೆ. ಈಗಲೂ ಅಲ್ಲಿ ಸಿದ್ಧನಕೆರೆ ಎಂಬ ಗ್ರಾಮವಿದ್ದು ಅದರ ನೆರೆಯಲ್ಲಿ ಅದು ಪ್ರಸಿದ್ಧವಾಗಿದೆ. ಇಲ್ಲಿ ರೇವಣಸಿದ್ಧನ ದೇವಾಲಯವಿದ್ದುದರಿಂದ ಈ ಸ್ಥಳದಲ್ಲಿ ಅವನು ಕೆಲಕಾಲ ವಾಸಿಸಿರಬಹುದು. ಅದರಂತೆಯೇ ರೇವಣಸಿದ್ಧೇಶ್ವರನ ದೇವಾಲಯವು ಮಂಗಳವಾಡದಲ್ಲಿಯೂ ಇದ್ದುದರಿಂದ ಇಲ್ಲಿಯೂ ಅವನು ವಾಸಿಸಿರಬಹುದು.

ರೇವಣಸಿದ್ಧೇಶ್ವರನು ಇಲ್ಲಿ ತನ್ನ ಕುಟುಂಬದವರೊಡನೆ ಇದ್ದುಕೊಂಡು ರುದ್ರ ಮುನಿಗೆ ವಿದ್ಯಾಭ್ಯಾಸವನ್ನೂ ವೀರಶೈವ ಮತಾಚಾರ ಶೀಲಗಳನ್ನೂ ತಿಳಿಸಿ ಕೊಟ್ಟು ಅವನನ್ನು ವೀರಶೈವ ಮತಕ್ಕೆ ಮುಖ್ಯ ಗುರುವನ್ನಾಗಿ ಮಾಡಿದನೆಂದು ಗ್ರಂಥಗಳಿಂದ ತಿಳಿಯುತ್ತದೆ. ಶಿವಶರಣನೂ ವಚನಕಾರನೂ ಆದ ಹಾವಿನಹಾಳ ಕಲ್ಲಯ್ಯನು ಇದ್ದ ಸ್ಥಳ ಹಾವಿನಹಾಳ ಗ್ರಾಮವು ಮಂಗಳವಾಡದಿಂದ ೩೦ ಮೈಲುಗಳ ಮೇಲಿದ್ದು ರೇವಣಸಿದ್ಧನ ಅಪ್ಪಣೆಯಿಂದ ಅವನಿಗೆ ರುದ್ರಮುನಿಯು ವೀರಶೈವೋಪದೇಶವನ್ನು ಮಾಡಿದನೆಂದು ಮಹಾ ಕವಿ ಹರಿಹರನು ತನ್ನ ರಗಳೆಯಲ್ಲಿ ಹೇಳುತ್ತಾನೆ. ಇದರ ಮೇಲಿಂದ ರುದ್ರಮುನಿಯು ರೇವಣಸಿದ್ಧನ ಆಜ್ಞೆಯ ಪ್ರಕಾರ ವೀರಶೈವ ಧರ್ಮ ಪ್ರಸಾರ ಕಾರ್ಯವನ್ನು ಕೈಕೊಂಡಿರಬೇಕೆಂದು ತೋರುತ್ತದೆ.

ರೇವಣಸಿದ್ಧೇಶ್ವರನು ಮಂಗಳವಾಡದಲ್ಲಿ ಕೆಲಕಾಲ ಕಳೆದು ಅವನು ಉತ್ತರ ಕರ್ನಾಟಕ ಮತ್ತು ಮೈಸೂರು ಪ್ರಾಂತವನ್ನು ಸಂಚರಿಸಿದನು. ಅವನು ಮೈಸೂರು ಪ್ರಾಂತದಲ್ಲಿ ಕೋಲಸಪೇಟೆಯಲ್ಲಿದ್ದಾಗ್ಗೆ ಅವನೊಡನೆ ರುದ್ರಮುನಿಯು ಸಹ ಇದ್ದುದರಿಂದ ರುದ್ರಮುನಿಯ ದೇವಾಲಯವು ಈ ಸ್ಥಳದಲ್ಲಿ ಉಂಟಾಗಿರುತ್ತದೆ. ಆದರೆ ರುದ್ರ ಮುನಿಯು ದೇಶದಲ್ಲಿ ಹೆಚ್ಚಾಗಿ ಸಂಚಾರ ಮಾಡಿದಂತೆ ತೋರುವದಿಲ್ಲ. ಅವನು ತರ್ದೆವಾಡಿನಲ್ಲಿಯೇ ಇದ್ದುಕೊಂಡು ವೀರಶೈವ ಪರಮ ಗುರುವೆಂದೆನಿಸಿಕೊಂಡು ಜ್ಞಾನಿಯೂ ಅನುಭಾವಿಯೂ ಆಗಿ ಧರ್ಮೋದ್ಧಾರ, ಸಮಾಜೋದ್ಧಾರ ಕಾರ್ಯಗಳನ್ನು ಮಾಡುತ್ತ ಕಾಲ ಕಳೆದನು. ಅವನ ಈ ಉಚ್ಚ ವೃತ್ತಿಯ ಮೂಲಕ ನಾಡಿನಲ್ಲಿ ಅವನು ವರ್ಚಸ್ಸುಳ್ಳವನೂ ಖ್ಯಾತಿವಂತನೂ ಆದನು.

ಇದೇ ಕಾಲದಲ್ಲಿ ಬಸವೇಶ್ವರನು ಪ್ರಬಲನಾಗಿ ವೀರಶೈವ ಷಟ್‌ಸ್ಥಲ ಸ್ಥಾಪನಾಚಾರ್ಯನೆನಿಸಿಕೊಂಡು ಮೊದಲು ಕೂಡಲಸಂಗಮದಲ್ಲಿ, ಆಮೇಲೆ

ಮಂಗಳವಾಡದಲ್ಲಿ ಕಾಲಕಳೆದು, ಪುನಃ ಸಂಗಮಕ್ಷೇತ್ರಕ್ಕೆ ಬಂದು ಅಲ್ಲಿ ಬಹುಕಾಲ ವಾಸಿಸಿದನು. ಮುಂದೆ ಬಲದೇವ ಮಂತ್ರಿಯ ಕರೆಯು ಬರಲಾಗಿ ಅವನು ಕಲ್ಯಾಣ ಪಟ್ಟಣಕ್ಕೆ ಆಗಮಿಸಿ ಅಲ್ಲಿ ಶಿವಾನುಭವ ಮಂಟಪವನ್ನು ರಚಿಸಿ ತ್ರಿಲಿಂಗಗಳ ರೀತಿಯನ್ನು ಜನತೆಯಲ್ಲಿ ಪಸರಿಸುವವನಾದನು. ಆದರೆ ಈ ಕಾಲದಲ್ಲಿ ರುದ್ರಮುನಿಯು ಅವನ ಕೂಡ ಸದಾಕಾಲ ಇರದೆ ಅವನು ಕಲ್ಯಾಣಕ್ಕೆ ಬಂದ ಕಾಲದಲ್ಲಿ ತನ್ನ ವಾಸಕ್ಕೆ ಯೋಗ್ಯವಾದ ಒಂದು ಮಂಟಪವನ್ನು ರಚಿಸಿಕೊಂಡು ಅಲ್ಲಿ ಇರುತ್ತಿದ್ದನು. ಇದಕ್ಕೆ ಚೆಂಗಿಣಿಗಿಲು ಮಂಟಪವೆಂಬ ಹೆಸರು ಇದೆ. ಇದು ಈ ಮಹಾಪುರುಷನ ಸ್ಥಾನವೆಂದು ತಿಳಿದು ಅದನ್ನು ಜನರು ಯಾವಾಗಲೂ ಪೂಜ್ಯತೆಯಿಂದಲೂ ಭಕ್ತಿವಿಶ್ವಾಸಗಳಿಂದಲೂ ಕಾಣುತ್ತ ಬಂದಿದ್ದಾರೆ. ಆದರೆ ರುದ್ರಮುನಿಯು ಬೇರೆ ವಚನಕಾರರಂತೆ ವಚನಗಳನ್ನು ರಚಿಸಿದಂತೆ ಕಂಡುಬಂದಿಲ್ಲ. ಅಥವಾ ಸ್ವತಂತ್ರ ಗ್ರಂಥವನ್ನೂ ಆತನು ಬರೆದಿರುವದಿಲ್ಲ. ಆದರೆ ರುದ್ರಮುನಿಯ ಕಾಲಜ್ಞಾನವೆಂಬ ಗ್ರಂಥವು ಮಾತ್ರ ವೀರಶೈವ ವಾಙ್ಮಯದಲ್ಲಿ ಪ್ರಸಿದ್ಧವಾಗಿರುತ್ತದೆ. ಆದರೆ ಕಲ್ಯಾಣ ಪಟ್ಟಣದಲ್ಲಿ ರುದ್ರಮುನಿಯ ಮೇಲೆ ಅಚಲವಾದ ಭಕ್ತಿಯೂ ವಿಶ್ವಾಸವೂ ಶಿವಶರಣರಲ್ಲಿ ಯಾವಾಗಲೂ ತುಂಬಿ ತುಳುಕುತ್ತಿದ್ದವು. ಅವನು ಶುದ್ಧ ವೀರಶೈವಾಚಾರವನ್ನು ಬೋಧಿಸುವ ಪರಮಗುರುವಾಗಿ ಶಿವಶರಣರಲ್ಲಿ ಖ್ಯಾತಿಯನ್ನು ಹೊಂದಿದ್ದನು.

ಇಷ್ಟರಲ್ಲಿ ರೇವಣಸಿದ್ಧೇಶ್ವರನಿಗೆ ಶಿವಸಾಯುಜ್ಯವು ಪ್ರಾಪ್ತವಾಗುವ ಸಮಯವು ಸಮೀಪಿಸಲು ಅವನು ತನ್ನ ಷಟ್‌ಸ್ಥಲ ಆಶ್ರಮವನ್ನು ಅನಾದಿ ಗಣನೆಂಬ ಹೆಸರಿನ ಗಣವರನಿಗೆ ರುದ್ರಮುನಿಯಿಂದಲೇ ಕೊಡಿಸಿ ತಾನು ಕೊಲ್ಲಿಪಾಕಿ ಸೋಮೇಶ್ವರನಲ್ಲಿಗೆ ಹೋಗಿ ಐಕ್ಯಹೊಂದಿದನು. ಆದರೆ ರುದ್ರಮುನಿಯು ಮಂಗಳವಾಡದಲ್ಲಿಯೇ ವಾಸಿಸುತ್ತ ತನ್ನ ಮಠಾಧಿಕಾರಗಳನ್ನು ನಿರ್ವಹಿಸುತ್ತ ಬಂದನು.

ಬಸವೇಶ್ವರನ ಕಾಲದಲ್ಲಿ ವಚನಕಾರರೆಲ್ಲರೂ ಕಲ್ಯಾಣಕ್ಕೆ ಬಂದು ವಾಸಿಸುತ್ತಲಿದ್ದರೆಂದು ಹೇಳಲಿಕ್ಕೆ ಬರುವದಿಲ್ಲ. ಅನೇಕರು ತಮ್ಮ ತಮ್ಮ ಸ್ಥಾನಗಳಲ್ಲಿಯೇ ಇದ್ದುಕೊಂಡು ಶಿವಾನುಭವದ ತತ್ವಗಳನ್ನು ಉಪದೇಶಿಸುತ್ತ ಅವಶ್ಯವೆನಿಸಿದಾಗ ಕಲ್ಯಾಣ ಪಟ್ಟಣಕ್ಕೆ ಹೋಗಿ ತಮ್ಮ ವಿಚಾರಗಳನ್ನು ಅಲ್ಲಿ ಚರ್ಚಿಸಿ ಪುನಃ ತಮ್ಮ ಸ್ಥಾನಗಳಿಗೆ ಬಂದು ತಮ್ಮ ಧರ್ಮ

ಬೋಧೆಯ ಕಾರ್ಯಗಳನ್ನು ನಡಿಸುತ್ತ ಬಂದರು. ಇಂಥವರಲ್ಲಿ ಸಿದ್ಧರಾಮೇಶ್ವರ, ರುದ್ರಮುನಿ, ಹಾವಿನಾಳಕಲ್ಲಯ್ಯ ಇವರು ಮುಖ್ಯರಾಗಿದ್ದಾರೆ.

ಇಷ್ಟರಲ್ಲಿ ಕಲ್ಯಾಣ ಪಟ್ಟಣದಲ್ಲಿ ಅದ್ಭುತ ಕ್ರಾಂತಿಯುಂಟಾಯಿತು. ಇದರ ಪರಿಣಾಮವಾಗಿ ಬಿಜ್ಜಳರಾಜನು ಹರಳಯ್ಯ ಮಧುವಯ್ಯಗಳು ತಮ್ಮ ತಮ್ಮ ಆಚಾರಕ್ಕೆ ಅನುಸರಿಸಿ ಅಂತರ್ವಿವಾಹ ಮಾಡಿಕೊಂಡು ವರ್ತಿಸಿದ್ದಕ್ಕೋಸ್ಕರ ಅವರಿಗೆ ಅನೇಕ ರೀತಿಯಿಂದ ಹಿಂಸೆಯನ್ನು ಕೊಟ್ಟು ಅವರಿಗೆ ಎಳಹೊಟೆ ಶಿಕ್ಷೆಯನ್ನು ಬಿಜ್ಜಳನು ವಿಧಿಸಿದನು. ಇದರ ಮೂಲಕ ಅವರು ತಮ್ಮ ಪ್ರಾಣವನ್ನು ನೀಗಿದರು. ಅವರು ಉಚ್ಚ ವೀರಶೈವಾಚಾರವುಳ್ಳವರಾಗಿ ಶಿವಾಚಾರಕ್ಕನುಸರಿಸಿ ತಮ್ಮಲ್ಲಿ ಉಚ್ಚನೀಚತ್ವವನ್ನು ಎಣಿಸದೆ ಲಗ್ನ ವಿಧಿಯನ್ನು ನೆರವೇರಿಸಿದ್ದೇ ಇವರು ಮಾಡಿದ ಮಹತ್ಪಾಪವು. ಬಸವೇಶ್ವರ, ಚನ್ನಬಸವೇಶ್ವರ, ಮಡಿವಾಳಮಾಚಿದೇವ ಮೊದಲಾದವರು ಬಿಜ್ಜಳನನ್ನು ಕಂಡು ವೀರಶೈವಾಚಾರ ಸಂಪನ್ನರಿಗೆ ಜಾತಿಭೇದವಿಲ್ಲ ಎಂದು ಎಷ್ಟು ತಿಳಿಸಿ ಹೇಳಿದರೂ ಅವನು ಅದನ್ನು ಕಡೆಗಣಿಸಿ ಈ ಶಿವಶರಣರನ್ನು ಕೊಂದುಹಾಕಿಸಿದನು. ಇದರಿಂದ ಕಲ್ಯಾಣ ಪಟ್ಟಣದಲ್ಲಿ ಕೋಪೋದ್ರೇಕಗಳು ಸ್ವಾಭಾವಿಕವಾಗಿ ಉದ್ಭವಿಸಿದವು. ಬಸವೇಶ್ವರನು ಕಲ್ಯಾಣವು ಪಾಪಿಷ್ಠರ ನಗರ ಅದು ಹಾಳಾಗಲಿ ಎಂದು ಅದನ್ನು ಶಪಿಸಿ ಕೂಡಲಸಂಗಮ ಕ್ಷೇತ್ರಕ್ಕೆ ತೆರಳಿದನು. ಅವನು ತೆರಳುವಾಗ್ಗೆ ಶಿವಶರಣರು ಈ ಸ್ಥಳದಲ್ಲಿ ತಮ್ಮ ಷಟ್‌ಸ್ಥಲ ಮಾರ್ಗದಂತೆ ನಡೆಯುವದು ಮುಂದೆ ಶಕ್ಯವಿಲ್ಲ. ಇನ್ನುಮೇಲೆ ಎಲ್ಲರೂ ಈ ನಾಡನ್ನು ಪರಿತ್ಯಜಿಸಿ ಬೇರೆ ಕಡೆಗೆ ಸಾರಬೇಕು ಎಂದು ಅಪ್ಪಣೆಯನ್ನಿತ್ತು ಪಟ್ಟಣವನ್ನು ತಾನು ತೊರೆಯುವವನಾದನು.

ಆದರೆ ಪಟ್ಟಣದಲ್ಲಿ ಕ್ಷೋಭೆಯು ಹೆಚ್ಚುತ್ತಲೇ ನಡೆಯಿತು. ಸಾಂಪ್ರತ ಕಾಲದಲ್ಲಿ ಸ್ಪೃಶ್ಯರು ಮತ್ತು ಅಸ್ಪೃಶ್ಯರು ಇವರ ನಡುವೆ ಶರೀರ ಸಂಬಂಧಗಳು ನಡೆದಲ್ಲಿ ಅವುಗಳನ್ನು ಸಹಿಸುವದನ್ನು ಕಾಣುವದು ಅಪರೂಪವಾಗಿರುತ್ತದೆ. ಆದರೆ ಬಸವೇಶ್ವರನ ಕಾಲದಲ್ಲಿ ಈ ಸ್ಥಿತಿಯು ಇರಲಿಲ್ಲ. ಆಗಿನ ಶಿವಶರಣರಾದ ಹರಳಯ್ಯ ಮಧುವಯ್ಯಗಳ ಪ್ರಾಣಹಿಂಸೆ ಮಾಡಿದವನನ್ನು ಶಿಕ್ಷಿಸುವ ವಿಚಾರಗಳು ಶರಣರ ಮುಂದೆ ಬಂದು ಈ ಹಿಂಸೆಯನ್ನು ಪ್ರಾರಂಭಿಸಿದ ಬಿಜ್ಜಳನನ್ನು ಕೊಲೆಬಡಿಸಬೇಕೆಂಬ ನಿರ್ಧಾರವನ್ನು ಅವರು ಕೈಕೊಂಡರು. ಅವರನ್ನು ಸಾಂತ್ವನ ಮಾಡಬಹುದಾದ ಬಸವೇಶ್ವರನು ಆಗ ಕಲ್ಯಾಣದಲ್ಲಿ ಇರಲಿಲ್ಲ. ಹೀಗೆ ನಿರ್ಧಾರವಾದ ಬಳಿಕ ಜಗದೇವ ಮಲ್ಲಿಬೊಮ್ಮಣ್ಣಗಳು

# ವಿನಂತಿ

ಶಿವಾನುಭವ ಪತ್ರಿಕೆಯು ಈ ವರೆಗೆ ೭೦—೮೦ ಗ್ರಂಥಗಳನ್ನು ಪ್ರಕಟಿಸಿರುತ್ತದೆ. ಅವು ತಾತ್ವಿಕ, ಚರಿತಾತ್ಮಕ, ಸಾಮಾಜಿಕ ಈ ಮೊದಲಾದ ಅನೇಕ ವಿಷಯಗಳ ಬಗ್ಗೆ ಇರುತ್ತವೆ. ಎಲ್ಲ ಕಡೆಯ ವೀರಶೈವರು ಈಗ ಅವುಗಳನ್ನು ಪರಿಶೀಲಿಸುತ್ತಲೂ ಇರುವದು ಕಂಡುಬರುತ್ತದೆ. ಆದರೆ ಇಷ್ಟರಿಂದಲೇ ವೀರಶೈವ ಸಮಾಜದವರು ತೃಪ್ತರಾದಲ್ಲಿ ಈ ವಾಙ್ಮಯದ ಅಭಿವೃದ್ಧಿಯು ಬೇಗನೆ ನಿಂತುಹೋಗುವ ಸಂಭವವಿರುತ್ತದೆ. ಈ ಗ್ರಂಥಗಳ ಅಭ್ಯಾಸವು ಯಾವಾಗಲೂ ನಡೆಯುವಂತೆ ಏರ್ಪಾಡು ಮಾಡುವದು ಅವಶ್ಯವಿರುತ್ತದೆ. ಈ ಕಾರ್ಯವು ವ್ಯವಸ್ಥಿತವಾಗಿ ನಡೆಯಬೇಕಾದರೆ ಪ್ರತಿಯೊಂದು ಜಿಲ್ಹೆಯಲ್ಲಿ ಯೋಗ್ಯ ಸಂಘಟನೆಯನ್ನು ಉಂಟುಮಾಡುವದು ಅತ್ಯಾವಶ್ಯಕವಾಗಿರುತ್ತದೆ.

ಉತ್ತರ ಕರ್ನಾಟಕದಲ್ಲಿ ಧಾರವಾಡ, ಬೆಳಗಾಂವ, ಬಳ್ಳಾರಿ, ಈ ಸ್ಥಳಗಳಲ್ಲಿಯೂ ಹೈದರಾಬಾದ ಇಲಾಖೆಯಲ್ಲಿ ಬೀದರ, ಕಲಬುರ್ಗಿ, ರಾಯಚೂರ ಈ ಪಟ್ಟಣಗಳಲ್ಲಿಯೂ ಮೈಸೂರ ಇಲಾಖೆಯಲ್ಲಿ ದಾವಣಗೆರೆ, ಬೆಂಗಳೂರು ಈ ಮುಂತಾದ ಪಟ್ಟಣಗಳಲ್ಲಿಯೂ ಯೋಗ್ಯ ಸಂಸ್ಥೆಗಳನ್ನು ನಿರ್ಮಾಣಮಾಡುವದು ಅಗತ್ಯವಿದೆ. ಈ ತರದ ವ್ಯವಸ್ಥೆಯು ಆಗದೆ ಹೋದರೆ ಶಿವಶರಣರ ವಾಙ್ಮಯ ಪ್ರಚಾರ ಕಾರ್ಯವು ಸ್ವಲ್ಪ ದಿವಸಗಳಲ್ಲಿಯೇ ! ನಿಂತು ಹೋಗುವ ಸಂಭವವಿದೆ.

ಈ ಮಹತ್ವದ ವಿಷಯದ ಬಗ್ಗೆ ವಿಚಾರ ವಿನಿಮಯ ಮಾಡಲಿಕ್ಕೆ ಶಿವಾನುಭವ ಸಂಪಾದಕರಾದ –

ರಾ॥ ಬ॥ ಫ. ಗು. ಹಳಕಟ್ಟಿಯವರು ಬೇರೆ ಬೇರೆ ಕಡೆಗೆ ಪ್ರವಾಸ ಮಾಡಬೇಕೆಂದು ಇಚ್ಛಿಸಿದ್ದಾರೆ. ಅವರು ಆಯಾ ಗ್ರಾಮಗಳಲ್ಲಿ ಇರುವ ಮಹನೀಯರ ಅಭಿಪ್ರಾಯಗಳನ್ನು ಸಂಗ್ರಹಿಸಿ ಒಂದು ಸರ್ವಸಮ್ಮತವಾದ ಸಂಸ್ಥೆಯನ್ನು ಪ್ರತಿಯೊಂದು ಜಿಲ್ಲೆಯಲ್ಲಿ ಏರ್ಪಡಿಸುವ ಪ್ರಯತ್ನ ಮಾಡುವರು. ಈ ಕಾರ್ಯದಲ್ಲಿ ಎಲ್ಲ ವೀರಶೈವರು ಅವರೊಡನೆ ಸಹಕರಿಸಬೇಕೆಂದು ಕೋರುತ್ತೇವೆ.

ಈ ವಿಷಯದ ಬಗ್ಗೆ ಯಾರಿಗಾದರೂ ಸೂಚನೆಗಳನ್ನು ಮಾಡುವದಿದ್ದರೆ ಅವರು ಅವುಗಳನ್ನು ಆದಷ್ಟು ತೀವ್ರವಾಗಿ ಬರೆದು ನಮ್ಮ ಕಡೆಗೆ ಕಳಿಸಬೇಕಾಗಿ ವಿನಂತಿ ಅದೆ.

ಎನ್. ಆರ್. ಬಾಣದ,
ಮ್ಯಾನೇಜರ,
ಶಿವಾನುಭವ ಆಫೀಸ
ವಿಜಾಪುರ.

# ವಿಷಯಾನುಕ್ರಮಣಿಕೆ

# ಶಿವಾನುಭವ

ವರ್ಷ ೨೭ | ಜುಲೈ ೧೯೫೪ | ಸಂಚಿಕೆ ೭


## ಕಾಯಕದ ಉಗಮ


(ಲೇ. ರಾ|| ಬ|| ಪಿ. ಜಿ. ಹಳಕಟ್ಟಿ. ಬಿ, ಎ, ಎಲ್, ಎಲ್. ಬಿ. ವಿಜಾಪುರ.)


—÷÷÷—

ಮನುಷ್ಯನು ತನ್ನ ಮನಸ್ಸು ಬುದ್ಧಿ, ಆಚರಣೆ ಇವುಗಳನ್ನು ಹೇಗೆ ವಿಕಾಸಮಾಡಿಕೊಳ್ಳಬೇಕೆಂಬ ವಿಷಯವಾಗಿ ಶಿವಶರಣರು ಆಳವಾಗಿ ವಿಚಾರಮಾಡಿದ್ದು ಕಂಡುಬರುತ್ತದೆ. ಭಾರತದ ಯಾವ ಧರ್ಮದಲ್ಲಿಯೂ ಕೂಡ ಈ ವಿಷಯಗಳ ಬಗ್ಗೆ ಇವರಷ್ಟು ದೀರ್ಘ ವಿಚಾರಮಾಡಿದ್ದು ತೋರಿಬರುವದಿಲ್ಲ. ಉಪನಿಷತ್ಕಾರರು ಕೇವಲ ಅಧ್ಯಾತ್ಮಿಕವಾಗಿಯೂ ಭಕ್ತಿಪಂಥದವರು ಕೇವಲ ಭಾವನೆಯ ಉಚ್ಚಸ್ಥಿತಿಯನ್ನು ಉಂಟುಮಾಡಿಕೊಳ್ಳುವದಕ್ಕಾಗಿಯೂ ಯೋಗವಿದರು ಸ್ಥಿರ ಮನಸ್ಸನ್ನುಂಟು ಮಾಡುವದಕ್ಕಾಗಿಯೂ ದೀರ್ಘವಾಗಿ ಚರ್ಚೆಗಳನ್ನು ನಡಿಸಿದ್ದು ಕಂಡುಬರುತ್ತದೆ. ಆದರೆ ಶಿವಶರಣರು ನಿತ್ಯದ ಕಾರ್ಯಗಳನ್ನು ಮಾಡುವಲ್ಲಿ ಜನರಕೂಡ ಹೇಗೆ ವರ್ತಿಸಬೇಕು, ನೀತಿಯಿಂದ ತಾವುಹೇಗೆ ನಡೆಯಬೇಕು, ಇವೇ ಮೊದಲಾದ ವಿಷಯಗಳನ್ನು ಕುರಿತು ಹೆಚ್ಚಾಗಿ ವಿವೇಚಿಸಿ ಅವುಗಳ ಬಗ್ಗೆ ವಚನಗಳನ್ನು ರಚಿಸಿದ್ದಾರೆ. ಇವು-ಮುಖ್ಯವಾಗಿ ಭಕ್ತ ಮಹೇಶ್ವರ ಸ್ಥಲಗಳಲ್ಲಿರುವದು ಕಂಡುಬರುತ್ತದೆ. ಈ ತರದ ವಚನಗಳು ಪ್ರಸಾದಿ ಪ್ರಾಣಲಿಂಗಿ ಮೊದಲಾದವುಗಳಲ್ಲಿ ಕಂಡುಬಂದರೂ ಇವು ಆಗ ಅಂತರ್ಯ ಉಚ್ಚತರವಾದ ಆಚರಣೆಗಳನ್ನು ನಿರೂಪಿಸುತ್ತವೆ. ಹೀಗೆ ಶಿವಶರಣರು ನೀತಿ ವ್ಯವಹಾರ ಇವುಗಳ ವಿಷಯವಾಗಿ ಬಹು ಆಳವಾಗಿ ವಿವೇಚನೆ ಮಾಡಿದ್ದು ಕಂಡು ಬರುತ್ತದೆ.

ಇಂಥ ಆಚರಣೆಗಳಲ್ಲಿ ಶಿವಶರಣರು ಕಾಯಕಕ್ಕೆ ಬಹು ಮಹತ್ವದ ಸ್ಥಾನವನ್ನು ಕೊಟ್ಟಿದ್ದಾರೆ. ನೀತಿ ವ್ಯವಹಾರ ಈ ವಿಷಯಗಳ ಬಗ್ಗೆ ಇತರ ಮತಸ್ಥರು ಲಕ್ಷಿಸಿದ್ದು ಕಂಡು ಬಂದರೂ ಅವರಲ್ಲಾರೂ ಕಾಯಕದ ವಿಷಯವಾಗಿ ವಿವೇಚಿಸಿಲ್ಲ. ಇದಕ್ಕೆ ಒಂದು ಬಲವತ್ತರ ಕಾರಣವೂ ಇರುತ್ತದೆ.

ಕಾಯಕವೆಂದರೆ ಕೆಳಗಿನ ವರ್ಣದವರು ಮಾಡುತ್ತಿರುವ ಉದ್ಯೋಗವೆಂದು ಉಚ್ಚವರ್ಣದವರು ಭಾವಿಸಿರುತ್ತಾರೆ. ಬ್ರಾಹ್ಮಣ ಸಮಾಜದಲ್ಲಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಎಂಬ ನಾಲ್ಕು ವರ್ಣಗಳಿದ್ದು ಕಾಯಕವನ್ನು ಶೂದ್ರರು ಮಾಡತಕ್ಕದ್ದೆಂದು ಬ್ರಾಹ್ಮಣ ಧರ್ಮಶಾಸ್ತ್ರಕಾರರು ತಿಳಿದಿದ್ದಾರೆ. ಒಂದುವೇಳೆ ಬ್ರಾಹ್ಮಣರು ಕಾಯಕವನ್ನು ಮಾಡಿದ್ದಾದರೆ ಅವರು ಬ್ರಾಹ್ಮಣತ್ವದಿಂದ ಚ್ಯುತಿಯನ್ನು ಹೊಂದುವರು. ಒಕ್ಕಲುತನ, ಕೈಗಾರಿಕೆ ಇವುಗಳನ್ನು ಶೂದ್ರರು ಮಾತ್ರ ಮಾಡಬೇಕೇ ಹೊರತು ಮೇಲಿನ ಮೂರು ವರ್ಣದವರು ಮಾಡಕೂಡದೆಂಬ ನಿರ್ಬಂಧಗಳು ಅವರಲ್ಲಿರುತ್ತವೆ.

ವೀರಶೈವರ ಆಗಮ ಗ್ರಂಥಗಳಲ್ಲಿಯೂ ಕೂಡ ಇದೇ ತರದ ನಿಯಮಗಳಿರುವದು ಕಂಡುಬರುತ್ತದೆ. ಪಾರಮೇಶ್ವರಾಗಮದಲ್ಲಿ ವೀರಶೈವನಾದವನು ಒಕ್ಕಲುತನ ಮಾಡಕೂಡದೆಂಬ ಆಜ್ಞೆ ಇದೆ. ಈ ಆಗಮವು ವೀರಶೈವರಿಗೆ ಆಧಾರ ಗ್ರಂಥವೆಂದು ತಿಳಿಯಲ್ಪಟ್ಟಿದೆ.

ಇದೇಪ್ರಕಾರ ಬೌದ್ಧ, ಜೈನ, ಸನ್ಯಾಸಿಗಳೂ ಕೂಡ ಜನತೆಯಿಂದ ದೂರಾಗಿ ಭಿಕ್ಷೆಯನ್ನು ಬೇಡುತ್ತ ತಮ್ಮ ನಿರ್ವಾಹ ಸಾಗಿಸಬೇಕೆಂದು ಅವರಲ್ಲಿ ನಿಯಮಗಳಿವೆ. ಅವರು ವ್ಯಾಪಾರೋದ್ಯೋಗಗಳಲ್ಲಿ ಎಂದೂ ತೊಡಗಬಾರದೆಂದಿದೆ. ಭಾರತದಲ್ಲಿರುವ ಉಳಿದ ಎಲ್ಲ ತರದ ವಿರಕ್ತಾಶ್ರಮಿಗಳೂ, ಸನ್ಯಾಸಿಗಳೂ, ಬೈರಾಗಿಗಳೂ ಕಾಯಕಗಳನ್ನು ಮಾಡುತ್ತಿರುವದು ಕಂಡುಬರುವದಿಲ್ಲ.

ಈ ಸ್ಥಿತಿಯು ಭಾರತದಲ್ಲಿರುವದರಿಂದ ಇಲ್ಲಿ ನಿರುದ್ಯೋಗಿಗಳ ಪಂಗಡವು ಬಹಳ ದೊಡ್ಡದಾಗಿರುತ್ತದೆ. ಆದರೆ ಇದಕ್ಕೆ ಅಪವಾದವಾಗಿರುವವರು ವೀರಶೈವರು ಮಾತ್ರ ಇರುತ್ತಾರೆ.

ಈ ಸ್ಥಿತಿಯು ಪುರಾತನಕಾಲದಲ್ಲಿ ಗ್ರೀಕ, ರೋಮ ಮೊದಲಾದ ದೇಶಗಳಲ್ಲಿಯೂ ಕೂಡ ರೂಢವಾಗಿತ್ತು. ಆ ಕಾಲದಲ್ಲಿ ಕೈಕೆಲಸಗಳಿಗೆ ಈ ದೇಶಗಳಲ್ಲಿ ಏನೂ ಮಹತ್ವವು ಇರಲಿಲ್ಲ. ಗ್ರೀಸದೇಶದಲ್ಲಿ ಕೈಗಾರಿಕೆಗಳನ್ನು ಮಾಡುವವರು 'ಹೆಲಟ್' ಎಂದರೆ ಗುಲಾಮರಾಗಿದ್ದರು. ಅಲ್ಲಿಯ ಮೇಲಿನ ವರ್ಗದವರು ಯುದ್ಧಕಾರ್ಯಗಳಲ್ಲಿ ತೊಡಗುವರು. ರೋಮ ಶಹರದಲ್ಲಿ ಮೊದಲಿನ ಕಾಲದಲ್ಲಿ ಇದೇ ಪರಿಸ್ಥಿತಿಯು ಇತ್ತು. ಅಲ್ಲಿ ಉಚ್ಚತರಗತಿಯ ಜನರು 'ಪ್ಯಾಟ್ರಿಶಿಯನ್'ರೆಂತಲೂ ಕೆಳಗಿನವರಿಗೆ 'ಪ್ಲೇಬಿಯನ್ನರೆಂತ'ಲೂ ಕರೆಯುತ್ತಿದ್ದರು. ವ್ಯಾಪಾರೋದ್ಯೋಗಗಳು ಪ್ಲೇಬಿಯನ್ನರ ಕಡೆಗೆ ಇರುತ್ತಿದ್ದವು.

ಯುರೋಪ ಖಂಡದಲ್ಲಿ, ರಶಿಯಾ, ಜರ್ಮನಿ, ಇಂಗ್ಲಂಡ ಇಂಥ ದೇಶಗಳಲ್ಲಿ ಸಹ ಇದೇ ಸ್ಥಿತಿಯು ಬಹುಕಾಲದಿಂದಲೂ ಇದ್ದಿತು. ಆದರೆ ಹೊಟ್ಟೆಯ ಅಡಚಣಿಗಾಗಿ ಇಂಗ್ಲಂಡ, ಹಾಲೆಂಡ, ಪೋರ್ತುಗಾಲಗಳಲ್ಲಿ ಹೊಸ ಬದಲಾವಣೆಯಾಗಿ ಇಲ್ಲಿಯವರು ವ್ಯಾಪಾರಕ್ಕೋಸ್ಕರ ಪರದೇಶಗಳಿಗೆ ಹೋಗಿ ವ್ಯಾಪಾರವನ್ನು ಆರಂಭಿಸಿದರು. ೧೬ ನೇ ಶತಮಾನದಲ್ಲಿ ಈ ದೇಶದವರು ಬೇರೆ ಬೇರೆ ದೇಶಗಳಲ್ಲಿ ವಸಾಹತುಗಳನ್ನು ಮಾಡಲಾರಂಭಿಸಿದರು. ಅಂದಿನಿಂದ ಹೊಸಯುಗವು ಯುರೋಪಖಂಡದಲ್ಲಿ ಪ್ರಾರಂಭವಾಯಿತು.

ಆದರೆ ನಮ್ಮ ದೇಶದಲ್ಲಿ ಧನ ಸಂಪಾದನೆಗೆ ಮಹತ್ವದ ಸ್ಥಾನವಿರಲಿಲ್ಲ. ಬ್ರಾಹ್ಮಣರೂ, ಬೌದ್ಧರೂ ಉತ್ಪಾದನೆಯ ಉದ್ಯೋಗಳನ್ನು ಮಾಡುವದನ್ನು ನಿರಾಕರಿಸಿದರು. ಜೈನರು ದೇಹವನ್ನು ಕ್ಲೇಶಪಡಿಸುವದು ಮಹತ್ವದ್ದೆಂದು ಭಾವಿಸಿದರು. ಅವರು ದಿಗಂಬರಿಗಳಾದರು. ಇದರಿಂದ ನಮ್ಮ ದೇಶದಲ್ಲಿ ವ್ಯಾಪಾರೋದ್ಯೋಗಗಳು ನಿಂತವು. ಇದು ದೇಶಕ್ಕೆ ಹಾನಿಕಾರಕವಾಗಿ ಪರಿಣಮಿಸಿತು.

ಆದರೆ ಇದನ್ನು ಶೈವ ಧರ್ಮೀಯರೂ ವೀರಶೈವರೂ ಒಪ್ಪದೆ ಉದ್ಯೋಗಗಳಲ್ಲಿ ತೊಡಗಿದವರಾದ್ದರಿಂದ ದಕ್ಷಿಣ ದೇಶವು ಆರ್ಥಿಕ ದೃಷ್ಟಿಯಿಂದ ಉನ್ನತ ಸ್ಥಾನವನ್ನು ಹೊಂದಿತು. ದ್ರಾವಿಡ ಶೈವರು ಸಿಂಹಲದ್ವೀಪ, ಜಾವಾ, ಸುಮಾತ್ರಾಗಳಲ್ಲಿ ವಸಾಹತು ಮಾಡಿದರು. ಇದರಿಂದ ದಕ್ಷಿಣ ದೇಶದಲ್ಲಿಯ ಜನರು ಸಿರಿವಂತರಾಗಿ ಮಹತ್ವದ ದೇವಾಲಯಗಳನ್ನು ಕಟ್ಟಿಸಲಿಕ್ಕೆ ಸಾಧ್ಯವಾಯಿತು. ಕರ್ನಾಟಕದಲ್ಲಿಯೂ ಇದೇ ಪರಿಸ್ಥಿತಿಯು ಉಂಟಾಯಿತು. ಇಲ್ಲಿಯ ಬಣಂಜು ಧರ್ಮದವರು ಇಲ್ಲಿ ಅನೇಕ ಸುಂದ

ರವಾದ ದೇವಾಲಯಗಳನ್ನ ಕಟ್ಟಿಸಿದರು. ಕೈಲಾಸ, ಅಜಂಟಾ, ವೇರೂಳದಲ್ಲಿಯ ದೇವಾಲಯಗಳು ಕರ್ನಾಟಕದವರ ಧನಸಹಾಯದಿಂದ ಉಂಟಾಗಿರುತ್ತವೆ. ಆದರೆ ಉತ್ತರ ಹಿಂದುಸ್ತಾನದಲ್ಲಿ ವ್ಯಾಪಾರೋದ್ಯೋಗಗಳು ಇಲ್ಲದ್ದರಿಂದ ಅಲ್ಲಿ ಮಹತ್ವದ ಕಟ್ಟಡಗಳು ಕೆಲವು ಮಾತ್ರ ಆಗಿರುತ್ತವೆ.

ಶಿವಶರಣರು ಜೈನ, ಬೌದ್ಧರಂತೆ ದೇಹದಂಡನೆಯಿಂದ ಮೋಕ್ಷವೆಂದು ತಿಳಿಯಲಿಲ್ಲ. ಅವರು ತ್ರಿಲಿಂಗಗಳ ವಿಚಾರಕ್ಕೆ ಮಹತ್ವವನ್ನು ಕೊಟ್ಟರು. ಬಾಹ್ಯಕ್ರಿಯೆಗಳನ್ನು ನಿರ್ಬಂಧಿಸಕೂಡದೆಂದು ಸ್ಪಷ್ಟ ಅಭಿಪ್ರಾಯ ಪಟ್ಟವರಾಗಿದ್ದಾರೆ.

ಮನುಷ್ಯನ ವಿಕಾಸಕ್ಕೆ ಇಷ್ಟ ಪ್ರಾಣ ಭಾವ ಈ ಮೂರೂ ಲಿಂಗಗಳು ಬೇಕೆಂದು ಅವರು ಅಭಿಪ್ರಾಯ ಪಟ್ಟಿದ್ದಾರೆ. ಸರಿಯಾದ ರೀತಿಯಿಂದ ಬಾಹ್ಯ ಕ್ರಿಯೆಗಳನ್ನು ಮನುಷ್ಯನು ಮಾಡಿದ್ದಾದರೆ ಅವನ ಮಾನಸಿಕ ವೃತ್ತಿಗಳು ಪರಿಪಕ್ವವಾಗುವವು. ಈ ವೃತ್ತಿಗಳು ಸೂಕ್ಷ್ಮ ಶರೀರಕ್ಕೆ ಸಂಬಂಧಿಸಿದವುಗಳು ಇರುತ್ತವೆ. ಸ್ಥೂಲ ಶರೀರ ಮತ್ತು ಸೂಕ್ಷ್ಮ ಶರೀರಗಳು ವಿಕಾಸಹೊಂದಿದ ಹಾಗೆ ಕಾರಣ ಶರೀರವೂ ಕೂಡ ಬೆಳವಣಿಗೆ ಹೊಂದುತ್ತದೆ. ಕಡೆಯದಾದ ಕಾರಣ ಶರೀರದಲ್ಲಿ ಜ್ಞಾನವು ಹುದುಗಿಕೊಂಡಿರುತ್ತದೆ. ಹೀಗೆ ಈ ಮೂರು ಶರೀರಗಳ ವಿಕಾಸಕ್ಕೆ ಬಾಹ್ಯ ಕ್ರಿಯೆಗಳು ಬಹು ಅವಶ್ಯಕವಾದವುಗಳು. ಈ ಕಾರಣದ ಸಲುವಾಗಿ ಷಟ್‌ಸ್ಥಲ ಶಾಸ್ತ್ರಜ್ಞರು ಕ್ರಿಯೆಗಳಿಗೆ ಉಚ್ಚ ಮತ್ತು ಮಹತ್ವದ ಸ್ಥಾನವನ್ನು ಕೊಟ್ಟಿದ್ದಾರೆ. ಈ ಕ್ರಿಯೆಗಳಲ್ಲಿ ಮನುಷ್ಯನು ನಿತ್ಯ ಮಾಡುವ ಕ್ರಿಯೆಗಳೆಲ್ಲ ಸಮಾವೇಶ ವಾಗುತ್ತವೆ. ಅವು ಉದರ ಪೋಷಣ ವಿದ್ಯೆ ಎಂದು ಅವುಗಳನ್ನು ಅವರು ತಿರಸ್ಕರಿಸುವದಿಲ್ಲ. ಈ ಉದರ ಪೋಷಣೆಯ ಕ್ರಿಯೆಗಳಿಗೆ ಶಿವಶರಣರು ಮಹತ್ವದ ಸ್ಥಾನವನ್ನು ಕೊಟ್ಟು ಅವುಗಳನ್ನು ಅವರು ಕಾಯಕವೆಂದು ಕರೆದಿರುವರು. ಅವುಗಳಿಗೆ ಅವರು ಧಾರ್ಮಿಕ ಉಚ್ಚ ಸ್ಥಾನವನ್ನು ಕೊಟ್ಟಿರುವರು.

ಮನುಷ್ಯನು ಈ ಕಾಯಕಗಳನ್ನು ಸತ್ಯ ಶುದ್ಧ ರೀತಿಯಿಂದ ಮಾಡತಕ್ಕದ್ದೆಂದು ಶಿವಶರಣರ ಉಕ್ತಿಗಳಿವೆ. ಅವರು ಇಂಥ ಆಚರಣೆಗೆ ಷಟ್‌ಸ್ಥಲಶಾಸ್ತ್ರದಲ್ಲಿ ಮಹತ್ವದ ಸ್ಥಾನವನ್ನು ಕೊಟ್ಟಿದ್ದಾರೆ. ಅವರು ಹೀಗೆ ಆಚರಿಸುವದೇ ಲಿಂಗಪೂಜೆ ಎಂದು ಸಹ ಹೇಳಿದ್ದಾರೆ. ಅವರು 'ಕಾಯಕವೇ ಕೈಲಾಸ'ವೆಂದು ಹೇಳಿದ್ದಾರೆ.

ಕಾಯಕಗಳನ್ನು ಮಾಡುವಲ್ಲಿ ಲಿಂಗಾರ್ಪಣ ಭಾವದಿಂದ ಮಾಡಬೇಕೆಂದು ವಚನಕಾರರ ಅಭಿಪ್ರಾಯವಿರುತ್ತದೆ. ಮನುಷ್ಯನಿಗೆ ಶ್ರೋತ್ರ, ತ್ವಕ್ಕು, ರೂಪ, ರಸ, ಗಂಧ ಎಂಬವುಗಳು ಇದ್ದು ಇವುಗಳು ಶ್ರೋತ್ರೇಂದ್ರೀಯ, ತ್ವಗಿಂದ್ರಿಯ, ನೇತ್ರೇಂದ್ರೀಯ, ರಸನೆಂದ್ರಿಯ, ಘ್ರಾಣೇಂದ್ರಿಯ, ಇವುಗಳಿಗೆ ಅನುಕ್ರಮವಾಗಿ ಸಂಬಂಧಪಟ್ಟಿರುತ್ತವೆ. ಈ ಇಂದ್ರಿಯಗಳಲ್ಲಿ ಅನುಕ್ರಮವಾಗಿ ಜಂಗಮಲಿಂಗ, ಪ್ರಸಾದಲಿಂಗ, ಶಿವಲಿಂಗ, ಗುರುಲಿಂಗ, ಆಚಾರಲಿಂಗ, ಇವುಗಳಿರುತ್ತವೆ. ಕಾಯಕವನ್ನು ಮಾಡುವಲ್ಲಿ ಈ ಲಿಂಗಗಳಿಗೆ ಆಯಾ ಅನುಭವಗಳನ್ನು ಅರ್ಪಣ ಮಾಡುತ್ತ ಅವುಗಳನ್ನು ನಿರ್ವಹಿಸಬೇಕು, ಎಂದರೆ ಅವುಗಳ ಪರಿಣಾಮಗಳನ್ನು ಅರ್ಪಣ ಮಾಡಬೇಕು, ಎಂದು ಷಟ್‌ಸ್ಥಲ ಶಾಸ್ತ್ರಜ್ಞರು ಹೇಳುವದುಂಟು. ಈ ಲಿಂಗಾರ್ಪಣ ಕ್ರಮಗಳು ವೀರಶೈವರ ವಿಶಿಷ್ಟಕಾರ್ಯಗಳಾಗಿರುತ್ತವೆ. ಅವರು ಇವುಗಳ ರೀತಿಯನ್ನು ಅರಿತುಕೊಂಡು ಆಚರಿಸಿದಲ್ಲಿ ಇಂದ್ರಿಯಗಳು ತಪ್ಪುದಾರಿಯನ್ನು ಹಿಡಿಯುವದಿಲ್ಲ. ಹಾಗೂ ಮನುಷ್ಯನಿಂದ ಯಾವ ದೋಷಗಳೂ ಆಗುವದಿಲ್ಲೆಂದು ವಚನಕಾರರು ತಿಳಿದಿರುತ್ತಾರೆ. ಇದೇ ಲಿಂಗಾನುಭವವು. ಈ ಅನುಭವವುಳ್ಳವನಾಗಿ ನಡೆದರೆ ಅವನು ಸದ್‌ವೃತ್ತಿಯುಳ್ಳವನಾಗುವನು. ಸದ್‌ವೃತ್ತಿಯಿಂದ ಜೀವನ ನಡಿಸುವದೇ ಕಾಯಕವೆನಿಸಿಕೊಳ್ಳುತ್ತದೆ. ಈ ಪ್ರಕಾರ ಕಾಯಕಗಳು ಮನುಷ್ಯನ ಪ್ರಗತಿಯನ್ನು ಉಂಟು ಮಾಡುತ್ತವೆಯೇ ಹೊರತು ಅವನಿಗೆ ಅವು ಹಾನಿಯನ್ನು ಉಂಟು ಮಾಡಲಾರವೆಂದು ಶಿವಶರಣರ ದೃಢವಾದ ಅಭಿಪ್ರಾಯವಿರುತ್ತದೆ.

ಮೇಲಿನ ವಿಷಯಗಳು ವಾಚಕರಿಗೆ ದುರ್ಬೋಧವಾಗಿ ತೋರಬಹುದು. ಆದರೂ ವಚನಶಾಸ್ತ್ರದ ಪರಿಶೀಲನೆ ಮಾಡುತ್ತಿರುವವರಿಗೆ ಈ ತತ್ವಗಳು ಕೂಡಲೇ ಅವರ ಅವಗಾಹನೆಗೆ ಬರುವಂಥವಿವೆ. ಈ ಪ್ರಕಾರ ಶಿವಶರಣರು ಕಾಯಕಕ್ಕೆ ಉಚ್ಚಸ್ಥಾನವನ್ನು ಕಲ್ಪಿಸಿಕೊಟ್ಟಿದ್ದಾರೆ. ನಿತ್ಯದ ಉಪಜೀವನದ ಹೋರೆಗಳ ಬಗ್ಗೆ ಈ ತರದ ವಿಚಾರಗಳು ಭಾರತ ದೇಶದಲ್ಲಿರುವ ಯಾವ ಧರ್ಮದಲ್ಲಿಯೂ ಇದ್ದುದು ಕಂಡು ಬರುವದಿಲ್ಲ.

ಶಿವಶರಣರು ಕಾಯಕಕ್ಕೆ ಇಷ್ಟು ಮಹತ್ವದ ಸ್ಥಾನವನ್ನು ಕೊಡಲಿಕ್ಕೆ ಬೇರೊಂದು ಕಾರಣವಿದೆ. ಬಸವಾದಿ ಪ್ರಮಥರ ಕಾಲದಲ್ಲಿ ಕಾಯಕಮಾಡುವಂಥ ದೊಡ್ಡ ದೊಡ್ಡ ಸಮಾಜಗಳು ವೀರಶೈವ ಧರ್ಮದಲ್ಲಿ

ಸೇರ್ಪಡೆ ಹೊಂದಿ ಹತ್ತಿಪ್ಪತ್ತು ವರ್ಷಗಳಲ್ಲಿ ಲಕ್ಷಾನವಧಿ ಜನರು ವೀರ
ಶೈವ ಧರ್ಮವನ್ನು ಸ್ವೀಕರಿಸಿದರು. ಈ ಸಮಾಜದವರೆಲ್ಲರೂ ಒಕ್ಕಲು
ತನ, ನೇಕಾರಿಕೆ, ಸಿಂಪಿಗತನ, ಬಣ್ಣಗಾರಿಕೆ ಇಂಥ ಅನೇಕ ಉದ್ಯೋ
ಗಗಳನ್ನು ಮಾಡುವವರಾಗಿದ್ದರು. ವಚನಕಾರರು ತಮ್ಮ ಉಕ್ತಿಗಳಲ್ಲಿ ಈ
ಉದ್ಯೋಗಗಳನ್ನು ಮಾಡಬಾರದು, ಇವುಗಳನ್ನು ಮಾಡುವವರು ಕಡಿಮೆ
ಯವರೆಂದು ಭಾವಿಸಲಿಲ್ಲ. ಇಷ್ಟೇ ಅಲ್ಲ. ಈ ಉದ್ಯೋಗಗಳಲ್ಲಿ ಪರಮಾ
ತ್ಮನ ಪೂಜೆ ಇದೆ, ಎಂತಲೂ ಪ್ರತಿಪಾದಿಸಿದರು. ಅವರಲ್ಲಿ ರೂಢವಾ
ಗಿರುವ ಲಿಂಗಾರ್ಚನದ ರೀತಿಗಳು ಅವರ ಈ ಅಭಿಪ್ರಾಯವನ್ನೂ ಸಮ
ರ್ಥಿಸಿದವು. ಆದ್ದರಿಂದ ಕಾಯಕಗಳೆಂದರೆ ಒಂದು ಬಗೆಯ ಲಿಂಗಾರಾಧನೆ
ಇದೆ. ಈ ಆರಾಧನೆಯ ಮೂಲಕ ತನ್ನಲ್ಲಿ ಷಡ್ಲಿಂಗಗಳನ್ನು ಬಲಪಡಿಸ
ಬಹುದು. ಇದರಿಂದ ಕಾಯಕಗಳ ಮೂಲಕ ಪರಮಾತ್ಮನನ್ನೂ ಕಾಣ
ಬಹುದು. ಅವನಲ್ಲಿ ಸಾಮರಸ್ಯವನ್ನು ಹೊಂದಬಹುದು. ಅವು ಆವನ
ಶ್ರೇಷ್ಠತೆಗೆ ಕಾರಣವಾದವುಗಳು, ಎಂದು ಶಿವಶರಣರು ಪ್ರತಿಪಾದಿಸುತ್ತ
ಬಂದಿದ್ದಾರೆ. ಇದರಿಂದ ವೀರಶೈವ ಸಮಾಜದಲ್ಲಿ ಅನೇಕ ವೃತ್ತಿಯವರು
ಇದ್ದುಕೊಂಡು ತಮ್ಮ ಲಿಂಗಾಚಾರಕ್ಕೆ ಭಂಗಬಾರದಂತೆ ವರ್ತಿಸುತ್ತ
ಬಂದಿದ್ದಾರೆ. ಕಾಯಕದ ಈ ವಿಚಾರಗಳು ವೀರಶೈವ ಧರ್ಮದ ವೈಶಿಷ್ಟ್ಯ
ವಾಗಿರುತ್ತವೆ.

ಲಿಂಗಾರ್ಚನೆಯಲ್ಲಿ ಈ ಕಾಯಕದ ತತ್ವವನ್ನು ವೀರಶೈವರು
ಪಾಲಿಸುತ್ತ ಬಂದರು. ಇದರಿಂದಕಾಯಕದ ಮೂಲಕ ಯಾವನೂ ಹೀನಕು
ಲದವನಾಗಲಾರನು. ಶಿವಶರಣರು ಈ ವಿಚಾರಗಳನ್ನು ಮುಂದು ಮಾಡಿದ್ದ
ರಿಂದಕರ್ನಾಟಕವು ವ್ಯಾಪಾರೋದ್ಯೋಗಗಳಲ್ಲಿ ಮುಂದುವರಿಯುತ್ತಿತ್ತು.
ವೀರಶೈವರಲ್ಲಿ ಯಾರೂ ತಮ್ಮ ಉದ್ಯೋಗಗಳನ್ನು ಬಿಡಲಿಲ್ಲ. ಹೊಯ್ಸಳರು
ಚಾಲುಕ್ಯರು, ವಿಜಯನಗರದ ರಾಜರು, ವಿಜಾಪೂರ ಬಾದಶಹರು ಇವರೆ
ಲ್ಲರ ಕಾಲದಲ್ಲಿ ಕರ್ನಾಟಕದ ಕಲಾಕೌಶಲ್ಯಗಳು ಬೆಳೆದವು. ಆಗ ಮಹ
ತ್ವದ ಕಟ್ಟಡಗಳೂ ಕೆರೆ ಕಾಲುವೆಗಳೂ ದೇಶದಲ್ಲಿ ಉದ್ಭವಿಸಿದವು. ಶಿವ
ಶರಣರು ಕಾಯಕದ ತತ್ವಗಳನ್ನು ಉಪಜೀವನದ ಹೋರಿಗೆಗೆ ಅನ್ವ
ಯಿಸಿದ್ದರಿಂದ ಎಲ್ಲ ವರ್ಗದವರಲ್ಲಿದ್ದ ಕೈಗಾರಿಕೆ ವ್ಯಾಪಾರೋದ್ಯೋಗಗಳು
ಬೆಳೆಯತೊಡಗಿದವು. ಸತ್ಯ ಶುದ್ಧ ಕಾಯಕ ಮಾಡಬೇಕೆಂಬ ಶಿವಶರಣರ
ಬೋಧೆಗಳಿವೆ. ಆದ್ದರಿಂದ ವ್ಯಾಪಾರೋದ್ಯೋಗಗಳಲ್ಲಿ ನೀತಿಮತ್ತೆಯು

ಬೆಳೆಯಿತು. ಎಲ್ಲರೂ ಶ್ರಮವಹಿಸುವವರಾದರು. ಯಾರೂ ಸೋಮಾರಿಗ ಳಾಗಿರಲಿಲ್ಲ. ಶ್ರಮ ಮಾಡದವರಲ್ಲಿ, ಸೋಮಾರಿಗಳಾದವರಲ್ಲಿ ಲಿಂಗ ಪೂಜೆಯು ತಪ್ಪುತ್ತದೆ. ಶಿವಶರಣರು ಪ್ರತಿನಿಮಿಷವೂ ಲಿಂಗಪೂಜೆಯಲ್ಲಿ ರಬೇಕು, ಲಿಂಗದಲ್ಲಿಯೇ ಇರಬೇಕು, ಈ ವಿಚಾರಗಳು ಅವರ ಕಾಯ ಕದ ವಿಚಾರಗಳಲ್ಲಿ ಅಡಕವಾಗಿರುತ್ತವೆ. ಆದ್ದರಿಂದ ವೀರಶೈವನು ಕಾಯಕ ಮಾಡುತ್ತ ಒಂದೇ ಜನ್ಮದಲ್ಲಿ ಮುಕ್ತಿಯನ್ನು ಸಾಧಿಸಬಹುದು.

—(())—

## ನವಶಕ್ತಿ

ಲೇ. ಆನಂದ ಕವಿಗಳು ಕುರುಗುಂದ

—ooo—

ನವಶಕ್ತಿ ಇದ್ದೆಡೆಗೆ ನಾವೀನ್ಯ ತುಂಬಿಹುದು
ಚಿತ್ಕಳೆಯು ಬೆಳಗುವದು
ಚೈತನ್ಯ ಉಕ್ಕುವದು
ಶೂರರೇ! ಏಳಿ. ಎಚ್ಚರಾಗಿರಿ
ಧೀರತನದಿಂ ವೀರ್ಯಮಂ ಗಳಿಸಿ
(ಭಾರತದ) ಆರೋಗ್ಯ ಸಂಪತ್ತು
ಬೆಳಿಸಿ ಸುಖವಾಗಿ ಬಾಳಿ

———o———

ಬಳ್ಳಾರಿ ಜಿಲ್ಲಾ ಜೋಳದ ರಾಶಿಯ
ಗಮಕಕಲಾನಿಧಿ

# ಶ್ರೀ ದೊಡ್ಡನಗೌಡರ ಸಮಕ್ಷಮದಲ್ಲಿ

—[ಅರ್ಪಣೆ]—



ಸ್ವರದಿಂ ಸ್ವರ್ಗನಿರ್ಮಿಸುವೆ, ರಾಗದಿಂ ರಾಜ್ಯವ ಕಟ್ಟುವೆ, ಕಂಠದಿಂ ಶ್ರೀಕಂಠನ ಒಲಿಸುವೆ. ಹಾಡಿನ ಶಾಸ್ತ್ರಕ್ಕೆ ಶುದ್ಧತೆಯ ಕೊಟ್ಟು ಮಾರ್ಗದರ್ಶಕನಾಗಿಹೆ. ನಾಡಿನ ಜನಕ್ಕೆ ಮುದವಕೊಟ್ಟು ದೇಶೀಯನಾಗಿಹೆ, ನಾಭಿಯಿಂ ಹೃದಯ ಪರ್ಯಂತ, ಹೃದಯದಿಂ ಕಂಠಪರ್ಯಂತ, ಕಂಠದಿಂ ಮೂರ್ಧ ಪರ್ಯಂತ, ವಿವಿಧಸ್ಥಾಯಿಗಳಲ್ಲಿ ಚಿರಸ್ಥಾಯಿಯಾಗಿಹೆ. ಎಲೆ, ದೊಡ್ಡನಗೌಡ, ನೀನು ಬೆಳೆದು ಬೆಳಗುವ ಜೋಳದರಾಶಿಯ ಗಾನ ಸುಧಾ ರಾಶಿಯ ಮಾಡಿ ಬೆಳಸಿ ಲೋಕವ ತಣಿಸುತಿಹೆ. ಬಸವಲಿಂಗಪ್ರಿಯ ಕಟಿಸ್ತು ಬಸವೇಶ್ವರನಲಿ, ನೀನೆ ಧನ್ಯನ್

# ಬಸವಪ್ರಭೆ

( ಲೇಖಕರು:— ಶ್ರೀ ಮ. ಮಲ್ಲಪ್ಪ ಜ್ಞಾನಮಂದಿರ ಹಲಗೂರ. )

ಬಸವನ ಪುಣ್ಯ ಕೀರ್ತಿಲತೆ ಬೇರ್ವರಿಯಿತ್ತು ರಗೇಂದ್ರ ಲೋಕದೊಳ್ ।
ದೆಸೆಗಳನಗ್ಗಳಂ ಮುಸುಕಿ ಪರ್ವಿದುದಾಗಳೆಮರ್ತ್ಯ ಲೋಕದೊಳ್ ।
ಪಸುಮಿತವಾಗಿ ಸೌರಭದಿ ಹೊಂಪುಳಿಯೋಯ್ತು ಸುರೇಂದ್ರ ಲೋಕದೊಳ್ ।
ಪೊಸರಸ ಪೂರಿತಾಮಳ ಸುಧಾಫಳ ಮಾದುದು ರುದ್ರಲೋಕದೊಳ್ ॥

**ಹರಿಹರ ಮಹಾಕವಿ.**

ಬಸವ ಪ್ರಭೆಯು ಜನ ಜೀವನದ ಮೇಲೆ ಸಾಮಾಜಿಕವಾಗಿ, ಸಾಹಿತ್ಯಕವಾಗಿ, ಧಾರ್ಮಿಕವಾಗಿ ಹಬ್ಬಿ ಹರಿದು ಹೊಳಪಿನಿಂದ ಹೊದಿಸಿದೆ. ಬಸವಣ್ಣನವರ ಸಾಂಸ್ಕೃತಿಕ ಜೀವನದ ಮಟ್ಟವು ಅತಿಉನ್ನತವಾದ ಹಾಗೂ ಅವರ ಅವಿರತ ಸಾಧನೆ ಮತ್ತು ಪರಿಶ್ರಮದ ಅಂತರಂಗಿಕ ಸೌಂದರ್ಯವು ಸೂರೆಗೊಳ್ಳುವಂತಿದೆ. ಉನ್ನತವಾದ ಜೀವನಕ್ಕೆ ಅನುಗುಣವಾಗಿ ಉದಾತ್ತ ಸಾಹಿತ್ಯವು ಉದಯವಾಗುತ್ತದೆ. ಬಸವಣ್ಣನವರ ವಚನಗಳಲ್ಲಿ ಪ್ರಗತಿಪರ ಮನುಜನ ಹೃದಯಲೀಲೆಯು ಕಾಣಬರುತ್ತಿದೆ. ಇದರಲ್ಲಿ ವಿಚಾರದ ಗಾಂಭೀರ್ಯವಿರುವಂತೆಯೇ ಭಾವನೆಯ ಮಾಧುರ್ಯವೂ ಇದೆ. ಇವರ ಸಾಹಿತ್ಯದಲ್ಲಿ ಗದ್ಯ ಪದ್ಯ ಲಕ್ಷಣಗಳಿವೆ. ಈ ವಚನಗಳು ಇಂಪಾಗಿಯೂ, ಸೊಂಪಾಗಿಯೂ ಕಂಪಾಗಿಯೂ, ಪೇಮಾಗಿಯೂ ಇವೆ. ಹಾಡುವವರನ್ನು ಕೇಳುವವರನು ಏಕಕಾಲದಲ್ಲಿಯೇ ಆನಂದ ತಲ್ಲೀನರನ್ನಾಗಿ ಮಾಡಿಸುತ್ತವೆ. ಪಂಡಿತರ ಸೊತ್ತಾಗಿದ್ದ ಸಾಹಿತ್ಯವನ್ನು ಸಾಮಾನ್ಯಜನರ ಸೊತ್ತಾಗಿಮಾಡಿದ ಮಹಾಭಾಗ್ಯವು ಮಹಾನುಭಾವಿ ಬಸವಣ್ಣನವರಿಗೆ ಸೇರಿರುತ್ತದೆ. ಸಂಸ್ಕೃತ ಶೃಂಖಲೆಯನ್ನು ಕಿತ್ತುಹಾಕಿ ಕನ್ನಡದ ಕಿಂಕಾಪಿನ ವೈಭವದಿಂದ ಮೆರೆಯುವ ಭಾಗ್ಯ ಬಸವಣ್ಣನವರಿಂದ ಬಂದಿರುತ್ತದೆ. ಅಶಿಕ್ಷಿತ ಜನಾಂಗದ ಕೈದೀಪವಾಗಿ ನಿಂತ, ಸ್ಪಷ್ಟ ಹಾಗೂ ಸುಲಭವಾಗಿ ಹೃದಯಕ್ಕೆ ತಟ್ಟಿ, ಆತ್ಮದ ಅನುಭವವು ಸಹಜವಾಗಿ ಸೋರುವ ಸತ್ವ ಸಾಹಿತ್ಯವಾಗಿರುತ್ತದೆ. ಇವರು ಆತ್ಮಸಂಯಮನದಿಂದ ಮಧುರವಾಗಿ ಕೀದರಲ್ಲಿ ಹಿರಿದನ್ನು ಹೇಳುತ್ತಾರೆ. ಉದಾತ್ತ ಗುರಿಯುಳ್ಳ ಪ್ರಯತ್ನವಾದಿ ಪ್ರಗತಿಪರ, ವಿಶಾಲ ಭಾವನೆಗಾರರು ಇವರು ಸರಳ ಹೃದಯದಿಂದ ಸುಲಭಶೈಲಿ, ಗಂಭೀರ ವಿಚಾರಗಳಿಂದ ಪ್ರೌಢ

ಶೈಲಿ, ಆತ್ಮನಿರೀಕ್ಷಣೆ ಮತ್ತು ಜಗತ್ಕಲ್ಯಾಣತೆಯಿಂದ ಮಧುರಶೈಲಿ, ಅಧ್ಯಾತ್ಮಿಕತೆ ಹಾಗೂ ಧೀರತನದಿಂದ ಮಹಾಶೈಲಿಯು ಇವರಿಗೆ ಸೌಲಭ್ಯದಿಂದ ಸಿಕ್ಕ ಸಕಲರೂ ಸಾದರಿಸುವ ಸಾಹಿತ್ಯವು ಬಸವಣ್ಣನವರಿಂದ ಸೃಷ್ಟಿಯಾಗಿ ಇಡೀ ಸಾಹಿತ್ಯ ಜಗತ್ತಿನಲ್ಲಿಯೇ ಒಂದು ಹೊಸ ಪ್ರಭೆಯು ಬಸವಣ್ಣನವರಿಂದ ಹರಡಿದೆ. ಶ್ರೀ ರಂಗನಾಥ ರಾಮಚಂದ್ರ ದಿವಾಕರರ 'ಅಂತರಾತ್ಮ' ಹಾಗೂ ಶ್ರೀ ಜೀರಗೆ ಕಟ್ಟಿ ಬಸಪ್ಪನವರ 'ಕಟ್ಟಿಯ ಬಸವೇಶ್ವರ ವಚನಗಳು' ಇದಕ್ಕೆ ನಿದರ್ಶನವಾಗಿವೆ. ಭಾರತದ ಭಾಗ್ಯಶಿಲ್ಪಿ ಬಾಪೂಜಿಯವರ ಸುಂದರ ಜೀವನತತ್ವಗಳಾದ ಸತ್ಯ, ಅಹಿಂಸೆ, ಬ್ರಹ್ಮಚರ್ಯ, ಅಸ್ತೇಯ, ಗ್ರಹ, ಅಸ್ವಾದ, ಅಭಯ, ಅಸ್ಪೃಶ್ಯತಾ ನಿವಾರಣೆ, ವಿನಯ, ಸ್ವದೇಶಿ ದಶ ಅಮರತತ್ವಗಳು ಈ ವಚನಗಳಲ್ಲಿ ಸುಗಂಧ ಸುವಾಸನೆಯನ್ನು ನೀಡುತ್ತಿವೆ.

ಆದ್ಯರ ವಚನ ಪರುಷ ಕಂಡಣ್ಣಾ ।
ಸದಾಶಿವನೆಂಬ ಲಿಂಗದ ನೆರೆನಂಬುವುದು
ನಂಬಲೊಡನೆ ಶಿವಲಿಂಗವು ಕಂಡಣ್ಣಾ
ಅಧರಕ್ಕೆ ಕಹಿ, ಉದರಕ್ಕೆ ಸಿಹಿ.
ಕೂಡಲಸಂಗನ ಶರಣರ ವಚನ ಬೇವಸಕ್ಕರೆಯಂತೆ

ಇವರ ವಿಚಾರ ಸ್ವಾತಂತ್ರ್ಯ, ಸತ್ಯಪ್ರೇಮ, ಆತ್ಮನಿರೀಕ್ಷಣೆ, ಸರ್ವಭೂತದಯೆ, ಇಂದ್ರಿಯನಿಗ್ರಹ, ಕಷ್ಟಸಹಿಷ್ಣುತೆ, ಸತತಯತ್ನ, ನಿರಹಂಕಾರವೃತ್ತಿ, ನಿರಾಶೆ, ನಿರ್ಭೀತಿ, ಲೋಕ ವ್ಯವಹಾರ ಚತುರತೆ, ಲೌಕಿಕ ಪಾರಮಾರ್ಥಿಕಗಳ ಸುಂದರ ಸಮನ್ವಯ ದೃಷ್ಟಿಯೇ ಜೀವನದ ಪರಿಪೂರ್ಣ ಚಿಹ್ನೆಗಳಾಗಿದ್ದುವು. ತಮ್ಮ ಬುದ್ಧಿಯೋಗದಿಂದಾಗಿ ಪ್ರಪಂಚವನ್ನೇ ದ್ವೇಷಿಸುವ ದೂಷಿಸುವ ಮಾನವರ ಮನೋಭಾವವನ್ನು ತಿದ್ದುವುದಕ್ಕಾಗಿ ಇವರು ಹೋರಾಡಿ ಹೆಣಗಾಡಿದರು. ಪ್ರಪಂಚವು ದುಃಖಮಯವಲ್ಲವು, ಸುಖಮಯವಾಗಿದೆಯೆಂದು ಸುಖವನ್ನು ಹೊಂದುವ ಕರ್ಮಕೌಶಲ್ಯದ ಹಾದಿಯಿದ್ದು ಬಿಟ್ಟಿರಿ ಎಂದು ಸತ್ಪಥದಲ್ಲಿ ಕರೆದುತಂದ ಮಹಾ ವಿಭೂತಿಯು ಬಸವಣ್ಣನವರು. ಇಂದಿನ ಜಗತ್ತಿನ ಅಶಾಂತಿಗೆ ಸೂಚಿ ಮದ್ದನ್ನು ಎಂದೋ ಕೊಟ್ಟು ಹೋಗಿರುವುದನ್ನು ಅರಿತು ಅದರ ಪ್ರಭೆಯಿಂದ ಎನಿತು ಮುಂದಿಯೋ ಕಣ್ಣು ಕಾಣಕಂತಾದರು. ಯಾವ ಭೇದವಿಲ್ಲದೆ, ನಿರ್ದಾಕ್ಷಿಣ್ಯದಿಂದ ದುರ್ಗುಣವನ್ನು ದೂರೀಕರಿಸಲು ಉತ್ಸಾಹಿಗಳಾಗಿ, ಸಮತೆಯಿಂದ ನುಡಿದರು. ಯಾವ ಜಾತಿಯವನೇ ಆಗಲಿ ಆತನು ಸುಶೀಲನಾಗಿ, ಸದ್ಗುಣಿಯಾಗಿ, ಸಚ್ಚಾರಿತ್ರ

ನಾಗಿದ್ದರೆ ಆತನೇ ನನ್ನ ಗುರುವೆಂದು ಇಂದಿನ ವಿಶಾಲ ವಿಶ್ವ ಭಾವನೆಯನ್ನು ಅಂದೇ ಬಸವಣ್ಣನವರು ಅನುಷ್ಠಿಸಿದರು. ಐಹಿಕ ಆಮುಷ್ಮಿಕ ಜೀವನಗಳೆರಡರಲ್ಲಿಯೂ ಇವರು ಸಾಮ್ಯವಾದವನ್ನು ಸ್ಥಾಪಿಸಿದರು. ಮೇಲು ಕೀಳು ಎಂಬುದನ್ನು ಮಣ್ಣುಗೂಡಿಸಿ ಮಹಾಪುರುಷರಾಗಿ ಮೆರೆದರು.

ಮೇಲಾಗಲೊಲ್ಲೆನು ಕೀಳಾಗಲಲ್ಲದೆ
ಕೀಳಿಂಗಲ್ಲದೆ ಹಯನು ಕರೆವುದೆ?
ಮೇಲಾಗಿ ನರಕದೊಳೋಲಾಡಲಾರೆನು;
ನಿಮ್ಮ ಶರಣರ ಪಾದಕ್ಕೆ ಕೀಳಾಗಿರಿಸಾ,
ಮಹಾದಾನಿ ಕೂಡಲಸಂಗಮದೇವಾ.

ಪರನಿಂದೆಯು ಆತ್ಮಘಾತುಕವಾದದ್ದು; ಸ್ವಪ್ರಶಸ್ಯವು ಉಚ್ಚತರವಾದದ್ದು; ಸಂಘಾಭಿಲಾಷಿಯಾದ ಮನುಜನು ಯಾವ ಮಟ್ಟದಲ್ಲಿದ್ದರೂ ಆತನಿಗೆ ಒಡನಾಡಿಗಳು ಬೇಕಲ್ಲೇಬೇಕು. ಮಹಾಪುರುಷಂಗೆ ಹೆಚ್ಚೇನ ಸವಿಯು ಸಜ್ಜನ ಸಂಗವು ಬೇಕಲ್ಲೇಬೇಕು. ಸಜ್ಜನರ ಸಹವಾಸದಿಂದ ತನ್ನಲ್ಲಿಯ ಅರಿವಿನ ಕಿಡಿಯು ಅಲ್ಲದೆ ಪರಸ್ಪರ ಸಂಸರ್ಗದಿಂದ ಕೆಂಡವಾಗುವುದಕ್ಕೆ ಅನುಕೂಲತೆಯು ಒದಗುವುದು. ಸಾಮಾನ್ಯರು ತಮ್ಮ ಮುಖಕ್ಕೆ ಮಸಿಯನ್ನು ಹಚ್ಚಿಕೊಂಡಿದ್ದಾಗ್ಯೂ ಇತರರ ನೊಸಲಿನಲ್ಲಿನ ತಿಲಕವನ್ನು ಎತ್ತಿ ಹಿಡಿಯುವುದರ ಮೂಲಕ ಪರರ ದೋಷವನ್ನೇ ತೂಗಾಡಿಸುವರು. ಹಿರಿಯರು ಜನಜಂಗುಳಿಯಲ್ಲಿ ತನ್ನನೊಬ್ಬನೆಂದು ತಿಳಿದು, ಕೆಳಗೆ ನಿಲ್ಲುವ ಚಾತುರ್ಯದಿಂದ, ಸದ್ವಿವೇಕದಿಂದ ರೀತಿ ನೀತಿಯನ್ನು ಕಂಡು ನುಡಿದು ನಗೆಗೀಡಾಗುವಂತಾಗುವರು. ಇದು ಬಲಿತಂತೆಲ್ಲ ಜ್ಞಾನಿಯು ಜಡವು ಜಜ್ಜಿ ಹೋಗಲು ಹಾದಿಯಾಗಿ, ಆತ್ಮಸಂಶೋಧನೆಯು ಅರಳುವುದು. ಇದು ಸಜ್ಜನರ ಸಹವಾಸದಿಂದ ಬರುತ್ತದೆ ಎಂಬುದನ್ನು ಬಸವಣ್ಣನವರು ಅರಿತುಕೊಂಡಿದ್ದುದು ಅವರ ವಚನಗಳಿಂದ ಅರಿವಾಗುವುದು.

ಅಯ್ಯಾ ಸಜ್ಜನ ಸದ್ಭಾವದ ಸಂಗದಿಂದ
ಮಹಾನುಭಾವರ ಕಾಣಬಹುದಯ್ಯ;
ಮಹಾನುಭಾವರ ಸಂಗದಿಂದ ಶ್ರೀಗುರುವ ನರಿಯ ಬಹುದು,
ಲಿಂಗವನರಿಯ ಬಹುದು, ಜಂಗಮವ ನರಿಯ ಬಹುದು,
ಪ್ರಸಾದವ ನರಿಯಬಹುದು, ತನ್ನತಾ ನರಿಯ ಬಹುದು,
ಇದು ಕಾರಣ ಸದ್ಭಕ್ತರ ಸಂಗವನೆ ಕರುಣಿಸು
ಕೂಡಲ ಸಂಗಮದೇವಾ, ನಿಮ್ಮ ಧರ್ಮ!

ಸಜ್ಜನ ಸಹವಾಸದಿಂದ ಪ್ರಸರಿಸುವ ಪ್ರಭೆಯನ್ನು ಬಸವಣ್ಣನವರು ಇಂತು ನೋಡಿರುವುದಲ್ಲದೆ ಆಪ್ರಭಾವಳಿಯಿಂದ ಪರಮಪಾವನರಾಗುವಂತೆ ಹಲವು ಮಂದಿಗೆ ಪಥವನ್ನು ಹಾಕಿಕೊಟ್ಟಿರುವರು. ತಮ್ಮ ತಮ್ಮ ತಪ್ಪನ್ನು ಹೃದಯ ಬಿಚ್ಚಿ ಪ್ರದರ್ಶಿಸಿ ಅದನ್ನು ಒಪ್ಪಿಕೊಂಡು ನ್ಯಾಯಮಾರ್ಗದಲ್ಲಿ ನರರು ನಡೆಯಲು ಅನುಷ್ಠಾನದ ಆದರ್ಶವನ್ನು ಇವರು ನಿದರ್ಶಿಸಿರುವರು.

ನ್ಯಾಯನಿಷ್ಠುರಿ, ದಾಕ್ಷಿಣ್ಯಪರರು ಇವರಲ್ಲ; ತಾನು ಹೆಚ್ಚು ಪರರು ಕೀಳು ಎಂದು ಎಣಿಸುವವರಲ್ಲ. ಜನರ ಮೂಢನಂಬಿಕೆಯನ್ನೂ, ಕಂದಾಚಾರವನ್ನೂ ಕಟಕಟನೆ ಕತ್ತರಿಸಿದರು. ಜಗತ್ತಿನ ಬಗೆ ಬಗೆಯ ದೇವರನ್ನು ಖಂಡಿಸಿ, ದೇವರೊಬ್ಬರೆಂಬ ಅಂಶವನ್ನು ಮಂಡಿಸಿದರು. ತಾಮ್ರ ಹಿತ್ತಾಳೆಯ ಮೂರ್ತಿಗಳನ್ನೂ, ಕಲ್ಲು ಮಣ್ಣಿನ ವಿಗ್ರಹಗಳನ್ನು ಅರ್ಚಿಸಿ ಆರಾಧಿಸುವವರ ಸೀಮಾಬದ್ಧದ ತಿಳಿವಳಿಕೆಯನ್ನು ಹರಿದು ಪಂಚಲಾಕಿ ಹಂಗಿಸಿ ಭಂಗಿಸಿದರು. ಪ್ರಭುವಿನ ಗುಹೇಶ್ವರನಾಗಲೀ, ಮಹಾದೇವಿಯಕ್ಕನ ಚೆನ್ನಮಲ್ಲಿಕಾರ್ಜುನನಾಗಲೀ ಸಿದ್ಧರಾಮನ ಕಪಿಲಸಿದ್ಧ ಮಲ್ಲಿಕಾರ್ಜುನನಾಗಲೀ, ಚೆನ್ನಬಸವಣ್ಣನ ಕೂಡಲಸಂಗಯ್ಯನಾಗಲೀ ಇವರ ದೃಷ್ಟಿಯಲ್ಲಿ ಭಗವಂತನೇ ಆಗಿದ್ದರು. ಈ ಶಿವಶರಣರು ಕೀರ್ತಿಸಿದ ನಾಮಗಳೆಲ್ಲ ಮೂರ್ತಿಯನಾಮಗಳಲ್ಲ. ತಮ್ಮ ಹೃದಯಕ್ಕೆ ಒಪ್ಪುವ ನಾಮಗಳನ್ನು ಅವರು ಆರಿಸಿಕೊಂಡಿರುವರೇ ವಿನಾ ಮತ್ತೆ ಬೇರೆಯಲ್ಲ. ಇವರ ದೃಷ್ಟಿಯಲ್ಲಿ ಪ್ರಕಾಶಗೊಳ್ಳುವ ಭಗವಂತನು ಒಬ್ಬನೇ ಒಬ್ಬನು. ಆತನು ತ್ರಿಮೂರ್ತಿಗಳಲ್ಲಿ ಒಬ್ಬನಾದ ಪರಶಿವನಲ್ಲ. ಕೃಷ್ಣನಂತು ಮೊದಲೇ ಅಲ್ಲ. ಮತ್ತೆ ಇನ್ನೆಂತು? ಭಕ್ತ ಅರ್ಥಾತ್ ಶರಣನ ಹೃದಯವಾಸಿಪ್ಪ ಏಕೋತ್ತಮನು.

ಬ್ರಹ್ಮಂಗೆ ವಾಕ್ಯ ಪರುಷ, ವಿಷ್ಣುವಿಂಗೆ ನಯನಪರುಷ,
ರುದ್ರಂಗೆ ಹಸ್ತ ಪರುಷ,
ನಮ್ಮ ಕೂಡಲಸಂಗನ ಶರಣಂಗೆ ಪಾದವೇ ಪರುಷ|

ಶಿವನಿಗಿಂತಲೂ ಶಿವಶರಣರೇ ಮೇಲೆಂದು ಮನವಾರೆ ಇವರು ಸೂಚಿಸಿದರು. ಮತೋದ್ಧಾರಕರೆಲ್ಲರೂ ನೀತಿಯನ್ನು ಬೋಧಿಸಿದ್ದರೂ, ಅವೆಲ್ಲವೂ ಸನ್ನಡೆನುಡಿ, ಸದಾಚಾರ ಸುವಿಚಾರಕ್ಕಿಂತ ಮಿಗಿಲಿಲ್ಲ ಎಂಬುದನ್ನು ಬಸವಣ್ಣನವರು ತೋರಿಸಿದರು, ನಿದರ್ಶಿಸಿದರು.

ಸತ್ಯ ಅಹಿಂಸೆಗಳ ತಳಹದಿಯಮೇಲೆ ಬಲಿತು ಬೆಳೆದ ಬುದ್ಧ ದೇವನ 'ದಯಾಧರ್ಮ' ದಲ್ಲಿ ನೀತಿಗೆ ಹೆಚ್ಚು ಪೀಠವಿದೆ. ಆದರೆ ಬಸವಣ್ಣನವರ ಬೋಧನೆಯ ಬಗೆಗೂ ಅದಕ್ಕೂ ಅಂತರವಿದೆ. "ಸದ್ಯೋಚನೆ ಮತ್ತು ಸತ್ಕಾರ್ಯದಿಂದ ಒಳ್ಳಿತೂ, ದುರಾಲೋಚನೆ ಮತ್ತು ದುಷ್ಕ್ರಿಯೆಗಳಿಂದ ಕೆಡಕೂ ನಮಗಾಗುತ್ತದೆ." ಎಂಬ ಬುದ್ಧ ಬೋಧೆಯಲ್ಲಿ ದೈವ ನಿರಾಕರಣೆಯಿದೆ. ಆ ಲೋಪವನ್ನು ನೋಡಿದ ಬಸವಣ್ಣನವರು ಮನುಷ್ಯನ ಕರ್ಮಗಳಿಗೆಲ್ಲ ಫಲವನ್ನು ಕೊಡುವ ಕರ್ತೃವು ಕೂಡಲಸಂಗಮನೆಂದು ಸ್ಪಷ್ಟ ಪಡಿಸಿರುವುದರಿಂದ ಜನಸಾಮಾನ್ಯಕ್ಕೆ ಸದಾಚಾರದ ಅಗತ್ಯವು ಮೂರ್ತಿವೆತ್ತಾಗಿ ಅರಿವಾಗಿದೆ.

ಸದಾಚಾರ ಸದ್‌ಭಕ್ತಿಯಿಲ್ಲದವರ ನೊಲ್ಲನಯ್ಯಾ;
ಅವರಾರಾಧನೆದಂಡ
ನಿಚ್ಚ ನಿಚ್ಚ ಪ್ರಾಯಶ್ಚಿತ್ತರನೊಲ್ಲ,
ಕೂಡಲಸಂಗಮದೇವ ಭೂಭಾರಕರ,

ಪ್ರತಿಯೊಬ್ಬರಿಗೂ ಅವರವರ ಆಚರಣೆಯು ಮನ್ನಣೆ ಮರ್ಯಾದೆಯನ್ನೂ ಬಿಡದು ಬಾಳಲಿಯನ್ನೂ, ಸಿರಿಸಂಪತ್ತನ್ನೂ ಕೊಡುವುದು ಅನುಭವವೇದ್ಯವಾಗಿರುವುದು ಅಂಗೈಯಲ್ಲಿನ ನೆಲ್ಲಿಕಾಯಿ ಯಾಗಿರುತ್ತದೆ.

ಬಸವಣ್ಣನವರು ವೀರಶೈವ ರಂಗಭೂಮಿಗೆ ಹೆಜ್ಜೆಹಾಕುತ್ತಲೇ ಕ್ರಾಂತಿಯೊಂದನ್ನೆಸಗಿದರು. ಅವರ ವ್ಯಕ್ತಿತ್ವವೇ ಅನೇಕರನ್ನು ಮರುಳು ಮಾಡಿತು. ಬಿಜ್ಜಳನು ವಿನಯ ವಿನಮ್ರನಾಗಿ ಅವರಿಗೆ ತಲೆಬಾಗಿದನು. ಇತರ ಮತಸ್ಥರು ಹಲವು ಮಂದಿ ದ್ವೇಷಾಸೂಯೆಯನ್ನು ಹೊಂದಿದ್ದರೂ ಅದನ್ನು ಹೊರಗೆಡಹಲು ಧೈರ್ಯ ಸ್ಥೈರ್ಯವಿಲ್ಲದೆ ಸಮಯಸಂದರ್ಭವನ್ನು ಕಾಯುತ್ತಿದ್ದರು. ರಾಜಾಧಿರಾಜರ ಸಹಾಯವಿಲ್ಲದಿದ್ದರೂ ಇತರ ಮತಸ್ಥರ ದ್ವೇಷಾಸೂಯೆಗಳಿದ್ದರೂ ಬಸವಣ್ಣನವರು ಎದೆಗೆಡದೆ ಏಕೈಕ ವೀರರಂತೆ ವೀರಶೈವ ಸಮಾಜಸುಧಾರಣೆಗೆ ಕೈಹಾಕಿದರು. ಅಸಾಧ್ಯವನ್ನು ಸಾಧ್ಯವಾಗಲು ಸಾಧಿಸುವ ವ್ಯಕ್ತಿಯನ್ನು ನೋಡಿದರೆ 'ಇವನಾವುದೋ ಭೂತವನ್ನೋ ಪಿಶಾಚವನ್ನೋ' ವಶಮಾಡಿಕೊಂಡಿದ್ದಾನೆ ಎನ್ನುವುದು ನಮ್ಮಲ್ಲಿ ರೂಢಿಯು. ಅಂತೆಯೇ ಅಂದು ಬಸವಣ್ಣನವರನ್ನೂ ಜನರು ಅಂದಿರಬೇಕು. ಅದಕ್ಕೆ ಬಸವಣ್ಣನವರು ಮರು ಮಾತು ಬರದಂತೆ ನುಡಿದರು.

ವಶ್ಯವ ಬಲ್ಲವೆಂದೆಂಬಿರಯ್ಯಾ—

ಬುದ್ಧಿಯನರಿಯದ ಮನುಜರು ಕೇಳಿರಯ್ಯಾ,
ವಶ್ಯವಾವುದೆಂದರಿಯದೆ
ಮರುಳುಗೊಂಬಿರಲೆ ಗಾವಿಲ ಮನುಜರಿರಾ!
"ಓಂನಮಃ ಶಿವಾಯ" ಎಂಬ ಮಂತ್ರ ಸರ್ವಜನವಶ್ಯ,
ಕೂಡಲಸಂಗಮದೇವಾ

ಪರಮತಸ್ಥರು ಮಾಡಿದ ದೋಷಾರೋಪಣೆಗಳಿಗೆ ಬಸವಣ್ಣನವರು ಕೊಟ್ಟ ಉತ್ತರದಲ್ಲಿಯೂ ಅಷ್ಟು ಕಾಠಿಣ್ಯತೆಯಿಲ್ಲ, ಅಹಂಭಾವವಿಲ್ಲ, ಮತಭ್ರಾಂತಿಯಿಲ್ಲ. ಬಸವಣ್ಣನವರು ತಮ್ಮ ಆತ್ಮಸಾಕ್ಷಿಗೆ ವಿರೋಧವಾಗಿ ಹೋದವರಲ್ಲ. ಇಂದು ನಮ್ಮ ಕಣ್ಣು ಮುಂದೆ ಕಾಣಿಸಿಕೊಂಡು ಕಳಚಿಕೊಂಡ ಮಹಾತ್ಮಾ ಗಾಂಧೀಜಿಯವರ ಜೀವನವು ಬಸವಣ್ಣನವರ ಪ್ರಭೆಯನ್ನು ವ್ಯಕ್ತಗೊಳಿಸದೆ ಇರದು. ಬಸವಣ್ಣನವರು ಮಾನವನ ದೋಷವನ್ನು ಕುರಿತು ಹೇಳುವಾಗ ಈ ಮನುಷ್ಯ ಶರೀರವು ಶಾಶ್ವತವಾದದ್ದಲ್ಲ. ಅನಂತ ದುಃಖದಲ್ಲಿ ನೆನೆನೆನೆದು ಅಂತ್ಯಕ್ಕೆ ದುರಂತದಲ್ಲಾಗುವುದು. ಸರಿಯಾಗಿ ವರ್ತಿಸದಿದ್ದರೂ ಈ ಜಗದ ತಂದೆತಾಯಿಗಳು ಬಂಧು ಮಿತ್ರರು ಯಾರಿಗೆ ಯಾರೂ ಆಗುವದಿಲ್ಲ. ಮನುಜನು ತನ್ನ ಮುಕ್ತಿಯನ್ನು ತಾನೇ ಸಾಧಿಸಬೇಕು. ಎಲ್ಲಿಯವರೆಗೆ ಈ ಎಲುಬಿನ ಗೂಡಿನಲ್ಲಿ ಪ್ರಾಣವೆಂಬ ಪಕ್ಷಿಯು ವಾಸವಾಗಿರುವುದೋ ಅಲ್ಲಿಯವರೆಗೂ ಅದಕ್ಕೆ ಪ್ರಾಶಸ್ತ್ಯ. ಹಕ್ಕಿ ಹಾರಿದ ಮೇಲೆ ಈ ಗೂಡು ಕೊಳೆಯುವುದು.

ವ್ಯಾಧನೊಂದು ಮೊಲನ ತಂದರೆ ಸಲುವಹಾಗಕ್ಕೆ ಬಿಲಿವರಯ್ಯಾ,
ಸಲೆ ನಾಳ್ದನ ಹೆಣನೆಂದಡೆ ಒಂದಡಕೆಗೆ ಕೊಂಬುವರಿಲ್ಲ! ನೋಡಯ್ಯಾ,
ಮೊಲನಿಂದ ಕಡುಕಷ್ಟ ನರನ ಬಾಳುವೆ!
ಸಲೆ ನಂಬೋ ನಮ್ಮ ಕೂಡಲಸಂಗಮದೇವನ

ಬಸವಣ್ಣನವರ ಉಜ್ವಲ ಧಾರ್ಮಿಕ ಭಾವನೆ, ಅತುಲ ಸ್ವಾರ್ಥತ್ಯಾಗ, ವಿಶ್ವಕುಟುಂಬ ಬುದ್ಧಿ, ವಿಶಾಲ ಹೃದಯ, ನಿಷ್ಕಳಂಕಾಚರಣೆ, ತಪ್ಪನೊಪ್ಪಿಕೊಳ್ಳುವ ಶೀಲದ ಪ್ರಭೆಯು ಇಂದಿನ ಅನೇಕ ಮಹಾತ್ಮರಿಗೆ ತಾಳಿದೆ.

ಇಂದು ಕಾಯಕದ ಬೆಲೆಯನ್ನು ಅರಿಯದೆ ಸುಲಭ ಜೀವನದ ಮೂಲಕ ಸೋಮಾರಿತನದ ಸೋನೆಗೆ ಸಿಕ್ಕಿರುವುದು ಯಾರಿಗೆ ತಾನೇ ತಿಳಿಯದು! ಕಾಯಕವು ಐಹಿಕದ ಉನ್ನತಿಗಾಗಿ ಮಾತ್ರವಿರದೆ ಅದು

ಷ್ಮಿಕ ಸಾಧನವಾಗಿದೆ ಎಂಬುದನ್ನು ಇವರು ವ್ಯಕ್ತಪಡಿಸಿದರು. ಇದರಿಂದ ಇಡೀ ಸಮಾಜವೇ ಸ್ವಾವಲಂಬಿಯಾಗಿ ಸಾಗಲು ಸಲೀಸಾಯಿತು. ಜಾತಿ ನಿರ್ಣಯವನ್ನು ವೃತ್ತಿಯಿಂದ ನಿರ್ಧರಿಸಲಾಗದೆಂದು ಕಾಯಕದಲ್ಲಿ ಮೇಲು ಕೀಳನ್ನು ಕಿತ್ತು ಹಾಕಿದರು. ತಮ್ಮ ಸಮೀಪಕ್ಕೆ ಬಂದವರನೆಲ್ಲರನ್ನೂ ಸಮಾಜ ಸೇವೆಯ ಸಹಾಯದಿಂದ ಸಾಗುತ್ತಿರುವ ಕಾಯಕವನ್ನು ಕುರಿತು ಪ್ರಶ್ನಿಸಿ, ಸಮಸ್ಯೆಯ ಪರಿಹಾರವನ್ನು ಕೈಗೊಂಡು, ಸರ್ವರೂ ಕಾಯಕ ಕೈವಲ್ಯ ಕಲ್ಪರಿಯನ್ನು ಕೈಕೊಂಡೇ ಬಾಳನ್ನು ಬೆಳಗಿಸುವಂತೆ ಮಾಡಿದರು. ತತ್ಫಲವಾಗಿ ಸಮಾಜದಲ್ಲಿ ಸ್ವಾತಂತ್ರ್ಯ ಸಮಾನತೆ, ಭ್ರಾತೃತ್ವವು ಏಕಕಾಲದಲ್ಲಿಯೇ ಉದ್ಭವಿಸಿ ಒಗ್ಗಟ್ಟು ಒಡಮೂಡುವಂತಾಯಿತು ಹೆಂಗಸೆಂದರೆ ಇವರಿಗೆ ಮಹಾಮನ್ನಣೆಯ ಮತಿ ಇದ್ದಿತು. ಗಂಡಸರಷ್ಟೇ ಹೆಂಗಸರೂ ಕೂಡ ದೀಕ್ಷೆಗೆ ಯೋಗ್ಯರೆಂದೂ ಅವರನ್ನು ಕೇವಲ ಸಂಸಾರ ನಿರ್ವಹಣೆಯ ಸಾಧನವನ್ನಾಗಿ ಮಾತ್ರ ಅರಿಯುವುದು ತಕ್ಕುದಲ್ಲವೆಂದು ಬೋಧಿಸಿದರು. ತನ್ನ ಸದ್ಗತಿಯನ್ನೂ ತನ್ನ ಗಂಡನ ಸದ್ಗತಿಯನ್ನೂ ಹೆಂಗಸು ಸಾಧಿಸಬಲ್ಲಳೆಂಬುದು ಇವರ ಮತ. ಆದ ಕಾರಣ ಪತಿಯಾಗಲೀ ಪತ್ನಿಯಾಗಲೀ ಯಾರಿಗೆ ಯಾರೂ ಹೆಚ್ಚಿಲ್ಲದೆ ಸರಿಸಮಾನರು. ವೇದಸ್ಮೃತಿಗಳು ಹೆಂಗಸರ ವಿಷಯದಲ್ಲಿ ತೊಟ್ಟಿದ್ದ ಭಾವನೆಯ ಬಂಧನವನ್ನು ಬಿಡಿಸಿ ಇವರು ಸ್ವತಂತ್ರ ದಾರಿಯೊಂದನ್ನು ಹಾಕಿದರು. ಮುಂದೆ ಬಗೆಬಗೆಯ ಮುಂದಿಯು ವೀರಶೈವ ಧರ್ಮವನ್ನು ಅವಲಂಬಿಸಿದಾಗ ತಮ್ಮ ಪೂರ್ವದ ಕಾಲಾಚಾರಗಳನ್ನು ಅವರವರ ಮಟ್ಟಿಗೆ ಹೊರದೂಡಿದುದರ ಕಾರಣವಾಗಿಯೇ ಇಲ್ಲಿ ಸ್ತ್ರೀಪ್ರಾಶಸ್ತ್ಯವು ಸಿಕ್ಕಿತು. ಹುಟ್ಟಿದ ಹೆಣ್ಣು ಮದುವೆಯಾಗಿಯೇ ತೀರಬೇಕೆಂಬ ಭದ್ರಭಾವನೆಯು ಬದಲಾಯಿಸಿತು. ಇವರ ತತ್ವಪ್ರಚಾರದ ಫಲವಾಗಿ ಪ್ರಾಚೀನ ಭಾರತೀಯರಲ್ಲಿ ರೂಢಿಯಲ್ಲಿದ್ದ ಪ್ರೌಢ ವಿವಾಹವು ಪುನಃ ಅನುಷ್ಠಾನಕ್ಕೆ ಬಂದಿತು. ಪ್ರೌಢವಿವಾಹದ ಬೆಳೆವಣಿಗೆಯಿಂದ ವಿಧವಾ ವಿವಾಹದ ಅವಶ್ಯಕತೆಯು ಅದೆಷ್ಟೋ ಕಡಿಮೆಯಾಯಿತು. ವರದಕ್ಷಿಣೆಯಂತಹ ನೀಚಪದ್ಧತಿಯನ್ನು ಇವರು ಒಪ್ಪದೆ ಪ್ರೋತ್ಸಾಹಿಸದೆ ಇದ್ದ ಶರಣ ಸಮಾಜಕ್ಕೆ ಒಂದು ಬಗೆಯ ಉಚ್ಚ ಸೇವೆಯನ್ನು ಸಲ್ಲಿಸಿದಂತಾಯಿತು. ಅವಿಚಾರ ಪರವಾದ ಲಿಂಗಭೇದವನ್ನು ಕಲ್ಪಿಸಿ ಹೆಣ್ಣು ಜನ್ಮದಿಂದ ಕೀಳೆಂಬ ಕೆಟ್ಟ ಭಾವನೆಯನ್ನು ತೋರಿಸುತ್ತಿದ್ದ ಸಮಾಜವನ್ನು ಪ್ರತಿಭಟಿಸಿ ಸ್ತ್ರೀಯರ ಸ್ಥಾನಮಾನದ ನಿಜವನ್ನು ಗೊತ್ತು ಪಡಿಸಿದರು.

ಸಾಂಸಾರಿಕ ಮೋಹನೇ ಹೆಚ್ಚಿಹೆಬ್ಬುಳ್ಳವಾಗಿ ಕನಿದುಕೊಂಡ ಮಾಯೆ —ಯಿಂದ ಆತ್ಮ ಘಾತವಂತೆ!

ತುಪ್ಪದ ಸವಿಗೆ ಅಲಗನೆಕ್ಕುವ ಸೊಣಗನಂತೆನ್ನ ಬಾಳುವೆ!
ಸಂಸಾರ ಸಂಗವ ಬಿಡದು. ನೊಡೆನ್ನ ಮನವು.
ಈ ನಾಯಿತನವ ಮಾಣಿಸು
ಕೂಡಲಸಂಗಮದೇವಾ, ನಿಮ್ಮ ಧರ್ಮ!

ಇದಕ್ಕಾಗಿ ಮರುಳಾಗಿ ಮಾರುಹೋದುದಕ್ಕೆ ಹಲುಬಿ ಹಂಬಲಿಸಿ ಹಂಪಾಡಿ ಮೊರೆಹಾಕಿ ದೈನ್ಯದಿಂದ ಬಸವಣ್ಣನವರು ಪ್ರಾರ್ಥಿಸುವರು. ಭಗವಂತನ ದಯಾಶಕ್ತಿಸದಿಂದಲ್ಲದೆ ಜೀವ ಕೋಟಿಯ ಉದ್ಧಾರಕ್ಕೆ ಗತಿ ಮತ್ತಿಯು ಎಲ್ಲಿ ತಾನೇ ಎಲ್ಲಿರುವುದು? ಮನುಜನ ಮನವು ಮರದ ಮೇಲಿನ ಮರ್ಕಟನು ಅಲ್ಲಿಂದ ಇಲ್ಲಿಗೆ ಇಲ್ಲಿಂದ ಅಲ್ಲಿಗೆ ಆಡ್ಡಾಡುತ್ತಿರುವುದು. ಈ ಚಂಚಲತೆಯಿಂದ ಪರಮಾತ್ಮನು ದುರ್ಲಭನೇ ಸರಿಯು. ಈ ಚಪಲತೆಯನ್ನು ಚಚ್ಚಿ, ದೃಢಭಕ್ತಿಯನ್ನು ದಳಿತ ಗೊಳಿಸಿದರೆ ಮಾತ್ರ ಸಾಧ್ಯವು. ಬಹುಬಗೆಯಾಗಿ ಮನಸ್ಸನ್ನು ಶಿಕ್ಷಿಸಿ, ಹತೋಟಿಯಲ್ಲಿಡಿಸಿ ಕೊಳ್ಳಬೇಕೆಂಬ ಬಯಕೆಯಿಂದ ಬಾಳಿದವರು ಇವರು. ಮರಮರಳಿ ಮಾಯೆಯು ಮುಸುಕುವುದು. ಮನದ ಆಬಗೆಯ ಡೊಂಕುಕೊಂಕು ಸಾಮಾನ್ಯ ಸಾಧನೆಗೆ ಸರಿನೇರವಾಗದು. ಅಂತರಂಗ ಪರಿಶುದ್ಧಿಯಿಲ್ಲದವನ ಭಕ್ತಿಯು ಬರಿಯ ಬಾಹ್ಯಾಚರಣೆ ಮಾತ್ರದ ಸೋಗೇ ಸರಿಯು. ದೇಹ ವೇನೂ ದೋಷವಲ್ಲವು; ಅದು ಸರ್ವ ಸಾಧನೆಯ ಫಲ ಭೂಮಿಯೂ ಆಗಿರುವುದು. ಆದರೂ ಲೋಕರೂಢಿಯಂತೆ ಆವರಿಸಿಕೊಳ್ಳುವ ಮಾಯೆಯೋ ಎಲ್ಲದಕ್ಕೂ ಅಡ್ಡಿ ಆಡಚಣೆಯು. ಇಷ್ಟಾದರೂ ಅವಗುಣವೆಂಬ ಕಸವನ್ನು ಕಿತ್ತು ಹುಲುಸು ಬೆಳೆಯನ್ನು ಬೆಳೆಯಿಸುವರಾರು? ನಿಶ್ಚಲತೆಯ ನೆಲೆಯತ್ತ ಧಾವಿಸಲಾರದ ಕುಂಟುಕುರಿಯ ಜೀವನವು ಅಗ್ನಿಯಲ್ಲಿ ಬೀಳಾಗಿ ಬೀಳುವುದು. ವಿಷಯಾದಿಗಳ ಭಾರದ ಹೊರೆಯನ್ನು ಹೊತ್ತುಕೊಂಡು ಹೋಗುವ ರೀತಿಯ ಸಿದ್ಧಿಯ ಸೀಮೆಯನ್ನು ಮುಟ್ಟಲಾರದು. ಈ ಪ್ರಪಂಚವು ಒಳ್ಳೆಯದು ಕೆಡಕೆಂಬ ಸರಕು ಸಾಮಗ್ರಿಗಳನ್ನೊಳಗೊಂಡಿರುವ ಒಂದು ಅಂಗಡಿಯು- ಅವುಗಳನ್ನು ಅಲ್ಲಲ್ಲಿ ಸರಿಯಾಗಿ ಜೋಡಿಸಿ ಮಾರುವ ವರ್ತಕನು ಪರಮಾತ್ಮನು. ಈ ಸರಕು ಸುಲಭವಾಗಿ ಸಿಗಬೇಕಾದರೆ 'ಪರಸ್ಪರಂ ಭಾವಯಂತಃಶ್ರೇಯಃ ಪರಮ ವ್ಯಾಪ್ಸ್ಯಥ' ಎಂಬ ಉಕ್ತಿಗನುಗುಣವಾಗಿ

ಸರ್ವರೂ ತಮ್ಮ ಚಿತ್ತ ಭೂಮಿಯಲ್ಲಿ ತ್ಯಾಗ, ಆತ್ಮವಿಶ್ವಾಸ, ಸಮತೆಯ ಬೀಜದ ಮೊಳಕೆಯನ್ನು ಮಾಡಿಕೊಳ್ಳಬೇಕು.

ಕುಲಮದವಳಿಯದನ್ನಕ್ಕ ಶರಣನಾಗಲೇಕೇ ?
ವಿಧಿವಶಬಿಡದನ್ನಕ್ಕ ಭಕ್ತನಾಗಲೇಕೇ ?
ಹಮ್ಮಿನ ಸೊಮ್ಮಿನ ಸಂಬಂಧ ಬಿಟ್ಟು
ಕಿಂಕಿಲ ಕಿಂಕಿಲನಾಗಿರಬೇಕು.
ಹೆಪ್ಪನೆರೆದು ಹಾಲು ಕೆಟ್ಟು ತುಪ್ಪವಪ್ಪಂತೆ
ಇಪ್ಪರು ಕೂಡಲಸಂಗಮದೇವಾ ನಿಮ್ಮ ಶರಣರು.

---

# ಮಾಯಾ ಕೋಲಾಹಲ ಪ್ರಭುದೇವ

(ಬರೆದವರು:- ಮಲ್ಲಿಕಾರ್ಜುನ ತಿ. ಲಕ್ಕೆ.)
'ಸಾಹಿತ್ಯಭೂಷಣ' ಬೆಳಗಾವಿ,

—೦○೦—

"ಮುಂದು ಜಾವದಲೆದ್ದು ಲಿಂಗದಂಘ್ರಿಯ ಮುಟ್ಟಿ ಸುಪ್ರಭಾತ ಸಮಯದಲ್ಲಿ ಸದ್ಭಕ್ತರ ಮುಖವ ನೋಡುವುದು. ಹುಟ್ಟಿದುದಕ್ಕಿದೇ ಸಫಲ ನೋಡಾ! ಸತ್ಯವಚನವಿಂತೆಂದುದು. ಇದಿಲ್ಲದವರ ಕಂಡಡೆ ನಾನೊಲ್ಲೆ ಗುಹೇಶ್ವರಾ."
—ಪ್ರಭುದೇವ

ಕನ್ನಡ ಕುಲಗುರು ಆತ್ಮಜ್ಞಾನಿ ಅಲ್ಲಮಪ್ರಭು ವೀರಶೈವ ಧರ್ಮದ ಇತಿಹಾಸವಲ್ಲಿ ಅದ್ವಿತೀಯ ಮಹಾಪುರುಷ! ಪರಿಪೂರ್ಣ ವೈರಾಗ್ಯಶಾಲಿ! ಜೀವನ್ಮುಕ್ತ! ನಿಷ್ಕಾಮ ಕರ್ಮಯೋಗಿ! ಸದಾಲೋಕರಂಜನೆಯಲ್ಲಿಪ್ಪ ನಾವು ಇಂತಹ ಅದ್ವಿತೀಯ ಮಹಾಪುರುಷರ ಅಮೃತವಾಣಿಯನ್ನು ಸವಿಯುವದು ಅತ್ಯವಶ್ಯ! 'ಆದ್ಯರ ವಚನ ಪರುಷ' ಎಂಬಂತೆ ಅವುಗಳನ್ನು ನಮ್ಮಲ್ಲಿ ಅಳವಡಿಸಿಕೊಂಡು ನಮ್ಮ ಮನದ ಮೈಲಿಗೆಯ ತೊಳೆದುಕೊಳ್ಳುವದು ಅತ್ಯಗತ್ಯ!

ಕೈಲಾಸದಲ್ಲೊಮ್ಮೆ ಶಿವಪಾರ್ವತಿಯರ ವಾಗ್ವಾದ. 'ಕೈಲಾಸದಲ್ಲಿ ತಮ್ಮ ಸನ್ನಿಧಿಯಲ್ಲಿರುವ ಮಹಾಪುರುಷರೆಲ್ಲರೂ ಭವಕ್ಕೆ ಬಾರದೆ ನಿತ್ಯ ಸುಖದಿಂದಿರುತ್ತಾರೆಯೋ? ಅವರಿಗೆ ಇಲ್ಲಿ ನೆಲೆ ಇಲ್ಲವೇ?' ಎಂದು ಪಾರ್ವತಿಯು ಪರಮೇಶ್ವರನನ್ನು ಕೇಳಿದಳು. 'ನಾಮ, ರೂಪ, ಕ್ರಿಯೆಗಳನ್ನು ಜಯಿಸ ಬಲ್ಲವನಿಗೆ ಮಾತ್ರ ನಿತ್ಯ ಸುಖ! ಉಳಿದವರಿಗೆ ಆ ಸುಖ ಲಭಿಸಲಾರದು. ಅವರು ಭೂಮಿಯಲ್ಲಿ ಮಾನವಜನ್ಮ ತಾಳಿ ಸಾಧನಬಲದಿಂದ ಸಿದ್ಧಿ ಪಡೆಯ ಬೇಕು ಎಂದು ಪ್ರತ್ಯುತ್ತರವಿತ್ತ. 'ಹಾಗಾದರೆ ಭೂಲೋಕದಲ್ಲಿ ಈ ಶಿವಾನುಭವ ತತ್ವಸ್ವರೂಪವನ್ನು ಬೋಧಿಸುವ ಗುರು ಯಾರಿದ್ದಾನೆ? ಎಂದು ಪಾರ್ವತಿ ಪುನಃ ಕೇಳಿದಳು. ಆಗ ಶಿವನು ಭೂಲೋಕದಲ್ಲಿ ಬಳ್ಳಿಗಾವೆಯಲ್ಲಿ ನಿರಹಂಕಾರ ಮತ್ತು ಸುಜ್ಞಾನಿ ಎಂಬ ದಂಪತಿಗಳಿಗೆ ಮಗನಾಗಿ ಅಲ್ಲಮಪ್ರಭು ಹುಟ್ಟುವನು. ಅವನೇ ನನ್ನ ಗಣಾಂಶ. ಅವನೇ ಲೋಕಾರಾಧ್ಯ ಪರಮ ಗುರು ಎಂದು ಹೇಳಿದನು. ಇದನ್ನು ಕೇಳಿದ ಪಾರ್ವತಿಯು ನಸುನಕ್ಕು ಅಲ್ಲಮಪ್ರಭುವಿನ ಶಕ್ತಿಯನ್ನು ನೋಡ ಬೇಕೆಂದು ನಿಶ್ಚಯಿಸಿ ಅವನನ್ನು ಪರೀಕ್ಷಿಸಿ, ಶಿವಪಥದಿಂದ ತಪ್ಪಿಸಲು ತನ್ನ ತಾಮಸ ಗುಣಾಂಶದಿಂದ ಭೂಲೋಕದಲ್ಲಿ ಬನವಾಸೀ ಪಟ್ಟಣದಲ್ಲಿ ಮಮಕಾರ ಮೋಹಿನಿದೇವಿಯ ಉದರದಲ್ಲಿ ಮಾಯಾದೇವಿಯನ್ನು ಹುಟ್ಟಿ ಸುವಳು

ಅರಮನೆಯಲ್ಲಿ ಯಾವುದಕ್ಕೇನು ಕೊರತೆ? ಮಮಕಾರ ಭೂಪಾಲನ್ನು ಮಗಳ ಬಾಲಲೀಲೆಯಲ್ಲಿ ಆನಂದದಿಂದ ಲೋಲಾಡುತ್ತಿದ್ದನು. ಅಂತೂ 'ದೇವ, ದಾನವ, ಮಾನವರುಗಳ ದಾವಣಿಯ ದನವಾಗ ಕಟ್ಟುವ ಭಾವೆ ಮಾಯಾದೇವಿ' ತನ್ನ ಬಾಲ್ಯಾವಸ್ಥೆಯನ್ನು ಮೀರಿದಳು. ನಿತ್ಯವೂ ಊರ ಹೊರಗಿನ ಮಧುಕೇಶ್ವರ ದೇವಾಲಯದ ಪೂಜೆಗೈದು ಲಾಸ್ಯವಾಡಿ ಬರುತ್ತಿದ್ದಳು.

ಇತ್ತ ಅಲ್ಲಮಪ್ರಭುವಾದರೂ ಕೂಡ ಹದಿನಾರರ ಹರೆಯದವ ನಾಗಿದ್ದ. ಮನ್ಮಥನನ್ನು ಸೋಲಿಸುವ ರೂಪು! ಸರಸ್ವತಿಯನ್ನು ನಾಚಿ ಸುವ ವಿದ್ಯೆ! ಲಕ್ಷ್ಮಿಯನ್ನು ತಲೆದೂಗಿಸುವ ಲಾವಣ್ಯವನ್ನು ಕಂಡು ತಂದೆ ತಾಯಿಗಳು ಆನಂದಿಸುತ್ತಿದ್ದರು. ವಂಶೋದ್ಧಾರಕನಾಗಿ ಪುತ್ರನು ಮೆರೆದಾನೆಂದು ಭಾವಿಸಿದ್ದರು. ಆದರೆ ಇಹ ಸುಖಗಳಲ್ಲಿ ಇಚ್ಛೆಯಿಲ್ಲದ ಭೋಗ ಲಾಲಸೆಗಳಲ್ಲಿ ಅಭಿರುಚಿಯಿಲ್ಲದ ಸತ್ಯ ಸ್ವರೂಪವನ್ನು ತಿಳಿಯಲು

ಹವಣಿಸುತ್ತಿದ್ದ, ಲೋಕಕಲ್ಯಾಣ ಸಾಧನೆಗಾಗಿ ಆತ್ಮಯಜ್ಞ ಮಾಡಬೇಕೆಂದಿದ್ದ, ಪ್ರಭುವು ಈ ನಶ್ವರ ಸಾಮ್ರಾಜ್ಯಕ್ಕೆ ಅಧಿಪತಿಯಾದಾನೇ? ಭೋಗ ಸಾಮ್ರಾಜ್ಯಕ್ಕೆ ಮಾರುಹೋದನೇ ? ಆದರೂ ತಂದೆತಾಯಿಗಳು ತ್ರಿಲೋಕ ಸುಂದರಿಯಾದ ಹೆಣ್ಣನ್ನು ತಂದು ಮಗು ಮಹಾರಾಜನಿಗೆ ಮದುವೆ ಮಾಡಬೇಕೆಂದು ಯೋಚಿಸಿದರು. ಪ್ರಭುವು ಅರಿತು ಈ ಭೋಗವಾಸನೆಯೇಕೆ ? ಈ ಕರ್ಮದ ಜಂಜಡವೇಕೆ ?

'ಹಳ್ಳದೊಳಗೊಂದು ಹುಳ್ಳಿಬರುತ್ತಿರಲು ನೊರೆತೊರೆಗಳು ತಾಗಿದವಲ್ಲಾ.
ಸಂಸಾರವೆಂಬ ಸಾಗರದೊಳಗೆ ಸುಖದುಃಖಗಳು ತಾಗಿದವಲ್ಲಾ.
ಇದಕ್ಕಿದು ಮೂರ್ತಿಯಾದ ಕಾರಣ ಪ್ರಳಯವಾಯಿತ್ತು ಗುಹೇಶ್ವರಾ'

ಎಂದೆಂದು ಪ್ರಭು ಸಂಸಾರವನ್ನು ನಿರಾಕರಿಸಿದ. ಬಳ್ಳಿಗಾವೆ ಬಿಟ್ಟು ದೇಶದಾ ಮಧ್ಯದಲ್ಲಿ ವಿರಾಜಿಸುತ್ತಿದ್ದ. ಲೋಕದ ಬೆಡಗು ಬಿನ್ನಾಣಗಳನ್ನು ಕಂಡು ತನಗೆ ತಾನೇ ನಗುತ್ತಿದ್ದ. ಕರ್ಮದ ಜಂಜಡದಲ್ಲಿ ಮುಳುಗಿ ತಾವೇ ಮಹಾ ಸಾಧಕರೆಂದು ವಂಚಿಸುತ್ತ ಜೊತೆಗೆ ತಾವೂ ವಂಚಿತರಾಗುತ್ತಿದ್ದ ಕರ್ಮಜಡರನ್ನು ಕಂಡು ಕರುಣಾರ್ದ್ರ ಹೃದಯದಿಂದ ಮರುಗುತ್ತಿದ್ದ. ಹಾಡುವ ಹಕ್ಕಿ ಗಣದಲ್ಲಿ ಪರಶಿವನ ಓಂಕಾರ ಮಾಧುರ್ಯವನ್ನು ಸವಿಯುತ್ತಿದ್ದನು. ಆನಂದ ಲಹರಿಯಲ್ಲಿ ಮಗ್ನನಾಗಿ ಆಗಾಗ ಶಿವಯೋಗ ನಿದ್ರಾಮುದ್ರಿತನಾಗುತ್ತಿದ್ದ. ಹಸಿವು ಬಾಯಾರಿಕೆ ಮುಂತಾದ ಶರೀರ ಗುಣಗಳೆಲ್ಲ ಅಳಿದುಹೋಗಿದ್ದುವು. ಒಮ್ಮೆ ಮದ್ದಳೆಯನ್ನು ಬಾರಿಸುತ್ತ ತಾಂಡವ ನೃತ್ಯದಲ್ಲಿ ಕುಣಿಕುಣಿದಾಡಿದ. ಮೃದಂಗ ನಾದ ಲೀಲೆಯಲ್ಲಿ ಮೈಮರೆತು ನೆಲದ ಮೇಲೊರಗಿದ. ಅಷ್ಟರಲ್ಲಿ ಕರುಣಾಂತಃಕರಣದಿಂದ ಶಿವನು ಪ್ರತ್ಯಕ್ಷನಾಗಿ ಪ್ರಭುವನ್ನು ಆಲಿಂಗಿಸಿ ಮಸ್ತಕದ ಮೇಲೆ ಹಸ್ತವಿಟ್ಟು, ತನ್ನ ಕೊರಳಲ್ಲಿದ್ದ ಮಂದಾರಮಾಲಿಕೆಯನ್ನು ಆತನ ಕಂಠಕ್ಕೆ ಹಾಕಿ ತಾಂಬೂಲ ಪ್ರಸಾದ ಕೊಟ್ಟು, ಸಂತೋಷದಿಂದ ಆಶೀರ್ವದಿಸಿದ. ಈಗ ಪ್ರಭು ನಡೆದರೆ ಸುಳಿಹಿಲ್ಲ. ಹೆಜ್ಜೆಗಳಿಲ್ಲ. ಭಕ್ತಿ ಜ್ಞಾನ ವೈರಾಗ್ಯಗಳು ತುಂಬಿ ಕಳಕಳಿಸುತ್ತಿದ್ದವು. ನಿರ್ದೇಹಿಯಾಗಿ ಸಂಚರಿಸುತ್ತಿದ್ದ.

ಇತ್ತ ಬನವಾಸಿಯ ಮಧುಕೇಶ್ವರ ದೇವಾಲಯ. ಮಾಯಾದೇವಿ ಪ್ರತಿದಿನವೂ ಪೂಜೆಮಾಡುತ್ತ ಲಾಸ್ಯ ನೃತ್ಯದ ಸೇವೆಯನ್ನು ಸಲ್ಲಿಸುತ್ತಿದ್ದಳು. ಪ್ರಭುವು ದೇಶಪರ್ಯಟನ ಮಾಡುತ್ತ ಬನವಾಸಿಗೆ ಬಂದಿದ್ದ. ಮೃದಂಗ

ವಾದನ ಕೈಂಕರ್ಯದಿಂದ ಶಿವನನ್ನು ಆರಾಧಿಸಲು ದೇವಾಲಯಕ್ಕೆ ಬಂದ. ಮಾಯೆ ತನ್ನ ಲಾಸ್ಯ ವಿಲಾಸವನ್ನು ಮುಗಿಸಿ ಶಿವಲಿಂಗ ಪ್ರಸಾದವನ್ನು ಭಕ್ತಿಯಿಂದ ಸ್ವೀಕರಿಸಿದಳು. ನಾಟ್ಯ ವಿದ್ಯಾ ನಿಪುಣೆಯಾದ ಆ ರಾಜಪುತ್ರಿ ಪ್ರಭುವನ್ನು ಕೂಡಲು ಕಾತುರಳಾದಳು. ಪ್ರಭುವಿನ ಮದ್ದಳೆಯ ಚಾತುರ್ಯವನ್ನು ಕಂಡು ಮೋಹಪರವಶಳಾದಳು. ಅಂತೆಯೇ ಪ್ರಭುವನ್ನು ತನ್ನ ಅರಮನೆಗೆ ಕರೆದೊಯ್ದಳು.

ಕೆಲಕಾಲದ ನಂತರ ಮಾಯೆ: ಪ್ರಭುವನ್ನು ಆಲಿಂಗಿಸಲು ಕೈಗೆ ಸಿಕ್ಕುತ್ತಿರಲಿಲ್ಲ. ಪ್ರಭು, ಮಾಯೆ.ಯನ್ನು ಕೋಟಲೆಗೊಳಿಸಿದ. ನಿರಾಶಳಾದಳು. ವಿಫಲ ಮನೋರಥಳಾದಳು. ವೈರಾಗ್ಯ ಸೂರ್ಯನನ್ನು ಕಾಮ ನಿಶೆಯು ಮುಚ್ಚಬಲ್ಲುದೇ ? ಮಾಯೆ ಜಯಿಸಲಿಲ್ಲ. ಪಾರ್ವತಿಗೆ ಖೇದವಾಗಿ 'ವಿಮಳೆ' ಎಂಬ ಮತ್ತೊಬ್ಬಳನ್ನು ಮಾಯೆಯ ಸಹಾಯಕ್ಕೆ ಕಳುಹಿ ಕೊಟ್ಟಳು. ವಿಮಳೆ ಮಾಯೆಯೊಂದಿಗೆ ಕೂಡಿ ಪ್ರಭುವನ್ನು ಜಯಿಸಲು ಪ್ರಯತ್ನಿಸಹತ್ತಿದರು ಸಾಧ್ಯವಾದೀತೇ ? ಪ್ರಭುವು ಬನವಾಸಿಯನ್ನು ಬಿಟ್ಟು ಅರಣ್ಯದತ್ತ ಸಾಗತೊಡಗಿದ. ಮಾಯೆ, ವಿಮಳೆಯರಿಬ್ಬರೂ ಬೆನ್ನು ಹತ್ತಿದರು. ಆದರೂ ಸಿಕ್ಕಲಿಲ್ಲ. ಕಡೆಗೊಮ್ಮೆ ಪ್ರಭುವು ಮಾಯೆಯಾದ ಕಲುಷಿತವಾದ ಫಲಾಪೇಕ್ಷೆಯಿಂದ ಕೂಡಿದ ಭಕ್ತಿ ನಿಷ್ಪ್ರಯೋಜನ ! ಸ್ವಾರ್ಥ ಭಕ್ತಿ ! ತಾಮಸದ ಚಂಚಲ ಭಕ್ತಿಗೆ ಎಲ್ಲಿಯೂ ಸ್ಥಾನವಿಲ್ಲ. ಮಾಯೆ ಖಿನ್ನಳಾಗಿ ಮೂರ್ಛೆಹೊಂದಿದಳು. ಪ್ರಭುವು ಕಾಣೆಯಾದ. ವಿಮಳೆ ಮಾಯೆಯನ್ನು ಎಬ್ಬಿಸಿ ಹಿಂದಕ್ಕೆ ಕರೆದೊಯ್ದಳು. ಪಾರ್ವತಿಗೆ ಖೇದವಾಯಿತು. ಪರಮಾತ್ಮನು ಆನಂದದಿಂದ 'ಪ್ರಭುವಿಗೆ ಮಾಯಾ ಕೋಲಾಹಲ' ಎಂಬ ಬಿರುದನ್ನು ಕೊಟ್ಟ. ಅಂತೆಯೇ ಮಾಯೆ.ಯನ್ನು ಜಯಿಸಿ 'ಮಾಯಾ ಕೋಲಾಹಲ ಪ್ರಭುದೇವ!' ಎಂಬ ಬಿರುದನ್ನು ಧರಿಸಿದ ವೀರ ವಿರಕ್ತನವನು. ಈ ತೆರದ ವಿರಕ್ತರು ನಮಗೆ ಈಗ ಬೇಕಾಗಿದ್ದಾರೆ.

---

# ಮಾಯಿದೇವರ ಶತಕತ್ರಯ

(ಲೇಖಕ:- ಶ್ರೀ ವೀರಪ್ಪ ಯಗಟಿ, ಬಿ. ಎ. ಎಲ್. ಎಲ್. ಬಿ.)

ವೀರಶೈವ ಮತ್ತು ಜೈನ ಕವಿಗಳು ತಮ್ಮ ಧರ್ಮ ತತ್ವಗಳನ್ನು ಪ್ರತಿಪಾದಿಸುವ ಮೂಲಕ ಕನ್ನಡ ಸಾಹಿತ್ಯವೆಂಬ ಸಾಗರವನ್ನೇ ನಿರ್ಮಿಸಿದ್ದಾರೆ. ಉಜ್ವಲ ಜೀವಿತದಿಂದ ಪೂಜ್ಯರಾದ ತಮ್ಮ ಶರಣರನ್ನೂ ತೀರ್ಥಂಕರರನ್ನೂ ಚರಿತ್ರಾರೂಪದಿಂದ ವರ್ಣಿಸುವ ವಿಧದಿಂದ ಶ್ರೇಷ್ಠ ಕಾವ್ಯಗಳನ್ನೂ ಪುರಾಣಗಳನ್ನೂ ರಚಿಸಿದ್ದಾರೆ. ಕನ್ನಡ ವಾಙ್ಮಯವು ಕಾಲಗತಿಯಿಂದ ಯಾವ ರೂಪಾಂತರವನ್ನು ಹೊಂದಿದಾಗ್ಯೂ ಯಾವ ಶೈಲಿಯನ್ನು ಅನುಸರಿಸಿದಾಗ್ಯೂ ಛಂದಸ್ಸಿನ ನಿಯಮಗೂ ವ್ಯತಿರಿಕ್ತವಾಗಿ ಲಘು ಕವಿತ್ವವ ರಚಿಸಿದಾಗ್ಯೂ ಪೂರ್ವ ಕವಿಗಳ ಕಾವ್ಯಸ್ವಾರಸ್ಯ, ಗಾಂಭೀರ್ಯ, ಅಲಂಕಾರ ಪ್ರಯೋಗದ ಸೌಂದರ್ಯ, ಪ್ರತಿಭಾಶಕ್ತಿ, ಶಬ್ದ ಪ್ರಯೋಗದ ಚಾತುರ್ಯ ಉಚ್ಚ ಧ್ಯೇಯವುಳ್ಳ ವಿಷಯ ಪ್ರತಿಪಾದನೆಗಳನ್ನು ಮೀರಿಸಲಾರದು.

ಮಗ್ಗೆಯ ಮಾಯಿದೇವನು ಇಂತಹ ಪೂರ್ವದ ಪ್ರೌಢ ಕವಿಗಳಲ್ಲೊಬ್ಬನು, ಉಭಯ ಭಾಷಾ ಪಂಡಿತನು. ಇವನು ವಿಜಯನಗರದ ಪ್ರೌಢ ದೇವರಾಯನ ಆಶ್ರಯ ಪಡೆದವನು. ಇವನ ಕಾಲವು ಕ್ರಿ. ಶ. ೧೫ನೇ ಶತಮಾನ. ಇವನು ಸಂಸ್ಕೃತದಲ್ಲಿ ಅನುಭವ ಸೂತ್ರವನ್ನೂ ಕನ್ನಡದಲ್ಲಿ ಶತಕತ್ರಯವನ್ನೂ ಬರೆದಿದ್ದಾನೆ. ಇವನು ಶಬ್ದಾಲಂಕಾರ ಪ್ರಯೋಗದಲ್ಲಿ ಅಗಾಧವಾದ ಪಾಂಡಿತ್ಯವನ್ನು ತೋರಿಸಿದ್ದಾನೆ. ಶತಕತ್ರಯದಲ್ಲಿ ಭಕ್ತಿ, ಜ್ಞಾನ, ವೈರಾಗ್ಯಗಳೂ ಶಿವಾಧವ, ಶಿವಾವಲ್ಲಭ, ಮಹದೈಪುರೀಶ್ವರ ಎಂಬ ಅಂಕಿತದ ಮೂರು ಪ್ರಕರಣಗಳಲ್ಲಿ ಷಟ್ಸ್ಥಲ ಪದ್ಧತಿಗನುಸಾರವಾಗಿ ವಿವರಿಸಲ್ಪಟ್ಟಿವೆ. ಆದಿಯಲ್ಲಿ ಗುರು, ಪರಶಿವ, ಬಸವ, ಚನ್ನಬಸವ, ಅಲ್ಲಮರನ್ನು ಸ್ತುತಿಸಿದ್ದಾನೆ. ವೀರಶೈವಾಗಮಗಳ ಆಧಾರವನ್ನಿಟ್ಟುಕೊಂಡು ಷಟ್ಸ್ಥಲ ತತ್ವಗಳನ್ನು ಬೋಧಿಸಿದ್ದಾನೆ. ಮೋಕ್ಷವು ಹೇಗೆ ಲಭಿಸುವದೆಂಬುದನ್ನು ಹೀಗೆ ಹೇಳಿದ್ದಾನೆ.

ಪ್ರಾಣಮುಮಂ ಶರೀರಮುಮನರ್ಥಮುಮಂ ಗುರುಲಿಂಗ ಜಂಗಮ |
ಶ್ರೇಣಿಗೆ ಕೊಟ್ಟು ತನ್ಮುಖಸಮಾಗತ ಶಾಂತಿಕರ ಪ್ರಸಾದ ಕ ||
ಲ್ಯಾಣ ಸುಖಪ್ರಪೂರ್ಣ ಪರಿಣಾಮವ ನೈದಿದವರ್ಗೆ ನಿತ್ಯನಿ |
ರ್ವಾಣಪದಂ ಬಳಿಕ್ಕುಳಿದವರ್ಗೆ ಪರಿಭ್ರಮಣಂ ಶಿವಾಧವಾ ||

ಗುರುಲಿಂಗ ಜಂಗಮರಿಗೆ ದೇಹ, ಪ್ರಾಣ, ಸಲ್ಲಿಸಿ ಅವರ ಪ್ರಸಾದ ಹೊಂದಿದವರಿಗೆ ನಿತ್ಯ ಮುಕ್ತಿಯು, ಉಳಿದವರಿಗೆ ಜನನ ಮರಣದ ಚಕ್ರವು ತಪ್ಪದು.

"ಕಿಂಕರ ಭಾವಮಂ ಬಲಿದು ಲಿಂಗಮುಖಂ ಚರಲಿಂಗವೆಂದು ವೀರ
ಶಿವಾಗಮೋಕ್ತ ಚಿನ್ಹಾಂಕಿತರಾದವರ್ಗೆ ಮಣಿವಂತುಂಟೆ ಭಕ್ತಿಪದಂ"

ಜಂಗಮವೇ ಲಿಂಗ ಮುಖವೆಂದು ಭಾವಿಸಿ ಅವರಿಗೆ ಸರ್ವ ವಸ್ತುಗಳ ನ್ನೊಪ್ಪಿಸಿ ನಮಸ್ಕಾರ ಮಾಡುವದೇ ಭಕ್ತಿಮಾರ್ಗವೆಂದು ಹೇಳಿದ್ದಾನೆ.

ಪರವಧುವಂ, ಪರದ್ರವಿಣಮಂ, ಪರಹಿಂಸೆಯನ್ನೈದೆ ದೂರದಿಂ ಪರಿಹರಿಸಿ ಏಕಲಿಂಗ ನಿಜನಿಷ್ಠೆ ಸಮಾಹಿತಮಾದೊಡಂ ತದೇ ಪರಮ ಮಹೇಶ್ವರ ಸ್ಥಲದ ಲಕ್ಷಣ ವೃತ್ತಿಪದಂ" ಎಂದು ಮಹೇಶ್ವರ ಸ್ಥಲದ ಲಕ್ಷಣ ಹೇಳಿದ್ದಾನೆ ಎಲ್ಲ ಭೋಗ ವಸ್ತುಗಳನ್ನು ಲಿಂಗಕ್ಕೆ ಅರ್ಪಿಸಿ ಪ್ರಸಾದ ರೂಪದಿಂದ ಅವು ಗಳನ್ನು ಉಪಯೋಗಿಸುವದು ಪ್ರಸಾದಿಯ ಲಕ್ಷಣ. ಪ್ರಾಣವನ್ನೇ ಲಿಂಗ ವಾಗಿ ಭಾವಿಸುವದು ಪ್ರಾಣಲಿಂಗಿಯ ಲಕ್ಷಣ. ತಾನೇ ಸತಿ. ಲಿಂಗವೇ ಪತಿ ಎಂದು ಭಾವಿಸುವದು ಶರಣ ಲಕ್ಷಣ. ಅಷ್ಟಾಂಗ ಯೋಗದ ಸಾಧನ ಗಳಾದ ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರಗಳನ್ನು ಅನುಸರಿಸದೆ ಧ್ಯಾನ, ಧಾರಣ, ಸಮಾಧಿಗಳನ್ನು ಸಾಧಿಸಿ ಶಿವಯೋಗ ಮಾರ್ಗಿಗಳಾಗಿರುವರು.

ಧ್ಯಾನಮದಂ ತರಂಗಯಜನಂ ಬಹಿರಂಗದ ಪೂಜೆ ಧಾರಣಂ
ತಾನೆ ಸಮಾಧಿಯುಜ್ವಲತರ ಪ್ರಥಿತಾರ್ಚನಮಾತ್ಮಲಿಂಗಸಂ ॥
ಧ್ಯಾನ ಸಮಾಹಿತಕ್ರಿಯೆ ಯಥಾಕ್ರಮಮೀ ಪರಿಯೆಂದು ಶಾಂಭವ।
ಜ್ಞಾನದಿ ನಿಷ್ಟೆಸಲ್ನಿಜ ಪದಂ, ಕರಬಿಲ್ವಫಲಂ ಶಿವಾಧವಾ ॥

ಪ್ರಾಣಲಿಂಗದ ಪೂಜೆಯೇ ಧ್ಯಾನ ಇಷ್ಟಲಿಂಗಪೂಜೆಯೇ ಧಾರಣ ಭಾವಲಿಂಗ ಸ್ಮರಣವೇ ಸಮಾಧಿ ಇದರಿಂದ ಮೋಕ್ಷವು ಕೈವಶದಲ್ಲಿ ಬಂದಂ ತೆಯೇ ಸರಿ.

ಶಿವಾವಲ್ಲಭ ಶತಕದಲ್ಲಿ ಜ್ಞಾನಮಾರ್ಗವನ್ನು ಹೇಳುವಾಗ ಮಾಯಿ ದೇವನು ದೇಹ ಪ್ರಾಣ, ಮನಸ್ಸು, ಇಂದ್ರಿಯಗಳು ಮಿಥ್ಯವಾದವುಗಳೆಂದೂ ಆತ್ಮವೊಂದೇ ಸತ್ಯ ಮತ್ತು ನಿತ್ಯವಾದದ್ದೆಂದೂ ಹೇಳಿದ್ದಾನೆ:—

ದೇಹ, ಪ್ರಾಣ ಮನೋಹೃಷೀಕನಿಕರಂ ಮಿಥ್ಯಾವಿಕಾರಂ ಗಡಾ ।
ದೇಹಾದಿ ವ್ಯತಿರಿಕ್ತನಪ್ಪ ಪುರುಷಂ ನಿತ್ಯಂ ವಿಶುದ್ಧಂಗಡಾ ॥

ಭಕ್ತಿ ಜ್ಞಾನಗಳಿಂದ ಯುಕ್ತವಾಗಿರದ ತೋರಿಕೆಯ ಪುಣ್ಯಕಾರ್ಯವು ಪಾಪಮಯವಾದದ್ದು. ಶಿವಭಕ್ತಿ ಇಲ್ಲದ ಬ್ರಹ್ಮನ ಯಜ್ಞ ಪಾಪರೂಪವಾದ ಹಾಗೆ ಜ್ಞಾನ ಭಕ್ತಿಗಳಿಂದ ಕೂಡಿದ ಪಾಪರೂಪವಾದ ಕಾರ್ಯವು ಪುಣ್ಯರೂಪವಾದದ್ದು. ಕುರಿಯ ಹಿಕ್ಕಿಯನ್ನು ಲಿಂಗವೆಂದು ಪೂಜಿಸಮಾಡುತ್ತಿದ್ದ ಚಂಡೇಶನಿಗೆ ಅಡ್ಡಿಮಾಡಿದ ತಂದೆಯ ಕಾಲನ್ನು ಚಂಡೇಶನು ಕತ್ತರಿಸಿದನು. ಅದು ಪುಣ್ಯವೇ ಎಂಬುದನ್ನು ಮಾಯಿದೇವನು ಹೇಳಿದ್ದಾನೆ.

ಭಕ್ತಿಜ್ಞಾನ ವಿಹೀನ ಪುಣ್ಯಮದು ತಾಂ ಪಾಪಂ ಶಿವಜ್ಞಾನ।
ಸದ್ಭಕ್ತಿ ಸ್ವೀಕೃತ ಪಾಪಕರ್ಮಮದು ಪುಣ್ಯಂ॥

ಹೀಗೆ ಪುಣ್ಯ ಪಾಪಗಳ ಸೂಕ್ಷ್ಮವಾದ ತಾರತಮ್ಯವನ್ನು ಮಾಡಿದ್ದಾನೆ. ಮಹದೈಪುರೀಶ್ವರ ಶತಕದಲ್ಲಿ ಆತನು ವೈರಾಗ್ಯದ ಸಾಧನೆಯನ್ನು ವಿವರಿಸಿದ್ದಾನೆ.

ಮನದ ಮನೋರಥಂ ಲಯಮೈದಲು ಕಾಮಜಯಂ ತ್ರಿದೇಹವಾ।
ಸನೆಯಳಿಯಲ್ಪುರತ್ರಯ ಜಯಂ ಶಿವಲಿಂಗದೊಳಿಟ್ಟು ನಟ್ಟ॥
ಕಣ್ಣಿನಯಿಮೆಯಾಟ್ಟು ಮಿಲ್ಲದಿರಲಂತದು ಕಾಲಜಯಂ ತ್ವದೀಯ।
ಶಕ್ತಿ ನಿಜಪದೈಕ್ಯ ಭಕ್ತಿ ಪರಮಪ್ರಭುವೇ ಮಹದೈಪುರೀಶ್ವರಾ॥

ಮನದ ಬಯಕೆಯು ಅಳಿದು ಹೋಗುವದೇ ಕಾಮ ವಾಸನೆಯನ್ನು ಜಯಿಸಿದ ಹಾಗೆ ಸ್ಥೂಲ ಸೂಕ್ಷ್ಮ ಕಾರಣ ದೇಹಗಳ ವಾಸನೆ ನಾಶವಾಗುವದೇ ತ್ರಿಪುರ ಜಯವು. ಲಿಂಗದಲ್ಲಿಟ್ಟ ಕಣ್ಣು ರೆಪ್ಪೆ ಹೊರಳಿಸದಂತೆ ಸ್ಥಿರವಾಗಲು ಅದೇ ಮರಣವನ್ನು ಜಯಿಸಿದಂತೆ. ಶಿವಶಕ್ತಿಯೇ ಲಿಂಗಾಂಗ ಸಾಮರಸ್ಯ ಸ್ಥಿತಿಯನ್ನುಂಟು ಮಾಡುವ ಶಕ್ತಿಯಾಗಿರುವದು.

ಭಕ್ತನು ಪ್ರಪಂಚದ ವ್ಯವಹಾರದಲ್ಲಿ ತೊಡಗಿದ್ದರೂ ಹೇಗೆ ಅಲಿಪ್ತನಾಗಿರಬೇಕೆಂಬುದನ್ನು ಕೆಳಗಿನ ಪದ್ಯದಲ್ಲಿ ಸಮಂಜಸವಾದ ಉಪಮೆಯಿಂದ ವರ್ಣಿಸಿದ್ದಾನೆ.

ಅಂಗದ ಲಿಂಗಮಂ ಮನದ ಲಿಂಗಮನುತ್ತರ ಭಾವಲಿಂಗಮಂ।
ಸಂಗಿಸಿ ಪೂಜೆಗೆಯ್ದು ಮುಕುರ ಪ್ರತಿ ಬಿಂಬದ ವೊಲ್ಬಹಿಃ ಕ್ರಿಯಾ।
ಸಂಗದೊಳಿರ್ದು ಮಿಲ್ಲದಿಹ ತನ್ನಿಜಮೇ ನಿಜಮಾಗಿ ತೋರ್ಪ।
ಭಕ್ತಂಗೆಣೆಯುಂಟೆ ದೇವ ಪರಮ ಪ್ರಭುವೇ ಮಹದೈಪುರೀಶ್ವರಾ॥

ಇಷ್ಟ, ಪ್ರಾಣ, ಭಾವಲಿಂಗಗಳನ್ನು ಒಂದೇ ಎಂದು ಭಾವಿಸಿ ಹೊರಗಿನ ವ್ಯವಹಾರದಲ್ಲಿ ನಿರತನಾಗಿದ್ದರೂ ಕನ್ನಡಿಯಲ್ಲಿ ಪ್ರದಿಬಿಂಬಿಸಿದ ವಸ್ತುವು

ಕನ್ನಡಿಯಲ್ಲಿ ಇಲ್ಲಿದಿರುವಂತೆ ಹೊರಗಿನ ವ್ಯವಹಾರಗಳಿಗೆ ಸಂಬಂಧವಿಲ್ಲದಂತಿರುವ ಭಕ್ತನಿಗೆ ಯಾರು ಸಮನಲ್ಲ. ಆತನು ಲಿಂಗದೊಡನೆ ತಾದಾತ್ಮ್ಯ ಹೊಂದಿರುವ ಮೂಲಕ ಆತನು ಸಂಸಾರದ ಸುಖ ದುಃಖಗಳಿಂದ ಲಿಪ್ತನಾಗುವದಿಲ್ಲ.

ಪ್ರಪಂಚದಲ್ಲಿ ಭಿನ್ನವಾಗಿ ತೋರುವ ವಸ್ತುಗಳೆಲ್ಲವೂ ಸರ್ವ ವಸ್ತುಗಳಿಗೆ ಆಧಾರ ಸ್ವರೂಪನಾದ ಶಿವನಲ್ಲಿ. ಲಯವಾಗುವದೆಂದು ಮಾಯಿದೇವನು ಕೇವಲಾದ್ವೈತವನ್ನು ಪ್ರತಿಪಾದಿಸಿದ್ದಾನೆ.

> ಗಗನದೊಳಿಂದ್ರಚಾಪಮು ತುಳಾನಿಲನೊಳ್ಸುಳಿ ದೀಪ್ತವಹ್ನಿ ।
> ಯೊಳ್ನೊಗಯಿಪ ತತ್ಕಣಂ ಸಲಿಲದೊಳ್ಕರಕಂ ಮಹಿಯೊಳ್ಮಹಿಷ್ಣ ।
> ಪಾಂಸು ಗತವಹಂತೆ ಲಿಂಗದೊಳ ಭಿನ್ನತೆಯಿಂ ಗತಮಪ್ಪ ನಿರ್ಮಲಾಂ
> ಗಗುಣಮದೀಗ ಭಕ್ತಿ ಪರಮ ಪ್ರಭುವೇ ಮಹದೈಪುರೀಶ್ವರಾ ||

ಆಕಾಶದಲ್ಲಿ ಇಂದ್ರನ ಬಿಲ್ಲೂ ಗಾಳಿಯಲ್ಲಿ ಸುಳಿಯೂ ಉರಿಯುವ ಬೆಂಕಿಯಲ್ಲಿ ಕಿಡಿಯೂ. ನೀರಿನಲ್ಲಿ ಆಣೆಕಲ್ಲೂ, ಭೂಮಿಯಲ್ಲಿ ಧೂಳಿಯೂ ಹುಟ್ಟಿ ಬೇರಾದಂತೆ ತೋರಿದರೂ ಕಡೆಗೆ ಅವುಗಳಲ್ಲಿಯೇ ಹೇಗೆ ಅಡಗಿ ಹೋಗ್ಯವವೋ ಹಾಗೆ ಭಿನ್ನವಾಗಿ ತೋರುವ ದೇಹಗುಣವು ಅಂತ್ಯದಲ್ಲಿ ಮಹಾಲಿಂಗದಲ್ಲಿ ಲಯವಾಗಿ ಹೋಗುವದೇ ಅದ್ವೈತ ಭಕ್ತಿಯೆನಿಸುವದು.

ನಿಷ್ಕಾಮ ಭಕ್ತಿಯು ಮೋಕ್ಷಕ್ಕೂ ಸಕಾಮ ಭಕ್ತಿಯು ಭೋಗೇಚ್ಛೆಯಿಂದ ಭವಬಂಧನಕ್ಕೂ ಕಾರಣವಾಗಿವೆ. ಎಲ್ಲ ಜೀವಿಗಳೂ ಶಿವನಿಂದ ನಿರ್ಮಿತರಾದವರಿರುವದರಿಂದ ಅವರನ್ನು ಭೇದಮಾಡದೆ ದೇವರನ್ನು ಭಕ್ತಿಯಿಂದ ಪೂಜಿಸುವಾತನೇ ಪರಮಸುಖಿಯೆಂದು ಮಾಯಿದೇವರು ತಾತ್ವಿಕ ಸಾರವನ್ನು ತೆಗೆದಿದ್ದಾರೆ. ಶತಕತ್ರಯವು ನಿತ್ಯಸುಖವನ್ನು ಬಯಸುವವರಿಗೆ ಕಲ್ಪತರುವಿನಂತೆ ಇರುವದೆಂದು ನಿಶ್ಚಯವಾಗಿ ಹೇಳಬಹುದಾಗಿದೆ.

# ಅಖಿಲ ಭಾರತದ ವೀರಶೈವ ಮಹಾಸಭಾ ಕಾರ್ಯಾಲಯದಿಂದ



ಈಗ ಕೆಲವು ಜನರು ದಕ್ಷಿಣ ಕನ್ನಡ ಜಿಲ್ಲಾ ಮಂಗಳೂರಿನಲ್ಲಿ ಅ. ಭಾ. ವೀರಶೈವ ಮಹಾಸಭಾ ಅಧಿವೇಶನವನ್ನು ಕೂಡಿಸುವುದಾಗಿ ಪತ್ರಿಕೆಗಳಲ್ಲಿ ಸುದ್ಧಿಗಳನ್ನು ಪ್ರಕಟಿಸುತ್ತಿದ್ದಾರೆ. ಇದೇವಿಚಾರ ಮಹಾ ಸಭಾ ಕಾರ್ಯದರ್ಶಿಗಳ ಗಮನಕ್ಕೆ ಬಂದು ಅವರು ಮೇಳಕಂಡಂತೆ ಹೇಳಿಕೆಯನ್ನು ಕೊಟ್ಟಿರುವುದು ಸಮಯೋಚಿತವಾಗಿದೆ.

ಅ. ಭಾ. ಮಹಾಸಭೆಯು ಸಂಸ್ಥೆಯು ಕಾನೂನು ಬದ್ಧವಾದ ಸುವ್ಯವಸ್ಥಿತ ಸಂಸ್ಥೆಯಾಗಿದೆ. ಇದಕ್ಕಾಗಿ ಒಂದು ಕಾರ್ಯನಿರ್ವಾಹಕಸಮಿತಿ ಇದೆ. ಸ್ವಾಗತಸಮಿತಿ ರಚನೆಗೆ ಕೆಲವು ನಿಯಮಗಳಿವೆ. ಆ ನಿಯಮಕ್ಕೆ ಅನುಗುಣವಾದ ಸ್ವಾಗತಸಮಿತಿಗೆ ಅಧಿವೇಶನ ನಡೆಸಲು ಅವಕಾಶ ಪ್ರಾಪ್ತವಾಗುತ್ತದೆ. ಮಹಾಸಭಾ ಕಾರ್ಯಕಾರೀ ಸಮಿತಿ ಒಪ್ಪಿದಲ್ಲದೆ ಸ್ವಾಗತ ಸಮಿತಿಯವರಿಗೆ ಚಿರಸ್ಥಾಯಿ ನಿಧಿಯವರು ಹಣವನ್ನು ಕೊಡಲು ಸಾಧ್ಯವಿಲ್ಲ. ಈ ನಿಯಮಗಳನ್ನು ತಿಳಿಯದೆ ಮಂಗಳೂರಿನಲ್ಲಿ ಸಭೆನಡಿಸುವವರು ವ್ಯವಹರಿಸುವಂತೆ ಕಾಣುತ್ತದೆ. ಮಂಗಳೂರು ಜಿಲ್ಲೆಯಲ್ಲಿ ವೀರಶೈವರ ಸಂಖ್ಯೆಯು ಅತಿವಿರಳ. ಮಹಾಸಭೆ ನಡೆಸುವುದು ಅತಿಕಷ್ಟ ಸಾಧ್ಯವಾದ ಕಾರ್ಯ. ಇದಕ್ಕೆ ಜನಬಲ ಧನಬಲ ಬಹಳವಾಗಿ ಬೇಕಾಗುತ್ತದೆ. ಇತ್ತೀಚಿಗೆ ಚಿಕ್ಕಮಗಳೂರು, ಬೀರೂರು, ಶಿವಮೊಗ್ಗ ಮೊದಲಾದ ಊರುಗಳ ಅನೇಕಮಂದಿ ಪ್ರಮುಖರ ಹೆಸರುಗಳು ಸ್ವಾಗತಸಮಿತಿಯಲ್ಲಿ ಸೇರಿವೆ. ಮಹಾಸಭೆ ನಡೆಯುವುದು ಮಂಗಳೂರೇ? ಶಿವಮೊಗ್ಗವೇ? ಚಿಕ್ಕಮಗಳೂರೇ? ಸ್ಪಷ್ಟವಾಗಬೇಕು. ಈಗಾಗಲೇ ಬಸವ ಕಲ್ಯಾಣದಲ್ಲಿ ಈ ವರ್ಷ ಡಿಸೆಂಬರಿನಲ್ಲಿ ಸಭೆನಡಿಸಲು ಮಹಾಸಭಾ ಕಾರ್ಯಸಮಿತಿ ಒಪ್ಪಿಗೆ ಕೊಟ್ಟಿದೆ. ಮೊದಲು ಬಸವಕಲ್ಯಾಣದಲ್ಲಿ ಸಭೆ ನಡಿವುದು ಇಂದು ಅನಿವಾರ್ಯ. ಆಮೇಲೆ ಮಂಗಳೂರು ಸಭೆಯು ವಿಷಯು ಪರಿಶೀಲನೆಗೆ ಬರು

ತ್ತವೆ. ಬಸವಕಲ್ಯಾಣದಲ್ಲಾಗುವ ಮಹಾಸಭಾ ಕಾರ್ಯಸಮಿತಿಯವರು ಮಂಗಳೂರು ಸಭೆಗೆ ಅನುಮತಿ ಕೊಡುವುದು ಕ್ರಮಪ್ರಾಪ್ತವಾಗಿದೆ. ಈ ವಿಷಯಗಳನ್ನೆಲ್ಲ ಪರಿಶೀಲಿಸಿ ಮಂಗಳೂರಿನಲ್ಲಿನ ಉತ್ಸಾಹಿಗಳು ತಮ್ಮ ಕಾರ್ಯಕ್ರಮಗಳನ್ನು ನಡೆಸುವರೆಂದು ನಂಬುತ್ತೇನೆ. ಒಂದು ವೇಳೆ ಈ ಎಲ್ಲ ನಿಯಮಗಳನ್ನೂ ಉಲ್ಲಂಘಿಸಿ ಮಂಗಳೂರಿನಲ್ಲಿ ವೀರಶೈವ ಸಭೆ ಸೇರಿದರೆ ಅದು ಕೇವಲ ಒಂದು ಪ್ರಾದೇಶಿಕ ಸಭೆಯಾಗುವುದೇ ಹೊರತು ಅಖಿಲ ಭಾರತ ವೀರಶೈವ ಮಹಾಸಭೆಯಾಗಲಾರದೆಂಬುದನ್ನು ಎಲ್ಲರೂ ಚೆನ್ನಾಗಿ ಮನಗಾಣಬೇಕು.

ಈ ವರ್ಷ ಡಿಸೆಂಬರಿನಲ್ಲಿ ಹೈದ್ರಾಬಾದ್ ಪ್ರಾಂತದ ಬಸವಕಲ್ಯಾಣದಲ್ಲಿ ಅ. ಭಾ. ವೀ. ಮಹಾಸಭೆ ನಡೆಸಲು ಎಲ್ಲ ಏರ್ಪಾಡುಗಳೂ ಆಗಿವೆ. ಮಹಾಸಭಾ ಕಾರ್ಯಸಮಿತಿ ತನ್ನ ಒಪ್ಪಿಗೆ ಕೊಟ್ಟಿದೆ. ಈಗ ಮಂಗಳೂರಿನಲ್ಲಿ ಸಭೆನಡೆಸುವವರು ಕಲ್ಯಾಣದ ಮಹಾಸಭೆ ಅನಂತರವೇ ನಡೆಸಬೇಕು. ಅಲ್ಲಿ ಚುನಾಯಿತರಾಗುವ ಕಾರ್ಯ ಸಮಿತಿಯವರೇ ಅದಕ್ಕೆ ಒಪ್ಪಿಗೆ ಕೊಡಬೇಕು. ಇದೇ ನ್ಯಾಯವಾದ ದಾರಿಯಾಗಿದೆ.

ಬಿ. ಶಿವಮೂರ್ತಿ ಶಾಸ್ತ್ರೀ
ಅ. ಭಾ. ವೀ. ಮ. ಕಾರ್ಯಸಮಿತಿ ಸದಸ್ಯ.
ಬೆಂಗಳೂರು.

# ಅಣ್ಣ ಬಸವಣ್ಣನವರ ನೆನಹು



—(ಶ್ರೀ ಆನಂದಕವಿಗಳು-ಕುರುಗುಂದ)—

೧

ರಾಗಃ— ಖಮಾಳಿ, ತ್ರಿತಾಳ

—(೦)—

ನಿನ್ನ ಹೊರತು ಪೊರೆವರಾರು? ಬಸದೇವನೆ.
ನನ್ನಿಯಿಂದ ನಿನ್ನ ನೆನೆವೆ ಲೋಕಪೂಜ್ಯನೆ.
ರನ್ನದಂತೆ ಹೊಳೆಯುತಿಹುದು ನಿನ್ನ ವಾಣಿಯು
ಧನ್ಯ ಧನ್ಯ ಧರೆಯನೆಲ್ಲ ಪುನೀತ ಗೈವುದು
ಮಾನ್ಯರೆಲ್ಲ ಮಣಿಯುತಿಹರು ನಿನ್ನಮಾತಿಗೆ
ಕನ್ನಡಾಂಬೆ ಕುಣಿಯುತಿಹಳು ನಿನ್ನ ಗೀತೆಗೆ
ಶರಣರೆಲ್ಲ ನಿನ್ನ ಧ್ವಜವ ಮೆರೆಸುತಿರುವರು
ಧರಣಿಯೆಲ್ಲ ನಿನ್ನ ಚರಣಕೆರಗುತಿರುವದು
ವಿಶ್ವಪೂಜ್ಯ ವೀರಮೂರ್ತಿ ಬಸವರಾಜನೆ
ಕೋಶರಾಶಿ ಬೆಳಸಿಕಾಯೊ ಜಗದ ಅಣ್ಣನೆ
ನಾಡನುಡಿಯು ಸೇವೆಗೈವ ವರವನೀವುದು
ಕಾಡುತಿರುವ ಜನಕೆ ನಿತ್ಯಸುಖವ ಕೊಡುವದು
ನಿಮಿಷಮಾತ್ರ ನಿನ್ನ ತೊರೆದು ಬಾಳಲಾರೆನು
ಆನಿತ ಮಹಿಮ ಬಸವದೇವ ಅಪ್ಪಿಕೊಳ್ಳುದು.

——

## ಒಂದು ಸೋಬಾನದ ನಲ್ವಾಡು

( ಸಂಗ್ರಾಂಹಕ- ಶ್ರೀ ಆನಂದ ಕವಿಗಳು ಕುರುಗುಂದ. )

---

ಮದುವೆಯು ಮಾಡಿದರು ಲಿಂಗಯ್ಯಗ ॥ಪಲ್ಲ॥
ಮದುವೆಯ ಮಾಡಿದರು ಭುವನ ಕೈಲಾಸದೊಳು ॥ಅನುಪಲ್ಲ

೧

ಅಮರ ಗಣಂಗಳು ಸಮರಸದಿಂದಲಿ ಮದುವೆಯ ಮಾಡಿದರು.
ಬಸವಯ್ಯ ಬಂಡೀ ಹೊಡಿ ನಾವು ಹಿಬ್ಬಣದವರು.
ಲಿಂಗಯ್ಯ ಮದುಮಗ ಶಿವಶರಣರು ಮುತ್ತೈದೆಯರು.
ಮದುವೆಯು ಮಾಡಿದರು.

೨

ಪಚ್ಚದ ಮಹಾಲಿನೊಳು ಹವಳದ ಮೇಲ್ಕಟ್ಟು
ರತ್ನತೋರಣ ಕಟ್ಟಿ
ಮುತ್ತಿನ ಹಾಸಿಗೆ ಮಾಡಿ ಮದುವೆಯುಮಾಡಿದರು.

೩

ಕರಕೆ ಕಂಕಣ ಕಟ್ಟಿ
ಶಿರಕೆ ಸೇಸೆಯನಿಟ್ಟು
ದೃಢವುಳ್ಳ ನಮ್ಮ ಮಲ್ಲಿಕಾರ್ಜುನಗ ಮದುವೆಯು ಮಾಡಿದರು.

—ಶ್ರೀಯುತ ಸತ್ಯಪ್ಪ ಖಾನಾಪುರ ಇವರಿಂದ ಸಂಗ್ರಹಿಸಿರುವುದು.

---

ಬಿಜ್ಜಳನನ್ನು ಬಹಿರಂಗವಾಗಿ ಕೊಲೆಗೈದರು. ಅವರು ಕೊಲೆಗೈದ ದಿವಸ ಶಿವಶರಣರೆಲ್ಲ ರಾಜಧಾನಿಯನ್ನು ಬಿಟ್ಟು ಬೇರೆ ಬೇರೆ ಕಡೆಗೆ ತೆರಳಿದರು.

ಹೀಗೆ ಚದರಿ ಹೋಗುವಕಾಲದಲ್ಲಿ ಅವ್ಯವಸ್ಥೆಯಿಂದ ಜನರು ಓಡಿ ಹೋಗುವದುಂಟು. [ಆದರೆ ಚನ್ನಬಸವೇಶ್ವರ, ಮಡಿವಾಳಮಾಚಿದೇವ, ಶೂಲದ ಬೊಮ್ಮಣ್ಣ, ಕಿನ್ನರಿಬ್ರಹ್ಮಯ್ಯ ಮೊದಲಾದವರು ಈ ಕಾಲಕ್ಕೆ ರುದ್ರಮುನಿಯನ್ನು ಮುಂದೆ ಮಾಡಿಕೊಂಡು ಶಿವಶರಣರೆಲ್ಲರೂ ವ್ಯವಸ್ಥಿತವಾಗಿಯೇ ಕಾಡಿನಲ್ಲಿ ಸೇರಿ ತಮ್ಮ ಧರ್ಮಾಚರಣೆಯಂತೆ ನಡೆಯಬೇಕೆಂದು ನಿರ್ಧರಿಸಿದ್ದರು. ಆ ಪ್ರಕಾರ ಅವರು ಚನ್ನಬಸವೇಶ್ವರನ ಅಜ್ಞೆಯಂತೆ ಬಿಜ್ಜಳನ ಕೊಲೆಯಾದ ರಾತ್ರಿ ಕಲ್ಯಾಣದ ಹೊರಬಿದ್ದರು. ಆಗ ಅವರಿಗೆ ಮುಖ್ಯ ಸಹಾಯ ಮಾಡಿದವನು ರುದ್ರಮುನಿಯೇ ಇದ್ದಾನೆ. ರುದ್ರಮುನಿಯ ಪ್ರೇರಣೆಯಿಂದ ಎಲ್ಲರೂ ವ್ಯವಸ್ಥಿತವಾಗಿ ಕಲ್ಯಾಣದ ಹೊರಬಿದ್ದರು.

ಮೊದಲು ಅವರು ಬಹು ತೀವ್ರವಾಗಿ ಕೊರಗಲ್ಲು ನಾಡಿನಲ್ಲಿ ಸೇರಿಕೊಂಡು ಅಲ್ಲಿದ್ದ ಗಿರಿ ಗಹ್ವರಗಳಲ್ಲಿ ಆಶ್ರಯ ಹೊಂದಿದರು. ಈ ಕಾಲಕ್ಕೆ ಬಿಜ್ಜಳನ ಅಪರಿಮಿತ ಸೈನ್ಯವನ್ನು ಶಿವಶರಣರ ಚಿಕ್ಕ ದಂಡು ಸೋಲಿಸುವದು ಶಕ್ಯವಿರಲಿಲ್ಲ. ಅವರು ಅಲ್ಲಲ್ಲಿ ಅವಿತುಕೊಂಡು ವೈರಿಗಳನ್ನು ಹಿಮ್ಮೆಟ್ಟಿಸುತ್ತ ಉಳಿವಿಯ ಕಡೆಗೆ ಎಲ್ಲರೂ ಸಾಗಹತ್ತಿದರು.

ಈ ಸ್ಥಿತಿಯಲ್ಲಿ ಅವರಿಗೆ ಉತ್ತೇಜನ ಕೊಡುತ್ತ ಅವರಿಗೆ ಬೇಕಾದ ಸಹಾಯ ಸಲಕರಣೆಗಳನ್ನು ಒದಗಿಸುತ್ತ ಎಲ್ಲರೂ ಮುಂದುವರಿಯುವಂತೆ ವ್ಯವಸ್ಥೆ ಮಾಡಿದವನು ರುದ್ರಮುನಿಯೇ ಇದ್ದಾನೆ. ಅವನೊಡನೆ ನಾಗಲಾಂಬಿಕೆ, ಗಂಗಾಂಬಿಕೆಯರು ಸಲಕರಣೆಗಳನ್ನು ಒದಗಿಸುತ್ತ ಸಾಗಿದ್ದರು. ಗಂಗಾಂಬಿಕೆಯ ಗುರುವು ರುದ್ರಮುನಿಯಾಗಿದ್ದು ಅವನ ಆಜ್ಞೆಯನ್ನು ಅವಳು ಶಿರಸಾ ವಹಿಸಿ ಶಿವಶರಣರ ದಂಡಾಳುಗಳಿಗೆ ಅಲ್ಲಲ್ಲಿ ಸಹಾಯವನ್ನು ನೀಡುವವಳಾಗಿದ್ದಳು.

ಯುದ್ಧಪೂರ್ವದಲ್ಲಿ ಮುರಗೋಡ ಮತ್ತು ಅದರ ಸುತ್ತುಮುತ್ತಲಿನ ಪ್ರದೇಶಗಳಲ್ಲಿ ಯುದ್ಧಗಳು ನಡೆದವು. ಆಮೇಲೆ ಮೂರ್ಗಬಾವ ಆಮೇಲೆ ನಾಗಳಾಪುರ ಎಂಬಲ್ಲಿ ಶಿವಶರಣರು ಸಂಕಲಿತರಾಗಿ ವೈರಿಗಳೊಡನೆ ಯುದ್ಧ ನಡಿಸಿದರು. ಪರಿಸ್ಥಿತಿಯು ಕಠಿಣವಾದದ್ದರಿಂದ ರುದ್ರಮುನಿಯು ನಾಗಳಾಪುರಕ್ಕೆ ಬಂದು ಇಲ್ಲಿ ನಾಗಲಾಂಬಿಕೆ ಮೊದಲಾದವರನ್ನು ಕಾಣುವವ

ನಾದನು. ಇದಕ್ಕೆ ಸಮೀಪವಿರುವ ಹುಣಸೀಕಟ್ಟಿ, ಅವರಳ್ಳಿ ಇಲ್ಲಿಯೂ ನಾಗಳಾಪುರದಲ್ಲಿಯೂ ರುದ್ರಮುನಿಯ ದೇವಸ್ಥಾನಗಳಿವೆ. ಮುಂದೆ ಕಾತರವಳ್ಳಿಯಲ್ಲಿ ತುಮುಲ ಯುದ್ಧವಾದಬಳಿಕ ಶಿವಶರಣರ ಒಂದು ತಂಡವು ಖಾನಾಪುರ ತಾಲೂಕಿನೊಳಗಿಂದ ಮುಂದುವರಿಯಿತು. ಈ ತಂಡ ದೊಡನೆ ರುದ್ರಮುನಿಯು ಮುಂದೆ ಸಾಗಿದ್ದನು. ಇವರಿಂದ ಈ ತಾಲೂಕಿನ ಕೆಲವು ಹಳ್ಳಿಗಳಲ್ಲಿ ಕೊಳ ಕಡೆಗೆ ರುದ್ರಮುನಿಯ ದೇವಸ್ಥಾನಗಳಿರುತ್ತವೆ. ಈ ದೇವಸ್ಥಾನಗಳು ಇಲ್ಲಿದ್ದುದರ ಮೇಲಿಂದ ರುದ್ರಮುನಿಯು ಬಿಜ್ಜಳನ ದಂಡಿನೊಡನೆ ಹೋರಾಟ ನಡಿಸುತ್ತ ಮುಂದುವರಿದಿದ್ದು ಸ್ಪಷ್ಟ ವಾಗುತ್ತದೆ. ಇಷ್ಟರಲ್ಲಿ ಶಿವಶರಣರ ದಂಡಾಳುಗಳ ನಾಯಕನಾದ ಮಡಿವಾಳ ಮಾಚಿದೇವನು ಕಾರೀಮನೆ ಎಂಬಲ್ಲಿ ವೈರಿಗಳೊಡನೆ ಕಾದಾಡುವಾಗ್ಗೆ ಮಡಿದನು. ಆಗ ಅವನ ಸ್ಥಳದಲ್ಲಿ ರುದ್ರಮುನಿಯು ನಿಂತುಕೊಂಡು ಚನ್ನಬಸವನಿಗೆ ಸಹಾಯಕನಾಗಿ ಯುದ್ಧಮಾಡುತ್ತ ಉಳಿವಿಯ ಅರಣ್ಯದ ಕಡೆಗೆ ಸಾಗುವವನಾದನು. ಅವನೊಡನೆ ನಾಗಲಾಂಬಿಕೆ, ಗಂಗಾಂಬಿಕೆ ಇವರಿಬ್ಬರು ಮಾತ್ರ ಇದ್ದು ಅವರಲ್ಲಿ ಗಂಗಾಂಬಿಕೆಯು ಮುಗುಟಖಾನ ಹುಬ್ಬಳ್ಳಿಯಲ್ಲಿ ಮಡಿದುಹೋದಳು. ಮುಂದೆ ಶಿವಶರಣರಲ್ಲಿ ಎರಡುಭಾಗಗಳಾಗಿ ಒಂದು ಭಾಗವು ಧಾರವಾಡ, ತಂಬೂರು ಮಾರ್ಗವಾಗಿಯೂ ಇನ್ನೊಂದು ಕಕ್ಕೇರಿ, ಜಗಳಬೆಟ್ಟ, ಸಾಂಬ್ರಾಣಿ ಮಾರ್ಗವಾಗಿಯೂ ಮೆಲುಗೈ ಯಲ್ಲಾಪುರಕ್ಕೆ ಬಂದು ಮುಟ್ಟಿದವು. ಈ ಕಠಿಣ ಕಾಲದಲ್ಲಿ ರುದ್ರಮುನಿ, ಕಿನ್ನರೀ ಬ್ರಹ್ಮಯ್ಯ ಇವರು ಚನ್ನಬಸವೇಶ್ವರನಿಗೆ ಸಹಾಯಕರಾಗಿ ವೈರಿಗಳ ಕೂಡ ಕಾದಾಡುತ್ತ ಸಾಗಿದರು.

ಹೀಗೆ ಶಿವಶರಣರು ಹಿಮ್ಮೆಟ್ಟುತ್ತ ಇರುವದನ್ನು ರುದ್ರಮುನಿಯು ತಿಳಿದು ಅವರನ್ನು ಹುರಿದುಂಬಿಸುತ್ತ ಉಳಿವೆಯ ವರೆಗೂ ಸಾಗಿಬಂದನು. ಇಲ್ಲಿ ಶಿವಶರಣರು ಮಹಾಮನೆಯ ಗವಿಯ ಮುಂದೆ ಕಾದಾಡುತ್ತ ಉಯ್ಯಾಲೆಯನ್ನೇರಿ ಶಿವನೊಡನೆ ಸಾಯುಜ್ಯವನ್ನು ಹೊಂದಿದರು. ಆಗ ನಾಗಲಾಂಬಿಕೆ, ನುಲಿಯ ಚಂದಯ್ಯ, ರೇವಣ್ಣ ಇವರು ಮಾತ್ರ ಜೀವಂತ ಉಳಿದರು. ಪರಿಸ್ಥಿತಿಯು ಬಹು ಕಠಿಣವೆಂದು ತೋರಿದ್ದರಿಂದ ರುದ್ರಮುನಿಯು, ನಾಗಲಾಂಬಿಕೆ, ನುಲಿಯ ಚಂದಯ್ಯ ಇವರಿಗೆ ಈಗ ಶಿವಮೊಗ್ಗಾ ಜಿಲ್ಲೆಯಲ್ಲಿರುವ ಭದ್ರಾನದಿಯ ತೀರದಲ್ಲಿರಲು ಸೂಚಿಸಿ, ತಾನು ಶ್ರೀಶೈಲ ಪ್ರಾಂತಕ್ಕೆ ಹೋಗಿ ಅಲ್ಲಿಂದ ಒಂದು ಸಹಾಯಕ ಸೈನ್ಯಪಡೆಯನ್ನು ಈ ಭಾಗಕ್ಕೆ ಕಳಿಸುವೆನೆಂದು ಹೇಳಿ ಅಲ್ಲಿಂದ ತೆರಳಿದನು.

ಮೊದಲು ಅವನು ಕಲ್ಯಾಣ ಪಟ್ಟಣಕ್ಕೆ ಬಂದು ಅಲ್ಲಿಯ ಪರಿಸ್ಥಿತಿಯನ್ನು ಪರಿಶೋಧಿಸುವವನಾದನು. ಅದು ಅವ್ಯವಸ್ಥೆ ಮತ್ತು ಅರಾಜಕತೆಯಿಂದ ತುಂಬಿಹೋಗಿತ್ತು. ಆದರೆ ಅಲ್ಲಿ ರುದ್ರಮುನಿಯು ಬಹಿರಂಗವಾಗಿ ವಾಸಿಸುವದು ಶಕ್ಯವಿರಲಿಲ್ಲ. ಮೊದಲಿನ ಕಾಲದ ಶಿವಶರಣರ ಸಂಕುಲವು ಚದುರಿಹೋಗಿತ್ತು. ಇಲ್ಲಿದ್ದ ಕೆಲವರು ಅಲ್ಲಿದ್ದ ಗುಹೆಗಳಲ್ಲಿಯೂ ಗುಪ್ತ ಸ್ಥಳಗಳಲ್ಲಿಯೂ ವಾಸಿಸುತ್ತಿದ್ದರು. ವೈರಿಗಳ ಕಯ್ಯಲ್ಲಿ ಸಿಕ್ಕರೆ ಅವರು ಅವನನ್ನು ಘಾತಿಸದೆ ಬಿಡುತ್ತಿದ್ದಿಲ್ಲ. ಈ ಸ್ಥಿತಿಯಲ್ಲಿ ರುದ್ರಮುನಿಯಂಥ ಶಿವಶರಣರ ಪಡೆಗಳ ಚಾಲಕನು ಅಲ್ಲಿರುವದು ಅಶಕ್ಯವಾಗಿತ್ತು. ಆದುದರಿಂದ ಅವನು ಕಲ್ಯಾಣದಲ್ಲಿ ಇರದೆ ಶ್ರೀಶೈಲ ಪ್ರಾಂತಕ್ಕೆ ಹೊರಡುವವನಾದನು.

ಅಲ್ಲಿ ತನ್ನ ಶಿಷ್ಯ ಮುಕ್ತಿಮುನಿಯನ್ನು ಕಂಡು ಅವನಿಗೆ ತನ್ನ ಪಟ್ಟವನ್ನು ಕೊಟ್ಟು ಅವನಿಗೆ ತನ್ನ ಎಲ್ಲ ಧರ್ಮಾಧಿಕಾರಿಗಳನ್ನು ವಹಿಸಿಕೊಟ್ಟನು. ಆಗ ಇಲ್ಲಿ ವೀರಶೈವರು ಜಯಶಾಲಿಗಳಾಗಿದ್ದರು. ಅವರ ಒಂದು ದೊಡ್ಡ ಪಡೆಯನ್ನು ರುದ್ರಮುನಿಯು ಅಣಿಮಾಡಿ ನಾಗಲಾಂಬಿಕೆಯ ಸಹಾಯಕ್ಕಾಗಿ ಅದನ್ನು ಮಲೆದೇಶಕ್ಕೆ ಅಂದರೆ ಈಗಿನ ಶಿವಮೊಗ್ಗಾ ಪ್ರಾಂತಕ್ಕೆ ಕಳಿಸಿಕೊಟ್ಟನು. ಇಲ್ಲಿ ಶಿವಶರಣರು ಮುಂದುವರಿದಿದ್ದನ್ನು ನೋಡಿ ರುದ್ರಮುನಿಯು ಆನಂದಿಸಿ ಕಡೆಗೆ ಶ್ರೀಶೈಲದಲ್ಲಿಯೇ ದೇಹಬಿಟ್ಟನು. ಅವನ ಸಮಾಧಿಯು ಇಲ್ಲಿಯೇ ಇದ್ದಿರಬೇಕು. ಯಾವ ಸ್ಥಳದಲ್ಲಿ ಅಲ್ಲಮಪ್ರಭು, ಮಹಾದೇವಿಯಕ್ಕಗಳು ತಮ್ಮ ಜೀವಿತವನ್ನು ಮುಗಿಸಿದರೋ ಅಲ್ಲಿಯೇ ಈ ಮಹಾಮಹಿಮನು ತನ್ನ ದೇಹವಿಟ್ಟಿರಬೇಕು. ಅವನು ತಿರುಗಿ ಕಲ್ಯಾಣಕ್ಕೆ ಹೋಗಿರುವದಿಲ್ಲ.

---

# ಮುಕ್ತಿಮುನಿ

ಈ ಕಾಲಕ್ಕೆ ಕಲ್ಯಾಣದಿಂದ ಶ್ರೀಶೈಲ ಪ್ರಾಂತದ ವರೆಗೆ ಬಿಜ್ಜಳನ ಆಳಿಕೆಯು ಸತ್ವಗೆಟ್ಟಿತ್ತು. ಅಲ್ಲಿ ಅವನ ರಾಜ್ಯದ ವರ್ಚಸ್ಸು ಉಳಿದಿರಲಿಲ್ಲ. ಇಲ್ಲಿ ಶಿವಶರಣರು ನಿರಾತಂಕವಾಗಿ ಇದ್ದುಕೊಂಡು ತಮ್ಮ ನಿತ್ಯಾಚಾರಗಳನ್ನು ನಡಿಸುವವರಾದ್ದರು. ಅವರು ಎದುರಾಳಿಗಳನ್ನು ಹಿಮ್ಮೆಟ್ಟಿಸಲು ತತ್ಪರರಾಗಿದ್ದರು. ವೈರಿಗಳಾದರೂ ಅವರನ್ನು ತಡೆಯುತ್ತಿರಲಿಲ್ಲ. ಶಿವಶರಣರಿಗೆ ಮುಕ್ತಿಮುನಿಯೇ ಮುಖ್ಯಸ್ಥನಾಗಿದ್ದನು. ಅವನು ಬಹು ಶೂರನು. ಅವನನ್ನು ವಿರೋಧಿಸಲಿಕ್ಕೆ ಬಿಜ್ಜಳನ ಸೈನ್ಯವು ಇಲ್ಲಿ ಇರಲಿಲ್ಲ. ಇಲ್ಲಿ ಮುಕ್ತಿಮುನಿಯು ತನ್ನ ಗಣಸಮೂಹದೊಡನೆ ತನ್ನಮೇಲೇರಿ ಬಂದವರನ್ನು ಹಿಮ್ಮೆಟ್ಟಿಸಿ ವಿಜಯಶಾಲಿಯಾಗಿ ಶಿವಶರಣರ ಸಾಮ್ರಾಜ್ಯವನ್ನು ಸ್ಥಾಪಿಸಿದನು. ಮುಕ್ತಿಮುನಿಯು ಶ್ರೀಶೈಲವನ್ನೇ ತಮ್ಮ ಮುಖ್ಯ ರಾಜಧಾನಿಯನ್ನಾಗಿ ಮಾಡಿಕೊಂಡಿದ್ದನು. ಅಲ್ಲಿಂದ ಅವನ ಪಡೆಗಳು ಸುತ್ತಲೂ ಪಸರಿಸಿ ವೈರಿಗಳನ್ನು ಚದುರಿಸುತ್ತ ತಮ್ಮ ಅಧಿಕಾರವನ್ನು ಸ್ಥಾಪಿಸಿದ್ದವು. ಮುಕ್ತಿಮುನಿಯು ಸುತ್ತಲಿನ ಪ್ರದೇಶಗಳಲ್ಲಿ ಸಂಚರಿಸಿ ದುಷ್ಟರನ್ನು ಗೆಲಿದು ಶಿಷ್ಟರನ್ನು ರಕ್ಷಿಸುತ್ತಿದ್ದನು. ಆಗ ರುದ್ರಮುನಿಯು ಅವನಿಗೆ ಶ್ರೀಶೈಲದಲ್ಲಿ ತನ್ನ ಪಟ್ಟವನ್ನು ಕೊಟ್ಟು ಅವನನ್ನು ಸಿಂಹಾಸನಾಧಿಪತಿಯನ್ನಾಗಿ ಮಾಡಿದನು. ಮತ್ತು ಅವನು ಪಶ್ಚಿಮಕ್ಕೆ ಮಲೆರಾಜ್ಯದಲ್ಲಿ ಪರವಾದಿಗಳು ನಡಿಸಿದ ಪೀಡೆಗಳನ್ನು ಶಿವಶರಣರಿಗೆ ತಿಳಿಸಿ ಅವರ ಸಹಾಯಕ್ಕಾಗಿ ಅವರದೊಂದು ದೊಡ್ಡ ಪಡೆಯನ್ನು ಅಣಿಮಾಡಿ ಮಲೆದೇಶಕ್ಕೆ ನಾಗಲಾಂಬಿಕೆಯ ಸಹಾಯಕ್ಕಾಗಿ ಕಳಿಸಿಕೊಟ್ಟನು. ಅದಕ್ಕನುಸರಿಸಿ ಬಹುಜನ ಶಿವಶರಣರು ಶ್ರೀಶೈಲ ಪ್ರಾಂತದಿಂದ ಮಲೆದೇಶವಾದ ಈಗಿನ ಶಿವಮೊಗ್ಗೆಯ ಪ್ರದೇಶಕ್ಕೆ ತೆರಳಿದರು.

ಆದರೆ ಮುಕ್ತಿಮುನಿಯು ತಾನು ಸ್ವತಃ ಮಲೆದೇಶಕ್ಕೆ ಹೋಗಲಿಲ್ಲ. ಅವನು ತನ್ನ ಪಟ್ಟವನ್ನು ದಿಗಂಬರ ಮುಕ್ತಿಮುನಿಗೆ ಕೊಟ್ಟು ತಾನು ಶ್ರೀಶೈಲದಲ್ಲಿ ಸಮಾಧಿಸ್ಥನಾದನು. ಆದರೆ ಅವನು ಸಮಾಧಿಸ್ಥನಾಗುವ ಪೂರ್ವದಲ್ಲಿ ದೇವರ ಜಾತ ಭಿಕ್ಷಾವರ್ತಿ ಎಂಬುವನನ್ನು ಶ್ರೀಶೈಲ ಸಿಂಹಾಸನದ ಅಧಿಕಾರಿಯನ್ನಾಗಿ ಮಾಡಿದನು. ಈತನು ಶ್ರೀಶೈಲ ಸಂಸ್ಥಾನದ ಪೂಜಾರಿ ಕಾರ್ಯಗಳನ್ನೂ ಅದರ ಮೇಲಧಿಕಾರಗಳನ್ನೂ ನಿರ್ವಹಿಸುತ್ತ ಬಂದನು. ಹೀಗೆ ಮುಕ್ತಿಮುನಿಯು ಈ ಸ್ಥಾನದಲ್ಲಿ ತಕ್ಕ ಯೋಜನೆಗಳನ್ನು ಮಾಡಿ ತಾನು ಶ್ರೀಶೈಲದಲ್ಲಿಯೇ ಸಮಾಧಿಸ್ಥನಾದನು.

# ದಿಗಂಬರ ಮುಕ್ತಿಮುನಿ

ಮುಕ್ತಿಮುನಿಯು ಪಂಡಿತಾರಾಧ್ಯ ಸಿಂಹಾಸನಕ್ಕೆ ಜೇವರ ಜಾತಿ ಭಿಕ್ಷಾ ವರ್ತಿಯನ್ನು ನಿಯಮಿಸಿ, ರೇವಣ ಸಿದ್ಧೇಶ್ವರ ರುದ್ರಮುನಿಗಳಿಂದ ನಡೆದು ಬಂದ ಪಟ್ಟಕ್ಕೆ ದಿಗಂಬರ ಮುಕ್ತಿಮುನಿಯನ್ನು ನೇಮಿಸಿಕೊಂಡನು. ಈತನು ಮಹಾಪುರುಷನು, ವೀರಧೀರನು. ಆಗ ಶಿವಶರಣರಿಗೆ ಒದಗಿದ್ದ ವಿಪತ್ಕಾಲದಲ್ಲಿ ಶ್ರೀಶೈಲ ಸಿಂಹಾಸನವನ್ನು ಮುಂತಿಟ್ಟುಕೊಂಡು ರುದ್ರಮುನಿಯ ಅಪ್ಪಣೆಯನ್ನು ಮೀರಲಾರದೆ ಬಹುಜನ ಗಣವರರನ್ನು ಅವನು ಸಂಗ್ರಹಿಸಿ ಮಲೆದೇಶಕ್ಕೆ ಹೊರಡುವವನಾದನು. ಆಗ ಅಲ್ಲಿ ಭದ್ರಾ ನದಿಯ ದಂಡೆಯ ಮೇಲೆ ತಮ್ಮ ದಾರಿಯನ್ನು ಕಾಯುತ್ತ ಕುಳಿತಿದ್ದ ನಾಗಲಾಂಬಿಕೆಗೆ ಅವಸಾನ ಕಾಲವು ಪ್ರಾಪ್ತವಾಗಿತ್ತು. ಅವಳು ಅಷ್ಟರಲ್ಲಿಯೇ ಇಲ್ಲಿ ಸಮಾಧಿಸ್ಥಳಾಗಿದ್ದಳು. ಆದರೆ ದಿಗಂಬರ ಮುಕ್ತಿಮುನಿಯು ಶಿವಶರಣರನ್ನೊಡಗೊಂಡು ಬಾಳೆ ಹೊನ್ನೂರಿನ ಬಳಿಯಲ್ಲಿ ವೀರೇಶ್ವರನೆಂಬ ಶಿವಲಿಂಗವನ್ನು ಕಿತ್ತು ಬಿಸಾಡಿದ್ದನ್ನು ಹೊಳೆಯೊಳಗಿಂದ ಬಾಳೆ ಎಲೆಯಲ್ಲಿ ಎತ್ತಿತಂದು ಅದನ್ನು ಸ್ವಸ್ಥಳದಲ್ಲಿ ಪ್ರತಿಷ್ಠಾಪಿಸಿದನು. ಆಗ ಅಲ್ಲಿ ಒಂದು ಬಹು ಕ್ರೂರಯುದ್ಧವು ನಡೆಯಿತು. ಇಲ್ಲಿ ಸಂತಲಿಗೆಯ ಸಾಂತರರು ನೊಳಂಬವಾಡಿಯ ನೊಳಂಬರು ಹೊಯಿಸಳ ದೇಶದಲ್ಲಿದ್ದ ಪರವಾದಿಗಳು ಶಿವಶರಣರನ್ನು ಎದುರಿಸಲು ಸಿದರಾಗಿದ್ದರು. ದಿಗಂಬರನು ಮುಕ್ತಿಮುನಿಯು ಶ್ರೀಶೈಲದಿಂದ ಬರುವಕಾಲದಲ್ಲಿ ಅವನಿಗುಂಟಾದ ಜಯದ ಮೂಲಕ ಗಣವರರು ಅವನೊಡನೆ ಸಾರಿ ಧರ್ಮ ಯುದ್ಧಕ್ಕೆ ಸನ್ನದ್ಧರಾಗಿದ್ದರು. ಈ ಯುದ್ಧವು ಬಹು ದಿವಸ ನಡೆಯಿತು. ಇದರಲ್ಲಿ ಕಡೆಗೆ ಶಿವಶರಣರು ಯಶಸ್ಸನ್ನು ಹೊಂದಿದರು. ಅಂದಿನಿಂದ ವೀರಶೈವರಿಗೆ ಹೊಸ ಯುಗವು ಪ್ರಾಪ್ತವಾಯಿತೆಂದು ಹೇಳಬಹುದು. ಆಗ ಅಲ್ಲಿ ಬಾಳೇಹೊನ್ನೂರಿನ ಬಳಿಯಲ್ಲಿ ಅವರು ಒಂದು ದೇವಾಲಯವನ್ನು ಪ್ರತಿಷ್ಠಿಸಿ ಅಲ್ಲಿ ಬಾಳೇಹಳ್ಳಿ ಎಂಬ ಹೆಸರಿನಿಂದ ಒಂದು ಗ್ರಾಮವನ್ನು ಸ್ಥಾಪಿಸಿದರು. ಆಗ ನಡೆದ ಭೀಕರ ಯುದ್ಧದಲ್ಲಿ ಅಸಂಖ್ಯ ಪರವಾದಿಗಳು ಹತರಾದರು. ಹೀಗೆ ಹತರಾದವರ ಹಲ್ಲುಗಳನ್ನು ಕಳೆದು ತೂಗಲು ಅವು ಮಣುವಿನ ಮೇಲೆ ಮೂರು ಖಂಡುಗವಾದವಂತೆ. ಇದರಿಂದ ಈ ಸಂಗ್ರಾಮದ ಭೀಕರತೆಯನ್ನು ನಾವು ಊಹಿಸಬಹುದು

ಹೀಗೆ ದಿಗಂಬರ ಮುಕ್ತಿಮುನಿಯು ವಿಜಯವನ್ನು ಸಂಪಾದಿಸಿ ಇಲ್ಲಿ ಒಂದು ಸಿಂಹಾಸನವನ್ನು ಸ್ಥಾಪಿಸಿದನು. ಅದೇ ಈಗ ಬಾಳೇಹಳ್ಳೀ ಸಿಂಹಾಸನವಾಗಿರುತ್ತದೆ. ದಿಗಂಬರ ಮುಕ್ತಿಮುನಿಯು ತನ್ನ ಸ್ಥಾನದಲ್ಲಿ ಬೇರೊಬ್ಬರನ್ನು ಇಲ್ಲಿ ನಿಯಮಿಸಿ ತಾನು ಸಮಾಧಿಸ್ಥನಾದನು.

---

## ಸುಕುಮಾರ ಚನ್ನಬಸವೇಶ್ವರ

ದಿಗಂಬರ ಮುಕ್ತಿಮುನಿಯು ಬಾಳೇಹಳ್ಳಿಯಲ್ಲಿ ಸಿಂಹಾಸನವನ್ನು ಸ್ಥಾಪಿಸಿ ಅದರ ಮೇಲೆ ಸುಕುಮಾರ ಚನ್ನಬಸವೇಶ್ವರನನ್ನು ನಿಯಮಿಸಿದರು. ಬಾಳೇಹಳ್ಳಿಯಲ್ಲಿ ಶಿವಗಣಂಗಳು ವೈರಿಗಳನ್ನು ಗೆದ್ದಿದ್ದರೂ ಅವರು ತಮ್ಮ ಅಧಿಕಾರವನ್ನು ಸುತ್ತಲೂ ಸ್ಥಾಪಿಸುವಲ್ಲಿ ದೀರ್ಘ ಪ್ರಯತ್ನಗಳನ್ನು ಮಾಡಬೇಕಾಯಿತು. ಅವರು ಬಹು ಜನರ ದುಷ್ಟ ಪರವಾದಿಗಳನ್ನು ಸಂಹರಿಸಬೇಕಾಯಿತು. ಆಗ ಮಾತ್ರ ಶಿವಶರಣರು ಕ್ಷೇಮದಿಂದ ಬಾಳುವದು ಶಕ್ಯವಾಯಿತು. ಇವುಗಳ ವಿವರಣೆಗಳು ನಮಗೆ ಇನ್ನೂ ತಿಳಿದಿಲ್ಲ. ಇದು ಇನ್ನೂ ಸಂಶೋಧಿಸತಕ್ಕ ವಿಷಯವಾಗಿದೆ.

---

## ಸಾರಾಂಶ

ಜಾತಿ ಭೇದವು ಹಿಂದೂ ಸಮಾಜದ ಅಭ್ಯುದಯಕ್ಕೆ ಘಾತುಕವಾಗಿರುತ್ತದೆ. ಇದನ್ನು ಮುರಿದೊಗೆಯುವ ಪ್ರಯತ್ನಗಳು ಬಹುಕಾಲದಿಂದ ನಮ್ಮ ದೇಶದಲ್ಲಿ ನಡೆದುಬಂದಿರುತ್ತವೆ. ಆದರೆ ಅವು ಇನ್ನೂ ಯಶಸ್ವಿಯಾಗಿಲ್ಲ ೧೨ನೇ ಶತಮಾನದಲ್ಲಿ ಶಿವಶರಣರು ಈ ಕಾರ್ಯವನ್ನು ಕರ್ನಾಟಕದಲ್ಲಿ ಮೊದಲು ಪ್ರಾರಂಭಿಸಿದರು. ಅವರಲ್ಲಿ ಒಬ್ಬ ಬ್ರಾಹ್ಮಣನು ತನ್ನ ಮಗಳನ್ನು ಒಬ್ಬ ಅಸ್ಪೃಶ್ಯನ ಮಗನಿಗೆ ಕೊಟ್ಟು ಲಗ್ನ ಮಾಡಿದನು. ಇದು ಆಗಿನ ರಾಜನಾದ ಬಿಜ್ಜಳನಿಗೆ ಘೋರ ಪಾತಕವೆನಿಸಿತು. ಅವನು ಈ ಪಾತಕ ಮಾಡಿದ ಆ ಇಬ್ಬರನ್ನೂ ಕೊಲೆಬಡಿಸಿದನು. ಇದು ಶಿವಶರಣರಿಗೆ ವಿರೋಧವೆನಿಸಲಾಗಿ ಸಮಾಜದಲ್ಲಿ ಕ್ಷೋಭೆಯುಂಟಾಯಿತು.

ಇದರಿಂದ ಬಿಜ್ಜಳ ಅರಸನು ಕಡೆಗೆ ತನ್ನ ಪ್ರಾಣವನ್ನು ನೀಗಬೇಕಾಯಿತು. ಇಷ್ಟೇ ಅಲ್ಲ, ತನ್ನ ರಾಜ್ಯವನ್ನು ಸಹ ಕಳೆದುಕೊಳ್ಳಬೇಕಾಯಿತು.

ಮುಂದೆ ಘೋರ ಯುದ್ಧಗಳು ಪ್ರಾರಂಭವಾದವು. ಅವುಗಳಲ್ಲಿ ಜಾತಿ ಭೇದವನ್ನು ಅಳಿಯಬೇಕೆನ್ನುವವರು ಮೊದಲು ಹಿಂಸಿಸಲ್ಪಟ್ಟರು, ಗೆಲ್ಲಲ್ಪಟ್ಟರು. ಕಡೆಗೆ ಅವರು ತಮ್ಮ ಪ್ರಾಣವನ್ನು ಸಹ ನೀಗಿದರು, ದೇಶ ತ್ಯಾಗ ಮಾಡಿದರು. ಕಡೆಗೆ ಉಳಿವಿಯಲ್ಲಿ ಕೊಲೆಗೆ ಒಳಗಾದರು.

ಆದರೆ ಕಡೆಗೆ ಸತ್ಯಕ್ಕೆ ಗೆಲುವಾಯಿತು. ಶ್ರೀಶೈಲ ಸಿಂಹಾಸನದಲ್ಲಿ ಸತ್ಯವಾದಿಗಳು ಸಮೂಹದಿಂದ ಕೂಡಿಕೊಂಡು ವಿರೋಧಿಗಳ ಮೇಲೆ ಪ್ರತಿದಾಳಿಗಳನ್ನು ಇಟ್ಟರು. ಈ ದಾಳಿಗಳು ಸ್ವಲ್ಪಕಾಲದಲ್ಲಿ ಇಡೀ ಉತ್ತರ ಕರ್ನಾಟಕವನ್ನು ವ್ಯಾಪಿಸಿದವು. ಶ್ರೀಶೈಲಪ್ರಾಂತವೆಲ್ಲ ಕಲುಕಿತು. ರಾಯಚೂರ, ಕಲಬುರ್ಗಿ, ಜಿಲ್ಲೆಗಳಲ್ಲಿ ಅಲ್ಲಲ್ಲಿ ಭಯಂಕರ ಸ್ಫೋಟಗಳುಂಟಾದವು. ಕಲಹಗಳೆದ್ದವು. ಅನೇಕರು ಅವುಗಳಲ್ಲಿ ಹತರಾದರು. ಮುಂದೆ ಇವು ಧಾರವಾಡ ಜಿಲ್ಲೆಯ ದಕ್ಷಿಣಭಾಗ ಆಮೇಲೆ ಮೈಸೂರು ಪ್ರಾಂತದ ಉತ್ತರಭಾಗ ಇಲ್ಲಿ ಆವಿರ್ಭಾವವಾದವು. ಅವುಗಳಲ್ಲಿ ಶಿವಶರಣರ ಉದಾರ ಮತಗಳನ್ನು ಅವಲಂಬಿಸಬೇಕೋ ಅಥವಾ ಅವುಗಳನ್ನು ಬಿಟ್ಟು ಬಿಡಬೇಕೋ, ಎಂಬುದೊಂದೇ ವಿಷಯವು ಜನತೆಯ ಮುಂದೆ ಇತ್ತು. ಇವುಗಳಲ್ಲಿ ಅಂಧಪರಂಪರೆಯ ಸನಾತನಿಗಳೂ ಅಂಗವಹಿಸಿ ಶಿವಶರಣರನ್ನು ಸಮೂಲ ನಾಶಮಾಡಲು ಬಗೆದರು. ಆದರೆ ಅದು ಅವರಿಗೆ ಸಾಧ್ಯವಾಗಲಿಲ್ಲ. ಕಡೆಗೆ ಬಸವಾದಿ ಪ್ರಮಥರ ವಿಚಾರಗಳಿಗೆಯೇ ಗೆಲುವಾಯಿತು. ಅವು ಎಲ್ಲ ಕಡೆಗೂ ಹೆಚ್ಚೆಚ್ಚು ಹಬ್ಬುತ್ತ ನಡೆದವು. ಮಠಾಧಿಪತಿಗಳು ಅವುಗಳನ್ನು ಪುರಸ್ಕರಿಸಹತ್ತಿದರು. ಕಾಯಕ ಮಾಡುವವರೂ ಉದ್ಯೋಗಸ್ಥರೂ, ಕೆಲಸಗಾರರೂ, ಕೂಲಿಕಾರರೂ, ಶಿವಶರಣರ ಉದಾರ ವಿಚಾರಗಳನ್ನು ಪ್ರಸಾರ ಪಡಿಸಹತ್ತಿದರು. ಕಡೆಗೆ ಇವರಿಗೆಯೇ ಜಯವಾಯಿತು. ಶಿವಶರಣರು ಈ ಕಾಲಕ್ಕೆ ನಡಿಸಿದ ಮಹತ್ ಪ್ರಯತ್ನಗಳು ಯಾವುದರಲ್ಲಿ ಸತ್ಯ, ಭಕ್ತಿ ಜ್ಞಾನಗಳು ಇವೆಯೋ ಅವುಗಳಿಗೆಯೇ ಗೆಲವು ಎಂಬುದನ್ನು ದೃಢಪಡಿಸಿದವು.

ಈ ಕಾರ್ಯಗಳಲ್ಲಿ ಬರೇ ದೊಡ್ಡವರಷ್ಟೇ ಅಲ್ಲ, ಚಿಕ್ಕವಯಸ್ಸಿನವರೂ ಸ್ತ್ರೀಯರೂ ಎಲ್ಲ ವರ್ಗದವರೂ ಎಲ್ಲ ಜಾತಿಯವರೂ ಅಂಗವಹಿಸಿ ಮನಃ

ಪೂರ್ವಕವಾಗಿ ಕಷ್ಟಸಹಿಸಿದರು. ಇವರು ಮಾಡಿದ ಕಾರ್ಯಗಳ ಪರಿಣಾಮವಾಗಿ ವೀರಶೈವ ಧರ್ಮವು ಕರ್ನಾಟಕದಲ್ಲಿ ದೃಢವಾಗಿ ಈಗಲೂ ನಿಂತಿರುತ್ತದೆ.

## ಅಲ್ಲಮಪ್ರಭು

ಬಸವೇಶ್ವರನು ಕಲ್ಯಾಣ ಪಟ್ಟಣದಲ್ಲಿ ಒಂದು ಮಹತ್ವದ ರಾಜ್ಯದಲ್ಲಿ ಒಂದು ಶ್ರೇಷ್ಠ ಅಧಿಕಾರಸ್ಥಾನದಲ್ಲಿದ್ದನು. ಆಗ್ಗೆ ಭಾರತ ದೇಶದಲ್ಲಿದ್ದ ಅಸಂಖ್ಯ ಶಿವಾನುಭವಿಗಳು ಅವನಲ್ಲಿ ನೆರೆಯುವವರಾದರು. ಆಗ ಅವನು ಅವರನ್ನೊಡಗೊಂಡು ಒಂದು ಶಿವಾನುಭವ ಮಂಟಪವನ್ನು ಕಲ್ಯಾಣದಲ್ಲಿ ಸ್ಥಾಪಿಸಿದನು. ಶಿವಾನುಭವದ ತತ್ವಗಳನ್ನು ಚರ್ಚಿಸಿ ಅವುಗಳ ಅನುಭವವನ್ನು ತಿಳಿಸಿ ಹೇಳುವದೇ ಈ ಮಂಟಪದಲ್ಲಿಯ ಶಿವಶರಣರ ಮುಖ್ಯ ಕಾರ್ಯವಾಗಿತ್ತು. ಇದರ ಮುಖ್ಯ ಸ್ಥಾನದಲ್ಲಿದ್ದುಕೊಂಡು ಚರ್ಚೆಗಳಲ್ಲಿ ಮುಖ್ಯ ಭಾಗ ವಹಿಸುತ್ತಿದ್ದವನು ಅಲ್ಲಮಪ್ರಭುವೇ ಇದ್ದಾನೆ. ಇವನು ಎಲ್ಲರಲ್ಲಿ ಮಿಗಿಲಾದ ಅನುಭಾವಿಯೂ ಜ್ಞಾನಿಯೂ ಶಿವಯೋಗಿಯೂ ಎಂದೆನಿಸಿಕೊಂಡು ಶಿವಶರಣರಿಗೆ ಮಾರ್ಗದರ್ಶಕನಾಗಿದ್ದನು. ಅವನು ಅಸಂಖ್ಯ ವಚನಗಳನ್ನು ರಚಿಸಿದ್ದಾನೆ. ಅವು ವಿದ್ವತ್ಪೂರಿತವಾಗಿವೆ, ಆಳವಾದ ವಿಚಾರವುಳ್ಳವಾಗಿವೆ, ಬಹು ಮಾರ್ಮಿಕವಾಗಿವೆ. ಅವನ ಅನೇಕ ವಚನಗಳು ವಿಜಯನಗರದ ರಾಜನಾದ ದೇವರಾಜನ ಕಾಲದಲ್ಲಿ ಪ್ರಸಿದ್ಧಿಗೆ ಬಂದ ಮಹಾಲಿಂಗದೇವನು 'ಪ್ರಭುದೇವರ ವಚನಗಳು' ಎಂಬ ಹೆಸರಿನಿಂದ ಒಂದು ಟೀಕಾತ್ಮಕ ಗ್ರಂಥವನ್ನು ರಚಿಸಿದ್ದಾನೆ. ವಚನ ಗ್ರಂಥಗಳಲ್ಲಿ ಇದು ಅಪೂರ್ವವಾದದ್ದು. ಅದರ ಟೀಕೆಯಾದರೂ ಅರ್ಥಗರ್ಭಿತವಾದದ್ದು ಇದೆ. ಈ ಗ್ರಂಥವು ವಚನವಾಙ್ಮಯದಲ್ಲಿ ಹೆಚ್ಚಿನ ತರಗತಿಯದೆಂದು ಪ್ರಸಿದ್ಧಿಯನ್ನು ಹೊಂದಿರುತ್ತದೆ.

ಅಲ್ಲಮಪ್ರಭುವಿನ ವಿಷಯವಾಗಿ ಅನೇಕ ಗ್ರಂಥಗಳು ಕನ್ನಡ ವಾಙ್ಮಯದಲ್ಲಿ ಉಂಟಾಗಿರುತ್ತವೆ. ಚಾಮರಸನೆಂಬ ವೀರಶೈವ ಕವಿಯು 'ಪ್ರಭುಲಿಂಗಲೀಲೆ' ಎಂಬ ಗ್ರಂಥವನ್ನು ಭಾಮಿನಿ ಷಟ್ಪದಿಯಲಿ ೧೪೩೦ರಲ್ಲಿ ವಿರಚಿಸಿದನು. ಈತನ ಚರಿತ್ರೆಯು ತೆಲಗಿನಲ್ಲಿಯೂ ಇರುತ್ತದೆ. ಈ ಗ್ರಂಥವಲ್ಲದೆ ಪ್ರಭುದೇವರ ಪುರಾಣ, ಪ್ರಭುನಟನ ತಾರಾವಳಿ, ಪ್ರಭು

ಚರಿತ್ರೆ, ಪ್ರಭುಗೀತೆ ಎಂಬ ಗ್ರಂಥಗಳು ಅಲ್ಲಮಪ್ರಭುವಿಗೆ ಸಂಬಂಧಿಸಿ ಉಂಟಾಗಿರುತ್ತವೆ. ಮಹಾಕವಿಯಾದ ಹರಿಹರನು ಅಲ್ಲಮಪ್ರಭುವಿನ ವಿಷಯವಾಗಿ ಒಂದು ತಗಳೆಯನ್ನು ಬರೆದಿದ್ದಾನೆ. ಹೀಗೆ ಅಲ್ಲಮಪ್ರಭುವು ವೀರಶೈವ ವಾಙ್ಮಯದಲ್ಲಿ ಶ್ರೇಷ್ಠ ಸ್ಥಾನವನ್ನು ಹೊಂದಿದ್ದಾನೆ.

ಅಲ್ಲಮಪ್ರಭುವು ಅನೇಕ ವಚನಗಳನ್ನು ರಚಿಸಿರುವದಲ್ಲದೆ ಮಂತ್ರಗೋಪ್ಯ, ಸೃಷ್ಟಿಯ ವಚನಗಳು, ಷಟ್‌ಸ್ಥಲಚಾರಿತ್ರ ಎಂಬ ಗ್ರಂಥಗಳನ್ನು ಸಹ ರಚಿಸಿದ್ದಾನೆ. ಅವನು ವಿರಕ್ತಾಶ್ರಮಿಗಳಿಗೆ ಮುಖ್ಯ ಪೀಠವಾಗಿರುವ ಶೂನ್ಯ ಸಿಂಹಾಸನಕ್ಕೆ ಮೊದಲನೆ ಅಧಿಪತಿಯು. ಈ ಸಿಂಹಾಸನವನ್ನು ಶ್ರೀ ಬಸವೇಶ್ವರನೇ ಮೊದಲು ನಿರ್ಮಾಣ ಮಾಡಿ ಕಲ್ಯಾಣದಲ್ಲಿದ್ದ ಎಲ್ಲ ಶಿವಶರಣರು ಈ ಸಿಂಹಾಸನಕ್ಕೆ ಅಧೀನರಾಗಿ ನಡೆಯಬೇಕೆಂಬ ಯೋಜನೆಯನ್ನು ಮಾಡಿದನೆಂದು ಹೇಳಲ್ಪಡುತ್ತದೆ. ಅಲ್ಲಮಪ್ರಭುವು ಮಾಯಾಕೋಲಾಹಲ, ನಿರಂಜನ ಜಂಗಮ, ಈ ಮೊದಲಾದ ಒಕ್ಕಣಿಕೆಗಳಿಂದ ವೀರಶೈವ ಸಮಾಜದಲ್ಲಿ ಪ್ರಖ್ಯಾತಿಯನ್ನು ಹೊಂದಿದ್ದಾನೆ. ಶ್ರೀ ಬಸವೇಶ್ವರನೂ ಅವನ ಕಾಲದಲ್ಲಿದ್ದ ಶಿವಶರಣರೂ ಅಲ್ಲಮಪ್ರಭುವಿನ ವಿಷಯವಾಗಿ ನಿಕಟ ಭಕ್ತಿಯುಳ್ಳವರಾಗಿದ್ದದ್ದು ಕಂಡುಬರುತ್ತದೆ.

ಅಲ್ಲಮಪ್ರಭುವು ನಿರಹಂಕಾರ ಮತ್ತು ಸುಜ್ಞಾನಿ ಎಂಬವರಿಗೆ ಮಗನಾಗಿ ಬನವಾಸಿಯಲ್ಲಿ ಜನಿಸಿದನು. ಅವನು ಚಿಕ್ಕಂದಿನಲ್ಲಿ ಹೇಗೆ ಬೆಳೆದನು ಮತ್ತು ಅವನ ವಿದ್ಯಾಭ್ಯಾಸವೆಷ್ಟು, ಎಂಬುದು ನಮಗೆ ತಿಳಿದು ಬಂದಿಲ್ಲ.

ಈ ಕಾಲಕ್ಕೆ ಬನವಾಸಿಯಲ್ಲಿ ಮಮಕಾರನೆಂಬ ರಾಜನು ಆಳುತ್ತಿದ್ದನು. ಅವನಿಗೆ ಪಟ್ಟದರಾಣಿಯು ಮೋಹಿನಿ ಎಂಬವಳಿದ್ದಳು. ಅಹಂಕಾರಾಚಾರ್ಯ ಎಂಬುವನು ಅರಸನಿಗೆ ಗುರುವಾಗಿದ್ದನು. ಅವನು ಮೋಹಿನಿಗೆ ಈಶ್ವರನನ್ನು ಒಲಿಸಿಕೊಳ್ಳುವ ಶಿವಮಂತ್ರವನ್ನು ಉಪದೇಶಿಸಿದ್ದನು. ಮೋಹಿನಿಯ ಮಗಳು ಮಾಯೆಯು, ಅವಳು ಮಧುಕೇಶ್ವರಾಲಯಕ್ಕೆ ನಿತ್ಯವೂ ಹೋಗಿ ಈ ಮಂತ್ರದಿಂದ ಪೂಜೆಮಾಡುತ್ತಿದ್ದಳು.

ಇತ್ತ ಅಲ್ಲಮಪ್ರಭುವು ಶಿವಜ್ಞಾನವನ್ನು ಹೊಂದಿ ಅದರಂತೆ ಆಚರಿಸುವವನಾಗಿದ್ದನು. ಈ ಕಾಲದಲ್ಲಿ ಕರ್ನಾಟಕದಲ್ಲಿ ಯೋಗಾಭ್ಯಾಸದ ಪ್ರಾಬಲ್ಯವು ಬಹಳವಾಗಿದ್ದಿತು. ಇಲ್ಲಿ ಅನೇಕ ಕಡೆಗೆ ಅರಣ್ಯ ಪ್ರದೇಶ

ಗಳಿದ್ದು ಅಲ್ಲಿಗೆ ಅಸಂಖ್ಯ ಹಠಯೋಗಿಗಳು ಬಂದು ತಪಸ್ಸನ್ನಾಚರಿಸು ವರು. ಇವುಗಳಲ್ಲಿ ಬಾದಾಮಿ ಪ್ರದೇಶ, ಕಪೋತ ಪರ್ವತ, ಕೊಲ್ಹಾಪೂರ ಪ್ರಾಂತ ಮತ್ತು ಬನವಾಸಿ ಬಳ್ಳಿಗಾವಿ ಭಾಗ ಇವು ಅವರಿಗೆ ಮುಖ್ಯ ಸ್ಥಾನಗಳಾಗಿದ್ದವು. ಅಲ್ಲಮಪ್ರಭುವು ಯೋಗ ಮಾರ್ಗವನ್ನು ಅವಲಂಬಿಸಿ ಹಠಯೋಗದಲ್ಲಿ ಬಲ್ಲವನೆಂದು ಹೆಸರುವಾಸಿಯಾದನು. ಹಠಯೋಗ ಪ್ರದೀಪಿಕೆ ಎಂಬ ಸಂಸ್ಕೃತ ಗ್ರಂಥವಿದ್ದು ಅದರಲ್ಲಿ ಹಿಂದುಸ್ತಾನದಲ್ಲಿ ಆಗಿ ಹೋದ ಮಹತ್ವದ ಯೋಗಿಗಳ ಹೆಸರುಗಳಿರುತ್ತವೆ. ಅದರಲ್ಲಿಯ ಶ್ಲೋಕವು ಕೆಳಗಿನಂತೆ ಇದೆ.

> ಕಾನೇರೀ ಪೂಜ್ಯ ಪಾದಶ್ಚ ನಿತ್ಯ ನಾಥೋ ನಿರಂಜನಃ ।
> ಕಪಾಲೀ ಬಿಂದು ನಾಥಶ್ಚ ಕಾಕಚಂಡೀಶ್ವರಾಹ್ವಯಃ ।
> ಅಲ್ಲಮಪ್ರಭುದೇವಶ್ಚ ಘೋಡಾ ಚೋಲೀಚ ಟಿಂಟಿಣಿಃ ।
> ಭಾನುಕೀ ನಾರದೇವಶ್ಚ ಖಂಡಃ ಕಾಪಾಲಕಸ್ತಥಾ ಇತ್ಯಾದಯೋ
> ಮಹಾ ಸಿದ್ಧಾ ಹಠಯೋಗ ಪ್ರಭಾವತಃ।
> ಖಂಡಯಿತ್ವಾ ಮಹಾಕಾಲಂ ಬ್ರಹ್ಮಾಂಡೇ ವಿಚರಂತಿತೆ।

ಇದರಿಂದ ಅಲ್ಲಮಪ್ರಭುವು ಮಹಾ ಯೋಗಿ ಎಂದು ಭಾರತದಲ್ಲಿ ಪ್ರಸಿದ್ಧಿಯನ್ನು ಪಡೆದವನಾಗಿದ್ದನೆಂದು ತಿಳಿದುಬರುತ್ತದೆ. ಈ ಶ್ಲೋಕವು ಇದ್ದ ಗ್ರಂಥವು ಕಲಕತ್ತೆಯಲ್ಲಿ ಅಚ್ಚಾಗಿರುತ್ತದೆ. ಇದರ ಮೇಲಿಂದ ಅಲ್ಲಮಪ್ರಭುವು ಬಹುದಿನ ಯೋಗಿಗಳನ್ನು ಕಾಣುತ್ತ ಅವರ ಮಾರ್ಗ ದಂತೆ ಆಚರಿಸುತ್ತ ಅವರಲ್ಲಿ ಉನ್ನತ ಸ್ಥಾನವನ್ನು ಹೊಂದಿದ್ದನೆಂಬ ಅನುಮಾನವು ಉಂಟಾಗುತ್ತದೆ. ಆದರೆ ಅವನು ಯಾವ ಯಾವ ಪ್ರಾಂತ ಗಳಲ್ಲಿ ಸಂಚರಿಸಿದನು, ಅವನು ಹೇಗೆ ಯೋಗಾಭ್ಯಾಸವನ್ನು ನಿರ್ವಹಿಸಿದನು ಎಂಬುದರ ವಿವರಣೆಗಳು ನಮಗೆ ಇನ್ನೂ ತಿಳಿದುಬಂದಿರುವದಿಲ್ಲ. ಆದರೆ ಅವನು ಯೋಗಾಭ್ಯಾಸದಲ್ಲಿ ಉಚ್ಚ ಸ್ಥಿತಿಯನ್ನು ಹೊಂದಿದ್ದನೆಂದು ಹೇಳಲು ಯಾವ ಪ್ರತ್ಯವಾಯವೂ ಇರುವದಿಲ್ಲ.

ಈ ಕಾಲದಲ್ಲಿ ಶಿವಶರಣರ ತತ್ವಗಳು ಅನೇಕ ಕಡೆಗೆ ಪ್ರಸಾರ ವಾಗಹತ್ತಿದ್ದು ನಿರ್ವಿವಾದವಾಗಿದೆ. ಷಟ್‌ಸ್ಥಲ ಮಾರ್ಗದಲ್ಲಿ ಯೋಗಾ ಭ್ಯಾಸದ ತತ್ವಗಳು ಅಡಕವಾಗಿರುತ್ತವೆ. ಆದರೆ ಯೋಗಾಭ್ಯಾಸದ ಮೂಲಕ ಉಂಟಾಗುತ್ತಿದ್ದ ತಪ್ಪು ದಾರಿಗಳನ್ನು ಶಿವಶರಣರು ಚನ್ನಾಗಿ

ತಿಳಿದು ಅವುಗಳ ಸ್ಥಾನದಲ್ಲಿ ಅವರು ಲಿಂಗಾನುಭವದ ಶುದ್ಧ ಮಾರ್ಗವನ್ನು ಅನುಸರಿಸುವವರಾಗಿದ್ದರು. ಈ ಮಾರ್ಗವನ್ನು ಅರುಹುವ ಕೇಂದ್ರಗಳು ಕರ್ನಾಟಕದಲ್ಲಿ ಈ ಕಾಲದಲ್ಲಿ ಬಹುಕಡೆಗೆ ಇದ್ದವು. ಅವುಗಳಲ್ಲಿ ಬಳ್ಳಿಗಾವಿ ಮತ್ತು ಬನವಾಸಿಗಳಿದ್ದ ಪ್ರದೇಶವು ಒಂದು ಮುಖ್ಯ ಕೇಂದ್ರವಾಗಿತ್ತು. ಇಲ್ಲಿಗೆ ಅನುಮಿಷ, ರೇವಣಸಿದ್ಧ ಮೊದಲಾದವರು ಆಗಮಿಸಿ ಶಿವಾನುಭವ ಮಾರ್ಗವನ್ನು ಜನರಿಗೆ ಉಪದೇಶಿಸುತ್ತ ಬಂದಿದ್ದರಿಂದ ಅನೇಕ ಶಿವಶರಣರು ಈ ಭಾಗದಲ್ಲಿ ಉಂಟಾಗಿದ್ದಾರೆ. ಅವರಲ್ಲಿ ಅಲ್ಲಮಪ್ರಭುವೂ ಒಬ್ಬನಾಗಿದ್ದು ಅವನು ಹಠಯೋಗವನ್ನು ತ್ಯಜಿಸಿ ಶರಣರ ಶಿವಾನುಭವದ ಮಾರ್ಗವನ್ನು ಕೈಕೊಂಡಿದ್ದನು. ಅವನು ಇಲ್ಲಿ ಇದ್ದಾಗಲೇ ಅನುಮಿಷನಿಂದ ಅವನು ಶಿವದೀಕ್ಷೆಯನ್ನು ಹೊಂದಿರಬೇಕೆಂದು ತೋರುತ್ತದೆ. ಶಿವದೀಕ್ಷೆಯನ್ನು ಹೊಂದಿದವರು ಒಂದು ಕಾಯಕವನ್ನು ಅವಲಂಬಿಸಬೇಕೆಂಬ ಪದ್ಧತಿಯು ಶಿವಶರಣರಲ್ಲಿ ಇದೆ. ಇದಕ್ಕನುಸರಿಸಿ ಅಲ್ಲಮಪ್ರಭುವು ಮದ್ದಳೆಯನ್ನು ಬಾರಿಸುತ್ತ ಶಿವಭಜನೆ ಮಾಡುವ ಕಾಯಕವನ್ನು ಕೈಕೊಂಡಿದ್ದನೆಂದು ತೋರುತ್ತದೆ. ಅವನು ಈ ಕಾಯಕವನ್ನು ಕೈಕೊಂಡು ಬನವಾಸಿಯಲ್ಲಿ 'ಮಧುಕೇಶ್ವರನ ದೇವಾಲಯದಲ್ಲಿ ತನ್ನ ಮದ್ದಳೆಯ ಕಾಯಕವನ್ನು ನಡಿಸುತ್ತ ಬಂದನು.

ಅವನು ಇದೇ ಕಾಲಕ್ಕೆ ತನ್ನ ವಚನಗಳನ್ನು ರಚಿಸಲು ಪ್ರಾರಂಭಿಸಿರಬೇಕೆಂದು ತೋರುತ್ತದೆ. ಅವನು ಕಲ್ಯಾಣಕ್ಕೆ ಬರುವ ಮೊದಲೇ ಅತ್ಯಂತ ಜ್ಞಾನಿಯೂ ಪವಿತ್ರ ಆಚರಣೆಯುಳ್ಳವನೂ ಎಂದು ಪ್ರಸಿದ್ಧಿಯನ್ನು ಹೊಂದಿದ್ದನು. ಷಟ್‌ಸ್ಥಲ ಶಾಸ್ತ್ರದ ಪ್ರಕಾರ ಜ್ಞಾನಿಯಾದವನು ಜಂಗಮಸ್ಥಲದವನೆಂದು ಹೇಳಲ್ಪಡುತ್ತದೆ. ಆದ್ದರಿಂದ ಅಲ್ಲಮಪ್ರಭುವು ವಿರಕ್ತಾಚರಣೆಯುಳ್ಳವನೂ ಒಬ್ಬ ಶ್ರೇಷ್ಠ ಜಂಗಮನೂ ಎಂದು ನಾಡಿನಲ್ಲಿ ಪ್ರಸಿದ್ಧಿಯನ್ನು ಹೊಂದಿದನು. ಹೀಗೆ ಅವನ ಪ್ರಸಿದ್ಧಿಯು ಬೆಳೆಯುಲಿಕ್ಕೆ ಕೆಲವೊಂದು ವಿಶೇಷ ಸಂಗತಿಯೂ ಪಟ್ಟಣದಲ್ಲಿ ಉಂಟಾಯಿತು.

ಬನವಸೆಯ ಮಮಕಾರ ರಾಜನಿಗೆ ಮಾಯಾದೇವಿ ಎಂಬ ಮಗಳು ಇದ್ದಳೆಂಬುದನ್ನು ನಾವು ಹಿಂದೆಯೇ ಹೇಳಿದ್ದೇವೆ. ಅವಳು ಮಧುಕೇಶ್ವರ ದೇವಾಲಯಕ್ಕೆ ಬಂದಾಗ ಅವಳು ಮೃದಂಗವನ್ನು ಬಾರಿಸುತ್ತ ಇದ್ದ ಅಲ್ಲಮಪ್ರಭುವಿನನ್ನು ನೋಡಿ ಅವನಿಗೆ ಮೋಹಿತಳಾದಳು. ಅವನನ್ನು

ತನ್ನ ಅರಮನೆಯಲ್ಲಿಟ್ಟುಕೊಳ್ಳಬೇಕೆಂದು ಬಯಸಿ ಅವನಿಂದ ಬಾರಿಸುವ ಕಲೆಯನ್ನು ಕಲಿಯುವೆನೆಂಬ ನೆವವನ್ನು ಮುಂದೆಮಾಡಿ ಅವನನ್ನು ಅರಮನೆಯಲ್ಲಿ ನಾಟ್ಯಾಚಾರ್ಯನನ್ನಾಗಿ ನಿಯಮಿಸಿಕೊಂಡಳು. ರಾಜನೂ ರಾಣಿಯೂ ಇದಕ್ಕೆ ಒಪ್ಪಿದರು. ಅಲ್ಲಮನು ಅರಮನೆಯಲ್ಲಿ ಇರಹತ್ತಿದಬಳಿಕ ಅವನನ್ನು ಒಲಿಸಿಕೊಳ್ಳಬೇಕೆಂದು ಮಾಯಾದೇವಿಯು ಅನೇಕ ಪ್ರಯತ್ನಗಳನ್ನು ಮಾಡಹತ್ತಿದಳು. ಆದರೆ ಅವಳ ಮನೋರಥವು ಪೂರ್ಣವಾಗಲಿಲ್ಲ. ಅಲ್ಲಮಪ್ರಭುವು ಒಬ್ಬ ಶ್ರೇಷ್ಠ ಯೋಗಿಯಾಗಿದ್ದನು. ಮನಸ್ಸನ್ನು ತನ್ನ ನಿಯಂತ್ರಣದಲ್ಲಿ ಇಟ್ಟುಕೊಳ್ಳುವದೇ ಯೋಗಿಯ ಮುಖ್ಯ ಕಾರ್ಯವಾಗಿದೆ. ಆದ್ದರಿಂದ ಮಾಯಾದೇವಿಯ ಮೋಹಕ್ಕೆ ಅವನು ಬಲಿ ಬೀಳಲಿಲ್ಲ. ಅಲ್ಲಮಪ್ರಭುವು ಲಿಂಗ ಜ್ಞಾನದಲ್ಲಿ ಬಲ್ಲವನಾಗಿ ಷಟ್‌ಸ್ಥಲಗಳಲ್ಲಿ ಉಚ್ಚ ಸ್ಥಾನವನ್ನು ಹೊಂದಿದವನಾಗಿದ್ದನು. ಅವನು ತನ್ನ ಗುರುವಾದ ಅನಿಮಿಷನ ಸಮೀಪದಲ್ಲಿಯೇ ವಾಸಮಾಡುತ್ತಿದ್ದನು. ಅಲ್ಲದೆ ಮಹಾದೇವಿಯಕ್ಕ, ಸತ್ಯಕ್ಕ ಮೊದಲಾದ ಶರಣ ಶರಣಿಯರು ಸಹ ಇಲ್ಲಿಯೇ ಇರುತ್ತಿದ್ದರು. ಈ ಸಂಗತಿಗಳ ಮೂಲಕ ಬನವಾಸಿ ನಾಡಿನಲ್ಲಿ ಉಚ್ಚ ಧಾರ್ಮಿಕ ವಾತಾವರಣವು ಉಂಟಾಗಿತ್ತು. ಇಂಥ ಸನ್ನಿವೇಶದಲ್ಲಿ ಅಲ್ಲಮನು ಒಬ್ಬ ಸ್ತ್ರೀಯಳ ಮೋಹದಲ್ಲಿ ಬಿದ್ದಿದ್ದರೆ ಅವನು ದೊರಕಿಸಿದ ಮಹತ್ವದ ಸ್ಥಾನವು ಕೂಡಲೇ ಅಳಿದುಹೋಗುತ್ತಿತ್ತು. ಇದನ್ನು ಅಲ್ಲಮಪ್ರಭುವು ತಿಳಿದವನಾಗಿ ಮಾಯಾದೇವಿಯು ಅರಮನೆಯಲ್ಲಿ ಇರುವದನ್ನು ಬಿಟ್ಟುಕೊಟ್ಟು ಅಲ್ಲಿಂದ ಹೊರಬಿದ್ದನು. ಮಾಯಾದೇವಿಯು ಎಷ್ಟು ಪರಿ ಹೇಳಿಕೊಂಡರೂ ಅಲ್ಲಮನು ಅವಳನ್ನು ಕಡೆಗಣಿಸಿ ಬನವಾಸಿಯಲ್ಲಿ ಇರುವದನ್ನು ತ್ಯಜಿಸಿ ಪಟ್ಟಣದಿಂದ ಹೊರಬಿದ್ದನು.

ಅಲ್ಲಮಪ್ರಭುವು ಮೃದಂಗ ಬಾರಿಸುವಲ್ಲಿ ಬಹು ನಿಪುಣನಾಗಿದ್ದನು. ಆದರೆ ಅವನು ಈ ಕಾಲಕ್ಕೆ ಮೃದಂಗ ಬಾರಿಸುವ ಕಾಯಕವನ್ನು ಬಿಟ್ಟುಕೊಟ್ಟು, ಅದರ ಬದಲು ಜನರಿಗೆ ಉಪದೇಶಮಾಡುವ ಬೇರೊಂದು ಕಾಯಕವನ್ನು ಕೈಕೊಂಡನು. ಇದಾದರೂ ಕಾಯಕಗಳಲ್ಲಿ ಬಹು ಶ್ರೇಷ್ಠವಾದುದು. ಜನರ ಸ ಧಾರಣೆ ಮಾಡುವದಾದರೂ ಕಾಯಕದಲ್ಲಿ ಬರುತ್ತದೆ. ಇಂಥ ಕಾಯಕವನ್ನು ಅಲ್ಲಮಪ್ರಭುವು ಕೈಕೊಂಡು ದೇಶದಲ್ಲಿ ಸಂಚರಿಸಲು ಪ್ರಾರಂಭ ಮಾಡಿದನು. ಇಷ್ಟರಲ್ಲಿ ಅವನು ಒಬ್ಬ ಯೋಗಿಶ್ರೇಷ್ಠನೆಂದು ನಾಡಿನಲ್ಲಿ ಪ್ರಸಿದ್ಧಿಯನ್ನು ಹೊಂದಿದ್ದನು. ಅವನು ಒಬ್ಬ

ರಾಜಕುಮಾರಿಯು ಬಲೆಯಲ್ಲಿ ಸಿಕ್ಕಿಬೀಳಲಿಲ್ಲೆಂಬ ವಾರ್ತೆಯು ಜನರಿಗೆ ತಿಳಿದುಬಂದಿತ್ತು. ಅವನು ಬಯಸಿದ್ದರೆ ಅರಮನೆಯಲ್ಲಿದ್ದುಕೊಂಡು ಸುಖವಾಗಿ ರಾಜವೈಭವದಲ್ಲಿ ಇರಬಹುದಾಗಿತ್ತು. ಆದರೆ ಅಲ್ಲಮನು ಇದನ್ನು ತೊರೆದು ಒಬ್ಬ ಸಾಮಾನ್ಯ ಮನುಷ್ಯನಂತೆ ಇರಲು ಪ್ರಾರಂಭಿಸಿದನು.

ಬಹುಜನ ಶಿವಾನುಭವಿಗಳು ಲಿಂಗಪೂಜೆಯನ್ನು ಮಾಡುತ್ತ ತಮ್ಮ ಪೂರ್ತೇ ಇದ್ದುಕೊಂಡು ಕಾಲಕಳೆಯುವದು ಕಂಡುಬರುತ್ತದೆ. ಆದರೆ ಇದು ನಿಜವಾದ ಶಿವಾನುಭವದ ನಡೆಯುಲ್ಲ. ಶಿವಾನುಭವಿಯು ಜನರಲ್ಲಿ ಇದ್ದುಕೊಂಡು ಅವರಿಗೆ ಯೋಗ್ಯ ಮಾರ್ಗವನ್ನು ತೋರಿಸುವದೇ ಅವನ ಮುಖ್ಯ ಕರ್ತವ್ಯವಾಗಿದೆ. ಗುರುಶಿಷ್ಯರಲ್ಲಿ ಈ ತರದ ಪರಸ್ಪರ ಸಂಬಂಧವು ಇರತಕ್ಕದ್ದು. ಗುರುವು ಲಿಂಗದ ನೆಲೆಕಲೆಗಳನ್ನು ತಿಳಿಸುವದೆಂದರೆ ಶಿಷ್ಯನಲ್ಲಿ ಉಚ್ಚ ವರ್ತನೆಯನ್ನು ಉಂಟುಮಾಡುವದೇ ಇರುತ್ತದೆ. ಅಲ್ಲಮಪ್ರಭುವು ಈ ಮಾರ್ಗವನ್ನು ಅನುಸರಿಸುತ್ತಿರುವದನ್ನು ಜನರು ನೋಡಿ ಅವನು ಜಂಗಮಶ್ರೇಷ್ಠನು, ಮಾಯಾ ಕೋಲಾಹಲನು,ಲಿಂಗಾನುಭವಿಯು, ಜ್ಞಾನಿಯು, ಎಂದು ಮೊದಲಾಗಿ ಸಂಬೋಧಿಸಹತ್ತಿದರು.

ಹರಿಹರಕವಿಯು ಮಹಾಕವಿಯಾಗಿರುವದೇನೋ ನಿಜವು. ಅವನು ಪ್ರಭುದೇವರ ವಿಷಯವಾಗಿ ಒಂದು ರಗಳೆಯನ್ನು ರಚಿಸಿದ್ದಾನೆ. ಅದರಲ್ಲಿ ಅವನು ಅಲ್ಲಮಪ್ರಭುವು ಮಾಯಾದೇವಿಯ ಮೋಹಕ್ಕೆ ವಶಗತನಾದನೆಂತಲೂ ಅವನು ಅವಳ ಸರಸದಲ್ಲಿದ್ದನೆಂತಲೂ ಅವಳು ಮರಣಹೊಂದಿದ ಬಳಿಕ ಅವನಲ್ಲಿ ವಿರಕ್ತಿಯು ಉತ್ಪನ್ನವಾಯಿತೆಂತಲೂ ವರ್ಣಿಸಿದ್ದಾನೆ. ಆದರೆ ಈ ಕಥೆಯು ನಂಬಿಗೆಗೆ ಯೋಗ್ಯವಾದುದಲ್ಲ. ಅಲ್ಲಮ ಪ್ರಭುವು ಒಬ್ಬ ಶ್ರೇಷ್ಠ ವಚನಕಾರನು, ಅವನು ಅನುಮಿಷನಿಂದ ಲಿಂಗಧಾರಣ ಹೊಂದಿರುವವನು, ಇಂಥವನು ನೈತಿಕ ವರ್ತನೆಗೆ ಅನುಸರಿಸಿ ನಡೆಯದೆ ಇದ್ದಲ್ಲಿ ಅವನ ವರ್ಚಸ್ಸು ನಾಡಿನಲ್ಲಿ ಎಷ್ಟುಮಾತ್ರವೂ ಉಳಿಯುತ್ತಿದ್ದಿಲ್ಲ. ಹರಿಹರನು ಹೇಳುವ ಕಥೆಯು ನಂಬಿಗೆಗೆ ಅರ್ಹವಾದುದೆಂದು ತೋರುವದಿಲ್ಲ.

ಹರಿಹರನಕಾಲದಲ್ಲಿ ಅಂದರೆ ೧೩ನೇ ಶತಮಾನದ ಅಂತ್ಯಭಾಗದಲ್ಲಿ ಕೆಲವೊಂದು ವಿಪರೀತ ವಾತಾವರಣವು ಕರ್ನಾಟಕದಲ್ಲಿ ಉಂಟಾಗಿದ್ದಿತು. ಆಗ ಜಂಗಮರಲ್ಲಿ ಬಹು ಜನರು ಜಾರತನ, ಕಳವುಮಾಡುವದು, ಮೊದಲಾದ ಕಾರ್ಯಗಳಲ್ಲಿ ಲೋಲುಪರಾಗಿದ್ದರೆಂದು ತೋರುತ್ತದೆ. ಅನೇಕ

ಜಾರಿಣೀ ಸ್ತ್ರೀಯರು ಶಿವಶರಣೆಯರೆಂದು ಹೇಳಲ್ಪಡುತ್ತಿದ್ದರು. ತಿಜೋರಿಗೆ ಕನ್ನಹಾಕಿ ದರೋಡೆ ಮಾಡಿದ ಜಂಗಮರೂ ಇದ್ದಾರೆ. ಈ ವಿಷಯವನ್ನು ಕುರಿತು ನಾವು ಶಿವಶರಣರ ಚರಿತ್ರೆಗಳು ಭಾಗ ೩ ಪುಟ ೩೨೬ ಇದರಲ್ಲಿ ವಿವರಣೆಗಳನ್ನು ಮಾಡಿದ್ದೇವೆ. ಆಗ ಅನಾಚಾರಿಗಳಾದ ಜಂಗಮರನ್ನು ಸಮರ್ಥಿಸಲು ಅವರಲ್ಲಿಯವರೇ ವಚನಗ್ರಂಥಗಳಲ್ಲಿ ಸಹ ನೀತಿಗೆ ವಿರುದ್ಧವಾದ ವಚನಗಳನ್ನು ಸೇರಿಸಿದ್ದಾಗಿ ತೋರುತ್ತದೆ. ಆದರೆ ನಾವು ವಚನವಾಙ್ಮಯವನ್ನು ಸಾಮಾನ್ಯವಾಗಿ ಪರಿಶೀಲಿಸಿದರೆ ಅವುಗಳು ಉಚ್ಚ ನಡೆಯನ್ನು ಪುರಸ್ಕರಿಸುವದು ಕಂಡು ಬರುತ್ತದೆ. ಆದ್ದರಿಂದ ಹರಿಹರಕವಿಯು ವರ್ಣಿಸಿರುವ ಇಂಥ ಕಥಾಭಾಗಗಳನ್ನು ವೀರಶೈವರು ನಂಬದೆ ತಿರಸ್ಕರಿಸುವದೇ ಯುಕ್ತವಾಗಿರುವದು.

ಅಲ್ಲಮ ಪ್ರಭುವಿನ ಮಹತ್ವವು ಮತ್ತು ಅವನ ಶ್ರೇಷ್ಠತೆಯು ಇಷ್ಟರಲ್ಲಿ ಜನತೆಯ ಲಕ್ಷಕ್ಕೆ ಪೂರ್ಣವಾಗಿ ಬಂದಿತ್ತು. ಅವನು ಈ ಕಾಲದಲ್ಲಿ ಅನೇಕ ಮಹತ್ವದ ವಚನಗಳನ್ನು ರಚಿಸಿದ್ದನು. ಅವುಗಳಲ್ಲಿರುವ ಭಾವವು ಬಹು ಗಾಂಭೀರ್ಯವುಳ್ಳದು. ಆಧ್ಯಾತ್ಮಿಕ ಶ್ರೇಷ್ಠ ವಿಚಾರವುಳ್ಳದು. ಅಂತರಂಗದ ರೀತಿಯನ್ನು ಅವು ಚೆನ್ನಾಗಿ ಹೇಳಿವೆ. ಅಲ್ಲಮಪ್ರಭುವು ಅವುಗಳನ್ನು ಉಲ್ಲೇಖಿಸುತ್ತ ಶಿವಾನುಭವದ ಜ್ಞಾನವನ್ನು ಜನತೆಯಲ್ಲಿ ಪ್ರಚಾರ ಮಾಡುತ್ತ ಇದ್ದನು.

ಇವಲ್ಲದೆ ಅವನು ಯೋಗಾಭ್ಯಾಸವನ್ನು ಪೂರ್ಣವಾಗಿ ಅಳವಡಿಸಿಕೊಂಡಿದ್ದನು. ಅದರೊಡನೆ ಅವನು ಶಿವಶರಣರ ಶಿವಾನುಭವ ಜ್ಞಾನವನ್ನು ಸಹ ಸಂಘಟಿಸಿಕೊಂಡಿದ್ದನು. ಆದ್ದರಿಂದ ಅವನು ಕೇವಲ ಯೋಗಿಗಳು ಅನುಸರಿಸುತ್ತ ಬಂದಿದ್ದ ತಪ್ಪು ಮಾರ್ಗವನ್ನು ಬಿಟ್ಟುಕೊಟ್ಟು ಶಿವಾನುಭವದ ಋಜು ಮಾರ್ಗವನ್ನು ಜನರಿಗೆ ಬೋಧಿಸುವವನಾದನು.

ಅಲ್ಲಮ ಪ್ರಭುವು ಜನರಿಗೆ ತಿಳಿಯದ ವಿಷಯಗಳನ್ನು ಅವರಿದುರಿಗೆ ಚರ್ಚಿಸುತ್ತಿದ್ದಿಲ್ಲ. ಮನುಷ್ಯನು ತನ್ನ ಜೀವನದಲ್ಲಿ ನಡೆಸುತ್ತಲಿರುವ ಉದ್ಯೋಗಗಳನ್ನೂ ಉಪಜೀವನದ ಹೋರೆಗಳನ್ನೂ ಲಕ್ಷಿಸಿ ಅವುಗಳನ್ನು ಅವನು ಹೇಗೆ ನಿರ್ವಹಿಸಬೇಕೆಂಬುದನ್ನು ತಿಳಿಸಿ ಹೇಳುವನು. ಹೇಗೆ

ಸಾಕ್ರೇಟಿಸ್, ಬುದ್ಧದೇವ, ಕ್ರೈಸ್ತ, ಕಾನಫ್ಯೂಶಿಯಸ್, ಮೊದಲಾದವರು ಜನರಲ್ಲಿ ಬೆರೆದು ಬೋಧಿಸುತ್ತ ಬಂದರೋ ಹಾಗೆಯೇ ಅಲ್ಲಮಪ್ರಭುವು ಆಚರಿಸುವವನಾದನು.

ಅಲ್ಲಮಪ್ರಭುವು ಮೊದಲು ಶೈವ ಶಾಸ್ತ್ರಗಳನ್ನು ಚೆನ್ನಾಗಿ ಮನನ ಮಾಡಿಕೊಂಡು ಶಿವಾನುಭವಕ್ಕೆ ಅನುಸರಿಸಿ ಕೆಲವು ಗ್ರಂಥಗಳನ್ನು ಬರೆದಂತೆ ತೋರುತ್ತದೆ. ಅವುಗಳಲ್ಲಿ ಅವನು ಸೃಷ್ಟಿಯ ವಚನಗಳು, ಮಂತ್ರಗೋಪ್ಯ, ರಾಜಯೋಗದ ತತ್ವಗಳು, ಈ ಗ್ರಂಥಗಳು ಬಹು ಮಹತ್ವವಾದವುಗಳು ಇರುತ್ತವೆ. ಈ ಪ್ರಕಾರ ಅಲ್ಲಮಪ್ರಭುವು ಪರಿಪೂರ್ಣ ಜ್ಞಾನವನ್ನು ಉಂಟು ಮಾಡಿಕೊಂಡು ನಾಡಿನಲ್ಲಿ ಸಂಚಾರ ಮಾಡಲು ಉದ್ಯುಕ್ತನಾದನು.

## ಮಹಾದೇವಿಯಕ್ಕ

ಅವನು ಮೊದಲು ಉಡುತಡಿಯಲ್ಲಿದ್ದ ಮಹಾದೇವಿಯಕ್ಕನನ್ನು ಕಂಡಿರಬೇಕೆಂದು ತೋರುತ್ತದೆ. ಈ ನಗರದ ಅರಸನಾದ ಕೌಶಿಕರಾಜನು ಮಹಾದೇವಿಯಕ್ಕನಿಗೆ ಮೋಹಿತನಾಗಿ ಅವಳನ್ನು ವರಿಸಲು ಪ್ರಯತ್ನಿಸಿದನು. ಆದರೆ ಅವನ ಪ್ರಯತ್ನವು ನಿಷ್ಫಲವಾಗಲು ಮಹಾದೇವಿಯಕ್ಕನು ಕೌಶಿಕನ ರಾಜ್ಯದಲ್ಲಿ ಇರಬಾರದೆಂದು ಉಡುತಡಿಯನ್ನು ಬಿಟ್ಟು ಕಲ್ಯಾಣದಲ್ಲಿದ್ದ ಬಸವೇಶ್ವರನ ಕಡೆಗೆ ಹೊಂಟಳು. ಮಹಾದೇವಿಯಕ್ಕನು ರಚಿಸಿದ ಸೃಷ್ಟಿಯ ವಚನಗಳು ಎಂಬ ಗ್ರಂಥವು ಪ್ರಸಿದ್ಧವಾಗಿದೆ. ಇದರೊಳಗಿನ ವಚನಗಳನ್ನು ಅಲ್ಲಮಪ್ರಭುವು ರಚಿಸಿದ ಸೃಷ್ಟಿಯವಚನಗಳಿಗೆ ಹೋಲಿಸಲಾಗಿ ಅವುಗಳಲ್ಲಿ ಸಾಮ್ಯತೆಯು ಇರುವದು ಕಂಡು ಬರುತ್ತದೆ. ಆದರೆ ಅಲ್ಲಮಪ್ರಭುವು ಉಡುತಡಿಯಲ್ಲಿ ಮಹಾದೇವಿಯಕ್ಕನನ್ನು ಕಂಡಂತೆ ತೋರಿಬರುವದಿಲ್ಲ. ಅವಳು ಕಲ್ಯಾಣಕ್ಕೆ ಬಂದಬಳಿಕ ಅವನು ಅವಳನ್ನು ಕಂಡಿದ್ದಾನೆ.

## ಗೊಗ್ಗಯ್ಯ

ಅಲ್ಲಮಪ್ರಭುವು ಪ್ರವಾಸ ಮಾಡುತ್ತ ಹೋಗುತ್ತಿರುವಾಗ ಗೊಗ್ಗಯ್ಯನೆಂಬ ತೋಟಿಗನನ್ನು ಕಂಡು ಅವನೊಡನೆ ಕಾಯಕವನ್ನು ಹೇಗೆ ಮಾಡಬೇಕೆಂಬುದನ್ನು ಚರ್ಚಿಸಿದನು.

ಗೊಗ್ಗಯ್ಯನು ಬಳ್ಳಿಗಾವಿಯ ಪಟ್ಟಣದ ನೆರೆಯಲ್ಲಿ ತೋಟವನ್ನು ಮಾಡುತ್ತ ಇದ್ದನು. ಅಲ್ಲಮಪ್ರಭುವು ಗೊಗ್ಗಯ್ಯನು ತೋಟ ಮಾಡುತ್ತಿರುವದನ್ನು ನೋಡಿ ಅವನಿಗೆ ಈ ಕೆಲಸವನ್ನು ಕಾಯಕದ ರೀತಿಯಿಂದ ಹೇಗೆ ಮಾಡಬೇಕೆಂಬುದನ್ನು ಅರುಹಬೇಕೆಂಬ ಇಚ್ಛೆಯುಳ್ಳವನಾಗಿ ಸಮರ್ಪಣ ಭಾವದಿಂದ ಹೇಗೆ ಕಾಯಕ ಮಾಡಬೇಕೆಂಬುದನ್ನು ತಿಳಿಸಿಹೇಳಿದನು. ಹೀಗೆ ಅರ್ಪಣಭಾವದಿಂದ ಕಾರ್ಯಮಾಡುವದೇ ಲಿಂಗಪೂಜೆಯಾಗಿರುತ್ತದೆಂತಲೂ ನಿರೂಪಿಸಿದನು. ಅಲ್ಲಮಪ್ರಭುವಿನ ಈ ಬೋಧೆಯಿಂದ ಗೊಗ್ಗಯ್ಯನಲ್ಲಿ ಒಂದು ಆಧ್ಯಾತ್ಮಿಕ ಪ್ರಕಾಶವು ಬಿದ್ದಂತಾಯಿತು. ಈ ರೀತಿಯನ್ನು ಗುರೂಪದೇಶದಿಂದಲೇ ತಿಳಿಯಬೇಕೆಂದು ಅವನಿಗೆ ಅರುಹಿಕೊಟ್ಟು, ತನ್ನ ಗುರುವಾದ ಅನುಮಿಷನು ಈ ತೋಟದ ನೆರೆಯಲ್ಲಿಯೇ ಇದ್ದಾನೆ, ಇಲ್ಲಿಯೇ ಅವನು ಲಿಂಗಪೂಜೆಯಲ್ಲಿ ಮಗ್ನನಾಗಿದ್ದಾನೆ, ಅವನನ್ನು ನಿನಗೆ ತೋರಿಸುವೆನೆಂದು ಹೇಳಿದನು. ಮುಂದೆ ಅಲ್ಲಮಪ್ರಭುವು ಭೂಗತವಾಗಿದ್ದ ಒಂದು ದೇವಾಲಯವಿದ್ದ ಸ್ಥಳಕ್ಕೆ ಹೋಗಿ ಅಲ್ಲಿ ಕೂಡಿಬಿದ್ದ ಮಣ್ಣನ್ನು ಒತ್ತಟ್ಟಿಗೆ ಎಳೆಯಲಾಗಿ ಅಲ್ಲಿ ಒಂದು ದೇವಾಲಯವಿದ್ದುದು ಕಂಡು ಬಂದಿತು. ಅದರಲ್ಲಿ ಅನುಮಿಷನು ಧ್ಯಾನಾಸಕ್ತನಾಗಿದ್ದುದು ಅವನಿಗೆ ಕಾಣಿಸಿತು.

ಅನುಮಿಷನು ಮೊದಲು ಬದಾಮಿ ಹತ್ತರ ಇರುವ ಪಟ್ಟದಕಲ್ಲಿನ ರಾಜನಾಗಿದ್ದನು. ಅವನು ತನ್ನ ರಾಜ್ಯವನ್ನು ತೊರೆದು ಬಳ್ಳಿಗಾವಿ ಪಟ್ಟಣದ ನೆರೆಯಲ್ಲಿ ಶಿವಾನುಭವಿಗಳು ಇದ್ದಾರೆಂಬುದನ್ನು ತಿಳಿದು ಇಲ್ಲಿಯೇ ವಾಸ ಮಾಡಹತ್ತಿದನು. ಅಲ್ಲಮಪ್ರಭುವು ಅವನನ್ನು ಕಂಡು ಅವನಿಂದ ಲಿಂಗದ ನೆಲೆಕಲೆಗಳನ್ನು ಅರಿತವನಾಗಿದ್ದನು. ಅವನು ಲಿಂಗಧಾರಿಯಾಗಿ ಲಿಂಗಾನುಸಂಧಾನವುಳ್ಳವನಾಗಿ ಯಾವಾಗಲೂ ಆಚರಿಸುತ್ತಲಿದ್ದನು. ಅಲ್ಲಮಪ್ರಭುವು ಅನುಮಿಷನ ಈ ರೀತಿಯನ್ನು ಗೊಗ್ಗಯ್ಯನಿಗೆ ತೋರಿಸಲಾಗಿ ಅವನ ಹೃದಯದಲ್ಲಿ ಪಲ್ಲಟವಾಯಿತು. ಅವನು ಲಿಂಗದ ತಿಳುವಳಿಕೆಯುಳ್ಳವನಾಗಿ ಅಲ್ಲಮಪ್ರಭುವಿಗೋಸ್ಕರ ಭಕ್ತಿಯುಕ್ತನಾಗಿ ಅವನು ತನ್ನ ಕಾಯಕದಲ್ಲಿ ನಿರತನಾದನು.

## ಮುಕ್ತಾಯಕ್ಕ

ಈ ಪ್ರಕಾರ ಅಲ್ಲಮಪ್ರಭುವು ತೋಟಿಗನಿಗೆ ಉಪದೇಶವನ್ನು ಮಾಡಿ ಮುಂದೆ ಪ್ರವಾಸ ಮಾಡುವವನಾದನು. ಅವನು ಲಕ್ಕುಂಡಿ ಎಂಬ ಗ್ರಾಮಕ್ಕೆ ಬಂದನು. ಇದು ಒಂದು ಪುರಾತನ ಪಟ್ಟಣವಾಗಿತ್ತು. ಅದು ಅಜಗಣ್ಣನ

ಗ್ರಾಮವು. ಅವನು ಅಲ್ಲಿರುವ ತನ್ನ ತಂಗಿಯಾದ ಮುಕ್ತಾಯಿ ಇವಳಲ್ಲಿ ಇದ್ದಾನೆಂಬುದನ್ನು ತಿಳಿದು ಆಕೆಯ ಗ್ರಾಮವಾದ ಮುಸಳಿಕಲ್ಲಿಗೆ ತೆರಳಿದನು. ಅಜಗಣ್ಣನು ಶ್ರೇಷ್ಠ ಶಿವಜ್ಞಾನಿ ಎಂದು ಪ್ರಸಿದ್ಧನಾಗಿದ್ದನು. ಆದರೆ ಅಲ್ಲಿಗೆ ಹೋಗುವಷ್ಟರಲ್ಲಿ ಅಜಗಣ್ಣನು ತೀರಿಕೊಂಡಿದ್ದನೆಂದು ತಿಳಿದುಬಂದಿತು. ಅವನು ತೀರಿಕೊಂಡಿದ್ದಕ್ಕೋಸ್ಕರ ಅವನ ತಂಗಿ ಮುಕ್ತಾಯಿಯು ಅತ್ಯಂತ ಶೋಕವಮಾಡುತ್ತ ಇದ್ದಳು. ಅಲ್ಲಮಪ್ರಭುವು ಅವಳು ದುಃಖಪಡುವದನ್ನು ನೋಡಿ ಕನಿಕರಪಟ್ಟು ಆಕೆಯ ಶೋಕವನ್ನು ದೂರ ಮಾಡಬೇಕೆಂದು ಬಯಸಿ ಅವನು ಅವಳಿಗೆ ಶಿವಾನುಭವದ ತತ್ವಗಳನ್ನು ತಿಳಿಸಿ ಹೇಳಿದನು. ಅವನು ಹೇಳಿದ್ದೇನೆಂದರೆ— ಮನುಷ್ಯನು ಶಿವಜ್ಞಾನವನ್ನು ಸಾಧಿಸಬೇಕು. ಆತ್ಮಸುಖವೇ ನಿತ್ಯವಾದದ್ದು, ಮನೋನಿಗ್ರಹ, ಇಂದ್ರಿಯನಿಗ್ರಹ, ಫಲತ್ಯಾಗ, ವಿಷಯಗಳಲ್ಲಿ ವಿರಕ್ತಿ, ಆಸ್ತಿಕ್ಯಬುದ್ಧಿ ಇವುಗಳುಳ್ಳವನಾಗಬೇಕು. ಇದರಿಂದ ಶಿವೈಕ್ಯಬುದ್ಧಿಯು ಉಂಟಾಗುತ್ತದೆ. ವೀರಶೈವ ಮತದ ಪ್ರಕಾರ ಜೀವನಿಗೆ ಶಿವಾನುಭವವಾದಬಳಿಕ ಅವನಿಗೆ ಜನನ ಮರಣಗಳಿಲ್ಲ. ಆದ್ದರಿಂದ ವೀರಶೈವನು ಮರಣವಾದಲ್ಲಿ ದುಃಖಿಸಬಾರದು. ಶಿವಾಧೀನನಾದ ಬಳಿಕ ಅಂತ್ಯಕ್ರಿಯೆಗಳನ್ನು ಗೀತ ಭಜನೆಗಳಿಂದ ನೆರವೇರಿಸಬೇಕು. ಮುಕ್ತಾಯಿಯೇ ನಿನ್ನ ತಮ್ಮನಾದ ಅಜಗಣ್ಣನು ದೇಹತ್ಯಾಗದಿಂದ ನಷ್ಟವಾಗಿಲ್ಲ. ಅವನು ಚಿತ್‌ಸ್ವರೂಪನಾಗಿ ಸರ್ವತ್ರ ವ್ಯಾಪಿಸಿ ಕೊಂಡಿರುವನು. ಆದ್ದರಿಂದ ನಿನ್ನ ಅಣ್ಣನ ವಿಷಯವಾಗಿ ಹೀಗೆ ಆಚರಿಸಿದಲ್ಲಿ ನೀನು ಶೋಕಮಾಡಬಾರದು, ಎಂದು ಬೋಧಿಸಿದನು. ಆಗ ಮುಕ್ತಾಯಿಯಲ್ಲಿ ಶಿವಜ್ಞಾನವು ಉಗಮವಾಗಲು ಅವಳು ಭಕ್ತಿಯಿಂದ ಅಲ್ಲಮನ ಅಡಿದಾವರೆಗಳಿಗೆ ನಮಸ್ಕರಿಸಿ ತನ್ನ ತಮ್ಮನ ವಿಯೋಗದಿಂದಾದ ದುಃಖವನ್ನು ಕಳೆದುಕೊಂಡಳು. ಆಗ ಅಲ್ಲಮಪ್ರಭುವು ಅವಳಿಗೆ ವೇಧಾದೀಕ್ಷೆಯನ್ನು ಕೊಟ್ಟು ಅವಳನ್ನು ಕೃತ್ಯಕೃತ್ಯಳನ್ನಾಗಿ ಮಾಡಿದನು. ಮುಕ್ತಾಯಿಯು ಜ್ಞಾನಿಯಾಗಿ ಆಚರಿಸುವವಳಾದಳು. ಅವಳು ಅನೇಕ ವಚನಗಳನ್ನು ರಚಿಸಿದ್ದಾಳೆ. ಅಂದಿನಿಂದ ಅವಳು ಅಲ್ಲಮಪ್ರಭುವಿನ ಬೋಧೆಯಿಂದ ಶಿವಸಾಯುಜ್ಯ ಸುಖವನ್ನು ಅನುಭೋಗಿಸುತ್ತ ಒಬ್ಬ ಪವಿತ್ರ ಸ್ತ್ರೀಯಳೆಂದು ಪ್ರಸಿದ್ಧಿಯನ್ನು ಪಡೆಯುವಿ ಎಂದು ಉಪದೇಶಿಸಿ ಅಲ್ಲಿಂದ ಹೊರಟನು.

## ಬಾಲಗಾವಿ

ಮುಂದೆ ಅಲ್ಲಮಪ್ರಭುವು ಮಸಣಿಕಲ್ಲನ್ನು ಬಿಟ್ಟು ಕಲ್ಯಾಣ ಪಟ್ಟಣದತ್ತ ಸಾಗಿದನು. ಅವನು ಮೊದಲು ಈಗ ಜತ್ತಿ ಸಂಸ್ಥಾನದಲ್ಲಿರುವ ಬಾಲಗಾವಿ ಎಂಬ ಗ್ರಾಮಕ್ಕೆ ಹೋಗಿರಬೇಕೆಂದು ತೋರುತ್ತದೆ. ಅಲ್ಲಿ ಅತನ ದೇವಾಲಯವಿದೆ. ಆದರೆ ಅವನು ಅಲ್ಲಿದ್ದು ಯಾವ ಕಾರ್ಯಮಾಡಿದನೆಂಬುದು ನಮಗೆ ತಿಳಿದು ಬಂದಿಲ್ಲ. ಅವನು ಅಲ್ಲಿಂದ ಮಂಗಳವಾಡ ಮಾರ್ಗವಾಗಿ ಸೊನ್ನಲಾಪುರ ಅಂದರೆ ಈಗಿನ ಸೊಲ್ಲಾಪುರಕ್ಕೆ ಹೋದನು.

## ಸಿದ್ಧರಾಮೇಶ್ವರನಿಗೆ ಬೋಧೆ.

ಆಗ ಸೊಲ್ಲಾಪೂರದಲ್ಲಿ ಸಿದ್ಧರಾಮೇಶ್ವರನೆಂಬ ಮಹಾಯೋಗಿಯು ವಾಸಿಸುತ್ತಿದ್ದನು. ಅವನು ಮಹತ್ತರವಾದ ಸಾಧನೆಗಳನ್ನು ಸಾಧಿಸಿ ಅದ್ಭುತವಾದ ಸಿದ್ಧಿಗಳನ್ನು ಸಂಪಾದಿಸಿದವನಾಗಿದ್ದನು. ಇದರಿಂದ ಅವನು ಜನರಲ್ಲಿ ಪ್ರಾಬಲ್ಯವುಳ್ಳವನಾಗಿದ್ದನು. ಮತ್ತು ಅತ್ಯಂತ ಧನಿಕನಾಗಿದ್ದನು. ಅವನು ಗ್ರಾಮಾಧಿಪತಿಯೂ ಆಗಿದ್ದರಿಂದ ಕಲ್ಯಾಣ ಪಟ್ಟಣದಲ್ಲಿ ಅರಸನ ದರ್ಬಾರಿನಲ್ಲಿ ಬಹಳ ವರ್ಚಸ್ಸುಳ್ಳವನಾಗಿದ್ದನು. ಅವನು ತನ್ನ ಯೋಗಸಿದ್ಧಿಯ ಮೂಲಕ ಹಣೆಗಣ್ಣನ್ನು ಪಡೆದು ಅದರ ಮೂಲಕ ಜ್ವಾಲೆಯನ್ನು ಹೊರಬೀಳಿಸುವ ಸಾಮರ್ಥ್ಯವನ್ನು ಹೊಂದಿದವನಾಗಿದ್ದನು. ಆದರೆ ಅವನು ವೀರಶೈವ ಧರ್ಮವನ್ನು ಪಾಲಿಸುತ್ತಿರಲಿಲ್ಲ.

ಸಿದ್ಧರಾಮೇಶ್ವರನು ಧನಿಕನಾಗಿದ್ದರಿಂದ ಅವನು ದೇವಾಲಯಗಳನ್ನು ಕಟ್ಟಿಸುವದು ಮತ್ತು ಕೆರೆಗಳನ್ನು ಅಗಿಸುವದು ಇವುಗಳಲ್ಲಿ ಮಗ್ನನಾಗಿರುತ್ತಿದ್ದನು. ಇದರಲ್ಲಿಯೇ ಅವನು ಪಾರಮಾರ್ಥವಿದೆಂದು ತಿಳಿದಿದ್ದನು. ಅಲ್ಲಮಪ್ರಭುವು ತನ್ನ ಸಂಚಾರದಲ್ಲಿ ಸಿದ್ಧರಾಮೇಶ್ವರನ ವಾರ್ತೆಯನ್ನು ಕೇಳಿ ಅವನನ್ನು ಸರಿಯಾದ ಮಾರ್ಗಕ್ಕೆ ಹಚ್ಚಬೇಕೆಂದು ಬಯಸಿ ಸೊನ್ನಲಾಪುರಕ್ಕೆ ಬರುವವನಾದನು. ಅವನು ಅಲ್ಲಿಗೆ ಬಂದಾಗ್ಗೆ ಎಲ್ಲ ಕಡೆಗೂ ಕೂಲಿಕಾರರು ಅಸಂಖ್ಯಾತವಾಗಿ ನೆರೆದು ಗುಡಿಯನ್ನು ಕಟ್ಟುವದರಲ್ಲಿಯೂ ಕೆರೆಯನ್ನು ಅಗಿಯುವದರಲ್ಲಿಯೂ ತೊಡಗಿದ್ದನ್ನು ಕಂಡನು.

ಅಲ್ಲಮಪ್ರಭುವು ಇದನ್ನು ನೋಡಿ ತನ್ನೊಳಗೆ ತಾನೇ ಗಟ್ಟಿಯಾಗಿ ಎಲ್ಲರಿಗೂ ಕೇಳಿಸುವಂತೆ — ಈ ಸಿದ್ಧರಾಮನು ಮಹಾಸಿದ್ಧನೆಂದು ನಾನು ಕೇಳಿದ್ದೆನು. ಆದರೆ ಇವನ ಕೃತಿಯು ಹೀಗೆ ಏಕೆ ಇದೆ? ಮೋಕ್ಷಕ್ಕಾಗಿ

ಅವನು ಯತ್ನಮಾಡದೆ ಕೆರೆ, ಕಾಲುವೆ ದೇವಾಲಯಗಳನ್ನು ಕಟ್ಟಿಸುವ ದರಲ್ಲಿ ಆಸಕ್ತನಾಗಿ ಪುನಃ ಬಂಧನದಲ್ಲಿ ಬೀಳುವನಲ್ಲಾ! ತಾನು ಸಿದ್ಧ ಪುರುಷನಿದ್ದೇನೆಂದು ತಿಳಿದು ಯಥಾರ್ಥವಲ್ಲದ ಇಂಥ ಕಾರ್ಯಗಳಲ್ಲಿ ತೊಡಗಿದ್ದಾನೆ. ಈತನು ಜನರಿಂದ ಪೂಜೆಗೊಂಬ ಇಚ್ಛೆಯಿಂದ ಬಲು ದೊಡ್ಡ ಸಂಸಾರದಲ್ಲಿ ಬಿದ್ದಿದ್ದಾನೆ ಎಂದು ಮೊದಲಾಗಿ ನಿಂದಾಯುಕ್ತ ವಾಕ್ಯಗಳನ್ನು ಅಲ್ಲಿದ್ದ ಕೆಲಸಗಾರರು ಕೇಳುವಂತೆ ನುಡಿಯುತ್ತಿದನು.

ಆಗ ಅವರು ಸಿಟ್ಟಿಗೆದ್ದು ಅಲ್ಲಮನನ್ನು ಸುತ್ತುಗಟ್ಟಿ ಅವನನ್ನು ಹೊಡೆ ಯಲು ಯತ್ನಿಸಿದರು. ಆದರೆ ಅವನು ಅವರ ಕೈಗೆ ಸಿಕ್ಕಲಿಲ್ಲ. ಅವನು ಇಂಬಾಗಿ ನಿಂತು ಸಿದ್ಧರಾಮನನ್ನು ಕುರಿತು ಮತ್ತಿಷ್ಟು ಮರ್ಮೋದ್ಘಾಟ ನದ ನುಡಿಗಳನ್ನು ಆಡುತ್ತ ಕೆಲಸಗಾರರಿಗೆ ನಿಮ್ಮ ಗುರುವಾದ ಸಿದ್ಧ ರಾಮನನ್ನು ನನ್ನೆಡೆಗೆ ಕರೆಕೊಂಡು ಬನ್ನಿರಿ, ನಿಮ್ಮ ಗುರು ಶುದ್ಧ ಕಲ್ಲು ಆಗಿದ್ದಾನೆಂದು ಆಡಹತ್ತಿದನು.

ಕೆಲಸಗಾರರು ಅವನು ಮಾಡುತ್ತಿದ್ದ ಗುರುನಿಂದೆಗಳನ್ನು ಕೇಳಲಾ ರದೆ ಅವನನ್ನು ಹೊಡೆಯಬೇಕೆಂದು ಬಹಳ ಪ್ರಯತ್ನಮಾಡಿದರು. ಆದರೆ ಅವನು ಆಕಾಶದಂತೆ ಯಾರ ಕೈಗೂ ಸಿಕ್ಕಲಿಲ್ಲ.

ಆಗ ಅವರು ಸಿದ್ಧರಾಮನೆಡೆಗೆ ಹೋಗಿ ಅಂದದ್ದು:— ಗುರುಮಹಾ ರಾಜನೇ ಯಾವನೋ ಒಬ್ಬ ಭಿಕ್ಷುಕನು ನಮ್ಮಲ್ಲಿಗೆ ಬಂದು ಅತಿಶಯವಾಗಿ ನಿಮ್ಮನ್ನು ನಿಂದಿಸಹತ್ತಿದ್ದಾನೆ. ನಾವು ಹೊಡಿಯಲು ಹೋದರೆ ಅವನು ನಮ್ಮ ಕೈಗೆ ಸಿಕ್ಕಲಿಲ್ಲ, ಎಂದು ಹೇಳಿದ್ದನ್ನು ಸಿದ್ಧರಾಮನು ಕೇಳಿ ನಕ್ಕು ಅವನಿರುವಲ್ಲಿಗೆ ಹೋಗಿ ನೋಡೋಣ ಎಂದು ತನ್ನ ಶಿಷ್ಯರೊಂದಿಗೆ ಅಲ್ಲಮನಿದ್ದ ಸ್ಥಾನಕ್ಕೆ ಬಂದನು.

ಅವನನ್ನು ಅಲ್ಲಿ ಸಿಟ್ಟಿನಿಂದ ಸಿದ್ಧರಾಮನು ಕಣ್ಣು ಕೆಂಪಗೆಮಾಡಿ ಕೊಂಡು - ನಾನು ಯಾರೆಂಬುದು ನಿನಗೆ ಗೊತ್ತಿಲ್ಲವೇ? ನನ್ನನ್ನು ತಿರಸ್ಕ ರಿಸುತ್ತಿಯಾ? ಎಂದು ಆವೇಶದಿಂದ ಅವನ ಮೇಲೇರಿ ಹೋಗಲು ಅಲ್ಲಮಪ್ರಭುವು ಅವನಿಗೆ ಯೋಗಿಯಾದವನಿಗೆ ಕಾಮ, ಕ್ರೋಧಾದಿ ವಿಕಾರಗಳು ಇರಬಾರದು. ಅವನು ಯಾವಾಗಲೂ ಚಿತ್ತವೃತ್ತಿಯನ್ನು ತನ್ನ ಸ್ವಾಧೀನದಲ್ಲಿ ಇಟ್ಟುಕೊಳ್ಳಬೇಕು, ಎಂದು ನುಡಿದನು.

ಇದಕ್ಕೆ ಸಿದ್ಧರಾಮನು ನನ್ನಂಥ ಬಲಿಷ್ಠನ ಮುಂದೆ ಯಾರದೂ ಏನೂ ನಡೆಯಲಾರದು. ನನ್ನ ಹಣೆಯಲ್ಲಿರುವ ಈ ನೇತ್ರವನ್ನು ತೆರೆದ ಮಾತ್ರದಲ್ಲಿಯೇ ಜಗತ್ತೆಲ್ಲವು ಸುಟ್ಟು ಬೂದಿಯಾಗುವದು. ಇಂಥ ಸಾಮರ್ಥ್ಯವು ನನ್ನಲ್ಲಿದೆ ಎಂದು ಸಿಟ್ಟಿನಿಂದ ನುಡಿದನು.

ಅದಕ್ಕೆ ಅಲ್ಲಮನು ಸಾಧುಗಳಾದವರು ಜಗತ್ತಿಗೆ ಹೀಗೆ ತೊಂದರೆ ಕೊಡುವದೂ ಜನರ ಮನಸ್ಸನ್ನು ನೋಯುವಂತೆ ಮಾಡುವದೂ ಅವರಿಗೆ ಭೂಷಣವಲ್ಲ. ಎಂದು ನುಡಿದನು. ಅದಕ್ಕೆ ಸಿದ್ಧರಾಮನು ಈತನು ಯಾವ ನೋಬ್ಬನು ನನ್ನ ಯಥಾರ್ಥ ಶಕ್ತಿಯನ್ನರಿಯದವನಿದ್ದಾನೆ. ಇವನ ಗರ್ವವನ್ನು ಮುರಿಯಬೇಕು ಎಂದು ಯೋಚಿಸಿ ತನ್ನ ಹಣೆಗಣ್ಣನ್ನು ತೆರೆದನು.

ತೆರೆದಾಕ್ಷಣವೇ ಅದರಿಂದ ಚಕಚಕಿತವಾದ ಒಂದು ಜ್ವಾಲೆಯು ಹೊರಬಿದ್ದು ಅಲ್ಲಮನನ್ನು ಸಮೀಪಿಸಿತು. ಆದರೆ ಅದಕ್ಕೆ ಅವನ ಚರಣವನ್ನು ಮುಟ್ಟಲು ಶಕ್ಯವಾಗಲಿಲ್ಲ. ಅದು ಅವನ ಪಾದನಖದಿಂದ ಹಿಂದಿರುಗಿ ಸುತ್ತ ಮುತ್ತಲಿನವರನ್ನು ಸುಡಹತ್ತಿತು. ಆಗ ದಯಾಸಮುದ್ರನಾದ ಅಲ್ಲಮನು ಜನರ ಬಗ್ಗೆ ಕನಿಕರಪಟ್ಟು ಆ ಅಗ್ನಿಯನ್ನು ತಾನೇ ಶಾಂತಗೊಳಿಸಿದನು.

ಈ ಅದ್ಭುತವನ್ನು ಸಿದ್ಧರಾಮನು ನೋಡಿ ಈ ಜಂಗಮನು ಕೇವಲ ಶಿವನೇ ಇದ್ದಾನೆ. ಈತನು ಗುರುರೂಪದಿಂದ ನನ್ನ ರಕ್ಷಣೆಗಾಗಿ ಬಂದಿದ್ದಾನೆ ಎಂದು ಚಿಂತಿಸಿ ಅವನಲ್ಲಿಗೆ ನೆಟ್ಟಗೆ ಬಂದು-ಅಜ್ಞಾನಿಯಾದ ನನ್ನನ್ನು ಕಾಪಾಡಬೇಕು ಎಂದು ಅವನ ಪಾದಗಳ ಮೇಲೆ ಬಿದ್ದನು. ಆಗ ಅಲ್ಲಮನು ಸಿದ್ಧರಾಮನನ್ನು ಹಿಡಿದೆಬ್ಬಿಸಿ ಎಲೈ ಸಿದ್ಧರಾಮನೇ ನಿನ್ನಂಥ ಶಿವಯೋಗಿಗೆ ನೀನು ಕೈಕೊಂಡ ಈ ಕಾರ್ಯಗಳು ಯೋಗ್ಯವಾದವುಗಳಲ್ಲ. ಆ ನಿನ್ನ ಆಡಂಬರದ ಕಾರ್ಯಗಳನ್ನು ಬಿಟ್ಟುಕೊಟ್ಟು ನಿಜವಾದ ಮುಕ್ತಿಯಮಾರ್ಗ ಯಾವುದು ಇದನ್ನು ತಿಳಿದುಕೊಳ್ಳಬೇಕು ಎಂದು ನುಡಿದನು. ಅದಕ್ಕೆ ಸಿದ್ಧರಾಮೇಶ್ವರನು - ಅಲ್ಲಮಪ್ರಭುವೇ ನೀನು ಕಪಿಲಸಿದ್ಧಯೋಗೀಶ್ವರನೆಂದು ನಾನು ತಿಳಿಯುತ್ತೇನೆ. ನಿನ್ನ ಹೊರತು ಬೇರೆ ಯಾರೂ ನನಗೆ ಗುರುಗಳು ಆಗಲು ಯೋಗ್ಯರಲ್ಲ. ನೀನು ನನಗೆ ನಿನ್ನ ಲಿಂಗಾಂಗ ಸಾಮರಸ್ಯೋಪದೇಶವನ್ನು ದಯಪಾಲಿಸು. ನನ್ನನ್ನು ಉದ್ಧರಿಸು ಎಂದು ಕೇಳಿಕೊಂಡನು. ಆಗ ಅಲ್ಲಮಪ್ರಭುವು ಲಿಂಗದ ನೆಲೆ

ಕಲೆಗಳನ್ನು ಸಿದ್ಧರಾಮುನಿಗೆ ತಿಳಿಸಿ ಅವನನ್ನು ಒಂದು ಏಕಾಂತ ಸ್ಥಳಕ್ಕೆ ಕರೆದುಕೊಂಡು ಹೋಗಿ ಅವನಿಗೆ ವೀರಶೈವ ದೀಕ್ಷೆಯನ್ನು ಕೊಟ್ಟನು. ಆಗ ಸಿದ್ಧರಾಮುನಿಗೆ ಅಜ್ಞಾನರೂಪವಾದ ಅಂಧಕಾರವು ನಾಶವಾಗಿ ಶಿವ ಜ್ಞಾನರೂಪ ಪ್ರಕಾಶವು ಉದಯವಾಯಿತು.

ಅಂದಿನಿಂದ ಸಿದ್ಧರಾಮೇಶ್ವರನು ವೀರಶೈವ ಮಾರ್ಗದಂತೆ ಆಚರಿಸುವದನ್ನು ಪ್ರಾರಂಭಿಸಿ ಶಿವಾನುಭವ ಜ್ಞಾನದಲ್ಲಿ ಅತ್ಯಂತ ಶ್ರೇಷ್ಠನೆನಿಸಿಕೊಂಡನು. ಅವನು ಬಸವಾದಿ ಪ್ರಮಥರ ಮಾರ್ಗದಂತೆ ಆಚರಿಸುತ್ತ ತನ್ನ ಶಿವಾನುಭವವನ್ನು ಕುರಿತು ವಚನಗಳನ್ನು ರಚಿಸತೊಡಗಿದನು. ಮುಂದೆ ಅವನು ತಾನು ಕೈಕೊಂಡ ಕೆರೆಯ ಕೆಲಸವನ್ನು ಅಲ್ಲಿಗೆ ನಿಲ್ಲಿಸಿ ದೇವಾಲಯಗಳನ್ನು ಕಟ್ಟಿಸುವದನ್ನು ಬಿಟ್ಟುಕೊಟ್ಟನು. ಅಂದಿನಿಂದ ಅವನು ಕಲ್ಯಾಣ ಪಟ್ಟಣಕ್ಕೆ ಆಗಿಂದಾಗ್ಗೆ ಬರುತ್ತ ಶಿವಾನುಭವ ಮಂಟಪದ ಕಾರ್ಯಗಳಲ್ಲಿ ಭಾಗವಹಿಸುತ್ತ ಶಿವಶರಣರಲ್ಲಿ ಉಚ್ಚಸ್ಥಿತಿಯನ್ನು ಹೊಂದಿದನು.

ಈ ಪ್ರಕಾರ ಅಲ್ಲಮಪ್ರಭುವು ಸೊನ್ನಲಾಪುರಕ್ಕೆ ಬಂದು ಸಿದ್ಧರಾಮುನಿಗೆ ಯೋಗ್ಯ ಮಾರ್ಗವನ್ನು ತೋರಿಸಿ ಬಸವೇಶ್ವರನಿದ್ದ ಕಲ್ಯಾಣಕ್ಕೆ ಬರುವವನಾದನು. ಅವನು ಬರುವ ಮುಂದೆ ತನ್ನೊಡನೆ ಸಿದ್ಧರಾಮನನ್ನೂ ಸಹ ಕರೆದುಕೊಂಡುಬಂದನು.

## ಪ್ರಭುವು ಕಲ್ಯಾಣಕ್ಕೆ ಆಗಮಿಸಿದ್ದು.

ಇಷ್ಟರಲ್ಲಿ ಅಲ್ಲಮಪ್ರಭುವಿನ ಖ್ಯಾತಿಯು ಎಲ್ಲ ಕಡೆಗೂ ಹಬ್ಬಿತ್ತು. ಆರಂಭದಲ್ಲಿ ಅವನು ಯೋಗಾಭ್ಯಾಸವನ್ನು ಮಾಡಿದವನು, ಶ್ರೇಷ್ಠ ಹಠಯೋಗಿಯು, ಎಂದು ದೇಶದಲ್ಲೆಲ್ಲ ಪ್ರಸಿದ್ಧಿಯನ್ನು ಪಡೆದಿದ್ದನು- ಮುಂದೆ ಅವನು ಶಿವಶರಣರ ಮಾರ್ಗವನ್ನು ಅನುಸರಿಸುವವನಾದನು. ಅಂದಿನಿಂದ ಅವನು ಹಠಯೋಗಿಗಳ ಬಿಗಿಯಾದ ಆಚರಣೆಗಳನ್ನು ಬಿಟ್ಟುಕೊಟ್ಟು ಮಾನಸಿಕ ಮತ್ತು ನೈತಿಕ ಉನ್ನತಿಗೆ ಕಾರಣವಾದ ಶರಣರ ಮಾರ್ಗವನ್ನು ಅನುಸರಿಸುವವನಾದನು. ಆಗ ಅವನು ಈ ಮಾರ್ಗವನ್ನು ಶರಣರ ಸನ್ನಿಧಿಯಲ್ಲಿ ತಿಳಿಯಬೇಕೆಂದು ಕಲ್ಯಾಣ ಪಟ್ಟಣಕ್ಕೆ ಬರುವವನಾದನು.

## ಬಸವೇಶ್ವರನ ಭೆಟ್ಟಿ

ಅಲ್ಲಮಪ್ರಭುವು ಮತ್ತು ಸಿದ್ಧರಾಮ ಈ ಉಭಯತರು ಬಸವೇಶ್ವರನ ಅರಮನೆಯ ಹೆಬ್ಬಾಗಿಲಿಗೆ ಬಂದು ಬಸವೇಶ್ವರನ ಸಮಾಚಾರವನ್ನು

ಕೇಳುತ್ತಿರಲು ಇದನ್ನು ಲಿಂಗಪೂಜೆಯಲ್ಲಿದ್ದ ಬಸವೇಶ್ವರನು ತಿಳಿದು ಅವರನ್ನು ಒಳಗೆ ಕರೆದುಕೊಂಡು ಬರಲಿಕ್ಕೆ ಹಡಪದಪ್ಪಣ್ಣನಿಗೆ ಹೇಳಿದನು. ಆ ಪ್ರಕಾರ ಅಲ್ಲಮಪ್ರಭುವಿಗೆ ಅವನು ತಿಳಿಸಲು ಲಿಂಗ ಮತ್ತು ಜಂಗಮ ಇವುಗಳಲ್ಲಿರುವ ತಾರತಮ್ಯವು ಬಸವೇಶ್ವರನಿಗೆ ಗೊತ್ತಿಲ್ಲವೆಂದು ಅವನಿಗೆ ತೋರಿತು. ಜಂಗಮವು ಗುರುಲಿಂಗಗಳಿಗೆ ಚೈತನ್ಯಾತ್ಮಕವಾಗಿದೆ. ಅಂದರೆ ಜಂಗಮನಿಗೆ ಜ್ಞಾನವೇ ಪ್ರಾಧಾನ್ಯವಾದದ್ದು. ಈ ಜ್ಞಾನವನ್ನು ಬಿಟ್ಟು ಯಾವದೂ ಸಿದ್ಧಿಸಲಾರದು. ಆದ್ದರಿಂದ ಜ್ಞಾನರೂಪನಾದ ಜಂಗಮವು ಬಸವೇಶ್ವರನಿಗೆ ತಿಳಿದಿಲ್ಲವೆಂದು ಅಲ್ಲಮಪ್ರಭುವಿಗೆ ತೋರಿತು. ಇದಕ್ಕೆ ಅಲ್ಲಮಪ್ರಭುವು ರೇಗಿಕೊಳ್ಳಲು ಬಸವೇಶ್ವರನು ಇದರ ಕಾರಣವನ್ನು ತಿಳಿದವನಾಗಿ ತಾನು ಮಾಡುತ್ತಿದ್ದ ಲಿಂಗಪೂಜಾದಿ ಕಾರ್ಯಗಳನ್ನು ಅಲ್ಲಿಯೇ ಬಿಟ್ಟು ಅಲ್ಲಮನನ್ನು ಕಂಡು ಅವನನ್ನು ಸನ್ಮಾನಿಸಿ ಅರಮನೆಯ ಒಳಗೆ ಕರೆತಂದನು.

## ಮರಳುಶಂಕರದೇವ.

ಪಾದೋದಕ ಪ್ರಸಾದಗಳ ತತ್ವಗಳಿಗೆ ಶಿವಶರಣರಲ್ಲಿ ಒಂದು ವಿಶಿಷ್ಟ ಸ್ಥಾನವಿದೆ. ಇವುಗಳ ರೀತಿಯನ್ನು ಮರುಳುಶಂಕರದೇವನು ಚನ್ನಾಗಿ ಅರಿತವನಾಗಿದ್ದನು. ಅವನು ಬಸವೇಶ್ವರನ ಅರಮನೆಯಲ್ಲಿ ತಾನಾರೆಂಬುದನ್ನು ಯಾರಿಗೂ ತಿಳಿಯಗೊಡದೆ ಗುಪ್ತ ಭಕ್ತಿಯುಳ್ಳವನಾಗಿ ಪ್ರಸಾದದ ನಡೆಗಳನ್ನು ತಿಳಿದು ಪ್ರಸಾದಿಯಾಗಿ ಯಾರೂ ಅರಿಯದಂತೆ ಇರುತ್ತಿದ್ದನು. ಅಲ್ಲಮಪ್ರಭುವು ಅವನನ್ನು ಗುರುತಿಸಿ ಅವನ ಪ್ರಸಾದದ ನಡೆಯ ಮಹಿಮೆಯನ್ನು ಎಲ್ಲರಿಗೂ ಅರುಹಿಕೊಟ್ಟನು.

## ಬಸವೇಶ್ವರನೊಡನೆ ಚರ್ಚೆ

ಮುಂದೆ ಅಲ್ಲಮಪ್ರಭುವು ಬಸವೇಶ್ವರನು ಕುಳ್ಳಿರುವ ಸ್ಥಾನಕ್ಕೆ ಬಂದು ಅವನೊಡನೆ ಇಷ್ಟ ಪ್ರಾಣ ಭಾವ ಲಿಂಗಗಳ ವಿಷಯವಾಗಿ ದೀರ್ಘ ಚರ್ಚೆಯನ್ನು ನಡಿಸಿದನು. ಮತ್ತು ಅವುಗಳ ರೀತಿಗಳನ್ನು ಎಲ್ಲರಿಗೂ ತಿಳಿಯಪಡಿಸಿದನು. ಅಂದಿನಿಂದ ಉಭಯತರು ತ್ರಿಲಿಂಗಗಳು ಷಟ್‌ಸ್ಥಲ ಶಾಸ್ತ್ರಕ್ಕೆ ತಳಹದಿಯಾಗಿವೆ, ಅವುಗಳ ಕ್ರಿಯೆಗಳು ಷಟ್‌ಸ್ಥಲಕ್ಕೆ ಸಂಬಂಧಿಸಿದ ಎಲ್ಲ ಆಚರಣೆಗಳನ್ನು ಸಮನ್ವಯಗೊಳಿಸುತ್ತವೆ. ಈ ವಿಷಯವನ್ನು ಕುರಿತು ಸದಾಕಾಲದಲ್ಲಿ ಚರ್ಚಿಸುತ್ತಲೇ ಇದ್ದರು.

## ಮಹಾದೇವಿಯಕ್ಕ

ಮುಂದೆ ಕೆಲವು ದಿವಸಗಳಾದಮೇಲೆ ವಿರಾಗಿಣಿಯಾದ ಮಹಾದೇವಿ ಅಕ್ಕನು ಕಲ್ಯಾಣಕ್ಕೆ ಬಂದು ಬಸವೇಶ್ವರನನ್ನೂ ಅಲ್ಲಮಪ್ರಭುವಿನನ್ನೂ ಕಾಣುವವಳಾದಳು. ಅವಳು – ತಾನು ಕೈಕೊಂಡ ಆಚರಣೆಯಿಂದ ಮನುಷ್ಯನು ತನ್ನ ವಿಕಾರಪೂರಿತ ಇಂದ್ರಿಯಗಳ ವ್ಯಾಪಾರಗಳನ್ನು ಹೇಗೆ ತಡೆಯಬೇಕೆಂಬುದನ್ನು ಸಾಧಿಸಿದವಳಾಗಿ ದಿಗಂಬರಿಯಾಗಿ ಕಲ್ಯಾಣಕ್ಕೆ ಬರುವವಳಾಗಿದ್ದಳು. ಅವಳನ್ನು ಅಲ್ಲಮಪ್ರಭುವು ಮೊದಲಾದ ಶಿವಶರಣರು ನೋಡಿ ಚಕಿತರಾದರು. ಮಹಾದೇವಿಯಕ್ಕನ ವಿರಕ್ತಿಮಾರ್ಗಗಳು ಹೇಗೆ ಆಚರಿಸಬೇಕೆಂಬುದು ಎಲ್ಲರಿಗೂ ವಿಶದವಾಗುವಂತಿತ್ತು. ಬಸವಾದಿ ಶಿವಶರಣರು ಅವಳೊಡನೆ ಯಾವಾಗಲೂ ದೀರ್ಘವಾದ ಚರ್ಚೆಗಳನ್ನು ನಡೆಸುತ್ತ ಬಂದರು.

## ಕಲ್ಯಾಣದಲ್ಲಿ ವಾಸ

ಈ ಪ್ರಕಾರ ಅಲ್ಲಮಪ್ರಭುವಿನ ಸನ್ನಿಧಿಯಲ್ಲಿ ಶಿವಶರಣರು ಬಹಳ ದಿವಸ ಕಾಲಕಳೆದರು. ಇದರಿಂದ ಬಹು ಜನರು ಕಲ್ಯಾಣಕ್ಕೆ ಬಂದು ಶಿವಾನುಭವ ಮಂಟಪದಲ್ಲಿ ನಡೆಯುತ್ತಿದ್ದ ವಿವಾದಗಳನ್ನು ತಿಳಿಯುವವರಾದರು. ಇದರಿಂದ ಷಟ್‌ಸ್ಥಲಶಾಸ್ತ್ರ ಮತ್ತು ಶಿವಾನುಭವ ಇವುಗಳ ಬೆಳಕು ನಾಡಿನಲ್ಲೆಲ್ಲ ಭರದಿಂದ ಪಸರಿಸಹತ್ತಿತು. ಬಹು ಜನರು ಶಿವಶರಣರ ಮಾರ್ಗವನ್ನು ಕೈಕೊಂಡು ವಚನಗಳನ್ನು ಸಹ ರಚಿಸುವವರಾದರು. ಈ ಕಾಲದಲ್ಲಿ ಅಸಂಖ್ಯ ಜಂಗಮರು ಕಲ್ಯಾಣಕ್ಕೆ ಹೋಗುತ್ತ ಬರುತ್ತ ಇದ್ದರು. ಅವರು ಸಹ ಶಿವಶರಣರ ಉಕ್ತಿಗಳನ್ನು ತಿಳಿದುಕೊಂಡು ಅವುಗಳನ್ನು ದೇಶದಲ್ಲೆಲ್ಲ ಪ್ರಸಾರಮಾಡುತ್ತ ಜನರಿಗೆ ಬೋಧೆ ಮಾಡುತ್ತ ಸಂಚರಿಸುವರು.

ಈ ಕಾಲದಲ್ಲಿ ಶಿವಶರಣರಲ್ಲಿ ಪರಸ್ಪರ ಪ್ರೇಮ ಆದರಗಳು ನಿಬಿಡವಾಗಿ ಉಂಟಾಗಿದ್ದವೆಂಬುದು ಸ್ವಾಭಾವಿಕವಾದದ್ದು. ಯಾರಲ್ಲಿ ಉಚ್ಚತರದ ವಿಚಾರಗಳು ರೂಢವಾಗಿರುತ್ತವೆಯೋ ಅಲ್ಲಿ ಸ್ನೇಹ ಸೌಹಾರ್ದ್ರಭಾವಗಳು ನೆಲಿಸುತ್ತಿವೆ. ಈ ತರದ ಪರಿಸ್ಥಿತಿಯು ಕಲ್ಯಾಣದಲ್ಲಿ ಈ ಕಾಲದಲ್ಲಿ ಉಂಟಾಗಿದ್ದುದು ಕಂಡುಬರುತ್ತದೆ. ಶಿವಶರಣರೆಲ್ಲರೂ ಅಲ್ಲಮಪ್ರಭುವಿನ ವಿಷಯವಾಗಿ ಪೂಜ್ಯ ಭಾವವನ್ನು ತಾಳಿದವರಾಗಿದ್ದರು. ಅಲ್ಲಮಪ್ರ

ಭುವಾದರೂ ಶಿವಶರಣರ ಕೂಡ ಅತ್ಯಂತ ಪ್ರೇಮಳ ಮತ್ತು ನಿರ್ಮಳ ಮನಸ್ಸಿನಿಂದ ನಡೆಯುತ್ತಿದ್ದನು. ಇದು ಕೆಳಗೆ ಕಾಣಿಸಿದ ಉಕ್ತಿಗಳಿಂದ ತಿಳಿದುಬರುತ್ತದೆ. ಅಲ್ಲಮಪ್ರಭುವು ಬಸವೇಶ್ವರನ ವಿಷಯವಾಗಿ ಅನ್ನುವದೇನೆಂದರೆ,

ತನುವ ಗೆಲಲರಿಯದೆ, ಮನವ ಗೆಲಲರಿಯದೆ, ಧನವ ಗೆಲಲರಿಯದೆ, ಭ್ರಮೆಗೊಂಡಿತ್ತು ಲೋಕವೆಲ್ಲವು. ತನುವ ದಾಸೋಹಕ್ಕೆ ಸವಿಸಿ ಮನವ ಲಿಂಗಧ್ಯಾನದಲ್ಲಿ ಸವಿಸಿ, ಧನವ ಜಂಗಮದಲ್ಲಿ ಸವಿಸಿ ಗೆಲಬಲ್ಲರೆ ಸಂಗನ ಬಸವಣ್ಣನಲ್ಲದೆ ಮತ್ತಾರನು ಕಾಣೆ. ಗುಹೇಶ್ವರ ನಿಮ್ಮ ಶರಣ ಸಂಗನಬಸವಂಗೆ.

ನಿತ್ಯ ಬಸವಣ್ಣ, ನಿರಂಜನ ಬಸವಣ್ಣ, ಸಚ್ಚಿದಾನಂದ ಬಸವಣ್ಣ, ನಿತ್ಯ ಪರಿಪೂರ್ಣ ಬಸವಣ್ಣ, ಅಖಂಡಪಿಂಡ ಬಸವಣ್ಣ, ಶಿವಾಚಾರ ಚಕ್ರವರ್ತಿ ಬಸವಣ್ಣ, ಸರ್ವಾಚಾರ ಸಂಪನ್ನ ಬಸವಣ್ಣ, ಷಟ್‌ಸ್ಥಲ ಬ್ರಹ್ಮ ರೂಪ ಬಸವಣ್ಣ, ಸರ್ವಾಂಗ ಲಿಂಗಮೂರ್ತಿ ಬಸವಣ್ಣ, ನಿಸ್ಸಂಗ ನಿಜರೂಪ ಶಿವಸಮಯ ಪ್ರತಿಷ್ಠಾಚಾರ್ಯ ಬಸವಣ್ಣ ಎಂದು ಅಲ್ಲಮಪ್ರಭುವು ಬಸವೇಶ್ವರನನ್ನು ಹೊಗಳಿದ್ದಾನೆ. ಹಾಗೆಯೇ ಶಿವಶರಣರಾದರೂ ಅಲ್ಲಮಪ್ರಭುವಿನನ್ನು ಹೊಗಳಿದ್ದಾರೆ. ಮಡಿವಾಳಮಾಚಿದೇವನು ಅಲ್ಲಮಪ್ರಭುವಿನನ್ನು ಕುರಿತು ಹೇಳುವದೇನೆಂದರೆ,

ಸ್ಥೂಲಕಂಥೆ, ಸೂಕ್ಷ್ಮಟೊಕ್ಕರ, ಸತ್ಯದಂಡ, ಶಾಂತಿಭಸಿತ, ಸುಚಿತ್ತ ಮಣಿ, ತತ್ವಕರ್ಪರ, ವೈರಾಗ್ಯ ಹಾವುಗೆ, ಮನದೃಢವೇಕಾದವನ ಆಚಾರವೇ ಕಂಕಣ, ಶಮದಮೆಯೇ ಕರ್ಣಕುಂಡಲ, ಇಂತು ಬೆರಸಿ ಸುಳಿವನು ಜಗತ್ಪಾವನ ಮೂರ್ತಿ. ತನ್ನ ಒಲುಮೆಯ ಶರಣರಿಗೆ ನಿಜಸುಖವನೀಯಲೆಂದು ಕಲಿದೇವ ನಿಮ್ಮ ಶರಣ ಪ್ರಭುದೇವರ ಶ್ರೀಪಾದವ ಕಂಡು ಅರ್ಚಿಸಿ ಪೂಜಿಸಿ, ನಿಶ್ಚಿಂತನಾದೆನು.

ಇದರಂತೆಯೇ ಚನ್ನಬಸವಣ್ಣನು ಅನ್ನುವದೇನಂದರೆ—

ಕಣ್ಣಿಂಗೆ ಬಂದಾತನಲ್ಲ, ಹೊನ್ನಿಂಗೆ ಬಂದಾತನಲ್ಲ, ಮಣ್ಣಿಂಗೆ ಬಂದಾತನಲ್ಲ, ವಚನಕ್ಕೆ ಬಂದಾತನಲ್ಲ, ಕೂಡಲ ಚೆನ್ನಸಂಗಯ್ಯನಲ್ಲಿ ಭಕ್ತಿಪಥವ ತೋರಬಂದನಯ್ಯ ಪ್ರಭುದೇವ.

ಈ ಮೇಲಿನ ವಚನಗಳಿಂದ ಶಿವಶರಣರು ಅಲ್ಲಮಪ್ರಭುವಿನ ವಿಷಯವಾಗಿ ಎಷ್ಟು ಪೂಜ್ಯ ಬುದ್ಧಿಯುಳ್ಳವರಾಗಿದ್ದರೆಂಬುದು ತಿಳಿದುಬರುತ್ತದೆ.

ಇದೇ ಪ್ರಕಾರ ಶಿವಶರಣರು ತಮ್ಮ ತಮ್ಮೊಳಗೆ ಅತ್ಯಂತ ಆದರ ಭಾವವುಳ್ಳವರಾಗಿ ಧರ್ಮ ಚರ್ಚೆಗಳನ್ನು ಮಾಡುತ್ತ ಬಂದರು, ಇದರ ಪರಿಣಾಮವಾಗಿ ಬಸವೇಶ್ವರನ ಕಾಲದಲ್ಲಿ ಒಂದು ಶ್ರೇಷ್ಠ ವಚನವಾಙ್ಮಯವು ಉಂಟಾಯಿತು. ಆಗ ಉಚ್ಚ ವಿಚಾರಗಳು ಹೊರಪಟ್ಟವು. ಇದರಿಂದ ಸಮಾಜದಮೇಲೆ ಸ್ಥಾಯಿಕ ಪರಿಣಾಮಗಳಾದವು. ಎಲ್ಲರಲ್ಲಿ ಭಕ್ತಿ ಭಾವವು ಬೆಳೆಯಿತು. ಉಚ್ಚ ನೀಚವೆಂಬ ಜಾತಿ ವಿಶಿಷ್ಟ ಭೇದಭಾವಗಳು ತಾವಾಗಿಯೇ ಮಾಯವಾದವು. ಶಿವಶರಣರ ಚರಿತ್ರೆಗಳಮೇಲಿಂದ ಸಮಾಜದಲ್ಲಿ ಈ ಸ್ಥಿತಿಯು ಉಂಟಾದದ್ದು ಕಂಡುಬರುತ್ತದೆ.

## ಧರ್ಮತತ್ತ್ವಗಳ ಸಮನ್ವಯ ಕಾರ್ಯ

ಹೀಗೆ ಕೆಲವು ವರ್ಷಗಳಾದ ಮೇಲೆ ಶಿವಾನುಭವದ ತತ್ವಗಳು ಬಸವೇಶ್ವರ, ಅಲ್ಲಮಪ್ರಭು, ಸಿದ್ಧರಾಮೇಶ್ವರ, ಚನ್ನಬಸವ, ಮೋಳಿಗೆ ಮಾರಯ್ಯ, ಮಹಾದೇವಿಯಕ್ಕ, ಮಡಿವಾಳಮಾಚಿದೇವ, ಹಡಪದಪ್ಪಣ್ಣ ಇವರೇ ಮೊದಲಾದ ಶಿವಾನುಭವಿಗಳ ಸಮ್ಮುಖದಲ್ಲಿ ಅನೇಕ ಚರ್ಚೆಗಳ ತರುವಾಯ ಸ್ಥಿರಪಡಿಸಲ್ಪಟ್ಟವು. ಕಾರ್ಯವು ಶಿವಾನುಭವ ಮಂಟಪದಲ್ಲಿ ಜರಗಿದ್ದು ನಿರ್ವಿವಾದವಾಗಿದೆ. ಆಕಾಲದಲ್ಲಿ ಜೈನ ಶೈವಮತದವರಷ್ಟೇ ಅಲ್ಲ, ಸನಾತನ ಮತಸ್ಥರೂ ಯೋಗವಿದ್ವರೂ ಸಾಂಖ್ಯಶಾಸ್ತ್ರಜ್ಞರೂ ಮೀಮಾಂಸಕರೂ ಹೀಗೆ ಅನೇಕ ಮತಸ್ಥರಲ್ಲಿ ರೂಢವಿರುವ ತತ್ವಗಳನ್ನು ಬಲ್ಲವರು ಶಿವಾನುಭವ ಮಂಟಪದಲ್ಲಿ ಕೂಡಿಕೊಂಡು ಒಂದು ಸರ್ವ ಸಮ್ಮತವಾದ ಸಿದ್ಧಾಂತವನ್ನು ನೆಲೆಗೊಳಿಸಿದರೆಂದು ತೋರುತ್ತದೆ. ಇದೇ ಷಟ್‌ಸ್ಥಲ ಸಿದ್ಧಾಂತ ಅಥವಾ ಶಿವಾನುಭವ ಎಂದು ಹೇಳಲು ಪ್ರತ್ಯವಾಯವಿಲ್ಲ. ಈ ಮಂಟಪದಲ್ಲಿ ಅಸ್ಪೃಶ್ಯರೂ ಕೈಕೂಲಿಯವರೂ ಸೇನಾಪತಿಗಳೂ ಉಚ್ಚ ಅಧಿಕಾರಿಗಳೂ ಮಠಾಧಿಪತಿಗಳೂ ಒಂದು ಕಾಲದಲ್ಲಿ ರಾಜರಾಗಿದ್ದು ಹಿಂದುಗಡೆ ಅದು ಬೇಡಾಗಿ ಅದನ್ನು ತೊರೆದವರೂ ಹೀಗೆ ಅನೇಕ ತರಗತಿಯ ಜನರು ಶಿವಾನುಭವ ಮಂಟಪದಲ್ಲಿ ಸಮಾವೇಶವಾಗಿದ್ದರು.

ಅವರೆಲ್ಲರ ವಿಚಾರಗಳನ್ನೂ ತತ್ವಗಳನ್ನೂ ತಿಳಿದುಕೊಂಡು ಅವುಗಳನ್ನು ಸಮನ್ವಯ ಮಾಡುವ ಕಾರ್ಯವು ಕೆಲವು ಕಾಲ ಮಂಟಪದಲ್ಲಿ ನಡೆಯಿತು. ಈ ಬಗ್ಗೆ ವಿಚಾರಗಳು ಉಂಟಾದಾಗ್ಗೆ ಕಡೆಯ ನಿರ್ಣಯವನ್ನು ಕೊಡುವ ಭಾರವು ಅಲ್ಲಮಪ್ರಭು, ಚೆನ್ನಬಸವ, ಬಸವೇಶ್ವರ, ಸಿದ್ಧರಾಮೇಶ್ವರ, ಮೋಳಿಗೆ ಮಾರಯ್ಯ ಇವರಿಗೆ ವಹಿಸಲ್ಪಡುತ್ತಿದ್ದಿತು. ಈ ಮಹಾನುಭಾವರು ರಚಿಸಿದ ಉಕ್ತಿಗಳು ಈ ಸಂಗತಿಯನ್ನು ದೃಢಪಡಿಸುತ್ತವೆ. ಈ ಕಾಲದಲ್ಲಿ ಅನೇಕ ತರದ ಧರ್ಮಗ್ರಂಥಗಳಾದವು. ಅವು ವಾದ ವಿವಾದಾತ್ಮಕ ವಚನಗಳೂ ಷಟ್‌ಸ್ಥಲಾತ್ಮಕ ವಚನಗಳೂ ಏಕೋತ್ತರ ಷಟ್‌ಸ್ಥಲ ಇವುಗಳ ಬಗ್ಗೆ ವಿಸ್ತೃತ ವಿವೇಚನೆಗಳೂ ಇರುತ್ತವೆ. ಅವುಗಳ ವಿಷಯವಾಗಿ ಮಂಟಪದಲ್ಲಿದ್ದ ಶಿವಶರಣರು ತಮ್ಮ ತಮ್ಮ ವಚನಗಳನ್ನು ಮಂಟಪದಲ್ಲಿಯ ಶಿವಶರಣರು ಕೇಳಿಕೊಂಡು ಚರ್ಚಿಸಿ ದೃಢಪಡಿಸುತ್ತಿದ್ದರು. ಈ ಕಾರ್ಯವು ಬಿಜ್ಜಳನ ವಧೆಯಾಗುವವರೂ ಅಂದರೆ ಸುಮಾರು ೩ ವರ್ಷ ಒಂದೇ ಸಮನೆ ನಡೆಯಿತು. ನೂರಾರು ಶಿವಶರಣರು ಈ ಕಾರ್ಯದಲ್ಲಿ ತತ್ಪರರಾಗಿದ್ದರು. ಅವರಿಂದ ಲಕ್ಷಾವಧಿ ವಚನಗಳಾದವೆಂದು ಐತಿಹ್ಯವಿದೆ. ಈ ಕಾರ್ಯದಲ್ಲಿ ಎಲ್ಲರಿಗೆ ಮುಂದಾಳುವಾಗಿ ನಡೆದವರು ಅಲ್ಲಮಪ್ರಭು, ಚನ್ನಬಸವೇಶ್ವರ, ಸಿದ್ಧರಾಮೇಶ್ವರ, ಬಸವ, ಮೋಳಿಗೆಯಮಾರಯ್ಯ; ಇವರೇ ಇದ್ದಾರೆ. ಇದರಿಂದ ಅವರು ವೀರಶೈವ ಸಮಾಜದಲ್ಲಿ ಉನ್ನತಸ್ಥಾನವನು ಪಡೆದ್ದಿದ್ದಾರೆ. ಅವರೆಲ್ಲರೂ ಅಸಂಖ್ಯ ವಚನಗಳನ್ನು ರಚಿಸಿದ್ದಾರೆ. ಅವೆಲ್ಲವೂ ನಮಗೆ ಇನ್ನೂ ದೊರೆತಿಲ್ಲ ಇವುಗಳಲ್ಲಿ ಕೆಲವು ವಚನಗಳು ಮಾತ್ರ ೧೫ನೇ ಶತಮಾನದಲ್ಲಿ ಕಂಡು ಹಿಡಿಯಲ್ಪಟ್ಟು ಅವುಗಳಲ್ಲಿ ದೊರೆತವುಗಳನ್ನಷ್ಟು ಕೆಲ ಮಹನೀಯರು ಸಂಗ್ರಹಿಸಿದ್ದಾರೆ. ಉಳಿದ ವಚನಗಳ ಬಗ್ಗೆ ಅಂದಿನಿಂದ ಈ ವರೆಗೂ ಯಾವ ಸಂಶೋಧನೆಗಳು ನಡೆದಿರುವದಿಲ್ಲ. ಇದರಿಂದ ವಚನಕಾರರ ವಾಙ್ಮಯವು ಇನೂ ಅಜ್ಞಾತಾವಸ್ಥೆಯಲ್ಲಿಯೇ ಇರುತ್ತದೆ.

## ವಚನಶಾಸ್ತ್ರದ ಪ್ರಸಾರ

ಹೀಗೆ ಅಲ್ಲಮಪ್ರಭುವು ಕೆಲವುಕಾಲ ಕಲ್ಯಾಣ ಪಟ್ಟಣದಲ್ಲಿ ಕಳೆದ ಬಳಿಕ ಆವನು ವಚನಶಾಸ್ತ್ರದ ಪ್ರಚಾರವನ್ನು ಮಾಡಬೇಕೆಂದು ನಿರ್ಧರಿಸಿ ದೇಶ ಸಂಚಾರಮಾಡಲು ಹೊರಡುವವನಾದನು. ಆವನು ಆ ಕಾಲಕ್ಕೆ

ಮಾಡಿದ ಕಾರ್ಯಗಳು ಕರ್ನಾಟಕದಲ್ಲಿ ಚಿರಸ್ಥಾಯಿಯಾಗಿ ಉಳಿದಿವೆ. ಅವನ ಮೂಲಕ ಎಲ್ಲ ಕಡೆಗೂ ವೀರಶೈವ ಧರ್ಮವು ಪಸರಿಸಿತು. ಇದರಿಂದ ಅಲ್ಲಮಪ್ರಭುವು ವೀರಶೈವ ಸಮಾಜದಲ್ಲಿ ಉಚ್ಚ ಸ್ಥಾನವನ್ನು ಹೊಂದಿದನು. ಅಲ್ಲಮಪ್ರಭುವು ಕೈಕೊಂಡ ಈ ಕಾರ್ಯಗಳಿಗೆ ಬಸವೇಶ್ವರನು ಯಾವಾಗಲೂ ಸಹಾಯಕನಾಗಿ ವರ್ತಿಸುತ್ತ ಬಂದನು. ಅವನು ಚಾಲುಕ್ಯ ರಾಜ್ಯದಲ್ಲಿ ಶ್ರೇಷ್ಠ ಅಧಿಕಾರ ಸ್ಥಾನವನ್ನು ಹೊಂದಿದವನು. ಮೇಲಾಗಿ ಅವನು ಶಿವಶರಣರಲ್ಲಿ ಭಕ್ತಾಗ್ರಣಿ, ನಿಃಸ್ವಾರ್ಥಿ, ಉದಾರಿ ಎಂದು ಪ್ರಸಿದ್ಧನಾದವನು. ಹೀಗೆ ಶಿವಶರಣರಿಂದ ಶಿವಾನುಭವ ಮಂಟಪದಲ್ಲಿ ಚರ್ಚಿಸಲ್ಪಟ್ಟ ಸಿದ್ಧಾಂತಗಳು ಬಸವೇಶ್ವರ, ಅಲ್ಲಮಪ್ರಭು ಇವರ ಮೂಲಕ ನಾಡಿನಲ್ಲೆಲ್ಲ ಬಹು ಭರದಿಂದ ಪ್ರಸಾರವಾಗಹತ್ತಿದವು. ಮತ್ತು ಅಲ್ಲಮ ಬಸವೇಶ್ವರರ ವಾರ್ತೆಯನ್ನು ಕೇಳಿ ಕರ್ನಾಟಕದ ಎಲ್ಲ ಭಾಗಗಳಿಂದಲೂ ಗುಜರಾಥ, ಕಾಶ್ಮೀರ, ಆಂಧ್ರ, ಮತ್ತು ಓಡಿಸಾ ಪ್ರಾಂತಗಳಿಂದಲೂ ಬಹುಜನ ಶಿವಜ್ಞಾನಿಗಳು ಕಲ್ಯಾಣಪಟ್ಟಣಕ್ಕೆ ಬಂದು ಅಲ್ಲಿ ವಾಸಮಾಡಹತ್ತಿದರು. ಅವರೆಲ್ಲರೂ ತ್ರಿಲಿಂಗ, ಷಡ್ಲಿಂಗ, ಷಟ್‌ಸ್ಥಲ, ಶಿವಸಾಮರಸ್ಯ, ಪಂಚಾಚಾರ, ಜ್ಞಾನಾಚಾರ, ಏಕೋತ್ತರಗಳು, ಅಷ್ಟಾವರಣಗಳು, ಅಷ್ಟಾಬಾವರಣ, ಪ್ರಸಾದದ ತತ್ವಗಳು ಈ ಮೊದಲಾದ ವಿಷಯಗಳನ್ನು ಅರಿತವರಾಗಿ ವೀರಶೈವ ಧರ್ಮವನ್ನು ಎಲ್ಲ ಕಡೆಗೂ ಪ್ರಚಾರಮಾಡಲಿಕ್ಕೆ ಸಿದ್ಧರಾದರು. ಅವರಿಗೆ ಬಸವೇಶ್ವರ ಅಲ್ಲಮಪ್ರಭು ಚನ್ನಬಸವೇಶ್ವರ ಇವರೇ ಮೊದಲಾದ ಶಿವಶರಣರು ಮಾರ್ಗದರ್ಶಕರಾದರು. ಈ ಪ್ರಚಾರದ ಫಲವಾಗಿ ಬ್ರಾಹ್ಮಣ ಮೊದಲಾದ ಸನಾತನ ಧರ್ಮಾನುಯಾಯಿಗಳೂ ಜೈನ ಬೌದ್ಧರೂ ಶೈವರೂ ಹೀಗೆ ಎಲ್ಲ ಮತಸ್ತರು ವೀರಶೈವ ಮಾರ್ಗದಂತೆ ನಡೆಯಲು ಸನ್ನದ್ಧರಾದರು. ಶಿವಶರಣರ ಚರಿತ್ರೆಗಳನ್ನು ನಾವು ಅವಲೋಕಿಸಿದಲ್ಲಿ ನಾಡಿನಲ್ಲಿ ಈ ಕಾಲದಲ್ಲಿ ಈ ತೆರದ ಪರಿಸ್ಥಿತಿಯು ಉಂಟಾದಂತೆ ತೋರಿಬರುತ್ತದೆ. ವೀರಶೈವ ಸಿದ್ಧಾಂತವನ್ನು ನೆಲೆಗೊಳಿಸಲು ಬಹುಕಡೆ ಜಂಗಮರು ಮಠಗಳನ್ನು ಸ್ಥಾಪಿಸಲು ಪ್ರಾರಂಭಿಸಿದರು. ಕಲ್ಯಾಣಪಟ್ಟಣದಲ್ಲಿ ವೀರಶೈವ ಜನಸಂಖ್ಯೆಯು ಬಹಳ ಹೆಚ್ಚಿತು. ಅಲ್ಲಿ ಅನೇಕ ಮಠಗಳು ಸ್ಥಾಪಿಸಲ್ಪಟ್ಟವು ಈ ಪ್ರಕಾರ ವೀರಶೈವ ಗ್ರಂಥಗಳಲ್ಲಿ ಉಲ್ಲೇಖಗಳಿವೆ ಹೀಗೆ ಕಲ್ಯಾಣರಾಜ್ಯದಲ್ಲಿ ಈಕಾಲ

ದಲ್ಲಿ ಒಂದು ಅದ್ಭುತವಾದ ಧಾರ್ಮಿಕ ಕ್ರಾಂತಿಯು ಒದಗಿತು. ಈ ಸ್ಥಿತಿಯು ಉಂಟಾದಕೂಡಲೆ ಅಲ್ಲಮಪ್ರಭುವು ದೇಶಸಂಚಾರ ಮಾಡುತ್ತ ಧರ್ಮಾಭಿವೃದ್ಧಿಯ ಕಾರ್ಯಗಳನ್ನು ಕೈಕೊಳ್ಳುವವನಾದನು.

## ವೀರಶೈವ ಧರ್ಮಪ್ರಸಾರವು ಹೇಗಾಯಿತು

ಈಗಿನ ಕಾಲದಲ್ಲಿ ವೀರಶೈವ ಸಮಾಜವು ಇಡೀ ಕರ್ನಾಟಕದಲ್ಲಿ ದಟ್ಟವಾಗಿ ಪಸರಿಸಿದ್ದು ಕಂಡು ಬರುತ್ತದೆ. ಇದನ್ನು ಇತರ ಮತೀಯರು ನೋಡಿ ಅನೇಕ ತರ್ಕಕುತರ್ಕಗಳನ್ನು ಮಾಡುವದುಂಟು. ಬಸವೇಶ್ವರನು ತನ್ನ ರಾಜಕೀಯ ವರ್ಚಸ್ಸನ್ನು ಉಪಯೋಗಿಸಿ ಜನರನ್ನು ಧರ್ಮಾಂತರ ಗೊಳಿಸಿದನೆಂತಲೂ ಅವನು ರಾಜನಲ್ಲಿ ಉನ್ನತಾಧಿಕಾರವನ್ನು ಪಡೆದವನಾದ್ದರಿಂದ ರಾಜನ ತಿಜೋರಿಯಲ್ಲಿಯ ಹಣವನ್ನು ದುರುಪಯೋಗ ಮಾಡಿ ಜನರಿಗೆ ದುಡ್ಡು ಕೊಟ್ಟು ಅವರನ್ನು ವೀರಶೈವ ಧರ್ಮದಲ್ಲಿ ಸೇರಿಸಿಕೊಂಡನೆಂತಲೂ ಬೇರೆ ಕೆಲವರು ಇತರ ಧರ್ಮೀಯರಿಗೆ ಬಸವೇಶ್ವರನು ಅಂಜಿಕೆಹಾಕಿ ಅವರನ್ನು ಬಲತ್ಕಾರದಿಂದ ಧರ್ಮಾಂತರಗೊಳಿಸಿದ ನೆಂತಲೂ ಹೀಗೆ ಅನೇಕ ಪ್ರಕಾರದ ಊಹೆಗಳನ್ನು ಈಗಲೂ ಮಾಡುತ್ತಲಿರುವರು. ಆದರೆ ಇವು ಅಸೂಯಾಂಧತೆಯಿಂದ ಆರೋಪಣೆಗಳನ್ನು ಮಾಡಿದವುಗಳೇ ಹೊರ್ತು ಇವುಗಳಲ್ಲಿ ಸತ್ಯಾಂಶವು ಏನೂ ಇರುವದಿಲ್ಲ. ಬಸವೇಶ್ವರನ ಕಾಲಕ್ಕೆ ಆಗಿ ಹೋದ ಶಿವಶರಣರು ಹಳ್ಳಿಗಳಲ್ಲಿ ಪ್ರವಾಸ ಮಾಡುವರು, ಅವರು ಹೋದಲ್ಲೆಲ್ಲ ಜನರಿಗೆ ಧರ್ಮಬೋಧೆ ಮಾಡುವರು, ವೀರಶೈವ ಧರ್ಮದಲ್ಲಿರುವ ಉನ್ನಾತ್ತ ತತ್ವಗಳನ್ನು ಅವರಿಗೆ ವಿವರಿಸಿ ಹೇಳುವರು, ಈ ಪ್ರಕಾರ ಅವರು ಜನರ ಮನಸ್ಸಿನಲ್ಲಿ ಬದಲಾವಣೆ ಮಾಡಿ ಅವರು ವೀರಶೈವ ಧರ್ಮವನ್ನು ಸ್ವೀಕರಿಸುವಂತೆ ಮಾಡಿದರು. ಜನರಾದರೂ ಸ್ವಪ್ರೇರಣೆಯಿಂದ ವೀರಶೈವ ಧರ್ಮವನ್ನು ಸ್ವೀಕರಿಸಿದ್ದಾರೆ.

ಅಲ್ಲಮಪ್ರಭುವು ಪ್ರವಾಸಕ್ಕೆ ಹೊರಟ ಬಳಿಕ ಅವನು ಜನರೊಡನೆ ಪ್ರೇಮದಿಂದ ವರ್ತಿಸಿ ಅವರ ಮನಸ್ಸನ್ನು ಹೇಗೆ ತಿರುಗಿಸುತ್ತಿದ್ದನೆಂಬುದು ಕೆಳಗಿನ ಶ್ಲೋಕದಿಂದ ಸ್ಪಷ್ಟವಾಗುತ್ತದೆ.

ಆಡಿ ಕೆಲವರಿಗೆ ಕರುಣದಲ್ಲಿ ಮಾ
ತಾಡಿ ಕೆಲರಿಗೆ ನುಡಿಸಿ ಕೆಲರಿಗೆ
ನೋಡಿ ಕೆಲರಿಗೆ ಜರಿದು ಕೆಲರಿಗೆ ಜಡಿದು ಕೆಲವರಿಗೆ

ಆಗ ನಾನು ಬರ ಬರ ಅಂದರೆ ತೀವ್ರವಾಗಿಯೇ ಲಿಂಗೈಕ್ಯನಾಗುವೆನು. ಇಷ್ಟೇ ಅಲ್ಲ, ನಾನು ಅದಕ್ಕೂ ಆಚೆಗಿರುವ ಸರ್ವಶೂನ್ಯ ನಿರಲಂಬ ಸ್ಥಲವನ್ನು ಹೊಂದಿ ಕೂಡಲಸಂಗಮನಕಿಂತಲೂ ಶ್ರೇಷ್ಠನಾಗುವೆನೆಂದು ಬಸವೇಶ್ವರನು ಇಲ್ಲಿ ಹೇಳಿದ್ದಾನೆ.

(೪೧) ಆಚಾರಲಿಂಗವಿಡಿದು ಅನುಭಾವಲಿಂಗಸಿದ್ಧಿ, ಅನುಭಾವಲಿಂಗ ವಿಡಿದು ಮಾರ್ಗಕ್ರಿಲಿಂಗ ಸಿದ್ಧಿ, ಮಾರ್ಗಕ್ರಿಲಿಂಗವಿಡಿದು ಮೀರಿದಕ್ರಿಲಿಂಗ ಸಿದ್ಧಿ, ಮೀರಿದ ಕ್ರಿಲಿಂಗವಿಡಿದು ಕ್ರಿಯಾನಿಷ್ಪತ್ತಿಲಿಂಗ ಸಿದ್ಧಿ. ಇದುಕಾರಣ ಕೂಡಲಸಂಗಮದೇವ ಲಿಂಗವಿಡಿದು ಲಿಂಗಸಿದ್ಧಿ.

ಯಾವ ವಸ್ತುವು ಉತ್ತಮವಾದುದು ಇದೆಯೋ ಅದರಲ್ಲಿ ಲಿಂಗವಿದೆ ಎಂದು ತಿಳಿಯಬೇಕು. ನಡೆಯಲ್ಲಿ ಶುದ್ಧತೆಯು ಇದ್ದಲ್ಲಿ ಅದು ಆಚಾರ ಲಿಂಗವಿದ್ದುದರ ಗುರುತು. ಆಚಾರಲಿಂಗವಿದ್ದಲ್ಲಿ ಅದು ಭಕ್ತಸ್ಥಲವು. ಅದು ಇನ್ನೂ ಹೆಚ್ಚು ದೃಢಪಟ್ಟಲ್ಲಿ, ಅದು ಮಹೇಶ್ವರಸ್ಥಲವು. ಇವೆರಡೂ ಸ್ಥೂಲ ಶರೀರಕ್ಕೆ ಸಂಬಂಧಿಸಿದ ಸ್ಥಲಗಳು. ಈ ಎರಡು ಸ್ಥಲಗಳನ್ನು ಭಕ್ತನು ಹೊಂದಿದಲ್ಲಿ ಅವನಲ್ಲಿ ಇಷ್ಟಲಿಂಗವು ಅಳವಡುತ್ತದೆ. ಹೀಗೆ ಸ್ಥೂಲಶರೀರ ದಲ್ಲಿ ಇಷ್ಟಲಿಂಗವು ಅಳವಡುತ್ತದೆ. ಹೀಗೆ ಸ್ಥೂಲಶರೀರದಲ್ಲಿ ಇಷ್ಟಲಿಂಗವು ಅಳವಡಲು ಮುಂದೆ ಅನುಭಾವ ಲಿಂಗವು ಸಿದ್ಧಿಸುತ್ತದೆಂದು ಬಸವೇಶ್ವರನು ಇಲ್ಲಿ ಹೇಳಿದ್ದಾನೆ. ಈ ಲಿಂಗವು ಸೂಕ್ಷ್ಮಶರೀರದಲ್ಲಿ ಇರುತ್ತದೆ. ಇದು ಮನಸ್ಸಿನ ಶುದ್ಧತೆಯು. ಇದು ಅನುಭಾವ ಲಿಂಗವಿದ್ದುದರ ಕುರುಹು. ಸೂಕ್ಷ್ಮ ಶರೀರದಲ್ಲಿ ಎರಡು ಸ್ಥಲಗಳಿದ್ದು ಅವುಗಳಲ್ಲಿ ಮೊದಲನೆಯದಾದ ಪ್ರಸಾದಿಸ್ಥಲದಲ್ಲಿ ಶಿವಲಿಂಗವೆಂಬುದು ಇರುತ್ತಿದೆ. ಇದು ದೃಢಪಟ್ಟಲ್ಲಿ ಅದು ನಾಲ್ಕನೆಯದಾದ ಪ್ರಾಣಲಿಂಗಿಸ್ಥಲವು. ಅದನ್ನು ಬಸವೇಶ್ವರನು ಅನುಭಾವ ಲಿಂಗವೆಂದು ಇಲ್ಲಿ ಕರೆದಿದ್ದಾನೆ. ಪ್ರಸಾದಿ ಮತ್ತು ಪ್ರಾಣಲಿಂಗಿ ಸ್ಥಳಗಳ ಆಚರಣೆಗಳ ಮೂಲಕ ಸೂಕ್ಷ್ಮ ಶರೀರದಲ್ಲಿ ಇಷ್ಟ ಲಿಂಗಕ್ಕಿಂತಲೂ ಸೂಕ್ಷ್ಮವಾದ ಲಿಂಗವು ಅಳವಡುತ್ತದೆ. ಈ ಲಿಂಗಕ್ಕೆ ಪ್ರಾಣಲಿಂಗ ಅಥವಾ ಅನುಭಾವ ಲಿಂಗವೆಂಬ ಹೆಸರಿದೆ- ಪ್ರಸಾದಿ ಸ್ಥಲದವರೆಗೆ ಇರುವ ಆಚರಣೆಗಳು 'ಮಾರ್ಗಕ್ರಿ'ಗಳೆಂತಲೂ ಈ ಸ್ಥಲದ ಮುಂದಿನ ಮೂರು ಸ್ಥಲಗಳಾದ ಪ್ರಾಣಲಿಂಗಿ ಶರಣ ಮತ್ತು ಐಕ್ಯ ಸ್ಥಲ ಗಳ ಆಚರಣೆಗಳು 'ಮೀರಿದಕ್ರಿ'ಗಳೆಂತಲೂ ಷಟ್‌ಸ್ಥಲ ಶಾಸ್ತ್ರದಲ್ಲಿ ಹೇಳಿದೆ.

ಈ ಮೇಲಿನ ಕ್ರಿಯೆಗಳು ಷಟ್‌ಸ್ಥಲಗಳಲ್ಲಿ ಕಡೆಯದಾದ ಶರಣ ಮತ್ತು ಐಕ್ಯ ಸ್ಥಳಗಳ ಆಚರಣೆಗಳಾಗಿವೆ. ಕಡೆಯ ಎರಡು ಸ್ಥಲಗಳ ಆಚರಣೆಗಳ ಮೂಲಕ ಭಾವಲಿಂಗವು ಭಕ್ತನ ಕಾರಣ ಶರೀರದಲ್ಲಿ ಅಳ ವಡುತ್ತದೆ. ಈ ಭಾವಲಿಂಗವು ಕೇವಲ ಜ್ಞಾನಮಯವಾದುದು. ಹೀಗೆ ಸ್ಥೂಲಸೂಕ್ಷ್ಮ ಕಾರಣ ಶರೀರಗಳಲ್ಲಿ ಅನುಕ್ರಮವಾಗಿ ಇಷ್ಟ ಲಿಂಗ, ಪ್ರಾಣಲಿಂಗ, ಭಾವಲಿಂಗಗಳು ಅಳವಟ್ಟಲ್ಲಿ ಮನುಷ್ಯನು ಕ್ರಿಯಾ ನಿಷ್ಪತ್ತಿ ಲಿಂಗವನ್ನು ಹೊಂದುತ್ತಾನೆ. ಅಂದರೆ ಮನುಷ್ಯನ ಮೂರೂ ಶರೀರಗ ಳಲ್ಲಿ ಅಂದರೆ ಸ್ಥೂಲ, ಸೂಕ್ಷ್ಮ, ಕಾರಣ ಶರೀರಗಳಲ್ಲಿ ಆಯಾ ಲಿಂಗ ಗಳು ತಲೆದೊರಿ ಈ ಶರೀರಗಳು ಪರಿಪಕ್ವ ಸ್ಥಿತಿಯನ್ನು ಹೊಂದುತ್ತವೆ. ಇದು ಮನುಷ್ಯನ ಪರಿಪೂರ್ಣ ಸ್ಥಿತಿಯು. ಆಗ ಭಕ್ತನು ಪರಮಾತ್ಮ ನಲ್ಲಿ ಸಾಮರಸ್ಯವನ್ನು ಹೊಂದುತ್ತಾನೆ. ಹೀಗೆ ಲಿಂಗವನ್ನು ಹಿಡಿದು ಆಚರಿಸಿದಲ್ಲಿ ಲಿಂಗಸಿದ್ಧಿಯಾಗುತ್ತದೆ. ಹೀಗೆ ಬಸವೇಶ್ವರನು ಬಹು ಸಂಕ್ಷಿಪ್ತ ರೀತಿಯಿಂದ ಷಟ್‌ಸ್ಥಲದ ತತ್ವಗಳನ್ನು ಈ ವಚನದಲ್ಲಿ ಹೇಳಿದ್ದಾನೆ.

---

## ಭಕ್ತಸ್ಥಲ.

### (೭) ಭಕ್ತಿಯುಳ್ಳವನಾಗಿರು.

(೪೨) ನಂಬರು, ನೆಚ್ಚರು, ಬರಿದೆ ಕರೆವರು. ನಂಬಲರಿಯರೀ ಲೋಕದ ಮನುಜರು. ನಂಬಿ ಕರೆದಡೆ 'ಓ' ಎನ್ನನೇ ಶಿವನು ? ನಂಬದೆ, ನೆಚ್ಚದೆ, ಬರಿದೆ ಕರೆವರ ಕೊಂಬೆ ಮೆಟ್ಟಿ ಕೂಗೆಂದ ಕೂಡಲಸಂಗಮ ದೇವ.

ಬರಿದೆ = ವ್ಯರ್ಥವಾಗಿ

ಜನರು ಪರಮಾತ್ಮನ ಹೆಸರನ್ನು ತೆಗೆದುಕೊಂಡು ಆಗಿಂದಾಗ್ಗೆ ಕರೆಯುತ್ತಾರೆ. ಆದರೆ ಪರಮಾತ್ಮನಲ್ಲಿ ವಿಶ್ವಾಸವನ್ನಿಡದೆ ಅವರು ಅವ ನನ್ನು ಕರೆಯುತ್ತಾರೆ. ಹೀಗೆ ಕರೆಯುವದು ವ್ಯರ್ಥವೆಂದು ಬಸವೇಶ್ವರನ ಅಭಿಪ್ರಾಯವು. ಆದರೆ ಪರಮಾತ್ಮನಲ್ಲಿ ವಿಶ್ವಾಸವನ್ನಿಟ್ಟು ಕರೆದರೆ ಅವನು

ಅವರಿಗೆ ಕೊಡಲೆ ಒಲಿಯುವನು. ವಿಶ್ವಾಸವಿಲ್ಲದೆ ಕರೆದರೆ ಗಿಡದ ತುದಿಯ ಮೇಲೆ ನಿಂತು ಕೂಗಿದರೂ ಅದು ವ್ಯರ್ಥವೆಂದು ಬಸವೇಶ್ವರನು ಇಲ್ಲಿ ಹೇಳಿದ್ದಾನೆ.

(೪೩) ನೆರೆನಂಬೋ, ನೆರೆನಂಬೋ ದರದುರವಿಲ್ಲದೆ ಸಾಮವೇದಿಗಳಂತೆ ನೆರೆನಂಬೋ, ನೆರೆನಂಬೋ ದಾಸದುಗ್ಗಳೆಯಂತೆ. ನೆರೆನಂಬೋ. ನೆರೆನಂಬೋ ಸಿರಿಯಾಳ ಚಂಗಳೆಯಂತೆ. ನೆರೆನಂಬೋ ನೆರೆನ ಬೋ ಸಿಂಧುಬಲ್ಲಾಳನಂತೆ. ನಂಬಿದೆಯಾದರೆ ತನ್ನ ನೀವ ಕೂಡಲಸಂಗಮದೇವ.

ದರದುರವಿಲ್ಲದೆ = ಭಯವಿಲ್ಲದೆ, ಹಿಂದು ಮುಂದು ನೋಡದೆ.

ಈವನು = ಕೊಡುವನು.

ಪರಮಾತ್ಮನಲ್ಲಿ ನಂಬುಗೆಯನ್ನು ಹೇಗೆ ಇಡಬೇಕೆಂಬುದನ್ನು ಬಸವೇಶ್ವರನು ಇಲ್ಲಿ ಕೆಲವು ಶಿವಶರಣರ ಉದಾಹರಣೆಗಳನ್ನು ಕೊಟ್ಟು ಹೇಳಿದ್ದಾನೆ ಸಾಮವೇದಿ ಎಂಬ ಶರಣನು ಬ್ರಾಹ್ಮಣನು. ಆದರೆ ಅವನು ಶ್ವಪಚಯ್ಯನೆಂಬ ಅಸ್ಪೃಶ್ಯನ ಮೇಲೆ ವಿಶ್ವಾಸವನ್ನಿಟ್ಟು ಅವನಿಂದ ದೀಕ್ಷೆಯನ್ನು ಹೊಂದಿ ಪರಮಾರ್ಥವನ್ನು ಸಾಧಿಸಿದನು. ದೇವದಾಸಿಮಯ್ಯ ಮತ್ತು ಅವನ ಹೆಂಡತಿಯಾದ ದುಗ್ಗಳೆ ಇವರು ಪರಮಾತ್ಮನಲ್ಲಿ ನಂಬಿಗೆಯನ್ನಿಟ್ಟು ನಡೆದರು. ಅದರಿಂದ ಅವರು ಉಚ್ಚ ಪದವನ್ನು ಹೊಂದಿದರು. ಸಿರಿಯಾಳ ಚಂಗಳೆಯರು ಜಂಗಮನಲ್ಲಿ ವಿಶ್ವಾಸವನ್ನಿಟ್ಟು ತಮ್ಮ ಪ್ರೇಮದ ಮಗನನ್ನು ಅವನಿಗೆ ಅರ್ಪಿಸಿದರು. ಇದರಿಂದ ಅವರು ಪರಮಾರ್ಥವನ್ನು ಸಾಧಿಸಿದರು. ಇದರಂತೆಯೇ ಸಿಂಧುಬಲ್ಲಾಳನು ಜಂಗಮದಲ್ಲಿ ವಿಶ್ವಾಸವನ್ನಿಟ್ಟು ನಡೆದನು. ಈ ಶಿವಶರಣರಂತೆ ನೀನು ಕೂಡ ಪರಮಾತ್ಮನಲ್ಲಿ ನಂಬಿಗೆಯನ್ನಿಟ್ಟು ನಡೆದರೆ ಪರಮಾತ್ಮನು ತನ್ನನ್ನೇ ನಿನಗೆ ಒಪ್ಪಿಸಿಬಿಡುತ್ತಾನೆ. ಹೀಗೆ ಬಸವೇಶ್ವರನು ಭಕ್ತಿಯ ಮಹತ್ವವನ್ನು ಇಲ್ಲಿ ಹೇಳಿದ್ದಾನೆ.

(೪೪) ವ್ಯಾಧನೊಂದು ಮೊಲನತಂದರೆ, ಸಲುವ ಹಾಗಕ್ಕೆ ಬಿಲಿವರಯ್ಯ. ನೆಲನಾಳ್ವನ ಹೆಣನೆಂದರೆ ಒಂದಡಿಕೆಗೆ ಕೊಂಬುವರಿಲ್ಲ ನೋಡಯ್ಯ. ಮೊಲನಿಂದ ಕರಕಷ್ಟ. ನರನ ಬಾಳುವೆ. ಸಲೆ ನಂಬೋ ನಮ್ಮ ಕೂಡಲ ಸಂಗಮದೇವನ.

ಕಿರಾತನೊಬ್ಬನು ಬೇಟೆಯಾಡಿ ಒಂದು ಮೊಲವನ್ನು ಹೊಡೆದು ಪೇಟೆಯಲ್ಲಿ ಮಾರಲಿಕ್ಕೆ ಇಟ್ಟರೆ ಅದಕ್ಕೆ ಯೋಗ್ಯ ಬೆಲೆ ಕೊಟ್ಟು ಜನರು

ಕೊಂಡುಕೊಳ್ಳುತ್ತಾರೆ. ಆದರೆ ಇದು ಒಬ್ಬಾನೊಬ್ಬನು ರಾಜ್ಯವಾಳಿದವನ ಹಣವೆಂದು ಅದನ್ನು ಪೇಟೆಯಲ್ಲಿ ಮಾರಲಿಕ್ಕೆ ಇಟ್ಟರೆ ಅದನ್ನು ಒಂದು ಅಡಿಕೆಗೆ ಸಹ ಯಾರೂ ಕೊಳ್ಳುವದಿಲ್ಲ. ಆದ್ದರಿಂದ ಮನುಷ್ಯನ ಬಾಳುವೆ ವೊಲದ ಬಾಳುವೆಗಿಂತಲೂ ಕನಿಷ್ಟವಾದದ್ದು. ಆದ್ದರಿಂದ ಕೂಡಲ ಸಂಗಮನಲ್ಲಿ ಭಕ್ತಿಯುಳ್ಳವನಾಗಿ ಅವನನ್ನು ನಂಬಬೇಕೆಂದು ಬಸವೇಶ್ವರನು ಹೇಳುತ್ತಾನೆ.

(೪೫) ಒಂದು ಮಾತೆನ್ನಬಹುದೇ ಶಬ್ದ ಸಾರಾಯವನು ? ಒಂದು ಮಾತೆನ್ನಬಹುದೇ ಶರಣ ಸಂಬಂಧವನು ? ಕೂಡಲ ಸಂಗಮ ದೇವರು ನಂಬಿಗೆ 'ಓ' ಎಂಬುದನೊಂದು ಮಾತೆನ್ನಬಹುದೇ ?

ಸೌಂದರ ನಂಜಿಣ್ಣನೆಂಬ ಶಿವಶರಣನು ಪರಮಾತ್ಮನನ್ನು ಒಲಿಸಿ ಕೊಂಡಿದ್ದನು. ಆದ್ದರಿಂದ ನಂಬಿಣ್ಣನು ಕರೆದಕೂಡಲೆ ಪರಮಾತ್ಮನು 'ಓ' ಎಂದು ಉತ್ತರ ಕೊಡುವನು. ಹೀಗೆ ಉತ್ತರ ಕೊಟ್ಟದ್ದರಲ್ಲಿ ಏನಿದೆ, ಅದು ಒಂದೇ ಒಂದು ಬರೀ ಶಬ್ದ, ಎಂದು ಯಾರೂ ಅನ್ನಲಾಗದು. ಯಾಕಂದರೆ ಆ ಒಂದು ಶಬ್ದದಲ್ಲಿ ಪರಮಾತ್ಮನಿಗೆ ಇರುವ ಹೆಸರುಗಳ ಸಾರವಿರುತ್ತದೆ. ಅದು ಶರಣರ ನಿಕಟ ಭಕ್ತಿಯು ಎಂಥದೆಂಬದನು ತೋರಿಸುತ್ತದೆ. ಅವರ ಸಂಬಂಧವು ಅತ್ಯಂತ ಪ್ರೀತಿಮಯವಾದುದೆಂಬು ಹೇಳುವದೇ ಬಸವೇಶ್ವರನ ಅಭಿಪ್ರಾಯವು.

(೪೬) ಹೊಲಬುಗೊಂಡರೆ ಸಲುಹೇಡ. ಬಿಲಿಕು ತರಬೇಡ. ಒಲಿದೊಮ್ಮೆ ಶಿವಶರಣೆನ್ನಿರಯ್ಯ. ಒಂದು ಸೊಲ್ಲಿಂಗೆ ಮುಕ್ತಿ ಸಿದ್ಧಿ. ಕೂಡಲ ಸಂಗಮದೇವ ಭಕ್ತಿಲಂಪಟನಾಗಿ.

ಹೊಲಬು= ಉದ್ದೇಶ, ಬಿಲಿ = ಕ್ರಿಯುವನ್ನು ಗೊತ್ತುಪಡಿಸು.

ನೀನು ಒಂದು ಉದ್ದೇಶವನ್ನಿಟ್ಟುಕೊಂಡು ಪರಮಾತ್ಮನನ್ನು ಹುಡುಕಬೇಡ. ಬಹಳ ಹಣಕೊಟ್ಟು ಪದಾರ್ಥಗಳನ್ನು ತಂದು ಅವುಗಳನ್ನು ಪರಮಾತ್ಮನಿಗೆ ಅರ್ಪಿಸಲು ಹೋಗಬೇಡ. ನೀನು ಭಕ್ತಿಯಿಂದ ಎಲೋ ಶಿವನೇ ನಾನು ನಿನ್ನ ಮೊರೆ ಹೊಕ್ಕಿದ್ದೇನೆ, ಎಂದು ಒಂದೇ ಬಾರಿ ನುಡಿದರೆ ನಿನಗೆ ಮುಕ್ತಿಯು ದೊರಕುವದು. ಇದು ಸಿದ್ಧವು. ಪರಮಾತ್ಮನು ಭಕ್ತಿಗೆ ಮೆಚ್ಚುತ್ತಾನೆಂದು ಬಸವೇಶ್ವರನು ಈ ವಚನದಲ್ಲಿ ಹೇಳಿದ್ದಾನೆ.

(೪೭) ಗೀತವ ಬಲ್ಲಾತ ಜಾಣನಲ್ಲ. ಮಾತ ಬಲ್ಲಾತ ಜಾಣನಲ್ಲ. ಜಾಣನು ಜಾಣ. ಆತ ಜಾಣನು. ಲಿಂಗವ ನೆರೆ ನಂಬಿದಾತ ಜಾಣನು. ಜವನ ಬಾಯಲು ಬಾಲವ ಕೊಯ್ದು ಹೋದಾತ ಜಾಣನು ನಮ್ಮ ಕೂಡಲಸಂಗನ ಶರಣನು.

ಜವ = ಯಮ. ಬಾಲ= ಪುಚ್ಛ

ಮೂವತ್ತೆರಡು ರಾಗಗಳನ್ನು ಬಲ್ಲವನು ಜಾಣನಲ್ಲ. ಮಾತಿಗೆ ಮಾತು ಕಲಿತು ವಾದದಲ್ಲಿ ಸರಿಯಾಗಿ ಉತ್ತರ ಕೊಡುವವನು ಜಾಣನಲ್ಲ. ಆದರೆ ಲಿಂಗವನ್ನು ಚನ್ನಾಗಿ ನಂಬಿದಾತನು ಜಾಣನು. ಅವನೇ ಜಾಣನು, ಅವನೇ ಜಾಣನು ಎಂದು ಬಸವೇಶ್ವರನು ಇದನ್ನೇ ಒತ್ತಿ ಹೇಳುತ್ತಾನೆ. ಜಂಗಮವನ್ನು ಸವಿಸುವಾತ ಎಂದರೆ ಅತ್ಯಂತ ಸೂಕ್ಷ್ಮ ತರವಾದ ಜಂಗಮ ಲಿಂಗವನ್ನು ತನ್ನ ಇಂದ್ರಿಯಗಳಲ್ಲಿಟ್ಟುಕೊಂಡು ಅವುಗಳ ಮೂಲಕ ಇಂದ್ರಿಯಾರ್ಪಣ ಮಾಡಬಲ್ಲಾತನು ಜಾಣನೆಂದು ಅವನು ಹೇಳುತ್ತಾನೆ. ಯಮನ ಬಾಯಲ್ಲಿರುವ ನಾಲಗೆಯನ್ನು ಕೊಯ್ದವನು ಎಂದರೆ ತನ್ನ ಭಕ್ತಿಯಿಂದ ಕರ್ಮಚ್ಛೇದನೆ ಮಾಡಿ ಯಮನಿಗೆ ಸಹ ಮೀರಿದವನಾಗಿರುವವನು ಜಾಣನೆಂದು ಅವನು ಹೇಳುತ್ತಾನೆ. ಹೀಗೆ ಯಾರಾದರೂ ಇದ್ದಾರೆಯೇ ಎಂದು ಕೇಳಿದಲ್ಲಿ ಅಂಥವರು ಇದ್ದಾರೆ, ಅವರು ನಮ್ಮ ಕೂಡಲಸಂಗನ ಶರಣರು, ಎಂದು ಬಸವೇಶ್ವರನು ಇಲ್ಲಿ ಉತ್ತರ ಕೊಡುತ್ತಾನೆ.

(೪೮) ನಾದಪ್ರಿಯ ಶಿವನೆಂಬರು. ನಾದಪ್ರಿಯ ಶಿವನಲ್ಲಯ್ಯ. ವೇದಪ್ರಿಯ ಶಿವನೆಂಬರು ವೇದ ಪ್ರಿಯ ಶಿವನಲ್ಲಯ್ಯ. ನಾದವ ಮಾಡಿದ ರಾವಣಂಗೆ ಅರೆಯಾಯುಷ್ಯವಾಯಿತ್ತು. ವೇದವ ನೋದಿದ ಬ್ರಹ್ಮನ ಶಿರ ಹೋಯಿತ್ತು. ನಾದಪ್ರಿಯನು ಅಲ್ಲ. ಭಕ್ತಿಪ್ರಿಯ ನಮ್ಮ ಕೂಡಲಸಂಗಮ ದೇವ.

ಪರಮಾತ್ಮನು ಸಾಮವೇದ ಗಾನ ಇಂಥ ಗಾನಗಳನ್ನು ಪ್ರೀತಿಸುತ್ತಾನೆಂದು ಹೇಳುತ್ತಾರೆ. ಆದರೆ ಆವನು ಇಂಥ ಗಾನಗಳನ್ನು ಪ್ರೀತಿಸುವವನಲ್ಲ. ಶಿವನು ನಾಲ್ಕು ವೇದಗಳನ್ನು ಪ್ರೀತಿಸುವವನೆಂದು ಹೇಳುತ್ತಾರೆ. ಆದರೆ ಅವನು ಅವುಗಳಲ್ಲಿಯೂ ಪ್ರೀತಿಯುಳ್ಳವನಲ್ಲ. ಯಾಕಂದರೆ ರಾವಣನು ಒಮ್ಮೆ ತನ್ನ ಹತ್ತು ತಲೆಯೊಳಗೆ ಒಂದು ತಲೆಯನ್ನು ಕಡಿದು ಅದನ್ನು ಬುರುಡಿಯನ್ನಾಗಿ ಮಾಡಿ ತನ್ನ ಶರೀರದಲ್ಲಿಯ ನರ

ಗಳನ್ನು ಅದಕ್ಕೆ ತಂತಿಗಳಂತೆ ಬಿಗಿದು ಬೆರಳುಗಳಿಂದ ಅದನ್ನು ನುಡಿಸಿದನು. ಹೀಗೆ ಮಾಡಿದರೂ ಅವನು ಕಡೆಗೆ ತನ್ನ ಆಯುಷ್ಯದಲ್ಲಿ ಅರ್ಧವನ್ನು ಕಳೆದುಕೊಂಡನು. ವೇದ ಪಠಣ ಮಾಡುವದರಲ್ಲಿ ಬ್ರಹ್ಮನು ಬಹು ಸಮರ್ಥನು. ಆದರೂ ಅವನು ತನ್ನ ಒಂದು ಶಿರಸ್ಸನ್ನು ಕಳೆದುಕೊಂಡನು. ಹೀಗೆ ಪರಮಾತ್ಮನು ನಾದಪ್ರಿಯನೂ ಅಲ್ಲ, ವೇದಪ್ರಿಯನೂ ಅಲ್ಲ. ಅವನು ಭಕ್ತಿ ಇದ್ದವರನ್ನು ಪ್ರೀತಿಸುತ್ತಾನೆಂದು ಬಸವೇಶ್ವರನು ಈ ವಚನದಲ್ಲಿ ಹೇಳಿದ್ದಾನೆ.

(೪೯) ನರವಿಂಧ್ಯದೊಳಗೆನ್ನ ಹುಲುಗಿಳಿಯ ಮಾಡಿ ಸಲಹುತ್ತ, 'ಶಿವ ಶಿವಾ' ಎಂದೋದಿಸಯ್ಯ. ಭಕ್ತಿ ಎಂಬ ಪಂಜರದೊಳಗಿಕ್ಕಿ ಸಲಹು ಕೂಡಲಸಂಗಮದೇವಾ.

ವಿಂಧ್ಯ = ಅರಣ್ಯ.

ಭೂಮಿಯಲ್ಲಿ ಗಿಡಗಳ ಅರಣ್ಯವು ಹೇಗಿರುತ್ತದೋ ಹಾಗೆಯೇ ಅಲ್ಲಿ ಬರೀ ಜನರ ಅರಣ್ಯವಿರುತ್ತದೆಂದು ನೀವು ಭಾವಿಸಿರಿ. ಜನರ ಈ ಅರಣ್ಯವಾದರೂ ಗಿಡಗಳ ಅರಣ್ಯದಷ್ಟೇ ಭಯಾನಕವಾದದ್ದೆಂದು ಬಸವೇಶ್ವರನ ಅಭಿಪ್ರಾಯವು. ಗಿಡಗಳ ಅರಣ್ಯದಲ್ಲಿ ಒಂದು ಚಿಕ್ಕ ಗಿಳಿಯು ಕುಳಿತುಕೊಂಡು ತನ್ನ ಇಂಪಾದ ದನಿಯಿಂದ 'ಶಿವಶಿವಾ' ಎಂದು ದೇವರ ನಾಮವನ್ನು ಉಚ್ಚರಿಸುತ್ತದೆ. ಹಾಗೆಯೇ ನಾನು ಈ ಜನರ ಅರಣ್ಯದಲ್ಲಿದ್ದುಕೊಂಡು ಪರಮಾತ್ಮನ ನಾಮವನ್ನು ಉಚ್ಚರಿಸುವಂತೆ ಮಾಡು. ಮತ್ತು ಭಕ್ತಿ ಎಂಬ ಪಂಜರದಲ್ಲಿ ನನ್ನನ್ನಿಟ್ಟು ಸಲಹು ಎಂದು ಬಸವೇಶ್ವರನು ಪರಮಾತ್ಮನನ್ನು ಕುರಿತು ಪ್ರಾರ್ಥಿಸುತ್ತಾನೆ.

(೫೦) ನಿಸ್ಸೀಮ ಗುಗ್ಗುಳವನಿಕ್ಕಿದನೊಬ್ಬ ಶರಣ. 'ಉಘೇ, ಚಾಂಗು, ಭಲಾ' ಎಂಬ ಹೊಗೆ ಗಗನವ ತೀವೆ, ಓಹಿಲನೆಂದು ಮೆರೆದ ಸೌರಾಷ್ಟ್ರ ಮಂಡಲದಲ್ಲಿ ಕೂಡಲ ಸಂಗಮದೇವ ಭಕ್ತವತ್ಸಲನಾಗಿ.

ನಿಸ್ಸೀಮ= ಪರಿಪೂರ್ಣ. ತೀವು= ತುಂಬು.
ಸೌರಾಷ್ಟ್ರ = ಗುಜರಾಥದೇಶ.

ಓಹಿಲ ದೇವನೆಂಬ ಶಿವಶರಣನು ಗುಜರಾಥ ದೇಶದಲ್ಲಿದ್ದು ಅವನು ಸೌರಾಷ್ಟ್ರ ಸೋಮನಾಥನಿಗೆ ಅರ್ಪಿಸಬೇಕೆಂದು ತಾನು ಸ್ವತಃ ಗುಗ್ಗುಳ

ಗಿಡಗಳಿದ್ದಲ್ಲಿಗೆ ಪ್ರವಾಸ ಮಾಡಿ ಗುಗ್ಗುಳವನ್ನು ತೆಗೆದುಕೊಂಡು ಬಂದು ಧೂಪ ಹಾಕುವ ಕಾಯಕವನ್ನು ಕೈಕೊಂಡಿದ್ದನು. ಅವನು ಈ ಕಾಯಕ ವನ್ನು ಒಂದೇ ಸವನೆ ೧೨ ವರ್ಷ ನಡಿಸಿದನು. ಇದರಿಂದ ಅವನ ಕೀರ್ತಿಯು ಎಲ್ಲ ಕಡೆಗೂ ಹಬ್ಬಿತು. ಅವನು ಹಾಕಿದ ಗುಗ್ಗುಳದ ಹೊಗೆಯೇ ಹೀಗೆ ಕೀರ್ತಿರೂಪವಾಗಿ ಎಲ್ಲೆಲ್ಲಿಯೂ ತುಂಬಿಕೊಂಡಂತೆ ಭಾಸವಾಗುತ್ತಿತ್ತು. ಜನರು 'ಉಘೇ, ಚಾಂಗು, ಭಲಾ' ಎಂದು ಅವನನ್ನು ಹೊಗಳುವರು. ಈ ಪ್ರಕಾರ ಪರಮಾತ್ಮನು ತನ್ನ ಭಕ್ತರನ್ನು ಪ್ರೀತಿಸಿ ಅವರು ಜನರಲ್ಲಿ ಮೆರೆಯುವಂತೆ ಮಾಡುತ್ತಾನೆಂದು ಬಸವೇಶ್ವರನು ಇಲ್ಲಿ ಹೇಳಿದ್ದಾನೆ. ಬಸವೇಶ್ವರನು ಕಾಯಕದ ಮತ್ತು ಭಕ್ತಿಯ ಮಹತ್ವವು ಎಷ್ಟಿದೆಂಬುದನ್ನು ಇಲ್ಲಿ ಹೇಳಿದ್ದಾನೆ.

(೫೧) ಭಕ್ತರೇ ಸಮರ್ಥರು. ಅಸಮರ್ಥರೆನಲುಂಟೇ ? ಚನ್ನನೆತ್ತ ? ಚೋಳನೆತ್ತ ? ಚನ್ನನೊಡನುಂಡ ಶಿವ. ಆಹಾ ಅಯ್ಯ. ಚನ್ನ ಚೋಳನ ಮನೆಯ ಕಂಪಣಿಗನಯ್ಯ. ಕೂಡಲ ಸಂಗಮದೇವ ಭಕ್ತಿಲಂಪಟನಯ್ಯ

ಕಂಪಣಿಗ= ಕೊಟ್ಟಿಗೆಯ ಮೇಲ್ವಿಚಾರಕ.

ಭಕ್ತರಾದವರು ಶಕ್ತಿವಂತರೆಂದು ತಿಳಿಯಬೇಕು. ಅವರು ಶಕ್ತಿಇಲ್ಲ ದವರೆಂದು ತಿಳಿಯ್ಬಹುದೇ ? ತಿಳಿಯಲಿಕ್ಕೆ ಬರಲಾರದೆಂದು ಬಸವೇಶ್ವರನ ಅಭಿಪ್ರಾಯವು. ಯಾಕಂದರೆ ಅವರು ತೊಡಕುಳ್ಳ ಪ್ರಪಂಚವನ್ನು ಜಯಿಸಬಲ್ಲರು. ಮಾದರ ಕುಲದವನಾದ ಚನ್ನನೆತ್ತ ? ರಾಜನಾದ ಚೋಳನೆತ್ತ ? ಆದರೆ ಪರಮಾತ್ಮನು ಚೋಳರಾಜನನ್ನು ಬಿಟ್ಟು, ಚನ್ನ ಯ್ಯನ ಕೂಡ ಊಟ ಮಾಡಿದನು ? ಆಹಾ, ಆಯ್ಯಾ ಈ ಚನ್ನಯ್ಯನು ಚೋಳ ರಾಜನ ಕೊಟ್ಟಿಗೆಯಲ್ಲಿ ಹುಲ್ಲನ್ನು ತಂದುಹಾಕುವ ಹೊಲೆಯರ ಮೇಲೆ ಇದ್ದವನು. ಆದರೂ ಪರಮಾತ್ಮನು ರಾಜನನ್ನು ಬಿಟ್ಟು ರಾಜನ ಕೇವಲ ಸೇವಕನಾದ ಮತ್ತು ಅಸ್ಪೃಶ್ಯನಾದ ಇಂಥ ಚನ್ನಯ್ಯನನ್ನು ಪ್ರೀತಿಸಿದನು. ಭಕ್ತರು 'ಯಾವ ಜಾತಿಯವರಿದ್ದರೂ ಪರಮಾತ್ಮನು ಅವ ರಲ್ಲಿದ್ದ ಭಕ್ತಿಗಾಗಿ ಅವರನ್ನು ಮೆಚ್ಚುತ್ತಾನೆಂಬ ಭಾವವನ್ನು ಬಸವೇ ಶ್ವರನು ಈ ವಚನದಲ್ಲಿ ಹೇಳಿದ್ದಾನೆ.

(೫೨) ಶಬ್ದ ಸುಖಕ್ಕೆ ಮೆಚ್ಚಿ ಮಾತಿಂಗೆ ಮಾತುಕೊಟ್ಟು ಕೆಟ್ಟೆ ನಯ್ಯ. ಅನುಭಾವ ಅಕ್ಕವೆಯಾಗದೆ ಬೆಬ್ಬನೆ ಬೆರೆತೆನಯ್ಯ. ಅಮೃತದ ಕೊಡನ ತುಂಬಿ ಒಡೆಯ ಹೊಯ್ದು ಅರಸಲುಂಟೇ? ಸ್ವಾಮಿಭೃತ್ಯ ಸಂಬಂಧವೆನ್ನ ಭಕ್ತಿ ಪ್ರತ್ಯುತ್ತರ ನಾಯಕ ನರಕ ಕೂಡಲ ಸಂಗಮ ದೇವಾ.

ಅಕ್ಕವೆಯಾಗು = ಒಳಕೊಳ್ಳು, ಬೆರೆ = ಗರ್ವಿಸು

ಜನರು ಬರೀ ವಾಗ್ವಾದವನ್ನು ಮಾಡುವದನ್ನು ಮೆಚ್ಚಿ ಒಬ್ಬರು ಅಂದದ್ದಕ್ಕೆ ಇನ್ನೊಬ್ಬರು ಉತ್ತರ ಕೊಡುವಲ್ಲಿ ಬಹಳ ಆನಂದ ಪಡುತ್ತಾರೆ. ಇಂಥ ವಾಗ್ವಾದದಿಂದ ಜನರು ಕೆಟ್ಟು ಹೋಗುತ್ತಾರೆ. ಅವರಿಗೆ ಜ್ಞಾನವು ಲಭಿಸದು. ಆದರೆ ವಾಗ್ವಾದಕ್ಕಿಂತ ಅಭಾವವು ಲೇಸೆಂದು ಬಸವೇಶ್ವರನ ಅಭಿಪ್ರಾಯವಿದೆ. ಅನುಭಾವದಲ್ಲಿ ಮೊದಲು ವಿಷಯದ ವಿವೇಚನೆ, ಆ ಮೇಲೆ ಅದರ ತಿಳಿವಳಿಕೆ, ಮುಂದೆ ತಿಳಿವಳಿಕೆಯಂತೆ ನಡೆ ಹೀಗಿರುತ್ತದೆ. ಹೀಗೆ ಅನುಭಾವವನ್ನು ಮಾಡಿ ಅದನ್ನು ಒಳಕೊಳ್ಳದೆ ನಾನು ಗರ್ವಿಸಿ ನಡೆಯುತ್ತೇನೆ. ಹೀಗೆ ನಡೆಯುವವರಿಗೋಸ್ಕರ ಬಸವೇಶ್ವರನು ಇಲ್ಲಿ ಒಂದು ಉದಾಹರಣೆಯನ್ನು ಕೊಟ್ಟಿದ್ದಾನೆ. ನನ್ನ ಬದಿಯಲ್ಲಿ ಅಮೃತವು ತುಂಬಿದ ಕೊಡವೊಂದಿದೆ. ಆದರಲ್ಲಿಯ ಅಮೃತವನ್ನು ನಾನು ಸೇವಿಸದೆ ಕೊಡವು ಒಡೆದು ಹೋಗುವಂತೆ ಅದನ್ನು ಹೊಯ್ದರೆ ಅದರಲ್ಲಿದ್ದ ಅಮೃತವೆಲ್ಲ ಕೆಳಕ್ಕೆ ಬಿದ್ದು ಹೋಗುತ್ತದೆ. ಆಗ ಅದನ್ನು ತಿರುಗಿ ಕೂಡಿಸಲು ಯತ್ನಿಸಿದರೆ ಅದು ಕೈಗೆ ಸಿಕ್ಕಲಾರದು. ಬರೀ ವಾಗ್ವಾದವು ಈ ತೆರನಾಗಿರುತ್ತದೆ. ಅಂದರೆ ನಿಜವೆಂಬುದು ನಮ್ಮ ಸಮೀಪದಲ್ಲಿ ಇದ್ದರೂ ವ್ಯರ್ಥ ವಾದದಿಂದ ಅದನ್ನು ಕಳೆದುಕೊಳ್ಳುತ್ತೇವೆಂಬ ಭಾವವು ಇದರಲ್ಲಿದೆ. ಒಡೆಯನು ಹೇಳಿದಂತೆ ಸೇವಕನ ನಡೆಯಬೇಕು. ಅದರಂತೆ ಭಕ್ತಿಯುಳ್ಳವನು ವಿಶ್ವಾಸವಿಟ್ಟು ನಡೆಯಬೇಕು. ನಡೆಯದೆ ತಿರುಗಿ ಉತ್ತರಕೊಟ್ಟರೆ ಅಘೋರ ನರಕವೆಂದು ಬಸವೇಶ್ವರನು ಇಲ್ಲಿ ಹೇಳಿದ್ದಾನೆ.

(೫೩) ಹರಿವ ನದಿಯ ತೆರನ ಹೋಲಬಲ್ಲರೆ ಭಕ್ತಿ. ಕೂಡಿ ಸುಯಿಧಾನವ ನೀಡಬಲ್ಲರೆ ಭಕ್ತಿ. ನೀಡಿ ಮಿಕ್ಕು ಕಾಯ್ದುಕೊಂಡಿರ

R. N. B. 2554

# ಶಿವಾನುಭವ

—೦೨೦●೦೦೬—

ಸಂಪುಟ ೨೭ ] [ ಸಂಚಿಕೆ ೧೦

ಸಂಪಾದಕರು

ಫ. ಗು. ಹಳಕಟ್ಟಿ

ಬಿ. ಏ. ಎಲ್. ಎಲ್. ಬಿ.



ವಾ. ಚ. ೫-೧೨-೦] ವಿಜಾಪೂರ [ಅಕ್ಟೋಬರ ೧೯೫೩

# ವಿಷಯಾನುಕ್ರಮಣಿಕೆ



---

# ಶಿವಾನುಭವ

ವರ್ಷ ೨೭ | ಅಕ್ಟೋಬರ ೧೯೫೩ | ಸಂಚಿಕೆ ೧೦

## ದೇವನೂರು ಮಠದ
## ಶ್ರೀ ತೋಂಟದಾರ್ಯ ಮಹಾಸ್ವಾಮಿಯವರು.

(ಲೇ:— ಷ. ಬ್ರ. ಶ್ರೀ. ಸಾಹಿತ್ಯರತ್ನ ಗುರುಸಿದ್ಧ ಶಿವಾಚಾರ್ಯ ಸ್ವಾಮಿಗಳು
ನಿರಂಜನಾಲಯ ಗುರುವಿನಪುರಮಠ. )

೧೯೪೮ ರ ಜುಲೈ ತಿಂಗಳು. ಮಂಗಳಕರವಾದ ಉಷಃಕಾಲ. ಸೌಂದರ್ಯವೇ ಮೈವೆತ್ತು ನಿಂತ ಬೆಳವೆಣ್ಣಿನ ಮುಗುಳುನಗೆಯಂತೆ ನಸುಗೆಂಪಾಂತ ಮುಂಬೆಳಗು ಮೂಡಣ ಬಾಂದಳದಲ್ಲಿ ಮಿರುಗುತ್ತಿತ್ತು. ಪಕ್ಕಿಗಳು ತಮ್ಮ ಸುಖನಿದ್ರೆಯಿಂದ ಮೈ ತಿಳಿದು ಒಡಲಿಂದ ಬಂದ ಮರಿಗಳಿಗೆ ಗುಟುಕಿತ್ತು, ಮುದ್ದಿಕ್ಕಿ ರೆಕ್ಕೆಯುಯಕ್ಕಿಕೊಂಡು ಉಲಿಯುತ್ತ ವರಬರುತ್ತಿದ್ದವು. ತೀರದ ಕಲ್ಪವೃಕ್ಷಗಳಲ್ಲಿ ಚಿರಮರ್ಮರನಾದ ಮಾಡುತ್ತಿದ್ದ ತೆಂಗಿನ ಗರಿಗಳಲ್ಲಿ ವಿವಿಧ ನೆಲಪಕ್ಕಿಗಳು ಇಂಚರಗೈಯ್ಯುತ್ತಿದ್ದವು. ನಸು ಬಾಯ್ದೆರೆದ ಮಲ್ಲಿಗೆಯ ಮೊಗ್ಗೆ ಎಲರ ತೀಟಗೆ ಉಲ್ಲಾಸಗೊಂಡು ಬಳಕುವ ಲಲನೆಯಂತೆ ಉಯ್ಯಾಲೆಯಾಡುತ್ತಿತ್ತು. ಬಂಡನುಣ್ಣಲು ಮಲೆತ ದುಂಬಿ ಗುಲಾಬಿಯ ವಕ್ಷಸ್ಥಳಕ್ಕೆ ನೆಗೆದು ಝಂಗವ ಹೀರಿ ಆ ಸುಂದರ ಮಧು ಪುಷ್ಪವನ್ನು ನಿಸ್ತೇಜ ಮಾಡುತ್ತಿತ್ತು. ಆಗ ತಾನೆ ವಠಬಂದ ಶಶಿಯ ಹೊಂಬೆಳಗು ಪಚ್ಚನೆಯ ಗಿಡಮರಗಳ ಮೇಲೆ ಬಿದ್ದು ಸ್ವರ್ಗೀಯ ಸೌಂದರ್ಯವನ್ನುಂಟುಮಾಡಿತ್ತು. ಉಷಾರಾಣಿಯ ಕಡುಚಲ್ವ ರೂಪು ಕಣ್ಮನಗಳಿಗೆ ಹಬ್ಬವನ್ನುಂಟುಮಾಡಿತ್ತು. ಇಂತಹ ಅಪೂರ್ವ ಸನ್ನಿವೇಶದಲ್ಲಿ ದೇವನೂರು ಶ್ರೀಮಠದ ಶಾಖಾಮಠವಾದ ಮೈಸೂರಿನ ಕುದೇರು ಮಠವನ್ನು ಪ್ರವೇಶಮಾಡಿದೆ.

ಸಾರಣಿ ಕಾರಣಿಗಳಿಂದ ಹೊಂದಗೊಳಿಸಲ್ಪಟ್ಟ ದೊಡ್ಡ ಹಜಾರ. ಪಶ್ಚಿಮಾಭಿಮುಖವಾಗಿ ಒಂದು ಮಂಚ. ಮಂಚದಮೇಲೆ ಷಟ್‌ಸ್ಥಲಮೂರ್ತಿ ಸುಖಾಸನದಲ್ಲಿ ಕುಳಿತಿತ್ತು. ಶಾಂತಿಯೇ ಮೈವೆತ್ತುನಿಂತ. ನಿರಾಡಂಬರ ನಿರಂಜನಮೂರ್ತಿ ಮೂರ್ತಮಾಡಿತ್ತು. ಓಂಕಾರ ರೂಪಿ ನಾದ ಬಿಂದು ಕಲೆಗಳ ಅನುವರಿತು ದಿವ್ಯ ತೇಜಸ್ಸಿನಿಂದ ರಾರಾಜಿಸುತ್ತಿತ್ತು. ವಯಸ್ಸುಗಳಿತಿದ್ದರೂ ಅಪರಂಜಿಯಂತೆ ದೇಹಕಾಂತಿ. ವಿಶಾಲವಾದ ಫಾಲಪ್ರದೇಶ. ಜ್ಯೋತಿಯಲ್ಲಿ ಕೂಡಿ ನಿಬ್ಬೆರಗಾದ ಚಕ್ಷುಗಳು. ಅಹಾ! ಆ ನೇತ್ರಗಳ ತೇಜಸ್ಸು, ಆ ಮೊಗದ ಮುಗುಳ್ನಗೆ ಆ ಪ್ರಸನ್ನ ಪ್ರಶಾಂತ ಮುಖಮಂಡಲ! ಎನಿತು ಕಾಂತಿ ಆ ಫಾಲಪ್ರದೇಶದಲ್ಲಿ. ಎನಿತುಕಾಂತಿ ಆನಿಶಾಂತ ಸುಂದರ ಬಂಧುರ ವ್ಯಕ್ತಿತ್ವದಲ್ಲಿ! "ಸ್ವಾರ್ಥೋಯಸ್ಯಪರಾರ್ಥ ಏವಸ ಪುಮಾನ್ ಏಕ: ಸತಾಂ ಅಗ್ರಣೀಃ" ಎಂಬ ನುಡಿ ಈ ಮಹನೀಯನ ಮುಖಮಂಡಲದಲ್ಲಿ ಪ್ರಜ್ವಲಿಸಿತು. ಸೋಜ್ವಲಿಸಿತು. ನಿಷ್ಕಾಮಿ ಕಲ್ಯಾಣಕ್ರಿಯಾಪ್ರೇಮಿಯಲ್ಲಿ ದೀನದರಿದ್ರರ ಬಗ್ಗೆ ದಯಾಂತಃಕರಣ ತುಂಬಿತುಳುಕುತ್ತಿದೆ. ಬರಿಯ ಮಾತಿನದಯೆಯಲ್ಲದೆ, ಪ್ರೋತ್ಸಾಹವಲ್ಲದೆ-ದುಃಖಿಗಳ ಕಷ್ಟಸುಖವ ವಿಚಾರಿಸಿ, ಸಂತಾಪವ ನಿವಾರಿಸಿ ನಿಜ ಬಟ್ಟೆಯೊಳು ಕೈಯಿಡಿದೊಯ್ಯುವ ಔದಾರ್ಯ ಕಂಗೊಳಿಸಿತು. ತನ್ನ ತನವನರಿಯದೆ ಬಳಲಿ ಬೆಂಡಾಗಿ ದಾರಿದಪ್ಪಿ ಕಂದರದಲ್ಲಿ ಬೀಳುತ್ತಿರುವ ಪಶುಸಮಾನ ಮಾನವರನ್ನು ಕರಪಿಡಿದು ಸಲಹಿ-ತಕ್ಕೈಸಿ ನಿಜಾನಂದದ ನಿಲಯದತ್ತ ಕರೆದೊಯ್ಯುವ ಪ್ರತಿಭೆ ವಿರಾಜಿಸಿತು. ಅಸದೃಶವಾದ ಸ್ವಾರ್ಥತ್ಯಾಗ, ಅಚಲಿತ ಧೈರ್ಯ, ಅಖಂಡವಾದ ಸಾಹಸ, ಅಪಾರವಾದ ಕಷ್ಟಸಹಿಷ್ಣುತೆ, ಅಗಣಿತ ಗುಣಗ್ರಾಹಕತೆ, ಉದಾತ್ತ ಉದ್ದೇಶ, ಉನ್ನತ ಆಸಕ್ತಿ, ಕೊನೆಯಿಲ್ಲದ ಕುತೂಹಲದಿಂದೊಡಗೂಡಿದ ಅನುಪಮ ಜಗಜ್ಯೋತಿಯೊಂದನ್ನು ಕಂಡೆ!! ಅವರೆ ನಾ ಕಂಡ" ಅಭಿನವ ಚನ್ನಬಸವೇಶ ಬ॥ ಶ್ರೀ॥ ವೇ॥ ತೋಂಟದಾರ್ಯ ಮಹಾಸ್ವಾಮಿಯವರು,-ದೇವನೂರು.

ಕಂಡೆನ್ನ ಕಂಗಳು ಸಾರ್ಥಕವಾಯಿತು, ಜನ್ಮಸಾರ್ಥಕವಾಯಿತು. ಹೃದಯ ಹಂದರದಲ್ಲಿ ಮೂಡಿದ್ದ ಕಪ್ಪು ಛಾಯೆ ಪಸರಿಸಿತು. ಸೂರ್ಯನನ್ನು ಕಂಡ ಕಮಲದಂತೆ ಹೃದಯ ಕಮಲ ವಿಕಸಿತವಾಯಿತು. ವಸಂತ ಮಾಸದ ಮಾಮರವ ಕಂಡಂತಾಯಿತು. ಬಾಳಿನ ಸಾರ್ಥಕತೆ ಸಾರಿದಂತಾಯ್ತು. ಹರುಷದ ಹೊಳೆ ಹರಿಯಿತು. ಚಂನಿರನು ಹೊರ

ಗಿನ ಸೃಷ್ಟಿಯನ್ನು ಬೆಳಗಿದಂತೆ ಚಿತ್ ಜ್ಯೋತಿಯು ಚಿತ್ತಪ್ರಪಂಚದಲ್ಲಿ ಬೆಳಗಿತು. ವಿಲಕ್ಷಣವಾದ ಶಕ್ತಿಯು ಮೈಗೂಡಿದಂತಾಯ್ತು. ಎಲ್ಲ ಯೋಚನೆಯೂ ಬಯಲಾಗಿ ಆತ್ಮಸ್ಫೂರ್ತಿ ಸ್ಫುರಿಸಿತು. "ನಿಮ್ಮ ನೋಟವನಂತ ಸುಖ. ನಿಮ್ಮ ಕೂಟ ಪರಮ ಸುಖವಯ್ಯ. ಅಷ್ಟ ಕೋಟಿ ರೋಮಂಗಳೆಲ್ಲ ಕಂಗಳಾಗಿ ನೋಡುತ್ತಿದ್ದೆನಯ್ಯ." ಎಂಬ ಅಣ್ಣನ ಅಮೃತವಾಣಿ ಅರಿವಿಲ್ಲದಂತೆ ವರ ಬಂತು !!

**ಹಿನ್ನೆಲೆ:—** ಸುಮಾರು ೬೦ ವರ್ಷಗಳ ಹಿಂದೆ ಮೈಸೂರ ದೇಶದ ದಕ್ಷಿಣ ಭಾಗದ ವೀರಶೈವ ಸಮಾಜವು ಮಹಾಂಧಕಾರದಲ್ಲಿ ಮುಳುಗಿತ್ತು. ಮಹಾ ರೋಗಕ್ಕೆ ಬಲಿಯಾಗಿತ್ತು. ಆಚಾರವು ಮರೆಯಾಗಿ ಅತ್ಯಾಚಾರವು ಅತಿಯಾಗಿದ್ದವು. ಜಂಗಮರು ತಮ್ಮ ತನವ ಮರೆತು ಗೇಣು ಹೊಟ್ಟೆಗಾಗಿ ವೇಷಧಾರಿಗಳಾಗಿ ಅಲೆಯುತ್ತಿದ್ದರು. ತಮ್ಮಲ್ಲಿರುವ ಪರಿಶುದ್ಧವಾದ, ಪರಾಕಾಷ್ಠವಾದ ಶಿವಾನುಭವ ತತ್ವವನ್ನು ಮರೆತು ಕುಳಿತಿದ್ದರು. ಮತ್ತೊಂದು ಕೈಗೆಟುಕದ ನಿಲುಕದ ತತ್ವಕ್ಕೆ ತಲೆಬಾಗಿದ್ದರು. ಉತ್ಸಾಹ ಜನಕವೂ, ಉಲ್ಲಾಸ ಜನಕವೂ ಆದ ತನ್ನ ಅಪಾರ ಸಾಹಿತ್ಯ, ಸಂಸ್ಕೃತಿಗಳ ಮರೆತು ಸತ್ವಹೀನ ಪರಸಂಸ್ಕೃತಿಗೆ ಬಾಹ್ನೀರು ಕರೆಯುತ್ತಿದ್ದರು. ಉತ್ಕ್ರಾಂತಿಯುತವು ಉಜ್ವಲ ಕಾಂತಿ ಸಹಿತವು ಆದ ಸಂಸ್ಕೃತಿಯು ತಮಗಿದ್ದರೂ ಕಂಡರಿಯದಂತಿದ್ದರು. ಅಷ್ಟಾವರಣಗಳು ಮಾಯವಾಗಿದ್ದವು. ಅಶಾಂತಿ, ಕ್ರೌರ್ಯ ದರ್ಪ ಮೊದಲಾದ ಕೆಟ್ಟಗುಣಗಳು ಮನೆಮಾಡಿಕೊಂಡಿದ್ದವು. ಪಂಚಾಚಾರಗಳು ಮರೆಯಾಗಿದ್ದವು. ಷಡ್ವರ್ಗಗಳು ಪ್ರಬಲಗೊಂಡಿದ್ದವು. ಸದ್ಧರ್ಮ ಸದಾಚಾರಗಳು ನಿರ್ನಾಮವಾಗಿದ್ದವು. ಅಂಧಾನುಕರಣ ಅಧಿಕವಾಗಿತ್ತು. ಆಸ್ತಿಕ ಭಾವನೆಯು ನಾಸ್ತಿಯಾಗಿತ್ತು. ಭಕ್ತರು ಭಕ್ತಿಯ ಮರೆದು "ಭುಕ್ತ"ರಾಗಿದ್ದರು. ಮಹೇಶ್ವರರು ನಿಷ್ಠೆಗೆ ತಿಲಾಂಜಲಿಯಿತ್ತಿದ್ದರು. ಪ್ರಾಣಲಿಂಗಿಗಳು ಇಷ್ಟ, ಪ್ರಾಣ, ಭಾವಲಿಂಗಗಳಿಂದ ದೂರಸರಿದಿದ್ದರು. ಶರಣರಿಗೆ ಅನುಭಾವದ ಗಂಧವೇಯಿರಲಿಲ್ಲ. ಐಕ್ಯರು "ಐಕ್ಯ"ರಾಗಿದ್ದರು. ಸಮಾಜವು ಕುಂಠಿತವಾಯಿತು. ಹೀಗೆ ಸಮಾಜವು ಅಜ್ಞಾನಾಂಧಕಾರದಲ್ಲಿ ಮುಳಿಗಿ ಒಟ್ಟೆಗಾಣದೆ ಕರಿತಪಿಸಿ ಕೈಹಿಡಿದು ತಕ್ಕೈಸಿ ಸಲಹುವ ಆಶ್ರಯದಾತನಿಗಾಗಿ ಮೊರೆಯಿಟ್ಟಿತು. ಈ ದೀನ ಕರೆಗೆ 'ಓ' ಗೊಟ್ಟು

ಆ ಸಂಕಟ ಸಮಯದಲ್ಲಿ ಉಜ್ವಲ ಮೂರ್ತಿಯು ಆಗಮನವಾಯಿತು. ಅಂಧಕಾರ ಹರಿಯಿತು. ಭವರೋಗ ನಿವಾರಣೆಯಾಯಿತು. ನಾಶವಾಗಲಿದ್ದ ವೀರಶೈವ ಸಮಾಜವು ಬಹು ಗೌರವವುಳ್ಳದ್ದಾಯಿತು. ಇವರ ಸತತ ಪ್ರಯತ್ನದಿಂದ ತನ್ನ ಅಜ್ಞಾನಾಂಧಕಾರದ ಪರೆಯನ್ನು ಕಳಚಿಕೊಂಡಿತು. ಇವರ ಅಂತಃಕರುಣದ ಕಳಕಳಿಯಿಂದ, ಜ್ಞಾನಾಮೃತದ ಸ್ವಾದದಿಂದ, ಸದ್ಬುದ್ಧಿಯ ಬೋಧನಾ ಸಕ್ತಿಯಿಂದ ಕೊಳಚೆಯಲ್ಲಿ ಬಿದ್ದು ಮಳಾಡುತ್ತಿದ್ದ ವೀರಶೈವ ಸಮಾಜವು ಚೇತರಿಸಿಕೊಂಡೆದ್ದು ಕರ್ನಾಟಕದಲ್ಲಿ ಯಾವ ಕಾರ್ಯವನ್ನಾದರೂ ಮಾಡಬಲ್ಲೆನೆಂದು ಎದೆ ಮುಂದೆ ಚಾಚಿ ನಿಲ್ಲುವಂತಾಯಿತು. ಹಾಗಾದಲ್ಲಿ ಅಂತಹ ಅಮೋಘ ಶಕ್ತಿಗೆ ಕಾರಣರಾರೆಂದು ಕೇಳುವಿರಾ ? ಹೌದು; ಅವರೇ ರೇಣುಕಾವತಾರಿ ಷಟ್‌ಚಕ್ರಿ ಶ್ರೀ ಗುರುಸ್ವಾಮಿಯವರು.

ಶ್ರೀ ಗುರು ಸ್ವಾಮಿಯವರು ಉತ್ತರದಿಂದ ಬಂದವರು. ಶಿಥಿಲಗೊಂಡಿದ್ದ ಸಮಾಜವನ್ನುದ್ಧರಿಸಿದರು. ಭಕ್ತಿಯ ಮೂಲವನ್ನರುಹಿದರು. ಅಷ್ಟಾವರಣದ ಮಹತ್ತನ್ನು ವಿಶದಪಡಿಸಿದರು. ತ್ರಿವಿಧ ದಾಸೋಹ ಸಂಪತ್ತನ್ನು ವ್ಯಕ್ತಗೊಳಿಸಿದರು. ಷಡ್‌ವರ್ಗಗಳ ಹೀನತನವ ಕಾಣಿಸಿ ಷಡ್‌ಲಿಂಗಗಳಲ್ಲಿ ಮನ ನಿಲ್ಲುವಂತೆ ಮಾಡಿದರು. ಸ್ತ್ರೀ ಪುರುಷ ಬೇಧವಿಲ್ಲದೆ ಎಲ್ಲರಿಗೂ ಉಪದೇಶವಿತ್ತರು. " ಅವಗುಣವೇ ಹೊಲೆಯಲ್ಲವೆ ?" ಅಂದ ಹಾಗೆ ಗುಣಶಾಲಿಯಾದ, ಆಚಾರ ನಿಷ್ಠನಾದ, ತತ್ವಗಾಮಿಯಾದ ಅಂತ್ಯಜನಿಗೂ ಸಹ ತಮ್ಮ ಪಾದದಡಿಯಲ್ಲಿ ಆಶ್ರಯವಿತ್ತರು. ಧರ್ಮಾಂಧರಿಗೆ " ಕೊಲ್ಲುವವನೇ ಮಾದಿಗ. ಹೊಲಸು ತಿಂಬುವನೇ ಹೊಲೆಯ. ಆವಂದಿರ ಕುಲವೋ .... ... ?" ಎಂದು ಜಗದಣ್ಣನ ಅಮೃತವಾಣಿಯನ್ನು ಉದಹರಿಸುತ್ತಿದ್ದರು. ಹಾಗು ಬುದ್ಧಿಗಲಿಸಿದರು. ಅನಂತ ಪವಾಡ ಪುರುಷರೆನಿಸಿಕೊಂಡರು. ಅಸಮಾನ ದಿವ್ಯ ಪ್ರಭೆಯಾಗಿ ಕಂಗೊಳಿಸಿದರು. ಈ ದಿವ್ಯ ಪುರುಷನ ಅದ್ಭುತ ಕಾರ್ಯ, ಅಸಾಧ್ಯ ವ್ಯಕ್ತಿತ್ವ ಅವರ್ಣನೀಯ.

ಯಾವ ಮಹನೀಯನು ವೀರಶೈವ ಸಮಾಜದಲ್ಲಿ ಅದ್ಭುತ ಕ್ರಾಂತಿಯನ್ನುಂಟು ಮಾಡಿದನೋ, ಯಾವ ಮಹನೀಯನು ದಾರಿಗಾಣದವರಿಗೆ ದಾರಿ ತೋರಿಸಿದನೋ, ಸಮಾಜವೇ ನಾನು, ನಾನೇ ಸಮಾಜವೆಂಬ

ಅಬೇಧ ಬುದ್ಧಿಯಿಂದ ಎಡಬಿಡದೆ ದುಡಿದು ಅಜರಾಮರ ಕೀರ್ತಿಯನ್ನು ಪಡೆದ ರೇಣುಕಾವತಾರಿ ಶ್ರೀಗುರು ಸ್ವಾಮಿಯವರ ಕರಸಂಜಾತರೇ ಶ್ರೀತೋಂಟದಾರ್ಯ ಮಹಾಸ್ವಾಮಿಯವರು.

ದೊಡ್ಡ ದೇಹ:— ದೊಡ್ಡ ಹೃದಯ. ತುಂಬು ಗಾಂಭೀರ್ಯದಿಂದ ತುಂಬಿ ತುಳುಕುವ ಪ್ರಫುಲ್ಲ ಮುಖಮುದ್ರೆ. ದಾನ ದಮನ ದಯೆಯಿಂದೊಡಗೂಡಿದ ಮನ. ಪರಮ ಸಹಿಷ್ಣುತೆಯಿಂದೊಡಗೂಡಿದ ಬುದ್ಧಿ. ಸಕಲ ಜೀವರಾಶಿಗೂ ಲೇಸಬಯಸುವ ಕರುಳು. ನಯ, ವಿನಯ ಸಾತ್ವಿಕ ಸ್ವಾಭಿಮಾನ. ಕಾಂತಿ ಪೂರ್ಣವಾದ ಸದೃಢ ಕಾಯ. ಭಸ್ಮಧೂಳಿತ ಪ್ರಶಾಂತವದನ. ಸರಸ ಸಜ್ಜನತೆ ಸ್ನೇಹ ಪೂರ್ಣ ದೃಷ್ಟಿ! ತಲೆಗೆ ಕಾವಿಯ ವಸ್ತ್ರ, ಮೈಗೆ ಕಾವಿಯ ಬನೀನು, ನಡುವಿಗೆ ಸಣ್ಣದಾದ ಪಂಜೆ. ಕರದಲ್ಲಿ ಶರಣರ ಗ್ರಂಥ. ಇದು ಸ್ವಾಮಿಯವರ ಸಂಪತ್ತು. ಲೋಕಕ್ಕೂ ಅವರಿಗೂ ಇರುವ ಸಂಬಂಧ. ಈ ದೈಹಿಕ ಜೀವನದಲ್ಲಿ ಇದಕ್ಕಿಂತಲೂ ಮಿಗಿಲಾದ ಸಂಪದ ಬೇಕೆ ?

ಸ್ವಾಮಿಯವರ ಜೀವನ ಮಹಾತ್ಮ ಗಾಂಧಿಯವರಂತೆ ಸಾಧಾರಣವಾದುದು; ಅಸಾಧಾರಣವಾದುದು; ಸಹಜವಾದುದು. ಆಡಂಬರ ಆತ್ಮಸ್ತುತಿಗೆ ಜಾಗವಿಲ್ಲ. "ಆತ್ಮಸ್ತುತಿಗಿಂತಲು ಆತ್ಮಘಾತಕತನ ಬೇರೊಂದಿಲ್ಲ. ಮುಖಸ್ತುತಿಗೆ ಮೆಚ್ಚಿದವನು ಸಮಾಜ ಸೇವೆಯನ್ನೆಸಗಲಾರ. ಮುಖಸ್ತುತಿಗೆ ಮೆಚ್ಚಿದವರು ಮತ್ತೊಬ್ಬರ ಸ್ತುತಿಯ ಎಂದಿಗೂ ಸಹಿಸಲಾರರು. ಬದಲು ಮತ್ತೊಬ್ಬರ ತೆಗಳಿಕೆಯಲ್ಲಿ ಕಾಲ ಕಳೆಯಹತ್ತುವರು. ಇದು ಮಾನವ ಧರ್ಮವಲ್ಲ; ಮಹೋನ್ನತಿಯ ಕುರುಹಲ್ಲ." ಎಂದು ಶ್ರೀಗಳವರ ಅಮೃತಮಯ ಆದೇಶ.

ಪ್ರೇಮ ಸಹಿಷ್ಣುತೆಯಲ್ಲಿ ರಾಮಕೃಷ್ಣ ಪರಮಹಂಸರಂತೆ "ಮೇಲು, ಕೀಳು ಎಂಬ ಭಾವನೆಯು ತೊಲಗಬೇಕು. ಪರಸ್ಪರ ಸೌಹಾರ್ದತೆಯಿರಬೇಕು. ದಾರಿಗಳು ಅನಂತವಾದರೂ ಎಲ್ಲರ ಗುರಿಯೂ ಒಂದೆಡೆಗೆ" ಎಂದು ಅಪ್ಪಣೆ ಕೊಡಿಸುವರು. ಶ್ರೀಗಳವರ ನುಡಿಗಳಲ್ಲಿ ಮಂತ್ರ ಶಕ್ತಿ ಸ್ವತಂತ್ರ ಶಕ್ತಿಯಿದೆ. ಮಂದರದಂತೆ ಅಚಲವಾಗಿವೆ; ಮಾಂದಳಿರಂತೆ ಮೃದುವಾಗಿದೆ. ಮನೋಹರವಾಗಿವೆ.

ಸ್ವಾಮಿಯವರ ಉಪನ್ಯಾಸವೆಂದರೆ ಭಕ್ತರಿಗೆ ಅಮೃತಸಾರಿದಂತೆ. ಎಣಿಕೆ ಮಾಡಲಾಗದಷ್ಟು ಭಕ್ತರು ನೆರೆಯುತ್ತಾರೆ. ಉದ್ದನಾದ ಸಂಸ್ಕೃತ ಪದಗಳನ್ನು ಉಪಯೋಗಿಸದೆ ಸರಳವೂ ಸುಂದರವೂ ಆದ ಶರಣರ ನುಡಿಗಳನ್ನು ಬಿತ್ತರಿಸಿ ಪಂಡಿತ ಪಾಮರರೆಲ್ಲರೂ ತಲೆದೂಗುವಂತೆ ಮಾಡುತ್ತಾರೆ. ಉಪನ್ಯಾಸದಲ್ಲಿ ಸಾಮಾಜಿಕ, ಧಾರ್ಮಿಕ, ಶೈಕ್ಷಣಿಕ, ಕರ್ನಾಟಕ ಏಕೀಕರಣ, ವಿಜ್ಞಾನದ ಮಾತು ಬರುತ್ತದೆ. ಎಲ್ಲಾ ವಿಷಯ್ಯಗಳು ಗೊತ್ತು. ಒಂದು ನುಡಿ ಹೃದಯದಿಂದ ನೇರವಾಗಿ ಬಂದು ಹೃದಯಂಹಂದರದಲ್ಲಿ ಅಚ್ಚೊತ್ತುತ್ತವೆ. ಸ್ಪರ್ಶಮಣಿಯಂತೆ ಸರ್ವನನ್ನು ಆಕರ್ಷಿಸುತ್ತವೆ.

ಭಕ್ತರು ಸುತ್ತನೆರೆದಿದ್ದಾರೆ. "ವೀರಶೈವ" ಎಂಬ ವಿಷಯವಾಗಿ ಉಪದೇಶಮೀಯುತ್ತಿದ್ದಾರೆ. ಅನುಭವ ಪೂರ್ಣವಾಗಿ ಸಾಗಿದೆ. "ಶಕ್ತಿ ವಿಶಿಷ್ಟಾದ್ವೈತ ಸಿದ್ಧಾಂತ ಅಥವಾ ವೀರಶೈವ ಸಿದ್ಧಾಂತವು ಜ್ಞಾನ, ಕ್ರಿಯೆಗಳಿಂದ ಕೂಡಿದುದು. ಒಂದು ಪಕ್ಷಿಯು ಸಂಚಾರ ಮಾಡಲು ಎರಡು ರೆಕ್ಕೆಗಳು ಅತ್ಯವಶ್ಯಕವಾಗಿರುವಂತೆ ಮೋಕ್ಷ ಪಥದಲ್ಲಿ ಗಮಿಸುವ ಜೀವನಿಗಾದರೂ ಕ್ರಿಯಜ್ಞಾನಗಳೆಂಬೆರಡು ರೆಕ್ಕೆಗಳು ಬೇಕೇಬೇಕು. "ಶಿಖಿಕರ್ಪೂರ ಯೋಗವತ್ ಮುಕ್ತಿ ಶಿವಯೋಗಿನಾಂ" ಎಂಬ ವಾಕ್ಯದಲ್ಲಿ ಶಕ್ತಿವಿಶಿಷ್ಟಾದ್ವೈತ ಸಿದ್ಧಾಂತ ರಹಸ್ಯವು ಗರ್ಭೀಕರಿಸಿಕೊಂಡಿದೆ.

ಸವೆಯುತ್ತಿರುವ ದೇಹರೂಪವಾದ ಕರ್ಪೂರವು ಸುಡುವ ಕ್ಷಣದಲ್ಲಿ ತೊಡಗಿದ ಕ್ರಿಯಾರೂಪವಾದ ಅಗ್ನಿಯೂ ಅಲ್ಲಿ ಹೊಳೆಯುತ್ತಿರುವ ಜ್ಞಾನರೂಪವಾದ ಪ್ರಕಾಶವೂ ಹ್ಯಾಗೆ ಏಕಕಾಲಕ್ಕೆ ಲಯುವಾಗುತ್ತವೆಯೋ ಹಾಗೆಯೇ ಆತ್ಮನಿಗೆ ಈ ಜಡದೇಹವು ಎಲ್ಲಿಯವರವಿಗೆ ವಂದಿಯಾಗಿರುವದೋ ಅಲ್ಲಿಯವರಿಗೂ ಕ್ರಿಯಾಜ್ಞಾನಗಳೆರಡೂ ಬೇಕೇಬೇಕು. ಅಂದರೆ "ಕ್ರಿಯೆಯೇ ಜ್ಞಾನ; ಜ್ಞಾನವೇ ಕ್ರಿಯೆ. ಜ್ಞಾನವೆಂದರೆ ತಿಳಿಯುವುದು. ಕ್ರಿಯೆಯೆಂದರೆ ಆಚರಿಸುವುದು. ಪರಸ್ತ್ರೀ ಭೋಗಿಸಬಾರದೆಂಬುದೇ ಜ್ಞಾನ, ಅದರಂತೆ ಆಚರಿಸುವದೇ ಕ್ರಿಯೆ" ಎಂಬ ಬಸವಣ್ಣನವರ ವಚನಾಮೃತದಂತೆ ಕ್ರಿಯೆಯಿಂದ ಕೂಡಿದ ಜ್ಞಾನವನ್ನೂ ಜ್ಞಾನದಿಂದ ಕೂಡಿದ ಕ್ರಿಯೆಯನ್ನೂ ತಿಳಿದು ಆಚರಿಸುವದೇ ಲಿಂಗಾಯತ ಧರ್ಮದ ಧ್ಯೇಯವಾಗಿರುವದು.

ಜೀವನದಲ್ಲಿ ಪ್ರತ್ಯಕ್ಷವಾಗಿ ತೋರುತ್ತಿರುವ ಅಜ್ಞಾನವೇ ಮೊದಲಾದ ದೋಷಗಳು ನಾಶವಾಗಿ ಪರಮಾತ್ಮನಲ್ಲಿ ಸಮಾನವಾದ ಭಾವವನ್ನು ಹೊಂದುವುದಕ್ಕೆ ಜ್ಞಾನಿಯಾದ ಗುರುವಿನ ಸನ್ನಿಧಿಯನ್ನು ಸೇರಬೇಕು. ಗುರುವನ್ನ ಸೇರಿ ಜೀವನಿಗೆ ಆಶ್ರಯವಾದ ಸ್ಥೂಲ, ಸೂಕ್ಷ್ಮಗಳೆಂಬ ತನುತ್ರಯಗಳು ವೇಧಾ ಕ್ರಿಯಾ ಮನುವೆಂಬ ಶಿವದೀಕ್ಷೆಯಿಂದ ಶುದ್ಧವಾಗಿ ಇಷ್ಟ ಪ್ರಾಣ ಭಾವಗಳೆಂಬ ಲಿಂಗತ್ರಯಗಳಿಂದ ಸಂಯುಕ್ತವಾಗಿ ದೇಹಿಯು ಅಷ್ಟಾವರಣ, ಅಪಂಚಾಚಾರ ಷಟ್‌ಸ್ಥಲ ಮತ್ತು ಲಿಂಗಾಂಗ ಸಾಮರಸ್ಯಗಳಲ್ಲಿ ತಿಳುವಳಿಕೆಯುಳ್ಳವನಾಗಿರಬೇಕು.

**ಯೋಗದ ವಿಷಯವಾಗಿ:—** ಯೋಗಗಳಲ್ಲಿ ಶಿವಯೋಗವೇ ಅಧಿಕವಾದುದು. ಜೀವಕೋಟಿಯು ಕರ್ಮಚಕ್ರದಲ್ಲಿ ಸುತ್ತಿ ನಾನು ನನ್ನದು ಎಂಬ ಅಹಂಕಾರಮಮಕಾರಕ್ಕೊಳಗಾಗಿ ಸುಖ ದುಃಖದ್ವಂದ್ವ ಗಳಲ್ಲಿ ಬೆರೆತು ದೋಷ ಮಿಶ್ರವಾದ ಬಹಿರ್ಮುಖವಾದ ಇಂದ್ರಿಯಗಳನ್ನು ಬಂಧಿಸಿ ಅಂತ:ರ್ಮುಖನಾಗಿ ಮಾಡಿ ಲಿಂಗಾಂಗ ಸಂಯೋಗವಾಗಲು ಶಿವಯೋಗವೇ ಮುಖ್ಯಸಾಧನವು.

ಆತ್ಮಾನಂದವನ್ನು ದೊರಕಿಸಲು ಯೋಗವು ಮುಖ್ಯ ಸಾಧನವು. ಅದು ನಮ್ಮ ಪೌರ್ವಾತ್ಯರ ಅತುಲ ಸಂಪತ್ತು. ಕೇವಲ ಭೌತಿಕ ಸುಧಾರಣೆಯಿಂದ ಈ ಜಗತ್ತನ್ನೇ ದಂಗುಬಡಿಸುವಂಥ ಅನೇಕ ದೃಷ್ಟ ಫಲ ಗಳುಂಟಾದರೂ ಅವುಗಳಿಂದ ಮತ್ತಷ್ಟು ಮನೋಬಯಕೆಗಳು ಮಿಗಿಲಾಗಿ ಅದನ್ನು ಪೂರ್ಣಗೊಳಿಸುವುದಕ್ಕಾಗಿ ಪಾಟುಪಡಬೇಕಾಗುವುದೇ ವರತು ಶಾಂತಿಯು ದೊರೆಯುವದಿಲ್ಲ. ಶಾಶ್ವತ ಶಾಂತಿಯು ಕನಕ ಕಾಂತಾದಿ ವಿಷಯಗಳಲ್ಲಿಲ್ಲ. ಅದಿರುವುದು ಆತ್ಮನಲ್ಲಿ. ಅದನ್ನು ತೋರಿಸುವವನು ಆತ್ಮಾರಾಮನು. ಅದು ದೊರೆಯುವದು ವಿಷಯ ವ್ಯಾಮೋಹವನ್ನಳಿದ ಶಿವಯೋಗ ಸಾಧನೆಯಿಂದ .... "ಯುಜ್ಯುಕೇsನೇ ನೇತಿಯೋಗಃ" ಎಂಬಂತೆ ಯಾವ ಸಾಧನದಿಂದ ಜೀವ ಪರಮರ ಐಕ್ಯವಾಗುವುದೋ ಅದು ಯೋಗವು. ನೀರಿನಲ್ಲಿ ನೀರು, ಹಾಲಿನಲ್ಲಿ ಹಾಲು ಬೆರೆದು ಬೇರೆಯಾಗಿ ಕಾಣದಂತೆ ನಿತ್ಯ ಶುದ್ಧ ಪರಮಾತ್ಮನಲ್ಲಿ ಜೀವನು ಯೋಗ ಸಾಧನೆಯಿಂದ ತನ್ನ ಅಶುದ್ಧತೆಯನ್ನು ಕಳೆದುಕೊಂಡು ಕೂಡಿ ಎರಡೆ ನಿಸದಿರುವುದೇ ಯೋಗದ ಫಲವು. ಶಿವಯೋಗವಿಲ್ಲದೆ ವೀರಶೈವವು

ಸಿದ್ಧಿಸುವದಿಲ್ಲ. ಶಿವಸಂಬಂಧಿಯಾದ ಜ್ಞಾನಾಚಾರಗಳಲ್ಲಿ ತತ್ಪರನಾದವನೇ ವೀರಶೈವನು. ನಿಜವಾದ ಲಿಂಗಾಂಗಿಯು ತಾ ಮುಟ್ಟುವ ತಟ್ಟುವ ಮೂಸುವ ಪ್ರತಿಯೊಂದನ್ನೂ ಲಿಂಗಕ್ಕರ್ಪಿಸಬೇಕು. "ಲಿಂಗಕ್ಕಲ್ಲದೆ ಮಾಡೆನೀಮನವನು; ಜಂಗಮಕ್ಕಲ್ಲದೆ ಮಾಡೆನೀ ಧನದನು; ಪ್ರಸಾದಕ್ಕಲ್ಲದ ಮಾಡೆನೀತನುವನು, ಲಿಂಗ ಜಂಗಮದ ಪ್ರಸಾದಕ್ಕಲ್ಲದೆ ಬಾಯ್ದೆರೆಯೆನೆಂಬುದೆನ್ನ ಭಾಷೆ. ಅನರ್ಪಿತವಾದರೆ ತಪ್ಪೆನ್ನದು. "ಎಂದು ಶಿವಯೋಗ ಸಾಮ್ರಾಜ್ಯ ಸುಖವನ್ನನುಭವಿಸಿದ ಬಸವತಂದೆಯು ಅಮೃತವಾಣಿಯನ್ನುದಹರಿಸಿ ಮುಕ್ತಾಯಗೊಳಿಸಿದರು.

ಸ್ವಾಮಿಯವರ ವಾಣಿಯಲ್ಲಿ ಹೃದಯವಿದೆ, ವೈಭವವಿದೆ, ಮಾಧುರ್ಯವಿದೆ. ಬರಿಯ ಮಾತುಗಾರರಲ್ಲ ಆಚರಣೆವಂತರು, ಅಪೂರ್ವ ಬುದ್ಧಿಶಕ್ತಿಯಿಂದೊಡಗೂಡಿದ ಸಾಧು ಸಂಪತ್ತಿಯಿದೆ. ವಿಚಾರಪೂರ್ಣ ಉದಾತ್ತ ಉನ್ನತ ಉಪದೇಶದಿಂದ ಜನಾಂಗವು ಚೇತರಿಸಿಕೊಳ್ಳುವಂತೆ ಮಾಡುವ ಶಕ್ತಿಯಿದೆ. ಹೀನತನ ಮಾಣಿಸಿ ನವಬಾಳಿನತ್ತ ಗಮಿಸುವಂತೆ ಮಾಡುವ ಅಪ್ರತಿಮ ಪ್ರತಿಭೆಯಿದೆ. ಪರಿಪೂರ್ಣ ಮನಸ್ಸಿನಿಂದ ಜನಜಂಗುಳಿಯಲ್ಲಿರುವ ಅಜ್ಞಾನ, ಆಲಸಿಕೆಗಳನ್ನು ಸಹನೆಯಿಂದ ಸರಿಪಡಿಸಿ ಬುದ್ಧಿಗಲಿಸುವ ಕರುಣೆಯಿದೆ. ಪರಿಪೂರ್ಣ ಯೋಗವಿದೆ; ತ್ಯಾಗವಿದೆ, ವಿರಕ್ತಿಯಿದೆ, ಉಪರತಿಯಿದೆ, ಕಾರ್ಯಾಧ್ಯಕ್ಷತೆಯಿದೆ, ಆಧ್ಯಾತ್ಮಿಕ ಬಲವಿದೆ, ಧೈರ್ಯವಿದೆ, ಸ್ಥೈರ್ಯವಿದೆ, ದಯೆ ಇದೆ, ಧರ್ಮವಿದೆ.

ನಿದ್ರೆನೀರಡಿಕೆಗಳ ಪರಿವೆಯಿಲ್ಲದೆ, ಆಹಾರ ವಿಹಾರದ ವಿಚಾರವಿಲ್ಲದೇ ದೇಹಾರೋಗ್ಯದ ಚಿಂತೆಯಿಲ್ಲದೆ ಸಮಾಜದ ಕುಂದು ಕೊರತೆಗಳನ್ನು ದೂರ ಮಾಡುವ ವಿಚಾರ ಭರದಲ್ಲಿ ಯೋಚನೆಯಲ್ಲಿ ಶ್ರೀಗಳವರ ರೋಮ, ರಂಧ್ರ, ನರನಾಡಿಗಳಲ್ಲಿ ವ್ಯಾಪಿಸಿದೆ. ಆತ್ಮಸಾಕ್ಷಾತ್ಕಾರದಂತಹ ತಮ್ಮ ದಿವ್ಯ ಶಕ್ತಿಯನ್ನು ಭವ್ಯ ಸಂಪತ್ತನ್ನು ಜನತೆಯ ಕ್ಷೇಮಕ್ಕೆ ಜೀವನದ ಏಳ್ಗೆಗೆ ಧಾರೆ ಯರೆಯುತ್ತಿದ್ದಾರೆ. ಸಮಾಜದ ಪ್ರತಿಯೊಂದು ವ್ಯಕ್ತಿಯೂ, ಸುಧಾರಣೆಯನ್ನು ಹೊಂದಬೇಕು. ಸಾಂಪತ್ತಿಕ, ಶೈಕ್ಷಣಿಕ, ಧಾರ್ಮಿಕ ಮೊದಲಾದ ಸಕಲ ಕಲೆಗಳು ಉನ್ನತಗೊಳ್ಳಬೇಕು. ಎಂಬ ಉದಾತ್ತ ಉನ್ನತ ಧ್ಯೇಯದಿಂದ ಸಂಚರಿಸಿ ಬೋಧಿಸುತ್ತ ಜನರನ್ನು ಸನ್ಮಾರ್ಗದತ್ತ ಕರೆದೊಯ್ಯುತ್ತಿರುವುದನ್ನು ನೋಡಿದರೆ

ಸ್ವಾಮಿಯವರಲ್ಲಿರುವ ಅದ್ವಿತೀಯ, ಅಸಹನೀಯ ಬುದ್ಧಿ ಸಾಮರ್ಥ್ಯವನ್ನು ಸಮಾಜೋನ್ನತಿಯ ಉತ್ಕಂಠತೆಯನ್ನು ವ್ಯಕ್ತಗೊಳಿಸುವುದಿಲ್ಲವೆ ?

**ಕೊನೆಯದಾಗಿ:**— ಸ್ವಾಮಿಯವರು ಕನ್ನಡನಾಡಿನ ನಂದಾದೀಪ, ಹಿಂದುಳಿದವರ ಕೈವಲ್ಯ ಪ್ರದೀಪ. ಇವರನ್ನು ಪಡೆದ ನಾಡೆ ಧನ್ಯ ! ಇವರನ್ನು ಸೇವಿಸಿದ ಮಾನವನೇ ಮಾನ್ಯ! ಇವರನ್ನು ಸ್ತುತಿಸಿದವನೇ ಮೂರ್ಧನ್ಯ!! ಈ ಜ್ಯೋತಿ ಕನ್ನಾಡ ತುಂಬೆಲ್ಲ ಬೆಳಗಲಿ. ಕನ್ನಡಾಂಬೆಗೆ ಹೊದಗಿರುವ ಸಂಕಷ್ಟ ಈ ಮಹಾತ್ಮನ ಆಶೀರ್ವಾದದಿಂದ ನಿವಾರಣೆಯಾಗಲಿ. ಇನ್ನೂ ನಮ್ಮೆದುರು ಅನಂತದಿನ ಬಾಳಿ ಬೆಳಗಲಿ.

" ಅಭಿನವ ಚನ್ನಬಸವೇಶ" ಎಂಬ ಹಿರಿಯೋಕ್ತಿ ಧಾರವಾಡ ಮುರಘಾ ಮಠದ ಮೃತ್ಯುಂಜಯ ಮಹಾಸ್ವಾಮಿಯವರು ಉಪಯೋಗಿಸಿದ್ದು ಇದೆ.

---

# ಕರ್ನಾಟಕದ ಕಲಚುರಿಗಳು.

[ ಸಂಪುಟ ೨೭ ಸಂಚಿಕೆ ೯ ಇದರಿಂದೆ ಮುಂದುವರಿದಿದ್ದು ]

(ಲೇ:- ಶ್ರೀ ದೇಸಾಯಿ ಪಾಂಡುರಂಗರಾಯರು ಎಂ. ಏ.)

## ಸಾಂಸ್ಕೃತಿಕ ಒಲವುಗಳು

(ಧರ್ಮ ಮತ್ತು ಸಾಹಿತ್ಯ)

ಈ ಅಧ್ಯಾಯದಲ್ಲಿ ಕಲಚುರಿಗಳ ಕಾಲದಲ್ಲಿ ಎಂದರೆ ಸ್ಥೂಲವಾಗಿ ಹನ್ನೆರಡನೆಯ ಶತಮಾನದಲ್ಲಿ ಗೋಚರವಾಗುವ ಕೆಲವು ಸಾಂಸ್ಕೃತಿಕ ಒಲವುಗಳನ್ನು ಸಂಕ್ಷೇಪವಾಗಿ ಪರಿಶೀಲಿಸುವೆ. ಈ ಪರಿಶೀಲನೆ ಸಂಸ್ಕೃತಿಯ ಎರಡು ಮುಖ್ಯ ಅಂಗಗಳಾದ ಧರ್ಮ ಮತ್ತು ವಾಙ್ಮಯರೂಪ ಸಾಹಿತ್ಯ ಇವುಗಳ ಮಟ್ಟಿಗೆ ಪರಿಮಿತವಾದುದು. ಬಿಜ್ಜಳ—ಬಸವೇಶ್ವರರ ಮೂಲಕ ಉಂಟಾದ ರಾಜಕೀಯ ಮತ್ತು ಮತೀಯ ಆಂದೋಲನದ ಪರಿಣಾಮಗಳು ಈ ಎರಡು ಕ್ಷೇತ್ರಗಳಲ್ಲಿಯೂ ವ್ಯಕ್ತಾವ್ಯಕ್ತವಾಗಿ ಮೂಡಿ ನಿಂತಿವೆ. ಈ ವಿಷಯವನ್ನು ಪರಾಮರ್ಶಿಸಿ ನೋಡಿದರೆ ಕಲಚುರಿಗಳ ಯುಗವು ಸಾಂಸ್ಕೃತಿಕ ದೃಷ್ಟಿಯಿಂದ ಕರ್ನಾಟಕದ ಜೀವನದಲ್ಲಿ ಹಲವಾರು ಕವಲುದಾರಿಗಳಿಗೆ ಅವಕಾಶವನ್ನು ಕಲ್ಪಿಸಿಕೊಡುವ ಸಂಕ್ರಮಣ ಕಾಲವೆಂದು ಗುರುತಿಸಬಹುದಾಗಿದೆ.

## ಧಾರ್ಮಿಕ ಸ್ಥಿತಿಗತಿ

ಧಾರ್ಮಿಕ ಆವರಣದಲ್ಲಿ ಮೊದಲು ಜೈನ ಮತ ಮತ್ತು ವೈದಿಕ ಮತ ಎಂಬ ಪ್ರಮುಖ ಪಂಗಡಗಳನ್ನು ನಿರ್ದೇಶಿಸಬಹುದು. ಈ ಕಾಲದಲ್ಲಿ ಜೈನ ಮತವು ಬಲಿಷ್ಠವಾದ ಭೂಮಿಕೆಯಲ್ಲಿ ಬಾಳಿದ್ದಿತು. ಪದಸ್ಥಿತ ನಾಯಕ ಮತ್ತು ಅಧಿಕಾರಿ ವರ್ಗಗಳಲ್ಲಿ ಈ ಮತಕ್ಕೆ ಮನ್ನಣೆ ದೊರೆಯುತ್ತಿದ್ದಿತು. ಜನತೆಯಲ್ಲಿಯೂ ಅದು ತನ್ನ ವರ್ಚಸ್ಸನ್ನು ಬೀರಿದ್ದಿತು. ಈ ಅಂಶವು ಈ ಕಾಲದ ಶಾಸನಗಳನ್ನು ಅವಲೋಕಿಸಿದರೆ ವೇದ್ಯವಾಗುತ್ತದೆ. ಆದರೆ ಇದೇ ಸಮಯದಲ್ಲಿ ಏಕಾಂತದ ರಾಮಯ್ಯನಂತಹ ಕೆಲ ಉತ್ಸಾಹಿ ಶಿವಭಕ್ತರು ಜೈನ ಮತದಮೇಲೆ ಏರಾಟವನ್ನು ಪ್ರಾರಂಭಿಸಿ ಅದರ ಪರಾಭವದ ತಳಹದಿಯನ್ನು ಹಾಕುತ್ತಿದ್ದ ಸನ್ನಿವೇಶವು ಅಬಲೂರ ಶಾಸನದಲ್ಲಿಯ ವಿಷಯಗಳಿಂದ ತಿಳಿಯಬಹುದಾಗಿದೆ.

ಈ ಕಾಲದಲ್ಲಿ ಶೈವ ಮತದಲ್ಲಿ ಅನೇಕ ಪ್ರಭೇದಗಳು ಇದ್ದಂತೆ ಕಂಡುಬರುತ್ತದೆ. ಒಂದು, ಕಾಶ್ಮೀರ ಶೈವ ಪಂಥ; ಕಾಶ್ಮೀರದಿಂದ ಬಂದು ಕರ್ನಾಟಕದಲ್ಲಿ ನೆಲಸಿದ ಅನೇಕ ಶೈವ ಆಚಾರ್ಯರ ಉಲ್ಲೇಖಗಳು ಶಾಸನಗಳಲ್ಲಿ ಸಿಕ್ಕುತ್ತವೆ. ಇನ್ನೊಂದು; ಲಕುಳೀಶನ ಲಾಕುಳ ಇಲ್ಲವೆ ಪಾಶುಪತ ಎಂಬ ಸಂಪ್ರದಾಯ. ಈ ಮತವು ಹೆಚ್ಚಿನ ಪ್ರಶಸ್ತಿಯನ್ನು ಪಡೆದಿದ್ದಿತು. ಈ ಮತದ ಅನೇಕ ಮಠಗಳು ಸ್ಥಾಪಿತವಾಗಿದ್ದು, ಈ ಪರಂಪರೆಯ ಯತಿಗಳು ಮನ್ನಣೆಗೆ ಪಾತ್ರರಾಗಿದ್ದರು. ಮತ್ತೊಂದು, ಶಂಕರಾಚಾರ್ಯರ ಅದ್ವೈತ ಶೈವ ಮಾರ್ಗ. ಮಗದೊಂದು, ಶಕ್ತಿ ದೇವತೆಗೆ ಪ್ರಾಮುಖ್ಯತೆಯನ್ನು ಸಲ್ಲಿಸುವ ತಾಂತ್ರಿಕ ಎಂಬ ಹೆಸರಿನ ಶಕ್ತಿ ಪ್ರಧಾನ ಶೈವ ಪಂಗಡ. ಈ ಪಂಗಡದ ವಿಚಾರದಲ್ಲಿ ಶಾಸನಾದಿ ಆಧಾರಗಳು ದೊರೆಯುತ್ತವೆ. ಈ ವಿಷಯದಲ್ಲಿ ಸಾಕಷ್ಟು ಜಿಜ್ಞಾಸೆ ಇಲ್ಲವಾದುದರಿಂದ ಇಲ್ಲಿ ಸ್ವಲ್ಪ ದೂರಕ್ಕೆ ವಿವೇಚಿಸಲೆಳಸುವೆ.

ನಾಥ ಮತ್ತು ಸಿದ್ಧ ಪಂಥ ಎಂಬ ಜಾನಪದ ಹೆಸರಿನಿಂದ ಪ್ರಸಿದ್ಧಿವೆತ್ತ ಈ ತಾಂತ್ರಿಕ ಮತದ ಪ್ರವರ್ತಕನು ಮತ್ಸ್ಯೇಂದ್ರನಾಥ. ಆತನು ರಚಿಸಿದ ಕಾಲಜ್ಞಾನ ನಿರ್ಣಯ ಎಂಬ ಗ್ರಂಥವು ಬೆಳಕಿಗೆ ಬಂದಿದೆ. ಈತನ ಕಾಲವು ಸ್ಥೂಲವಾಗಿ ೯ನೆಯ ಶತಮಾನವೆಂದು ಸೂಚಿಸಬಹುದು. ಮತ್ಸ್ಯೇಂದ್ರನಾಥನ ಮತಪ್ರಸಾರದ ಮುಖ್ಯ ಕಾರ್ಯಕ್ಷೇತ್ರವು ಕಾಮ

ಕೂಪ ಎಂದರೆ ಆಸಾಮ ಪ್ರದೇಶವಾಗಿದ್ದಿತು. ಮುಂದೆ ಈ ಮತವು ಅನೇಕ ಪ್ರಾಂತಗಳಲ್ಲಿ ಹಬ್ಬಿತು. ಈ ಮತದಲ್ಲಿ ಶಿವನಿಗೆ ಸಂಬಂಧಿಸಿದ ಅನೇಕ ಶಕ್ತಿಗಳನ್ನು ಕಲ್ಪಿಸಿದ್ದು ಈ ಶಕ್ತಿಗಳ ಉಪಾಸನೆಗೆ ಪ್ರಾಧಾನ್ಯವಿದೆ. ಈ ಶಕ್ತಿಗಳನ್ನು ದೈವೀ, ಯೋಗಿನೀ, ಮಹಾಯೋಗಿನೀ, ಮುಂತಾದ ಹೆಸರುಗಳಿಂದ ಕರೆಯುವರು. ಈ ಯೋಗಿನಿಯರಿಗೆ ವಿಶಿಷ್ಟ ಹೆಸರುಗಳೂ ಇವೆ. ಜಬಲಪುರ ಬಳಿಯ ಭೇರಘಾಟ ಗ್ರಾಮದಲ್ಲಿ ೬೪ ಯೋಗಿನಿಯರ ಒಂದು ಮಂದಿರವಿದೆ. ಈ ಮಂದಿರದಲ್ಲಿಯ ಯೋಗಿನೀ ವಿಗ್ರಹಗಳ ಅಡಿಯಲ್ಲಿ ಅವರವರ ಹೆಸರುಗಳನ್ನು ಸೂಚಿಸುವ ಲೇಖಗಗಳಾದರೂ ಇದೇ ಕಾಲದಲ್ಲಿ ಕೊರಿದವೆಂದು ತಿಳಿದುಬರುತ್ತದೆ. ಈ ಮೇರೆಗೆ ೧೦ನೆಯ ಶತಮಾನದ ಅವಧಿಯಲ್ಲಿ ತಾಂತ್ರಿಕ ಮತವು ಮಧ್ಯ ಭಾರತದಲ್ಲಿ ಸುಪ್ರತಿಷ್ಠಿತವಾಗಿದ್ದಿತೆಂಬ ಅಂಶವು ನಿಶ್ಚಯವಾಗುತ್ತದೆ.

ಮುಂದಿನ ಒಂದೆರಡು ಶತಮಾನಗಳಲ್ಲಿ ತಾಂತ್ರಿಕ ಮತವು ಮಹಾರಾಷ್ಟ್ರ ಮತ್ತು ಕರ್ನಾಟಕ ಪ್ರಾಂತಗಳಲ್ಲಿ ಪ್ರಸಾರವಾಯಿತು. ಈ ಮಾತು ಶಾಸನ ಪ್ರಮಾಣದಿಂದ ಪೋಷಿತವಾಗುತ್ತದೆ. ಗಹಿನೀನಾಥನು ಮಹಾರಾಷ್ಟ್ರದ ಪ್ರಖ್ಯಾತ ಸತ್ಪುರುಷನಾದ ಜ್ಞಾನೇಶ್ವರನ ಪರಮ ಗುರು. ಭೇರಘಾಟದ ಯೋಗಿನೀವಿಗ್ರಹ ಲೇಖನಗಳಲ್ಲಿ 'ಗಹನೀ' ಎಂಬ ಹೆಸರು ಗೋಚರವಾಗುತ್ತದೆ. ಉಸ್ಮಾನಾಬಾದ ಜಿಲ್ಲೆಯ ಅಂಬೇಜೋಗಾಯಿ ಗ್ರಾಮವು ತಾಂತ್ರಿಕ ಮತದ ಒಂದು ಕೇಂದ್ರವಾಗಿದ್ದಿತು. ಈ ಅಂಶವು ಅಲ್ಲಿಯ ಪ್ರಾಚೀನ ಅವಶೇಷ ಮತ್ತು ಶಾಸನಗಳಿಂದ ಪ್ರಕಟವಾಗುತ್ತದೆ. ಸೋಮದೇವಸೂರಿಯ ಯಶಸ್ತಿಲಕ ಎಂಬ ಸಂಸ್ಕೃತ ಗ್ರಂಥವು ಕ್ರಿ. ಶ. ೯೫೯ರಲ್ಲಿ ರಚಿತವಾದುದು. ಇದರಲ್ಲಿ ತಾಂತ್ರಿಕ ಶೈವ ಮತದ ಆಚಾರ ವಿಚಾರಗಳ ವರ್ಣನೆ ಬರುತ್ತದೆ. ಇಲ್ಲಿಯ ವಿಷಯಗಳು ಕೆಲಮಟ್ಟಿಗೆ ಕರ್ನಾಟಕಕ್ಕೂ ಅನ್ವಯಿಸುತ್ತಿರುವದರಿಂದ ೧೦ನೆಯ ಶತಮಾನದಲ್ಲಿ ಈ ಮತವು ಈ ನಾಡಿಗೆ ಪರಿಚಿತವಾಗಿದ್ದಿತು ಎಂದು ಸ್ಥೂಲವಾಗಿ ಇಟ್ಟುಕೊಳ್ಳಬಹುದು.

೧೧ ಮತ್ತು ೧೨ನೆಯ ಶತಮಾನದ ಅನೇಕ ಕನ್ನಡ ಶಾಸನಗಳಲ್ಲಿ ೬೪ ಯೋಗಿನಿಯರ, ಅವರ ಪೀಠಗಳ ಮತ್ತು ಅವರ ಉಪಾಸಕರ ನಿರ್ದೇಶಗಳು ಬರುತ್ತವೆ. ತಾಂತ್ರಿಕ ವಾಙ್ಮಯದಲ್ಲಿ ಶಕ್ತಿದೇವತೆಯನ್ನು

ಇಲ್ಲವೆ ಯೋಗಿನಿಯನ್ನು ಪ್ರತಿಷ್ಠಾಪನೆ ಮಾಡಿದ ಸ್ಥಳಗಳನ್ನು ಶಕ್ತಿಪೀಠ, ಯೋಗಪೀಠ ಇಲ್ಲವೆ ಸಿದ್ಧಪೀಠವೆಂದು ನಿರ್ದೇಶಿಸುವ ಪದ್ಧತಿಯಿದೆ. ದಕ್ಷಿಣ ಸಾತಾರಾ ಜಿಲ್ಲೆಯ ಜತ್ ತಾಲೂಕಿನ ಅಂಕಲಗಿ ಗ್ರಾಮದ ೧೧೭೫ನೆಯ ಕ್ರಿ. ಶ. ದ ಒಂದು ಕನ್ನಡ ಶಾಸನದಲ್ಲಿ ಆ ಸ್ಥಳದ, ೬೪ ಯೋಗಪೀಠಗಳ ಅಧಿನಾಥೆಯಾದ ಮಹಾಯೋಗೇಶ್ವರೀ ಉಗ್ರಚಾಮುಂಡೆಯ ಉಲ್ಲೇಖವು ಬರುತ್ತದೆ. ಬಳ್ಳಾರಿ ಜಿಲ್ಲೆಯ ಹಡಗಲಿ ತಾಲೂಕಿನ ಹಳಗೊಂದಿ ಗ್ರಾಮದ ಒಂದು ಶಾಸನದಲ್ಲಿ ಚಾಲುಕ್ಯ ಆರ್ವಡಿ ವಿಕ್ರಮಾದಿತ್ಯನ ಮಹಾ ಸಾಮಂತನಾದ ಚಾವುಂಡರಸನು ೬೪ ಯೋಗಿನಿಯರ ವರಪ್ರಸಾದವನ್ನು ಪಡೆದಿದ್ದನೆಂದು ಹೇಳಿದೆ. ಕನ್ನಡ ನಾಡಿನ ಬೃಹತ್ ಉದ್ಯಮ ಸಂಘವಾದ ಅಯ್ಯಾವಳೆ ಐನೂರ್ವರ ಸ್ವಾಮಿಗಳ ಪ್ರಶಸ್ತಿಯಲ್ಲಿ ೬೪ ಯೋಗಪೀಠಗಳು ಪುನಃ ಪುನಃ ನಿರ್ದಿಷ್ಟವಾಗುತ್ತವೆ.

ಕಾಲಜ್ಞಾನ ನಿರ್ಣಯದಲ್ಲಿ ಯೋಗಿನಿಯರ ಸಂಖ್ಯೆ ೬೪ ಎಂದು ಸಂದರ್ಭಿಸಿದೆ. ಆದರೆ ಈ ಸಂಖ್ಯೆ ಪ್ರಾಯಿಕವಾಗಿ, ಔಪಚಾರಿಕವಾಗಿರಬೇಕು ಎನ್ನುವುದಕ್ಕೆ ಕಾರಣಗಳು ಇವೆ- ಭೇರಘಾಟದ ೬೪ ಯೋಗಿನಿಯರದೆಂದು ಹೇಳುವ ಮಂದಿರದಲ್ಲಿ ಸ್ಥಾಪಿತವಾಗಿರುವ ಸ್ತ್ರೀವಿಗ್ರಹಗಳ ಸಂಖ್ಯೆ ೮೧ ಇದೆ. ಕೊಲ್ಹಾಪುರ ಜಿಲ್ಲೆಯ ತೆರದಾಳ ಗ್ರಾಮದ ಒಂದು ಶಾಸನದಲ್ಲಿ ಒಕ್ಕಣಿಸಿದ ಅಯ್ಯಾವಳೆ ಐನೂರ್ವರು ಸ್ವಾಮಿಗಳ ಪ್ರಶಸ್ತಿಯಲ್ಲಿ ಯೋಗ ಪೀಠಗಳ ಸಂಖ್ಯೆ ೬೪ ಎಂದು ನಿರ್ದೇಶಿಸದೆ, ೬೨ ಎಂದು ನಿರ್ದೇಶಿಸಿದೆ. ಶಕ್ತಿಪೀಠಗಳ ಕ್ರಮವಿಕಾಸವನ್ನು ಪರೀಕ್ಷಿಸಿದರೆ ಅವುಗಳ ಸಂಖ್ಯೆ ೪ರಿಂದ ೧೦೮ರ ವರೆಗೆ ಬೆಳೆದು ಹೋದ ಸನ್ನಿವೇಶವು ಗೋಚರವಾಗುತ್ತದೆ.

ತಾಂತ್ರಿಕ ಮತವು ಜನಾದರಣೀಯವಾದಂತೆ ಕಾಲಗತಿಯಲ್ಲಿ ಹೊಸ ಹೊಸ ಶಕ್ತಿ ಕ್ಷೇತ್ರಗಳು ನಿರ್ಮಾಣವಾಗಿ ಅಭಿವೃದ್ಧಿಪಡೆದುವು. ಇಂತಹ ಕೆಲ ಕ್ಷೇತ್ರಗಳನ್ನು ಶಾಸನಾದಿ ಆಧಾರದಿಂದ ಕಂಡುಹಿಡಿಯಬಹುದು. ಈ ಮೇರೆಗೆ ಕರ್ನಾಟಕದ ಶಾಸನಗಳಿಂದ ವೇದ್ಯವಾಗುವ ಅನೇಕ ಶಕ್ತಿ ಕ್ಷೇತ್ರಗಳ ಹೆಸರುಗಳು ಮಹಾಪೀಠ ನಿರೂಪಣ, ನಾಮಾಷ್ಟೋತ್ತರಶತ, ಮೊದಲಾದ ತಾಂತ್ರಿಕ ಕೃತಿಗಳಲ್ಲಿ ದೊರೆಯುವದಿಲ್ಲ. ಕರವೀರ ಎಂದರೆ ಕೊಲ್ಹಾಪುರವು ಬಹು ಪುರಾತನ ಶಕ್ತಿಪೀಠವಾಗಿದ್ದಿತು. ಇದು ಕಾಲ

ಜ್ಞಾನ ನಿರ್ಣಯದಲ್ಲಿಯೂ ಶಾಸನಗಳಲ್ಲಿಯೂ ನಿರ್ದಿಷ್ಟವಾಗುತ್ತದೆ. ಮೇಲೆ ಕಂಡಂತೆ ಅಂಕಲಗಿ ಇನ್ನೊಂದು ಶಕ್ತಿ ಪೀಠವು. ಶಂಕರಾಚಾರ್ಯ ಕೃತ ವೆಂದು ಹೇಳುವ ಅಷ್ಟಾದಶಪೀಠವೆಂಬ ಒಂದು ಚಿಕ್ಕ ಸ್ತೋತ್ರವು ದೊರೆತಿದೆ. ಇದರಲ್ಲಿ ಅಲಾಪುರದಲ್ಲಿ ನೆಲಿಸಿದ ಯುಗಲಾ ಎಂಬ ದೇವಿ ಯನ್ನು ಹೆಸರಿಸಿದೆ. ಈ ಅಲಾಪುರವು ರಾಯಚೂರು ಜಿಲ್ಲೆಯ ಅಲಂ ಪೂರ ಗ್ರಾಮವೆಂತಲೂ ಯುಗಲಾದೇವಿ ಸುಂದರಿ ಬಾಲಬ್ರಹ್ಮೇಶ್ವರನ ಪತ್ನಿಯಾದ ಜೋಗಳಾಂಬಾ ಎಂತಲೂ ಆ ಗ್ರಾಮದ ಅವಶೇಶಗಳ ಅವ ಲೋಕನದಿಂದ ವೇದ್ಯವಾಗುತ್ತದೆ. ಇದೀಗ ಮಹಾ ಮಾಯಾದೇವಿಯ ಪ್ರಸಿದ್ಧ ಸ್ಥಾನವಾಗಿರುವ, ಕೊಪ್ಪಳ ಜಿಲ್ಲೆಯ ಕುಕನೂರು ಮತ್ತೊಂದು ಶಕ್ತಿಕ್ಷೇತ್ರವಾಗಿದ್ದಿತು. ಮಹಾಮಾಯಾ ಎಂಬ ಹೆಸರು ತಾಂತ್ರಿಕ ದೇವಿ ಯರ ನಾಮಾವಳಿಯಲ್ಲಿ ಕಾಣಿಸಿಕೊಳ್ಳುತ್ತದೆ. ಇಲ್ಲಿಯ ೧೧೭೮ ನೆಯ ಕ್ರಿ. ಶ. ದ ಒಂದು ಶಾಸನದಲ್ಲಿ ಈ ಗ್ರಾಮದ ಹಲವಾರು ದೇವಿಯುವ ರನ್ನು ವಿವರಿಸಿ, 'ಶಿವಶಕ್ತಿ-ಸ್ಫುರತ್-ಸಂಪುಟ-ಕ್ಷೇತ್ರ' ವೆಂದು ಈ ಊರನ್ನು ವಿಶೇಷಿಸಿದೆ. ಮಹಾಮಾಯೆಯ ಪ್ರಾಚೀನ ಹೆಸರು ಜ್ಯೇಷ್ಠಾ ಎಂದಿದ್ದಿತು.

ಧಾರವಾಡ ಜಿಲ್ಲೆಯ ಹಾವೇರಿ ತಾಲೂಕಿನ ದೇವೀಹೊಸೂರ ಗ್ರಾಮದ ಒಂದು ಶಾಸನದಿಂದ ಲಭಿಸುವ ಬೆಳಕು ಮಹತ್ತ್ವಪೂರ್ಣ ವಾಗಿದೆ. ಈ ಶಾಸನದಲ್ಲಿ ಜನಮೇಜಯ ರಾಜನು ಈ ಸ್ಥಳದಲ್ಲಿ ಯಜ್ಞ ಮಾಡಿ ಇದನ್ನು ಬ್ರಾಹ್ಮಣರಿಗೆ ಅಗ್ರಹಾರವಾಗಿ ದಾನಕೊಟ್ಟನೆಂದು ಹೇಳಿದ್ದು ಅನಂತರ, ಈ ವಿಧವಾಗಿ ಮೊದಲು ಯಾಗಪೀಠವೆನಿಸಿದ್ದ ಈ ಸ್ಥಾನವು ಮುಂದೆ ಮಾಳಚಿದೇವಿಯ ಪೀಠವಾಗಿ ಹೆಚ್ಚಿನ ಘನತೆಯನ್ನು ಪಡೆಯಿತು. ಎಂದು ವರ್ಣಿಸಿದೆ. ಮಾಳಚಿ ಎಂಬ ಹೆಸರು ಸಂಸ್ಕೃತದಲ್ಲಿ ಮಾಲತಿ ಎಂದು, ಮಹಾರಾಷ್ಟ್ರದಲ್ಲಿ ಮಾಳಸಾ ಎಂದು ರೂಪಾಂತರವಾಗಿದೆ. ಈ ಮಾಳಚಿ ಮಯ್ಲಾರಿ ಅಥವಾ ಮಲ್ಲಾರಿಯ ಪತ್ನಿ. ಈತನು ಮಲ್ಲಾರಿ ಮಾರ್ತಂಡ ಮತ್ತು ಮಾರ್ತಂಡ ಭೈರವನೆಂದು ಪ್ರಸಿದ್ಧಿವೆತ್ತಿರುವನು. ಮಲ್ಲಾರಿ ಶಿವನ ಅವತಾರವೆಂದು ಭಾವಿಸಿರುವರು. ಪುಣೆಯ ಬಳಿಯ ಜೇಜುರಿ, ಬಳ್ಳಾರಿ ಜಿಲ್ಲೆಯಲ್ಲಿಯ ಮೈಲಾರ ಮತ್ತು ಧಾರವಾಡ ಜಿಲ್ಲೆ ಯಲ್ಲಿಯ ದೇವರಗುಡ್ಡ, ಇವು ಮಲ್ಲಾರಿ ಮಾರ್ತಂಡನ ಸುಪ್ರಸಿದ್ಧ ಕ್ಷೇತ್ರ ಗಳಾಗಿವೆ. ದೇವೀಹೊಸೂರು ದೇವರಗುಡ್ಡದ ಸಮೀಪದಲ್ಲಿದೆ. ದೇವೀ

ಹೊಸೂರಿನ ಇನ್ನೊಂದು ಶಾಸನದಲ್ಲಿ ಪೂಳಚಿಯನ್ನು ಮಾಳಜದೇವಿ ಎಂದು ನಿರ್ದೇಶಿಸಿದೆ. ಈಕೆ ಶಿವಶಕ್ತಿಯ ಪದವಿಗೆ ಏರಿಸಿದ್ಧ ಸ್ಥಳೀಯ ದೇವತೆಯಾಗಿರಬಹುದು. ಈ ಮೊದಲಿನ ಶಾಸನಸ್ಥ ವರ್ಣನೆಯನ್ನು ನೋಡಿದರೆ ಮಲ್ಲಾರಿ ಮತ್ತು ಮಾಳಚಿ ತಾಂತ್ರಿಕ ಸಂಪ್ರದಾಯದ ಪ್ರಭಾವಕ್ಕೆ ಒಳಗಾದ ದೇವತೆಗಳಾಗಿರಬೇಕೆಂದು ಭಾಸವಾಗುತ್ತದೆ.

ದೇವಿ ಭಾಗವತದಲ್ಲಿ ಶಕ್ತಿಸ್ಥಾನಗಳ ನಿರೂಪಣೆ ಬರುತ್ತದೆ. ಅದರಲ್ಲಿ ಎಲ್ಲಮ್ಮನ ಗುಡ್ಡ ( ಸವದತ್ತಿ ), ತುಳಜಾಪೂರ, ಶಾಕಾಂಭರಿ ಮತ್ತು ಗೋಕರ್ಣ, ಈ ಕ್ಷೇತ್ರಗಳು ಉಕ್ತವಾಗಿವೆ. ಎಲ್ಲಮ್ಮನ ಗುಡ್ಡವನು 'ರೇಣುಕಾಧಿಷ್ಠಿತಂ ಮಾತುಃ ಪುರಂ' ಎಂಬುದಾಗಿ ನಿರ್ದೇಶಿಸಿದೆ. ಇಲ್ಲಿಯ ಶಾಕಂಭರಿ ಬನಶಂಕರಿಯಾಗಿರಬಹುದು. ಇದಲ್ಲದೆ ಬೇರೆ ಗ್ರಂಥಗಳಲ್ಲಿ ಔರಂಗಾಬಾದ ಜಿಲ್ಲೆಯಲ್ಲಿಯ ಎಲ್ಲೋರ ಮತ್ತು ಗೋವಾ ಪ್ರದೇಶದ ಗೋಮಂತ, ಇವಾದರೂ ಶಕ್ತಿಸ್ಥಾನಗಳಾಗಿದ್ದುವೆಂದು ಹೇಳಿದೆ.

ಈ ಮೇಲಿನ ವಿವರಣೆಯಿಂದ ಅನ್ಯ ಶೈವ ಪಂಥಗಳ ಜೊತೆಗೆ ತಾಂತ್ರಿಕ ಶೈವ ಮತವಾದರೂ ಈ ಕಾಲದ ಕರ್ನಾಟಕದಲ್ಲಿ ಪ್ರತಿಷ್ಠೆಯನ್ನು ಪಡೆದಿದ್ದಿತು ಎಂದು ತಿಳಿಯಬಹುದಾಗಿದೆ.

ಇಂತಹ ಧಾರ್ಮಿಕ ಆವರಣದಲ್ಲಿ ಬಸವೇಶ್ವರನಿಂದ ಪುರಸ್ಕೃತವಾದ ವೀರಶೈವ ಮತವು ಮುಂದೆ ಬಂದು ಕ್ರಾಂತಿಯ ಕಲ್ಲೋಲವನ್ನು ಎಬಿಸಿತು. ಈ ಮತ ಮತಾಂತರಗಳ ಹಿನ್ನೆಲೆಯಲ್ಲಿ ವೀರಶೈವ ಮತದ ಯಥಾರ್ಥ ಸ್ವರೂಪ ಮತ್ತು ಕರ್ತೃತ್ವವನ್ನು ಪರಾಮರ್ಶಿಸಿ ನೋಡುವುದು ಯುಕ್ತ.

## ದೇವತೋಪಾಸನೆ

ವಿಗ್ರಹಾದಿ ಅವಶೇಷಗಳನ್ನು ಮತ್ತು ಶಾಸನಸ್ಥ ವರ್ಣನೆಯನ್ನು ಪರಿಶೀಲಿಸಿದರೆ, ಈ ಕಾಲದಲ್ಲಿ ನಾನಾ ದೇವತೆಗಳ ಉಪಾಸನೆ ಪ್ರಚಲಿತವಾಗಿದ್ದಂತೆ ಕಂಡುಬರುತ್ತದೆ. ಶಿವ, ವಿಷ್ಣು ಮತ್ತು ಜಿನನ ಭಕ್ತಿ ಸಾರ್ವತ್ರಿಕವಾಗಿದ್ದಿತು. ತ್ರಿಮೂರ್ತಿಗಳಿಂದ ಕೂಡಿದ ತ್ರೈಪುರುಷ ಎಂಬ ಸಂಯುಕ್ತ ದೇವತೆಯ ವಿಗ್ರಹಗಳೂ ಮಂದಿರಗಳೂ ಸ್ಥಾಪನೆಯಾಗಿದ್ದವು. ಒಮ್ಮೊಮ್ಮೆ ಈ ತ್ರಿಮೂರ್ತಿಗಳಲ್ಲಿ ವಿಷ್ಣು—ಶಿವರೊಂದಿಗೆ ಬ್ರಹ್ಮನ ಸ್ಥಳ

ವನ್ನು ಸೂರ್ಯನು ಅಲಂಕರಿಸುತ್ತಿದ್ದನು. ಸೂರ್ಯನ ಉಪಾಸನೆ ಪ್ರಚುರವಾಗಿದ್ದಿತು. ಮಂದಿರಗಳನ್ನು ನಿರ್ಮಿಸಿ, ವಿಗ್ರಹಗಳನ್ನು ಸ್ಥಾಪಿಸಿ, ಸೂರ್ಯದೇವನನ್ನು ಆರಾಧಿಸುತ್ತಿದ್ದರು. ಬ್ರಹ್ಮನ ಸ್ತೋತ್ರವುಳ್ಳ ಶಾಸನಗಳೂ ಪ್ರತ್ಯೇಕ ಬ್ರಹ್ಮವಿಗ್ರಹಗಳೂ ದೊರತಿವೆ. ಇವುಗಳಿಂದ ಪರಿಮಿತ ಪ್ರಮಾಣದಲ್ಲಿ ಬ್ರಹ್ಮನಿಗೆ ಮನ್ನಣೆ ದೊರೆಯುತ್ತಿದ್ದಿತೆಂದು ಊಹಿಸಬಹುದು. ಸರಸ್ವತಿಯಾದರೂ ಭಾವಿಕರ ವಿಶ್ವಾಸಾದರಗಳಿಗೆ ಪಾತ್ರವಾಗಿದ್ದಳು. ಇಂದ್ರನನ್ನು ಕುರಿತು ನಿರ್ದೇಶಗಳಿಂದ ಈತನಾದರೂ ಕೆಲವೆಡೆ ಪೂಜನೀಯನಾಗಿದ್ದನೆಂದು ವ್ಯಕ್ತವಾಗುತ್ತದೆ. ಶಾಕ್ತ ಮತದ ಪ್ರಭಾವದಿಂದಾಗಿ ದೇವಿ, ಶಕ್ತಿ, ಯೋಗಿನಿ, ಮೊದಲಾದ ವಿಶೇಷಣಗಳಿಂದ ಮಹಾಲಕ್ಷ್ಮಿ, ಶಂಕರಿ, ಮಹಾಮಾಯೆ, ಮಾಳಚಿ, ಚಾಮುಂಡೆ, ರೇಣುಕೆ, ಮುಂತಾದ ಸ್ತ್ರೀದೇವತೆಗಳ ಉಪಾಸನೆ ಪ್ರರೂಢವಾಗಿದ್ದಿತು. ಕೆಲಮಟ್ಟಿಗೆ ರಾಮಭಕ್ತಿಯೂ ಬಳಕೆಯಲ್ಲಿದ್ದಿತು. ಬುದ್ಧದೇವನ ಅನುಯಾಯಿಗಳಾದರೂ ಅಲ್ಲೊಬ್ಬರು ಇಲ್ಲೊಬ್ಬರು ಕಾಣಿಸಿಕೊಳ್ಳುತ್ತಿದ್ದರು. ಗವರೇಶ್ವರ ಎಂಬ ದೇವತೆಯ ಉಲ್ಲೇಖಗಳು ಶಾಸನಗಳಲ್ಲಿ ಸಿಕ್ಕುತ್ತವೆ. ಈ ದೇವತೆಯ ಸ್ವರೂಪವು ಸ್ಪಷ್ಟವಾಗಿಲ್ಲ. ಬಾದಂಬೆ ಎಂಬ ಜಾನಪದ ಸ್ತ್ರೀದೇವತೆ ಜನಪ್ರಿಯವಾಗಿದ್ದಂತೆ ಶಾಸನಗಳಲ್ಲಿಯ ಅನೇಕ ನಿರ್ದೇಶಗಳಿಂದ ತಿಳಿಯಬಹುದಾಗಿದೆ.

## ಹಳಗನ್ನಡ—ಹೊಸಗನ್ನಡ

ಕನ್ನಡ ನುಡಿಯಲ್ಲಿ ಹಳಗನ್ನಡ ಮತ್ತು ಹೊಸಗನ್ನಡ ಎಂಬ ಎರಡು ಸ್ಥೂಲ ಅವಸ್ಥಾ ಭೇದಗಳನ್ನು ಕಲ್ಪಿಸಿ ೧೨ನೆಯ ಶತಮಾನವು ಹಳಗನ್ನಡದಿಂದ ಹೊಸಗನ್ನಡಕ್ಕೆ ದಾರಿಯನ್ನು ತೋರಿಸುವ ಸಂಕ್ರಮಣ ಕಾಲವೆಂದು ಸೂಚಿಸಲಾಗುತ್ತದೆ. ಆದರೆ ಈ ರೀತಿಯ ಭೇದ ಕಲ್ಪನೆ ಅಷ್ಟು ಶಾಸ್ತ್ರೀಯವಾಗಲಾರದು. ಏಕೆಂದರೆ ಬೆಳೆದುಕೊಂಡು ಹೋಗುವ ಎಲ್ಲ ಭಾಷೆಗಳಲ್ಲಿ ಸಾಮಾನ್ಯವಾಗಿ ಈ ಬಗೆಯ ಪರಿವರ್ತನಗಳು ಗೋಚರಿಸುವವು. ಪೂರ್ವದ ಶಬ್ದರೂಪಗಳು ಮತ್ತು ಪ್ರಯೋಗಗಳು ಹಿಂದುಳಿದು ಅವುಗಳ ಸ್ಥಳದಲ್ಲಿ ಹೊಸವು ಬಳಕೆಗೆ ಬರುವದು ಭಾಷಾಗತಿಯ ನಿಯಮವಾಗಿದೆ. ಈ ವಿಧದ ಪರಿವರ್ತನೆಯ ಮುಖ್ಯ ಕಾರಣ ಉಚ್ಚಾರ ಸೌಕರ್ಯ. ಭಾಷೆಯೆಂಬುದು ಮುಖ್ಯವಾಗಿ ಆಡುವ ಮಾತಾದ್ದರಿಂದ ಅದು ಇಂತಹ ಸೌಲಭ್ಯಗಳನ್ನು ಯಾವಾಗಲೂ ಬಯಸುತ್ತದೆ. ನೃಪ

೩೦ಂಗ— ಪಂಪರ ಕಾಲದಲ್ಲಿ ಜನಗಳು ನುಡಿಯುವ ಕನ್ನಡವು ಅವರ ಕಾವ್ಯಗಳಲ್ಲಿಯ ಭಾಷೆಯಂತೆ ಕಟ್ಟುನಿಟ್ಟಿನ ಶಬ್ದ ರೂಪಗಳಿಂದ ಮತ್ತು ವ್ಯಾಕರಣ ನಿಯಮಕ್ಕೊಳಗಾದ ಪ್ರಯೋಗಗಳಿಂದ ಕೂಡಿದ್ದಿತು ಎಂದು ಹೇಳಲಿಕ್ಕಾಗದು. ಅಂದಾದರೂ ಜನವಾಣಿಯಲ್ಲಿ ಅನೇಕ ಸುಲಭ ಸುಗಮ ಪದಗಳು ಮತ್ತು ಅನಿರ್ಬಂಧ ಪ್ರಯೋಗಗಳು ಇದ್ದಿರಲೇ ಬೇಕು. ಆದುದರಿಂದ ಅಂದಿನ ನುಡಿಗಳಲ್ಲಿಯೂ ಈಚಗೆ ಹೊಸಗನ್ನಡದಂತಹ ಪ್ರಯೋಗಗಳು ಸಿಕ್ಕುತಿದ್ದರೆ ಸೋಜಿಗವಲ್ಲ. ಇದಕ್ಕೆ ಉದಾಹರಣೆಗಳು ಆ ಕಾಲದ ಸಾಹಿತ್ಯದಲ್ಲಿ ದೊರೆಯದೆ ಇದ್ದರೂ ಶಾಸನಗಳಲ್ಲಿ ಮಾತ್ರ ಅಲ್ಪವಾಗಿಯಾದರೂ ದೊರೆಯುತ್ತವೆ.

ಹೊಸಗನ್ನಡದ ಕೆಲವು ಸ್ಥೂಲ ಲಕ್ಷಣಗಳು ಇಂತು. ವ್ಯಂಜನಾಂತ ಪದ ಮತ್ತು ನಾಮ ಕ್ರಿಯಾರೂಪಗಳಿಗೆ ಸ್ವರವನ್ನು ಸೇರಿಸುವುದು, ಅಂತ್ಯ ವ್ಯಂಜನಕ್ಕೆ ಇಲ್ಲವೆ ಅನುಸ್ವಾರಕ್ಕೆ ಲೋಪತರುವುದು; ಶಬ್ದಗಳ ಪ್ರಕೃತಿರೂಪಗಳನ್ನು ಬಳಸುವುದು; ಸಂಯುಕ್ತಾಕ್ಷರಗಳನ್ನು ದ್ವಿತ್ವಾಕ್ಷರಗಳಾಗಿಸುವುದು; ದ್ವಿತ್ವಾಕ್ಷರಗಳಲ್ಲಿಯು ದ್ವಿತ್ವವನ್ನು ಕಳೆಯುವುದು; ಪಕಾರಕ್ಕೆ ಹಕಾರಾದೇಶ; ಹಳಗನ್ನಡ ೞಕಾರವನ್ನು ಉಪೇಕ್ಷಿಸುತ್ತ ಅದಕ್ಕೆ ಪ್ರತಿಯಾಗಿ ರ ಇಲ್ಲವೆ ಳ ಅಕ್ಷರವನ್ನು ಉಪಯೋಗಿಸುವುದು.

ಭಾಷೆಯಲ್ಲಿಯ ಈ ವಿಧದ ಹೊಸಗನ್ನಡ ಪ್ರವೃತ್ತಿಗಳನ್ನು ಕಂಡು ಹಿಡಿಯಲು ಶಾಸನವನ್ನುಳಿದು ನಿಶ್ಚಿತ ಮತ್ತು ಅಮೋಘವಾದ ಬೇರೊಂದು ಸಾಧನವಿಲ್ಲ. ಇದರ ಕಾರಣಗಳು ಎರಡು. ಒಂದನೆಯದು ಶಾಸನಗಳಿಗೂ ಜನರಾಡುವ ಭಾಷೆಗೂ ನಿಕಟ ಸಂಬಂಧವಿದ್ದುದರಿಂದ ಅದು ಅವುಗಳಲ್ಲಿ ಪ್ರತಿಬಿಂಬಿತವಾಗಿದೆ. ಎರಡನೆಯದು, ಶಾಸನಗಳು ನಿಶ್ಚಿತವಾದ ಮತ್ತು ಹೆಚ್ಚು ಕಡಿಮೆ ಅವಿಚ್ಛಿನ್ನವಾದ ಕಾಲನಿರ್ದೇಶವುಳ್ಳವಾಗಿವೆ.

ಹೊಸಗನ್ನಡವೆಂದು ಹೇಳಬಹುದಾದ ಪ್ರಯೋಗದ ಕುರುಹುಗಳು ಶಾಸನಗಳಲ್ಲಿ ಸು. ೯ನೆಯ ಶತಮಾನದಿಂದ ದೊರೆಯಲಿಕ್ಕೆ ಆರಂಭವಾಗುತ್ತದೆ. ೧೦—೧೧ನೆಯ ಶತಮಾನಗಳಲ್ಲಿ ಅಂತೂ ಈ ಕುರುಹುಗಳು ಸ್ಫುಟವಾಗುತ್ತ ಇಂತಹ ಪ್ರಯೋಗಗಳು ಹೇರಳವಾಗಿ ಸಿಕ್ಕುತ್ತವೆ. ಉದಾಹರಣೆಗಾಗಿ ೯, ೧೦, ಮತ್ತು ೧೧ನೆಯ ಶತಮಾನದ ಶಾಸನಗಳಿಂದ

ಸಹಜವಾಗಿ ಆಯ್ದು ಕೆಲ ಪ್ರಯೋಗಗಳನ್ನು ಇಲ್ಲಿ ಎತ್ತಿ ತೋರಿಸುವೆ; ಅಪುದು (ಅಪ್ಪುದು, ಎಂಬುದಕ್ಕೆ), ಅಕ್ಕು (ಅಂತ್ಯ ಅನುಸ್ವಾರ ಲೋಪ) ರೋಣ ಕಾದು (ರೋಣಮಂ ಕಾದು, ಎನ್ನುವದಕ್ಕೆ, ರೋಣಗ್ರಾಮದ ಹೆಸರು), ಗವಿಕಲ್ಲ ಮಾಡಿಸಿದ (ಗವಿಕಲ್ಲಂ ಮಾಡಿಸಿದಂ, ಎನ್ನುವದಕ್ಕೆ), ಲೋಕಕೆ ಸಲ್ಗು (ಲೋಕಕ್ಕೆ ಸಲ್ಗುಂ ಎನ್ನುವದಕ್ಕೆ), ಮಹಾಜನಂ ನೆರೆದಿರಲು ಬರುತಿರೆ ನೋರ್ಪಡ (ನೋಣ್ಪುಂಡಂ, ಎಂಬುದಕ್ಕೆ), ಬೇರ್ಪ (ಬೇಳ್ಪ, ಎಂಬುದಕ್ಕೆ), ಇಕ್ಕು (ಇರ್ಕುಂ, ಎನ್ನುವದಕ್ಕೆ ಪದ್ಯದ ಕೊನೆಯಲ್ಲಿ). ಸ್ವಯಂಭು ದೇವಂಗೆ, ಅಣುಜೀವಿತವಾಗಿ, ಅಳಿದ ಪಾತಕ (ಅಳಣಿದ ಪಾತಕ. ಎನ್ನುವದಕ್ಕೆ), ಸಂನಿಧಿಯಲಿ, ಸಂಕ್ರಮಣದೊಳು, ಚಂದ್ರಲೇಖೆಯು (ಅಂತ್ಯ ಅನುಸ್ವಾರ ಲೋಪ-ಸಮುಚ್ಚಯವಾಚಕ). ಇಂತಹ ಉದಾಹರಣೆಗಳನ್ನು ಬೇಕಾದಷ್ಟು ಉದ್ದಕ್ಕೆ ಬೆಳೆಸಬಹುದು.

## ಸಾಹಿತ್ಯಕ್ರಾಂತಿ— ವಚನವಾಙ್ಮಯ

೧೨ನೆಯ ಶತಮಾನವು ಕನ್ನಡ ಸಾಹಿತ್ಯದಲ್ಲಿ ಒಂದು ಕ್ರಾಂತಿಕಾಲ. ಇದರ ಒಂದು ಮುಖ್ಯ ಕಾರಣ ವಚನ ವಾಙ್ಮಯ ನಿರ್ಮಿತಿ. ಬಸವೇಶ್ವರನ ಪೂರ್ವದಿಂದಲೂ ವಚನಗಳು ಕಾಣಿಸಿ ಕೊಳ್ಳಲು ಪ್ರಾರಂಭಿಸಿದ್ದರೂ ಬಸವೇಶ್ವರ ಮತ್ತು ಅತನ ಪರಿವಾರದವರಿಂದ ಈ ವಿಧದ ಸಾಹಿತ್ಯ ರಚನೆಗೆ ಪ್ರಬಲ ಪುರಸ್ಕಾರವು ಲಭಿಸಿತು. ಈ ಜಾತಿಯ ವಾಙ್ಮಯವು ವಿಸ್ತೃತ ಪ್ರಮಾಣದಲ್ಲಿ ಸೃಷ್ಟಿಯಾದುದು ಇದೇ ಕಾಲದಲ್ಲಿ. ಈ ಬಗೆಯ ರಚನೆ ಮುಂದೆ ಅನೇಕ ಶತಮಾನಗಳ ವರೆಗೆ ಮುಂದುವರಿದು ಕನ್ನಡ ಸಾಹಿತ್ಯದಲ್ಲಿ ತನ್ನದೇ ಆದ ಒಂದು ವಿಶಿಷ್ಟ ವಾಙ್ಮಯ ವಿಧಾನವನ್ನು ಸ್ಥಾಪಿಸಿಕೊಂಡಿತು

ನೂತನವಾದ ಈ ಸಾಹಿತ್ಯ ಸ್ಫೂರ್ತಿಯ ಉಗಮವನ್ನು ಅಂದಿನ ಕಾಲದ ಸಾಹಿತ್ಯದಲ್ಲಿ ಅರಸುವದಕ್ಕಿಂತ ವೀರಶೈವ ಕ್ರಾಂತಿಯ ಮನೋಭೂಮಿಕೆಯಲ್ಲಿ ಕಂಡುಹಿಡಿಯುವುದು ಉಚಿತ. ವೀರಶೈವ ಕ್ರಾಂತಿಯ ಹಿನ್ನೆಲೆಯಾಗಿದ್ದ ನಾಲ್ಕು ಪ್ರವೃತ್ತಿಗಳ ಸಂಗಮವನ್ನು ನಾವೀ ವಚನ ಪ್ರಪಂಚದಲ್ಲಿ ಅವಲೋಕಿಸಬಹುದು. ಒಂದನೆಯದು, ಪುರಾತನ ಸಂಪ್ರದಾಯದ ಪ್ರತಿಭಟನೆ. ಎರಡನೆಯದು, ಭಾವಾವೇಶ. ಮೂರನೆಯದು,

ನವೀನ ಮಾರ್ಗಾನುಸರಣ. ನಾಲ್ಕನೆಯದು, ವಿಶಾಲವಾದ ಜಾನಪದ ಸಂಪರ್ಕ. ವಚನವಾಙ್ಮಯ ನಿರ್ಮಿತಿಯ ಪೂರ್ವದಲ್ಲಿ ವಚನರೂಪ ಕನ್ನಡ ವಾಙ್ಮಯವಾಗಲಿ, ಕನ್ನಡ ಸಾಹಿತ್ಯದಲ್ಲಿ ಗದ್ಯದ ಬಳಕೆಯಾಗಲಿ, ಇರಲಿಲ್ಲವೆಂತಲ್ಲ. ಈ ಹಿಂದಿನ ಕನ್ನಡದಲ್ಲಿ ಕೆಲವಾರು ನೂತನ ಪ್ರವೃತ್ತಿಗಳೂ ಗೋಚರವಾಗುತ್ತವೆ. ಆದರೆ ವಚನವಾಙ್ಮಯವು ಇಂತಹ ಹೊಸ ಒಲವುಗಳ ಪ್ರತ್ಯಕ್ಷ ಫಲ ಇಲ್ಲವೆ ಸ್ವಾಭಾವಿಕ ವಿಕಾಸವೆಂದು ಹೇಳುವುದು ಕಷ್ಟವಾಗಿದೆ. ಈ ಹಿಂದಿನ ಮತ್ತು ಈ ಕಾಲದ ಶಾಸನಗಳಲ್ಲಿ ಹಾಗೂ ಸಾಹಿತ್ಯದಲ್ಲಿ ಸುಲಭ, ನಾದಮಧುರ ಮತ್ತು ಗತಿಶೀಲ ಗದ್ಯರಚನೆ ಕೆಲವುಟ್ಟಿಗೆ ಕಾಣಿಸಿಕೊಳ್ಳುತ್ತದೆ. ಆದರೆ ಇಂತಹ ರಚನೆ ವಚನಗಳ ಸ್ಫೂರ್ತಿ, ಕಾಂತಿ, ಸುಗಮತೆ, ನಿರರ್ಗಳತೆ, ಓಟ, ಮುಂತಾದ ಗುಣಸಮೂಹಕ್ಕೆ ದೂರವಾಗಿ ನಿಲ್ಲುತ್ತದೆ. ಭಾವಲಹರಿಯ ಮೂಲಕ ವಚನಗಳು ಒಂದು ಬಗೆಯ ಹಾಡುಗಬ್ಬಗಳಾಗಿ ಜನ ಮೆಚ್ಚುಗೆಯನ್ನು ಪಡೆದಿವೆ.

## ಶೈಲಿಯಲ್ಲಿ ಮಾರ್ಪಾಟ— ಜಾನಪದ ರಚನೆ.

ವೀರಶೈವ ಕ್ರಾಂತಿ ವಚನ ಸೃಷ್ಟಿಗೆ ಕಾರಣವಾದಂತೆ ಸುಲಭ ಶೈಲಿಯು ಬೇರೆ ರಚನೆಗಳಿಗೂ ಪ್ರಚೋದಕವಾಯಿತು. ಈ ಮುಂದಿನ ಕಾಲದಲ್ಲಿ, ಮೊದಲು ವೀರಶೈವ ಕವಿಗಳು, ಬಳಿಕ ಅನ್ಯ ಕವಿಗಳು, ತಮ್ಮ ಕೃತಿಗಳ ರಚನೆಯಲ್ಲಿ ರಗಳೆ, ಷಟ್ಪದಿ, ತ್ರಿಪದಿ, ಸಾಂಗತ್ಯ, ಮೊದಲಾದ ಸುಲಭ ಸರಳ ಛಂದಸ್ಸುಗಳನ್ನೇ ಹೆಚ್ಚಾಗಿ ಉಪಯೋಗಿಸಲು ಆರಂಭಿಸಿದುದರಿಂದ ಸಂಸ್ಕೃತ ವೃತ್ತ ಭೂಯಿಷ್ಠವಾದ ಚಂಪೂ ಶೈಲಿ ಕನ್ನಡ ಸಾಹಿತ್ಯದಲ್ಲಿ ಕಣ್ಮರೆಯಾಗಿ ಹೊಸದಾದ ಜಾನಪದ ಛಂದೋಮಾರ್ಗವು ಪ್ರಸ್ಥಾಪಿತವಾಯಿತು. ಇದರ ಒಂದು ಕಾರಣವು ಮೇಲೆ ನಿರ್ದೇಶಿಸಿದ ವೀರಶೈವ ಕ್ರಾಂತಿಯು ಹಿನ್ನೆಲೆಯಾಗಿದ್ದ ವಿಶಾಲವಾದ ಜಾನಪದ ಸಂಪರ್ಕ. ಆದರೆ ಈ ಪರಿಯ ಮಾರ್ಪಾಟ ಆಕಸ್ಮಿಕವಾಗಿ ಕೇವಲ ವೀರಶೈವ ಕ್ರಾಂತಿಯ ಮೂಲಕವೇ ಉಂಟಾಗಲಿಲ್ಲ. ಈ ವಿಧವಾದ ಪ್ರಯೋಗಗಳು ವೀರಶೈವ ಕ್ರಾಂತಿಯ ಪೂರ್ವಕಾಲದಿಂದ ನಡೆಯುತ್ತ ಬಂದಿದ್ದವು. ಇಂತಹ ಪ್ರಯೋಗಗಳಿಗೆ ಬಲವಾದ ಚಾಲನೆ ದೊರೆತುದು ಮಾತ್ರ ವೀರಶೈವ ಕ್ರಾಂತಿಯಿಂದ.

ಹಿಂದಿನ ಅಭಿಪ್ರಾಯವು ಶಾಸನ ಸಾಹಿತ್ಯದ ಆಧಾರದಿಂದ ಪೋಷಿತವಾಗಿದೆ. ಅದು ಹೇಗೆ ಎಂಬುದನ್ನು ವಿವರಿಸುವೆ. ಪಂಪ, ಮೊದಲಾದ ಕವಿಗಳು ತಮ್ಮ ಕಾವ್ಯಗಳಲ್ಲಿ ಅಲ್ಲಲ್ಲಿ ರಗಳೆಯನ್ನು ಬಳಸಿದ್ದಾರೆ. ಆದರೆ ಈ ಜಾನಪದ ವೃತ್ತವನ್ನು ಅನೂಚಾನವಾಗಿ ಸುದೀರ್ಘ ಕಾವ್ಯರಚನೆಗೆ ಮೊದಲುಬಾರಿ ಬಳಸಿದ ಶ್ರೇಯಸ್ಸಿಗೆ ಅರ್ಹನೆನಿಸಿದವನು ವೀರಶೈವ ಕವಿ ಹರಿಹರನು. ಈತನ ಜೀವನ ಕಾಲ ಸ್ಥೂಲವಾಗಿ ೧೨ನೆಯ ಶತಮಾನದ ಅಂತ್ಯಭಾಗ. ಹರಿಹರನಗಿಂತ ಒಂದೂವರೆ ಶತಮಾನ ಪೂರ್ವದ ಒಂದು ಶಾಸನದಲ್ಲಿ ಹರಿಹರನಂತೆ ಸಿದ್ಧಹಸ್ತದಿಂದ ಲಲಿತರಗಳೆಯಲ್ಲಿ ರಚಿಸಿದ ಒಂದು ಖಂಡಕಾವ್ಯವು ದೊರೆತಿದೆ. ಇದು ಬಳ್ಳಾರಿ ಜಿಲ್ಲೆಯ ಕೋಗಳೀ ಗ್ರಾಮದ ೧೦೫೫ನೆಯ ಕ್ರಿ. ಶ. ದ ಶಾಸನ. ಈ ಕಾವ್ಯದ ವಸ್ತು ಇಂದ್ರಕೀರ್ತಿ ಎಂಬ ಜೈನಮುನಿ. ಅದೇ ಜಿಲ್ಲೆಯ ಕುರುಗೋಡು ಗ್ರಾಮದ ಎನ್ನೆರಡು ಶಾಸನಗಳಲ್ಲಿ ಮುಂಮುರಿದಂಡ ಎಂಬ ವರ್ತಕ ಸಮೂಹವನ್ನು ವರ್ಣಿಸುವ, ಅದೇ ಜಾತಿಯ ಎರಡು ರಗಳೆಯ ರಚನೆಗಳು ದೊರೆತಿವೆ. ಇವುಗಳ ಕಾಲ ಕ್ರಿ ಶ. ೧೧೭೬—೭೭ ಇದು ಹರಿಹರನ ಕಾಲಕ್ಕೆ ಹತ್ತಿರವಾಗುತ್ತದೆ. ವಿಷಯದ ಔಚಿತ್ಯವನ್ನು ಹೆಚ್ಚಾಗಿ ಲಕ್ಷಿಸದೆ ಸ್ವಚ್ಛಂದವಾಗಿ ರಗಳೆಯನ್ನು ಉಪಯೋಗಿಸಿದ ಶಾಸನಗಳಲ್ಲಿಯ ಇಂತಹ ಉದಾಹರಣೆಗಳನ್ನು ಪರಿಶೀಲಿಸಿದರೆ ಹರಿಹರನ ಕಾಲದಲ್ಲಿ ಆಗಲೇ ಈ ವೃತ್ತವು ಲೋಕಪ್ರಿಯವಾಗಿದ್ದಿರಬೇಕು ಎಂಬ ಅಂಶವು ಗೋಚರವಾಗುತ್ತದೆ.

ಷಟ್ಪದಿಯ ಕಥೆಯಾದರೂ ಇದೇ ವಿಧವಾಗಿದೆ. ಕನ್ನಡ ಸಾಹಿತ್ಯದಲ್ಲಿ ಷಟ್ಪದಿ ಕಾವ್ಯದ ರಾಜಮಾರ್ಗವನ್ನು ಕಲ್ಪಿಸಿಕೊಟ್ಟ ಪ್ರಥಮ ಕವಿ ರಾಘವಾಂಕನು. ಈ ಅಂಶವು ಆತನ ಹರಿಶ್ಚಂದ್ರ ಕಾವ್ಯ ಮೊದಲಾದ ಕೃತಿಗಳಿಂದ ಸ್ಥಾಪಿತವಾಗಿದೆ ಆದರೆ ಇದೇ ಕವಿಯ ವೀರೇಶ ಚರಿತೆಯನ್ನು ನೋಡಿದರೆ ಷಟ್ಪದಿ ರಚನೆಯ ಪ್ರಯೋಗಾವಸ್ಥೆ ಇನ್ನೂ ಮುಗಿದಿರಲಿಲ್ಲವೆಂಬ ಅಂಶವು ಸೂಚಿತವಾಗುತ್ತದೆ. ೧೦ನೆಯ ಶತಮಾನದವನಾದ ನಾಗವರ್ಮನು ಛಂದೋಂಬುಧಿಯಲ್ಲಿ ಷಟ್ಪದಿಯನ್ನು ಕರ್ಣಾಟಕ ವಿಷಯ ಜಾತಿಯಲ್ಲಿ ಸೇರಿಸಿ ವಿವೇಚಿಸಿದ್ದಾನೆ. ಆದರೆ ಈತನ ಷಟ್ಪದಿ ಬ್ರಹ್ಮ—ವಿಷ್ಣು—ರುದ್ರ ಎಂಬ ದೇವಗಣಗಳಿಂದ ಕೂಡಿದುದು.

ಇಂತಹ ಷಟ್ಪದಿಯ ಪ್ರಾಚೀನ ಪ್ರಯೋಗಗಳ ಒಂದು ಉದಾಹರಣೆ ಶಾಂತಿನಾಥನ ಸುಕುಮಾರಚರಿತೆಯಲ್ಲಿ ದೊರೆಯುತ್ತದೆ. ಇದರ ಕಾಲ ಕ್ರಿ. ಶ. ೧೦೬೮. ಸುಮಾರು ಅದೇ ಕಾಲದ ಅದೇ ರೀತಿಯ ದೇವಗಣಗಳಿಂದ ರಚಿತವಾದ ಒಂದೆರಡು ಷಟ್ಪದಿಯ ಪದ್ಯಗಳನ್ನು ಧಾರವಾಡ ಜಿಲ್ಲೆಯ ಅಮ್ಮಿನಭಾವಿ ಗ್ರಾಮದ ಒಂದು ಶಾಸನದಲ್ಲಿ ಕಂಡುಹಿಡಿಯಲು ಸಾಧ್ಯವಾಗಿದೆ. ಈ ಶಾಸನ ಕಾಲ ಕ್ರಿ. ಶ. ೧೦೭೧. ಈ ಶಾಸನದಲ್ಲಿ ಸುಕುಮಾರ ಚರಿತೆಯಲ್ಲಿಯಂತೆ ಈ ರಚನೆಯನ್ನು "ಷಟ್ಪದ" ಎಂದು ದಾಗಿ ಹೆಸರಿಸಿದೆ. ಶಾಸನ ಸಾಹಿತ್ಯದಲ್ಲಿ ಷಟ್ಪದಿ ರಚನೆಯ ಬೇರೆ ಉದಾಹರಣೆಗಳು ದೊರೆತಿಲ್ಲ. ಹೀಗಿರುವಾಗ ನಾಗವರ್ಮನ ದೇವಗಣಗಳ ಲಕ್ಷಣಕ್ಕೆ ಅನ್ವಯಿಸುವಂತಹ "ಷಟ್ಪದಿ" ರಚನೆ ಇಷ್ಟು ಪ್ರಾಚೀನವಾಗಿ ಶಾಸನದಲ್ಲಿ ದೊರೆತುದು ಒಂದು ಅಪೂರ್ವ ವಿಷಯ. ಇದೇ ವಿಧವಾಗಿ ತ್ರಿಪದಿಯೇ ಮೊದಲಾದ ಇತರ ಜಾನಪದ ರಚನೆಯ ಪ್ರಾಚೀನ ಪ್ರಯೋಗಗಳನ್ನು ಕುರಿತು ಶಾಸನ ಸಾಹಿತ್ಯದಲ್ಲಿ ನಿದರ್ಶನಗಳು ದೊರೆಯುತ್ತವೆ.

( ಮುಗಿದುದು. )

# ದೀಕ್ಷಾತ್ರಯಗಳು

—ಲೇಖಕರು— ಸಿ. ನಾ. ಮಹಾಂತಣ್ಣನವರ. ಹೊನ್ನೂರು.—

ವೇದಾಗಮ ಶಾಸ್ತ್ರ ಪುರಾಣಗಳನ್ನನುಸರಿಸಿದ ಭಾರತೀಯರ ಸುಸಂಸ್ಕೃತಿಯನ್ನು ಮನದಂದರೆ ಹಿಂದೊಂದು ಕಾಲದೊಳು ಶಾರೀರಿಕ ಮಾನಸಿಕ ನೈತಿಕ ಭೌತಿಕಶಾಸ್ತ್ರದಲ್ಲಿ ಇಂದಿನವರಿಗಿಂತ ಮುಂದುವರಿದಿದ್ದರೆಂಬುದು ಮನವರಿಕೆಯಾಗುವದು. ತಾತ್ವಿಕ ದೃಷ್ಟಿಯಿಂದ ವೇದಾಂತಿಗಳು, ಈ ಮಾನವ ಶರೀರವು ೨೫ ತತ್ವಗಳಿಂದ ಕೂಡಿದ್ದಾಗಿದೆಯೆಂದು ಸಿದ್ಧಪಡಿಸಿದ್ದರೆ. ವೀರಶೈವ ಸಿದ್ಧಾಂತಿಗಳು ೩೬ ತತ್ವಗಳಿಂದ ಈ ಮಾನವ ಶರೀರವು ಯುಕ್ತವಾಗಿದೆಯೆಂದು ಶಾಸನ ಪಡಿಸಿರುವರು. ಇದಲ್ಲದೆ ವೇದಾಂತಿಗಳು ತೋರುವ ಜಗತ್ತು ಆ ಜಗತ್ತಿನ ತತ್ವಾಂಶ ಹಾಗು ಮಾನವ ಶರೀರದ ಕರ್ಮೇಂದ್ರಿಯ ಜ್ಞಾನೇಂದ್ರಿಯ ಕರಣಾದಿಗಳನ್ನು ನೇತಿಗಳೆಯುತ್ತ ಉಳಿಮೆಯೇ ಪರಬ್ರಹ್ಮವೆಂದು ಅರುಹಿನೊಳು "ಅಹಂ ಬ್ರಹ್ಮಾಸ್ಮಿ" ಎಂಬ ನಿಜ ತತ್ವದ ನಿಲುಕಡೆಗೆ ಬರುವರು. ಆದರೆ ವೀರಶೈವ ಮತಮಾರ್ಗಿಗಳು ಜೀವ ಜಗತ್ತುಗಳನ್ನು ನಿರಾಕರಿಸದೆ ಎಲ್ಲವನ್ನೂ ಆದರಿಸುತ್ತ "ಅಣೋರಣೀಯಾನ್ ಮಹತೋ ಮಹೀಯಾನ್" ಎಂಬ ನುಡಿಗನುಸಾರವಾಗಿ "ಅಣುರೇಣು ಮಧ್ಯದೋಳು ಗುಣಭರಿತ ನೀನೆಂದು" ನಿಶ್ಚಯಿಸಿ ತೋರಿಕೆಯ ಜಗತ್ತಿನೊಳಗಿನ ಅಂತರ್ಜಗತ್ತಿನ ಕಡೆಗೆ ದೃಷ್ಟಿಯನ್ನು ಹೊರಳಿಸಿ "ಶಿವಮಯಂ ಜಗತ್" ಎಂಬ ವಿಶಾಲ ದೃಷ್ಟಿಯನ್ನಿಟ್ಟು, ಸ್ಥೂಲದಿಂದ ಸೂಕ್ಷ್ಮ, ಅತಿಸೂಕ್ಷ್ಮ ಸೃಷ್ಟಿವಿಚಾರಾರ್ಹರಾಗಿರುವರು, ವೇದಾಂತಿಗಳ ದಿಶೆಗೂ ವೀರಶೈವ ದಿಶೆಗೂ ಮಹದಂತರವಿದ್ದು "ಏಕೇನ ಜನ್ಮನಾ ಮುಕ್ತಿರ್ವೀರಾಣಾಂ ತು ಮಹೇಶ್ವರೀ" ಎಂಬಂತೆ ಶಿವಶರಣರೆಲ್ಲ ಒಂದೇ ಜನ್ಮದಲ್ಲಿ ಲಿಂಗಾಂಗ ಸಾಮರಸ್ಯವನ್ನು ಹೊಂದಿರುವರೆಂಬದಾಗಿ ಅವರ ಸ್ವಾನುಭಾವ ರೂಪದ ಶಿವಾನುಭವದ ಎರಡೆಂಭತ್ತು ಕೋಟಿ ವಚನಗಳೇ ಸಾಕ್ಷಿಯಾಗಿವೆ.

ವೀರಶೈವ ಶ ದೀಕ್ಷಾ ವಿಚಾರಗಳನ್ನು ಮಾಡಲು ಅದರಲ್ಲಿ ವೇಧಾ ಮಂತ್ರ ಕ್ರಿಯಾ ದೀಕ್ಷೆಗಳೆಂದು ಮೂರು ವಿಧವಾಗಿವೆ. ಆ ದೀಕ್ಷೆಗಳನ್ನು ಮಾಡುವ ಮಹಾಗಣಂಗಳು ಪೂರ್ಣ ವೀರಶೈವ ತತ್ವಾನುಭವಿಗಳೂ ಶಿವ ಯೋಗಿಗಳೂ ಶಿವಪ್ರಸಾದಿಗಳೂ ಷಟ್‌ಸ್ಥಲ ಬ್ರಹ್ಮಿಗಳೂ ವರದ ಹಸ್ತಿಗಳೂ ಆಗಿರುವರು. ಅವರೆಂದರೆ ಬಸವಾದಿ ಪ್ರಮಥರು ಶಿವಾನುಭವ ಮಂಟಪದಲ್ಲಿ ನಿರ್ಧರಿಸಿದ ತ್ರಿವಿಧ ದೀಕ್ಷೆಗಳಲ್ಲಿ ೨೧ ದೀಕ್ಷೆಗಳನ್ನು "ಸಂಗನ ಬಸವೇಶ್ವರ ವಚನಗಳು ,, ಎಂಬ ಪುಸ್ತಕದಲ್ಲಿ ವಿಸ್ತೃತವಾಗಿ ನಿರೂಪಿಸಲ್ಪಟ್ಟ ವಚನಾನುಭವಿಗಳು.

೧ **ಕ್ರಿಯಾದೀಕ್ಷೆಯು ಆಜ್ಞೋಪದೀಕ್ಷೆ**:— ಈ ದೀಕ್ಷೆಯಲ್ಲಿ ಪರದೈವ ಪರಧನ ಪರಸ್ತ್ರೀಯರನ್ನು ಮುಟ್ಟಬಾರದೆಂದೂ ಕ್ಷೀರದೋಗೆ ಘೃತವಡಗಿದಂತೆ ಏಕಸ್ವರೂಪಿನಿಂದ ನಿಮಿಷಾರ್ಧವಗಲದೆ ನಿಜವಸ್ತು ಸರ್ವಾಂಗದಲ್ಲಿ ಬೆರೆದಿರ್ಪುದೆಂದೂ ಆಜ್ಞಾಪಿಸಲ್ಪಟ್ಟಿದೆ.

**ಉಪಮಾದೀಕ್ಷೆ**— ಸ್ಥೂಲ ತನುವಿನ ಮಧ್ಯದಲ್ಲಿ ಅರುಹೇ ಗುರುವಾಗಿ, ಸೂಕ್ಷ್ಮತನುವಿನ ಮಧ್ಯದಲ್ಲಿ ಸುಜ್ಞಾನವೇ ಲಿಂಗವಾಗಿ, ಕಾರಣ ತನುವಿನ ಮಧ್ಯದಲ್ಲಿ ಸ್ವಾನುಭಾವವೇ ಜಂಗಮವಾಗಿ, ನಿರ್ಮಲ ತನುವಿನ ಮಧ್ಯದಲ್ಲಿ ಕರುಣಾಮೃತವೇ ಪಾದೋದಕವಾಗಿ, ಆನಂದ ತನುವಿನ ಮಧ್ಯದಲ್ಲಿ ಕೃಪೆಯೇ ಪ್ರಸಾದವಾಗಿ, ಚಿದ್ರೂಪವಾಗಿ ತನುಮಧ್ಯದಲ್ಲಿ ಚಿತ್ತವೇ ಭಸಿತವಾಗಿ ಚಿನ್ಮಯ ತನುಮಧ್ಯದಲ್ಲಿ ಚಿತ್ಕಾಂತಿಯೇ ರುದ್ರಾಕ್ಷಿಯಾಗಿ, ಚಿತ್ಪ್ರಕಾಶ ತನ ಮಧ್ಯದಲ್ಲಿ ಚಿದಾನಂದವೇ ಮಂತ್ರವಾಗಿ ಸರ್ವಾಂಗದಲ್ಲಿ ಅಷ್ಟಾವರಣ ಸ್ವರೂಪಿನಿಂದ ಪರಾತ್ಪರ ನಿಜವಸ್ತು ನೆಲೆಸಿರ್ಪುದು ಎಂಬದಾಗಿ ಅಷ್ಟತನುಗಳಲ್ಲಿ ಅಷ್ಟಾವರಣಗಳ ಸಂಬಂಧವನ್ನು ವಿವರಿಸುವದಾಗಿದೆ.

**ಸ್ವಸ್ತಿಕಾರೋಹಣ ದೀಕ್ಷೆ** — ಶಿಷ್ಯನ ಮಲಿನ ಭಾವಲಿಂಗದ ಶಿಲಾಭಾವವನ್ನು ವೇದೋಕ್ತ ಮಂತ್ರದಿಂದಲೂ ಪಂಚಾಭಿಷೇಕದಿಂದಲೂ ಗುರುಶಿಷ್ಯರ ನೋಟಕೂಟ ಸಮರಸದಿಂದಲೂ ಕಳೆದುಶಿಷ್ಯನಲ್ಲಿ ವಿನಯಾದಿ ಸದ್ಗುಣಗಳು ನೆಲೆಗೊಳ್ಳುವ ವೀರ ಮಾಹೇಶ್ವರರ ಶ್ರೀಪಾದ ದರ್ಶಿಸುವದಾಗುವದು.

**ಕಲಶಾಭಿಷೇಕ ದೀಕ್ಷೆ** — ಪಂಚಕಲಶಾಭಿಷೇಕದಿಂದ ಶಿಷ್ಯೋತ್ತಮನಮಸ್ತಕದ ಮೇಲೆ ಮಂತ್ರಧ್ಯಾನದಿಂದ ಸಂಪ್ರೋಕ್ಷಣೆ ಮಾಡುವದು.

**ವಿಭೂತಿಪಟ್ಟ ದೀಕ್ಷೆ** – ಇಷ್ಟಲಿಂಗದೇವಂಗೆ ಸಪ್ತವಿಧಾರ್ಚನೆ ಮಾಡಿ ಪ್ರಾಣಲಿಂಗ ಸ್ವರೂಪಾದ ಉಭಯ ಹಸ್ತವನ್ನು ಸಪ್ತವಿಧಾರ್ಚನೆ ಮಾಡಿ ದಶಾಂಗುಳಗಳ ಮಧ್ಯದಲ್ಲಿ ದ್ವಾದಶ ಮೂಲಪ್ರಣವ ಲಿಖಿಸಿ ಕುಮಾರ ಠಾವ ಮಾಡಿ ಭಾವಲಿಂಗ ಸ್ವರೂಪ ಗೋಳಕ ಸ್ಥಾನವಾದ ಮಸ್ತಕವನ್ನು ಸಪ್ತವಿಧಾರ್ಚನೆಮಾಡಿ ದ್ವಾದಶ ಪ್ರಣವ ಲಿಖಿಸಿ ಸರ್ವಾಂಗದಲ್ಲಿ ಕ್ರಿಯಾಪಾದೋದಕ ರೂಪವಾದ ಚಿದ್ಭಸಿತವ ಮಹಾಮಂತ್ರ ಸ್ಮರಣೆಯಿಂದ ಸ್ನಾನ ಧೂಳನಧಾರಣ ಮಾಡಿ, ಲಲಾಟದಲ್ಲಿ ಅನಾದಿಪ ಶಿವನ ಲಿಖಿತವ ಲಿಖಿಸಿ, ಸರ್ವಾಚಾರ ಸಂಪನ್ನನಾಗೆಂದು ಆಶೀರ್ವಚನ ನೀಡುವಂಥಾದ್ದೇ ವಿಭೂತಿಪಟ್ಟದ ದೀಕ್ಷೆಯು .

**ಲಿಂಗಾಯತ ದೀಕ್ಷೆ** — ನಿಮಿಷಾರ್ಧ ಅಗಲದಂತೆ ಅರುಹಿ ಕರಸ್ಥಳಕ್ಕೆ ಪ್ರಾಣಕಳಾ ಚೈತನ್ಯಮೂರ್ತಿ ಲಿಂಗದೇವನನ್ನು ಮೂರ್ತಗೊಳಿಸಿ, ಹೃದಯ ಕಮಲದ ಮಧ್ಯದಲ್ಲಾಡುವ ಸಹಸ್ರ ಹೆಡೆಯ ಕುಂಡಲಿ ಸರ್ಪಂಗೆ ಮುಸುಕಿರುವ ಅಜ್ಞಾನ ಮಾಯಾಮರವೆಯನ್ನು ಅನಾಹತ ದ್ವಾರದಿಂದ ಅನಾದಿ ಮೂಲಮಂತ್ರವನುಸುರಿ, ಕುಂಡಲಿ ಸರ್ಪನ ಹೆಡೆಯೆತ್ತಿಸಿ ಚಿದಗ್ನಿಯ ಪುಟವ ಮಾಡುವಂಥಾದ್ದೇ ಲಿಂಗಾಯತ ದೀಕ್ಷೆ.

**ಲಿಂಗಸ್ವಾಯತ ದೀಕ್ಷೆ** — ಇಷ್ಟಲಿಂಗವೇ ನಿನ್ನ ನಾದಬಿಂದುಕಳೆಗಳಿಗೆ ಚೈತನ್ಯ ಸ್ವರೂಪು. ಲಿಂಗದ ವೃತ್ತದಲ್ಲಿ ಸಕಲ ಲೋಕಂಗಳು ಸಕಲ ಮಂತ್ರಂಗಳು ಅಡಗಿರುವವು. ಈ ಲಿಂಗವೇ ಹರಣಕಿರಣ ಚೈತನ್ಯಸ್ವರೂಪು. ಹಾಗು ನಿನ್ನ ಸಂಜೀವನ. ಕಾಮಧೇನು, ಕಲ್ಪವೃಕ್ಷ. ಕರಸ್ಥಲದ ದೇವಂಗೆ ಜಂಗಮ ಪಾದೋದಕ ಪ್ರಸಾದವೇ ಪರಮ ಚಿದೈಶ್ವರ್ಯ. ಇಂತು ಜಂಗಮಕ್ಕೆ ಭೃತ್ಯಾಚಾರಮೂರ್ತಿ ಲಿಂಗದೇವನ ಒಕ್ಕು ಮಿಕ್ಕ ಕರುಣಜಲ ಪ್ರಸಾದವೇ ನಿನಗರ್ಪಿತವಯ್ಯ. ನಿನ್ನ ಪರಿಣಾಮ ಸಂತೋಷವೇ ಲಿಂಗಾರ್ಪಿತವಯ್ಯ ಇಂತಪ್ಪಲಿಂಗದೇವನ ನಿನ್ನ ಷಟ್‌ಸ್ಥಾನಂಗಳಲ್ಲಿ ಧರಿಸಿ, ಲಿಂಗವೇ ನಿನಗೆ ಪ್ರಾಣವಾಗಿ ನೀನು ಲಿಂಗಕ್ಕೆ ಪ್ರಾಣವಾಗಿ ಸತ್ಯದಿಂದ ಬಂದ ಪದಾರ್ಥವ ದಾಸೋಹಂ ಭಾವದಿಂದ ಲಿಂಗಜಂಗಮಕ್ಕೆ ಸಮರ್ಪಿಸಿ ಆ ಲಿಂಗಜಂಗಮದ ಪರಿಣಾಮ ಪ್ರಸಾದದಲ್ಲಿ ನಿತ್ಯ ತೃಪ್ತನಾಗಿರುವಂಥಾದ್ದೇ ಲಿಂಗಸ್ವಾಯತ ದೀಕ್ಷೆ.

**೨ ಮಂತ್ರದೀಕ್ಷೆಯ ಸಮಯದೀಕ್ಷೆ** — ದೀಕ್ಷಾ ಗುರುವಿನ ಲೀಲೆಯಿಂದ ಜ್ಞಾನೋದಯವಾಗಿ ಅಡಿಗೆರಗೆ ಬಂದ ಶಿಷ್ಯಂಗೆ ದೀಕ್ಷಾ

ಗುರುವೇ ಶಿಕ್ಷಾಗುರುಲೀಲೆಧರಿಸಿ "ಪ್ರಮಥ ಗಣಂಗಳ ಸನ್ಮಾರ್ಗಾಚಾರದಲ್ಲಿ ದೃಢಚಿತ್ತದಿಂದ ನಿಂದು ನಿರಾಭಾರಿ ವೀರಶೈವ ಷಟ್‌ಸ್ಥಲ ಮಾರ್ಗದಲ್ಲಿ ಆಚರಿಸುವ ಶರಣಂಗಳಲ್ಲಿ ಪಂಚಸೂತಕಂಗಳ ಕಲ್ಪಿಸದೆ, ಭೃತ್ಯಾಚಾರ ಮುಂದುಗೊಂಡು ಅವರ ಒಕ್ಕು ಮಿಕ್ಕಿದನು ಹಾರೈಸಿ ನಿಜಭಕ್ತಿಯಲಿನಿಂದು ಅರಿಷಡ್ವರ್ಗಂಗಳ ಬಲಿಗೆ ಸಿಕ್ಕದೆ ತ್ರಿಕರಣ ಪವಿತ್ರತೆಯಿಂದ ಅಷ್ಟಾವರಣವ ಸ್ತೋತ್ರವ ಮಾಡುವಂಥಾದ್ದೇ ಸಮಯದೀಕ್ಷೆ.

**ನಿಃಸಂಸಾರ ದೀಕ್ಷೆ** — ಸ್ವಾತ್ವಜ್ಞಾನದಿಂದ ಶ್ರುತಿಗುರು ಸ್ವಾನುಭಾವ ಹಿಡಿದು ನಿನ್ನ ತನುಮನ ಕರಣೇಂದ್ರಿಯಗಳನ್ನು ಪರಿಪಕ್ವಗೊಳಿಸಿ ಅರ್ಥಪ್ರಾಣಾಭಿಮಾನಗಳನ್ನು ಶ್ರೀ ಗುರುಲಿಂಗಜಂಗಮ ಭಕ್ತಮಹೇಶ್ವರಶರಣಗಣಂಗಳಿಗೆ ಅರ್ಪಿಸಿ ನಿರ್ವಂಚಕ ಬುದ್ಧಿ ಮುಂದುಗೊಂಡು ಅಷ್ಟವಿಧಾರ್ಚನೆ ಷೋಡಶೋಪಚಾರಗಳಿಂದ ಇಷ್ಟಲಿಂಗವ ಮಂತ್ರಧ್ಯಾನ ಜಪಸ್ತೋತ್ರಗಳಿಂದ ಪ್ರಾಣಲಿಂಗವ ಮನೋರ್ಲಯ ನಿರಂಜನಕ್ರಿಯೆಗಳಿಂದ ಭಾವಲಿಂಗವ ತೃಪ್ತಿಮಾಡಿ ತನಗೊಂದಾಶ್ರಯವಿಲ್ಲದೆ ಚಿದ್ಘನ ಮಹಾಲಿಂಗದಲ್ಲಿ ಅವಿರಳಾನಂದದಿಂದ ಕೂಟಸ್ಥನಾಗಿರುವಂಥಾದ್ದೇ ನಿಃಸಂಸಾರ ದೀಕ್ಷೆಯು.

**ನಿರ್ವಾಣ ದೀಕ್ಷೆ:**— ಶ್ರೀಗುರು ಕರಜಾತನಾದ ಮೇಲೆ ಹೊನ್ನು ಹೆಣ್ಣು ಮಣ್ಣು, ಅನ್ನನೀರು ವಸ್ತ್ರಾಭರಣ, ವಾಹನ ಪುತ್ರ ಮಿತ್ರ, ದಾರಿದ್ರ್ಯಚಿಂತೆ ಶತ್ರುತ್ವಂಗಳ ಸಮಾನಂಗಂಡು ಲಿಂಗಾಣತಿಯಿಂದ ಬಂದ ಸುಖವಾಸ ತೃಪ್ತಿಗಳು ಬಂದು ತಟ್ಟಿದಲ್ಲಿ ಸಂತೃಪ್ತನಾಗಿ, ಆಧಿವ್ಯಾಧಿಗಳು ಬಂದು ತಟ್ಟಿದಲ್ಲಿ ಪಾದೋದಕ ಪ್ರಸಾದದಲ್ಲಿ ಕೂಡಿಸಿ, ಸಮ ಭಾಜನವ ಮಾಡಿ ಲಿಂಗ ಭೋಗೋಪ ಭೋಗಿಯಾಗಿ ಅವಿರಳಾನಂದದಿಂದ ಹಿಂದಣ ಪಾಪ, ಮುಂದಣ ಪುಣ್ಯಗಳಿಗೆ ಹೊರಗಾಗಿ, ಅವನ್ನು ತನ್ನೊಳಗೆ ಮಾಡಿಕೊಂಡು, ಮನಬಯಕೆಯ ನೀಗಿ, ಕಾಲಹರ ಕರ್ಮಹರ ದುರಿತ ಹರ ಪಾಪಹರ ಲೀಲೆಯಿಂದ ಮರ್ತ್ಯದಲ್ಲಿ ಇದ್ದು ಇಲ್ಲದಂತೆ ಸಚ್ಚಿದಾನಂದನಾಗಿ ಆಚರಿಸುವಂಥ ನಿಜನೈಷ್ಠೆಯೇ ನಿರ್ವಾಣ ದೀಕ್ಷೆಯು.

**ತತ್ವ ದೀಕ್ಷೆ:**— ಒಂದು ( ಅನಾದಿ ಮೂಲಪ್ರಣವವೇ ) ಸಾಕಾರ ಲೀಲೆಯ ಧರಿಸಿ, ಚಿದಂಗ ಚಿದ್ಘನ ಲಿಂಗವಾಗಿ ಒಂದಂಗದ ಲಿಂಗವೇ ತ್ರಿವಿಧಾಂಗ ತ್ರಿವಿಧ ಲಿಂಗವಾಗಿ, ಆ ತ್ರಿವಿಧಾಂಗ ಲಿಂಗಗಳೇ ಷಡ್ವಿಧ ಅಂಗ

ಲಿಂಗಗಳಾಗಿ, ಆಷಡ್ವಿಧ ಲಿಂಗಾಂಗವೇ ಮೂವತ್ತಾರು ಲಿಂಗಾಂಗವಾಗಿ ಆ ಮೂವತ್ತಾರು ಲಿಂಗಾಂಗಗಳನೇ ಶ್ರದ್ಧಾದಿ ೩೬ ಭಕ್ತಿಗಳಲ್ಲಿ ಕೂಟವನಮಾಡಿ ಇಂತು ಲಿಂಗಾಂಗ ಭಕ್ತಿಗಳನೇ ಸತ್ಕ್ರಿಯೆ, ಸಮ್ಯಜ್ಞಾನ, ಸತ್ಕ್ರಿಯಾಕ ಸತ್ಪಾತ್ರ ಭಿಕ್ಷೆಯಲ್ಲಿ ಸಮರಸವಮಾಡಿ, ಆ ಮಹಾಜ್ಞಾನವ ಸಾಧಿಸಿ, ಆ ಮಹಾ ಜ್ಞಾನದ ಬಲದಿಂದ ಪೃಥ್ವಿತತ್ವ ಸಂಬಂಧವಾದ ಕರ್ಮೇಂದ್ರಿಯಗಳು, ವಾಯು ತತ್ವಸಂಬಂಧವಾದ ಜ್ಞಾನೇಂದ್ರಿಯಗಳು, ಅಗ್ನಿತತ್ವ ಸಂಬಂಧ ವಾದ ವಿಷಯೇಂದ್ರಿಯಗಳು ವಾಯುತತ್ವ ಸಂಬಂಧವಾದ ಪ್ರಾಣವಾಯುಗಳು ಆಕಾಶ ತತ್ವಸಂಬಂಧವಾದ ಕರಣಗಳು ಭಾನು ತತ್ವ ಸಂಬಂಧವಾದ ಉದರ ವೆಂಬ ಭೂತಗಳು, ಶಿವತತ್ವ ಸಂಬಂಧವಾದ ಶ್ವೇತವರ್ಣ ಮೊದಲಾದ ವರ್ಣಗಳು, ಆತ್ಮತತ್ವ ಸಂಬಂಧವಾದ ಸಮಸ್ತ ನಾದಂಗಳು ಇಂತು ಸಮಸ್ತ ತತ್ವಂಗಳು ಕೂಡಲಾಗಿ ೪೦ ತತ್ವವೆನಿಸುವವು. ಈ ತತ್ವಗಳ ಶಿವತತ್ವ, ಅನಾದಿಶಿವತತ್ವ, ಅನಾದಿ ನಿಃಕಲಸಂಶಿವತತ್ವ, ಅನಾದಿ ನಿಃಕಲ ಪರಾತ್ಪರ ಶಿವತತ್ವವೆಂಬ ಚತುರ್ವಿಧ ತತ್ವಸ್ವರೂಪ ಗುರುಲಿಂಗ ಜಂಗಮ ಕೂಡಿಸಿ, ಆ ಮಹಾಜ್ಞಾನದಿಂದ ನೋಡಿದಲ್ಲಿ ಆಳ ತತ್ವಸ್ವರೂಪಿನಿಂದ ಒಂದು ಚಿದಂಗ ವೆನಿಸುವದಯ್ಯಾ. ಆ ಚಿದಂಗ ಷಟ್ ಚಕ್ರಂಗಳಲ್ಲಿ ಶ್ರೀಗುರುಲಿಂಗ ಜಂಗಮ ಕೃಪೆಯಿಂದ ೫೬ ಪ್ರಣವಂಗಳೇ ಸಾಕಾರ ಲೀಲೆಯ ಧರಿಸಿ ನಾನಾಕೃತಿ ಸಂಬಂಧವಾದ ಅನಾದಿ ಮೂಲ ಪ್ರಣವ ಕೂಡಿ ಏಕ ಸ್ವರೂಪಿನಿಂದ ೫೭ ಲಿಂಗ ಸ್ವರೂಪು ಪ್ರಣವನೊಳಗೊಂಡು ಬಂದು ಚಿದ್ಘನ ಲಿಂಗ ವೆನಿಸುವದಯ್ಯಾ. ಇಂತು ಅಂಗಲಿಂಗವೆಂಬ ನೂರೊಂದು ಸ್ಥಲಕುಲ ವಿಚಾರಿಸಿ ಶರಣರೂಪಿಂದ ತನ್ನ ಆದಿ ಮಧ್ಯಾವಸಾನವ ತಿಳಿದು ಕರ್ತೃಭೃತ್ಯತ್ವ ಆಚಾರ ಸದ್ಭಕ್ತಿಯೆಂಬ ನಿಜ ಸಮಾಧಿಯಲ್ಲಿ ನಿರವಯುಲ ಕೂಡುವಂಥಾದ್ದು ತತ್ವದೀಕ್ಷೆ.

ಅಧ್ಯಾತ್ಮ ದೀಕ್ಷೆ:-- ಷಟ್ ಚಕ್ರಂಗಳಲ್ಲಿ ಅನಾದಿ ನಿಃಕಳಂಕ ಚಿದ್ಘನ ಇಷ್ಟಮಹಾಲಿಂಗವೇ ಷಡ್ವಿಧ ಲಿಂಗವಾಗಿ ನೆಲೆಸಿರ್ಪುದದೆಂ ತೆನೆ— ಆಧಾರ ಚಕ್ರನಾಲ್ಕೆಸಳ ಮಧ್ಯದಲ್ಲಿ ನಕಾರ ಮಂತ್ರ ಮೂರ್ತಿ ಆಚಾರ ಲಿಂಗವಾಗಿ ಸ್ವಾಧಿಷ್ಠಾನ ಚಕ್ರದ ಆರೆಸಳ ಮಧ್ಯದಲ್ಲಿ ಮಕಾರ ಮಂತ್ರ ಮೂರ್ತಿ ಗುರುಲಿಂಗವಾಗಿ ಮಣಿಪೂರ ಚಕ್ರದ ಹತ್ತೆಸಳ ಮಧ್ಯದಲ್ಲಿ ಶಿಕಾರ ಮಂತ್ರಮೂರ್ತಿ ಶಿವಲಿಂಗವಾಗಿ, ಅನಾಹತ ಚಕ್ರದ ಹನ್ನೆರಡೆಸಳ ಮಧ್ಯದಲ್ಲಿ ವಕಾರ ಮಂತ್ರಮೂರ್ತಿ ಜಂಗಮಲಿಂಗವಾಗಿ ವಿಶುದ್ಧಿ ಚಕ್ರದ

ಹದಿನಾರೆಸಳ ಮಧ್ಯದಲ್ಲಿ ಯಕಾರ ಮಂತ್ರಮೂರ್ತಿ ಪ್ರಸಾದ ಲಿಂಗವಾಗಿ ಆಜ್ಞಾಚಕ್ರದ ಎರಡೆಸಳ ಮಧ್ಯದಲ್ಲಿ ಓಂಕಾರ ಮಂತ್ರಮೂರ್ತಿ ಮಹಾ ಲಿಂಗವಾಗಿ ನೆಲಸಿರ್ಪುದು ನೋಡಾ. ಇಂತು ನಿನ್ನ ಷಟ್ಚಕ್ರದ ಮಧ್ಯ ದೊಳು ನೆಲಿಸಿ, ನಿನ್ನ ಷಡ್ವಿಧ ಯೋಗಂಗಳನು ಕೈಕೊಂಡು, ಆ ಪರಿ ಣಾಮವ ನಿನಗೆ ಸಂತೃಪ್ತಿಯ ಮಾಡಿ, ಶರಣ ಸತಿ ಲಿಂಗ ಪತಿ ಭಾವ ದಿಂದ ಮೇಲುಗಿರಿ ಮಂಟಪದ ನವರತ್ನಖಚಿತ ಸಹಸ್ರದಳ ಪದ್ಮಯು ಕ್ತವಾದ ಪರ್ಯಂಕದ ಮೇಲೆ ಲಿಂಗಾನುಭವ ರತಿ ಸುಖಾನಂದದಿಂ ಶೋಭಿಸುವಂಥಾದ್ದೇ ಅಧ್ಯಾತ್ಮ ದೀಕ್ಷೆ.

**ಅನುಗ್ರಹದೀಕ್ಷೆ** — ಅಯ್ಯಾ ನಿನ್ನ ಚಿದಂಗದ ಷಟ್‌ಸ್ಥಾನಂ ಗಳಲ್ಲಿ ೨೫ ತತ್ವಗಳು ಅಡಗಿರ್ಪವು. ಚಿದ್ಘನ ಲಿಂಗದ ಷಟ್‌ಸ್ಥಾನಂಗ ಳಲ್ಲಿ ೧೮ ತತ್ವಗಳು ಅಡಗಿರ್ಪವು ಆ ಚಿದಂಗ ಚಿದ್ಘನ ಲಿಂಗದ ಮಧ್ಯ ದಲ್ಲಿ ಬೆಳಗುವ ಅಖಂಡಜ್ಯೋತಿ ಪ್ರಣವದ ಷಟ್‌ಸ್ಥಾನದಲ್ಲಿ ಅಷ್ಟವಿಧ ತತ್ವಗಳು ಅಡಗಿರ್ಪವು. ಚಿದ್ಘನ ಲಿಂಗವು ಅಷ್ಟವಿಧ ಸಕೀಲಗಳಿಂದ ಅಖಂಡಜ್ಯೋತಿ ಪ್ರಣವನಾಶ್ರಯಿಸಿರ್ಪುದು. ಇಂತು ನೂರೊಂದು ಸಕೀ ಲಂಗಳ ತತ್ವದ ರೂಪಿಂದ ತಿಳಿದು, ಅಂಗಲಿಂಗದಲ್ಲಿ ಅಡಗಿರುವ ನೂರೊಂದು ಸಕೀಲಂಗಳ ನೂರೊಂದು ಸ್ಥಲದಲ್ಲಿ ನೆಲೆಗೊಳಿಸಿ ಪರತತ್ವಲಿಂಗ ಲೀಲೆ ಯಿಂದ ನಿಂದ ನಿಲುಕಡೆಯೇ ಅನುಗ್ರಹದೀಕ್ಷೆಯು.

**ಸತ್ಯಶುದ್ಧ ದೀಕ್ಷೆ** :— ಸತ್ತು ಚಿತ್ತಾನಂದ ನಿತ್ಯಪರಿಪೂರ್ಣವೆಂಬ ಪಂಚಾಂಗನಂಗೀಕರಿಸಿಕೊಂಡಿಹ ಪರಬ್ರಹ್ಮದಲ್ಲಿ ಸಮರಸ ಸಂಗದಿಂದ ಕೂಟವಮಾಡಿ, ಅವಿರಳ ಪರಂಜ್ಯೋತಿ ಶರಣನ ನಿಲುಕಡೆಯೆಂತೆಂ ದೊಡೆ— ನಡೆ ನುಡಿ ಸತ್ಯ, ದೃಢಚಿತ್ತ, ಕೊಟ್ಟಭಾಷೆಬಿಡದವ, ಸತ್ಕಾ ಯಕ, ಸತ್ಪಾತ್ರಭಕ್ತಿ, ಸತ್ಕ್ರಿಯೆ ಜ್ಞಾನಾಚಾರಂಗಳ ಅವರಂತರದಲ್ಲಿ ನಿಂದೆ ಕುಂದೆ, ರೋಗರುಜೆ, ವಿಪತ್ತು ಹಾಸ್ಯರೋಷಗಳು ತಟ್ಟಿದಲ್ಲಿ ಶ್ರೀಗುರುಲಿಂಗಜಂಗಮದ ಕರುಣಾ ಕಟಾಕ್ಷೆಯಿಂದ ಬಂದ ಮಹಾಪ್ರಸಾ ದವೆಂದು ಲಿಂಗ ಭೋಗೋಪ ಭೋಗಿಯಾಗಿರುವನು. ಎತ್ತು ತೊಡರು ಗಳಿಗೆ ಅಂಜದೆ ಪರಮಾನಂದ ಸುಖಾಬ್ಧಿಯಲ್ಲಿ ಮುಳುಗಿ, ಅಷ್ಟಾವಧಾನ ಎಚ್ಚರಗುಂದದೆ ಮನ ಪ್ರಾಣ ಲಿಂಗವಾದುದೀಗ ಸತ್ಯಶುದ್ಧದೀಕ್ಷೆಯು.

**೩ ಬೋಧಾದೀಕ್ಷೆ (ಜ್ಞಾನದೀಕ್ಷೆ)ಯ ಏಕಾಗ್ರದೀಕ್ಷೆ**— ದೀಕ್ಷಾಶಿಕ್ಷಾ ಗುರುವೇ ಜ್ಞಾನಗುರುವಾಗಿ ಸರ್ವಾವಸ್ಥೆಯಲ್ಲಿ ಸತಿಯು

ರಮಣನ ರತಿ ಸಂಯೋಗಾನು ಸಂಧಾನದಿಂದ ಎರಕಳಿದಿರುವ ಸತ್ಯಾಂಗನೆಯಂತೆ ಶ್ರೀಗುರುವಿನ ಕರಗರ್ಭ ಮಧ್ಯದಲ್ಲಿ ಜನಿತವಾದ ಲಿಂಭಕ್ತ ಸತಿಸುತ ಪಿತಮಾತೆ ಬಂಧುಬಳಗ ಒಡಹುಟ್ಟಿದವರು ಮೊದಲಾಗಿ ಪರಶಿವಲಿಂಗ ಜಂಗಮ ತೀರ್ಥಪ್ರಸಾದ ಮಂತ್ರದಲ್ಲಿ ವ ನವಾಳಗಿ ಕಾಯಕ ವಾಚಕ ಮಾನಸಿಕ ಮೊದಲಾದ ಸಮಸ್ತ ತತ್ವಗಳ ಸ್ವಪಾಕವ ಮಾಡಿ ನಿ:ಕಳಂಕ ಪರಶಿವ ಜಂಗಮಕ್ಕೆ ಸಮರ್ಪಿಸಿ ಅವರ ಒಕ್ಕು ಮಿಕ್ಕ ಹರ್ಷಾನಂದ ಮಹಾ ಪ್ರಸಾದದಲ್ಲಿ ಸಂತೃಪ್ತನಾಗಿ, ಇಷ್ಟಲಿಂಗ ಬಾಹ್ಯವಾದ ಜಡಶೈವ ನಡೆನುಡಿಗಳ ಆಲಿಸದಿರ್ಪುದೆ ಏಕಾಗ್ರದೀಕ್ಷೆಯು.

ದೃಢವ್ರತದೀಕ್ಷೆ — ಆದಿ ಪ್ರಸಾದ ಸ್ಥಲ, ಅಂತ್ಯಪ್ರಸಾದಿ ಸ್ಥಲ ಸೇವ್ಯಪ್ರಸಾದಿಸ್ಥಲ, ನಿಚ್ಚಪ್ರಸಾದಿ, ಅಚ್ಚಪ್ರಸಾದ ಸಮಯ ಪ್ರಸಾದಿಗಳ ಭೇದವರಿತು ಸರ್ವಾಚಾರ ಸಂಪತ್ತಿನ ಆಚರಣೆಯ ಅರ್ಪಿತಾವಧಾನಂಗಳ ಚೇತನ ಪರ್ಯಂತರವೂ ಆಚರಿಸುವಂಥಾದ್ದೇ ದೃಢವ್ರತದೀಕ್ಷೆಯು.

ಪಂಚೇಂದ್ರಿಯಾರ್ಪಿತ ದೀಕ್ಷೆ — ಶರಣ ಸತಿ ಲಿಂಗಪತಿಭಾವದಿಂದ ಸುಚಿತ್ತ ಸುಬುದ್ಧಿ ನಿರಹಂಕಾರ ಸುಮನ ಸುಜ್ಞಾನ ಸದ್ಭಾವ ನಿರುಪಾಧಿಕ ನಿ:ಕಳಂಕ ನಿರಾಲಂಬವೆಂಬ ನವವಿಧ ಹಸ್ತಗಳಿಂದ ನವವಿಧ ಲಿಂಗಗಳಿಗೆ ನವವಿಧ ಭಕ್ತಿಯಿಂದ ಸಮರ್ಪಿಸಿ, ಆ ಲಿಂಗಗಳ ಸಂತೃಪ್ತಿಪರಿಣಾಮ ಪ್ರಸಾದದಲ್ಲಿ ಲೋಲುಪ್ತರಾಗಿ ಇರುವದಂಥಾದ್ದೇ ಪಂಚೇಂದ್ರಿಯಾರ್ಪಿತ ದೀಕ್ಷೆಯು.

ಅಹಿಂಸಾ ದೀಕ್ಷೆ : — ಶ್ರೀ ಗುರುಲಿಂಗ ಜಂಗಮಸದ ಕರುಣಾ ಕಟಾಕ್ಷೆಯಿಂದ ನಿರ್ಮಾಯ ಕಂಥೆಯ ಧರಿಸಿದ ಶಿವಶರಣಂಗೆ ಪರಿಪರಿಯಿಂದ ನಿಂದೆ ಕುಂದು ಅಪಮೃತ್ಯುಗಳು ತಟ್ಟಿದಲ್ಲಿ ಸ್ವಾತ್ಮಜ್ಞಾನದಿಂದ ಅರಿದು ನೋಡಿದಲ್ಲಿ ಈ ಮಾಯಾಜಡ ಜೀವಾತ್ಮರಿಗೆ ಸೂತ್ರಧಾರಿ ಶಿವನು ಕಪಟ ನಾಟಕ ಲೀಲೆಯ ಧರಿಸಿ, ಸಕಲ ಜೀವಾತ್ಮರ ಮಧ್ಯದಲ್ಲಿ ಅಣುವಿಗಣುವಾಗಿ ಮಹತ್ತಿಂಗೆ ಮಹತ್ತಾಗಿ, ಆ ಜೀವನೆಂಬ ವಿಧಿಗೆ, ಸ್ತುತಿ ನಿಂದ, ಪುಣ್ಯ ಪಾಪ, ಸಂಕಲ್ಪ ವಿಕಲ್ಪವೆಂಬ ಕುಟಿಲ ವ್ಯವಹಾರವ ಕಲ್ಪಿಸಿ, ಆಜೀವನಿಂದ ಭಕ್ತಗಣಂಗಳಲ್ಲಿ ಅಷ್ಟಾವರಣದ ನಿಷ್ಠಾಪರತ್ವವ ನೋಡಬೇಕೆಂದು, ಅನಂತಬಾಧೆಗಳಿಂದ ಬಾಧಿಸಿದಲ್ಲಿ ಶಿವಶರಣಗಣಂಗಳು ಆ ಬಾಧೆಗೆ ಅಳುಕದೆ ಚಿಂತಿಸದೆ, ಅಷ್ಟಾವರಣ ಭರಿತರಾಗಿ

ದೇಹಾಭಿಮಾನದ ಹಸಿವು ತೃಷೆ, ನಿದ್ರೆ ಆಲಸ್ಯ ಸಂಗವೆಂಬ ಕಾಲ ಕಾಮುಕ ಪಾಶದಲ್ಲಿ ಬೀಳದೆ, ದುಷ್ಟರಿಂದ ಪಾರಾಗಿ ಪರಶಿವಲಿಂಗದಲ್ಲಿ ಸದಾ ಸನ್ಮಾರ್ಗಿಯಾಗಿ ಸುಸಂಗಿಗಳಿಂದ ಶ್ರದ್ಧಾತುರ ಪರಿಣಾಮದಲ್ಲಿ ಬಂದೊದಗಿದ ಪರಿಣಾಮು ಪಾದೋದಕ ಪ್ರಸಾದದಲ್ಲಿ ಲೋಲುಪ್ತರಾಗಿ ಹೃದಯ ಪರಿಪಕ್ವವಾಗಿರುವದೇ ಅಹಿಂಸಾದೀಕ್ಷೆಯು.

**ಲಿಂಗನಿಷ್ಠಾದೀಕ್ಷೆ :—** ಸತ್ತು ಚಿತ್ತಾನಂದ ನಿತ್ಯಪರಿಪೂರ್ಣ ಅವಿರಳ ಪರಂಜ್ಯೋತಿ ಸ್ವರೂಪ ಪರಮಾರಾಧ್ಯ ವೀರಶೈವಾಚಾರ ಷಟ್ಸ್ಥಲ ಪ್ರತಿಪಾದಕ ಶ್ರೀಗುರು ಲಿಂಗಜಂಗಮ ಕೃಪಾಕಟಾಕ್ಷೆಯಿಂದ ಅಂಗಮನ ಭಾವಗಳೆಲ್ಲ ಶುದ್ಧ ಸಿದ್ಧ ಪ್ರಸಿದ್ಧ ಪ್ರಸಾದ ಸ್ವರೂಪಾದ ಇಷ್ಟಪ್ರಾಣ ಭಾವಲಿಂಗವಾದ ಮೇಲೆ ಭೃಂಗಕೀಡೆಯೋಪಾದಿಯಲ್ಲಿ, ಗುರುಲಿಂಗಜಂಗಮು ಬೇರೆ, ನಾನು ಬೇರೆಂಬ ಭಿನ್ನ ಭಾವವಳಿದು ಗುರು ಮಾರ್ಗಾಚಾರದಲ್ಲಿ ಪ್ರೇಮವುಳ್ಳಾತನಾಗಿ ಗುರು ವೇಷಧಾರಿಗಳ ನಂಬದೆ ಪರತತ್ವ ಮಾರ್ಗಧ್ಯಾನದಿಂದ ಚಿದ್ಘನಲಿಂಗದೊಳಗೆ ತಾನಾಗಿ, ತನ್ನೊಳು ಚಿದ್ಘನಲಿಂಗವಾಗಿ, ಸಪ್ತಧಾತು ಸಪ್ತವ್ಯಸನಗಳಲ್ಲಿ ಕೂಡದೆ ಲಿಂಗನೇ ತಾನಾದ ಸ್ವಸ್ವರೂಪು ನಿಲುಕಡೆಯೇ ಲಿಂಗನಿಷ್ಠಾದೀಕ್ಷೆಯು.

**ಮನೋಲಯದೀಕ್ಷೆ —** ಚಿತ್ತ ಚಂಚಲವಾಗಿ ಗುರುಮಾರ್ಗಾಚಾರಕ್ಕೆ ಕುಂದುಕೊರತೆ ತರುವ ಎಚ್ಚರದಪ್ಪಿ ಅನಾಚಾರಕ್ಕೆ ಎಳೆಯುವ ಮನಸ್ಸುಂಟಾಗಲು, ಆಗ ಅಸ್ಥಿರ ಮನಸ್ಸನ್ನು ಕಂಡು, ಸ್ವಾನುಭವದಿಂದ ತನ್ನೊಳುಂಟಾಗುವ ಕರಣಮಥನ ಕಳೆಯಲು ಯತ್ನಿಸಿ ನಿಜದಲ್ಲಿ ಚಿತ್ತವ ಸುಯಿಧಾನಗೈದು, ಏಕಮಾರ್ಗದಲ್ಲಿ ಆಚರಿಸಿ ನಿಃಕಲ ಪರಶಿವಲಿಂಗದಲ್ಲಿ ಶಿಖಿಕರ್ಪೂರದಂತೆ ರತಿ ಸಂಯೋಗವುಳ್ಳಂಥಾದ್ದೇ ಮನೋಲಯದೀಕ್ಷೆಯು.

**ಸದ್ಯೋನ್ಮುಕ್ತಿ ದೀಕ್ಷೆ:—** ಶ್ರೀಗುರುವಾಕ್ಯದ ನಿಜನೈಷ್ಠೆಯಿಂದರಿದು, ನಿಜವೀರಶೈವ ಸದ್ಭಕ್ತಾಚಾರ ಲಿಂಗ ಮುಖದಿಂದರಿದು ಬಂದ ಸ್ವಪಾಕವಾದರೂ ಅಥವಾ ಭಕ್ತಾಶ್ರಯದಲ್ಲಿ ಸ್ವಪಾಕವಮಾಡಿ ಸಂಬಂಧಾಚರಣೆಗಳಿಂದ ಪವಿತ್ರ ಸ್ವರೂಪ ಪಾದೋದಕ ಪ್ರಸಾದವೆನಿಸಿ, ನಿರ್ವಂಚಕತ್ವದಿಂದ ಸಂಚಲಚಿತ್ತವನುಳಿದು ಮಂತ್ರಸ್ಮರಣೆಯಿಂದ ಸದಾಚಾರ ಸಂಪತ್ತಿನಾ

ಚರಣೆಯನ್ನೊಳಗೊಂಡು ಸಮಸ್ತಲೋಕಪಾವನ ಮೂರ್ತಿ ನಿಃಕಲ ಪರ ಶಿವಲಿಂಗ ಜಂಗಮಕ್ಕೆ ಕೊಟ್ಟುಕೊಂಬ ಸದ್ಭಕ್ತ ಜಂಗಮದ ಚರಣ ಕಮಲ ಧೂಳನವೇ ದ್ವಿತೀಯ ಕೈಲಾಸಮಂದಿರವೆಂದು ಹಿಂದು ಮುಂದಣ ಆಶೆ ಆಮಿಷದ ಭ್ರಾಂತಿ ಭ್ರಮೆಗಳನುಳಿದು, ಧ್ಯಾನ ಮೌನ ನೇಮ ನಿತ್ಯ ಸತ್ಯ ಸದ್ಭಾವವೆಂಬ ಷಡ್ಗುಣೈಶ್ವರ್ಯ ಸಂಪದವ ನಿಃಕಲ ಪರತತ್ವಲಿಂಗದಿಂ ಪಡೆದು, ಆ ಲಿಂಗದೊಡನೆ ಭೋಗಿಸಿ, ನಿಃಕಲ ಪರತತ್ವತಾನಾದ ನಿಜ ಮೋಕ್ಷದಿರವೇ ಸದ್ಯೋನ್ಮುಕ್ತಿದೀಕ್ಷೆಯು.

ಬಸವಾದಿಪ್ರಮಥರ ಶಿವಾನುಭವ ಮಂಟಪವನ್ನನುಕರಿಸಿದ ಶಿವಾನು ಭವ ಪತ್ರಿಕೆಯು ಲಿಂಗಾಂಗ ಸಾಮರಸ್ಯದ ಅನುವಿಗೆ ಬಲವಾದ ಆಧಾ ರವಾಗಿದೆ. ಈ ಪತ್ರಿಕೆಯ ಅಸ್ತಿತ್ವವುಂಟಾಗಿ ೨೭ ವರ್ಷಗಳ ಅವಧಿಯಲ್ಲಿ ಶಿವಾನುಭವ ಪ್ರಕಾಶವು ವೀರಶೈವ ಸಮಾಜಕ್ಕಷ್ಟೇ ಅಲ್ಲ. ಇಡೀ ವಿಶ್ವ ಕ್ಕೇನೇ ಬೀಳಬಹುದಾಗಿತ್ತು. ಅದೇಕೆ ? ಬೀಳಲನುವಾಗಿದೆ. ಕೆಲವು ಟ್ಟಿಗೆ ಬಿದ್ದಿದೆ. ಶಿವಾನುಭವ ಪತ್ರಿಕೆಯದ್ವಾರಾ, ಹಾಗು ಶರಣಗಣಂಗಳ ವಚನ ಪ್ರಚಾರ ಗ್ರಂಥಗಳದ್ವಾರಾ ವೀರಶೈವ ಮತತತ್ವಗಳೂ ಆಚರಣೆ ಗಳೂ ಕ್ರಿಯೆಗಳೂ ಯೋಗಗಳೂ ಷಟ್‌ಸ್ಥಲಗಳೂ ಸಕೀಲಗಳೂ ಅನು ಭಾವದ ಅರುಹಿನ ಕುರುಹುಗಳೂ ಶಿವಶರಣರ ಐತಿಹ್ಯಗಳೂ ಸ್ಥೂಲ ಸೂಕ್ಷ್ಮಕಾರಣ ಮಹಾಕಾರಣಾದಿ ಸೃಷ್ಟಿಗಳ ನೋಟಕ್ಕೆಳಗಳೂ ದೃಷ್ಟಿ ನಿಡುದೃಷ್ಟಿಗಳಿಗೆ ಅವಗತವಾಗುತ್ತ ಸಾಗಿವೆ. ಅದರೂ ಶಿವಾನುಭವ ಪತ್ರಿಕಾ ಸಂಪಾದಕರ ವೀರಶೈವ ಸಮಾಜದ ಸರ್ವತೋಪರಿ ಸುಧಾರ ಣೆಗೆ ಸಂತೃಪ್ತಿಯಾಗಿಲ್ಲೆಂದು ಕಳವಳಪಡಬೇಕಾಗಿದೆ. ಆ ಮಹನೀಯರು ಕೈಕೊಂಡ ಸಕಲ ಕಾರ್ಯಗಳಲ್ಲಿ ಶಿವಾನುಭವ ಸಂಘಗಳು ಪ್ರತಿಗ್ರಾಮಾಂ ತರಗಳಲ್ಲಿ ಉಂಟಾಗಬೇಕೆಂಬ ಉದ್ದೇಶವನ್ನು ಇಟ್ಟುಕೊಂಡದ್ದಾಗಿತ್ತು. ಅಷ್ಟರಲ್ಲಿ ಧಾರವಾಡ ಪ್ರಮುಖರು ಅಖಿಲ ಭರತಖಂಡದ ಶಿವಾನುಭವ ಸಂಘವೆಂದು ಸ್ಥಾಪಿಸಿ, ಆ ಹೆಸರಿಗನುಗುಣವಾಗಿ ಸಾಕಷ್ಟು ಕಾರ್ಯ ರೂಪಕ್ಕೆ ಬರದ್ದಕ್ಕಾಗಿ ವಿಷಾದಪಡಬೇಕಾಗಿದೆ. ಇನ್ನಾದರೂ ಅಖಿಲ ಭಾರತ ಶಿವಾನುಭವ ಸಂಘದವರು ಶಿವಾನುಭವ ಪತ್ರಿಕೆಯ ಸಂಚಾಲಕ ರೊಂದಿಗೆ ವಿಚಾರವಿನಿಮಯ ಮಾಡಿ ವೀರಶೈವ ಸಮಾಜಸಂಘಟನೆ, ಸುಶಿಕ್ಷಣ, ಸದಾಚಾರ ಸುನೀತಿ ಸದ್ಬೋಧ ಸತ್ಕಾಯಕ ಸತ್ಕ್ರಿಯೆ ಸನ್ನಿಷ್ಠೆ ಶಿವಯೋಗ ಸಮ್ಯಜ್ಞಾನ ಮಹಾಜ್ಞಾನಗಳು ಮನೆಮನೆಗಳಲ್ಲಿ

ಉಂಟಾಗಿ, ವೀರಶೈವ ಸಂಸ್ಕೃತಿಯು ಪ್ರಕಾಶವು ಇಡೀ ಮಾನವಕೋಟಿಯು ಹೃದಯಂಗಮವಾಗುವಂತೆ ಪ್ರಯತ್ನಿಸುವರೆಂದು ಕೋರದೆ ಇರಲಾರೆ. ವೀರಶೈವ ದೀಕ್ಷಾಕ್ರಮವೂ ಆಚಾರವೂ ಅಷ್ಟಾವರಣವೂ ನವಲಿಂಗ ಪೂಜಾಕ್ರಮವೂ ಅವುಗಳ ಸಕೀಲವೂ ಸಮಾಧಿಯು ಅಂತ್ಯವಿಧಿಕ್ರಮವೂ ಶ್ರೀ "ಸಂಗನಬಸವೇಶ್ವರ ವಚನಗಳು" ಎಂಬ ಪುಸ್ತಕದಲ್ಲಿ ವಿಶದೀಕರಿಸಲ್ಪಟ್ಟಿವೆ. ಸುಶಿಕ್ಷಿತ ಮಹನೀಯರು ಈ ಪುಸ್ತಕದ ವಿಷಯಗಳನ್ನು ಆಮೂಲಾಗ್ರ ಪರಿಶೀಲಿಸಿ, ಶಿವಾನುಭವ ಸಂಘಗಳ ಸ್ಥಾಪನಾಕಾರ್ಯಕ್ಕೆ ಸಹಾಯಕರಾಗಿ, ಇಂಗ್ಲಿಷರ ವೇಷಾಡಂಬರ ಪೇಯಾಡಂಬರಗಳಿಗೆ ಬಲಿಬೀಳದೆ, ಸದ್ಗುರುಗಳ ಹಸ್ತಮಸ್ತಕ ಕ್ರಿಯಾದೀಕ್ಷೆಯೊಳು ಕಾಲಿಡಬಹುದೆಂದು ಹಾರೈಸುವ.

—ಶಿವಶರಣರ ಶಿಶು

**ವಚನಗಳು**:— ಶುದ್ಧಪ್ರಸಾದದಿಂದ ಬ್ರಹ್ಮನ ಸೃಷ್ಟಿಗೆ ಹೊರಗಾಗಿ ಸಿದ್ಧಪ್ರಸಾದದಿಂದ ವಿಷ್ಣುವಿನ ಸ್ಥಿತಿಯನತಿಗಳೆದು ಪ್ರಸಿದ್ಧಪ್ರಸಾದದಿಂದ ರುದ್ರನ ಲಯುವ ನಿಲಿಸಿ ಜ್ಞಾನಪ್ರಸಾದದಿಂದ ಈಶ್ವರನ ತಿರೋಧಾನಕ್ಕೊಳಗಾಗದೆ, ಮಹಾಜ್ಞಾನ ಪ್ರಸಾದದಿಂದ ಸದಾಶಿವನ ಅನುಗ್ರಹಕ್ಕೆ ಅಲಿವಾಡದೆ, ಜೀವಿಗಳಂತೆ ಘನಲಿಂಗದ ಅಧಿದೇವತೆಗಳ ಪಂಚಕೃತ್ಯಗಳಿಗೊಳಗಾಗದಂತೆ ಮಾಡಿ, ಶಿವಶರಣರ ಒಳಗದೊಳು ಬೆರೆದು ಬೇರಾಗದಂತಿರಿಸಿ ಪೊರೆಯಯ್ಯ ಸಿದ್ಧೇಶ್ವರಾ ||೧||

ನಿತ್ಯಾಚಾರವೇ ನೆಲೆಗೊಂಡು ಲಿಂಗಾಚಾರದೊಳು ಲೀನನಾಗಿ, ಸತ್ಯಾಚಾರವೇ ಶರೀರವನೊಳಕೊಂಡು ಸದಾಚಾರಸನ್ನಿಹಿತನಾಗಿ, ಭಕ್ತ್ಯಾಚಾರವೇ ಬಲಗೊಂಡು ಭೃತ್ಯಾಚಾರದೊಳು ನಯುಭಯುಭರಿತನಾಗಿ, ಕ್ರಿಯಾಚಾರವೇ ಕರಿಗೊಂಡು, ಗಣಾಚಾರದೊಳು ವೀರನಾಗಿ, ಜ್ಞಾನಾಚಾರವೇ ಭಾರಣಂಗೊಂಡು ಶಿವಾಚಾರದೊಳು ನಿಲ್ವ ನಿಲುಕಡೆಯು ದೋರಿ, ದಶಾಚಾರಗಳೇ ವಶವಾದ ಶಿವಶರಣರ ಶಿಶುವಾಗಿರಿಸಿ ದಾಸೋಹಂ ಭಾವದೊಳು ಬೆರೆಸಿ, ಶಶಿವೆಗ್ಗಳಿಯು ತಿಳಿಗೊಳುದೊಳು ಇಳಿಸಿ ಉಳಿಸಯ್ಯ ಎನ್ನ ಸಿದ್ಧೇಶ್ವರಾ || ೨ ||

ಶಿಷ್ಯನ ಶರೀರವನನುಕರಿಸಿದ ಇಷ್ಟಲಿಂಗದ ಪೀಠವೇ ಆಚಾರಲಿಂಗ ನಕಾರ ಪ್ರಣವ ಮೂರ್ತಿಯಯ್ಯಾ. ಆ ಲಿಂಗದ ಕಟಿಯೇ ಗುರುಲಿಂಗ ಮಕಾರ ಪ್ರಣವ ಮೂರ್ತಿಯಯ್ಯಾ. ಆ ಲಿಂಗದ ಗೋಮುಖವೇ ಜಂಗಮ ಲಿಂಗ ವಕಾರ ಪ್ರಣವಮೂರ್ತಿಯಯ್ಯಾ, ಆ ಇಷ್ಟಲಿಂಗದ ನಾಳವೇ ಪ್ರಸಾದಲಿಂಗ ಯಕಾರ ಪ್ರಣವಮೂರ್ತಿಯಯ್ಯಾ, ಆ ಲಿಂಗದ ಗೋಳಕವೇ ಮಹಾಲಿಂಗ ಓಂಕಾರ ಪ್ರಣವಮೂರ್ತಿಯಯ್ಯಾ, ಇಂತು ಮಂತ್ರ ಮೂರ್ತಿಯ ಸಂಯೋಗದಿಂದ "ಯಥಾ ಕಲಾ ತಥಾ ಭಾವೋ ಯಥಾ ಭಾವಸ್ತಥಾಮನಃ। ಯಥಾ ಮನಸ್ತಥಾ ದೃಷ್ಟಿಃ ಯಥಾದೃಷ್ಟಿ ಸ್ತಥಾ ಸ್ಥಲಂ॥ ಎಂಬುದಾಗಿ ಲಿಂಗಸ್ಥಲಗಳನರುಹಿ, ಕರದೊಳು ಚಿತ್ತಕಳಾ ರೂಪ ಇಷ್ಟದೇವನ ಕೊಟ್ಟ ಗುರುವಿಗೆ ನಮೋ ನಮೋ ಎಂದು ಬದುಕಿದೆನಯ್ಯಾ ಸಿದ್ಧೇಶ್ವರಾ ॥ ೩ ॥

ನಿಜ ಶರಣರು ನಿರ್ಧರಿಸಿದ ದೀಕ್ಷಾತ್ರಯಂಗಳಿಲ್ಲದೆ ನೋಡಿ ಮಾಡಿದರಿಲ್ಲ, ಬೇಡಿ ಬಯಸಿದರಿಲ್ಲ, ಹಾಡಿ ಹರಿಸಿದರಿಲ್ಲ, ಮಾಡಿ ನೀಡಿದರಿಲ್ಲ, ಅದು ಕಾರಣ ನಿಜಗುರುವಿನ ನಿಜದೀಕ್ಷಾತ್ರಯಂಗಳಿಗೋಸ್ಕರವಾಗಿ, ದೀಕ್ಷೆಗೆ ಸಾಕ್ಷಿಯಾದ ಶಿವಶರಣಂಗಳಂಗಳ ಅಂತರಂಗದ ಅಷ್ಟಾವರಣದ ಗಟ್ಟಿಯೊಳು ನಿಜದೃಷ್ಟಿ ನಿಲ್ಲಲೆಂದ ನಮ್ಮ ಸಿದ್ಧೇಶ್ವರಾ ॥ ೪ ॥

ಪೃಥ್ವ್ಯಾದಿ ಆತ್ಮಾಂಗಾಂತ್ಯವಾದ ಷಡಂಗದೊಳು ನೆಲೆಗೊಂಡ, ಆಚಾರಾದಿ ಮಹಾಲಿಂಗಾಂತ್ಯವಾದ ಷಡುಲಿಂಗಗಳಿಗೆ ಸುಚಿತ್ತಾದಿ ಸದ್ಭಾವಾಂತ್ಯವಾದ ಷಡುಹಸ್ತಗಳಿಂದ ಘ್ರಾಣಾದಿ ಹೃದಯಾಂತ್ಯವಾದ ಷಣ್ಮುಖಗಳ ದ್ವಾರಾ ಕ್ರಿಯಾ ಶಕ್ತ್ಯಾದಿ ಚಿಚ್ಛಕ್ತ್ಯಾಂತ್ಯವಾದ ಷಟ್‌ಶಕ್ತಿ ಶ್ರದ್ಧಾದಿ ಸಮರಸಾಂತ್ಯವಾದ ಷಡ್ಭಕ್ತಿಗಳಿಂದ ಗಂಧಾದಿ ತೃಪ್ತ್ಯಾಂತವಾದ ಪದಾರ್ಥಗಳ ನೈಸರ್ಗಿಕ ಗುಣಧರ್ಮ ಕಳೆದ ಸುಗಂಧಾದಿ ಸುತೃಪ್ತ್ಯಾಂತ್ಯವಾದ ಷಟ್ಪ್ರಸಾದಗಳ ಅರ್ಪಣಂಗೈವ ಅಷ್ಟವಿಧ ಸಕೀಲವನು ಸಂಗೊಳಿಸಿದ ಗುರುವಿಗೆ ನಮೋ ನಮೋ ಎಂಬೆನಯ್ಯಾ ಸಿದ್ಧೇಶ್ವರಾ ॥ ೫ ॥

ಕಣ್ಣು ಕಂಡಲ್ಲದೆ ರೂಪೆಂದು ನಿಶ್ಚಯಿಸದು ಮನ; ಸಣ್ಣಾಗದೆ ದುಡಿಮೆಯೊಳು, ದೊರಕಲಾರದು ಹಣ, ಪುಣ್ಯವ ಮಾಡಿದಲ್ಲದೆ ದೊರೆಯವು ಪದಫಲಂಗಳು; ಬೆನ್ನಿಗೆ ಬೀಳದೆ ಬಲ್ಲಿದನು ರಕ್ಷಿಸನು ಬಡವನ; ಬಹುದಿವಸದ ಬೇನೆಯಿಂದ ಬಳಲುವ ಮಾನವನು ಹಸಿವೆ ತೃಷೆಗಳಿಂದ

ಲ್ಲದೆ, ಹಂಬಲಿಸನು ಅನ್ನ ನೀರುಗಳ; ತನ್ನ ಕರುಳು ಕರಗದೆ ಉದಕ ಕಾರವು ಪ್ರೇಮಾಶ್ರುಗಳು; ಶಾಸ್ತ್ರಗಳ ಶ್ರುತಿಯು ಮತಿಯೊಳಡಗಲೊಲ್ಲದೆ ಪಾತ್ರರಾಗರು ಪಾರಮಾರ್ಥಿಕ ಜೀವಭಾವಿಗಳು. ಅದು ಕಾರಣ ಗುರುಪಥದಿಂದಲ್ಲದೆ ಶಿವಪಥವು ಸಾಧ್ಯವಾಗದೆಂದ ನಮ್ಮ ಸಿದ್ದೇಶ್ವರಾ ||೬||

**ಕಂದ:—** ಅಂಗದೊಳಾಚಾರಂಗಳ | ಮಂಗಳ ಲಿಂಗತ್ರಯುತ ತನುತ್ರಯಗಳೊಳಂ || ಸಂಗೊಳಿಪ ಗುರುತ್ರಯದಿಂ | ಲಿಂಗಾಂಗ ಸಂಯೋಗ ವಾಗೆಯುವನೇಧನ್ಯಂ ||೧||

ಮಲಮಾಯಾ ಕರ್ಮಗಳ | ನಿಲವ ನಿರ್ಮೂಲಗೈವ ಶಿವದೀಕ್ಷೆಗಳಿಂ || ಬಲು ಮಹಿಮೆಯ ಗುರುವಿಂದಂ | ಸಲೆಪೊಂದಿರ್ಪುದು ಸುನೀತಿ ಸತ್ಕ್ರಿಯೆಯಿಂದಂ || ೨ ||

ಜನನೀ ಜನಕರ ತೆರದಿಂ | ದನುನಯದಿಂದೀವ ದೀಕ್ಷೆಶಿಕ್ಷಾದ್ಯಗಳಿಂ || ಜನನ ಮರಣ ಸಂಹಾರಂ | ತನು ಮನ ಧನದಾಶೆರೋಪರಹಿತಂ ಸುಹಿತಂ || ೩ ||

ಪ್ರಣವ ಜ್ಯೋತಿಯದೋರುತ | ವಣುಚಕ್ರಾದಿ ದಶಚಕ್ರದಳಕುಳ ಸ್ಥಳಮಂ || ತಣಿವಂತುಸುರ್ವಂ ಕರ್ಣದೆ | ಚಿನ್ಮಯ ಚಿತ್ಕಳೆ ಷಡಕ್ಷರ ಮಹಾಮನುವುಮಂ || ೪ ||

ಶಿವತತ್ವೋಪಕ್ರಮದಿಂ | ಶಿವಭಾವ ಬಲಿತು ಶಿವಮಯ ವಿಶ್ವಜ್ಞಾನಂ || ಶಿವಪೂಜಾ ಸತ್ಕ್ರಿಯೆಯಿಂ | ಶಿವಯೋಗಸುಖ ಸಮನಿಸದೆ ಷಟ್‌ಸ್ಥಲದರುಹಿಂ || ೫ ||

ಶಿವಶರಣರ ನಡೆನುಡಿಗಳ್ | ಶಿವಸಂಸ್ಕಾರದ ಸಮರಸ ಸಂಗದೆ ಬಳ್ಕಿಂ || ಶಿವಜೀವ ಬೆರೆಯುಲ್ಕೈದಲು | ವವನಿಯ ಸದ್ಧರ್ಮವೀರಶೈವವೆ ಮಾರ್ಗಂ || ೬ ||

# ಕಾಯಕವೇ ಕೈಲಾಸ.

(ಲೇ.:—ಶ್ರೀ. ಬಾಣದ ಲಿಂಗಣ್ಣ, ಲೋ. ಶಾ. ಶಿಕ್ಷಕ ವಿದ್ಯಾರ್ಥಿ ಲಚ್ಯಾಣ)

ಕ್ರಿಯಾಮಥನವಿಲ್ಲದೆ ಕಾಣಬಂದುದೇ ಇಕ್ಷುವಿನೊಳಗಣ ಮಧುರ?
ಕ್ರಿಯಾ ಮಥನವಿಲ್ಲದೆ ಕಾಣಬಂದುದೇ ತಿಲದೊಳಗಣ ತೈಲ?
ಕ್ರಿಯಾ ಮಥನವಿಲ್ಲದೆ ಕಾಣಬಂದುದೇ ಕ್ಷೀರದೊಳಗಣ ತುಪ್ಪ?
ಕ್ರಿಯಾ ಮಥನವಿಲ್ಲದೆ ಕಾಣಬಂದುದೇ ಕಾಷ್ಠದೊಳಗಣ ಅಗ್ನಿ?
ಇದುಕಾರಣ ಗುಹೇಶ್ವರಲಿಂಗವ ತನ್ನೊಳರಿದೆನೆಂಬ ಮಹಾಂತಂಗೆ
ಸತ್ಕ್ರಿಯಾಚರಣೆಯೇ ಸಾಧನೆ ಕಾಣಿಭೋ!

ಎಂದು ಪ್ರಭುಗಳು ಉಸುರಿದ ವಚನದ ಮರ್ಮವನ್ನರಿತರೆ ಕಾಯಕದ ಕಲ್ಪನೆ ನಮಗಾಗಿ ಮನದ ಮಲಿನತೆಯು ತೊಳೆಯುತಿದೆ. ತೊಳೆದ ಮನದಿಂದ ಸತ್ಕ್ರಿಯೆಯನ್ನು ಆಚರಿಸುವದೇ ಕಾಯಕ. ಈ ಕಾಯಕದ ಸತ್ಕ್ರಿಯೆಯನು ಆಚರಿಸುವದೇ ಜ್ಞಾನಕ್ಕೆ ಮೂಲ ಸಾಧನ. ನಮ್ಮವರು ಕಾಯಕದ ನಿಜವರ್ಥವನು ಅರಿಯದೇ ನಿಸ್ಪೃಹರಾಗಿ ವರ್ತಿಸಿ, ಕಾಲಾಂತರದಿಂದ ಕಾಯಕದ ನಿಜಕಲ್ಪನೆ ಮರೆತು ಕಾಯಕ ಶಬ್ದಕ್ಕೆ ಕಲಂಕ ಬಳೆದು ಜನತೆಯಲ್ಲಿ ಮೂಢಕಲ್ಪನೆ ಬೇರಿ ತಾವು ಮಾಡುವದೇ ನಿಜ ಕಾಯಕವೆಂದರಿತು ಮನಬಂದಂತೆ ವರ್ತಿಸುತಿಹರು. ಅದನ್ನೇ ಜನತೆಯ ಪ್ರಚಾರ ಮಾಡುತ್ತಿರುವರು. ಅಲ್ಲದೆ ಘಂಟೆಯ ಕಾಯಕ. ಮುಳ್ಳಾವಿಗೆಯ ಕಾಯಕ, ಕಂಥದ ಕಾಯಕ ಹೀಗೆ ಏನೇನೋ ಅರ್ಥಕೆ ಅನಾರ್ಥವನು ಕಲ್ಪಿಸಿಕೊಂಡು ಹೊಟ್ಟೆ ಹೊರೆಯುತ್ತಿಹರು. ಇದು ನಿಜವಾಗಿಯೂ ನಿತ್ಯ ಶುದ್ಧ ಕಾಯಕವಲ್ಲ. ಇದೊಂದು ಶರೀರವು ದಣಿಯದೇ ಹೊಟ್ಟೆ ಹೊರೆದುಕೊಳ್ಳಲು ನಿರ್ಮಿಸಿದ ಭಿಕ್ಷಾವೃತ್ತಿ ಎಂದು ಹೇಳಲು ಯಾವ ಅಭ್ಯಂತರವೂ ಇಲ್ಲ.

ನಮ್ಮ ಪ್ರಮಥರು ಈ ರೀತಿ ಅಂದಿದ್ದಾರೆ— ಮಾನವ ಪ್ರಾಣಿಯು ಪ್ರತಿಯೊಬ್ಬರೂ ತಮ್ಮ ತಮ್ಮ ಕಾಯುವ ದಣಿಸಿ ಬಂದ ಪ್ರತಿಫಲವನು ಶಿವಾರ್ಪಣ ಭಾವದಿಂಡ ಪ್ರತಿನಿತ್ಯ ಸೇವಿಸುತ್ತಿರುವದೇ ನಿಜವಾದ ಶುದ್ಧ ಕಾಯಕ. ಬಂದ ಪ್ರತಿಫಲವು ತಂಗುಳವಾಗಕೂಡದು. ತಮ್ಮ ಕಾಯದ

ಶ್ರಮ ಹಾಗೂ ಅದರಿಂದ ಬಂದ ಪ್ರತಿಫಲ ಇವೆರಡನ್ನು ಒಂದು ತಕ್ಕಡಿಯಲ್ಲಿ ತೂಗಿ ಶ್ರಮಕ್ಕೆ ಸರಿಯಾಗಿ ಬಂದ ಪ್ರತಿಫಲವನ್ನಷ್ಟೇ ಸ್ವೀಕರಿಸುವದು ಅವನ ನಿಜವಾದ ಕಾಯಕ. ಇನ್ನು ಕಾಯಕದಲ್ಲಿ ತೊಡಗಿದರೆ ಮನವು ಚಂಚಲವಿರಕೂಡದು. ಯಾವಾಗಲೂ ನಿಶ್ಚಲಮನದಿಂದ ಶಿವಾರ್ಪಣಭಾವದಿಂದ ನಿರತನಾಗಬೇಕು. ಅದಕ್ಕಾಗಿ ಮಾರಯ್ಯನು ಈ ರೀತಿ ಅಂದಿದ್ದಾನೆ.

ಕಾಯಕದಲ್ಲಿ ನಿರುತನಾದೊಡೆ ಗುರುದರುಶನವಾದರೂ ಮರೆಯಬೇಕು. ಲಿಂಗಪೂಜೆಯಾದಡೂ ಮರೆಯಬೇಕು. ಜಂಗಮ ಮುಂದಿದ್ದೊಡೆಯೂ ಹಂಗುಹರಿಯಬೇಕು. ಕಾಯಕವೇ ಕೈಲಾಸವಾದ ಕಾರಣ ಅಮರೇಶ್ವರಲಿಂಗವಾಯಿತ್ತಾದರೂ ಕಾಯಕದೊಳಗು.

ಮಾಡುವ ಕಾಯಕವು ನಿತ್ಯವಾಗಿಯೂ ಶುದ್ಧವಾಗಿಯೂ ಇರಬೇಕು. ಹುಸಿಯ ನುಡಿದು ಒಬ್ಬರಗೋಣು ಮುರಿದು ತನ್ನದಲ್ಲದ ದ್ರವ್ಯಕ್ಕೆ ಕೈಹಚ್ಚಿದರೆ ಹಚ್ಚಿದ ಕೈ ಮುರಿಯಲು ಶಿವನಿದ್ದಾನೆ. ಇದೆಲ್ಲವನ್ನು ಮರೆತು ಕಾಯವ ದುಡಿಸದೇ ಅಪಹರಿಸಿದ ದುಡ್ಡಿನಿಂದ ಗುಡಿಗುಂಡಾರ, ಕೆರೆ ಭಾವಿ ಕಟ್ಟಿಸಿ ನಾನು ಪುಣ್ಯವ ಗಳಿಸಿಹೆನೆಂದು ಮೆರೆಯುತಿಹರು. ಇಂತಹ ಹೀನಕೃತಿಯನ್ನು ಜಗವ ನೋಡುವ ದೇವನು ಇವನ ಕೃತಿಯು ನೋಡಲಾರನೇ? ವಿಶ್ವವನು ಆಳುತಿಹ ದೇವನು ವಿಶ್ವದಲ್ಲಿಯ ಒಂದು ಪ್ರಾಣಿಯ ಕೃತಿಯನು ಅರಿಯನೇ? ಆದಕ್ಕಾಗಿ 'ದೇವರದಾಸಿಮಯ್ಯನು ಈ ರೀತಿ ನುಡಿದಿದ್ದಾನೆ.

ಹರ ತನ್ನ ಭಕ್ತರ ತಿರಿವಂತೆ ಮಾಡುವ. ಒರೆದು ನೋಡುವ. ಸುವರ್ಣದ ಚಿನ್ನದಂತೆ. ಅರೆದು ನೋಡುವ ಚಂದನದಂತೆ ಅರಿದು ನೋಡುವ ಕಬ್ಬಿನ ಕೋಲಿನಂತೆ. ಬೆದರದೆ ಬೆಚ್ಚದೆ ಇದ್ದಡೆ ಕರವಿಡಿದು ಎತ್ತಿಕೊಂಬ ನಮ್ಮ ರಾಮನಾಥ.

ಅದುಕಾರಣ ಆ ದೇವನು ನಾವು ಪ್ರತಿನಿತ್ಯ ಆಚರಿಸುತ್ತಿರುವ ಕೃತಿಯನ್ನು ನಿರೀಕ್ಷಿಸುತ್ತಿಹನೆಂದು ಅರಿದು ಕಾಯಕ ಮಾಡಬೇಕು. ಅರಿಯದೆ ಮರೆದು ನಡೆದೊಡೆ ಮರಣ. ಮರೆಯದೇ ಅರಿದು ನಡೆದೊಡೆ ಶರಣ,

ಎಂಬುದು ಭಗವಾನ್ ಬಸವೇಶ್ವರನು ಸ್ಪಷ್ಟವಾಗಿ ತಿಳಿಯಪಡಿಸಿದ್ದಾನೆ. ಅದಕ್ಕಾಗಿ ನಮ್ಮ ಕಾಯಕವು ಸತ್ಯವಾದದ್ದು. ಶುದ್ಧವಾದದ್ದು. ನಿಶ್ಚಲವಾದದ್ದು ಇರಬೇಕು. ಅಂತೆಯೇ ನುಲಿಯ ಚಂದಯ್ಯನು—

> ಸತ್ಯಶುದ್ಧ ಕಾಯಕದಲ್ಲಿ ಚಿತ್ತವಿಚ್ಛಂದವಾಗದಿರಬೇಕು. ನೇಮದ ಕೂಲಿ ಅಂದಿನ ನಿತ್ಯ ಕಾಯಕದಲ್ಲಿ ಸಂದಿರಬೇಕು. ನೇಮದ ಕೂಲಿಯ ಬಿಟ್ಟು ಹೇಮದಾಸೆಗೆ ಕಾಮಿಸಿ ದ್ರವ್ಯವ ಹಿಡಿದರೆ ಆ ಮಾಡುವ ಸೇವೆ ನಷ್ಟವಯ್ಯಾ; ಈ ನಿನ್ನ ಸೇವೆ ನನಗೆ ನನ್ನ ಪ್ರಸಾದಕ್ಕೆ ಚಂದೇಶ್ವರ ಲಿಂಗಕ್ಕೆ ಪ್ರಾಣವಯ್ಯಾ.

ಎಂದಿದ್ದಾನೆ, ಆದ್ದರಿಂದ ಅಂದುದುಡಿದ ಕೂಲಿ ಅಂದಿನಹೊಟ್ಟೆಗೆ ಇರಬೇಕೇ ಹೊರತು ತಂಗುಳವಾಗಬಾರದು. ಅದಕ್ಕಾಗಿಯೇ ಆಯದಕ್ಕಿ ಮಾರಯ್ಯನ ಧರ್ಮಪತ್ನಿಯಾದ ಲಕ್ಕಮ್ಮನು ಒಂದು ದಿನ ಗಂಡನು ಸ್ವಲ್ಪ ಅಕ್ಕಿಯನ್ನು ಹೆಚ್ಚು ಆಯ್ದುಕೊಂಡು ಬರಲು ಗಂಡನಿಗೆ ತಿಳಿಸಿ ಹೇಳಿ ಹೆಚ್ಚಿನದು ನಮಗಲ್ಲ. ಇದು ಅನ್ಯವಾದದ್ದು. ಇಂದಿನದು ನಾಳೆಗೆ ಇಟ್ಟರೆ ತಂಗುಳವಾಗುತಿದೆ. ತಿರುಗಿಹೋಗಿ ಇದ್ದಲ್ಲಿ ಚಲ್ಲಿಬರಲು ಸೂಚಿಸಿದಳು. ಮಾರಯ್ಯನು ಅವಳ ಮನವನ್ನರಿತು ಪುನಃ ಹೆಚ್ಚಿನದನ್ನು ಸುರುವಿಬಂದನು.

ಇನ್ನು ಮಾಡುವದೆಲ್ಲವೂ ಶಿವಾರ್ಪಣವೆಂದರಿಯಬೇಕು. ಮಾಡುವವರು ನಾವಾದರೂ ಮಾಡಿಸುವವನು ಬೇರೆ ಇದ್ದಾನೆ. ಮಾಡೆಂದರೆ ಮಾಡಬೇಕು. ಬೇಡವೆಂದರೆ ಬಿಡಬೇಕು. ಮಾಡೇತೀರುವೆ ಎಂಬ ಹಕ್ಕು ನಮ್ಮದಲ್ಲ. ಶ್ರೀಮಂತನು ಮಗುವನ್ನೆತ್ತಿಕೊಳ್ಳಲು ದಾದಿಯನ್ನು ನೇಮಿಸಿದಂತೆ ನಮ್ಮೆಲ್ಲರನ್ನು ನೇಮಿಸಿದ್ದಾನೆ. ಎತ್ತೆಂದರೆ ಎತ್ತಬಹುದು. ಬೇಡವೆಂದರೆ ಬಿಡಬೇಕು. ಆದರೆ ನಾವೆಲ್ಲ ಕೂಲಿಯವರಂತೆ ಹೇಳಿದ ಕೆಲಸ ಮುಗಿಸಿ ಉದರಕ್ಕೆ ದೊರೆತಷ್ಟು ತೆಗೆದುಕೊಂಡು ಸಂತುಷ್ಟರಾಗಬೇಕು. ನಾನು ಮಾಡಿದೆನೆಂಬ ಹಮ್ಮು ನಮ್ಮ ಮನದಿಂದ ದೂರ ಸರಿಸಬೇಕು. ನಾನು ಮಾಡಿದೆನೆಂದರೆ ನರಕ, ನಾಶ. ಅದಕ್ಕಾಗಿಯೇ ಬಸವೇಶ್ವರರು—

> ಮಾಡಿದೆನೆಂದು ಮನದಲ್ಲಿ ಹೊಳೆದರೆ ಏಡಿಸಿ ಕಾಡಿತ್ತು ಶಿವನ ಡಂಗುರ. ಮಾಡಿದೆ ನೆನ್ನದಿರಾ ಲಿಂಗಕ್ಕೆ. ಮಾಡಿದೆ ನೆನ್ನದಿರಾ ಜಂಗಮಕ್ಕೆ. ಮಾಡಿದೆನೆಂಬುದು ಮನದಲ್ಲಿಲ್ಲದಿದ್ದರೆ ಬೇಡಿದ್ದನೀವನು ಕೂಡಲಸಂಗಮದೇವಾ.

ಎಂದಿದ್ದಾನೆ. ಅದಕ್ಕಾಗಿ ಮಾಡಿದೆನೆಂಬುದು ಮನದಲ್ಲಿ ಹೊಳೆಯಬಾರದು. ಮಾಡಿದ್ದು ಮನದಲ್ಲಿಲ್ಲದಿದ್ದರೆ ಕೂಡಲಸಂಗಮದೇವನು ಬೇಡಿದ್ದನ್ನೀಯುವನು. ಸುಖದ ಬೆನ್ನುಹತ್ತಿದರೆ ಸಿಗುವದು ಕಷ್ಟ- ಕಾರಣ ನಾವು ಕಷ್ಟಕ್ಕೇನೇ ಬೆನ್ನುಹತ್ತಿದರೆ ಸುಖಸಿಗುವದು- ಅದಕ್ಕಾಗಿ ಸುಖವನ್ನಾಶಿಸದೆ ಸುಖವನ್ನು ಪಡೆದು ಸುಖವಾಗಿ ಬಾಳೋಣ. ಕೇವಲ ಮನದ ಆಶೆಗೆ ಇಂಬುಗೊಡಬಾರದು. ನಿಜವಾಗಿಯೂ ಮನದ ಆಶೆ ಮಹಾಮಾಯೆ ಎಂದು ಪ್ರಭುಗಳು ಅಂದಿದ್ದಾರೆ.

ಒಟ್ಟನಲ್ಲಿ ಆಶೆಯನು ಅಳಿದು ಸತ್ಯವಾದ ಶುದ್ಧವಾದ ನಿಶ್ಚಲವಾದ ಮನದಿಂದ ಸತ್ಕ್ರಿಯಾಚರಣೆಯ ಜ್ಞಾನದಿಂದ ಮಾಡಿದುದೇ ನಿಜವಾದ ಸತ್ಯಶುದ್ಧ ಕಾಯಕವಾಗಬಲ್ಲುದು. ಆ ಕಾಯಕವೇ ಕೈಲಾಸವೆಂದು ಮಹಾತ್ಮಾ ಭಗವಾನ್ ಬಸವಣ್ಣನವರು ಉಸುರಿದ್ದಾರೆ.

# ಓ ಪಾವನಮೂರ್ತಿ !!

ಲೇ :— ಷ॥ ಬ್ರ॥ ಶ್ರೀ ಗುರುಸಿದ್ಧ ಶಿವಾಚಾರ್ಯಸ್ವಾಮಿ,
"ನಿರಂಜನಾಲಯ" ಗುರುವಿನಪುರಮಠ.

ಓ ಮಹಾತ್ಮ, ದಿವ್ಯಾತ್ಮಾ, ಪೂತಾತ್ಮಾ, ಪುಣ್ಯಾತ್ಮಾನಮೋನಮಃ॥ ಸಿದ್ಧಗುರುಸಿದ್ಧಮಲ್ಲ ನಿನಗೆ ಅನಂತ ನಮೋನಮಃ !! ಓನಿರ್ಮಲ ಪವಿತ್ರ ಮೂರ್ತಿ! ಶುದ್ಧಾಂತರಂಗದ ಮಂಗಲ ಮೂರ್ತಿ!! ಕರುಣೆಯ ಕಾರುಣ್ಯ ಮೂರ್ತಿ! ದೀನ ದಲಿತರ ದೇವತಾಮೂರ್ತಿ! ಸದ್ಭಕ್ತ ಹೃದಯೋಳು ಜ್ಯೋತಿ! ಜನಮನದಲ್ಲಿ ಅಚ್ಚಳಿಯದ ಮೂರ್ತಿ! ಚಿರಶಾಂತಿ, ಸತ್ಯ ದಯೆಯ ಬೀರಿದ ಅನುಪಮ ಮೂರ್ತಿ!! ನಿನ್ನ ಆತ್ಮ ವಿಶ್ವದಂತೆ ವಿಶಾಲವಾದುದು, ಮಹಾಸಾಗರದಂತೆ ಗಂಭೀರವಾದುದು. ನಿನ್ನವಾಣಿ ಜೇನಿಗಿಂತ ಸವಿ, ಸಕ್ಕರೆಗಿಂದ ಮಧುರ; ಕೆನೆವಾಲಿಗಿಂತ ಹಿತ; ಬೆಳದಿಂಗಳಿಗಿಂತ ತಂಪು; ತಂಪೆಲರಿಗಿಂತ ಉಲ್ಲಾಸ; ನಲ್ಲಗ್ಗಸುವ ಗಳ ಕಂಪಿಗಿಂತ ಕಂಪು! ಮಾನವವರ್ಗದ ಉದ್ಧಾರಕ್ಕಾಗಿ ತೆರೆಯಮೇಲಾ ದೇವ ತಾ ಮೂರ್ತಿಯಾಗಿ ಅವತರಿಸಿ, ಜನತೆಯಲ್ಲಿ ತುಂಬಿತುಳುಕುತ್ತಿದ್ದ ಅಶಾಂತಿ ಅಧಯ, ಪರಪೀಡನೆ ಮೊದಲಾದ ಕೆಟ್ಟಗುಣಗಳ ನೀಗಿಸಿ, ಜ್ಞಾನದ ಬೆಳಕನ್ನು ಬೀರಿ ನಾನು ಯಾರು? ನನ್ನ ಕರ್ತವ್ಯವೇನು? ಎಲ್ಲಿಂದಬಂದೆ? ಮುಂದೆಲ್ಲಿಗೆ? ಎಂಬ ಅರಿವ ಮೂಡಿಸಿ, ಬೆಳಕನು ಬೀರಿ ಜೀವ ಜನವ ಪಡೆದು ಅಖಂಡ ಭಕ್ತವೃಂದದ ಹೃದಯ ಪಟಲದಲ್ಲಿ ಅಚ್ಚಳಿಯದ ಜ್ಯೋತಿಯಾಗಿ ಮೆರೆದಿರುವ ಓ ಮಹಾತ್ಮ ! ನಿನಗೆ ನಮೋನಮೋ!!

ಪುಣ್ಯಮೂರ್ತಿ! ಪತಿತಪಾವನ ಮೂರ್ತಿ! ಜಗತ್ತಿನ ಉದ್ಧಾರಕ್ಕಾಗಿ ಅವತಾರ ಮಾಡಿದ ಮಹಾಜ್ಯೋತಿಗಳ ಮಣಿ ಮಾಲಿಕೆಯಲ್ಲಿ ಥಳ-ಥಳಿಸುವ ಪಾವನಮೂರ್ತಿ! ನೀನೆಸಗಿದ ಕಜ್ಜವ, ನಿನ್ನ ಪವಿತ್ರ ಜೀವನವ ವರ್ಣಿಸಲು ನಾನು ಅಸಮರ್ಥ. ವಿಶ್ವಪ್ರೇಮಿಯಾಗಿ ನಾಳೆ ಬಪ್ಪುದ ಇಂದೇ ಎಂದು ಉಸುರಿ ಜನತೆಯ ನೆಚ್ಚರಗೊಳಿಸಿದೆ, ಅಜ್ಞಾನದ ಅಂಧಮಯ ರೂಪದಲ್ಲಿ ಬಿದ್ದು ತೊಳಲಾಡುತ್ತಿದ್ದ ಜನತೆಯ ಕರುಣೆಯಿಂದ ಕೈವಿಡಿದು ಮೇಲಕ್ಕೆತ್ತಿ ಮಾನವೋದ್ಧಾರಿಯೆನಿಸಿದೆ. ವಿಪ್ರಮೊದಲು ಅಂತ್ಯಜಕಡೆ

ಯಾಗಿ ದೀನಮೊದಲು ದಾಸಿ ಕಡೆಯಾಗಿ "ಒಟ್ಟಾರೆ ಸೃಷ್ಟಿಯ ಸಮಸ್ತ ಪ್ರಾಣಿಗಳೆಲ್ಲರಲ್ಲಿಯೂ ದಯೆ ತೋರಿಸಿ "ನಾವು ಎಲ್ಲರೂ ಶಿವನಮಕ್ಕಳು ಸೃಷ್ಟಿಯಲ್ಲಿ ಭೇದಭಾವವಿಲ್ಲ" ಎಂಬ ಉದಾತ್ತ ತತ್ವದಂತೆ ನಡೆದು "ದಯೆಯೇ ಧರ್ಮದಮೂಲವಯ್ಯ" ಎಂಬ ಅಣ್ಣನಹಿರಿಯವಾಣಿಯನ್ನು ಸಾರಿ, ನಡೆದು ಪ್ರೇಮ ಭಾಂಡಾರಿಯೆನಿಸಿದೆ. ವಿಶ್ವಪ್ರೇಮದಲ್ಲಿ ನೀನು ಯೇಸು, ಬುದ್ಧ, ಬಸವ ಮೊದಲಾದ ದಿವ್ಯವ್ಯಕ್ತಿಗಳಂತೆ ದುಡಿದೆ. "ಸರ್ವರೂ ಸುಖವಾಗಿರಲಿ–ಸರ್ವೇಜನಾ ಸುಖಿನೋಭವಂತು" ಎಂದು ನಿನ್ನ ಸುಖವ ಬದಿಗಿರಿಸಿ ಗಾಳಿ, ಮಳೆ, ಬಿಸಿಲೆನ್ನದೆ ಭಕ್ತರ ಕಷ್ಟಸುಖವ ವಿಚಾರಿಸಿ–ಸತಪ್ತಜೀವಿಗಳ ಸಂತಾಪವ ನಿವಾರಿಸಿ ದೀನದಲಿತ ವರ್ಗದ ನಾಯಕನಾದೆ. ಅನುಪಮ ಆತ್ಮನೈರ್ಮಲ್ಯವ ಪಡೆದು, ಆತ್ಮಸಂಯಮಿಯಾಗಿ, ದಿವ್ಯಸಾಧಕನಾಗಿ ಅನಿಷ್ಟ, ಬಲಿಷ್ಟ ದೌರ್ಜನ್ಯಗಳ ತುಂಡಿಸಿ ದಯಾಸಾಗರನಾಗಿ–ನಿನ್ನ ಪವಿತ್ರಜೀವನದ ಪ್ರತಿಯೊಂದು ಗಳಿಗೆಯನ್ನೂ ಭಕ್ತರಹಿತಕ್ಕಾಗಿ ಸುಖಕ್ಕಾಗಿ ಸವಿಸಿದ ಅಸಮಾನ ಕಜ್ಜವ ನಾನೆಂತು ಮರೆಯಲಿ?

ಪಾವನಮೂರ್ತೀ! ಶರಣರಲ್ಲಿ ಹಿರಿಯ ಶರಣ ನೀನು; ಜ್ಞಾನಿಗಳಲ್ಲಿ ದಿವ್ಯ ಜ್ಞಾನಿ, ಭಕ್ತರಲ್ಲಿ ಭಕ್ತಾಗ್ರೇಸರ; ಅಷ್ಟಾವರಣದಲ್ಲಿ ಮೊದಲನೆಯವನು! ಅಂತೆಯೇ ಶರಣರ ಉದಾತ್ತ ಉನ್ನತ ತತ್ವವ ಜಗತ್ತಿನ ಮೂಲೆಗೂ ಪಸರಿಸಿ ಆತ್ಮೀಯತೆಯನ್ನು ಬೆಳಗಿಸಿ ಅಂತರಾತ್ಮದ ಸುಪ್ತ ಶಕ್ತಿಯ ಚೇತರಿಸಿ ನುಡಿದಂತೆ ನಡೆದು ಪೂರ್ಣಿಮೆಯ ಚಂದ್ರ ಭೀಕರ ಕತ್ತಲನ್ನು ಬಡಿದೋಡಿಸಿ ನಿರ್ಮಲವಾದ ಪವಿತ್ರವಾದ ಬೆಳ್ಳನೆಯ ಬೆಳಕನ್ನು ಬೀರಿ ಜನ-ಮನವ ಹರ್ಷಗೊಳಿಸಿ ತಣಿಸುವಂತೆ ಜನತೆಗೆ ಸತ್ಯ ಶಾಂತಿ, ಧರ್ಮ ಭಕ್ತಿಜ್ಞಾನ, ಪ್ರೇಮವ ಅರುಹಿ, ನಾಕ–ನರಕಗಳ ಗುಟ್ಟನ್ನು "ದೇವಲೋಕ ಮೃತ್ಯಲೋಕ ವೆಂಬುದು ಬೇರಿಲ್ಲ ಕಾಣಿರೋ! ಸತ್ಯವನುಡಿವುದೇ ದೇವಲೋಕ ಮಿಥ್ಯವ ನುಡಿವುದೇ ಮರ್ತ್ಯಲೋಕ. ಆಚಾರವೇಸ್ವರ್ಗ; ಅನಾಚಾರವೇ ನರಕ" ಎಂದು ನುಡಿದಿರುವ ಜಗದಣ್ಣನ ವಾಣಿಯನ್ನು ಸಲೆ ಸಾಕ್ಷಿಗೊಳಿಸಿ, ಇರುಳಿನಲ್ಲಿ ಹೊಳೆಯುವ, ಕಣ್ಣು ಸೆಯುವ ಚಂದಿರನ ಪ್ರತಿಬಿಂಬ ಕಾಸಾರದಲ್ಲಿ ಶೋಭಿಸುವಂತೆ ನಿನ್ನ ಪರಮ ಪವಿತ್ರವಾದ ಧ್ಯೇಯರೂಪೀಪ್ರತಿ ಬಿಂಬ ಪ್ರತಿಒಬ್ಬ ಭಕ್ತನ ಹೃದಯದಲ್ಲಿ ಬೆಳಗುತ್ತಿದೆ! ನಿನ್ನ ಜ್ಞಾನದ ಪಾವಿತ್ರ್ಯಗೆ, ಆತ್ಮ

ವಿಕಾಸದ ಪರಿಪೂರ್ಣತೆಗೆ ನಿನ್ನ ಧಾರ್ಮಿಕ ದೃಷ್ಟಿಯು ದೂರದರ್ಶಿತ್ವ, ಮನೋಭಾವನೆಯ ವೈಶಾಲ್ಯ, ಅಪರಿಮಿತ ತಾಳ್ಮೆ, ಮಿಗಿಲಾದ ಶಾಂತಿ ಆಸರೆಕೊಟ್ಟಿವಲ್ಲವೆ?

ತಂದೆ! ನಿನ್ನ ಪ್ರಭಾವ ಅತ್ಯದ್ಭುತ! ಅವರ್ಣನೀಯ! ಈರ್ಷೆ, ಅಸೂಯೆ, ಅಧರ್ಮ, ಅಶಾಂತಿ, ಕ್ರೋಧಮೊದಲಾದ ಕೆಟ್ಟಗುಣಗಳು ಮಾನವತೆಯ ಹುಟ್ಟುಗುಣಗಳಾದ ಅಪೇಕ್ಷೆ, ಆಕಾಂಕ್ಷೆ, ಸ್ವಯಂಸ್ಫುರಿತ ಪ್ರವಾಹವನ್ನು ತಡೆಗಟ್ಟಿದ್ದ-ವಿನಾಶಕ, ವಿಧ್ವಂಸಕ ರೂಢಿದಾಸ್ಯದಿಂದ ಸಮಾಜವು ಶಿಥಿಲಗೊಂಡು ಬಟ್ಟೆ ಗಾಣದೆ, ಬುದ್ಧಿ ಪ್ರಾಧಾನ್ಯವಲ್ಲದ-ಹೃದಯ ಪ್ರಾಧಾನ್ಯವಾದ ಜೀವಂತ ಧರ್ಮವೊಂದಕ್ಕೆ ಆತೊರೆಯುತ್ತಿದ್ದಾಗ, ಈ ಸಂತಸದ ಸಮಯದಲ್ಲಿ ಈ ಆಂಧೋಲನಕ್ಕೆ, ಅದ್ಭುತ ಚಲನೆ ಕೊಟ್ಟು ಅಲ್ಪಾವಧಿಯಲ್ಲಿಯೇ ಅನುಪಮವಾದ, ಅಸದಳವಾದ, ನವ ಸ್ಫೂರ್ತಿಯನ್ನು ಕೊಟ್ಟು ಹೀನರನ್ನು-ದೀನರನ್ನು ತಕ್ಕೈಸಿ ನಿಜಾನಂದದ ನಿಲಯಕ್ಕೆ ಕೈವಿಡಿದು ಕರೆದೊಯ್ದೆ. "ಎಲವೋ ಬ್ರಹ್ಮಹತ್ಯವ ಮಾಡಿದವನೆ, ಪಾಪಕೃತ್ಯವ ಮಾಡಿದವನೆ, ಒಮ್ಮೆ ಶರಣೆನ್ನು" ಎಂದು ಬಲತ್ಕಾರವಾಗಿ ನುಡಿಸಿದ ಅಣ್ಣನ ದನಿಗೆ ದನಿಗೂಡಿಸಿ, ಸಮಾಜವು ಹೆಚ್ಚೇನು ಇಡೀ ಜಗತ್ತೇ ಸರ್ವಾಂಗ ಸುಂದರವಾಗಿ, ಸರ್ವಸಮೃದ್ಧವಾಗಿ ಬಾಳಬೇಕು ಹಾಗೂ ಸಾಮಾಜಿಕ ಧಾರ್ಮಿಕ ಘನತೆಯನ್ನು ಮಾನವನ ಯೋಗ್ಯತೆಯ ಮೇಲಿಂದ ಅಳೆಯಬೇಕೆಂದು ಶಾರೀರಕ, ಮಾನಸಿಕ, ಬೌದ್ಧಿಕ ಶಕ್ತಿಗಳ ವಿವರ್ಧನೆಗಾಗಿ ಬಲ, ಬುದ್ಧಿ, ಸಿರಿ, ಗೌರವವ ಸಮರ್ಪಿಸಿದೆ. "ದಯವಿಲ್ಲದ ಧರ್ಮವಾವುದಯ್ಯ, ದಯವೇ ಬೇಕು ಸಕಲ ಪ್ರಾಣಿಗಳೆಲ್ಲರಲ್ಲಿ" ಎಂದು ಸಾರಿದ ಅಣ್ಣನವಾಣಿಯಂತೆ ಸರ್ವರ ಉದ್ಧಾರಕ್ಕಾಗಿ, ಸುಖ, ಶಾಂತಿ, ಸಮಾಧಾನಗಳೊಡನೆ ಜೀವಿಸಿ ಪರಮಾತ್ಮನ ಪ್ರಜ್ಞೆ ಪಡೆಯಲು ಎಲ್ಲರಿಗೂ ಸಮಾನಾಧಿಕಾರ ಹಾಗೂ ಅನುವ ದೊರೆಕಿಸಿ ಮಾನವತೆಯ ಅರ್ಥಾತ್ ಇಡೀ ಜನತೆಯ ಉದ್ಧಾಕ್ಕಾಗಿ ಶ್ರಮಿಸಿದೆ.

ಪ್ರಭುವೆ ದಿನಕರನನ್ನು ಮೋಡವು ಆಚ್ಛಾದಿಸಿದಾಗ ತೀಕ್ಷ್ಣ ರಶ್ಮಿಯು ಮೋಡದ ಗುಂಪನ್ನು ಚದುರಿಸಿ ಜಗತ್ತನ್ನು ತಣಿಸುವಂತೆ ಜನತೆಗೆ ಪಾಪಸಮುದಾಯವು ಹೆಚ್ಚಿದಾಗ ಅದನ್ನು ಕತ್ತರಿಸಲು ಅವತರಿಸಿದ ಮಹಾಪುರುಷರು ಭೋಧಿಸಿದ ಶುದ್ಧಪ್ರೇಮ ವಿಶ್ವಬಂಧುತ್ವ ಮೊದ

ಲಾದ ತತ್ವಗಳನ್ನು ನೀನು ಅಕ್ಷರಶಃ ಪಾಲಿಸಿದ್ದಲ್ಲದೆ ಆಚರಣೆಗೂ ತಂದು ಊಚು, ನೀಚು,ಒಳಿತು, ಕೆಡಕು, ಪಾಪಿ, ಪುನೀತ ವ್ಯಕ್ತಿಯಲ್ಲಲ್ಲಿದೆ ಜಾತಿಯಲ್ಲಿಲ್ಲವೆಂದು ಸಾರಿದೆ. "ಜಾತಿಯಿಂದ ಯಾರೂ ತುಚ್ಛನಾಗಲಿ ಶ್ರೇಷ್ಠನಾಗಲಿ ಆಗುವದಿಲ್ಲ. ತನ್ನ ಆಚರಣೆಯಿಂದಲೇ ಶುದ್ಧನೂ-ದಿವ್ಯ ಮಾನವನೂ ಆಗುವನು" ಎಂದು ನುಡಿದ ಬುದ್ಧನ ವಾಣಿಯನ್ನೂ "ಕೊಲ್ಲುವನೇ ಮಾದಿಗ-ಹೊಲಸ ತಿಂಬುವನೇ ಹೊಲೆಯ. ಆವಂದಿದರ ಕುಲವೇನೇ? " ಎಂದು ನುಡಿದ ಅಣ್ಣನ ವಾಣಿಯನ್ನೂ, ಜಾತಿಯೀನನ ಮನೆಯ ಜ್ಯೋತಿ ತಾ ಹೀನವೆ? " ಎಂದು ಪ್ರಶ್ನಿಸಿದ ಗಂಡುಗಲಿ ಸರ್ವ ಜ್ಞನ ವಾಣಿಯನ್ನೂ ಸಮರ್ಥಿಸಿ-ಬಡವ, ಬಲ್ಲಿದ-ಹಿರಿಯ ಕಿರಿಯ, ಪಂಡಿತ ಪಾಮರ, ಹೀನ- ದೀನ ಒಟ್ಟಾರೆ ಯಾರೇ ಆಗಲಿ ಆಗಲಿ ಭೇದಭಾವ ವಿಲ್ಲದೆ ಭಕ್ತಿಬೀಜವ ಬಿತ್ತಿ ಮುಕ್ತಿಯೆಂಬ ಫಲವ ಬಿಡಿಸಿದೆ. ಮೋಹವೆಂಬ ಬಲೆಯ ಕಿತ್ತೊಗೆದು ವಿಶಾಲ ವಿಶ್ವಪ್ರೇಮವೆಂಬ ಸಾಗರವನ್ನು ಭಕ್ತಿ ಎಂಬ ದೋಣಿಯಲ್ಲಿ ನಿಷ್ಠೆ" ಎಂಬ ಹುಟ್ಟಿನಿಂದ ಮುಂದೆ ಸಾಗಿಸಿದೆ. "ಭಕ್ತಿಯುಳ್ಳಾತ ಭವಮುಕ್ತನಾದಾತ ಭಕ್ತಿಯಿಂದಲೇ ಶಕ್ತಿ. ಭಕ್ತಿವಿರಕ್ತಿ ಯುಳಿದರೀ ಜಗದಲ್ಲಿ ಮುಕ್ತಿ ಇಲ್ಲೆಂದ ಸರ್ವಜ್ಞ" ಎಂದು ಭಕ್ತಿಯ ಮೂಲವ ಅರುಹಿ ಭಕ್ತಿಯ ಬಲದಿಂದಲೇ ಜೀವನು ವಸ್ತುಗಳ ಪರಿಚ ಯವನ್ನು ಪಡೆಯುವನೆಂದು ತಿಳಿದು, ಭಕ್ತಿಬಾಕುಲಿಯಾದ ನೀನು-ಆತ್ಮನ ಅನಂತ ದರ್ಶನವ ಪಡೆದು "ನಾನು-ನನ್ನದು" ಎಂಬುದು ಭಕ್ತಿಯ ಸುವ್ಯ ಹಥಕ್ಕೆ ಸಲ್ಲದು; "ನಾನು ನನ್ನದು" ಎಂಬದು ಬಂಧ ಅಹಂಕಾರದಿಂದ ಮಾಡುವ ಭಕ್ತಿ ವ್ಯರ್ಥಸುಖಕ್ಕೆ ಎರವು." ಮಾಡಿದೆನೆಂಬುದು ಮನದಲ್ಲಿ ಹೊಳೆದರೆ ಏಡಿಸಿ ಕಾಡಿತ್ತು ಶಿವನಡಂಗುರ" "ಆಡಿದರೇನು? ಹಾಡಿದ ರೇನು? ಓದಿದರೇನು? ತ್ರಿವಿಧ ದಾಸೋಹವಿಲ್ಲದನ್ನಕ್ಕ? ಆಡದೇ ನವಿಲು ಓಡದೇಗಿಳಿ, ಭಕ್ತಿಯಕ್ಷದವರನೊಲ್ಲ ಕೂಡಲಸಂಗಮದೇವ" ಎಂದು ಬೊಧಿಸಿದ ಬಸವತಂದೆಯ ವಾಣಿಯನ್ನು ಸಮರ್ಥಿಸಿ, ಪರಮಾತ್ಮನ ಅವ್ಯಕ್ತ ಸ್ವರೂಪವನ್ನು "ಉದಕದೊಳಗೆ ಬಿಚ್ಚಿಟ್ಟ ಬಯಿಕೆಯ ಕಬ್ಬಿನಂತೆ ಶಶಿ ಯೊಳಗಣ ರಸದ ರುಚಿಯಂತೆ, ನೆನೆಯೊಳಗಣ ಪರಿಮಳದಂತೆ, ಕನ್ನೆಯ ಸ್ನೇಹದಂತೆ'' ಎಂದು ಬಣ್ಣಿಸಿ ವಿವರಿಸಿ ಬೌತಿಕ ಜೀವನದ ವಿಷಯ ಭಕ್ತರ ಮನ ಮನ: ಪ್ರವೃತ್ತಿಯು ಉಜ್ವಲವಾದ, ಶುದ್ಧವಾದ,ಪವಿತ್ರ ವಾದ" ದಾಸೋಹಂ" ಭಾವವೇ ಶ್ರೇಷ್ಠವೆಂದು ಸಾರಿದೆಯಲ್ಲವೆ? ನೀನೆ ಧನ್ಯ, ನೀನೇ ಧನ್ಯ.

---

(೭೭) ಮನವೇ ಸರ್ಪ, ತನುವೇ ಹೇಳಿಗೆ, ಹಾವಿನೊಡತಣವ ಹುಡು. ಇನ್ನಾವಾಗ ಕೊಂದಿಹುದೆಂದರಿಯೆ, ಇನ್ನಾವಾಗ ತಿಂದಿಹುದೆಂದರಿಯೆ, ವಾಳಿಗೆ ನಿಚ್ಚಕ್ಕೆ ನಿಮ್ಮ ಪೂಜಿಸಬಲ್ಲಡೆ ಅದೇಗಾರುಡ ಕೂಡಲ ಸಂಗಮದೇವಾ.

ಹೇಳಿಗೆ = ಹಾವಿನಬುಟ್ಟಿ, ಒಡತಣ = ಸಾನ್ನಿಧ್ಯ, ವಾಳಿಗೆ = ವ್ಯಾಲ, ಸರ್ಪ

ಗಾರುಡ = ಗಾರುಡ ಮಂತ್ರ.

ನನ್ನ ಮನಸ್ಸೇ ಒಂದು ಸರ್ಪವು. ನನ್ನ ದೇಹವೇ ಅದಕ್ಕೆ ಮನೆ. ನನಗೆ ಹೀಗಾಗಿದೆ. ಹೀಗೆ ನನಗೆ ಸರ್ಪನ ಸಂಗತಿಯು ಉಂಟಾಗಿದೆ. ಈ ಸರ್ಪವು ನನ್ನನ್ನು ಯಾವಾಗ ಕೊಲ್ಲುವದೆಂಬುದು ನನಗೆ ತಿಳಿಯದು. ಅದು ಯಾವಾಗ ನನ್ನನ್ನು ನುಂಗುವದೆಂಬುದು ನನಗೆ ತಿಳಿಯದು. ಆದರೆ ನಿನ್ನನ್ನು ನಾನು ದಿನಾಲು ಪೂಜಿಸಿದರೆ, ಈ ಪೂಜೆಯು ಅದಕ್ಕೆ ಗಾರುಡ ಮಂತ್ರವಂತೆ ಆಗುವದು. ಅಂದರೆ ಈ ಮಂತ್ರಶಕ್ತಿಯಿಂದ ಈ ಸರ್ಪವು ಏನೂ ಮಾಡಲಾರದ್ದಾಗುತ್ತದೆ.

(೭೮) ನೀರ ಬೊಬ್ಬುಳಿಕೆಗೆ ಕಬ್ಬುನದ ಕಟ್ಟುಕೊಟ್ಟು ಸುರಕ್ಷಿತವ ಮಾಡುವ ಭರವ ನೋಡಾ. ಮರುಳುಮಾನವ ಕೂಡಲಸಂಗಯ್ಯನ ಪೂಜಿಸಿ ಬದುಕೋ ಕಾಯುವ ನಿಶ್ಚಯಿಸದೆ.

ಬೊಬ್ಬುಳಿ = ಗುಳ್ಳೆ

ನೀರಿನ ಗುಳ್ಳೆಯು ಸುಂದರವಾಗಿ ತೋರುತ್ತದೆ. ಅದನ್ನು ಸುರಕ್ಷಿತ ಮಾಡಬೇಕೆಂದು ಅದಕ್ಕೆ ಕಬ್ಬಿಣದ ಕಟ್ಟು ಹಾಕಿಸಲು ಹೋದರೆ ಅದು ಹುಚ್ಚುತನವೆಂದು ಎಲ್ಲರಿಗೂ ತೋರದೆ ಇರಲಾರದು. ಈ ಗುಳ್ಳೆಯಂತೆಯೇ ಈ ದೇಹವಿದ್ದು ಅದು ಬೇಕಾದಾಗ ನಾಶವಾಗುತ್ತಿದೆ. ಇಂಥದಕ್ಕೆ ಅಷ್ಟು ಮುತ್ತುಭೋಗ ಮಲತ್ರಯಗಳನ್ನಿತ್ತು ಸುರಕ್ಷಿತಮಾಡಲು ನೀನು ಯತ್ನಿಸಿದಲ್ಲಿ ಅದಾದರೂ ಅಷ್ಟೆ ಹುಚ್ಚುತನವು. ಆದರೆ ಈ ದೇಹವನ್ನು ಸುರಕ್ಷಿತ ಮಾಡಬೇಕಾದರೆ ಅತ್ಯಂತ ದಾನವಂತನಾದ ಪರಮಾತ್ಮನನ್ನು ನೀನು ಪೂಜಿಸಬೇಕು. ಅಂದರೆ ಅದು ಸುರಕ್ಷಿತವಾಗುವದು. ಹೀಗೆ ಮಾಡಿದಲ್ಲಿ ನೀನು ಚಿರಾಯುವಾಗುವಿ ಎಂದು ಬಸವೇಶ್ವರನು ಇಲ್ಲಿ ಹೇಳಿದ್ದಾನೆ.

(೭೯) ಅಚ್ಚುಗವೇನಯ್ಯ ಸಂಸಾರದೊಳಗೆ? ನಿಚ್ಚ ನಿಚ್ಚ ಶಿವ ರಾತ್ರಿಯ ಮಾಡುವುದು. ಬೇಗ ಬೇಗ ಅರ್ಚನೆ ಪೂಜೆಯ ಮಾಡು ವುದು. ಕೂಡಲಸಂಗನ ಕೂಡುವುದು

ಅಚ್ಚುಗ = ಗಟ್ಟಿಯಾಗಿ ಒತ್ತಿದ ಸ್ಥಿತಿ, ನಿಚ್ಚ ನಿಚ್ಚ = ದಿನಾಲು

ಈ ಸಂಸಾರದಲ್ಲಿ ಗಟ್ಟಿಯಾಗಿ ಅಂಟಿಕೊಂಡಿರುವದೇಕೆ ? ಹೀಗೆ ಮನು ಷ್ಯನು ಇರಬಾರದು. ಆದರೆ ಅವನು ದಿನಾಲು ಶಿವರಾತ್ರಿಯನ್ನು ಮಾಡ ಬೇಕು. ಅಂದರೆ ವರ್ಷಕ್ಕೊಂದಾವರ್ತಿ ಶಿವನ ವಿಶೇಷ ಪೂಜೆ ಮಾಡು ವಂತೆ ಪ್ರತಿ ದಿನವೂ ಮಾಡಬೇಕು. ಪರಮಾತ್ಮನ ಅರ್ಚನೆಯನ್ನೂ ಪೂಜೆಯನ್ನೂ ಮನಸ್ಸಿಲ್ಲದೆ ಬಿಟ್ಟಿಬೇಸರಿಕೆಯಿಂದ ಮಾಡಬಾರದು. ಏಕ ನಿಷ್ಠೆಯಿಂದ ಪರಮಾತ್ಮನನ್ನು ಪೂಜಿಸಿದರೆ ನೀನು ಅವನನ್ನು ನಿಶ್ಚಯ ವಾಗಿ ಹೊಂದುವಿ ಎಂದು ಬಸವೇಶ್ವರನು ಇಲ್ಲಿ ಹೇಳಿದ್ದಾನೆ.

(೮೦) ಉತ್ಪತ್ತಿ ಶುಕ್ಲಶೋಣಿತದಿಂದಾದ ಲಜ್ಜೆ ಸಾಲದೇ ? ಮತ್ತೆ ದುರಿತಂಗಳ ಹೊರುವ ಎಗ್ಗತನವೇಕಯ್ಯ ? ಮೃತ್ಯುವಿನ ಬಾಯಿಗೆ ಒಳಗಾಗಲೇಕೆ ? ಒತ್ತೊತ್ತುವ ಜನನವ ಗೆಲುವರೆ, ಕರ್ತನ ಪೂಜಿಸು ನಮ್ಮ ಕೂಡಲಸಂಗಮದೇವನ.

ಶುಕ್ಲ = ರೇತಸ್ಸು, ಶೋಣಿತ = ರಕ್ತ. ಎಗ್ಗತನ = ಹೆಡ್ಡತನ.

ಒತ್ತಿ ಒತ್ತಿ = ಬಡಿದು ಬಡಿದು.

ಮಾನವನ ಜನ್ಮವು ಹೇಗಾಗಿರುತ್ತದೆಂಬುದನ್ನು ಎಲ್ಲರೂ ಲಕ್ಷಿಸ ಬೇಕು. ಮನುಷ್ಯನ ರೇತಸ್ಸು, ಮತ್ತು ಸ್ತ್ರೀಯಳ ರಕ್ತ ಈ ಎರಡು ಹೊಲಸು ಪದಾರ್ಥಗಳು ಪರಸ್ಪರ ಕೂಡಿಕೊಂಡಿದ್ದರಿಂದ ಈ ಜನ್ಮವು ಆಗಿದೆಂಬದನ್ನು ಎಲ್ಲರೂ ಅರಿತುಕೊಳ್ಳಬೇಕು. ಇದರಿಂದ ಅವರಲ್ಲಿ ನಾಚಿ ಕೆಯುಂಟಾಗಬೇಕು. ಇದು ಸಾಲದೇ ? ಮನುಷ್ಯನು ಮತ್ತೆ ಮಾಡ ಬಾರದ ಪಾಪ ಕರ್ಮಗಳನ್ನು ಮಾಡುತ್ತಾನೆ. ಈ ಹೆಡ್ಡತನವೇಕೆ ? ಇದರಿಂದ ಅವನು ಸಾವಿನ ಬಾಯಿಗೆ ಸಿಕ್ಕಿ ಬೀಳುತ್ತಾನೆ. ಇದು ಏಕೆ? ಕಷ್ಟಗಳನ್ನು ತಂದು ಪೀಡಿಸುವ ಈ ಜನ್ಮವನ್ನು ಜಯಿಸಬೇಕಾದರೆ ಕರ್ತ ನಾದ ಕೂಡಲಸಂಗಮನನ್ನು ಪೂಜಿಸಬೇಕೆಂದು ಬಸವೇಶ್ವರನು ಇಲ್ಲಿ ಹೇಳಿದಾ

(೮೧) ಹೊಯ್ದರೆ ಹೊಯ್ಗಳು ಕೆಯ್ಯಮೇಲೆ. ಬಯ್ದರೆ ಬಯ್ಗಳು ಕೆಯ್ಯ ಮೇಲೆ. ಹಿಂದಣ ಜನನವೇನಾದಡಾಗಲಿ. ಇಂದಿನ ಭೋಗವು ಕೆಯ್ಯ ಮೇಲೆ. ಕೂಡಲಸಂಗಮದೇವಯ್ಯ ನಿಮ್ಮ ಪೂಜಿಸಿದ ಫಲವು ಕೆಯ್ಯ ಮೇಲೆ.

ಯಾರನ್ನಾದರೂ ಹೊಡೆದರೆ ಅವರು ತಿರುಗಿ ಹೊಡೆಯುವರು, ಇದನ್ನು ನೀವು ಪ್ರತ್ಯಕ್ಷ ಮನಗಾಣಬಹುದು. ಯಾರನ್ನಾದರೂ ಬಯ್ದರೆ ಅವರು ತಿರುಗಿ ಬಯ್ಯುವರು. ಇದನ್ನಾದರೂ ನೀವು ಪ್ರತ್ಯಕ್ಷ ಮನಗಾಣ ಬಹುದು. ಅಂದರೆ ಮಾಡಿದ ಕಾರ್ಯದಂತೆ ಫಲವು ಸಿಗುವದೆಂಬುದು ಸ್ಪಷ್ಟವು. ಇದರ ಮೇಲಿಂದ ಬಸವೇಶ್ವರನು ಸಿದ್ಧಾಂತ ಮಾಡುವದೇನೆ ದರೆ, ಈಗ ನಾವು ಯಾವ ಕಾರ್ಯವನ್ನು ಮಾಡುತ್ತೇವೆಯೋ ಅದರ ಭೋಗವು ಈಗಲೇ ನಮಗೆ ದೊರಕುತ್ತದೆ. ಆದ್ದರಿಂದ ಹಿಂದಿನ ಜನ್ಮದಲ್ಲಿ ನಾವು ಮಾಡಿದ ಕಾರ್ಯಗಳ ಫಲವು ಸಿಗತ್ತದೋ ಇಲ್ಲವೋ ಎಂಬುಪರ ವಿಚಾರವು ಬೇಡ. ಅದು ಏನಾದರೂ ಆಗಲಿ, ನಾವು ಮೇಲೆ ಹೇಳಿದ ಉದಾಹರಣೆಗಳ ಮೇಲಿಂದ ನಾವು ಈಗ ಪರಮಾತ್ಮನನ್ನು ಪೂಜಿಸಿದರೆ ಅದರ ಫಲವು ನಮಗೆ ಈಗಲೇ ಸಿಕ್ಕುವದು. ಇದು ನಿಶ್ಚ ಯವು. ಆದ್ದರಿಂದ ಅವನನ್ನು ಪೂಜಿಸಬೇಕು. ಅಂದರೆ ಪೂಜಿಸಿದ ಫಲವು ನಿಮಗೆ ಈಗಳೇ ಸಿಕ್ಕುವದೆಂದು ಬಸವೇಶ್ವರನು ಇಲ್ಲಿ ಹೇಳಿದ್ದಾನೆ.

(೮೨) ಆಡಿಹರಯ್ಯ, ಹಾಡಿಹರಯ್ಯ, ಮನಬಂದ ಪರಿಯಲಿ. ಶಿವಶರಣರ ಮುಂದೆ ಆಡಿಹರಯ್ಯ, ಹಾಡಿಹರಯ್ಯ. ಕೋಡಂಗಿಯಾಟವ ನಾಡಿದ ಭಕ್ತಂಗೆ ಬೇಡಿತ್ತನೀವ ನಮ್ಮ ಕೂಡಲಸಂಗಮದೇವ.

ಕೋಡಂಗಿ = ಮಂಗನಂತೆ ವರ್ತಿಸುವವ.

ಭಕ್ತರಾದವರು ಪರಮಾತ್ಮನನ್ನು ನೆನೆಯುತ್ತ ತಮ್ಮ ಮನಸ್ಸಿಗೆ ಬಂದಂತೆ ಕುಣಿದಾಡುತ್ತಾರೆ ಮತ್ತು ಹಾಡುತ್ತಾರೆ. ಶಿವಶರಣರ ಮುಂದೆಯೂ ಅವರು ಹೀಗೆಯೆ ಕುಣಿದಾಡುತ್ತಾರೆ ಮತ್ತು ಹಾಡು ತ್ತಾರೆ ಅವರು ಹೀಗೆ ಮಂಗನಂತೆ ಕುಣಿದಾಡಿದಲ್ಲಿ ಅವರು ಭಕ್ತಿಯು ಳ್ಳವರೆಂದು ನಮ್ಮ ಕೂಡಲಸಂಗಮದೇವನು ಅವರಿಗೆ ಬೇಡಿದನ್ನು ಕೊಡುತ್ತಾನೆ.

(೮೩) ಅಷ್ಟ ವಿಧಾರ್ಚನೆ ಷೋಡಶೋಪಚಾರವ ಮಾಡುವುದು. ಮಾಡಿದ ಪೂಜೆಯ ನೋಡುವುದಯ್ಯ. ಶಿವತತ್ವಗೀತವ ಪಾಡುವುದು

ಶಿವನ ಮುಂದೆ ನಲಿದಾಡುವುದಯ್ಯ. ಭಕ್ತಿ ಸಂಭಾಷಣೆಯ ಮಾಡು ವುದು ನಮ್ಮ ಸಂಗಯ್ಯನ ಕೂಡುವುದು.

ಇಲ್ಲಿ ಬಸವೇಶ್ವರನು ಪರಮಾತ್ಮನಲ್ಲಿ ಹೇಗೆ ಐಕ್ಯವನ್ನು ಹೊಂದಬೇಕೆಂಬುದನ್ನು ಹೇಳಿದ್ದಾನೆ. ಲಿಂಗಕ್ಕೋಸ್ಕರ ಎಂಟು ತೆರದ ಅರ್ಚನೆ ಮತ್ತು ಹದಿನಾರುತೆರದ ಉಪಚಾರಗಳನ್ನು ಮಾಡಬೇಕು. ಹೀಗೆ ಪೂಜೆ ಮಾಡಿದ್ದನ್ನು ನೋಡಬೇಕು. ಶಿವತತ್ವಗಳುಳ್ಳ ಗೀತೆಗಳನ್ನು ಹಾಡಬೇಕು. ಶಿವನ ಮುಂದೆ ಸ್ತೋತ್ರ ಮಾಡುತ್ತ ಆನಂದ ಪಡಬೇಕು. ಭಕ್ತಿ ಸಂಭಾಷಣೆಯಲ್ಲಿ ಅಂದರೆ ಶಿವಾನುಭವ ಗೋಷ್ಠಿಯಲ್ಲಿರಬೇಕು. ಹೀಗೆ ಆಚರಿಸಿದಲ್ಲಿ ನೀನು ಪರಮಾತ್ಮನಲ್ಲಿ ಕೂಡುವಿ ಎಂದು ಬಸವೇಶ್ವರನು ಇಲ್ಲಿ ಹೇಳಿದ್ದಾನೆ.

(೮೪) ಶ್ಲೋಕ ।। ವರಂ ಪ್ರಾಣ ಪರಿತ್ಯಾಗಂ ! ಛೇದನಂ ಶಿರಸೋಪಿಧ್ಯಾ । ನತ್ವಾನಭ್ಯರ್ಥ್ಯ ಭುಂಜೀಯಾ । ದ್ಭಗವಂತಂ ತ್ರಿಲೋಚನಂ॥ ಎಂದುದಾಗಿ ದೇಹ ಧರ್ಮ ತನ್ನ ಆದಂತೆ ಆಗಲಿ. ಕೂಡಲಸಂಗನ ಪೂಜಿಸಿದಲ್ಲದೆ ನಿಲಲಾರೆನು.

"ಪ್ರಾಣ ಪರಿತ್ಯಾಗ ಮಾಡುವದು ಲೇಸಾದದ್ದು. ನನ್ನ ಶಿರಸ್ಸನ್ನು ಕಡಿದರೆ ಅದೂ ಲೇಸಾದದ್ದು. ಆದರೆ ಮೂರು ಕಣ್ಣುಳ್ಳವನಾದ ಪರಮಾತ್ಮನನ್ನು ನಮಸ್ಕರಿಸದೆ ಅಥವಾ ಪೂಜಿಸದೆ ನಾನು ಊಟ ಮಾಡುವುದು ಬೇಡ" ಎಂಬ ಅಭಿಪ್ರಾಯವುಳ್ಳ ಶ್ಲೋಕವನ್ನು ಬಸವೇಶ್ವರನು ಇಲ್ಲಿ ಉದಹರಿಸಿದ್ದಾನೆ. ಹೀಗೆ ಅವನು ಉದಹರಿಸುತ್ತ, ನನ್ನ ದೇಹಕ್ಕೆ ಅದರ ಧರ್ಮದ ಪ್ರಕಾರ ಏನಾದರೂ ಆಗಲಿ, ಅಂದರೆ ಅದು ನಾಶವಾಗಲಿ ಅಥವಾ ಬಿಡಲಿ, ನಾನು ಮಾತ್ರ ಪರಮಾತ್ಮನನ್ನು ಪೂಜಿಸದೆ ಬಿಡಲಾರೆನು, ಎಂದು ಬಸವೇಶ್ವರನು ಇಲ್ಲಿ ಹೇಳಿದ್ದಾನೆ.

---

## ಭಕ್ತಿಭಾವದಿಂದ ಲಿಂಗವನ್ನು ಪೂಜಿಸು

(೮೫) ಲೋಕೋಪಚಾರಕ್ಕೆ ಮಜ್ಜನಕ್ಕೆರೆವೆನಯ್ಯ. ಮನದ ತಾಮಸ ಬಿಡದು. ಮನದ ಕಪಟ ಬಿಡದು. ಶಿವಶರಣೆಂಬ ದಳವಡದಯ್ಯ. ಎನ್ನ ಮನದಲ್ಲಿ ಎರಡುಳ್ಳನ್ನಕ್ಕ ಕೂಡಲಸಂಗಮದೇವ ನೆಂತೊಲಿವ ?

ನಾನು ಲಿಂಗ ಪೂಜೆಯನ್ನು ಬಹಳ ಮಾಡುವವನೆಂದು ಜನರು ಅನ್ನಬೇಕೆಂದು ನಾನು ಲಿಂಗಕ್ಕೆ ಹೆಚ್ಚಾಗಿ ಮಜ್ಜನವನ್ನು ಎರೆಯುತ್ತೇನೆ. ಆದರೆ ನನ್ನ ಮನಸ್ಸಿನ ದುಷ್ಟ ಪ್ರವೃತ್ತಿಗಳು ನನ್ನನ್ನು ಬಿಡುವದಿಲ್ಲ. ಮನಸ್ಸಿನಲ್ಲಿರುವ ಕಪಟತನವು ನನ್ನನ್ನು ಬಿಡುವದಿಲ್ಲ. ಪರಮಾತ್ಮನಿಗೆ ಶರಣು ಹೋಗಿ ಕಾರ್ಯ ಮಾಡಬೇಕೆಂಬ ಮನೋವೃತ್ತಿಯು ನನ್ನಲ್ಲಿ ಬಂದಿಲ್ಲ. ನನ್ನ ಮನಸ್ಸಿನಲ್ಲಿ ಇನ್ನೂ ಬೇಧ ಭಾವವಿದೆ. ಹೀಗಿರುವರೆಗೆ ಪರಮಾತ್ಮನು ನನ್ನನ್ನು ಹೇಗೆ ಮೆಚ್ಚುವನು ? ಅವನು ಮೆಚ್ಚಲಾರನು.

(೮೬) ಜಲವಿಲ್ಲದ ಪೂಜೆ, ನೇಹವಿಲ್ಲದ ಮಾಟ, ಆ ಪೂಜೆಯು ಆ ಮಾಟವು ಚಿತ್ರದ ರೂಹು ಕಾಣಿರಣ್ಣ. ಚಿತ್ರದ ರಬ್ಬು ಕಾಣಿರಣ್ಣಾ. ಅಪ್ಪಿದರೆ ಸುಖವಿಲ್ಲ, ಮೆಲಿದರೆ ರುಚಿ ಇಲ್ಲ, ಕೂಡಲಸಂಗಮದೇವ ನಿಜವಿಲ್ಲದವನ ಭಕ್ತಿ.

ನೇಹ= ಪ್ರಿತಿ; ರೂಹು= ರೂಪು; ಮೆಲು= ತಿನ್ನು

ಮನಸ್ಸಿಲ್ಲದೆ ಪೂಜೆ ಮಾಡುವದು, ಮತ್ತು ಭಕ್ತಿ ಇಲ್ಲದೆ ಪರಮಾತ್ಮನಿಗೋಸ್ಕರ ಕ್ರಿಯೆಗಳನ್ನು ಮಾಡುವದು, ಹೀಗಾದಲ್ಲಿ ಅದು ಕೇವಲ ಚಿತ್ರದಲ್ಲಿ ಕಾಣುವ ರೂಪಿನಂತೆ, ಅಥವಾ ಆ ಚಿತ್ರದಲ್ಲಿ ತೋರುವ ಸೌಂದರ್ಯದಂತೆ ಇದೆ. ಆ ಚಿತ್ರವನ್ನು ಅಪ್ಪಿದರೆ ಸುಖವಿಲ್ಲ. ರುಚಿಸಿದಲ್ಲಿ ಸವಿಯಿಲ್ಲ. ಎಲೋ ಪರಮಾತ್ಮನೇ, ನಿಜವು ಇಲ್ಲದವನ ಭಕ್ತಿಯು ಈ ಪ್ರಕಾರವಿದೆ. ಅಂದರೆ ಪರಮಾತ್ಮನಿಗೋಸ್ಕರ ಮಾಡುವುದನ್ನೆಲ್ಲ ಮನಃಪೂರ್ವಕವಾಗಿ ಮತ್ತು ಭಕ್ತಿ ಪೂರ್ವಕವಾಗಿ ನೀನು ಅರ್ಪಿಸಿ ಮಾಡಬೇಕೆಂಬ ಅಭಿಪ್ರಾಯವು ಇದರಲ್ಲಿದೆ-

(೮೭) ಮಾಡಿ ನೀಡಿ ಲಿಂಗವ ಪೂಜಿಸಿಹೆವೆಂಬರು. ನೀವೆಲ್ಲ ಕೇಳಿರಣ್ಣಾ ! ಹಾಗದ ಕೆರಹ ಹೊರಗೆ ಕಳೆದು ದೇಗುಲಕ್ಕೆ ಹೋಗಿ ನಮಸ್ಕಾರವ ಮಾಡುವನಂತೆ, ತನ್ನ ಕೆರಹಿನ ಧ್ಯಾನವಲ್ಲದೆ ದೇವರ ಧ್ಯಾನವಿಲ್ಲ. ಧನವನಿರಿಸದಿರಾ. ಇರಿಸಿದರೆ ಭವ ಬಪ್ಪುದು ತಪ್ಪದು. ಕೂಡಲಸಂಗನ ಶರಣರಿಗೆ ಸವಿಸಲೇಬೇಕು.

ನೀವು ಲಿಂಗಪೂಜೆ ಮಾಡುವಾಗ ನಾವು ಲಿಂಗದ ಸಲುವಾಗಿ ದುಡಿಯುತ್ತೇವೆ, ನಾವು ಲಿಂಗದ ಸಲುವಾಗಿ ಕೊಡುತ್ತೇವೆ, ಎಂದು ಹೇಳು

ತ್ತೀರಿ. ಆದರೆ ನಾನು ನಿಮಗೆ ಕೇಳುವದೇನಂದರೆ— ನೀವು ನಮಸ್ಕಾರ ಮಾಡಬೇಕೆಂದು ದೇವಸ್ಥಾನಕ್ಕೆ ಹೋಗುತ್ತೀರಿ. ಆಗ ನೀವು ದೇವರ ಧ್ಯಾನ ಮಾಡುವದನ್ನು ಬಿಟ್ಟು ಹೊರಗೆ ಬಿಟ್ಟಿದ್ದ ಆ ಎರಡು ದುಡ್ಡಿನ ಮಚ್ಚೀ ಜೋಡುಗಳ ಧ್ಯಾನ ಮಾಡುವಿರಲ್ಲವೇ? ಅದರಂತೆ ನಿಮ್ಮ ಲಿಂಗ ಪೂಜೆಯು ಇದೆ. ಆಗ ನೀವು ದುಡ್ಡು ಹೆಚ್ಚಾಗಲೆಂದು ಧ್ಯಾನಮಾಡುವಿರಿ. ಹೀಗೆ ಮಾಡಿದರೆ ನೀವು ತಿರುಗಿ ಹುಟ್ಟಿ ಬರುವದು ಎಂದೂ ತಪ್ಪಲಾರದು. ಆದ ರಿಂದ ನೀವು ಗಳಿಸಿದ್ದನ್ನು ಶರಣರಿಗೆ ವೆಚ್ಚಮಾಡಬೇಕೆಂದು ಬಸವೇಶ್ವ ರನು ಇಲ್ಲಿ ಹೇಳಿದ್ದಾನೆ.

(೮೮) ಕುಳ್ಳಿದ್ದು ಲಿಂಗವ ಪೂಜಿಸಿ ಅಲ್ಲದಾಟವನಾಡುವರಯ್ಯ. ಬೆಳ್ಳೆತ್ತಿನ ಮರೆಯಲಿದ್ದು, ಹುಲ್ಲೆಗಂಬ ತೊಡುವಂತೆ ಕಳ್ಳ ಹಾದರಿಗನ ಕೆಯ್ಯಲು ಪೂಜೆಯ ಕೊಳ್ಳ ನಮ್ಮ ಕೂಡಲಸಂಗಮದೇವ.

ಭಕ್ತರೆನಿಸಿಕೊಳ್ಳುವವರು ಒಂದು ಸ್ಥಳದಲ್ಲಿ ಕುಳಿತುಕೊಂಡು ಲಿಂಗ ಪೂಜೆ ಮಾಡುತ್ತಾರೆ. ಹೀಗೆ ಪೂಜೆ ಮಾಡಿಯೂ ಮಾಡಬಾರದ ಕೆಲಸಗಳನ್ನು ಮಾಡುತ್ತಾರೆ. ಹೀಗೆ ಮಾಡುವದು ಬೇಟೆಗಾರರು ಬಿಳೀ ಎತ್ತನ್ನು ಮರೆಮಾಡಿಕೊಂಡು ಚಿಗರಿಯ ಸಮೀಪಕ್ಕೆ ಹೋಗಿ ಅದಕ್ಕೆ ಬಾಣಹೊಡೆದಂತೆ ಸರಿ. ಭಕ್ತರಾದವರು ಕಳ್ಳತನ ಮತ್ತು ಹಾದರದ ಕೆಲಸ ಮಾಡಬಾರದು. ಹೀಗೆ ಮಾಡುವವರ ಕೈಯ್ಯಿಂದ ನಮ್ಮ ಪರಮಾ ತ್ಮನು ಪೂಜೆಯನ್ನು ತೆಗೆದುಕೊಳ್ಳುವದಿಲ್ಲ.

(೮೯) ಬಂಡಿ ತುಂಬಿದ ಪತ್ರೆಯ ತಂದು ಕಂಡಕಂಡಲಿ ಮಜ್ಜನ ಕ್ಕೆರೆವಿರಯ್ಯ. ತಾಪತ್ರಯವ ಕಳೆದು ಪೂಜಿಸಿ. ತಾಪತ್ರಯವ ಲಿಂಗ ನೊಲ್ಲ. ಕೂಡಲ ಸಂಗಮದೇವ ಬರಿಯುದಕದಲಿ ನೆನೆವನೇ?

ಜೋಳಿಗೆ ಮತ್ತು ಕರಡಿಗೆಗಳಲ್ಲಿ ತಂದ ಪತ್ರಿ ಪುಷ್ಪಗಳು ನಮ್ಮ ಪೂಜೆಗೆ ಸಾಲುವದಿಲ್ಲ, ಅವು ನಮಗೆ ಬಹಳ ಬೇಕಾಗುತ್ತವೆ, ಎಂದು ಒಂದು ಬಂಡಿಯನ್ನು ತರಿಸಿ ಅದರಮೇಲೆ ಮಡಿಪಾವುಡ ಹಾಸಿ ಹರ ದಾರಿ ದೂರಹೋಗಿ ಪತ್ರಿ ಪುಷ್ಪಗಳನ್ನು ಆರಿಸಿಕೊಂಡು ಬರುತ್ತಾರೆ. ಮುಂದೆ ಬಿಂದಿಗೆಗಳಲ್ಲಿ ತಂದ ಉದಕವು ನಮಗೆ ಸಾಲುವದಿಲ್ಲ ಎಂದು ಹಳ್ಳ, ಹೊಳಿ, ಕೆರೆ, ಬಾವಿಗಳಿದ್ದಲ್ಲಿಗೆ ಹೋಗಿ ಕಂಡ ಕಂಡಲ್ಲಿ ಕುಳಿತು ಕೊಂಡು ಹತ್ತೆಂಟು ಕೊಡ ಉದಕವನ್ನು ತರಿಸಿ ಲಿಂಗಕ್ಕೆ ಅಭಿಷೇಕ ಮಾಡುತ್ತಾರೆ. ಹೀಗೆ ಲಿಂಗ ಪೂಜೆಮಾಡುವದು ಒಂದು ಕಾಲದಲ್ಲಿದ್ದಿತು.

ಆದರೆ ಹೀಗೆ ಶ್ರಮಪಟ್ಟು ಲಿಂಗಪೂಜೆ ಮಾಡಬೇಡಿರೆಂದು ಬಸವೇಶ್ವರನು ಇಲ್ಲಿ ಬೋಧಿಸಿದ್ದಾನೆ. ಹೀಗೆ ಶ್ರಮ ಪಡುವದು ಪರಮಾತ್ಮನಿಗೆ ಬೇಡ ವೆಂದು ಅವನು ಹೇಳುತ್ತಾನೆ. ಕಡ್ಲೆ, ಗೋದಿ, ಉದ್ದು ಇವುಗಳ ಕಾಳನ್ನು ನೀರಲ್ಲಿ ಹಾಕಿದರೆ ಅವು ನೆನೆದು ಮೆತ್ತಗಾಗುತ್ತವೆ. ಅವುಗಳಂತೆ ಲಿಂಗದ ಮೇಲೆ ಹತ್ತೆಂಟು ಕೊಡ ನೀರು ಸುರುವಿದರೆ ಪರಮಾತ್ಮನೇನಾದರೂ ಮೆತ್ತ ಗಾಗುವನೇ? ಮೆತ್ತಗಾಗಲಾರನು. ಪರಮಾತ್ಮನನ್ನು ಹೀಗೆ ಶ್ರಮಪಟ್ಟು ಆರಾಧಿಸಿದರೆ ಅವನು ಮೆಚ್ಚುವದಿಲ್ಲೆಂದು ಬಸವೇಶ್ವರನ ಅಭಿಪ್ರಾಯವು.

(೯೦) ಒಲೆಯ ಬೂದಿಯ ಬಿಲಿಯಲು ಬೇಡ, ಒಲಿದಂತೆ ಹೂಸಿ ಕೊಂಡಿಪ್ಪುದು ಹುಸಿ. ಏನು ಫಲ, ಮನದಲ್ಲಿ ಲೇಸಿಲ್ಲದನ್ನಕ್ಕ? ಒಂದನಾಡ ಹೋಗಿ ಒಂಭತ್ತನಾಡುವ ಡಂಭಕರ ಮೆಚ್ಚ ನಮ್ಮ ಕೂಡಲ ಸಂಗಮ ದೇವ.

ಭಕ್ತರು ವಿಭೂತಿಯನ್ನು ಧರಿಸುತ್ತಾರೆ. ಒಂದು ವೇಳೆ ವಿಭೂ ತಿಯು ಇರದಿದ್ದರೆ ಒಲೆಯ ಬೂದಿಯನ್ನಾದರೂ ಧರಿಸುತ್ತಾರೆ. ಹೀಗೆ ಧರಿಸುವಲ್ಲಿ ಅವರು ಆ ಬೂದಿಯು ಏನು, ಅದು ಎಂಥದು ಎಂದು ಚಿಕಿತ್ಸೆ ಮಾಡಬಾರದು. ಅದನ್ನು ಅವರು ವಿಶ್ವಾಸದಿಂದ ಧರಿಸುವುದು. ಅದರ ವಿಧಾನ ಗೊತ್ತಿರದಿದ್ದರೆ, ನಿಮ್ಮ ಮನಸ್ಸಿಗೆ ಬಂದ ಹಾಗೆ ಧಾರಣ ಮಾಡಿರಿ. ಆದರೆ ಆಗ ನಿಮ್ಮ ಮನಸ್ಸು ಮಾತ್ರ ಪರಿಶುದ್ಧವಾಗಿರಬೇಕು. ಇಷ್ಟೇ ಸಾಕು. ಆದರೆ ನಿಮ್ಮ ಮನಸ್ಸಿನಲ್ಲಿ ಲೇಸು ಅಂದರೆ ಒಳ್ಳೆಯತ ನವು ಇರದಿದ್ದರೆ ನೀವು ಧರಿಸುವ ಆ ವಿಭೂತಿಯಾದರೂ ಸುಳ್ಳು. ಅದರಿಂದೇನೂ ಪ್ರಯೋಜನವಿಲ್ಲ. ನೀವು ಒಂದನ್ನು ಅಂದರೆ ಒಬ ಪರಮಾತ್ಮನನ್ನು ಮಾತ್ರ ನಂಬಬೇಕು. ಹೀಗೆ ನಂಬದೆ ಒಂಭತ್ತು ಅಂದರೆ ಅನೇಕ ದೇವತೆಗಳನ್ನು ನಂಬಿದಲ್ಲಿ ಅದು ಡಾಂಭಿಕತನವು. ಇಂಥವರು ವಿಭೂತಿಯನ್ನು ಧರಿಸಿದರೆ ಏನು ಪ್ರಯೋಜನ? ಇಂಥವ ರನ್ನು ಪರಮಾತ್ಮನು ಮೆಚ್ಚನು, ಎಂದು ಬಸವೇಶ್ವರನು ಈ ವಚನದಲ್ಲಿ ಹೇಳುತ್ತಾನೆ.

(೯೧) ಹೃದಯ ಕತ್ತರಿ, ತುದಿ ನಾಲಿಗೆ ಬೆಲ್ಲೆಂಬೋ, ಆಡಿಹೆ ನೆಂಬೋ, ಹಾಡಿಹೆನೆಂಬೋ, ನಿಚ್ಚ ನಿಚ್ಚ ಶಿವರಾತ್ರಿಯ ಮಾಡಿಹ ನೆಂಬೋ. ಆನು ಎನ್ನಂತೆ, ಮನ ಮನದಂತೆ, ಕೂಡಲಸಂಗಮ ದೇವ ತಾನು ತನ್ನಂತೆ.

ನನ್ನ ಹೃದಯದಲ್ಲಿ ಕತ್ತರಿ ಇದೆ. ಆದರೆ ನನ್ನ ತುದಿ ನಾಲಿಗೆಯಲ್ಲಿ ಬೆಲ್ಲದಂಥ ಮಾತುಗಳು ಇವೆ. ನಾನು ಪರಮಾತ್ಮನ ಹೆಸರನ್ನು ತೆಗೆದುಕೊಂಡು ಆಡುತ್ತೇನೆ ಮತ್ತು ಹಾಡುತ್ತೇನೆ, ಹೀಗೆ ನಾನಿದ್ದೇನೆಂದು ನಾನು ಜನರಲ್ಲಿ ಹೇಳಿಕೊಳ್ಳುತ್ತೇನೆ. ನಾನು ದಿನಾಲು ಶಿವರಾತ್ರಿ ಮಾಡುತ್ತೇನೆಂತಲೂ ಅವರಿಗೆ ಹೇಳುತ್ತೇನೆ. ಆದರೆ ನಾನು ಹೀಗೆನ್ನುವದೆಲ್ಲವೂ ಸುಳ್ಳು. ನಾನು ಎಷ್ಟು ಮಾತ್ರವೂ ಬದಲಾಗಿಲ್ಲ. ನಾನು ನನ್ನಂತೆಯೇ ಇದ್ದೇನೆ, ಅಂದರೆ ಸಂಸಾರ ವ್ಯಾಮೋಹದಲ್ಲಿಯೇ ಇದ್ದೇನೆ. ನನ್ನ ಮನಸ್ಸಾದರೂ ಮನದಂತೆಯೇ ಇದೆ. ಅಂದರೆ ಅದರಲ್ಲಿ ಕಪಟತನವು ತುಂಬಿ ಹೋಗಿದೆ. ಹೀಗಿದ್ದ ಬಳಿಕ ಪರಮಾತ್ಮನಾದರೂ ತಾನು ತನ್ನಂತೆಯೇ ಇರುತ್ತಾನೆ. ಅಂದರೆ ಅವನು ನನಗೆ ಸಂಬಂಧವಿಲ್ಲದಂತೆ ನನ್ನಿಂದ ದೂರಿರುತ್ತಾನೆಂಬ ಭಾವವು ಈ ವಚನದಲ್ಲಿ ಇದೆ.

(೯೨) ಒಳ್ಳಿಹ ಮೈಲಾರನ ಒಳಗೆಲ್ಲ ಸಣಬು. ಹೊರಗಣ ಬಣ್ಣಕರ ಲೇಸಾಯಿತ್ತಯ್ಯ. ಶ್ವಾನನ ನಿದ್ರೆ, ಅಜ್ಞಾನಿಯ ತಪದಂತೆ ಆಯಿತ್ತಯ್ಯ ಎನ್ನ ಮತಿ ಕೂಡಲ ಸಂಗಮ ದೇವಾ.

ಮೈಲಾರ ದೇವರ ಮೂರ್ತಿಗೆ ಹೊರಗೆ ಬಿಳಿದು ಕೆಂಪು ಬಣ್ಣ ಬಳಿದು ಅದು ಸೊಂಪಾಗಿ ತೋರುವಂತೆ ಮಾಡುತ್ತಾರೆ. ಆದರೆ ಅದರ ಒಳಗೆ ಸಣಬು, ಗೊಬ್ಬರ, ಪುಂಡೀನಾರು ಹಾಕಿರುತ್ತಾರೆ. ಅದರಂತೆ ನನ್ನ ಅಂತರಂಗದಲ್ಲಿ ಕುಹಕ ಪ್ರಪಂಚವು ತುಂಬಿರುತ್ತದೆ. ಆದರೆ ಹೊರಗೆ ಮಾತ್ರ ಭಕ್ತನ ವೇಷವನ್ನು ಧರಿಸುತ್ತೇನೆ. ಎಲೋ ಪರಮಾತ್ಮನೇ, ನನ್ನ ಬುದ್ಧಿಯು ನಾಯಿಯ ನಿದ್ರೆಯಂತೆ ಮತ್ತು ಅಜ್ಞಾನಿಯ ತಪದಂತೆ ಆಗಿದೆಂದು ಬಸವೇಶ್ವರನು ಇಲ್ಲಿ ಹೇಳುತ್ತಾನೆ. ಅಂದರೆ ನಾಯಿಯು ಬೂದಿಯಲ್ಲಿ ಮಲಗಿದ್ದಾಗ ಅದರ ಸ್ವಪ್ನದಲ್ಲಿ ಹಿಂದಿನ ಜನ್ಮದ ನೆನಪು ಆಗಿ, ನಾನು ಮಾಡಬಾರದ ಪಾಪಕರ್ಮ ಮಾಡಿದ್ದರಿಂದ ನನಗೆ ಇಂಥ ಜನ್ಮವು ಬಂದಿತು. ಇನ್ನು ಮುಂದೆ ನಾನು ಭಕ್ತರ ಮನೆಯಲ್ಲಿದ್ದುಕೊಂಡು ಈ ಜನ್ಮವನ್ನು ಹಿಂಗಿಸಿಕೊಳ್ಳಬೇಕೆಂದು ಧ್ಯಾನಿಸುತ್ತದೆಯಂತೆ. ಆದರೆ ಅದು ಎಚ್ಚರಾದ ಬಳಿಕ ಇಂಥ ವಿಚಾರಗಳು ಅದಕ್ಕೆ ಹೋಗಿಬಿಡುತ್ತವೆ. ಜ್ಞಾನಿಯಾದವನು ತಪಸ್ಸು ಮಾಡುವಲ್ಲಿ ಅವನು ಮನದಲ್ಲಿ ಶುದ್ಧನಾಗಿ ಅದನ್ನು ಆಚರಿಸುತ್ತಾನೆ. ಆದರೆ ಅಜ್ಞಾನಿಯಾದವನು ಮಲತ್ರಯಗಳನ್ನು ಬಿಡದೆ ದುರಾಶೆಯುಳ್ಳವನಾಗಿ ಆಚರಿಸುತ್ತಾನೆ.

R. N. B. 2554

# BOOK-POST

ಶ್ರೀ ರಾ|| ರಾ||

ಚನಮಲ್ಲಪ್ಪ ಶಿದ್ದಪ್ಪ ಬಡೇವಿ
ಪೋ ಬನಹಟ್ಟಿ
ವ್ಹಾಯಾ ಕುಡಚಿ ಸ್ಟೇಶನ್

*From*
**Shivanubhava
Office
Bijapur.**




ಈ ಪತ್ರಿಕೆಯನ್ನು ಇದರ ಸಂಪಾದಕರಾದ, ರಾ|| ಬ|| ಪಿ. ಜಿ. ಹಳಕಟ್ಟಿ. ಬಿ. ಎ. ಎಲ್. ಎಲ್. ಬಿ. ಇವರು ವಿಜಯಪುರ ವಾರ್ಡ ನಂ ೨. ಮನೆ ನಂ. ೧೩೭೮ ರಲ್ಲಿರುವ ತಮ್ಮ ಹಿತಚಿಂತಕ ಪ್ರಿಂಟಿಂಗ್ ಪ್ರೆಸ್ಸಿನಲ್ಲಿ ಮುದ್ರಿಸಿ ಅಲ್ಲಿಯೇ ಪ್ರಸಿದ್ಧಿಸಿದರು.

## ವಿಷಯಾನುಕ್ರಮಣಿಕೆ

# ಶಿವಾನುಭವ

| ವರ್ಷ ೨೭ | ನವ್ಹಂಬರ ೧೯೫೩ | ಸಂಚಿಕೆ ೧೧ |
|---|---|---|


## ಹರಿಹರದೇವ

( ಲೇಖಕ:- ಶ್ರೀ ಮ. ಮಲ್ಲಪ್ಪ ಹುಲಗೂರು )



ಹರಿಹರನು ಹಿರಿಯ ಕವಿ, ಭಕ್ತ, ಕ್ರಾಂತಿಪುರುಷ. ಈ ಮಹಾ ಕವಿಯ ಪಾಂಡಿತ್ಯದಿಂದೊಡಗೂಡಿದ ಪ್ರತಿಭೆ, ಈ ಶ್ರೇಷ್ಠ ಭಕ್ತನ ತಲ್ಲೀನತೆ, ಈ ಎದೆಗಾರ ಕ್ರಾಂತಿಪುರುಷನ ಭಾಷೆಯ ಇಂಪು, ಇವುಗಳ ಮುಪ್ಪುರಿಯು ಕನ್ನಡಿಗರಿಗೆ ಎಂದೂ ಬತ್ತದ ಸೊಗಸಿನ ಬುಗ್ಗೆಯಾಗಿದೆ.

—ಶಿ. ಶಿ. ಬಸವನಾಳ.

ಕರ್ನಾಟಕ ಸಾಹಿತ್ಯ ಚರಿತ್ರೆಯಲ್ಲಿ ಕ್ರಿ. ಶ. ೧೨ನೆ ಶತಮಾನವು ಜನತೆಯ ದೃಷ್ಟಿಯನ್ನು ತನ್ನ ಕಡೆಗೆ ಸೆಳೆದುಕೊಳ್ಳುವ ಯುಗವು. ಸಾಹಿತ್ಯ ಜಗತ್ತಿನಲ್ಲಿ ಆಂದೋಲನದ ಆಳಿಕೆಯ ಕಾಲವು. ಜನಸಾಮಾನ್ಯಕ್ಕೆ ಚಂಪೂ ಯುಗದ ಸಂಪ್ರದಾಯ ಸರಪಣಿಯನ್ನು ಇನ್ನು ಮುಂದೆ ಹೊರುವುದು ಅಸಾಧ್ಯವಾಗಿ ಕಂಡಿರಬೇಕೋ ಏನೋ. ಅವರಲ್ಲಿ ಅಡಗಿದ್ದ ಸ್ವಾತಂತ್ರ್ಯ ಪ್ರಿಯತೆಯು ಒಂತೇ ಬಾರಿಗೆ ಮೇಲೆದ್ದು ನಿಂತಿತು. ಸಾಧನವಾಗಿ ಸಾಹಿ ಭರಣಿ ಕಾರಣವಾಗಿ ಧರ್ಮವೂ ಅದಕ್ಕೆ ಆಯಿತು. ತತ್ಫಲವಾಗಿ ನಿರಾಭರಣ ಸುಂದರಿಯಾದ ವಚನಸಾಹಿತ್ಯ ಕನ್ಯೆಯ ಜನನವಾಯಿತು. ಬಸವಣ್ಣ, ಅಲ್ಲಮ, ಅಕ್ಕ ಮಹಾದೇವಿಯವರಾದಿ ಶರಣ ಶರಣೆಯರು ಇದರ ಮುನ್ನಡೆಗೆ ಮೂಲಭೂತರಾದರು. ಮತ್ತೊಂದೆಡೆಯಲ್ಲಿ ರಗಳೆಯ ರಾಣಿಯ [illegible]ವತಾರ ವಾಯಿತು. ತಮಿಳ: ಶೈವರ ಅರುವತ್ತು ಮೂರು ಪುರಾತನರ ಮತ್ತು

ಶಿವಭಕ್ತಿ ಶ್ರೇಷ್ಠರ ಪಾವನ ಚರಿತ್ರೆಗಳನ್ನು ಹೊಗಳಿ, ಹಾಡಿ, ನಲಿದು ಪುರುಷಾರ್ಥಿಯಾಗಲು ಪುರುಷೋತ್ತಮನೊಬ್ಬನು ರಗಳೆಯನ್ನು ಅನುಕೂಲಿಸಿ ಕೊಂಡನು. ಶ್ರೀಮಂತ ಚಂಪೂ ಗ್ರಂಥಗಳಲ್ಲಿ ಸೈರಂಧ್ರಿಯಾಗಿದ್ದ ರಗಳೆ ರಾಣಿಯು ಪುರುಷೋತ್ತಮನ ಕೃಪಾದೃಷ್ಟಿಬಿದ್ದು ಸ್ವತಂತ್ರಳಾಗಿ, ಸಹಜತೆ ಯಿಂದ ಸಿರಿವಂತಳಾಗಿ ಬಾಳುವಂತಾಯಿತು. ಈ ಶತಮಾನದಲ್ಲಿ ಸ್ವಾತಂತ್ರ್ಯ ಪ್ರಿಯತೆ, ನ್ಯಾಯಾನ್ವೇಷಣೆಯು ಸರ್ವ ಜನತೆಗೂ ಕಂಡುಬಂದಿತು. ಕರ್ಣಾಟಕ ಸಾಹಿತ್ಯ ಸೀಮೆಯಲ್ಲಿ ಅಪೂರ್ವ ವ್ಯಕ್ತಿಯಾದ ಹರಿಹರನೇ ರಗಳೆಗೆ ಕೃಪಾದೃಷ್ಟಿ ಬೀರಿದ ಪುರುಷೋತ್ತಮನು. ಈತನಲ್ಲಿ ಮಾರ್ಗವು ಈತನದೇ ಆದ ಒಂದು ಹೊಸಮಾರ್ಗ. ಜಾಡುತಪ್ಪಿ ಹೊರಣ ಜಾಣ್ಮೆ, ಹಾದಿತಪ್ಪಿ ಹೆಜ್ಜೆಯಿಟ್ಟ ಹಿರಿಮೆ ಈತನದು. ಈ ಉದ್ದಾಮ ಮಹಾ ಕವಿಯ ವಿಷಯವಾಗಿ "ಅವನ ಕೈಯ್ಯಲ್ಲಿ ಕನ್ನಡ ಗಂಗಾ ಸಲಿಲದಂತೆ ಹರಿಯುತ್ತದೆ. ಗದ್ಯವನ್ನೇ ಬರೆಯಲಿ, ಪದ್ಯವನ್ನೇ ಬರೆಯಲಿ, ಅದೇ ದೀಧಿತಿ, ಅದೇ ಸಿಂಹವಾಣಿ, ಅದೇ ಕುಸುಮಕೋಮಲತೆ" ಎಂದು ಶ್ರೀ ಅ. ನ. ಕೃಷ್ಣ ರಾಯರೂ, "ಈತನು ಗಿರಿಜಾಕಲ್ಯಾಣ, ಶಿವಗಣದ ರಗಳೆ, ಪಂಪಾಶತಕ ಎಂಬ ಗ್ರಂಥಗಳನ್ನು ಬರೆದಿದ್ದಾನೆ. ಅಲ್ಲದೆ ರಕ್ಷಾಶತಕ, ಶಿವಾಕ್ಷರಮಾಲೆ, ಮುಡಿಗೆಯ ಅಷ್ಟಕ ಎಂಬ ಗ್ರಂಥಗಳನ್ನೂ ರಚಿಸಿರುವಂತೆ ತಿಳಿಯಬರು ತ್ತದೆ. ಈತನಿಗೆ ಹರಿಹರದೇವ, ಹರಿಗ, ಹರಿ, ಹರಿಯಣ್ಣ ಪಂಡಿತ, ಹಂಪೆಯ ಹರೀಶ್ವರ ಎಂಬ ಹೆಸರುಗಳುಂಟು. 'ಪರಮಾನಂದಾಬ್ಧಿ ಪಂಪಾ ಪುರವರಸ ವಿರೂಪಾಕ್ಷ ಸಾಕ್ಷಾತ್ಪುತ್ರಂ' ಎಂದು ಹೇಳಿಕೊಂಡಿದ್ದಾನೆ. ಈತನ ಬಂಧವು ಜೈನ ಶೈಲಿಯನ್ನು ಅನುಸರಿಸಿ ಲಲಿತವಾಗಿಯೂ, ಮೃದು ಗಂಭೀರ ವಾಗಿಯೂ ಇದೆ." ಎಂದು ಕವಿಚರಿತಕಾರರೂ ಹೇಳಿರುವುದು ಈ ಮಹಾ ಕವಿಯ ಧೀಮಂತಿಕೆಯನ್ನು ತಿಳಿಸದೆ ಇರದು !

ಈತನ ಜನ್ಮಸ್ಥಳವು ಹಂಪೆಯು. ಈತನು ಮಹಾದೇವನೆಂಬ ಆರಾಧ್ಯ ಬ್ರಾಹ್ಮಣನ ಮಗನು. ಈತನ ಗುರುಪರಂಪರೆಯ ಹಂಪೆಯ ಶಂಕರದೇವ, ಮಾದಿರಾಜ, ಮಾಯಿದೇವ. ಈತನು ಮಾಯಿದೇವನ ಶಿಷ್ಯನು. ಈತನ ಗುರು ಪ್ರೇಮವು ವೀರಶೈವರ ಭಾವನೆಯನ್ನು ಧ್ವನಿತ ಮಾಡದಿರದು !

ಶ್ರೀಗುರು ಪರಗುರು ಘನಮಹಿ |
ಮಾಗುರು ಮಾಧುರ್ಯ ಗುರು ಮಹಾಗುರುವರ ವಿ |

ದ್ಯಾಗುರು ಸುಖೈಕ ಗುಣಾವಸು ।
ಧಾಗುರು ಶೈವಗುರು ಶಾಂತಗುರು ಮಾಯ್ದೇವಂ ॥

ಈತನು ಸಂಸಾರಿಯಾಗಿದ್ದನೆಂದು ಹೇಳಲು ಅವಕಾಶವಿರುವುದು; ಆದರೆ ಸರಿಯಾದ ನಿರ್ಧಾರವು ಮಾತ್ರ ಸಿಗದು. ಈತನ 'ಪುಷ್ಪರಗಳೆ' 'ಪಿಂಡೋತ್ಪತ್ತಿ ರಗಳೆ' ಗಳನ್ನು ಓದಿದರೆ ಇವು ಈತನ ಆತ್ಮಕಥೆಯೆಂದು ಭಾವನೆಯಾಗದಿರದು. ಈತನ ಕಾವ್ಯಾವಲೋಕನದಿಂದ ಈತನು ಬ್ರಹ್ಮಚಾರಿಯು, ಜಿತೇಂದ್ರಿಯನೂ ಆಗಿದ್ದನೆಂಬುದು ತಿಳಿಯುಬರುವುದು. ನಿಷ್ಕಾಮ, ಜಂಗಮಪ್ರೇಮ, ಶಮೆ, ದಮೆ, ದಯೆ, ಶಾಂತಿ, ನಿಷ್ಠೆಯಾದಿ ಸದ್ಗುಣಗಳು ಈತನಲ್ಲಿ ಬೇರೂರಿರುವುದು ತಿಳಿಯಬರುವುದರಿಂದ ಈತನು ಯೋಗಿಯೇ ಎಂದು ನಿರ್ಧರಿಸುವುದು ಸೂಕ್ತವು. ಈತನು ಪುಷ್ಪದತ್ತನ ಅವತಾರವು ಹಾಗೂ ಮಹಾ ಪವಾಡ ಪುರುಷನು ಆಗಿರುವನು. ನೀತಿನಿಷ್ಠೆಯಲ್ಲಿ, ವಿವೇಕ ವೈರಾಗ್ಯದಲ್ಲಿ ಈತನು ಬಸವಣ್ಣ ಚೆನ್ನಬಸವೇಶ್ವರರಿಗಿಂತ ಯಾವ ಬಗೆಯಲ್ಲಿಯೂ ಕೂಡ ಕಡಿಮೆಯಾಗಿಲ್ಲವೆಂದರೆ ತಪ್ಪೇನಾಗಲಾರದು! ವೀರಶೈವ ಮತತತ್ವಗಳಲ್ಲಿ ಪರಿಣತನಾಗಿ, ಲಿಂಗಾಂಗಸಾಮರಸ್ಯದಲ್ಲಿ ಸಂಪನ್ನನಾಗಿ, ಶಿವಯೋಗದಲ್ಲಿ ಶಿಖಾಮಣಿಯಾಗಿ ಈತನು ಮೆರೆದಿರುವನು. ಗುರುಮುಖದಿಂದಲೇ ಧರ್ಮಾದಿ ತತ್ವವನ್ನು ತಿಳಿದುಕೊಳ್ಳಬೇಕೆಂಬುದು ಈತನ ಮನೀಷೆಯು. ಈತನು ವೀರಶೈವ ಮತದಲ್ಲಿ ಪ್ರಬಲವಾದ ಆಧಾರಸ್ತಂಭವಾಗಿದ್ದು. ಅನೇಕ ಶಿಷ್ಯರನ್ನು ವಿದ್ಯಾವಂತರನ್ನಾಗಿ ಮಾಡಿ, ಆ ಧರ್ಮವು ವ್ಯಾಪಿಸುವಂತೆ ಮಾಡಿದನು. ಈತನ ಯಶಸ್ಸು, ಪ್ರಾಬಲ್ಯವೂ ಮದ್ರಾಸಿಗೆ ಸಮೀಪದಲ್ಲಿನ ತಿರುವಳ್ಳೂರಿನ ವರೆಗೂ ಹಬ್ಬಿತ್ತೆಂಬುದು ಈತನ ಕಾವ್ಯಮುಖದಿಂದ ತಿಳಿಯಬರುವುದು. ಈತನು ಸಂಗೀತ ನೃತ್ಯಪ್ರಿಯನು; ಸಿವಾಲ್‌ಗೆ ಪ್ರತಿಸವಾಲ್ ಹಾಕುವ ಸ್ವಚ್ಛಂದ ಸ್ವಾತಂತ್ರ್ಯ ಪ್ರೇಮಿಯು. ಸಂಸ್ಕಾರವನ್ನು ಅರಳಿಸಿಕೊಂಡ ಅರವಿಂದನು ಹರಿಹರದೇವನು. ಮಹಾತ್ಮರ ಮತ್ತು ಶ್ರೇಷ್ಠ ಕವಿಗಳ ವಿಚಾರದಲ್ಲಿ ರಸ್ಕಿನ್ನನು ಹೇಳಿರುವಂತೆ ನಮ್ಮ ವಿಷಯಗಳನ್ನು ನೋಡಿಕೊಳ್ಳಲು ಯತ್ನಿಸದೆ ಅವರ ವಿಷಯಗಳನ್ನೇ ಅರಿತುಕೊಳ್ಳಲು ಯತ್ನಿಸಿದರೆ ಅವರ ಮನೋವ್ಯಾಪಾರಗಳು ತಮ್ಮಷ್ಟಕ್ಕೆತಾವೇ ತಿಳಿದುಬರುವುವು. ಅವರು ಇದ್ದ ಕಾಲ, ಸಮಾಜದ ಘಟನೆ, ಸಮಾಜದ

ಶಿವಭಕ್ತಿ ಶ್ರೇಷ್ಠರ ಪಾವನ ಚರಿತ್ರೆಗಳನ್ನು ಹೊಗಳಿ, ಹಾಡಿ, ನಲಿದು ಪುರುಷಾರ್ಥಿಯಾಗಲು ಪುರುಷೋತ್ತಮನೊಬ್ಬನು ರಗಳೆಯನ್ನು ಅನುಕೂಲಿಸಿ ಕೊಂಡನು. ಶ್ರೀಮಂತ ಚಂಪೂ ಗ್ರಂಥಗಳಲ್ಲಿ ಸ್ವೈರಂಧ್ರಿಯಾಗಿದ್ದ ರಗಳೆ ರಾಣಿಯು ಪುರುಷೋತ್ತಮನ ಕೃಪಾದೃಷ್ಟಿಬಿದ್ದು ಸ್ವತಂತ್ರಳಾಗಿ, ಸಹಜತೆ ಯಿಂದ ಸಿರಿವಂತಳಾಗಿ ಬಾಳುವಂತಾಯಿತು. ಈ ಶತಮಾನದಲ್ಲಿ ಸ್ವಾತಂತ್ರ್ಯ ಪ್ರಿಯತೆ, ನ್ಯಾಯಾನ್ವೇಷಣೆಯು ಸರ್ವ ಜನತೆಗೂ ಕಂಡುಬಂದಿತು. ಕರ್ಣಾಟಕ ಸಾಹಿತ್ಯ ಸೀಮೆಯಲ್ಲಿ ಅಪೂರ್ವ ವ್ಯಕ್ತಿಯಾದ ಹರಿಹರನೇ ರಗಳೆಗೆ ಕೃಪಾದೃಷ್ಟಿ ಬೀರಿದ ಪುರುಷೋತ್ತಮನು. ಈತನಲ್ಲಿ ಮಾರ್ಗವು ಈತನದೇ ಆದ ಒಂದು ಹೊಸಮಾರ್ಗ. ಜಾಡುತಪ್ಪಿ ಹೊರಣ ಜಾಣ್ಮೆ, ಹಾದಿತಪ್ಪಿ ಹೆಜ್ಜೆಯಿಟ್ಟ ಹಿರಿಮೆ ಈತನದು. ಈ ಉದ್ದಾಮ ಮಹಾ ಕವಿಯ ವಿಷಯವಾಗಿ "ಅವನ ಕೈಯ್ಯಲ್ಲಿ ಕನ್ನಡ ಗಂಗಾ ಸಲಿಲದಂತೆ ಹರಿಯುತ್ತದೆ. ಗದ್ಯವನ್ನೇ ಬರೆಯಲಿ, ಪದ್ಯವನ್ನೇ ಬರೆಯಲಿ, ಅದೇ ದೀಧಿತಿ, ಅದೇ ಸಿಂಹವಾಣಿ, ಅದೇ ಕುಸುಮಕೋಮಲತೆ" ಎಂದು ಶ್ರೀ ಅ. ನ. ಕೃಷ್ಣ ರಾಯರೂ, "ಈತನು ಗಿರಿಜಾಕಲ್ಯಾಣ, ಶಿವಗಣದ ರಗಳೆ, ಪಂಪಾಶತಕ ಎಂಬ ಗ್ರಂಥಗಳನ್ನು ಬರೆದಿದ್ದಾನೆ. ಅಲ್ಲದೆ ರಕ್ಷಾಶತಕ, ಶಿವಾಕ್ಷರಮಾಲೆ, ಮುಡಿಗೆಯ ಅಷ್ಟಕ ಎಂಬ ಗ್ರಂಥಗಳನ್ನೂ ರಚಿಸಿರುವಂತೆ ತಿಳಿಯಬರು ತ್ತದೆ. ಈತನಿಗೆ ಹರಿಹರದೇವ, ಹರಿಗ, ಹರಿ, ಹರಿಯಣ್ಣ ಪಂಡಿತ, ಹಂಪೆಯ ಹರೀಶ್ವರ ಎಂಬ ಹೆಸರುಗಳುಂಟು. 'ಪರಮಾನಂದಾಬ್ಧಿ ಪಂಪಾ ಪುರದರಸ ವಿರೂಪಾಕ್ಷ ಸಾಕ್ಷಾತ್ಪುತ್ರಂ' ಎಂದು ಹೇಳಿಕೊಂಡಿದ್ದಾನೆ. ಈತನ ಬಂಧವು ಜೈನ ಶೈಲಿಯನ್ನು ಅನುಸರಿಸಿ ಲಲಿತವಾಗಿಯೂ, ಮೃದು ಗಂಭೀರ ವಾಗಿಯೂ ಇದೆ." ಎಂದು ಕವಿಚರಿತಕಾರರೂ ಹೇಳಿರುವುದು ಈ ಮಹಾ ಕವಿಯ ಧೀಮಂತಿಕೆಯನ್ನು ತಿಳಿಸದೆ ಇರದು !

ಈತನ ಜನ್ಮಸ್ಥಳವು ಹಂಪೆಯು. ಈತನು ಮಹಾದೇವನೆಂಬ ಆರಾಧ್ಯ ಬ್ರಾಹ್ಮಣನ ಮಗನು. ಈತನ ಗುರುಪರಂಪರೆಯ ಹಂಪೆಯ ಶಂಕರದೇವ, ಮಾದಿರಾಜ, ಮಾಯಿದೇವ. ಈತನು ಮಾಯಿದೇವನ ಶಿಷ್ಯನು. ಈತನ ಗುರು ಪ್ರೇಮವು ವೀರಶೈವರ ಭಾವನೆಯನ್ನು ಧ್ವನಿತ ಮಾಡದಿರದು !

[illegible]ೀಗುರು ಪರಗುರು ಘನಮಹಿ ।
[illegible]ಗುರು ಮಾಧುರ್ಯ ಗುರು ಮಹಾಗುರುವರ ವಿ ।

ದ್ಯಾಗುರು ಸುಖೈಕ ಗುಣವಸು |
ಧಾಗುರು ಶೈವಗುರು ಶಾಂತಗುರು ಮಾಯ್ದೇವಂ ||

ಈತನು ಸಂಸಾರಿಯಾಗಿದ್ದನೆಂದು ಹೇಳಲು ಅವಕಾಶವಿರುವುದು; ಆದರೆ ಸರಿಯಾದ ನಿರ್ಧಾರವು ಮಾತ್ರ ಸಿಗದು. ಈತನ 'ಪುಷ್ಪರಗಳೆ' 'ಪಿಂಡೋತ್ಪತ್ತಿ ರಗಳೆ' ಗಳನ್ನು ಓದಿದರೆ ಇವು ಈತನ ಆತ್ಮಕಥೆಯೆಂದು ಭಾವನೆಯಾಗದಿರದು. ಈತನ ಕಾವ್ಯಾವಲೋಕನದಿಂದ ಈತನು ಬ್ರಹ್ಮಚಾರಿಯು, ಜಿತೇಂದ್ರಿಯನೂ ಆಗಿದ್ದನೆಂಬುದು ತಿಳಿಯುಬರುವುದು. ನಿಷ್ಕಾಮ, ಜಂಗಮಪ್ರೇಮ, ಶಮೆ, ದಮೆ, ದಯೆ, ಶಾಂತಿ, ನಿಷ್ಠೆಯಾದಿ ಸದ್ಗುಣಗಳು ಈತನಲ್ಲಿ ಬೇರೂರಿರುವುದು ತಿಳಿಯಬರುವುದರಿಂದ ಈತನು ಯೋಗಿಯೇ ಎಂದು ನಿರ್ಧರಿಸುವುದು ಸೂಕ್ತವು. ಈತನು ಪುಷ್ಪದತ್ತನ ಅವತಾರವು ಹಾಗೂ ಮಹಾ ಪವಾಡ ಪುರುಷನು ಆಗಿರುವನು. ನೀತಿನಿಷ್ಠೆಯಲ್ಲಿ, ವಿವೇಕ ವೈರಾಗ್ಯದಲ್ಲಿ ಈತನು ಬಸವಣ್ಣ ಚೆನ್ನಬಸವೇಶ್ವರರಿಗಿಂತ ಯಾವ ಬಗೆಯಲ್ಲಿಯೂ ಕೂಡ ಕಡಿಮೆಯಾಗಿಲ್ಲವೆಂದರೆ ತಪ್ಪೇನಾಗಲಾರದು! ವೀರಶೈವ ಮತತತ್ವಗಳಲ್ಲಿ ಪರಿಣತನಾಗಿ, ಲಿಂಗಾಂಗಸಾಮರಸ್ಯದಲ್ಲಿ ಸಂಪನ್ನನಾಗಿ, ಶಿವಯೋಗದಲ್ಲಿ ಶಿಖಾಮಣಿಯಾಗಿ ಈತನು ಮೆರೆದಿರುವನು. ಗುರುಮುಖದಿಂದಲೇ ಧರ್ಮಾದಿ ತತ್ವವನ್ನು ತಿಳಿದುಕೊಳ್ಳಬೇಕೆಂಬುದು ಈತನ ಮನೀಷೆಯು. ಈತನು ವೀರಶೈವ ಮತದಲ್ಲಿ ಪ್ರಬಲವಾದ ಆಧಾರಸ್ತಂಭವಾಗಿದ್ದು, ಅನೇಕ ಶಿಷ್ಯರನ್ನು ವಿದ್ಯಾವಂತರನ್ನಾಗಿ ಮಾಡಿ, ಆ ಧರ್ಮವು ವ್ಯಾಪಿಸುವಂತೆ ಮಾಡಿದನು. ಈತನ ಯಶಸ್ಸು, ಪ್ರಾಬಲ್ಯವೂ ಮದ್ರಾಸಿಗೆ ಸಮೀಪದಲ್ಲಿನ ತಿರುವಳ್ಳೂರಿನ ವರೆಗೂ ಹಬ್ಬಿತ್ತೆಂಬುದು ಈತನ ಕಾವ್ಯಮುಖದಿಂದ ತಿಳಿಯಬರುವುದು. ಈತನು ಸಂಗೀತ ನೃತ್ಯಪ್ರಿಯನು; ಸಿವಾಲ್‌ಗೆ ಪ್ರತಿಸವಾಲ್ ಹಾಕುವ ಸ್ವಚ್ಛಂದ ಸ್ವಾತಂತ್ರ್ಯ ಪ್ರೇಮಿಯು. ಸಂಸ್ಕಾರವನ್ನು ಅರಳಿಸಿಕೊಂಡ ಅರವಿಂದನು ಹರಿಹರದೇವನು. ಮಹಾತ್ಮರ ಮತ್ತು ಶ್ರೇಷ್ಠ ಕವಿಗಳ ವಿಚಾರದಲ್ಲಿ ರಸ್ಕಿನ್ನನು ಹೇಳುವಂತೆ ನಮ್ಮ ವಿಷಯಗಳನ್ನು ನೋಡಿಕೊಳ್ಳಲು ಯತ್ನಿಸದೆ ಅವರ ವಿಷಯಗಳನ್ನೇ ಅರಿತುಕೊಳ್ಳಲು ಯತ್ನಿಸಿದರೆ ಅವರ ಮನೋವ್ಯಾಪಾರಗಳು ತಮ್ಮಷ್ಟಕ್ಕೆ ತಾವೇ ತಿಳಿದುಬರುವುವು. ಅವರು ಇದ್ದ ಕಾಲ, ಸಮಾಜದ ಘಟನೆ, ಸಮಾಜದ

ಲ್ಲಿನ ಜನದ ಆಚಾರ ವಿಚಾರಗಳಾದಿ ವಿಷಯಗಳನ್ನು ಗಣನೆಗೆ ತಂದು ಕೊಂಡು ಆ ಬಗ್ಗೆ ಅವರು ವ್ಯಕ್ತಗೊಳಿಸಿದ ವಿಷಯಗಳನ್ನು ಅರಿತುಕೊಳ್ಳುವುದು ಅಗತ್ಯವು.

ಮಹಾ ವಿಭೂತಿಗಳನ್ನು ಜನರು ಹಿಂಬಾಲಿಸಲಿ ಇಲ್ಲವೇ ಹಿಂಬಾಲಿಸದಿರಲಿ, ಅವರನ್ನು ನೋಡಿ ಆನಂದಿಸುವ ಇಲ್ಲವೇ ವ್ಯಸನಪಡುವ ಅವಸ್ಥೆಯು ಅವರದಲ್ಲವು. ತಾವು ತಮ್ಮ ಮಾರ್ಗವನ್ನು ಆಕ್ರಮಿಸುತ್ತಿರುವಾಗ ಮನಸಾರೆ ಅನುಭವಿಸಿದ ಸುಖದುಃಖದ ಅನುಭವ, ಅನುಭವಿಸಿದ ಆನಂದವು ಅವರನ್ನು ಆದರಿಸಿ ಬುದ್ಧಿಯನ್ನು ಸುಟಗೊಳಿಸಿ, ಪರಿಪಕ್ವ ವಿಷಯಗಳನ್ನು ರೂಪುಗೊಳಿಸಿ, ನಾಲಿಗೆಯಿಂದ ಹೊರಹೊರಡಿಸಿದಾಗ ಅವರ ಆ ಮಾತುಗಳಲ್ಲಿ ಸತ್ಯವು ತುಂಬಿತುಳುಕುತ್ತಿರುವುದು. ಸೌಂದರ್ಯವು ಉಕ್ಕೇರುತ್ತಿರುವುದು; ಸೊಬಗು ತಾನೇತಾನಾಗಿ ಒಡಮೂಡುತ್ತಿರುವುದು; ರಸವು ಪ್ರವಹಿಸುತ್ತಿರುವುದು. ಇಂತಹುದರಲ್ಲಿಯೇ ಸಹಜತೆಯಿರುವುದು. ಇಲ್ಲಿ ಕಾವ್ಯದೇವಿಯು ಒನಪುಒಯ್ಯಾರದಿಂದ ನಲಿಯುವಳು. ಇದನ್ನೇ ಹಿರಿಯರು ಪ್ರಸಾದವಾಣಿಯೆನ್ನುವರು. ಪುರಾತನರಂತಹ ಶಿವಭಕ್ತಾಗ್ರೇಸರನೂ, ಪಂಪಾ ವಿರೂಪಾಕ್ಷನ ಭಕ್ತನೂ ಆದ ಹರಿಹರದೇವರು ಇದನ್ನು ವಶೀಕರಣ ಮಾಡಿಕೊಳ್ಳದೆ ಇರಲು. ಇದು ಈತನ ಜನ್ಮ ಹಕ್ಕೆಂದರೂ ತಪ್ಪೇನಾಗಲರದು. ಇದನ್ನು ರಗಳೆಯ ರೂಪದಲ್ಲಿ ಸ್ತ್ರೀಂಕರಿಸುವಂತೆ ಮಾಡಿದನು. ತೊಡಕಾದ ಚಂಪೂಮಾರ್ಗವು ಕಥೆಯನ್ನು ಹೇಳಲು ಸರಿಯಾದ ಸಾಧನವಲ್ಲವೆಂಬುದು ಈತನ ದೃಷ್ಟಿಯಲ್ಲಿ ಕಥೆಯು ಮೊದಲಿನಿಂದ ಕೊನೆಯ ವರೆಗೆ ತಾನೇತಾನಾಗಿ, ನಿರರ್ಗಳವಾಗಿ, ಲಲಿತವಾಗಿ, ತುಂಬ ಸಹಜವಾಗಿ ಸಾಗಬೇಕು. ಅದರಲ್ಲಿ ನಾಯಕನ ಪಾತ್ರವು ಎದ್ದುಕಾಣುವಂತೆ ನಿರ್ಮಿತವಾಗಬೇಕು. ಅನಾವಶ್ಯಕವಾದ ಯಾವ ವಿವರಣೆಯೂ ಇರಕೂಡದು. ವಾಚಕರ ಮನಸ್ಸಿನಲ್ಲಿ ಭಕ್ತನ ಪಾತ್ರವು ಒಡಮೂಡಿ ನಿಲ್ಲಬೇಕು. ಈ ಗುರಿಯನ್ನು ಮುಟ್ಟಲು, ಈ ಉದ್ದೇಶವನ್ನು ಕರಗತಮಾಡಿಕೊಳ್ಳಲು 'ರಗಳೆ'ಯ ಹಾದಿಯಲ್ಲದೆ ಬೇರೆ ಯಾವ ಹಾದಿಯೂ ಅಸಾಧ್ಯವೆಂಬುದನ್ನೂ, ಆ ಹಾದಿಯಲ್ಲಿನ ಇನ್ನೂ ಹಲವು ವೈಶಿಷ್ಟ್ಯಗಳನ್ನೂ, ಈತನು ಚೆನ್ನಾಗಿ ಮನಗಂಡಿದ್ದನು. ಈತನ ಪೂರ್ವ ಕವಿಗಳು 'ರಗಳೆ'ಯನ್ನು ಕಾವ್ಯದ ಮಧ್ಯಮಧ್ಯದಲ್ಲಿ ಕಂಡುಕಾಣದಂತೆ ಉಪಯೋಗಿಸಿಕೊಳ್ಳುತ್ತಿದ್ದರು. ಆದರೆ ಈತನಾ

ದರೂ ಸಂಪೂರ್ಣ ಕಥೆಯನ್ನೇ ಇದರ ಬಳಸುವಿಕೆಯಿಂದಲೇ ಮುಗಿಸುತ್ತಿದ್ದನು. 'ರಗಳೆಯ ಕವಿ" ಎಂಬ ಅಪಹಾಸ್ಯಕ್ಕೆ ಪಕ್ಕಾಗಿ ಮರುಗಿ ರೇಗಿ ತನ್ನ ಸಾಮರ್ಥ್ಯ ಪ್ರದರ್ಶನವನ್ನು ಚಂಪೂ ಶೈಲಿಯ 'ಗಿರಿಜಾ ಕಲ್ಯಾಣ'ದ ಮೂಲಕ ಹೊರಗೆಡಹಿದನು. ನೊಂದು ಬೆಂದ ಈತನ ಜೀವವು ವಿರೂಪಾಕ್ಷನ ಅಡಿಗಳಲ್ಲಿ ತಂಪಾಗಿ ಬದುಕಿದ್ದುದರ ಅನುಭವಿಕ ವಿಷಯವೇ "ಶತಕ" ಗಳಾಗಿ ಪರಿಣಮಿಸಿದವು.

ವೇದವೇದಾಂಗ, ನಾಟಕ, ಇತಿಹಾಸ, ಪುರಾಣಕಾವ್ಯ, ಅಲಂಕಾರ ವ್ಯಾಕರಣಾದಿಯಲ್ಲಿ ಈತನಿಗೆ ಅದ್ವಿತೀಯ ಪಾಂಡಿತ್ಯವಿದ್ದರೂ, ದುರಭಿಮಾನದ ಧೂಳೂ ಕೂಡ ಇರಲಿಲ್ಲ. ಸಂಗೀತಸಾಹಿತ್ಯದಲ್ಲಿ ಅಮೋಘ ಶಕ್ತಿಯುಳ್ಳ ಈತನು ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಕಾವ್ಯೋದ್ದೇಶ, ಸಾಹಿತ್ಯರೂಪ, ಭಾಷಾಸ್ವರೂಪ ಈ ಬಗೆಯ ಮೂದೆರನಾದ ಕ್ರಾಂತಿಗೆ ಕಾರಣನಾಗಿರುವನು.

ಮನಜರ ಮೇಲೆ ಸಾಮಂತರ ಮೇಲೆ ಕನಿಷ್ಠರಮೇಲೆ ಪದ್ಯಮಂ।
ತನತನಗಿಂದ್ರ ಚಂದ್ರ ರವಿಕರ್ಣ ದಧೀಚಿ ಬಲೇಂದ್ರನೆಂದು ತಾ।
ನನ ವರತಂ ಪೊಗಳ್ದು ಕೆಡಬೇಡೆಲೆ ಮಾನವ ನೀನೆ ಹರ್ನಿಶಿಂ।
ನೆನೆ ಪೊಗಳ್ ಸಮ್ಮ ಕಡು ಸೊಂಪಿನ ಪೆಂಪಿನ ಹಂಪೆಯಾಳ್ದಂ॥

ಈ ಪದ್ಯದಿಂದ ಈತನ ಕಾವ್ಯ ಗುರಿಯು ಗೊತ್ತಾಗದೆ ಇರದು। ಈತನ ಸಂಪ್ರದಾಯವನ್ನೇ ಮುಂದಿನ ಎಲ್ಲ ವೀರಶೈವ ಕವಿಗಳು ಅನುಸರಿಸಿರುವರು. ಈ ಕಾರಣದಿಂದಲೇ ಈತನು ಹೆಚ್ಚಿಗೆ ಶಿವಭಕ್ತಾಗ್ರಣಿಗಳ ಕತೆಯನ್ನೇ ಆರಿಸಿಕೊಂಡಿರುವನು. ತಾನು ವಿರೂಪಾಕ್ಷನ ಪಾದಸೇವಕ, ವಿರೂಪಾಕ್ಷ ಭಕ್ತನ ಸೇವಕನಾದಕಾರಣ ಅಂತಹ ಭಕ್ತರನ್ನಾದರೂ ಪಾಡಿ ಪೊಗಳಿ ತನ್ಮೂಲಕವಾಗಿಯಾದರೂ ಶಿವನ ಸಾನ್ನಿಧ್ಯವನ್ನು ಸೇರುವುದೇ ಹರಿಹರದೇವನ ಅಂತಿಮ ಗುರಿಯು.

ಸತ್ತವರ ಕತೆಯಲ್ಲ ಜನನದ
ಕುತ್ತದಲಿ ಕುದಿಕುದಿದು ಕರ್ಮದ।
ಕತ್ತಲೆಗೆ ಸಿಲುಕುವವರ ಸೀಮೆಯ ಹೊಲಬು ತಾನಲ್ಲ।

ಎಂದು ಚಾಮರಸನಂತೆ ಬಾಯಿಯಲ್ಲಿ ನುಡಿಯದಿದ್ದರೂ ಈತನು ಕೃತಿಯಲ್ಲಿ ತೋರಿಸಿರುವನು.

ಪ್ರಿಯ ವಚನದಂತೆ ಪುಣ್ಯ ಕಲೆಯಂತೆ ಸುಧಾಕರನಂತೆ ಕೂರ್ತವು।
ಗ್ದೆಯ ಕತುನೇಹದಂತಮೃತದಂತೆ ವಸಂತಕನಂತೆ ಪುಷ್ಪನಾ।
ಲೆಯ ಪೊಸಕಂಪಿನಂತೆ ಮಲಯಾ ನಿಲನಂತೆ ಮರಾಳನಂತೆ॥

ಎಂದು ಈತನು ಹೇಳಿಕೊಂಡಿರುವುದು ತನ್ನಕಾವ್ಯ ವಿಚಾರದಲ್ಲಿ ಸಹ ಜೋಪಮೆಯಲ್ಲದೆ ಅತಿಶಯವೇನೂ ಅಲ್ಲವು. ಈತನ ಹಾಗೆ ಹವಣಾಸಿ ಬೆಲೆಯನ್ನು ತಿಳಿದಿರುವ ಕವಿಗಳು ಇಡೀ ಕನ್ನಡ ನಾಡಿನಲ್ಲಿಯೇ ಒಂದು ಕೈಯ್ಬೆರಳುಗಳ ಸಂಖ್ಯೆ ಯಾಗಿರುವದು.

ನೋಡು ಪೊಡೊಂದಕ್ಕರ ಮದು।
ಮಾಡುವೊಡುಚ್ಚರಣೆಗರಿದು ಮೂರುಂ ತೆರನಂ
ಕೂಡೆ ಕವಿ ತತಿ ವಿಚಾರಿಸ
ಬೇಡದರಿಂ ರವಿಕುಳಕ್ಷಳಂಗಳನಿದ ರೊಳ॥

ಎಂದು ಲೋಕ ವಿರೋಧವಾಗಿದ್ದರೂ ಪಾಂಡಿತ್ಯಾಭಿ ಮಾನದಿಂದ ನಡೆಯಿಸುತ್ತಿದ್ದ ಈ ಆಚರಣೆಯನ್ನು ಕಂಠೋಕ್ತವಾಗಿ ಕ್ರಿ. ಶ. ೧೨೦೦ರಲ್ಲಿಯೇ ಹರಿಹರನು ಖಂಡಿಸಿದನು. ಧೈರ್ಯಶಾಲಿಯಾದ ಈತನು ಒಂದೇ ಸಮನಾಗಿ ಅಡ್ಡಗಟ್ಟನ್ನು ಕಿತ್ತೆಸೆದನು. ಕೇಶಿರಾಜನು ರಳಕುಳಗಳ ವಿಚಾರಮಾಡಿ ನಿಯಮಗಳನ್ನು ವಿಧಿಸಿ, ಪದಗಳ ಪಟ್ಟಿಗಳನ್ನು ಕೊಟ್ಟು ಪ್ರಯಾಸಪಟ್ಟರೂ ಈತನಿಂದಾದ ಬೀಜಾವಾಪವು ಫಲಿಸಿಯೇ ಫಲಿಸಿತು. ಕೃತ್ರಿಮೋಚ್ಚಾರಣೆಯ ಸಂಧಾನವನ್ನು ಬಯಲಿಗೆಳೆದು ಅದನ್ನು ನಿರ್ಮೂಲಮಾಡಿದ ಯಶಸ್ಸು ಈತನಿಗೆ ಸಲ್ಲುವಂತಾಯಿತು. ಇದರಿಂದ ವಾಚಕರಿಗೆ ಕಠಿಣ ಸಾಧ್ಯವಿಲ್ಲದೆ ಓದಲು ಕೃತಿಯು ಅನುಕೂಲಿಸಿತು. ಕನ್ನಡ ಸಾಹಿತ್ಯದಲ್ಲಿ ಮೊಟ್ಟಮೊದಲು ತಲೆದೋರಿದ ಶತಕಗಳೆಂದರೆ ಈತನವೇ. ಈತನಿಗಿಂತ ಹಿಂದೆ ಚಂದ್ರಚೂಡಾಮಣಿ ಶತಕವು ರಚಿತವಾಗಿದ್ದರೂ ಪುರಾತನ ಶತಕಗಳಲ್ಲಿ ಪ್ರಧಾನತೆಯು ಪಂಪಾಶತಕಕ್ಕೆ ಕನ್ನಡದ ನುಡಿವೆಣ್ಣಿಗೆ ಸಂಸ್ಕೃತದ ಒಡವೆಗಳನ್ನಿಟ್ಟು ಸಂಸ್ಕೃತ ಶಬ್ದಜಾಲದಿಂದ ಕನ್ನಡ ನುಡಿಗಳನ್ನು ಹೊರತಳ್ಳಿ, ಸೂತ್ರಕಟ್ಟುಗಳೆಂಬ ಗೌರವ ಶೃಂಖಲೆಗಳಿಂದ ಬಂಧಿಸಿ ಶ್ಲೇಷಯ ರಂಗು ರಂಗಿನ ಜಲ ಮಡಿಯನುಡಿಸಿ ಜನಸಾಮಾನ್ಯಕ್ಕೆ ಅರ್ಥವಾಗದ ಪ್ರೌಢಕಾವ್ಯಕ ಸೂತಿ ಎಣಿದು ಅದನ್ನು ರಾಜಾಸ್ಥಾನದಲ್ಲಿ ಪ್ರತಿಷ್ಠೆಮಾಡಿದ್ದರು. ಈ ಆಡಂಬರದಿಂದ ಕನ್ನಡ ಶಾರದೆಯನ್ನು ಬಿಡಿಸಿ ಕೃತ ಕೃತ್ಯರಾದವರಲ್ಲಿ ಹರಿಹರನು ಅಗ್ರಗಣ್ಯನು.

ಆತ್ಮದ ಅನುಭವವನ್ನು ನಿರ್ಭೀತಿಯಿಂದ ಸರಳ ಮತ್ತು ಸುಂದರ ಬಗೆಯಲ್ಲಿ ಜನ ಸಾಮಾನ್ಯಕ್ಕೆ ಅರ್ಥವಾಗುವಂತೆ ಬರೆದುದಲ್ಲದೆ ಇತರರೂ ಅಂತೆಯೇ ಆಚರಿಸುವಂತೆ ಮಾಡಿದನು. ಈ ಬಗೆಯಾಗಿ ಶ್ರೇಷ್ಠತೆಯನ್ನು ಪಡೆದ ಹರಿಹರನು ಸೃಜಿಸಿದ ಸಾಹಿತ್ಯವು ಯಾರಿಗೆತಾನೇ ಬೇಡ!

ಈತನ ರಗಳೆಗಳಲ್ಲಿ ಬಹಳ ಸುಂದರ ವಾದುದು ಕುಂಬಾರ ಗುಂಡಯ್ಯನ ರಗಳೆಯಾಗಿದೆ. ಹರಿಹರನು ತನ್ನ ಕಥಾನಾಯಕನಾದ ಗುಂಡಯ್ಯನ ಭಕ್ತಿ ಪರವಶತೆಯನ್ನೂ, ಕಿಂಕರತ್ವದಿಂದ ಆತನು ಪರಮೇಶ್ವರನನ್ನು ಒಲಿಸಿದ ರೀತಿಯನ್ನು ಆಧಾರವನ್ನಾಗಿಟ್ಟುಕೊಂಡು ತನ್ನದೇ ಆದ ಹಾದಿಯಲ್ಲಿ ಶಬ್ದಗಳ ಚಿತ್ರವನ್ನು ಕೊಟ್ಟಿದ್ದಾನೆ. ಪ್ರಾರಂಭದಲ್ಲಿ ಗುಂಡಯ್ಯನು ಸಾಮಾನ್ಯ ಕಾಯಕದಲ್ಲಿಯೂ ತನ್ನ ಭಕ್ತಿಯನ್ನು ಹೊರಸೂಸಿದ್ದಾನೆ. ಕಥೆಯು ಬೆಳೆದು ಹೋದಂತೆಲ್ಲ ಕುಂಬಾರನ ಭಕ್ತಿದೀಪವು ಪ್ರಜ್ವಲಿಸಿ ವಾಚಕರನ್ನು ಭಾವ ತಲ್ಲೀನರನ್ನಾಗಿ ಮಾಡುತ್ತದೆ. ಕುಂಬಾರನ ಸಕಲ ಸಲಕರಣೆಗಳೂ ಕೂಡ ಆಂತರಿಕ ಮತ್ತು ಬಾಹ್ಯ ಮಥನಕ್ಕೆ ಸಹಕಾರಿಗಳಾಗಿವೆ. "ಆಧಾರಮೆಯಾಧಾರ ಮದಾಗಿರೆ ಮೇಧೆಯು ಚಕ್ರದ ನೊಳೆತಾನಾಗಿರೆ ಕನಸಿನ ಕಾಯಂ ವೃತ್ತಿಗೆಯಾಗಿರೆ, ಎಂಬ ಬಣ್ಣನೆಯಲ್ಲಿ ಸಹಜತೆ ಕಾಣಬರುತ್ತದೆ. ಶ್ರಮಜೀವಿ ಕುಂಬಾರನು ಮಡಕೆಗಳನ್ನು ಹದ ಮಾಡುವದರ ಜೊತೆಗೆ ತನ್ನ ಹೃದಯವನ್ನೂ ಹದಮಾಡುತ್ತಾನೆ. ಲೋಗರಕಣ್ಣಿಗೆ ಸಾಮಾನ್ಯನಂತೆ ಕಂಡು ಬಂದರೂ ಕೂಡ ಪ್ರತಿಗಳಿಗೆಯಲ್ಲಿಯೂ ಹೋರಾಡುತ್ತಾನೆ. ಗುಂಡಯ್ಯನ ಭಕ್ತಿಯು ಗುಪ್ತರೀತಿಯಾಗಿರುವದು "ಶಿವಪೂಜೆಯ ಕರಡಿಗೆ ಯಂತಿರ್ದಂ, ಶಿವಪೂಜೆಯು ಗವಸಣಿಯೊಲಿರ್ದಂ" ಎಂಬ ಸದ್ಭಾವನಾ ನುಡಿಪುಂಜದಿಂದ ತಿಳಿದುಬರುತ್ತದೆ. ಈ ಪರಿಯಾಗಿ ಕುಂಬಾರನು ಭಕ್ತಿಯ ಹೋರಾಟದಲ್ಲಿ ನಿರಂತರ ಯತ್ನದಲ್ಲಿರುತ್ತಾನೆ. ಕುಂಬಾರ ಗುಂಡಯ್ಯನ ರಗಳೆಯಲ್ಲಿ ಅತ್ಯಂತ ಮನೋಹರ ಭಾಗವೆಂದರೆ ನೀಲಕಂಠನನೃತ್ಯದ ವರ್ಣನಾ ಭಾಗವು. ಭಕ್ತನ ಭಕ್ತಿಗೆ ಮಾರುಹೋದ ಪರಶಿವನು ತನ್ನ ನಿಲುವನ್ನು ತಿಳಿಯದೆ ಭಾವಪರವಶನಾಗಿ ನರ್ತಿಸುತ್ತಾ. ಈ ಭಾಗದಲ್ಲಿ ಕವಿಯು ತನ್ನ ಕಾವ್ಯವೀಣೆಯನ್ನು ಹಿತಮಿತ ಮಾಧುರ್ಯದಿಂದ ಮಿಡಿದಿದ್ದಾನೆ. ಅಗತ್ಯವಾದ ಎಡೆಗಳಲ್ಲಿ ಸೌಂದರ್ಯವನ್ನು ಬಣ್ಣಿಸುವಾಗ ಕವಿಯು ಉತ್ಪ್ರೇಕ್ಷೆಯನ್ನು ಧಾರಾಳವಾಗಿ ಉಪಯೋಗಿಸಿದ್ದಾನೆ.

ರಗಳೆಯ ಛಂದಸ್ಸಿನಲ್ಲಿಯೇ ಹರಿಹರ ದೇವ ಭಾವ ಭಾಷೆಗಳ ಸುಂದರ ಸಮ್ಮಿಳನವನ್ನು ಸೃಷ್ಟಿಸಿ, ಕಾವ್ಯದ ಪಡಿಯಚ್ಚಿನಲ್ಲಿ ಭಕ್ತಿರಸವನ್ನೇ ಎರಕ ಹೊಯ್ದಿದ್ದಾನೆ. ಭಕ್ತಿಯಿಂದ ಜೀವನವು ಅಜರಾಮರವಾಗುತ್ತದೆಯಂತೆ ! ಓಹಿಲಯ್ಯನ ಕಥೆಯ ಮೂಲಕ ಬಿಡಿಬಿಡಿಸಿ ಇದನ್ನು ಹರಿಹರದೇವನು ಹರಹಿದ್ದಾನೆ. ಸೋಮೇಶ್ವರನಲ್ಲಿಗೆ ಪಯಣ ಬೆಳಸಿದ ಓಹಿಲಯ್ಯನು ಭಗವಂತನನ್ನು ಬಗೆಬಗೆಯಾಗಿ ಭಜಿಸಿ, ಆತನನ್ನು ಒಲಿಸಿಕೊಂಡು ತನ್ನ ಕೋರಿಕೆಯನ್ನು ನಡೆಯಿಸಿ ಕೊಡಬೇಕೆಂದು ಕೇಳಿಕೊಳ್ಳುವಾಗ ಭಕ್ತಸ್ಥಲದಲ್ಲಿನ ಭಾವಾವೇಶವನ್ನು ಕವಿಯು ತಂದಿದ್ದಾನೆ. ಶಿವಜೀವಗಳ ಮಧ್ಯದ ಮುಸುಕು ಹರಿದು ಜೀವ ಶಿವನಲ್ಲಿ ಐಕ್ಯವಾಗಬೇಕಾದರೆ ಜೀವ ಷಟ್ಸ್ಥಲಗಳ ಕುಲಿಮೆಯೊಳಗಿಂದ ಹಾಯ್ದು ಪರಿಶುದ್ಧವಾಗಿ ಪವಿತ್ರನು ಎನಿಸಬೇಕಾಗುತ್ತದೆ. ಬೇಲೂರ ಸಾಹಿತ್ಯ ಸಮ್ಮೇಳನಾಧ್ಯಕ್ಷ ಶ್ರೀ ಶಿ. ಚ. ನಂದೀಮಠರವರು "*They are solely of sfritual signctiance for purifying the self ( Atma ) by removing the adjunets uhieh raise a big and impenetrable wall between giva and shiva*" ಎಂದು ಷಟ್ಸ್ಥಲಗಳನ್ನು ಕುರಿತು ಹೇಳಿರುವ ನುಡಿಗಳು ಇದನ್ನೇ ಸಾರುತ್ತಿವೆ. ಓಹಿಲಯ್ಯನ ರಗಳೆಯಲ್ಲಿ ಬರುವ ಕೆಲವು ನುಡಿಗಳು ಭಕ್ತ ಜೀವನದ ಭಾವ ನಿರ್ಭರತೆಯನ್ನು ವ್ಯಕ್ತಪಡಿಸುತ್ತವೆ.

ಬಿಗಿದಪ್ಪಿ ಬಿಡದಪ್ಪಿಕೊಂಡಪ್ಪಿ ಮತ್ತಪ್ಪಿ
ತೆಗೆದಪ್ಪಿಕೊಂಡಾಡಿ ಮುಂಡಾಡಿಸುತ್ತಪ್ಪಿ
ನೀನೊಡೆಯನೆನಗೆ ನಿನಗಾಳು ನಾಂ ಶಂಕರಾ.

ಓಹಿಲಯ್ಯನು ಸೋಮೇಶ್ವರನಲ್ಲಿಗೆ ಬಂದು ಕತ್ತಲಲ್ಲಿಯೂ ಕೂಡ ಕದಲದೆ ಮೂರ್ತಿಯ ಎದಿರು ಕುಳಿತು ಮಾಡುವ ಮೊರೆಯಿದು.

ಈತನ ಕಥಾಮಾರ್ಗಕ್ಕೆ ಗಡಿಯೊಂದುಂಟು. ಈತನ ರಗಳೆಗಳೆಲ್ಲವೂ ಈ ಚಕ್ಕಂದಿಯಲ್ಲಿಯೇ ಅಡಕವಾಗುತ್ತವೆ. ಆದಿಯಲ್ಲಿ ಒಂದು ಕಂದ ಪದ್ಯ, ಕೊನೆಯಲ್ಲೊಂದು. ಇವುಗಳಲ್ಲಿ ಕಥಾನಾಯಕನ ಹೆಸರು ಸಂದ ರೀತಿ ವಿರೂಪಾಕ್ಷ ಸ್ವಾಮಿಯ ಅಂಕಿತಕ್ಕೆ ಹೊಂದಿಕೊಂಡಂತೆ ಹಾಯ್ದಿರುತ್ತದೆ. ಈ ಎರಡು ಕಂದಗಳ ನಡುವೆ ಕಥೆಯು ಲಲಿತ, ಉತ್ಸಾಹ, ಮಂದಾನಿಲ

ರಗಳೆಯು ಈ ಮೂರು ಬೆರೆತೋ ಇಲ್ಲವೇ ಪ್ರತ್ಯೇಕವಾಗಿಯೋ ನದಿಯಂತೆ ನಿರರ್ಗಳವಾಗಿ ಪ್ರವಹಿಸಿ ತನ್ನ ಗುರಿಯನ್ನು ಕಾಣುತ್ತದೆ. ಕಥಾನಾಯಕ, ನಾಯಕನಿದ್ದ ಜಾಗ, ಆತನ ದಿನಚರಿ, ಆತನ ಶಿವಪೂಜೆಯ ಸೊಂಪು, ವೈಖರಿ, ನಾಯಕನ ಪರಿವಾರ, ನಾಯಕನ ನಿತ್ಯ ಸತ್ಯಭಕ್ತಿ, ಪ್ರತಿನಾಯಕನ ಸ್ಥಿರ ನಿರ್ಧರತೆ, ಭಕ್ತನ ಪರೀಕ್ಷೆ, ಕೊನೆಗೆ ಶಂಭುವು ಭಕ್ತನಿಗೆ ಪ್ರತ್ಯಕ್ಷವಾಗಿ ಕೃಪೆ ಮಾಡಿ ಹೊಗಳಿ ಅಪ್ಪಿ ಮುದ್ದಾಡಿ ಗಣಪದವಿಯನ್ನಿತ್ತು ಕೈಲಾಸಕ್ಕೆ ಕರೆದುಕೊಂಡು ಹೋಗುವುದು, ಕೊನೆಯಲ್ಲಿ ಎಂತಹ ನಾಸ್ತಿಕನಿಗಾದರೂ ಮನಕರಗುವಂತಹ ರಸಪರಿಪೂರ್ಣದ ಶಿವಭಕ್ತಿ ಸ್ತೋತ್ರ ಈ ಒಂದೊಂದು ಕಣ್ಣಿಗೆ ಕಟ್ಟುವಂತೆ, ನಮ್ಮೆದುರಿನಲ್ಲಿಯೇ ನಡೆಯುತ್ತಿರುವಂತೆ ಒಂದಾದನಂತರ ಒಂದು ಚಿತ್ರಿತವಾಗುತ್ತದೆ.

ಕಥೆಯು ಆರಂಭವಾಗಲು ಯೋಗ್ಯ ಹಿನ್ನೆಲೆಯಿರಬೇಕು. ಭಕ್ತನಿರುವ ಗ್ರಾಮವನ್ನು ಬಣ್ಣಿಸದೆ ಬಿಡದಿರುವುದು ಕಥೆಗೆ ಅಂಟಿಕೊಂಡಿರಬೇಕು. ಈ ಕವಿಯ ದೃಷ್ಟಿಯಲ್ಲಿ ಚಂಪೂ ಕಾವ್ಯಗಳಲ್ಲಿನ ರಗಳೆಯಲ್ಲಿ ಈ ಗುಣವನ್ನು ಕಾಣಲಾರೆವು. ಈ ಪ್ರಕೃತಿ ವರ್ಣನೆಯು ಪ್ರತೀಗಳೆಯಲ್ಲಿಯೂ ಕಾಣಬರುತ್ತದೆ. ಪ್ರಕೃತಿ ಜ್ಞಾನವೇ ಕವಿಯ ಅರ್ಧ ಕೆಲಸವು ಎಂಬ ಜಾನಸನ ಪಂಡಿತರ ಅಭಿಪ್ರಾಯವು ಇದನ್ನು ಪುಷ್ಟೀಕರಿಸದೆ ಇರದು! ಪರಮೇಶ್ವರನ ಸನ್ನಿಧಿಯಲ್ಲಿ ಪ್ರಕೃತಿ ಸೌಂದರ್ಯವನ್ನು ಪವಡಿಸಿ ಆ ಸೌಂದರ್ಯದಿಂದ ಶಿವಭಕ್ತಿಯು ಪುಟನೆದ್ದು ಶಿವನ ಪೂಜೆಯಲ್ಲಿಯೇ ಮನಸ್ಸು ಅಡಗಿ ತಲ್ಲೀನವಾದ ಭಕ್ತಿಮಯ ಸರಳ ಜೀವನವು ಪ್ರಕೃತಿ ವಾತಾವರಣದಲ್ಲಿ ಸಾಗುತ್ತಿರುವಂತೆ ಹರಿಹ ದೇವನು ವರ್ಣನೆಮಾಡಿರುವನು ಪೊನ್ನಾಂಬಲದ ವರ್ಣನೆಯಿಂದ ಕವಿಯ ಪ್ರಕೃತಿ ಪ್ರೇಮ ತಿಳಿಯದೆ ಇರದು.

ಎಳ ನೀರ್ಗಳಿಂ ಬೆಳೆವ ಕರ್ಬುದೋಂಟಗಳಿಂ
ಫಳಸದೆ ಬೆಳೆವ ನವಶಾಲಿಯ ವನಂಗಳಿಂ
ಕೆನೆವಾಲನುಂಡು ಬಿಳಿ ವರಗಿಳಿಗಳುರ್ಕಿನಿಂ
ಕೊನರಂ ಕರ್ದುಂಕಿ ಕೂಗುವ ಪಿಕದ ಸೊರ್ಕಿನಿಂ
ಕುಸುಮ ಕುಳವಂ ಮುತ್ತಿ ಝೇಂಕರಿಪ ತುಂಬಿಯಿಂ
ಪೊಸ ಕೊಳಂಗಳೊಲೊಲಿದು ನಲಿವಂಚೆ ಯಿಕ್ಕೆಯಿಂ
ಇಂತೊಪ್ಪುವಾದೇಶದೊಳಗೆ ಮೆರೆವುದು ಕರಂ
ಸಂತತಂ ಪೊನ್ನಾಂಬಲಂ ಧರೆಗೆ ಶಿವಪುರಂ

ಇಷ್ಟಕ್ಕೆ ತೃಪ್ತಿಪಡದೆ ಪೊನ್ನಾಂಬಲದಲ್ಲಿನ ಭಕ್ತ ತಿರು ನೀಲಕಂಠನ ವರ್ಣನೆಗೆ ಕೈಹಾಕಿರುವುದು ವಾಚಕರಿಗೆ ಗೋಚರವಾಗದೆ ಇರದು !

ಎಸೆವ ಪುರದೊಳಗೊರ್ವ ಭಕ್ತನಿಪ್ಪಂ ನೋಡೆ
ಪೆಸರೆಸೆವ ತಿರು ನೀಲಕಂಠ ಕುಶವನೋಡೆ
ಅವಕರಿಸಿ ಮುತ್ತೈದೆ ಎಂಬ ನಾಮದ ವನಿತೆ
ಅವರ್ಗಳಿರ್ಬರ್ಗ್ಗೆ ಹದಿನಾರರ ಹರೆಯ ವನಿತೆ

ಉಳಿದವರಂತೆ ಬಣ್ಣನೆಯನ್ನು ಬೆಳೆಸಿ, ವಾಚಕರನ್ನು ಅನಾವಶ್ಯಕ ವಾಗಿ ಬೇಸರಿಸಿ, ಶಬ್ದಗಳ ಸರ್ಕಸ ಮಾಡಿಸುವುದು ಹರಿಹರನಿಗೆ ಒಪ್ಪದು. ಪ್ರತಿ ನಾಯಕನೊಬ್ಬನನ್ನು ನಿರ್ಮಿಸಿ, ಆತನ ಭಕ್ತಿಯ ಬಗೆ, ಕ್ರಮಗಳನ್ನು ಬಣ್ಣಿಸಿ ವಿಮರ್ಶೆಯನ್ನು ವಾಚಕರಿಗೆ ಬಿಟ್ಟು ತನ್ಮೂಲಕ ನಾಯಕನೇ ಸತ್ಯವಾದ ಭಕ್ತನೆಂಬುದನ್ನು ನಮಗೆ ನಂಬಿಸಿ ಕೊಡುವನು. 'ಕಣ್ಣಪ್ಪನ ಮಹಾತ್ಮೆ'ಯ ನಾಯಕನಾದ 'ಕಣ್ಣಂದ' ನೂ, ಶಿವಬ್ರಾಹ್ಮಣನೂ ಈ ಗುಂಪಿಗೆ ಸೇರಿದವರು. ಕಣ್ಣಪ್ಪನು ನಿಗರ್ವಿ, ನಿರಾಡಂಬರಿ, ಮೂಢ ಭಕ್ತನು- ಆದರೂ ಆತನ ಭಕ್ತಿಯು ಹೃದಯದಿಂಡ ತಾನೇ ತಾನಾಗಿ ಹೊರಹೊಮ್ಮಿದುದು. ಆತನ ಭಕ್ತಿಯ ಬಗೆ, ಅರ್ಚನೆಯ ಕ್ರಮವು ಅಸಹ್ಯವಾದುದಾದರೂ, ಕಪಟವನ್ನರಿಯದುದು. ಇದಕ್ಕೆ ವಿರೋಧವಾಗಿ ಶಿವಬ್ರಾಹ್ಮಣನು ಕರ್ತವ್ಯ ಪೂರಣೆಗಾಗಿ ಅರ್ಚಕನಾಗಿರುವನು. ಬರಿಯ ಬಾಹ್ಯಾಡಂಬರದ ಗಮನವೇ ಹೊರತು ಹೃದಯ ಸ್ಪರ್ಶಿಯಾದ ಮನಸೋಂಕಿದ ಭಕ್ತಿಯಲ್ಲ ಆತನದು. ಶಿವಬ್ರಾಹ್ಮಣನು ಭವಿ ಸಹವಾಸಿಯಾದಕಾರಣ ಆತನೂ ಒಬ್ಬ ಭವಿಯೇ ಎಂಬುದನ್ನು ತೋರಿಸಿಕೊಡುವುದೇ ಈ ಪ್ರತಿ ನಾಯಕನ ಪಾತ್ರ ನಿರ್ಮಾಣದ ಹಿರಿಯ ಗುರಿಯು.

ಕಾವ್ಯದಲ್ಲಿ ಕವಿಯ ಕಣ್ಣೆಲ್ಲವೂ ತನ್ನ ಪ್ರಧಾನ ಪದಾರ್ಥದ ಕಡೆಗೆ ಇರುತ್ತದೆ. ಕಾಮಲತೆಯ ವರ್ಣನೆಯು ಕಣ್ಣಿಗೆ ಕಟ್ಟಿದಂತಿದೆ. ರೂಪಿನೋಳ್ ರತಿಗೆ ಸರಸತಿಗುತ್ಸವಂಗಟ್ಟಿ ಪೆಸರೆಸೆವ ಪೊಸ ಕಾಮಲತೆಯೆಂಬ ನಾಮದಿಂ ಒಸೆದು ಸೌಭಾಗ್ಯಲತೆ ಕುಡಿಯಿಡಲ್ ಪ್ರೇಮದಿಂ ಶಶಿಕಿರಣದಂತೆ ಬಳೆದಳ್ ಬೆಳೆದಳಮ್ಮಮ್ಮ ಕುಸುಮ ಶರದಂತೆ ನೆರೆದಳ್ ನೆರೆದಳಮ್ಮಮ್ಮ ರತಿಗಿತಿಯ ರಂಬೆಗಿಂಬೆಯ ಮಾತು ಬೇಡಿಲ್ಲಿ ಮತಿಗಿತಿಗೆ ಪೊಗಳ್ವಗಿಗಳ್ವಾಸೆಗಳು ಪುಗವಿಲ್ಲ. ಗಾಢವಾದ ತತ್ವಗಳನ್ನು ಸರಸ ಸುಸ ಶೈಲಿಯಲ್ಲಿ

ಅಲ್ಲಲ್ಲಿ ಸೇರಿಸಿ ಕಾವ್ಯವನ್ನು ಬರೆಯುತ್ತಾ ಹೋಗುತ್ತಾನೆ. ವರ್ಣನೆಯೇ ಆಗಲಿ, ಚಿತ್ರ ನಿರೂಪಣೆಯೇ ಆಗಲಿ ಹರಿಹರನು ಕಾವ್ಯದಲ್ಲಿ ಅವುಗಳ ಯಥೋಚಿತ ಸ್ಥಾನವನ್ನು ನಿಷ್ಕರ್ಷಿಸಿ, ಸೃಷ್ಟಿ ಕ್ರಿಯೆಗೆ ಕೈಹಾಕುತ್ತಾನೆ. ಪ್ರತಿಭೆಯ ಬೆನ್ನೇರಿದ ಭಾವಗಳು ಪ್ರತಿಭೆಯು ಉನ್ನತವಾದಂತೆಲ್ಲ ಉತ್ತಮವಾಗುತ್ತವೆ. ಕಾಯಿಸಿದ ಲೋಹವು ಉರಿಯಿಂದ ಕೂಡಿ ಕೆಂಡವಾಗಿ ಕೋರೈಸಿ ವಿದ್ಯುತ್ಪ್ರಭೆಯು ನೀಲಿಮೆಯಿಂದ ಮಿಂಚಿ ಕರಗಿ ಎರಕದಲ್ಲಿ ಪ್ರವಹಿಸಿ ಘನೀಭೂತವಾಗಿ ಪ್ರತಿಮೆಯಾಗುವಂತೆ ಹರಿಹರನ ಪ್ರತಿಭೆಯಿಂದ ಕಾವ್ಯವು ಪ್ರವಹಿಸಿ ಬಂದಿದೆ. ಶಿವಭಕ್ತರ ವೀರ ವೃತ್ತಿಯನ್ನೂ, ಆತ್ಮಾರ್ಪಣವನ್ನೂ, ಜಗತ್ಕಲ್ಯಾಣದ ಉದ್ದೇಶವನ್ನೂ ರಗಳೆಗಳಲ್ಲಿ ಕಾಣುತ್ತೇವೆ. ಈ ರಗಳೆಯಲ್ಲಿ ಶಿವಪೂಜೆಗೂ, ಉತ್ಸವಗಳಿಗೂ ಸಂಬಂಧಪಟ್ಟ ವಾದ್ಯಗಳ ವಿಚಾರವು ಒಂದೇಸವನೆ ಬರುವುದು. ಅಲ್ಲಲ್ಲಿ ಗೋಚರವಾಗುವುದರ ಜೊತೆಗೆ ಸಾಮಾಜಿಕ ಸಂಗತಿಗಳೂ ಅಡಕವಾಗಿವೆ. ಓಕುಳಿಯ ವಿಚಾರವೂ, ಕುದುರೆ ಹೋರಾಟದ ವಿಷಯವೂ ಕೂಡ ಬರುತ್ತದೆ. ಸ್ತ್ರೀಯರ ಹಾಗೂ ಪುರುಷರ ಶೃಂಗಾರದ ಸಂಗತಿಯೂ ಕೂಡ ಕವಿಯ ಕೈಗೆ ಸಿಕ್ಕಿದೆ. ಹರಿಹರನ ಕಾವ್ಯದ ಮೇಲೆ ಸಂಗೀತ ಜ್ಞಾನವು ಸುಗತಿಯ ತಂಬೆಲರನ್ನು ಬೀಸಿದೆ. ಭಾವ ರಸಗಳಿಗೆ ತಕ್ಕ ಶೈಲಿಯನ್ನು ಜೋಡಿಸಿ ಪ್ರತಿಯೊಂದು ಸನ್ನಿವೇಶವೂ ಹೃದಯಂಗಮವಾಗುವಂತೆ ಮಾಡುವ ಈ ಕವಿಯ ಜಾಣ್ಮೆಯು ಗುಟ್ಟು ಇದಾಗಿದೆ. 'ಅಘಟ ಘಟನಾ ನೂತನ ಬ್ರಹ್ಮ"ರಲ್ಲಿ ಈತನೂ ಒಬ್ಬನಾಗಿದ್ದಾನೆ. ಈತನಲ್ಲಿ ಪದ ಪ್ರಯೋಗಗಳ ವೈವಿಧ್ಯವೂ ಬಹಳ ಸೊಗಸಾಗಿದೆ. ನವರಸಗಳನ್ನು ಪರಿಪಕ್ವಗೊಳಿಸಿ ಕಾವ್ಯ ಸೌಂದರ್ಯದ ಸೌರಭವನ್ನು ಸೂಸುವುದರಲ್ಲಿ ಈತನದು ಎತ್ತಿದ ಕೈ. ರಗಳೆಯಲ್ಲಿ ಶಾಂತ, ಭಕ್ತಿ, ಪ್ರೇಮ ರಸವೇ ಜೀವಾಳವಾಗಿದೆ.

ಪರಮಾತ್ಮನ ವಿಚಾರದಲ್ಲಿ ನಮ್ಮ ಭಾವವನ್ನು ಅರಿಯುಬಿಡುವುದು, ತನ್ನ ವ್ಯಕ್ತಿತ್ವವನ್ನು ಆತನ ವ್ಯಕ್ತಿತ್ವ ಸಾಗರದಲ್ಲಿ ತೇಲಿಬಿಡುವುದು ಭಕ್ತಿ. ಭಕ್ತಿಯ ಪ್ರಧಾನ ಗುಣ ಆವೇಶ. ಅಲ್ಲಿ ತರ್ಕ ವಿತರ್ಕಕ್ಕೆ ಜಾಗವೇ ಇಲ್ಲ. ಭಕ್ತನ ಪ್ರಧಾನ ಗುರಿ ಪರಮಾತ್ಮನ ಸಂಗಡ ನೇರವಾದ ಸಂಬಂಧವನ್ನು ಬಳೆಯಿಸುವುದು ಅದೊಂದು ಹೃದಯ ವೀಣೆಯನ್ನು ವಿಶ್ವ ವೀಣೆಯ ಸಂಗಡ ಶೃತಿಗೊಳಿಸುವ ಕಾರ್ಯಕ್ಕೆ. ಹರಿಹರನಲ್ಲಿರುವಷ್ಟು ಆವೇಶವು ಬೇರೆ ಯಾರಲ್ಲಿಯೂ ಕಂಡುಬರದು. ಆ ಹಂಪೆಯಾಳ್ದನ, ಲಲಾಟೇಕ್ಷಣನ,

ವಿರೂಪಾಕ್ಷನ, ದಶಭುಜನ, ಶಾಂತಾರ್ಕ ಕೋಟಿ ಪ್ರಭಾಪುಂಜನ, ನಿತ್ಯನ, ಸತ್ಯನ, ಶಾಂತನ, ಭರ್ಗನ, ಭೀಮನ, ಭಕ್ತರೇನಂದುದಂ ಮಾಡುವ ದಯಾ ಬಂಧುವಿನ ಪ್ರಾರ್ಥನೆಯು ಆವೇಶ ಪರಿಪೂರ್ಣವಾಗಿ ಹರಿಯುತ್ತದೆ. ರಗಳೆ ಗಳಲ್ಲಿಯಂತೂ ಅದೇನು ಭಕ್ತಿಯೋ ಅದೇನು ಪೂಜೆಯ ವೈಭವವೋ ಓದುವಾಗ ಗಂಟಲು ಬಿಗಿಯುತ್ತದೆ. ಆ ಶಕ್ತಿ ನಿಮ್ಮನ್ನು ಮುಳುಗಿಸುತ್ತದೆ. ನಾರದ ಭಕ್ತಿಸೂತ್ರದಲ್ಲಿ ಹೇಳಿರುವಂತೆ ಭಕ್ತಿಯೆಂಬುದು 'ಮೂಗನು ಬೆಲ್ಲ ತಿಂದಂತೆ' ಅಕ್ಕಮಹಾದೇವಿ, ಬಸವಂಣ ಮತ್ತು ನಂಬಿಯಣ್ಣರ ಶಿವ ಪೂಜೆಯನ್ನು ವೈಭವಯುಕ್ತವಾಗಿ ಬಣ್ಣಿಸಲು ಒಂದೊಂದು ಸ್ಥಲವನ್ನೇ ತೆಗೆದುಕೊಳ್ಳುತ್ತಾನೆ. ಬಸವಂಣನವರ ಪೂಜಾ ವೈಭವವು ಹರಿಹರನ ಪೂಜೆಗೆ ಕನ್ನಡಿ ಹಿಡಿದಂತಿದೆ. ಹರಿಹರನ ರಗಳೆಗಳಲ್ಲಿ ಶಿವನ ಪಾತ್ರ ಕಲ್ಪನೆಯು ಅತ್ಯಂತ ಚೆಲುವಾಗಿ ಬಂದಿದೆ. ಇದು ಆತನ ಶಿವಭಕ್ತಿಯ ಉತ್ಕಟಾಭಿಲಾಷೆಯನ್ನು ತೋರಿಸುತ್ತದೆ. ಭಕ್ತನು ಶಿವನಿಗೆ ಅಂಜಬೇಕಾ ಗಿರುವುದು ಆತನ ಭಕ್ತಿಯು ಅಚಲನಾಗುವ ವರೆಗೆ, ಅನಂತರ ಶಿವನೇ ಭಕ್ತರಿಗೆ ಪರಿಪೂರ್ಣವಾಗಿ ಅಧೀನವಾಗುತ್ತಾನೆ. ಅವರ ಯೋಗ ಕ್ಷೇಮ ವೆಲ್ಲವೂ ಆತನ ಚಿಂತನೆಯು. ಪ್ರತಿ ರಗಳೆಯಲ್ಲಿಯೂ ಶಿವನು ಭಕ್ತರನ್ನು ಬಗೆಬಗೆಯಾಗಿ ಪರೀಕ್ಷೆಗಳಿಗೆ ಗುರಿಮಾಡುವನು. ಬಗೆಬಗೆಯಾಗಿ ಕಷ್ಟಗಳಿಗೆ ಸಿಕ್ಕಿಸುವನು. ಅವುಗಳಿಗೆ ಬೆದರದೆ ಬೆಚ್ಚದೆ ಇದ್ದರೆ ಕೈಹಿಡಿದೆತ್ತಿಕೊಳ್ಳು ವನು. ಶಿವನು ಹೊಂಟನೆಂದರೆ ಸಾಕು. ಕವಿಯು ತನ್ನನ್ನು ತಾನೇ ಮರೆತುಬಿಡುವನು. 'ಶಿವ ಶಿವ ಶಿವ ಶಿವ ಹರ ಹರ ಹರ ಹರ ಅಹಾ ಅಹಾ ಶಿವಧೋ ಶಿವಧೋ' ಎಂಬ ಮಾತು ಅಪ್ರಯತ್ನವಾಗಿ ಹೊರಡುವುದೇ ಆತನ ಶಿವಭಕ್ತಿಯ ಆವೇಶವೆನ್ನಬಹುದು. ಹರಿಹರನನ್ನು ಕೇವಲ ಒಬ್ಬ ವ್ಯಕ್ತಿ, ಕವಿ ಎಂದು ತಿಳಿದರೆ ತಪ್ಪಾಗುವುದು. ಆತನೊಂದು ಅದ್ಭುತ ಆತ್ಮ. ತನ್ನ ಸುತ್ತ ಮುತ್ತಣ ಜನರ ಭಕ್ತಿವಾಹಿನಿಯು ಶುಷ್ಕ ಕಟ್ಟು ನಿಟ್ಟುಗಳ ಮರಳು ಕಾಡಿನಲ್ಲಿ ಪರ್ಯವಸಾನವಾಗಲು, ಅವರ ಆತ್ಮವನ್ನು ಅನಂತವೆಡೆಗೆ ಹರಿಸಲು ಪಣತೊಟ್ಟ ಸಾಧಕನು ಹರಿಹರನು. ಕಾವ್ಯದ ನೂತನ ದೃಷ್ಟಿಗೆ ನಾಂದಿ ಹಾಡಿದ ಮಹಾತ್ಮನು ಹರಿಹರನು. ಅಂದು ಹಂಪೆಯಾಳ್ದನ ಅಡಿ ಯಲ್ಲಿ ಹಾಡಿದ ಗಾನ ಇಂದಿಗೂ ಕನ್ನಡಿಗರ ಕಿವಿಯಲ್ಲಿ ಮೊರೆಯುತ್ತಿದೆ. ಬಾಲ್ಯದಿಂದ ಭುವಿಯ ವರೆಗೆ ಬಗೆಬಗೆಯ ಬಲಗಳು ಇವೆಯಂತೆ. ಅವುಗಳ ನಡುವೆ ಇರುವ ಮನುಜ ಕೋಲಿನಂತಾಗಿಬಿಡುತ್ತಾನೆ. ಅವುಗಳು ಈತ

ನನ್ನು ಬಾಜಿಸಿದಾಗ ಹೊರಹೊರಡುವ ಗಾಯನವೇ ಕಾವ್ಯ ಕಲೆಯು. ಈ ಕೊಳಲಿನಲ್ಲಿ ಹೊರಟ ದಿವ್ಯ ಭವ್ಯವಾದ ರಾಗಗಳೇ ಈ ರಗಳೆಗಳು. ಆತನ ಭಕ್ತಿ ಭಾವ ಎಷ್ಟೆಷ್ಟು ಮಟ್ಟಿಗೆ ಅನುಭವಕ್ಕೆ ಬರುತ್ತದೆಯೋ ಅಷ್ಟಷ್ಟು ಹತ್ತಿರವಾಗುತ್ತದೆ. ಆತನ ಕಾವ್ಯಗಳು ನಮಗೆ ಪಂಡಿತರಿಂದ 'ರಗಳೆಯ ಕವಿ' ಎಂಬ ಹೀಯಾಳಿಕೆಯನ್ನು ಕಳೆದು ತನ್ನ ಸಾಮರ್ಥ್ಯ ಪ್ರಕಟಣೆಗಾಗಿ ಚಂಪೂ ಶೈಲಿಯಲ್ಲಿ 'ಗಿರಿಜಾ ಕಲ್ಯಾಣ"ವನ್ನು ಈ ಕವಿಯು ಬರೆದನು. ಹಿಂದಿನ ಹಲವಾರು ಕಥೆಗಳಿಂದ ಈ ಕಾವ್ಯದ ಕಥೆ ಬರೆಯಲ್ಪಟ್ಟಿತ್ತು. ಈತನ ಪ್ರಾಚೀನತೆಯ ಚಿಂತನೆ, ಅರ್ವಾಚೀನದ ತಪೋನಿಷ್ಠೆ, ರಾಗ ಸಂಸ್ಕಾರದ ಫಲವು "ಗಿರಿಜಾ ಕಲ್ಯಾಣ" ನಿಸ್ತ್ರೀಗುಣ ಲೀಲಾಭಾವದಿಂದ ಒಡಗೂಡಿದ ಅನುಭಾವ ರಸಭಕ್ತಿಯುತದ ಕಾವ್ಯವು "ಗಿರಿಜಾ ಕಲ್ಯಾಣ" ತಪೋನಿಷ್ಠನಾದ ಶಿವನನ್ನು ಪಾರ್ವತಿಯು ಮದುವೆಯಾಗುವ ವಿಷಯುವೇ ಈ ಕಾವ್ಯದ ಕಥಾವಸ್ತುವು. ಕವಿಯ ಕಥಾ ನಾಯಕಿಯು ಗಿರಿಜೆಯು. ಹರಿಹರನ ಗಿರಿಜೆಯ ಶೈಶವದ ಚಿತ್ರವು ಸಹಜತೆಯನ್ನು ಸೂಸದೆ ಇರದು.

> ನಲಿವಳ್ ನಗುವಳ್ ರಾಗಿಪ।
> ಉಲಿವಳ್ ಮುದ್ದಿಸುವಳಮರ್ವಳಪ್ಪುವಳಂತಿಂ।
> ತೊಲೆವಳ್ ನಿಲ್ಪಳ್ ಮೇನೆಯ।
> ಮೊಲೆಯುಂ ಮರೆದ ಭವನಾಟದೊಳ್ ಸಂದಿರ್ಪಳ್॥

ರುಚಿ ವೈಚಿತ್ರ್ಯದ ರಹಸ್ಯವನ್ನು ಹಿಡಿದು ಅದಕ್ಕೆ ರಸಿಕ ಚಿತ್ರವನ್ನು ಉಚಿತ ಪದಗಳಲ್ಲಿಯೇ ಹೆಣೆದುಕೊಂಡು ಹೋಗುವ ಜಾಣ್ಮೆಯು ಹರಿಹರನದು. ಇದು ಮಹಾ ಕಾವ್ಯದ ಹೆಬ್ಬಾಗಿಲನ್ನು ಪ್ರವೇಶ ಮಾಡುವುದರೊಳಗಾಗಿಯೇ ವಾಚಕರನ್ನು ಸ್ವಾಗತಿಸಿ, ಕಂಚುಕಿಯಂತೆ ಪ್ರತಿಯೊಂದು ಕಡೆಗೂ ಕರೆದುಕೊಂಡು ಹೋಗಿ 'ರಸಮಿದು ಭಾವಮಿದು ಅರ್ಥಮಿದು" ಎಂದು ತೋರಿಸಹತ್ತುವುದು. ಪ್ರೇಮ ಪೂಜೆಯ ಕಾಲದಲ್ಲಿ ಗಿರಿಜೆಯ ಮನೋಭಾವಗಳ ತಾಕಲಾಟ, ಕಾದಾಟದ ಮನೋಹರ ಚಿತ್ರ

> ಬೆಮರ್ವಳ್ ಬೆಚ್ಚುವಳುರ್ಬುವ।
> ಳ ಮರ್ವಳು ಪೆರೆಸಾರ್ವಳಂಜಿ ನಿಲ್ವಳ್ ಸೋಂಕಲ್।
> ನಿಮಿರ್ವಳ್ ನೆನೆವಳ್ ಮುನಿವಳ್।
> ಸಮಸಲ್ವ ಗಿರಿಜೆ ಸಿಡೆದು ಸುಯ್ವಳ್ಳಾಯ್ವಳ್॥

ಇದನ್ನೇ ಹೋಲುವ ಜೈಮಿನಿ ಭಾರತದ ಪದ್ಯವು ಈಗ ಸೂಕ್ತವಾಗಲಿ ಇರದು.

ಸುತ್ತ ನೋಡುವಳೊಮ್ಮೆ ನೂಪುರವಲುಗದಂತೆ ।
ಪತ್ತೆ ಸಾರುವಳೊಮ್ಮೆ ಸೋಂಕಲೆಂತಹುದೆಂದು ।
ಮತ್ತೆ ಮುರಿದಪಳೊಮ್ಮೆ ಹೆಜ್ಜೆ ಹೆಜ್ಜೆಯಮೇಲೆ ಸಲ್ವಳಮ್ಮದೆನಿಲ್ವಳು ।
ಚಿತ್ತದೊಳ್ನಯಿಸಿ ನೆರೆಯಲೆಳಸುವಳೊಮ್ಮೆ ।
ಹೊತ್ತದಲ್ಲನುಚಿತಕ್ಕೆ ಬೆದರಿ ಹಿಂಗುವಳೊಮ್ಮೆ ।
ತತ್ತಳದ ಬೇಟದೊಳ್ಬೆಂಡಾಗಿ ವಿಷಯೆ ನಿಂದಿರ್ದಳಾತನ ಪೊರೆಯೊಳ್ ।

ಈ ಎರಡು ಪದ್ಯಗಳನ್ನು ಹೋಲಿಸಿದರೆ ಹರಿಹರನ ರಚನೆಯಲ್ಲಿ ಮರ್ಯಾದೆಯಿರುವುದು ಗೊತ್ತಾಗುವುದ . ಹೆಂಗಸರ ಸಹಜಶಾಲೀನತೆಯು ಎಲ್ಲೆಯನ್ನು ಮಿಕ್ಕಿಲ್ಲದೆ ಪ್ರೇಮಾತಿರೇಕವನ್ನು ಈತನು ತೋರಿಸಿಕೊಟ್ಟಿದ್ದರೆ, ಕಾಮ ಪೀಡಿತೆಯಾದ ವಿಷಯೆಯು ಮುಂದುಗಾಣದವಳೂ, ಶಾಲೀನತೆ ಇಲ್ಲದವಳಸೂ ಎಂಬುದು ಲಕ್ಷ್ಮೀಶನಿಂದ ಪರಿಸ್ಫುಟವಾಗಿರುವುದು. ಅತ ಏವ ಹರಿಹರನು ತಾನು 'ಜಾಣಂ ರಸಿಕಂ ಸುಜನ ಪ್ರಾಣಂ ಕವಿತಾಸಿಧ ನಂ' ಎಂದು ಹೇಳಿಕೊಂಡಿದ್ದು ಯೋಗ್ಯವೇ ಸರಿಯು.

ಪ್ರಚುರವಾದ ಕವಿ ಸಮಯಗಳನ್ನು ಕವಿಯು ಉಪಯೋಗಿಸಿಕೊಂಡುದಲ್ಲದೆ ಹೊಸ ಹಾಗೂ ವ್ಯವಹಾರಿಕ ಉಪಮೆಗಳನ್ನೂ, ಕಲ್ಪನೆಗಳನ್ನೂ ಇಟ್ಟುಕೊಂಡಿದ್ದಾನೆ.

ವನಲಕ್ಷ್ಮಿಗೆ ಸಕಳಾ ವಿಳಾ ।
ಸಿನಿಯ ಬಳಿದೋಳ್ಗಳಿಂದೆ ಚಾಮರವಿಕ್ಕಲ್ ।
ತನತನಗೆ ಬಂದರೆನೆತ ।
ವ್ವನದೊಳ್ಪೊಂಬಾಳೆಯಿಂದೆ ಪೂಗಮುದೆಸೆಗುಂ ॥

ಅಲಂಕಾರಗಳಲ್ಲಿ ಸುಲಭವಾದ ಮತ್ತು ರೂಢಿಯಲ್ಲಿರುವ ಉಪಮೆ, ರೂಪಕ, ಉತ್ಪ್ರೇಕ್ಷೆ, ಮಾಲಾದೀಪಕಾದಿಗಳನ್ನು ಕವಿಯು ಉಪಯೋಗಿಸಿಕೊಂಡಿದ್ದಾನೆ. ಗಿರಿಜಾಕಲ್ಯಾಣವು ಚಂಪೂಕಾವ್ಯವಾದರೂ ಗದಾಯುದ್ಧದಲ್ಲಿನಂತೆ ಅಪರೂಪವಾಗಿ ಜನಸಾಮಾನ್ಯಕ್ಕೂ ಕಡಿಮೆ ಪ್ರಯಾಸದಿಂದ ಗೊತ್ತಾಗುವಂತಾಗಿದೆ. ಪ್ರಸಾದ ಮಾಧುರ್ಯ, ಸೌಕುಮಾರ್ಯ, ಭಾವ,

ವಿಲಾಸ, ವಿಭ್ರಮ, ರಸಾದಿಗುಣಗಳು ಇದರಲ್ಲಿ ತುಂಬಿಕೊಂಡು ಹೃದಯಂಗಮವಾಗಿವೆ. ದಿವ್ಯವಿಭೂತಿಯಾದ ಶರ್ವನ ದರ್ಶನಾಪೇಕ್ಷಿತಳಾದ ಅನನ್ಯ ಭಕ್ತಳಂತೆ, ಪ್ರೇಮಾಕಾಂಕ್ಷಿಯಾದ ಕಾಮಿನಿಯಂತೆ, ಪರಾತ್ಪರ ಶಕ್ತಿಗೆ ಚೇತನವೀಯಲು ಸಹಧರ್ಮಿಣೀತ್ವ ಸಂಪಾದನೆಗೆ ತಪಸ್ಸುಗೈದ ಬಲ್ಪಿನ ಭಾವಕೆಯಂತೆ, ಲೋಕಕಲ್ಯಾಣಕಾರಕಳಾದ ಮುಕ್ತಿಸೀಮಂತಿನಿಯಂತೆ ಕಾಣಿಸುವ ಹಾಗೆ ಮಾಡಿ ಗಿರಿಜೆಯ ಜೀವನ ವೀಣೆಯನ್ನು ರುದ್ರ ರಮಣೀಯವಾಗಿ ಮೀಟಿ, ಆದರ ಪ್ರತಿಧ್ವನಿಯು ನಮ್ಮ ಹೃದಯದಲ್ಲಿ ತಾನತಾನವಾಗಿ ಮಿಡಿಯುವಂತೆ ಕವಿಯು ಮಾಡಿದ್ದಾನೆ. ಹೂಗಳ ಸೂಕ್ಷ್ಮ ಸ್ವಭಾವಕ್ಕಿಂತಲೂ ಮಿಗಿಲಾಗಿ ಗಿರಿಜೆಯ ಸೂಕ್ಷ್ಮ ಸ್ವಭಾವವನ್ನು ನಯವಾಗಿ ಹೇಳಿ ಕಾವ್ಯಶಿಲ್ಪ ಗಿರಿಜೆಯನ್ನು 'ಗಿರಿಜಾಕಲ್ಯಾಣ' ದಲ್ಲಿ ಒಡಮೂಡಿಸಿ, ವಾಚಕರು ಕಾವ್ಯವನ್ನು ಕೈಬಿಡದಂತೆ ಕವಿಯು ಮಾಡಿದ್ದಾನೆ.

ಶತಕಗಳು ಬರೀನಾಲಿಗೆಯಿಂದ ಬಂದವು ಮಾತ್ರವಲ್ಲ; ಆದರೆ ಅವು ಹರಿಹರನ ಅಂತರಾತ್ಮನ ವಾಣಿಯಾಗಿ ಬಂದವು. ಪಂಪಾಶತಕ, ರಕ್ಷಾಶತಕಗಳನ್ನು ನೋಡಿದರೆ ಕವಿಯು ತನ್ನ ಆತ್ಮದ ಭಕ್ತಿಭಾವದ ಬೆಳವಣಿಗೆಯನ್ನು ಯಥಾರ್ಥವಾಗಿ ಸರಳತೆಯಿಂದ ನಿರೂಪಿಸಿರುವನು. ಭಕ್ತಿಜ್ಞಾನವೈರಾಗ್ಯಗಳನ್ನು ಕುರಿತು ಹೇಳುವುದು ಶತಕಸಾಹಿತ್ಯದ ಸಾಮಾನ್ಯ ಲಕ್ಷಣವು 'ಚಂಪಾಶತಕ' ದಂತಹ ಭಕ್ತಿಪ್ರತಿಪಾದಿತ ಗೀತಾಂಜಲಿಯನ್ನು ನಿವೇದಿಸಿದ ನಿರ್ಮಲಚಿತ್ತಗುಣಾನ್ವಿತ ಮನೋವೃತ್ತಿಯು 'ಚಂದ್ರಾಭರಣನ ಜೀವಂಬಟ್ಟಪ್ಪನಾವನನನೇ ದೇವಂ" ಎಂಬುದು ಕವಿಯ ಬಗೆಬಗೆಯ ಭಕ್ತಿಭಾವವನ್ನು, ಮಾತಿನ ರೀತಿಯನ್ನು, ವೇದನೆಯ ನಿವೇದನೆಯನ್ನು ನೋಡಿದರೆ ಸಾಕು. ಮನೋಜ್ಞತೆ, ರಸ, ಆಳವು ಅರಿವಾಗದೆ ಇರದು.

ಕರೆವುದೆಂದು ಕಾಲ್ವಿಡಿಸಿಕೊಳ್ವುದೆಂದು ದಯಾ ಕಟಾಕ್ಷದಿಂ ।<br>
ಪೊರೆವುದದೆಂದು ಮೆಲ್ನುಡಿಗಳಿಂ ಮುದವೇರುಪವೆಂದು ಸೋಂಕಿನಿಂ ।<br>
ಹರಿಪುದದೆಂದು ಸಂತಸದೆ ಪೆರ್ಚಿಪುದೆಂದು ಮನಸ್ವಿನೀಂಕರಂ ।<br>
ಕರಗಿಪುದೆನ್ನನೊಂದೊಸೆದು ಪೇಳೆನಗಿಂದಲೇ ಹಂಪೆಯಾಳ್ದನೇ ॥

ಜನ್ಮವನ್ನು ಅಂಟಿಕೊಂಡು ಬರುವ ವಾಸನಾ ವಿಶೇಷವು ಭಕ್ತಿಯು. ಜೀವನದಲ್ಲಿಯಾದರೂ ಅದನ್ನು ಸಾಧಿಸಬೇಕಾದರೆ ಯೋಗ್ಯತೆಯು, ಸಂಸ್ಕಾರವು, ಸ್ಥಿರತೆಯು, ಧೈರ್ಯವು ಬೇಕು. ನಿಜವಾದ ನಿರ್ವ್ಯಾಜ ಭಕ್ತಿಯು

ಮೋಕ್ಷಕ್ಕೆ ಮೂಲವು. ಭಕ್ತಿಯು ಕೈಗೂಡಬೇಕಾದರೆ ದೈನ್ಯತೆಯು ಮುಖ್ಯ 'ನಾನು ನನ್ನದು' ಎಂಬುದನ್ನು ಬಿಟ್ಟಹೊರತು ಭಕ್ತಿಗೆ ಸಾರ್ಥಕವಿಲ್ಲ. ಪಾವಿತ್ರ್ಯವಿಲ್ಲ. ಪರದೈವಗಳನ್ನು ಸ್ವಲ್ಪವಾದರೂ ಸ್ಮರಿಸದ ಹಂಪೆಯರಸ ನಲ್ಲಿಯೇ ನೆಲೆಗೊಂಡ ನಿಶ್ಚಲ ಭಕ್ತಿಯು ಈತನದು. ಪಂಪಾ ವಿರೂಪಾಕ್ಷ ನಲ್ಲಿ ನಿಶ್ಚಲ ಮನಸ್ಸನ್ನಿಟ್ಟವಂಗೆ ಅಸಹನೀಯ ಉಗ್ರ ಬಾಧೆಗಳೂ ಕೂಡ ಬಯಲಾಗುವವು.

ಸ್ಮರನಿಂ ಬೆಂದುರಿವಂಗೆ ರೋಗತತಿಯಿಂದ ನೊಂದಳಲ್ವಂಗೆ ನಿ ।
ಷ್ಠುರ ಮುಗ್ರಂ ಪರುಷಂಗಳಿಂ ಬಳಲ್ವಂಗತ್ಯುಗ್ರ ತಾಪಂಗಳಿಂ ।
ಕೊರಗುತ್ತಳ್ಕುವವಂಗೆ ಶತ್ರುಭಯದಿಂ ಬೆಳ್ಪಾಗಿ ಬೀಳ್ವಂಗೆ ಸಾ ।
ದರದಿಂ ಕಾಯಲಿದೊಂದೆ ಸಾಲ್ವುದು ದಿಟಂ ನಾಮಂ ವಿರೂಪಾಕ್ಷನಾ ॥

ಭಕ್ತಿಯ ಅಂತಿಮಾವಸ್ಥೆಗಳು ಸಖ್ಯವೂ ಆತ್ಮ ನಿವೇದನವೂ ಆಗಿದೆ. ಒಂದೇ ಮನಸ್ಸಿನಿಂದ ಶಿವನಿಗೆ ಆತ್ಮಾರ್ಪಣೆ ಮಾಡಿದರೆ ಬೇರೇನು ಬೇಕು? ಆತನ ದಯದಿಂದ ಆನಂದದ ಲಹರಿಯು ಆತ್ಮನನ್ನು ಆವರಿಸಿ ನಿತ್ಯನ ನ್ನಾಗಿ ಮಾಡುತ್ತದೆ.

ಕರಣಂಗಳ್ ಕಳೆಯೇರೆ ಲೋಚನಯುಗಂ ನೀರೇರೆ ಮೆಯ್ಯೆಲ್ಲಮಂ ।
ಪುಳಕಂ ಮೇಳಲ್ ನುಡಿ ಕಂಪವೇರೆ ಚರಣಗಳ್ ಲೀಲೆಯೋಳಲೆ* ಮೊಗಂ ।
ಸಿರಿಯೋಳಲ್ ತಲೆಗೇಳಲುದುತ್ಸವದೆ ನಿಮ್ಮಂ ಪೂಜಿಸುತ್ತಾನುಮಾ ।
ದರದಿಂದೀಕ್ಷಿಸುತಾಡುತಿರ್ಪುದೆನಗಿನ್ನೆಂದೋ ವಿರೂಪಾಕ್ಷನೇ ॥

ತಾನು ಸವಿದ ಭಾಗ್ಯವನ್ನು ಮಹಾ ಜನಗಳಿಗೆ ಕವಿಯು ಹಂಚದೆ ಇರನು. 'ಪಂಪಾ ಶತಕ' ದಂತಹ ಭಕ್ತಿಭಾವೋತ್ಪಾದಕ ಶ್ರೇಷ್ಠ ಕಾವ್ಯ ಗುಣದಲ್ಲಾಗಲೀ, ಪೋಷಣ ಕ್ರಿಯೆಗಳಲ್ಲಾಗಲೀ ಕೊರತೆಯು ಕಾಣದು. ಭಕ್ತಿಯನ್ನು ಉಜ್ವಲತೆಯಿಂದ ಭಾವವತ್ತಾಗಿ ಚಿತ್ರಿಸಿದ್ದಂತೆಯೇ ಕಾವ್ಯಾಂಗ ವನ್ನೂ ಕೂಡ ಅಷ್ಟೇ ಶ್ರದ್ಧೆ ಎಚ್ಚರಿಕೆಯಿಂದ ಚಿತ್ರಿಸಿದ್ದಾನೆ.

'ರಗಳೆ'ಯ ಸೃಷ್ಟಿಸಿ 'ಚಂಪೂ' ವನ್ನು ಮೇಲೆತ್ತಿದ ಹರಿಹರನನ್ನು ಕನ್ನಡ ಗದ್ಯಕಾವ್ಯದ ಆದ್ಯ ಪ್ರವರ್ತಕನೆನ್ನಬಹುದು. ಪದ್ಯಂ ವದ್ಯಂ ಗದ್ಯಂ ಹೃದ್ಯಂ ಎಂದು ಮುದ್ದಣ್ಣನು ಹೇಳುವಂತೆ ಈತನು ಹೇಳುವವನಲ್ಲ. ಗದ್ಯ ಪದ್ಯಗಳೆರಡರಲ್ಲಿಯೂ ಈತನಿಗೆ ಸರಿಯಾದ ಕೈಚಳಕವಿದೆ. ಈತನ ಗದ್ಯವು ಪದಗಳಿಗನುಗುಣವಾಗಿ ಕಾವ್ಯದ ಹೃದಯಂಗಮತೆಯನ್ನು ಹೆಚ್ಚಿಸು

ತ್ತದೆ. ಕನ್ನಡ ಗದ್ಯ ಸಾಹಿತ್ಯದ ಸೀಮಾಪುರುಷ ಹರಿಹರನು, ಕರ್ಣಾಟಕದ ಬಾಣನೇ ಸರಿಯು. ತೂಕೋಚಿತ ಪದ ಪ್ರಯೋಗ, ಕಿವಿಗೆ ಇಂಪಾದ ಶೈಲಿ, ಸರಳ ನಿರೂಪಣೆಯೇ ಈತನ ಗದ್ಯ ಸಾಹಿತ್ಯದ ವೈಶಿಷ್ಟ್ಯವು.

ಸುರತರುವಿನಂಕುರದಂತೆ ಪುಣ್ಯದ ಕೊನರಿನಂತೆ ಭಕ್ತಿಯ ಕುಸುಮದಂತೆ, ಮುಕ್ತಿಯ ಫಲದಂತೆ, ಬಾಲಚಂದ್ರನಂತೆ, ಕಳಹಂಸನಂತೆ, ಕಾಮಧೇನುವಿನ ವತ್ಸನಂತೆ, ಪರುಷದ ಮರಿಯಂತೆ ನಳನಳಿಸಿ ಬೆಳೆಯುತ್ತಿರ್ಪ ಮಳೆಯ ರಾಜದೇವಂ ಶೈಶವಲೀಲೆಯೊಳ್ ಮುಂದೆ ತನಗೆ ಪ್ರತ್ಯಕ್ಷನಪ್ಪ ಶಿವನೇರಿ ಬರ್ಪ ನಂದಿಯ ನೀಲವಂತಂ ಬಳಿಕ್ಕೆ ಪಡಿಸಣವಂ ನೋಡುವಂತೆ ದಟ್ಟಡಿ ಇಟ್ಟು ಶಿವಸ್ತುತಿಯಂ ಶ್ರವಣವಂ ಮಾಡುವಂತೆ ನುಡಿದು ದೇಶಂ ಬೆರಸು ಕೈಲಾಸಕ್ಕೇ ತೆರದೊಳೆತ್ತಿಕೊಂಡೊಯ್ವೆನೆಂಬುದು ತೋರುವಂತೆ ಮುಂದಿರ್ದ ಹಾಲ ಹೊನ್ನಬಟ್ಟಲನೊಯ್ಯನೆತ್ತಿ ನಿಂದಿರುತ್ತ' ಹರಿಹರನ ಶಬ್ದ ಸಾಮಗ್ರಿಯು ಅಪಾರವಾಗಿ ರಸಪೋಷಣೆಗೆ ಅನುಕೂಲವಾಗಿ ಭಾವವನ್ನು ಹೊರಹೊಮ್ಮಿಸಿ ಕಾವ್ಯದ ಸೌಂದರ್ಯವನ್ನು ಉಕ್ಕಿಸಿ ಹೃದಯಂಗಮತೆಯನ್ನುಂಟುಮಾಡಿರುವುದು ಇದರಿಂದ ತಿಳಿಯಬರುತ್ತದೆ. ಸುಲಭವಾಗಿಯೂ, ಮೃದುಮಧುರವಾಗಿಯೂ ಇರುವ ಭಾಷೆಯೇ ಈ ಗದ್ಯದ ತಿರುಳಾಗಿರುತ್ತದೆ.

ಆರಿಸಿಕೊಂಡಿರುವ ಕಥಾಭಾಗವನ್ನು ನೂತನವಾಗಿರಿಸಿ, ಉತ್ತಮ ಕಾವ್ಯರಚನೆ ಮಾಡಿ ವಿಶ್ವಾತ್ಮಕನ ಹೃದಯಂಗಮವಾದ ವರ್ಣನೆಗಳನ್ನು ಬಹು ಗಂಭೀರವಾಗಿಯೂ, ಪ್ರೌಢವಾಗಿಯೂ, ಕವಿಯು ಬಣ್ಣಿಸಿದ್ದಾನೆ. ಗದುಗಿನ ನಾರಣಪ್ಪನು ವೀರ ನಾರಾಯಣನಿಂದ ಪ್ರಬೋಧಿತನಾಗಿ ಕಾವ್ಯವನ್ನು ರಚಿಸಿರುವಂತೆಯೇ ಈತನೂ ಪಂಪಾ ವಿರೂಪಾಕ್ಷನ ಪ್ರೇರಣೆಯಿಂದ ಕಾವ್ಯ ಲಹರಿಯನ್ನು ತುಂಗಭದ್ರೆಯಾಗಿ ಹೊರಪಡಿಸಿದ್ದಾನೆ. ನರನನ್ನು ಹರನನ್ನಾಗಿಯೂ, ಕರಾಳನನ್ನು ಕರ್ಮಯೋಗಿಯನ್ನಾಗಿಯೂ ಮಾಡುವ ಓಜಸ್ಸು ತೇಜಸ್ಸು ಈತನ ಲೇಖಣಿಯಲ್ಲಿ ಇದೆ. ಈತನು ಭಕ್ತಿಯ ಆವೇಶದಿಂದ ಒಮ್ಮೊಮ್ಮೆ ಮೈಮರೆತಿದ್ದರೂ ಕೂಡ ಸೌಂದರ್ಯವನ್ನು ಬಣ್ಣಿಸುವುದರಲ್ಲಿಯೂ ಭಾವಗಳಿಗೆ ರೂಪುಗೊಡುವುದರಲ್ಲಿಯೂ ಹಿತ ಮಿತಭಾವಗಳನ್ನು ಪ್ರಯೋಗಿಸಿದ್ದಾನೆ. ಈ ವೀರ ಗಾಯಕನ ಹೃದಯವು ವೀಣೆಯಂತೆ ಮಿಡಿದಿದೆ. ಈತನದು ಪಳಗಿದ ಕೈ. ಈತನ ಲೇಖಣಿಯಲ್ಲಿ ಉದ್ಗದ

ಉರಿಯಿದೆ; ಕಾವ್ಯದ ಮಾಧುರ್ಯವಿದೆ; ರಸಿಕರ ಜಾಣ್ಮೆಯಿದೆ. ಕಥಾಭಾಗ ಗಳ ಜೋಡಣೆ, ಪಾತ್ರಗಳ ಬೆಡಗು, ಉತ್ತಮ ಕಾವ್ಯ ರಚನೆಯು ಈತನ ಕಾವ್ಯದಲ್ಲಿ ಕಾಣಬರುವ ಗುಣಗಳು. ಪದಗಳನ್ನು ಪ್ರಾಸ ತಾಳ ಲಯಬದ್ಧ ವಾಗಿ ಮಾಲೆಯಂತೆ ಜೋಡಿಸುವುದರಲ್ಲಿ ಈತನು ಚತುರ. ಉತ್ಸಾಹವಿರ ದೆಡೆ ಉತ್ಪ್ರೇಕ್ಷೆಗೆ ಧಾರಾಳವಾಗಿ ಅವಕಾಶ ಕಲ್ಪಿಸಿದ್ದಾನೆ. ಈತನ ಕಾಲ ದಲ್ಲಿ ಧಾರ್ಮಿಕ ಕ್ರಾಂತಿಯ ಜೊತೆಗೆ ವಿಚಾರ ಮತ್ತು ಸಾಹಿತ್ಯ ಕೂಡ ಕರ್ಣಾಟಕದಲ್ಲಿ ನಡೆದಿರುವುದು ಕಾಣಬರುತ್ತದೆ.

ಒಟ್ಟಿನಲ್ಲಿ ಹರಿಹರನ ಶೈಲಿಯು ಹರಿಹರನದೇ ಆಗಿದೆಯೇ ಹೊರತು ಅನ್ಯರ ದಲ್ಲ. ಈತನ ಭಾಷೆಯು ಪ್ರೌಢವಾಗಿಯೂ, ಗಂಭೀರವಾಗಿಯೂ, ಹೃದ ಯಂಗಮವಾಗಿಯೂ ಇದೆಯೆಂದರೆ ತಪ್ಪೇನಾಗಲಾರದು. ನಯಸೇನನಂತೆ ಸಂಸ್ಕೃತ ಶಬ್ದಗಳನ್ನು ಸಂಪೂರ್ಣ ಬಿಟ್ಟುಕೊಡದೆ ಸುಲಭವಾದವುಗಳನ್ನು ಮಾತ್ರ ಬಳಸಿ ದೀರ್ಘ ಸಮಾಸ ಪ್ರಯೋಗಗಳನ್ನು ಈತನು ಬಿಟ್ಟಿರು ವನು. ಇಂಗ್ಲೀಷ್ ಸಾಹಿತದಲ್ಲಿ ಆಂಗ್ಲೋಸ್ಯಾಕ್ಸನ್ ಪ್ರಭಾವವು ತಪ್ಪಿ ಪರಿಶುದ್ಧ ಇಂಗ್ಲೀಷ ಶೈಲಿಯ ಸಂಪ್ರದಾಯಕ್ಕೆ ಎಂತು ಚಾರ್ಲೆಸ್ ಆಚಾರ್ಯ ನಾದನೋ ಅಂತೆಯೇ ಚಂಪೂ ಪ್ರಭಾವವು ತಪ್ಪಿ ಪರಿಶುದ್ಧ ಕನ್ನಡಹಾಡಿನ ಶೈಲಿಯ ಸಂಪ್ರದಾಯಕ್ಕೆ ಹರಿಹರನು ಆಚಾರ್ಯನಾಗಿರುವನು. ಈತನ ಸ್ವಾತಂತ್ರ್ಯ ರಮಣೀಯತೆಯನ್ನೂ, ಕವಿತಾ ವಿವೇಕವನ್ನೂ ಈತನ ದಾರಿಯು ಸಾರುತ್ತಿರುವುದು. ಇದು ವಾಚಕರಲ್ಲಿ ಭಾವಾವೇಶ ರಸಗಳ ಉತ್ಪತ್ತಿಯ ನ್ನು ಮಾಡುವುದು. ಗಿರಿಜಾ ಕಲ್ಯಾಣ, ಪಂಪಾ ಶತಕ, ರಕ್ಷಾ ಶತಕಗಳು ಈತನನ್ನು ಮಹಾ ಕವಿಯನ್ನಾಗಿಯೂ, ರಗಳೆಗಳು ಈತನನ್ನು ಕನ್ನಡ ಕವಿ ಕುಲುಗುರುವನ್ನಾಗಿಯೂ, ಮಹಾನುಭಾವವನ್ನಾಗಿ, ಅವತಾರಪುರುಷನನ್ನಾ ಗಿಯೂ ಮಾಡಿರುವುವು. ಕನ್ನಡ ಸಾಹಿತ್ಯ ಬಾನಿನಲ್ಲಿ ಹೊಸ ಕ್ರಾಂತಿಯ ಆಚಾರ್ಯ ಪುರುಷನಾದ ಹರಿಹರನ ವಿಷಯವಾಗಿ ಕೀರ್ತಿಶೇಷ ತ. ಸು. ವೆಂಕಣ್ಣಯ್ಯನವರು "ರಗಳೆಗಳನ್ನು ಬರೆದದ್ದಕ್ಕಾಗಿ ಹರಿಹರನು ತಲೆಬಗ್ಗಿಸ ಬೇಕಾದದ್ದೇನೂ ಇರಲಿಲ್ಲ. ಒಂದು ವೇಳೆ ಆತನು ಗಿರಿಜಾಕಲ್ಯಾಣವನ್ನು ರಚಿಸದೆ ಹೋಗಿದ್ದರೂ ಆತನಿಗೆ ಕನ್ನಡ ಸಾಹಿತ್ಯದಲ್ಲಿ ದೊರೆತಿರುವ ಸ್ಥಾನಕ್ಕೆ ಏನೂ ಚ್ಯುತಿ ಬರುತ್ತಿರಲಿಲ್ಲ. ಸಾಹಿತ್ಯ ದೃಷ್ಟಿಯಿಂದ ಈ ರಗಳೆಗಳು ಅನೇಕ ಚಂಪೂ ಗ್ರಂಥಗಳಿಗಿಂತಲೂ ಹೆಚ್ಚು ಆದರಣೀಯವೂ, ಗೌರವಾ ರ್ಹವೂ ಆಗಿವೆ." ಎಂದು ಹೇಳಿರುವರು.

ಈ ಬಗೆಯಾಗಿ ಒಂದಲ್ಲ ಒಂದುಬಗೆಯಿಂದ ಹೊಸಹೊಸ ಪರಂಪರೆಗಳನ್ನು ಪ್ರದರ್ಶಿಸಲು ಕಾರಣನಾದ ಹರಿಹರನ ಪರಿಣಾಮವು ಅಗಾಧ, ಅಪಾರವೇ ಸರಿಯು. ಷಟ್ಪದಿಯ ಜನಕ ರಾಘವಾಂಕ ಮಹಾ ಕವಿಯು 'ಹಂಪೆಯ ಹರೀಶ್ವರನ ವರಸುತನುಭಯ ಕವಿ ಕಮಲ ರವಿ, ಎಂದಿರುವನು. ಚೆನ್ನ ಬಸವ ಪುರಾಣದ ಕರ್ತೃವಾದ ವಿರೂಪಾಕ್ಷ ಪಂಡಿತನ ಮೇಲೆ ಹರಿ ಹರನ ಪ್ರಭಾವವು ಆಗಿದೆ ಎಂಬುದು ಚೆನ್ನಬಸವ ಪುರಾಣದ ರತಿ ಪ್ರಲಾಪಾದಿ ಭಾಗಗಳಲ್ಲಿ ಚೆನ್ನಾಗಿ ಪ್ರದರ್ಶಿತವಾಗುವುದು. ಹದಿನೇಳನೆ ಶತಮಾನದಲ್ಲಿನ ಷಡಕ್ಷರ ದೇವನು 'ಹರಿಹರನುದಿತ ಮಾರ್ಗದಿಂದಿನೊಲೆವೆಂ' ಎಂದುದರ ಜೊತೆಗೆ ಮೃದು ಮಧುರ ಪದರಚನೆಯಿಂದ ಕೂಡಿದ ಈತನ ಕಾವ್ಯಶೈಲಿಯಿಂದ ತನ್ನ ಕಾವ್ಯಗಳನ್ನು ಬರೆಯಲು ಸಂಕಲ್ಪಿಸಿದನು. ಈ ಕವಿಯುಪಾಂಡಿತ್ಯಕ್ಕೂ, ಶಿವಭಕ್ತಿಗೂ ಮಾರು ಹೋಗಿ 'ಹರಿಶ್ವರಸ್ತೇನಸಮಃ ಕವಿಃ' ಎಂದು ಕವಿಕರ್ಣರಸಾಯನದಲ್ಲಿಯೂ ಹರೀಶ್ವರನು ಮೋಕ್ಷಲಕ್ಷ್ಮೀ ವರನಾಥನೆಂದೂ ಈ ಕವಿಗೆ ಸರಿಸಮಾನನಾದಕವಿ ಜಗತ್ತಿನಲ್ಲಿಯೇ ಇಲ್ಲ ವೆಂದೂ ರಾಜಶೇಖರ ವಿಲಾಸದಲ್ಲಿ ಹೇಳಿರುವನು. ಬೊಮ್ಮರಸ, ಕಳಲೆಯ ನಂಜರಾಜ, ಸುರಂಗಾದಿ ಕವಿಗಳ ಗುಂಪು ಅಲ್ಲದೆ ಸುಮಾರು ೧೯೦೦ ರ ವರೆಗೆ ಕನ್ನಡ ಕವಿಗಳು ಈತನಿಂದ ಸ್ಫೂರ್ತಿ ಪಡೆದಿರುವರು. ಅಭಿನವ ಕಾಳಿದಾಸನಾದ ಬಸವಪ್ಪಶಾಸ್ತ್ರಿಗಳ ಕವಿತ್ವವೂ ಈತನ ಪ್ರಭಾವವನ್ನು ಪಡೆಯದೆ ಇರದು. ಮಲ್ಲಿಕಾರ್ಜುನನ ಸೂಕ್ತಿಸುಧಾರ್ಣವದಲ್ಲಿಯೂ ವಾದಿ ವಿದ್ಯಾನಂದನ ಕಾವ್ಯ ಸಾರದಲ್ಲಿಯೂ ಈತನ ಪದ್ಯಗಳೂ ಸಂಕಲಿತವಾಗಿ ರುವುವು. ಈತನ ಪ್ರಭಾವವು ವಿಶ್ವತೋ ವಿಪ್ರಸರಣವೇ ಸರಿಯು

ಕಂದಗಳಮೃತಲತಿಕಾ । ಕಂದಂಗಳನೂನ ವಾಕ್ಯ ಫಲ ವಿಲಸನ್ಮಾ ಕಂದ
ಗಳ ತನಿರಸದು । ಕ್ಕಂದಂಗಳ್ ಸೊಗಯಿಸಿರ್ಪುವೀನುತಕೃತಿಯೋಳ್ ॥

— ಹರಿಹರದೇವ

ಕಂದಂಕವಿಕೋಕಿಲಮಾ । ಕಂದಂ ಕೋಮಳವಿಕಾಸಿಕೃತಿಕಲ್ಪಲತಾ ।
ಕಂದಂ ವಿಸ್ಮಯಮಧುರರಸದು । ಕ್ಕಂದಂ ಚಿಕದೇವರಾಯಚಂದನಚಿಂದು ॥

— ತಿರುಮಲಾರ್ಯ

# ಶರಣಾಗದಿಹುದೇ ?

ಜ್ಞಾನಕ್ಕೆ ಅಜ್ಞಾನ ಶರಣು
ಹೋಗದೇ ಇಹುದೆ ?

ನೀರಿಂಗೆ ಉರಿ ಬೆಂಕಿ
ಶರಣಾಗದಿಹುದೆ ?

ಬೆಳಕಿಂಗೆ ಕತ್ತಲೆಯು
ಶರಣಾಗದಿಹುದೆ ?

ಸಂತಸಕೆ ಅಳಲದುವು
ಶರಣಾಗದಿಹುದೆ ?

ಸೌಖ್ಯಕ್ಕೆ ದುಃಖವದು
ಶರಣಾಗದಿಹುದೆ ?

ಆತ್ಮಕ್ಕೆ ದೇಹವದು
ಶರಣಾಗದಿಹುದೆ ?

ಈಶಂಗೆ ಆತ್ಮವದು
ಶರಣಾಗದಿಹುದೆ ?

— ಸಿಂ. ಬ. ಸಾವಳಗಿ, ಜ್ಯೂ. ಬಿ.
ಲಿಂಗರಾಜ ಕಾಲೇಜ ಬೆಳಗಾಂವ

# ಈಶನಲ್ಲಿ ಮೊರೆ

[ಬರೆದವರು:- ಶ್ರೀ, ಎಚ್, ಸಿದ್ದಣ್ಣ ಲೊ. ಶಾ. ಶಿಕ್ಷಕ. ಮು. ಲಚ್ಯಾಣ.]



ಕರುಣೆಯು ತೋರೋ ದೇವಾ
  ಕರುಣೆಯು ತೋರೋ ||ಪ||

ನರಮಾಂಸದಿ ಕೂಡಿದ
ಎಲುವಿನಂದರ ದೊಳುನಿಂದ
ಬಂಧಿತ ಈ ಕಾಯದ ಮೇಲೆ
ಕರುಣೆಯು ತೋರೋದೇವಾ ||೧||

  ಮಡದಿ ಮೋಹವ ಬಿಡಿಸಿ
  ಸಂಸಾರ ಪಾಶವ ಹರಿಸಿ
  ನಿಮ್ಮ ಪಾದದಲ್ಲಿ ಇರಿಸಿ
  ಕರುಣೆಯ ತೋರೋದೇವಾ ||೨||

ಧನವಾಶೆಯ ಬಿಡಿಸಿ
ಜನಸೇವೆಯಲ್ಲಿರಿಸಿ
ಭಕ್ತಿಪಥವ ಹಿಡಿಸಿ
ಕರುಣೆಯ ತೋರೋದೇವಾ ||೩||

  ಕಾಯಕದ ಕತ್ತಲೆ ಓದಿಸಿ
  ಮನದ ಮಲವ ತೊಳಿಸಿ
  ಮಾಡುವ ಈ ಸೇವೆ ಈಶನದಾಗಿಸಿ
  ಕರುಣೆಯ ತೋರೋದೇವಾ ||೪||

ಗರ್ವವನು ಅಳಿಸಿ
ಮುರ್ಖವನು ತಿಳಿಸಿ
ಮಾನವ ಜನ್ಮ ಪಾವನವಮಾಡಿಸಿ
ಕರುಣೆಯ ತೋರೋದೇವಾ ||೫||

# ತತ್ವಗಳು

—(ಲೇ:— ಶ್ರೀ ಸಿ. ನಾ. ಮಹಾಂತಣ್ಣನವರ. ಹೊನ್ನೂರು)—

ವಿಶ್ವದ ಜ್ಞಾನಾಜ್ಞಾನ, ಚೇತನಾಚೇತನ, ಆತ್ಮಾನಾತ್ಮ, ದೃಶ್ಯಾದೃಶ್ಯ, ಶುದ್ಧಾಶುದ್ಧ, ಭೇದಾಭೇದ, ಕಾರ್ಯಾಕಾರ್ಯ, ಕರ್ಮಾಕರ್ಮ, ಸಾಧ್ಯಾಸಾಧ್ಯ, ಗುಪ್ತಾಗುಪ್ತ, ಧರ್ಮಾಧರ್ಮ, ಪೂರ್ಣಾಪೂರ್ಣಗಳ ಬಗ್ಗೆ ವಿವೇಕ ದೃಷ್ಟಿಯೊಳು ಮರೆಮಾಜದೆ ನೆರೆನೋಡಲು, ಅರಿವು ಮರವು, ಬರವು ತೆರವುಗಳು ಬರಬರನೆ ಮುಂದರಿದು ನಿಂದಿರುವವು. ಇವುಗಳ ವಿಭಜನೆ ಮಾಡಲು, ವಿವೇಕಿಗಳು, ಸದ್ರೂಪವಾದ ಸೃಷ್ಟಿ, ಚಿದ್ರೂಪವಾದ ಕಲೆ, ಆನಂದ ರೂಪವಾದ ನಾದಗಳ ಸ್ವರೂಪವೇ "ಬಿಂದು ಸ್ವರೂಪಂ ನಿಜಮೂಲ ಪೀಠಂ। ನಾದ ಸ್ವರೂಪಂ ಸ್ಫುರದೂರ್ಧ್ವ ಪೀಠಂ। ಕಲಾತ್ಮ ತಿರ್ಯಗ್ಗತ ಗೋಮುಖಾಢ್ಯಂ । ಚಿದ್ರೂಪಲಿಂಗಂ ಹೃದಯಾಬ್ಜ ಸಂಸ್ಥಂ ॥೧॥ ಎಂಬದಾಗಿ ವಿಶ್ವಾತ್ಮನು ತನ್ನ ಸ್ಫುರಣ ಮಾತ್ರದಿಂದಾದ ನಾದದಿಂದ ಪ್ರಣವ ಸ್ವರೂಪನಾಗಿ ತನ್ನ ಚಿತ್ಪ್ರಕಾಶದಿಂದ ಚಿತ್ಕಳಾ ಸ್ವರೂಪನಾಗಿ, ಮೂಲಚಿತ್ತುವಿನ ಲೀಲಾವಿಲಾಸದಿಂದ ಚಿದ್ಬಿಂದುವಾಗಿ, ಯೋಗೀಶ್ವರರ ಹೃದಯಾಬ್ಜದಲ್ಲಿ "ವಾಲಾಗ್ರ ಶತಭಾಗಸ್ಯ ಶತಧಾ ಕಲ್ಪಿತಸ್ಯಚ ಭಾಗೋ ಜೀವಸಃ ವಿಜ್ಞೇಯಃ" ಎಂಬ ಅನುಭವೋಕ್ತಿಯಂತೆ ವಿಕಾಸ ಹೊಂದುತ್ತ ಧ್ಯಾನ ಧಾರಣ ಸಮಾಧಿಯೊಳು ಲಿಂಗತ್ರಯಗಳಿಂದ ಅಂಗತ್ರಯಗಳಲ್ಲಿ ವಿರಾಜಿಸಿ, ಪಶ್ಚಿಮ ಚಕ್ರದೊಳು ನಿರಂಜನನೆನಿಸಿ ಭಾವ ಲಿಂಗನಾಗಿ ಶಿಖಾಚಕ್ರದೊಳು ಶೂನ್ಯನೆನಿಸಿ ಪ್ರಾಣಲಿಂಗನಾಗಿ, ಬ್ರಹ್ಮ ಚಕ್ರದೊಳು ನಿಃಕಲ ನೆನಿಸಿ ಇಷ್ಟಲಿಂಗನಾಗಿ ನಿಂದು, ಒಂದಾದ ಶಿವ ತತ್ವಸ್ವರೂಪನಾಗಿರುವನು.

ಈ ಶಿವತತ್ವಸ್ವರೂಪನಾಗಲು ಷಡಧ್ವಗಳೇ ಸನ್ಮಾರ್ಗಂಗಳು. ಈ ವರ್ಣಾಧ್ವ, ಮಂತ್ರಾಧ್ವ, ಪದಾಧ್ವ, ತತ್ವಾಧ್ವ, ಕಲಾಧ್ವ, ಭುವನಾಧ್ವಗಳ ಅನುಭಾವಿಯೇ ಆಚಾರ್ಯನು. "ಮಂತ್ರಾಧ್ವವ ಪದಾಧ್ವವ ತನ್ನಲ್ಲಿ ತಿಳಿದು ಅನುಭವಿಸಬಲ್ಲಾತನೇ ಆಚಾರ್ಯನೆಂಬೆ, ತತ್ವಾಧ್ವ ಕಲಾಧ್ವವ

ತನ್ನಲ್ಲಿ ತಿಳಿದು ಅನುಭವಿಸಬಲ್ಲಾತನೇ ಆಚಾರ್ಯನೆಂಬೆ, ಈ ಷಡ್ವಿಧವ ತನ್ನಲ್ಲಿ ತಿಳಿದು ಅನುಭವಿಸಲರಿಯದೆ ಆಚಾರ್ಯರೆಂಬ ಅನಾಚಾರ್ಯರ ಮೆಚ್ಚುವನೇ ನಮ್ಮ ಅಪ್ರಮಾಣ ಕೂಡಲಸಂಗಮದೇವಾ?" ಆರಧ್ವಗಳಲ್ಲಿ ಅಡಕವಾದ ತತ್ವಾಧ್ವದ ಪರಶಿವತತ್ವ ತಾನೇ ತನ್ನ ಲೀಲಾವಿನೋದಕ್ಕೆ ನಿಃಕಲತತ್ವವಾಗಿತ್ತು. ಆ ನಿಃಕಲತತ್ವದಲ್ಲಿ ದಶತತ್ವದುತ್ಪತ್ತಿಯೆಂತೆಂದೊಡೆ ಪರಶಿವ ಪರ ಶಕ್ತಿ, ಸದಾಶಿವ, ಈಶ್ವರ, ಶುದ್ಧವಿದ್ಯೆ, ಮಾಯೆ, ಕಾಲ, ನಿಯತಿ, ಕಲೆ, ವಿದ್ಯೆ, ರಾಗ, ಈದಶ ತತ್ವಂಗಳು ನಿಃಕಲತತ್ವದಲ್ಲಿ ಉತ್ಪತ್ತಿಯಾಯಿತ್ತು. ಇನ್ನು ಸಕಲ ತತ್ವದಲ್ಲಿ ಇಪ್ಪತ್ತುನಾಲ್ಕು ತತ್ವ ಉತ್ಪತ್ತಿಯಾಯಿತ್ತು. ಗುಣತ್ರಯ (ಮನ) ಬುದ್ಧಿ, ಅಹಂಕಾರ, ಚೇತನ, ಶ್ರೋತ್ರ, ತ್ವಕ್ಕು, ಚಕ್ಷು, ಜಿಹ್ವೆ, ಘ್ರಾಣ, ವಾಕ್ಕು, ಪಾಣಿ, ಪಾದ, ಪಾಯು, ಗುಹ್ಯ, ಶಬ್ದ ಸ್ಪರ್ಶ, ರೂಪ, ರಸ, ಗಂಧ, ಆಕಾಶ, ವಾಯು, ತೇಜ, ಅಪ್ಪು, ಪೃಥ್ವಿ ಇಪ್ಪತ್ತುನಾಲ್ಕು ತತ್ವಂಗಳು ಸಕಲ ತತ್ವದಲ್ಲಿ ಉತ್ಪತ್ತಿಯಾಯಿತ್ತು. ಆ ಸಕಲ ನಿಃಕಲ ತತ್ವಮೊದಲಾಗಿ, ರಾಗ, ಪೃಥ್ವಿತತ್ವಕಡೆಯಾಗಿ ಈ ಮೂವತ್ತಾರು ತತ್ವಗಳು ತತ್ವಾಧ್ವನೋಡಾ ಅಪ್ರಮಾಣ ಕೂಡಲಸಂಗಮದೇವಾ"

ಏಕದಲದ ಕಾಳುಗಳಲ್ಲಿ ಯಾವಬೀಜವು ತಾನೇ ತಾನಾಗಿರುವದೋ ಆ ಉದ್ಬೀಜವನ್ನು ಅಡಗಿಸಿಕೊಂಡು ಒಂದಾಗಿರುವದೇ ಶಿವತತ್ವವು. ದ್ವಿದಲದ ಕಾಳುಗಳಲ್ಲಿ ತಾನು ತನ್ನ ಉದ್ಬಿಜವನ್ನು ಅಡಗಿಸಿಕೊಂಡಿದ್ದರೂ ಬೇಳೆಯ ರೂಪದಿಂದ ಬೀಜಾವ ತನ್ನಲ್ಲಿ ದ್ವೈತವಾಗಿ ತೋರಲ್ಪಡುತ್ತದೆ. ಇದರಂತೆ ಶಿವತತ್ವದಲ್ಲಿರುವ ಸ್ವಶಕ್ತಿಯು ಗುಪ್ತವಾಗಿದ್ದದ್ದು ಎರಡಾಗಿ ಶಿವ, ಶಕ್ತಿಗಳೆಂಬ ತತ್ವಗಳಿಂದ ಕಾಣಿಸಲ್ಪಡುತ್ತವೆ. ಏಕದಲದ ಬೀಜವನ್ನಾಗಲಿ, ದ್ವಿದಲದ ಬೀಜವನ್ನಾಗಲಿ, ಹಸನಾದ ಭೂಮಿಯಲ್ಲಿ ಹಸಿಯಾದಾಗ ಹದನೋಡಿ ಬೆವೆಗಾಲವರಿತು ಬಿತ್ತಿದರೆ, ಆ ಕಾಳು ಮೊದಲು ಉಬ್ಬಿ ತನ್ನ ಮೂಗನ್ನು ವಿಕಸಿಸಿ, ಇನ್ನು ಮೊಳಕೆಯು ಹೊಳಿಕೆಗೆ ಸಿದ್ಧವಾದ ಸ್ಥಿತಿಯೇ ಸದಾಶಿವತತ್ವ. ಉಬ್ಬಿದ ಹಾಗು ಮೂಗುವೆರೆದ ಬೀಜದಲ್ಲಿ ನೈಸರ್ಗಿಕ ಶಕ್ತಿಯಿಂದ ಬೀಜದ ಅಂಕುರದೋರ್ಪುದೇ ಈಶ್ವರತತ್ವವು. ಅಂಕುರದೋರುವವರೆಗೆ ಬೀಜದ ಹಿಟ್ಟಿನರೂಪವಾದ ಅಂತರ್ಯಾಮಿ ಶಕ್ತಿಯೇ ಅಂದರೆ ವಿಶ್ವದ ಬಾಹ್ಯ ಶಕ್ತಿಯು ಅಪೇಕ್ಷೆಯಿಲ್ಲದೆ. ಅಂತಸ್ಸತ್ವದಿಂದ ಉದಿಸಿದ ಅಂಕುರದ ಸ್ಥಿತಿಯೇ ಶುದ್ಧವಿದ್ಯಾತತ್ವವು. ಭೂಮಿ

ಯಲ್ಲಿ ಮೊಳಕೆ ದೋರಿದ ಅಂಕುರಕ್ಕೆ ಆ ಭೂಮಿಯ ಸತ್ವಾಪೇಕ್ಷೆ ಯಾಗಿ ಆರ್ದ್ರತ್ವವನ್ನು ಹೀರಿಕೊಂಡು ವರ್ಧಿಸುವ ಸ್ಥಿತಿಯೇ ಮಾಯಾ ತತ್ವವು. ಮುಂದೆ ನೆಲಬಿಟ್ಟು ಎದ್ದು ಮುಂದಾಗುವ ತನ್ನ ಸಸಿರೂಪವೇ ವಿದ್ಯಾತತ್ವವು. ಆಗ ಹಳದಿ ಬಿಳದು ವರ್ಣಗಳಿಂದ ತಿಳಿರಕ್ತವರ್ಣಕ್ಕೆ ಬಂದು ಹಸರು ವರ್ಣದ ನಾಟಿಗೆಯಾಗಿ, ಬೇರು ಜೊಡ್ಡು ಎಲೆ (ರಪದಿ) ಗಳುಳ್ಳ ಉದ್ಭಿಜವೇ ಕಲಾತತ್ವವು. ಮುಂದೆ ಬರಬರುತ್ತ ಅದು ನೆಲದೊ ಳಗಿನ ಸತ್ವನ್ನೂ ಬೈಲೊಗಿನ ಬಿಸಿಲು ಚಳಿಮಳೆಗಳನ್ನು ಅಪೇಕ್ಷಿಸುವದೇ ರಾಗತತ್ವವು. ಹೀಗೆಯೇ ದಿನದಿನಕ್ಕೆ ಬೆಳೆಯುತ್ತ ನಿಮತಾಕಾರವಾಗಿ ಬೆಳೆಯುವದನ್ನು ಕಟ್ಟುಮಾಡಿದ್ದೇ ನಿಯತಿತತ್ವವು. ಇಷ್ಟೆಲ್ಲ ಪೂರ್ಣಾ ವಸ್ಥೆಯನ್ನು ಹೊಂದಲಿಕ್ಕೆ ಬೇಕಾಗುವ ಅವಧಿಯೇ ಕಾಲತತ್ವವು.

ಚಿಚ್ಛಕ್ತಿ, ಪರಾಶಕ್ತಿ, ಆದಿಶಕ್ತಿ, ಇಚ್ಛಾಶಕ್ತಿ, ಜ್ಞಾನಶಕ್ತಿ, ಕ್ರಿಯಾ ಶಕ್ತಿಗಳಿಂದೊಡಗೂಡಿದ ಗೂರ್ಣಾನಂದನಾದ ಪರಶಿವನು, ದನ್ನ ಇಚ್ಛಾ ಶಕ್ತಿಯ ಪ್ರಾಬಿಲ್ಯದಿಂದ ಜ್ಞಾನಾನಂದನಾಗಿರುವ ಸರ್ವಜ್ಞತ್ವವೇ ಶಿವ ತತ್ವವು. ಜ್ಞಾನಶಕ್ತಿಯೊಳು ಕ್ರಿಯಾಶಕ್ತಿಯು ಸಹಕಾರಿಯಾಗಿ, ಸರ್ವಕರ್ತೃ ತ್ವವೇ ಶಕ್ತಿತತ್ವವು. ಸರ್ವಜ್ಞತ್ವ ಸರ್ವಕರ್ತೃತ್ವಗಳನ್ನು ಆವರಿಸಿ ಉಬ್ಬ ರಿಸುವದೇ ಸದಾಶಿವತತ್ವವು. ಸರ್ವ ಜಗತ್ತನ್ನು ಸರಿಯಾದ ಸಾಮರ್ಥ್ಯ ದಿಂದ ಅಂದರೆ ಇಚ್ಛಾಜ್ಞಾನ ಕ್ರಿಯಾಶಕ್ತಿಗಳ ಕೃತಿಯಲ್ಲಿ ತರುವ ತತ್ವವೇ ಈಶ್ವರ ತತ್ವವು. ಅಂತಸೃಷ್ಟಿ ಬಹಿಃಸೃಷ್ಟಿಗಳಲ್ಲಿ ಏಕಾಕಾರವಾಗಿರುವದೇ ಶುದ್ಧಾವಿದ್ಯಾತತ್ವವು. ಶುದ್ಧವಿದ್ಯಾತತ್ವವು. ಶುದ್ಧವಿದ್ಯೆಯಲ್ಲಿ ಭಾವಭೇ ದಗಳನ್ನುಂಟು ಮಾಡುವ ಶಕ್ತಿಯೇ ಮಾಯಾ ತತ್ವವು. ಮಯಯಾಶಕ್ತಿಯ ವಿವಿಧವಾದ ಕೃತ್ರಿಮ ರೂಪವೇ ಕಲಾತತ್ವವು. ಮಾಯಾ ಶಕ್ತಿಯ ಕಿಂಚಿಜ್ಞತ್ವಕ್ಕೆ ಕಾರಣವಾದ ತತ್ವವು ವಿದ್ಯಾತತ್ವವು. ಸರ್ವವಿದ್ಯೆಗಳಲ್ಲಿ ಅಭೀಷ್ಟವಾದ ತತ್ವವೇ ರಾಗತತ್ವವು. ಜ್ಞಾನಕ್ರಿಯಾಶಕ್ತಿಗಳ ವಿದ್ಯಾ ಕಲೆಗಳನ್ನು ವ್ಯಕ್ತೀಕರಿಸುವ ವರ್ತಮಾನ ಭೂತ ಭವಿಷ್ಯಗಳಾದ ಕಾಲ ವಿಚ್ಛೇದನ ರೂಪಾದ ಅವಕಾಶವೇ ಕಾಲತತ್ವವು. ಇಚ್ಛಾಜ್ಞಾನಕ್ರಿಯಾ ಶಕ್ತಿಗಳಿಂಡ ಕೂಡಿದ ಈ ಜಗತ್ತಿನ ನಿಯತಾಕಾರವೇ ನಿಯತಿತತ್ವವು.

ಬ್ರಹ್ಮಚಕ್ರದಲ್ಲಿರ್ಪ ಮೂಲಶಿವತತ್ವವೇ ಗುರುರೂಪಾಗಿ, ಆಜ್ಞಾ ಚಕ್ರದಲ್ಲಿರ್ಪ ಮೇಲೆ ಹೇಳಿದ ಹತ್ತು ವಿದ್ಯಾತತ್ವಗಳೇ ಲಿಂಗರೂಪವಾಗಿ

ಅನಾಹತ ಚಕ್ರದಲ್ಲಿರ್ಪ ಇಪ್ಪತ್ತೈದು ಆತ್ಮ ಶತಗಳೇ ಜಂಗಮರೂಪಾಗಿ ಅಂತು ೩೬ ತತಗಳಿಂದೊಡಗೂಡಿರುವದೀ ಶರೀರವು.

ಪಂಚವಿಂಶತಿ ತತ್ವಗಳಾದ ಆತ್ಮ ತತ್ವಗಳ ವಿವರಃ— ಆಕಾಶಾದಿ ಪಂಚಭೂತಗಳನ್ನು ಒಂದೊಂದರಲ್ಲಿ ಸಮಾನವಾಗಿ ಎರಡು ಭಾಗಮಾಡಿ ಪಂಚಭೂತಗಳ ಅರ್ಧರ್ಧಭಾಗ, ಒಂದು ಕಡೆಗೆ ಆಶ್ರಯವಾಗುವಂತೆ ಇಟ್ಟು, ಮಿಕ್ಕ ಅರ್ಧರ್ಧಭಾಗದಲ್ಲಿ ನಾಲ್ಕು ನಾಲ್ಕು ಭಾಗಮಾಡಿ ತಮ್ಮ ತಮ್ಮ ನಿಜಭಾಗದಲ್ಲಿ ಕೂಡಿಸದೆ, ಮಿಕ್ಕ ಭೂತಗಗಳ ನಿಜಭಾಗದಲ್ಲಿ ಕೂಡಿ ಸುತಿರಲಿಕ್ಕೆ ಇಪ್ಪತ್ತೈದು ತತ್ವಗಳು ಆಗುವವು. ಹೇಗೆಂದರೆ:— ಆಕಾಶದ ಅರ್ಧಭಾಗವೇ ಜ್ಞಾತೃವೆಂದಾಯಿತು. ಇದೇ ಜೀವಾತ್ಮ. ಈ ಆಕಾಶದ ಅಮುಖ್ಯಪಾದಾಂಶವು ವಾಯುವಿನ ಮುಖ್ಯ ಅರ್ಧಾಂಶದಲ್ಲಿ ಕೂಡಿ ಮನಸ್ಸಾಯಿತು. ಆಕಾಶದ ಅಮುಖ್ಯ ಪಾದಾಂಶವು ಅಗ್ನಿಯ ಮುಖ್ಯವಾದ ಅರ್ಧಾಂಶದಲ್ಲಿ ಕೂಡಿ ಬುದ್ಧಿಯಾಯಿತು. ಆಕಾಶದ ಅ ಮುಖ್ಯಪಾದಾಂಶವು, ಜಲದ ಮುಖ್ಯ ಅರ್ಧಾಂಶದಲ್ಲಿ ಕೂಡಿ ಚಿತ್ತವಾಯಿತು. ಆಕಾಶದ ಅ ಮುಖ್ಯ ಪಾದಾಂಶವು ಪೃಥ್ವಿಯ ಮುಖ್ಯ ಅರ್ಧಾಂಶದಲ್ಲಿ ಕೂಡಿ ಅಹಂಕಾರವಾಯಿತು. ಅಂತು ಜ್ಞಾತೃ, ಮನ, ಬುದ್ಧಿ, ಚಿತ್ತ, ಅಹಂಕಾರ ಈ ಐದು ಆಕಾಶ ಪಂಚೀಕರಣಗಳು.

ವಾಯುವಿನ ಅರ್ಧಾಂಶವೇ ವ್ಯಾನವು. ವಾಯುವಿನ ಅಮುಖ್ಯ ಪಾದಾಂಶವು ಆಕಾಶದ ಮುಖ್ಯವಾದ ಅರ್ಧಾಂಶದಲ್ಲಿ ಕೂಡಿ ಸಮಾನವಾಯಿತು. ವಾಯುವಿನ ಅಮುಖ್ಯ ಪಾದಾಂಶವು ಅಗ್ನಿಯ ಮುಖ್ಯ ಅರ್ಧಾಂಶದಲ್ಲಿ ಕೂಡಿ ಉದಾನವಾಯಿತು. ವಾಯುವಿನ ಅಮುಖ್ಯ ಪಾದಾಂಶವು ಜಲದ ಮುಖ್ಯ ಅರ್ಧಾಂಶದಲ್ಲಿ ಕೂಡಿ ಅಪಾನವಾಯಿತು. ವಾಯುವಿನ ಅಮುಖ್ಯಪಾದಾಂಶವು ಪೃಥ್ವಿಯ ಮುಖ್ಯ ಅರ್ಧಾಂಶದಲ್ಲಿ ಕೂಡಿ ಪ್ರಾಣವಾಯಿತು. ಈ ಪ್ರಾಣ, ಅಪಾನ, ಉದಾನ, ವ್ಯಾನ, ಸಮಾನ, ಈ ಐದು ವಾಯು ಪಂಚೀಕರಣಗಳು.

ಅಗ್ನಿಯ ಅರ್ಧಾಂಶವೇ ನೇತ್ರವು. ಅಗ್ನಿಯ ಅಮುಖ್ಯಪಾದಾಂಶವು ಆಕಾಶದ ಮುಖ್ಯವಾದ ಅರ್ಧಾಂಶದಲ್ಲಿ ಕೂಡಿ ಶ್ರೋತ್ರೇಂದ್ರಿಯವಾಯಿತು. ಅಗ್ನಿಯ ಅಮುಖ್ಯಪಾದಾಂಶವು ವಾಯುವಿನ ಮುಖ್ಯ ಅರ್ಧಾಂಶದಲ್ಲಿ ಕೂಡಿ ತ್ವಗಂದ್ರಿಯವಾಯಿತು. ಅಗ್ನಿಯ ಅಮುಖ್ಯಪಾದಾಂಶವು ಜಲದ

ಮುಖ್ಯಅರ್ಧಾಂಶದಲ್ಲಿ ಕೂಡಿ ಜಿಹ್ವೇಂದ್ರಿಯವಾಯಿತು. ಅಗ್ನಿಯ ಅಮುಖ್ಯಪಾದಾಂಶವು ಪೃಥ್ವಿಯ ಮುಖ್ಯ ಅರ್ಧಾಂಶದಲ್ಲಿ ಕೂಡಿ ಘ್ರಾಣೇಂದ್ರಿಯವಾಯಿತು. ಈ ಶ್ರೋತ್ರ, ತ್ವಕ್ಕು, ನೇತ್ರ, ಜಿಹ್ವೆ, ಘ್ರಾಣಗಳು ಪಂಚಜ್ಞಾನೇಂದ್ರಿಯಗಳು.

ಜಲದ ಅರ್ಧಭಾಗವೇ ರಸವಾಯಿತು. ಜಲದ ಅಮುಖ್ಯಪಾದಾಂಶವು ಆಕಾಶದ ಮುಖ್ಯವಾದ ಅರ್ಧಾಂಶದಲ್ಲಿ ಕೂಡಿ ಶಬ್ದ ವಿಷಯವಾಯಿತು. ಜಲದ ಅಮುಖ್ಯ ಪಾದಾಂಶವು ವಾಯುವಿನ ಮುಖ್ಯವಾದ ಅರ್ಧಾಂಶದಲ್ಲಿ ಕೂಡಿ ಸ್ಪರ್ಶವಿಷಯವಾಯಿತು. ಜಲದ ಅಮುಖ್ಯಪಾದಾಂಶವು ಅಗ್ನಿಯ ಮುಖ್ಯವಾದ ಅರ್ಧಾಂಶದಲ್ಲ ಕೂಡಿ ರೂಪವಿಷಯವಾಯಿತು. ಜಲದ ಅಮುಖ್ಯ ಪಾದಾಂಶವು ಪೃಥ್ವಿಯ ಮುಖ್ಯವಾದ ಅರ್ಧಾಂಶದಲ್ಲಿ ಕೂಡಿ ಗಂಧ ವಿಷಯವಾಯಿತು. ಈ ಪ್ರಕಾರ ವಿಷಯ ಪಂಚಕವು ಜಲದ ಪಂಚೀಕರಣದಿಂದಾಗಿ ಸರ್ವಜೀವಿಗಳಿಗೆ ಮೋಹಕತ್ವದಿ ಬಂಧಕಗಳಾಗಿರುವವು. ಅಂತು ಶಬ್ದ, ಸ್ಪರ್ಶ, ರೂಪು, ರಸ, ಗಂಧಗಳವು ವಿಷಯ ಪಂಚಕಗಳು.

ಪೃಥ್ವಿಯ ಅರ್ಧಾಂಶವೇ ಗುದ ಅದೇ ಪೃಥ್ವಿಯ ಅಮುಖ್ಯಪಾದಾಂಶವು. ಆಕಾಶದ ಮುಖ್ಯವಾದ ಅರ್ಧಾಂಶದಲ್ಲಿ ಕೂಡಿ ವಾಕ್ಕಾಯಿತು. ಅದೇ ಪೃಥ್ವಿಯ ಅಮುಖ್ಯಪಾದಾಂಶವು. ವಾಯುವಿನ ಮುಖ್ಯವಾದ ಅರ್ಧಾಂಶದಲ್ಲಿ ಕೂಡಿ ಪಾಣಿಯಾಯಿತು. ಅದೇ ಪೃಥ್ವಿಯ ಅಮುಖ್ಯ ಪಾದಾಂಶವು. ಅಗ್ನಿಯ ಮುಖ್ಯವಾದ ಅರ್ಧಾಂಶದಲ್ಲಿ ಕೂಡಿ ಪಾದವಾಯಿತು. ಅದೇ ಪೃಥ್ವಿಯ ಅಮುಖ್ಯಪಾದಾಂಶವು ಜಲದ ಮುಖ್ಯವಾದ ಅರ್ಧಾಂಶದಲ್ಲಿ ಕೂಡಿ ಗುಹ್ಯೇಂದ್ರಿಯವಾಯಿತು. ಈ ಪ್ರಕಾರ ವಾಕ್, ಪಾಣಿ, ಪಾದ, ಗುಹ್ಯ, ಗುದ, ಈ ಐದು ಪೃಥ್ವಿಯ ಪಂಚೀಕರಣವು.

"ಆತ್ಮ ತತ್ವ ಇಪ್ಪತ್ತೈದು. ವಿದ್ಯಾತತ್ವ ಹತ್ತು. ಶಿವತತ್ವ ಒಂದು, ಅದೆಂತೆಂದೊಡೆ:— ಭೂತಾದಿ ಪಂಚಕಂಗಳೈದು, ಶ್ರೋತ್ರಾದಿ ಜ್ಞಾನೇಂದ್ರಿಯಂಗಳೈದು, ಶಬ್ದಾದಿ ವಿಷಯಂಗಳೈದು, ವಾಗಾದಿ ಕರ್ಮೇಂದ್ರಿಯಂಗಳೈದು, ಮನವಾದಿ ಪಂಚಕಂಗಳೈದು, ಆತ್ಮ ತತ್ವ ಇಪ್ಪತ್ತೈದು ಕರ್ಮ ಸಾದಾಖ್ಯ, ಕರ್ತೃಸಾದಾಖ್ಯ, ಮೂರ್ತಿಸಾದಾಖ್ಯ, ಅಮೂರ್ತಿ ಸಾದಾಖ್ಯ, ಶಿವಸಾದಾಖ್ಯ, ನಿವೃತ್ತಿಕಲೆ, ಪ್ರತಿಷ್ಠಾಕಲೆ, ವಿದ್ಯಾಕಲೆ, ಶಾಂತ್ಯತೀತಕಲೆ; ಇಂತು ವಿದ್ಯಾತತ್ವಹತ್ತು, ಶಿವತತ್ವ ಒಂದು, ಇಂತು

ಮೂವತ್ತಾರು ತತ್ವಗಳೊಡನೆ ಶಿವತತ್ವವೇ ಪದ, ಆತ್ಮ ತತ್ವವೇ ತ್ವಂಪದ, ವಿದ್ಯಾತತ್ವವೇ ಅಸಿಪದ. ಅಕಾರದಲ್ಲಿತತ್‌ಪದ ಐಕ್ಯವಾಯಿತ್ತು. ಉಕಾರದಲ್ಲಿ ತ್ವಂಪದ ಐಕ್ಯವಾಯಿತು. ಮಕಾರದಲ್ಲಿ ಅಸಿಪದ ಐಕ್ಯ ವಾಯಿತ್ತು. ಮಕಾರ ಅಕಾರ ಉಕಾರ ಏಕಾರ್ಥವಾಗಿ, ಷಟ್‌ಸ್ಥಲ ಬ್ರಹ್ಮವೆಂಬ ಮಹಾಜ್ಯೋತಿರ್ಮಯ ಲಿಂಗವಾಯಿತ್ತು. ಆ ಷಟ್‌ಸ್ಥಲ ಜ್ಯೋತಿರ್ಮಯ ಬ್ರಹ್ಮವೆಂಬ ಲಿಂಗದಲ್ಲಿ ತ್ವಂಪದ ಅಸಿಪದವೇ ನಿಕ್ಷೇಪ ವಾಗಿಹುದು ನೋಡಾ, ಅಪ್ರಮಾಣ ಕೂಡಲಸಂಗಮದೇವಾ !!

ಆತ್ಮತತ್ವ ಇಪ್ಪತ್ತೈದು ತೂರ್ಯತತ್ವ, ವಿದ್ಯಾತತ್ವ, ಹತ್ತು ಭಾವ ತತ್ವ, ಶಿವತತ್ವ ಒಂದು ಕೂಡಿ ಮೂವತ್ತಾರಾದವು. ಈ ಪ್ರಕಾರದಿಂದ ಅವೇ ತತ್ ಶಿವತತ್ವ ಒಂದು; ತ್ವಂ ಆತ್ಮತತ್ವ ಇಪ್ಪತ್ತೈದು, ಅಸಿಯ ಭಾವವು ವಿದ್ಯಾತತ್ವ ಹತ್ತು, ಭಕ್ತಿಸ್ವರೂಪು, ಓಂಕಾರ ಪ್ರಣವದಿಂದ ಬಿಟ್ಟಂಥ ಅಕ್ಷರತ್ರಯಂಗಳಾದ ಅ. ಉ, ಮಾಕ್ಷರಂಗಳು ಇಷ್ಟಲಿಂಗದ ತ್ರಿವಿಧ ಸ್ಥಾನಂಗಳಲ್ಲಿ ವಿಧಾಯವಾಗಿರ್ಪವು. ಅದು ಹೇಗೆಂದಡೆ:— ಅನಂತ ತತ್ವ ಭುವನ ಬ್ರಹ್ಮಾಂಡಾದಿಗಳೆಲ್ಲವನು ತೂರ್ಯತತ್ವ ಒಳಕೊಂಡಿರ್ಪುದು. ಆ ತತ್ವಂಗಳನೇ ಮೂವತ್ತಾರು ತತ್ವಂಗಳೊಳಕೊಂಡಿರ್ಪುವು ಆ ಮೂವತ್ತಾರು ತತ್ವಂಗಳನೇ ಪದತ್ರಯಂಗಳೊಳಕೊಂಡಿರ್ಪುವು. ಆ ಪದತ್ರಯಂಗಳೇ ಅ. ಉ. ಮಾಕ್ಷರತ್ರಯಂಗಳೊಳಕೊಂಡಿರ್ಪುವು. ಆ ಅ. ಉ. ಮಾಕ್ಷರತ್ರಯಂಗಳೇ ಆ ಇಷ್ಟಲಿಂಗದಲ್ಲಿ ತ್ರಿವಿಧ ಸ್ಥಾನದಲ್ಲಿ ವಿಧಾಯಕವಾದ ಅಕ್ಷರವು ದೃಕ್ಕಿನಲ್ಲಿ ತೋರುತಿರ್ಪುದು. ಅಕಾರವೇ ಶಿವತತ್ವ ಸ್ವರೂಪಾಗಿ ಉಕಾರವೇ ಆತ್ಮತತ್ವ, ಇಪ್ಪತ್ತೈದರ ಸ್ವರೂಪಾಗಿ, ಮಕಾರವೇ ವಿದ್ಯಾತತ್ವ ಹತ್ತರ ಸ್ವರೂಪಾಗಿ ಅಂತು ಶಿವತತ್ವ ಸ್ವರೂಪಾಗಿ, ತೂರ್ಯತತ್ವ ಸ್ವರೂಪಾಗಿ, ಭಾವ ತತ್ವ ಸ್ವರೂಪಾಗಿ ತತ್‌ಪದ ಸ್ವರೂಪಾಗಿ, ತ್ವಂಪದ ಸ್ವರೂಪಾಗಿ ಅಸಿಪದ ಸ್ವರೂಪಾಗಿ, ಅ. ಉ. ಮಾಕ್ಷರ ತ್ರಯ ಸ್ವರೂಪಾಗಿ, ಬಸವಾಕ್ಷರತ್ರಯ ಸ್ವರೂಪಾಗಿ, ಅಂಗತ್ರಯ ಸ್ವರೂಪವಾಗಿ, ಲಿಂಗತ್ರಯ ಸ್ವರೂಪವಾಗಿ, ಭಕ್ತಿತ್ರಯ ಸ್ವರೂಪವಾಗಿ, ಗುರುತ್ರಯ ಸ್ವರೂಪವಾಗಿ, ಲಿಂಗತ್ರಯ ಸ್ವರೂಪಾಗಿ, ಜಂಗಮತ್ರಯ ಸ್ವರೂಪವಾಗಿ, ಪ್ರಸಾದತ್ರಯ ಸ್ವರೂಪವಾಗಿ ಪಾದೋದಕತ್ರಯ ಸ್ವರೂಪವಾಗಿ ವಿಭೂತಿತ್ರಯ ಸ್ವರೂಪಾಗಿ, ರುದ್ರಾಕ್ಷಿತ್ರಯ ಸ್ವರೂಪವಾಗಿ, ಕ್ರಿಯಾ ಜ್ಞಾನ ಭಾವಾಚರಣೆಯ ಸ್ವರೂಪಾಗಿ, ಮಾರ್ಗಕ್ರಿಯಾ ತ್ರಿವಿಧ ಸ್ವರೂ

ಪವಾಗಿ, ಮೂರಿದ ಕ್ರಿಯಾ ತ್ರಿವಿಧ ಸ್ವರೂಪವಾಗಿ ಸರ್ವಾಚಾರ ಸಂಪತ್ತಿ ನಾಚರಣೆ ಸ್ವರೂಪವಾಗಿ, ದೃಕ್ಕಿನಲ್ಲಿ ತೋರುತಿರ್ಪುದು. ಈ ಪ್ರಕಾರದಲ್ಲಿ ಎಲ್ಲಕ್ಕೂ ತಾನಾಶ್ರಯವಾಗಿ, ನಿರೂಪಮಲಿಂಗವೇದ್ಯ ಶರಣನಲ್ಲಿ ಉಪ ಮಿಸಬಾರದ ಮಹಾಲಿಂಗದಲ್ಲಿ ಕೂಡಿದಂಥ ಶಿವಶರಣನಲ್ಲಿ ಪರಿಪೂರ್ಣ ತ್ವವನೈದಿದ ಮಹಾಘನ ಲಿಂಗವು ತನಗಾಶ್ರಯ ರಹಿತವಾಗಿ ಎಲ್ಲ ತತ್ವಂ ಗಳಿಗೆ ತಾನೇ ಆಶ್ರಯವಾಗಿ, ತನ್ನಲ್ಲಿ ಗರ್ಭೀಕೃತವಾಗಿರ್ದ ತತ್ವನಿ ವೆಂತೆದೊಡೆ:— ತತ್ವಮೂರು ತೆರನಾಗಿಹುದು. ಅದಕ್ಕೆ ವಿವರ:— ಆತ್ಮತತ್ವ ವಿದ್ಯಾತತ್ವ, ಶಿವತತ್ವ, ಅಂತು ತತ್ವಮೂರು ತೆರನು ಪದಕ್ಕೆ ವಿವರ:— ಪೃಥ್ವಿ, ಅಪ್, ತೇಜ, ವಾಯು, ಆಕಾಶ. ಎಂಬ ಸ್ಥೂಲಚಾ ತಿಕ್ಯ ಐದು, ಶ್ರೋತ್ರಾದಿ ಜ್ಞಾನೇಂದ್ರಿಯಗಳೈದು ವಾಗಾದಿ ಕರ್ಮೇಂ ದ್ರಿಯಗಳೈದು, ಪ್ರಾಣಾದಿ ವಾಯುಗಳೈದು, ಅಂತಃಕರಣ ಚತುಷ್ಟಂಗಳು ನಾಲ್ಕು, ಜೀವನೊಂದು, ಅಂತು ಆತ್ಮತತ್ವ ಇಪ್ಪತ್ತೈದು.

ಇಪ್ಪರ ಮೇಲೆ ವಿದ್ಯಾತತ್ವ ಹತ್ತು ತೆರನು. ತೂರ್ಯತತ್ವವು ದಶವಿಧ ಪ್ರಕಾರವು ಅದಕ್ಕೆ ವಿವರಾ. ಶಾಂತ್ಯಾತೀತೆ, ಶಾಂತ್ಯಾತೀತಕಲಾ ಪರ್ಯಾಯನುಳ್ಳ ಪರಾಶಕ್ತಿ. ಶಾಂತಿ, ಶಾಂತಿಕಲಾಪರ್ಯಾಯನುಳ್ಳ ಆದಿಶಕ್ತಿ. ವಿದ್ಯಾ, ವಿದ್ಯಾಕಲಾಪರ್ಯಾಯನುಳ್ಳ ಇಚ್ಛಾಶಕ್ತಿ. ಪ್ರತಿಷ್ಠೆ ಪ್ರತಿಷ್ಠಾಕಲಾಪರ್ಯಾಯನುಳ್ಳ ಜ್ಞಾನಶಕ್ತಿ, ನಿವೃತ್ತಿ. ನಿವೃತ್ತಿ ಕಲಾ ಪರ್ಯಾಯನುಳ್ಳ ಕ್ರಿಯಾಶಕ್ತಿ. ಇ ಐದು ಪಂಚವಿಧವು.

ಶಿವಸಾದಾಖ್ಯ, ಶಿವಸಾದಾಖ್ಯ ಸ್ವರೂಪವಾದ ಪ್ರಸಾದಲಿಂಗ. ಅಮೂರ್ತಿಸಾದಾಖ್ಯ, ಅಮೂರ್ತಿಸಾದಾಖ್ಯ ಸ್ವರೂಪವಾದ ಜಂಗಮ ಲಿಂಗವು. ಮೂರ್ತಿಸಾದಾಖ್ಯ, ಮೂರ್ತಿಸಾದಾಖ್ಯ ಸ್ವರೂಪವಾದ ಶಿವ ಲಿಂಗವು. ಕರ್ತೃಸಾದಾಖ್ಯ, ಕರ್ತೃಸಾದಾಖ್ಯ ಸ್ವರೂಪವಾದ ಗುರುಲಿಂ ಗವು. ಕರ್ಮಸಾದಾಖ್ಯ, ಕರ್ಮಸಾದಾಖ್ಯ ಸ್ವರೂಪವಾದ ಆಚಾರ ಲಿಂಗವು. ಎಂದು ಹೇಳಿಸುವ ಸಾದಾಖ್ಯಲಿಂಗಗಳ ಪಂಚಕವು. ಅಂತು ಆದಾಗಿ ವಿದ್ಯಾತತ್ವ ಹತ್ತು ತೆರನು. ತೂರ್ಯತತ್ವವು ಹತ್ತುಪ್ರಕಾರವು ಅಂತು ದ್ವಿತೀಯ ತತ್ವ ೩೫. ಇಂತಿವೆಲ್ಲಿವೆಕ್ಕೆಯು ಉತ್ತರ ತತ್ವವಾಗಿ ೩೫ ತತ್ವಂಗಳಿಗೆ ಆಶ್ರಯವಾಗಿರುತ್ತಿವಿಹ ಶಿವತತ್ವ ೧ ನಿಃಕಲ ಪರಶಿವತತ್ವವು ಏಕವು. ಅಂತು ತತ್ವ ೩೬ ತೆರನು. ಆತ್ಮತತ್ವ ೨೫. ವಿದ್ಯಾತತ್ವ ೧೦ ಶಿವತತ್ವ ೧ ಈ ಪ್ರಕಾರವೇ ತತ್ವಮಸ್ಯಾದಿ ವ ಕ್ಯಾರ್ಥವು ಕಾಣವಾಯಿತ್ತು

ಅದು ಹೇಗೆಂದಡೆ, ತತ್ ಪದವೆಂದು, ತ್ವಂ ಪದವೆಂದು, ಅಸಿಪದವೆಂದು ಅಂಗಲಿಂಗ ಸಂಗವೆಂದು, ಜ್ಞಾತೃ, ಜ್ಞಾನ, ಜ್ಞೇಯವೆಂದು, ಜೀವ ಪರ ರೈಕ್ಯರೆಂದು ಮನ ಮನನ ಮನನೀಯವೆಂದು ದ್ವೈತಾದ್ವೈತ ಯೋಗಮಾರ್ಗ ವೆಂದು ೩ ತೆರನು. ಆ ಪದತ್ರಯದಲ್ಲಿ ತತ್ ಪದವೆಂಬದರ ಅರ್ಥವೇನಯ್ಯಾ ಎಂದಡೆ ಭಾವ ನಾಮ ಒಂದಾಗಿರ್ದ ಶಿವತತ್ವವು. ತ್ವಂ ಪದದ ಅರ್ಥ ವೇನಯ್ಯಾ ಎಂದೊಡೆ, ಶಿವತತ್ವವೆಂಬಭಿಧಾನದೊಡನೆ ಏಕವಾಗಿರ್ದ ೨೫ ತೆರನಾಗುತಿರ್ದ ಆತ್ಮತತ್ವವು. ಅಸಿಪದ ಎಂಬುದರ ಅರ್ಥವೇನಯ್ಯಾ ಎಂದೊಡೆ ತೂರ್ಯನಾಮ ಒಂದಾಗಿರ್ದ ಶಿವತತ್ವಜ್ಞಾನವೆಂಬ ಭಿಧಾನ ದೊಡನೆ ಏಕವಾಗಿರ್ದ ಹತ್ತು ತೆರನಾಗುತಿರ್ದ ವಿದ್ಯಾತತ್ವವು. ಈ ಪದ ತ್ರಯದ ಏಕಾರ್ಥವು.

ಆ ಶಿವತತ್ವದಲ್ಲಿ ತೋರಿದಾತ್ಮತತ್ವವು ೨೫. ಆ ಶಿವತತ್ವದ ಪ್ರಕಾಶವು ವಿದ್ಯಾತತ್ವದ ಬಲದಿಂದ ಆ ಶಿವಪದ ತಾನೇ ಆದಿತ್ತಾಗಿ, ಆ ನಿಃಕಲ ಪರಶಿವಪದವು ಸ್ವಯವೇಆಯಿತ್ತಾಗಿ ಅದಕ್ಕೆ ಸಾಕ್ಷಿಯಹ ವಿದ್ಯೆ ಎಂಬ ಶಿವಪದದ ಘನ ದೃಕ್ಕು ಅನುಮಿಷ ನಿರೀಕ್ಷಣೆಯಾದಲ್ಲಿ ತೋರುತ್ತಿಹು ದೆಂದು ಶಿವತತ್ವದಿಂದಾದ ಆತ್ಮತತ್ವ ೨೫. ಆ ಶಿವತತ್ವದ ಪ್ರಕಾಶದಿಂದಾದ ವಿದ್ಯಾ ತತ್ವ ೧೦ ಅದರ ಬಲದಿಂದ ಚಿತ್ತಿ ಅಂಗ ಚಿದ್ಘನ ಲಿಂಗವೇ ಪ್ರಾಣ ವಾಗಿ ಕಾಣಿಸುತ್ತಿಹುದೆಂದು ಚನ್ನಬಸವೇಶ್ವರ ದೇವರ ನಿರೂಪವಂ ಕೊಡುತ್ತಲಿರ್ದರು.

ಒಟ್ಟಿನಲ್ಲಿ ೩೬ ತತ್ವಗಳ ತಳಹದಿಯ ಮೇಲೆ ಎತ್ತರವಾಗಿ ನಿಂತ ಒಂಬತ್ತು ನೆಲೆಗಳ ವೀರಶೈವ ನವಲಿಂಗ ಭರಿತವಾದ ತೇರಿನ ತೇಜದ ತಿಳಲನ್ನು ತಿಳಿಯಲ್ಕು ತತ್ವಗಳೇ ಮುಖ್ಯವು. ಆ ಒಂಬತ್ತು ನೆಲೆಗಳೊ ಳಗೆ ನೆಲಸಿದ ಅಂಗತ್ರಯ, ಲಿಂಗತ್ರಯಗಳನ್ನೂ ಪದತ್ರಯಗಳನ್ನೂ, ಅಕ್ಷರತ್ರಯಗಳನ್ನೂ, ಗುರುತ್ರಯಗಳನ್ನೂ, ಜಂಗಮತ್ರಯಗಳನ್ನೂ ಭಕ್ತಿತ್ರಯಗಳನ್ನೂ, ಆ ತೇರಿನ ಸೂರ್ಯನೋಪಾದಿಯಲ್ಲಿ ಪ್ರಕಾಶಿಸುವ ಮೂಲಪ್ರಣವ ಸ್ವರೂಪವಾದ ಕಲಶವನ್ನೂ ಅರಿದು ಆಚರಿಸುವದು ಪ್ರತಿ ಯೊಬ್ಬ ಲಿಂಗಾಂಗಿಯ ಕರ್ತವ್ಯವಾಗಿದೆ. ಹಾಗು ಬ್ರಹ್ಮಾಂಡ ಪಿಂಡಾಂಡ ಗಳಲ್ಲಿ ಅಡಕವಾದ ಆತ್ಮತತ್ವ, ವಿದ್ಯಾತತ್ವ, ಶಿವತತ್ವಗಳನ್ನರಿದು ಆಚರಿಸಿ ಅನುಭಾವಗೊಂಡ ಶರಣನು ಪಿಂಡಜ್ಞಾನ ಸ್ಥಲದಲ್ಲಿ ನಿಂದ ನಿಲುಕಡೆಯ ಪದವನ್ನರಿಯುವದು ಅತಿಮಹತ್ವವು.

**ಪದ—ರಾಗ ಜಂಝೂಟಿ**

ಸ್ವಾನುಭಾವದುದಯದಿಂದೆ ಜ್ಞಾನ ನೇತ್ರ ಮುಸುಕ ತೆಗೆದು ತಾನು ತನ್ನ ನಿಜವ ನೋಡಿ ತಿಳಿದ ಮಹಿಮನು ||ಪಲ್ಲವಿ||

ಚಿತ್ತಬಿಂದು ಪ್ರಕೃತಿ ಹಿಂಗಿ ನಿತ್ಯಾನಿತ್ಯ ವಿವೇಕದಿಂದ ಲತ್ತ ನಿಲುಕಿ ನೋಡಿ ಕಂಡ ಸಕಲದಳಿವನು || ತತ್ವದಲಿ ವಿವೇಕಿಯಾಗ ನಿಶ್ಚಲದ ನಿಜಾಂತರಂಗ ತತ್ವಚಯುವನೈದಿ ಸುಖದ ಮುಖವನ ರಿದನು || ೧ ||

ಜ್ಞಾನ ಮುಕುರದೊಳಗೆ ನೋಡಿ ತಾನು ತನ್ನ ಕುರುಹವಿಡಿದು. ತಾನು ತನಗೆ ಅನ್ಯವಿಲ್ಲೆಂಬ ಭೇದವಾ || ತಾನೆಯರಿದು ಪಾಯೆ ಮಿಥ್ಯವಂ ನಿವೃತ್ತಿಮಾಡಿ ಶಿವಧ್ಯಾನದಲ್ಲಿ ಮನವನಿತ್ತ ಸೌಖ್ಯಶರಣನು || ೨||

ಹಿಂದ ಹರಿದು ಹರಿದ ಹಿಂದನೊಂದು ಮಾಡಿ ಬೆರಸದಾ ನಂದ ದಿಂದರೈದಿ ಮದೋ ಭಾವಿಯಾಗಿ || ಬಿಂದ ನಾದ ಕಲತ್ರಯದ ಸಂದ ನಳಿದು ಚಿತ್ ಸ್ವರೂಪ ಬಿಂದ-ವಿನೊಳು ನಿಂದು ಮೆರೆದ ಸೌಖ್ಯ ಶರಣನು || ೩ ||

ಶಕ್ತಿಯೊಳು ಶಿವಾತ್ಮವಡಗಿ ಶಕ್ತಿರಹಿತನೆಂಬ ಬೆಡಗ, ಶಕ್ತಿಮುಖ ದೊಳರಿದು ಶಕ್ತಿ ಸಂಗಭಂಗವಿ || ಶಕ್ತಿಯಿಂದ ಗೆಲಿದು ಪರಮ ಶಕ್ತಿ ಸುಖವ ಕಂಡ ಸುಖಿಯ ಚಿತ್ತದರಿವು ಜಗವನುಂಗಿಯುಗುಳದಿರ್ದದು ||೪||

ಆದಿ ಮಧ್ಯ ಅಂತ್ಯವೆಂಬ ಭೇದವಾಕ್ಯದೊಳಗೆ ಸುಗದ, ನಾದಿಸಿದ್ಧ ವಾಗಿ ತನ್ನ ತಾನೆ ಕಂಡಯ || ಭೇದ್ಯಪದವನೈದಿ ಕೂಡಲಚನ್ನಸಂಗ ನಲ್ಲಿ ಭೇದವಿಲ್ಲದಿಪ್ಪ ದಿವ್ಯಜ್ಞಾನಿ ನೋಡಾ || ೫ ||

ಏಕೋತ್ತರ ಶತಸ್ಥಲ ಪುಟ ೩.

**ಕಂದಃ—** ಮತ ಮರ್ಮಂಗಳನರಿಯುತ,
ಮತಿಮನ ಹಂಕೃತಿ ಸುಚಿತ್ತ ಸುಜ್ಞಾನಗಳಿಂ||
ಸ್ಮೃತಿಯೊಳ್ ಸರ್ವನೆ ತರುತಂ|
ಧೃತಿಗುಂದದೆ ಧರ್ಮ ಕರ್ಮ ಮಾಳ್ಪನೆ ಮನುಜಂ ||೧||
ನೆತ್ತಿಯೊಳೊತ್ತಿಹ ಪರಶಿವ,
ತತ್ವಂ ನೇಣಾಜ್ಞೆಯೊಳಿಹ ವಿದ್ಯಾತತ್ವಂ||

ಪತ್ತುಂ ಹೃದಯ ದೊಳಿರುವಿ
ಪ್ಪತ್ತೈದು ಸಹ ಶಿವತತ್ವ ಮೂವತ್ತಾರುಂ ||೨||
ದಶವಿಧನಾದಂ ಕಲೆಸೋ|
ಡಶರೂಪಿಂ ಬಿಂದು ಹಲವು ವಿಧವಾಗಿರ್ಕುಂ||
ವಸುಧಾಧೀಶನ ನೆನಹಿಂ|
ಸೂಸುತ್ತಿರ್ಪವು ಷಡಧ್ವ ಸಂಧ್ರುವದಿಂದಂ ||೩||
ಉಪ್ಪರದೊಳ್ ಪರಿಶೋಭಿಪ |
ಮುಪ್ಪುರ ಹರನಂ ಹಳಚದ ಚಿದ್ದೃಷ್ಟಿಗಳಿಂ||
ತಪ್ಪದೆ ನೋಡುತ್ತಿರುತಿರೆ
ಯೊಪ್ಪುವ ಲಿಂಗಾಂಗ ಸಾಮರಸ್ಯದ ಸೌಖ್ಯಂ ||೪||
ಶಿವತತ್ವಂಗಳ ತಿಳಿಯುತೆ|
ಭವ ಪಾಶಂಗಳ ಹರಿಯುತ ಸತ್ಕ್ರಿಯೆಯಿಂದಂ||
ಶಿವಸುಜ್ಞಾನದೊಳಿರುತಂ|
ಶಿವಶರಣರ ಪಾದಪಿಡಿದು ನಿಜಸುಖ ಪಡೆಯಯ್ಯ ||೫||
ನಿಃಕಲವೇ ನಿಜತತ್ವಂ|
ನಿಃಕಲವೇ ನಿಜನಿವಾಸ ಶರಣಸ್ಥಲಕಂ||
ನಿಃಕಲವೇ ಶಿವಯೋಗಂ|
ನಿಃಕಲದೊಳ್ ನಿಂದಗಲದ ಭಕ್ತಂ ಮುಕ್ತಂ ||೬||

ವಚನ:— ಕಾಮದ ಕಾದಾಟ, ಕ್ರೋಧದ ಕಡಿದಾಟ, ಲೋಭದ ಎಳೆದಾಟ, ಮೋಹದ ಮುದ್ದಾಟ, ಮದದ ಮಬ್ಬಾಟ, ಮತ್ಸರದ ಮುಂದಾಟಗಳ ಕೋಟಲೆಯು ದಾಟಿಸಿ ದಯಾಘನನ ದೃಷ್ಟಿಯೊಳು ಬಿಟ್ಟು ಬಿಡಯ್ಯ ಎನ್ನ ಸಿದ್ಧೇಶ್ವರಾ ||೧||

ಪರಬ್ರಹ್ಮದ ಪರ್ಯಾಯ ನಾಮದ ಮಹಾಲಿಂಗ, ವಿಜ್ಞಾನ ಬ್ರಹ್ಮದ ಪ್ರಸಾದಲಿಂಗ, ಆನಂದ ಬ್ರಹ್ಮದ ಜಂಗಮಲಿಂಗ, ಕಲಾ ಬ್ರಹ್ಮದ ಶಿವಲಿಂಗ, ಪಿಂಡ ಬ್ರಹ್ಮದ ಗುರುಲಿಂಗ, ಮೂರ್ತಿ ಬ್ರಹ್ಮದ ಆಚಾರ ಲಿಂಗಗಳಾದ ವೇದಾಂತವನೇ ಸಿದ್ಧಾಂತಗೊಳಿಸಿದ ನಮ್ಮ ವೀರಶೈವ ಷಟ್ ಸ್ಥಲಬ್ರಹ್ಮಗಳ ನಿಲಯದೊಳು ಇಳಿಸಿ ಉಳಿಸಯ್ಯ ಎನ್ನ ಸಿದ್ಧೇಶ್ವರಾ ||೨||

ವರ್ಣಾಧ್ವಗಳ ವರ್ತನ, ಮಂತ್ರಾಧ್ವಗಳ ಮೋಹನ, ಪದಾಧ್ವಗಳ ಪ್ರವರ್ತನ, ತತ್ವಾಧ್ವಗಳ ಬಿತ್ತರ, ಕಲಾಧ್ವಗಳ ಕೃತಿ, ಭುವನಾಧ್ವಗಳ ಬಳಿಕೆಯ ಒಳವಿನ ಸುಳುವಿಡಿದು, ಸಾಗುವ ಶಕ್ತಿ ಭಕ್ತಿಗಳನಿತ್ತು ಸಲಹಯ್ಯಾ ಎನ್ನ ಸಿದ್ಧೇಶ್ವರಾ ॥೩॥

ಶಿವತತ್ವದ ನಾದದೊಳು ಅದುರಿ, ಕಲೆಯೊಳು ಚದುರಿ, ಬಿಂದುವಿನೊಳು ಉದುರಿ ಸದಾಶಿವನೊಳು ನಿಧಿಗೊಂಡು ನಿಂದ ಸತ್ಪ್ರಕಾಶಿತ ಪಂಚಸಾದಾಖ್ಯ. ಆ ಸದಾಶಿವನ ಪರಾಶಕ್ತಿಯು ಚಿತ್ಕಲಾ ಪಂಚಕಳಾದ ಶಿವವಿದ್ಯಾತತ್ವಗಳ ಬಿತ್ತರಿಪ ಷಡಧ್ವಗಳಿಗಿಂಬಾದ ಸದ್ಗುರುವಿನ ಪಾದ ಪ್ರಣಮದ ಅರುಹಿನೊಳಿರೆಂದ ನಮ್ಮ ಸಿದ್ಧೇಶ್ವರಾ ॥೪॥

ನಿಗಮಾಗಮಂಗಳ ನಿಲವಿನ, ಗುರುಲಿಂಪ ಜಂಗಮಗಳ ಒಲವಿನ ಶಿವಶರಣಗಣಂಗಳ ಆಚರಣೆಯ ಬಲವಿನ, ೬೬ಕೋಟಿ ಕರಣಂಗಳ ಗೆಲವಿನ, ಷಡಂಗ ಷಡುಲಿಂಗ ತತ್ವಗಳ ಗೊತ್ತಿನೊಳಿರೆಂದ ನಮ್ಮ ಸಿದ್ಧೇಶ್ವರಾ ॥೫॥

ಪಾರಮಾರ್ಥಿಕ ಪ್ರಕಾಶದೊಳು ಷಣ್ಮಂತ್ರ ಮೂರ್ತಿಯು ಕ್ರಿಯಾಪಾದದೊಳು ಕಂಗೊಳಿಸಿ, ಚರ್ಯಾಪಾದದೊಳು ಪ್ರಚುರಗೊಂಡು. ಯೋಗಪಾದದೊಳು ಉಜ್ವಲಿಸಿ, ಜ್ಞಾನಪಾದದೊಳು ಪ್ರಜ್ವಲಿಸಿ, ಸಾದಾಖ್ಯಗಳ ಸಾಲಿನ ಮೇಲಂತಿಸ್ತಿನ ಕಲಾಮಂದಿರದ ಉಲುವಿನೊಳು ಓಲಾಡುವ ಕೋಲಬದೋರಿ ಸಲಹಯ್ಯ ಎನ್ನ ಸಿದ್ಧೇಶ್ವರಾ॥೬॥

## ಶ್ರೀಗುರು ಸ್ತೋತ್ರಾಷ್ಟಕ



ತುಂಗ ಷಡಧ್ವಸ್ತೋಮಾ।
ಸಂಗಷಡಕ್ಷರ ಸುಮಂತ್ರ ಸನ್ನಿಧಿ ಧಾಮಾ॥
ಲಿಂಗಾರ್ಪಿತ ನಿಸ್ಸೀಮಾ।
ಜಂಗಮ ಪುಂಗಮ ನಿರಂಗ ನಿರುಪಮ ನಾಮಾ ॥೧॥

ಕ್ರಿಯೆಯೊಳ್ ಬಂಧುರ ಭಾವಾ।
ಜಯೆಯೊಳ್ ಸುಜ್ಞಾನ ಸಾರ ಸುವೀರಶೈವಾ॥

ನಯನೊಳ್ ಶಂಕರ ಸೇವಾ।
ಭಯುಯೊಳ್ ಬಂದಿಹ ಬಕುಳರ ಭವಹರದೇವಾ ॥೨॥

ದುರಿತ ಗುಣಹರಣ ಶಸ್ತ್ರಾ।
ಚರಿಪ ಕರಣಕೋಟಿ ಮೀಟಿ ಸಾಟಿಪ ಶಾಸ್ತ್ರಾ॥
ಹರಿಯದ ಮಮಕಾರಾಸ್ತ್ರಾ।
ಜರೆ ಮರಣ ಮುರಿವ ಸುಶಾಂತಿ ಸದನದ ಮಂತ್ರಾ ॥೩॥

ವಿದ್ಯಾ ವಿಭೂಷಿತಾಂಗಾ।
ಸದ್ಯೋಜಾತಾದಿ ಪಂಚಮುಖ ಮುಖ್ಯಾಂಗಾ॥
ಚಿದ್ಯೋವಾಲಯ ಸಂಗಾ।
ಹೃದ್ಯಂಗವ ಸಾವರಿಸುವ ಶುದ್ಧಶಿವಾಂಗಾ ॥೪॥

ಉಡು ತೊಡು ಕಲಿಸಿದ ಗುರುವೇ।
ಮಡಿ ಮೈಲಿಗೆ ತಾರತಮ್ಯ ತೋರಿದ ಗುರುವೇ॥
ನಡೆನುಡಿ ಕಲಿಸಿದ ಗುರುವೇ।
ನಡೆನುಡಿ ಗೂಡಿದ ಶಿವಪಥ ತೋರಿದ ಗುರುವೇ ॥೫॥

ಸಜನ್ಮ ಸಂಗದೊಳಿರಿಸ್ಯೈ।
ಮಜ್ಜನ ಮಾಡಿ ಶಿವಪೂಜೆ ಸೊಗಸಿನೊಳಿರಿಸ್ಯೈ॥
ಸಜ್ಜಿತ ಪ್ರಸಾದ ಪಿಡಿಸ್ಯೈ।
ಮಜ್ಜನಕ ಗುರುಪ್ರಸಾದ ಶೇಷದಿ ತಣಿಸ್ಯೈ ॥೬॥

ಭಕ್ತರ ಭಾಗ್ಯದ ನಿಧಿಯೇ।
ಯುಕ್ತರ ಸಾಯುಜ್ಯಪದದ ಚಿಂತಾಮಣಿಯೇ॥
ಸೂಕ್ತರ ಸುಂದರ ಮಣಿಯೇ॥
ಭೋಕ್ತರ ಹಸ್ತಪ್ರಸಾದ ಪಸರಿಪ ಖಣಿಯೇ ॥೭॥

ಭೃತ್ಯಾಚಾರದ ಬಲವಿನ।
ನಿತ್ಯಾಚಾರದ ನಿಲವಿನ ನಿಜಭಕ್ತಾಂಗ॥
ಪ್ರತ್ಯಂಗಗಳಂ ಪಸರಿಪ।
ಸ್ತುತ್ಯಾಶೀರ್ವಾದವಿತ್ತು ಪೊರೆಯೈ ಗುರುವೇ ॥೮॥

———

# ಶೂನ್ಯ ಸಂಪಾದನೆಯ ರಹಸ್ಯ

## (ವೀರಶೈವ ಧರ್ಮದ ಬಗ್ಗೆ ಅಧಿಕೃತ ಗ್ರಂಥ)



ಈಚೆಗೆ ವಚನಶಾಸ್ತ್ರದ ಪ್ರಚಾರವು ನಮ್ಮ ನಾಡಿನಲ್ಲಿ ಹೆಚ್ಚಾಗುತ್ತ ನಡೆದಿದೆ. ಇದು ಬಹು ಸಮಾಧಾನಕರವಾದದ್ದು. ಈ ಶಾಸ್ತ್ರದ ವಿಷಯವಾಗಿ ಪರಮತೀಯರು ಕೂಡ ಈಗ ಆದರಭಾವವನ್ನು ತೋರಿಸಹತ್ತಿದ್ದಾರೆ. . ದಿವಂಗತ ಶ್ರೀನಿವಾಸಮೂರ್ತಿಗಳು, ಬಿಹಾರದ ಈಗಿನ ರಾಜಪ್ರಮುಖರಾದ ಶ್ರೀ ರಂಗರಾವ ದಿವಾಕರ ಶ್ರೀ. ಅ. ನ. ಕೃಷ್ಣರಾವ. ಈ ಮೊದಲಾದ ಮಹನೀಯರು ಈ ವಾಙ್ಮಯದ ವಿಷಯವಾಗಿ ಮಹತ್ವದ ಗ್ರಂಥಗಳನ್ನು ಇಷ್ಟರಲ್ಲಿಯೇ ಬರೆದಿದ್ದಾರೆ. ಇದರಂತೆಯೇ ಬಹುಜನ ವೀರಶೈವರೂ ಕೂಡ ಈ ವಾಙ್ಮಯದ ಬಗ್ಗೆ ವಿಮರ್ಶೆಗಳನ್ನೂ ಗ್ರಂಥಗಳನ್ನೂ ಬರೆದಿದ್ದಾರೆ. ಆದರೆ ಈ ಗ್ರಂಥಗಳಲ್ಲಿ ಮುಖ್ಯವಾಗಿ ಈ ಭಾಷಾ ದೃಷ್ಟಿಯಿಂದ ವಚನಗಳ ಮಹತ್ವವು ಎಷ್ಟಿದೆ ಅವುಗಳ ವಿಪುಲ ವಿಚಾರಗಳು ಇವು ಬಹು ನಿಶದವಾಗಿ ಹೇಳಲ್ಪಟ್ಟಿರುತ್ತವೆ. ಆದರೆ ಅವುಗಳಲ್ಲಿ ಅಡಕವಾಗಿರುವ ಗಾಢವಾದ ಧಾರ್ಮಿಕ ತತ್ವಗಳ ನಿರೂಪಣೆಯು ಮಾತ್ರ ಬಹುವಿರಳವಾಗಿರುತ್ತದೆ. ಈ ವಿಷಯದ ಪರಿಚಯವು ಇನ್ನೂ ನಮ್ಮ ನಾಡಿನಲ್ಲಿ ಆಗಿರುವದಿಲ್ಲ. ಈ ಕಾರ್ಯವನ್ನು ವೀರಶೈವ ಸಮಾಜದವರು ಈ ಕಾಲಕ್ಕೆ ಕೈಕೊಳ್ಳುವದು ಬಹು ಅಗತ್ಯವಾಗಿರುತ್ತದೆ.

ವೀರಶೈವ ಧರ್ಮದಲ್ಲಿ ಷಟ್‌ಸ್ಥಲಗಳು, ಏಕೋತ್ತರ ಶತಸ್ಥಲಗಳು ಸೃಷ್ಟಿಯ ವಚನಗಳು, ಕರಣಹಸಿಗೆ, ಅಷ್ಟಾವರಣ, ಪಂಚಾಚಾರಗಳು ಇವು ಬಹು ಮಹತ್ವದ ವಿಷಯಗಳಾಗಿವೆ. ಆದರೆ ಜನರಲ್ಲಿ ಇವುಗಳ ತಿಳುವಳಿಕೆಯು ಸಾಕಷ್ಟು ಆಗಿರುವದಿಲ್ಲ. ಈ ವಿಷಯಗಳು 'ಶೂನ್ಯಸಂಪಾದನೆ' ಈ ಗ್ರಂಥದಲ್ಲಿ ಬಹು ಚನ್ನಾಗಿ ನಿರೂಪಿತವಾಗಿರುತ್ತವೆ. ಇವುಗಳ ಅರ್ಥವನ್ನು ನಿರೂಪಿಸುವ ಕಾರ್ಯವನ್ನು ನಾವು ಈಗ ಕೈಕೊಳ್ಳಬೇಕೆಂದು ಅಪೇಕ್ಷಿಸಿದ್ದೇವೆ.

ಇದಕ್ಕೋಸ್ಕರ ಶೂನ್ಯಸಂಪಾದನೆಯ ಮೂಲ ಗ್ರಂಥವನ್ನು ಮೊದಲು ಸಂಶೋಧಿಸಿ ಅದರ ಶುದ್ಧಪ್ರತಿಯನ್ನು ಸಿದ್ಧಪಡಿಸುವದು ಪ್ರಥಮ ಕಾರ್ಯ

ವಾಗಿರುತ್ತದೆ ಈ ಕಾರ್ಯದ ಕೂಡ ಪ್ರತಿಯೊಂದು ಸಂಪಾದನೆಯಲ್ಲಿ ಬರುವ ವಿಶಿಷ್ಟಶಬ್ದಗಳ ಅರ್ಥ ವಚನಗಳ ಅರ್ಥ, ಮತ್ತು ಅದರಲ್ಲಿ ಅಡಕವಾಗಿರುವ ತತ್ವಗಳ ವಿವೇಚನೆ ಈ ಕಾರ್ಯವು ಸಹ ನಡೆಯುವದು ಅವಶ್ಯವಿದೆ ಹೀಗೆ ಮಾಡಿದರೆ ಮಾತ್ರ ಶಿವಶರಣರ ಮಹತ್ವದ ವಿಚಾರಗಳು ಎಲ್ಲರ ತಿಳಿವಳಿಕೆಗೆ ಬರಲು ಶಕ್ಯವಾಗುತ್ತದೆ.

ಈ ತೆರದ ವಿವರಣೆಯನ್ನು ಮಾಡುವಲ್ಲಿ ಈ ವಿಷಯಕ್ಕೆ ಸಂಬಂಧಿಸಿದ ಇತರ ವೀರಶೈವ ಧರ್ಮ ಗ್ರಂಥಗಳ ಉಲ್ಲೇಖ, ವೀರಶೈವೇತರ ಮತಗಳ ತುಲನಾತ್ಮಕ ವಿವೇಚನೆ, ಇವು ಸಹ ಮಾಡಲ್ಪಡುವವು.

ಈ ಕಾರ್ಯದಲ್ಲಿ ಶ್ರೀ ಶಿವಯೋಗಿ ಬಂಥನಾಳ ಮಹಾ ಸ್ವಾಮಿಗಳವರು ಡಾ, ಎಸ್. ಸಿ. ನಂದಿಮಠ ಎಮ್. ಎ. (ಪಿ. ಎಚ್. ಡಿ.) ಶ್ರೀ ನವಿಲುಗುಂದ ಮಹಾ ಸ್ವಾಮಿಗಳು, ಶ್ರೀ ವಿದ್ಯಾವಾಚಸ್ಪತಿ ಶಂಭುಲಿಂಗ ಸಾಮಿಗಳು ಶ್ರೀ ಮೃತ್ಯುಂಜಯ ಸ್ವಾಮಿಗಳು ಮುಗಧೋಳ, ಶ್ರೀ ಕಲ್ಯಾಣಪ್ಪ ಬ್ಯಾಳಿ ಪ್ರೋ॥ ಎಸ್. ಎಸ್. ಭೂಸನೂರುಮಠ ಶ್ರೀ ವೀರಭದ್ರಪ್ಪ ಹಾಲಭಾವಿ ಬಿ. ಎ. ಎಲ್. ಎಲ್. ಬಿ. ಶ್ರೀ ಬುದ್ದಯ್ಯಸ್ವಾಮಿ ಹಿರೇಮಠ ಧಾರವಾಡ, ಶ್ರೀ ವಾಗಭೂಷಣ ಶಾಸ್ತ್ರೀಗಳು, ಗದಗ ಶ್ರೀ ಜಿ. ಎ. ಹಿರೇಮಠ ಧಾರವಾಡ ಈ ಮೊದಲಾದ ಮಹನೀಯರು ಸಹ ಕರಿಸಲು ಒಪ್ಪಿಕೊಂಡಿದ್ದಾರೆ. ಮೇಲ್ಕಂಡ ಮಹನೀಯರಲ್ಲದೆ ಇನ್ನೂ ಅನೇಕ ವಿದ್ವಜ್ಞ ಅವರ ಸಲಹೆ ಸೂಚನೆಗಳನ್ನು ಕಾಲಕಾಲಕ್ಕೆ ಪಡೆಯುವೆವು.

ಶೂನ್ಯ ಸಂಪಾದನೆ ಗ್ರಂಥವು ವೀರಶೈವರ ವಚನ ಶಾಸ್ತ್ರದ ತಿರುಳನ್ನು ಭೋಧಿಸುವ ಒಂದು ಮಹತ್ವದ ಗ್ರಂಥವಾಗಿರುತ್ತದೆ. ಇದರ ಪರಿಶೀಲನೆಯನ್ನು ಚನ್ನಾಗಿ ಮಾಡಿದಲ್ಲಿ ವೀರಶೈವ ಸಂಸ್ಕೃತಿಯೂ ಜ್ಞಾನವೂ ಓದುಗರಿಗೆ ಚನ್ನಾಗಿ ಆಗುವದರಲ್ಲಿ ಏನೂ ಸಂದೇಹವಿರಲಾರದು.

ಮೇಲಿನ ವಿವರಣೆಯಿಂದ ಈ ಗ್ರಂಥವು ಬಹು ದೊಡ್ಡದಾಗುವದೆಂಬುದು ಸ್ಪಷ್ಟವಿದೆ. ಇದರ ಮೂಲ ಪ್ರತಿಯಲ್ಲಿ ೪೧೦ ಪುಟಗಳಿದ್ದು ಇದಕ್ಕೆ ಮೇಲಿನಂತೆ ಟೀಕೆಗಳನ್ನೂ ಅರ್ಥವನ್ನೂ ಬರೆದಲ್ಲಿ ಅದು ೮, ೧೦ ಪಟ್ಟು ದೊಡ್ಡದಾಗುವದು. ಆದರೆ ಈ ಪ್ರಕಾರ ಈ ಗ್ರಂಥವು ಪೂರ್ಣವಾದಲ್ಲಿ ಇದು ವೀರಶೈವ ವಾಙ್ಮಯ ಮತ್ತು ಸಂಸ್ಕೃತಿಯ ವಿಷಯವಾಗಿ ಒಂದು ಅಧಿಕೃತ ಗ್ರಂಥವಾಗುವದೆಂಬುದರಲ್ಲಿ ಏನೂ ಸಂದೇಹವಿಲ್ಲ.

ಈ ಕಾರ್ಯವು ಎಷ್ಟು ಘನತರವಾದುದೆಂಬುದು ವಾಚಕರಿಗೆ ಗೊತ್ತಿಲ್ಲದೆ ಇರದು. ಇದು ಬಹು ವೆಚ್ಚದ ಕಾರ್ಯವಾಗಿರುತ್ತದೆ. ಮೊದಲು ಹಸ್ತಲಿಖಿತ ಗ್ರಂಥಗಳನ್ನು ಸಂಗ್ರಹಿಸುವದಲ್ಲದೆ ವಿವಿಧ ಮತಗಳ ಗ್ರಂಥಗಳನ್ನು ಸಹ ಶೇಖರಿಸಬೇಕಾಗುತ್ತದೆ. ವೀರಶೈವ ಸಮಾಜದಲ್ಲಿಯ ವಿದ್ವಾಂಸರ ಸಹಾಯವಂತೂ ಬಹು ಅವಶ್ಯವಾದದ್ದು. ಅವರು ಮೇಲಿಂದ ಮೇಲೆ ಕೂಡಿಕೊಂಡು ವಿಷಯ ಚರ್ಚೆ ಮಾಡಬೇಕಾಗುತ್ತದೆ. ಆದರೆ ಈ ತರದ ಪ್ರಯತ್ನದಿಂದ ವೀರಶೈವ ಧರ್ಮದ ನಿಜಸ್ವರೂಪು ಲ್ಲವರ ದೃಷ್ಟಿಗೆ ಬೀಳುವದು. ಮತ್ತು ಒಂದುಕಾಲದಲ್ಲಿ ಬಸವಾದಿ ಪ್ರಮಥರು ನಮ್ಮ ನಾಡಿನಲ್ಲಿ ಎಂಥ ಮಹತ್ವದ ಕಾರ್ಯಗಳನ್ನು ಮಾಡಿದರೆಂಬುದರ ಕಲ್ಪನೆಯೂ ಎಲ್ಲರಿಗೆ ಆಗುವದು ಇದರಿಂದ ಸಮಾಜದಲ್ಲಿ ಕ್ರಾಂತಿಕಾರಕ ಪರಿಣಾಮಗಳು ಘಟಿಸುವವೆಂದು ನಾವು ಹಾರೈಸಿದ್ದೇವೆ.

ಈ ಕಾರ್ಯದಲ್ಲಿ ಎಲ್ಲ ವೀರಶೈವರು ನಮ್ಮೊಡನೆ ಸಹಕರಿಸಿ ತಮ್ಮ ಶಕ್ತ್ಯನುಸಾರ ನಮಗೆ ಸಹಾಯ ಮಾಡಬೇಕೆಂದು ನಮ್ಮ ಸವಿನಯ ವಿನಂತಿ ಇದೆ.

ತಮ್ಮ ವಿಧೇಯ

ಫ. ಗು. ಹಳಕಟ್ಟಿ.

ಸಂಪಾದಕ ಶಿವಾನುಭವ ಆಫಿಸ ವಿಜಾಪೂರ.

# ಅಂದಿನ ಕಾಯಕ ಇಂದಿನ ಶಿಕ್ಷಣ

(ಲೆ:—ಶ್ರೀ. ಲಿಂಗಣ್ಣಾ ಬಾಣದ ಲೊ.ೀ ಶಾ. ಶಿಕ್ಷಕ, ವಿದ್ಯಾರ್ಥಿ ಲಚ್ಯಾಣ)



ಮಾನವನು ತನ್ನ ನಿತ್ಯ ಜೀವನವನು ಸುಗಮವಾಗಿ ಅಸರ, ಅರಿವೆ ಆರೋಗ್ಯ. ಅರಿವು ಇವುಗಳ ಅಡಚಣಿ ಅವನಿಗಾಯಿತೆಂದರೆ ಅವನ ಬಂಡಾಟ ಹೇಳತೀರದು. ಅವನು ನಿರ್ಜೀವ ವಸ್ತುವಿನಂತೆ ನಿರುಪಯುಕ್ತ, ಕಾರಣ ಮೇಲೆ ಹೇಳಿದವೆಲ್ಲವುಗಳೂ ಅವನಿಗೆ ಆವಶ್ಯಕ ವಾದವುಗಳು. ಮಹಾತ್ಮ ಬಸವಣ್ಣನವರು ಕಾಯಕ ಇದರ ಸಾಮಾನ್ಯ ಅರ್ಥವೆಂದರೆ ಒಬ್ಬರ ಮನಕ್ಕೆ ತೊಂದರೆ ಕೊಡದೆ ಒಬ್ಬರನ್ನು ನೋಯಿಸದೆ ಒಬ್ಬರನ್ನು ಅಪಹರಿಸದೇ ತನ್ನ ನಿತ್ಯ ಜೀವನಕ್ಕಾಗಿ ಸತ್ಯವಾಗಿಯೂ ಶುದ್ಧವಾಗಿಯೂ ಮಾಡುವ ಆ ಕ್ರಿಯೆಯೇ ಕಾಯಕ ಎಂದು ಅರುಹಿದ್ದಾರೆ. ಅಂದು ಅಣ್ಣನವರು ಅರುಹಿದ ಆ ಕಾಯಕಕ್ಕೂ ಇಂದು ಮ. ಗಾಂಧಿಯುವರು ಆಚರಣೆಯಲ್ಲಿ ತಂದ ಶಿಕ್ಷಣಕ್ಕೂ ನಿಕಟವಾದ ಬಾಂಧವ್ಯವಿದೆ ಎಂದು ಹೇಳಬಹುದು.

ಒಕ್ಕಲಿಗನು ಭೂಮಿಯಲ್ಲಿ ಬೀಜವನ್ನು ಹಸಿ ಇದ್ದಾಗಲೇ ಬಿತ್ತಿದರೆ ಅದರ ಸಫಲತೆ ಅವನಿಗೆ ಸಿಗುತ್ತದೆ. ಇಲ್ಲದಿದ್ದರೆ ಬಿತ್ತಿದ ಬೀಜವು ನಿರುಪಯುಕ್ತ ನಿಷ್ಫಲ. ಅದಕ್ಕಾಗಿಯೇ ಹದನೋಡಿ ಬೀಜ ಊರಬೇಕು. ಅಂದರೆ ಮಾತ್ರ ಊರಿದ ಬೀಜ ಹುಸಿಯಾಗಲಿಕ್ಕಿಲ್ಲ. ನಾಟಿ ಸಸಿಯಾಗಿ ಸಾಫಲ್ಯ ತೋರಿತು! ಎಂಬುದನ್ನು ಮನದಣಿಯುವಂತೆ ಅರಿತು ಗಾಂಧಿಯವರು ತಮ್ಮ ನಯೀ ತಾಲೀಮು ಅರ್ಥಾತ್ ಹೊಸ ಶಿಕ್ಷಣದ ಯೋಜನೆಯನ್ನು ದ. ಆಫ್ರೀಕೆಯಲ್ಲಿ ಪ್ರಾರಂಭಿಸಿ ಯಶಸ್ಸಿಗೊಳಿಸಿದರು ಅದರಂತೆ ವರ್ಧಾದಲ್ಲಿಯೂ ಪ್ರಾರಂಭಿಸಿ ಅಲ್ಲಿಯೂ ಅದರ ಸಾರಸ್ವ ಸಾಫಲ್ಯತೆ ಪಡೆದರು. ಅದಕ್ಕಾಗಿಯೇ ಮುಂದಿನ ಕಾಯಕದ ಏಳ್ಗೆಗಾಗಿ ಮೊದಲು ಮಾನವನು ಬಾಲ್ಯದಲ್ಲಿದ್ದಾಗಲೇ ಅವನಿಗೆ ಕಾಯಕ ರೂಪೀ ಶಿಕ್ಷಣವು ಹೆಚ್ಚು ಯೋಗ್ಯವಾದ್ದು, ಬೆಲೆಯುಳ್ಳದ್ದು, ಮಹತ್ಪೂರ್ಣವಾದದ್ದು ಎಂದು ನಾವು ಎದೆತಟ್ಟಿ ಹೇಳಬಹುದು.

ಮಕ್ಕಳ ಮನವು ಆಟದ ಕಡೆಗೆ ಒಲವು ಇರುವದೇ ಹೊರ್ತು ಓದು ಬರಹದ ಕಡೆಗೆ ಅವರ ಒಲವು ಇರುವದು ದುರ್ಲಭ. ಮಕ್ಕಳ ಪ್ರಪಂಚವೆಲ್ಲ ಆಟದ್ದು. ಕಾರಣ ಆಟದ ಮುಖಾಂತರವೇ ಅವರಿಗೆ ಶಿಕ್ಷಣವು ದೊರೆಯುವಂತಾಗಬೇಕು. ಆ ಶಿಕ್ಷಣದಲ್ಲಿಯೇ ಅಪ್ರತ್ಯಕ್ಷವಾಗಿ ಕಾಯಕ ಅಡಗಿರಬೇಕು. ಆ ಕಾಯಕವೇ ಅವರ ಮುಂದಿನ ಜೀವನದಲ್ಲಿ ಭಾವೀ ಉತ್ಪಾದಕ ಕಾಯಕವಾಗಿರಬೇಕು. ಆದಕಾಗಿ ಶಿಕ್ಷಕರು ಮಗುವಿನ ಮನದ ಒಲವಿನಕಡೆಗೆ ಹೆಚ್ಚು ಲಕ್ಷ ವಹಿಸಬೇಕು. ಅವನ ವಿಕಾಸಕ್ಕೆ ಶಿಕ್ಷಕನೇ ಕಾರಣ. ಅವನ ಒಲವಿನಂತೆ ಶಿಕ್ಷಣಕೊಡುವದೇ ನಿಜವಾದ ವಿಕಾಸಕ್ಕೆ ಸಹಾಯವಾಗುವ ಶಿಕ್ಷಣ. ಅದಕ್ಕಾಗಿ ಅವನ ವಿಕಾಸದಲ್ಲಿ ಶಿಕ್ಷಕನ ಶ್ರದ್ಧೆ ಇರಬೇಕು. ಕಾರಣ ಈ ಕಾಯಕದ ಶಿಕ್ಷಣವು ಶಾಲೆಯ ಮೀಸಲೂ ಅಲ್ಲ. ಶಿಕ್ಷಕನ ಸೊತ್ತೂ ಅಲ್ಲ. ಅದು ಅವನ ಒಲವಿನಂತೆ ವಿಕಾಸವಾಗುವ ಅನುಭವಾಮೃತವು ಅವನಿಗೆ ದೊರೆಯಬೇಕಾದರೆ ಅವನ್ನು ತನ್ನ ಮನದ ಒಲವಿನಿಂದ ತನಗೆ ಬೇಕಾದ ರೀತಿಯಲ್ಲಿ ಬೇಕಾದ ಕಾಯಕವ ಮಾಡುತ್ತ ಅದರಲ್ಲಿ ಪ್ರಗತಿ ತೋರಿಸಲು ಅವನಿಗೆ ಸ್ವಾತಂತ್ರ್ಯ ಬೇಕು. ಅದರಿಂದಲೇ ಅವನ ಏಳ್ಗೆ ಇದೆ. ಕಾರಣ ಮಗುವಿನ ಶಿಕ್ಷಣಕ್ಕೆ ಸ್ವಾತಂತ್ರ್ಯವು ಅವಶ್ಯವಾದದ್ದು. ಈ ರೀತಿ ಕೊಡುವ ಕಾಯಕದ ಶಿಕ್ಷಣದಲ್ಲಿ ಅವನಿಗೆ ಒಂದು ತರದ ಆನಂದವಾಗುತ್ತಿದೆ. ಯಾಕಂದರೆ ಮಕ್ಕಳು ಕೃತಿಪ್ರೇಮಿಗಳು. ತಾವು ತಮ್ಮ ಮನಸ್ಸಿಗೆ ಬಂದ ಆಟ ನೋಟದಲ್ಲಿ ಭಾಗವಹಿಸುತ್ತ ಆ ಕಾರ್ಯ ಮಾಡುತ್ತಿರುವದರಿಂದ ಅವರಿಗೆ ಅದರಲ್ಲಿ ಒಳ್ಳೇ ಆಸಕ್ತಿ ಇರುತ್ತದೆ. ಅಭಿಮಾನವಿರುತ್ತದೆ. ತಮ್ಮದೇ ಆದ ವಿಚಾರದಿಂದ ತಮ್ಮದೇ ಆದ ಜ್ಞಾನದೃಷ್ಟಿಯಿಂದ ತಮ್ಮ ಕೃತಿಯನ್ನು ತಮ್ಮ ಮನಕ್ಕೆ ಹೊಳೆದ ರೀತಿಯಲ್ಲಿ ಪೂರ್ತಿಗೊಳಿಸುತ್ತಿರುವ ಆ ಮಕ್ಕಳಲ್ಲಿ ಎಷ್ಟೊಂದು ಆನಂದವಾಗುತ್ತಿದೆ ಎಂಬುವದನ್ನು ಬರೆದು ತೋರಿಸಲಸಾಧ್ಯವಾದದ್ದು. ಆ ಆನಂದದೊಂದಿಗೆ ಮಾಡುತ್ತಿರುವ ಆ ಕಾರ್ಯವೇ ಕಾಯಕ. ಆನಂದವೇ ಕೈಲಾಸ.

ಇನ್ನು ಮಗುವು ದೊಡ್ಡವನಾದೊಡನೆಯೇ ಅವನ ಮುಂದೆ ಜೀವನ ಹೇಗೆ ಸಾಗಿಸಬೇಕೆಂಬ ಪ್ರಪಂಚದ ಸಿಡಿಲು ಬಡಿದು ದಿಗಿಲುಗೊಂಡು ಎದೆಯೊಡೆದು ಗಾಬರಿಯಾಗಿ ಬಿದ್ದು ನರಳಬಾರದೆಂಬುದೇ ಈ ಮ. ಗಾಂಧಿಯವರ ಇಂದಿನ ಶಿಕ್ಷಣದ ಮೂಲ ಗುರಿ. ಆ ಸಂಕಟಗಳಿಗೆ ಬೆದರದೆ

ಬೆಚ್ಚದೆ ಎದೆಗೊಟ್ಟು ನಿಲ್ಲುವ ಶಕ್ತಿ ಅವನಲ್ಲುಂಟಾಗಬೇಕು ಎಂಬ ಧೋರಣೆಯನ್ನು ಮುಂದಿಟ್ಟುಕೊಂಡೇ ನಡೆಯುತ್ತಿದೆ ಇಂದಿನ ಶಿಕ್ಷಣ. ಅದಕ್ಕಾಗಿ ಇಂದಿನ ಶಿಕ್ಷಣವು ಮಕ್ಕಳಲ್ಲಿ ಭಯವನ್ನುಂಟುಮಾಡುವಂಥಾದ್ದಿರದೆ ಅವರ ಪ್ರೇಮದ ಒಲವಿನ ಆಟಗಳ ಮುಖಾಂತರ ಸಾಗಬೇಕಾಗಿದೆ. ಅಂದರೇನೇ ಆ ಬಾಲಕನು ನಿಜವಾದ ರಾಷ್ಟ್ರಪ್ರೇಮಿ, ರಾಷ್ಟ್ರದ ನವನಾಗರೀಕನಾಗಬಲ್ಲ. ಇದುವೇ ಅವನ ಮುಂದಿನ ಜೀವನದ ಏಳ್ಗೆಗಾಗಿ ಕೊಡುವ ಅಹಿಂಸಾತ್ಮಕ ಶಿಕ್ಷಣವು.

## ಕಾಯಕವೂ ಮಾನಶ್ಯಾಸ್ತ್ರವೂ

ಮನುಷ್ಯನ ಮನಸ್ಸಿನ ಚೇತನಾಶಕ್ತಿಯ ಅಭ್ಯಾಸವೇ ಮಾನಶ್ಯಾಸ್ತ್ರ ಎಂದು ಹೇಳಬಹುದು. ಶಿಕ್ಷಕನು ಬಾಲಕನಿಗೆ ಶಿಕ್ಷಣವನ್ನು ಕೊಡುವಾಗ ಮಗುವಿನ ಮನದ ಒಲವು ನಿಲವು ಅರಿತಿರಬೇಕು. ಅಂದರೇನೇ ಮಗುವಿನ ಮನಕ್ಕೆ ಹಿಡಿಯುತಿದೆ ಆ ಶಿಕ್ಷಣ. ಅದಕ್ಕಾಗಿ ಶಿಕ್ಷಕನ ಮಗುವಿಗೆ ಯಾವ ವೇಳೆಯಲ್ಲಿ ಎಷ್ಟು ಪ್ರಮಾಣದಿಂದ ಎಷ್ಟು ಹೊತ್ತಿನವರೆಗೆ ಶಿಕ್ಷಣ ಕೊಡಬೇಕೆಂಬುದು ಅರಿಯುವದೇ ಮಾನಶ್ಯಾಸ್ತ್ರ ಅಭ್ಯಾಸದ ಒಳಗುಟ್ಟು. ಶಿಕ್ಷಕನು ಮಗುವಿಗೆ ಮಾರ್ಗದರ್ಶಿಯು ಮಾತ್ರ ಕಾರಣ ಮಾರ್ಗದರ್ಶಿಯಾಗಬೇಕಾದರೆ ಅವನ ಒಲವಿನ ಶಿಕ್ಷಣವನ್ನು ಅವನಿಗೆ ಅವನಕೃತಿಯ ಮೂಲಕ ಮಾತ ಹಚ್ಚಿ ಅವನ ಸರ್ವಾಂಗೀಣ ವಿಲಾಸಕ್ಕೆ ಎಡೆಗೊಟ್ಟು ಅವನ ಕಾರ್ಯ ನಿರೀಕ್ಷಿಸಬೇಕು. ಅದುವೇ ಮಗುವಿನ ಕಾಯಕದ ಕಲ್ಪನೆಗೆ ಎಡೆಗೊಟ್ಟಂತೆಯೇ ಸರಿ, ಮೇಲೆ ಹೇಳಿದಂತೆ ಮಗುವು ಆಟನೋಟ ಪ್ರೇಮ ಆ ಆಟನೋಟದಲ್ಲಿಯೇ ಅವನ ಕಾಯಕ ಅಪ್ರತ್ಯಕ್ಷ ರೂಪದಲ್ಲಿ ನಡೆದಿರಬೇಕು. ಆ ಕಾಯಕ ಮಾಡುತ್ತಲೇ ಅವನು ಆನಂದ ಹೊಂದುತ್ತಾನೆ. ಅದನ್ನು ಆಟದ ಮುಖಾಂತರ ಕಲಿಯುವದೇ ಕಾಯಕ. ಅದರಿಂದ ಆನಂದಹೊಂದುವದೇ ಕೈಲಸ. ಅದಕ್ಕಾಗಿ ಮನುಷ್ಯ ಹುಟ್ಟಿದಂದಿನಿಂದ ಅವನ ಶಿಕ್ಷಣವು ಬೇರೆ ಬೇರೆ ರೀತಿಯಾಗಿ ನಡೆದೇ ಇರುತ್ತದೆ. ಆ ಶಿಕ್ಷಣವು ಬಾಲ್ಯದಿಂದಲೇ ಕಾಯಕ ರೂಪದಿಂದ ನಡೆಯಬೇಕೆಂದು ಮ. ಗಾಂಧಿಯವರು ಈ ದಾರಿ ಹಾಕಿಕೊಟ್ಟಿದ್ದಾರೆ. ಅದುಕಾರಣ ಹೀಗೆ ನಡೆಯಬೇಕಾದಲ್ಲಿ ಶಿಕ್ಷಕನು ಬಾಲಕರಿಗೆ ತನ್ನ ವಿಷಯವನ್ನು ಬಲತ್ಕಾರದಿಂದ ತುಂಬಲು ಯತ್ನಿಸದೆ

[illegible] ವು ನಲ[illegible] [illegible] ಅಭ್ಯಾಸಿಸಬೇಕು. ಆ ಅಭ್ಯಾಸವೇ ಮಾನಶ್ಯಾಸ್ತ್ರ. ಇದರಂತೆ [illegible]ತುಕೊಂಡು ಕೊಡುವ ಶಿಕ್ಷಣವೇ ಕಾಯಕ ರೂಪ ಶಿಕ್ಷಣ.

## ಕಾಯಕವೂ ಅರ್ಥಶಾಸ್ತ್ರವೂ

ಮಾನವನಿಗೆ ತನ್ನ ಜೀವನದಲ್ಲಿ ಅತ್ಯಾವಶ್ಯಕವಾದ ವಸ್ತುಗಳೆಂದರೆ ಅನ್ನ, ಆಸರ ಅರಿವೆ, ಆರೋಗ್ಯ, ಅರಿವು, ಇವುಗಳನ್ನು ಪೂರೈಸಿಕೊಳ್ಳಬೇಕಾದರೆ ಅರ್ಥಶಾಸ್ತ್ರದ ಅರಿವು ನಮಗಾಗಬೇಕು. ಅಂದರೆ ಆರ್ಥಿಕ ಮಹಾ ಪ್ರಶ್ನೆಯನ್ನು ಬಿಡಿಸಿಕೊಳ್ಳಲು ತಯಾರಾಗಬೇಕು. ಅರ್ಥಾತ್ ಅರ್ಥಶಾಸ್ತ್ರದ ನಿಯಮದಂತೆ ಮನುಷ್ಯನ ಬೇಡಿಕೆಯ ವಸ್ತುಗಳನ್ನು ತಮ್ಮ ತಮ್ಮಲ್ಲಿಯೇ ತಯಾರಿಸಿಕೊಂಡು ಅವುಗಳ ವಿನಿಮಯದಿಂದ ಕಾರ್ಯಸಾಗಿಸಬೇಕು ಅಂದರೇನೇ ನಮ್ಮ ಬೇಡಿಕೆಗಳನ್ನು ಪೂರೈಸಿ ಆರ್ಥಿಕ ಸ್ಥಿತಿ ಸುದಾರಿಸುತ್ತಿದೆ ಎಂದು ಹೇಳುತ್ತಿದ್ದಾರೆ. ಅದುವೇ ತಮ್ಮ ತಮ್ಮ ಕಾಯಕವನ್ನು ತಾವೆಲ್ಲರೂ ತಮ್ಮ ತಮ್ಮ ಶಕ್ತ್ಯಾನುಸಾರ ಮಾಡಿ ಉದರ ನಿರ್ವಾಹಣೆ ಮಾಡಬೇಕೆಂಬುದಕ್ಕೆ ಅರ್ಥ. ಆದ್ದರಿಂದ ಅರ್ಥಶಾಸ್ತ್ರವೂ ಕೂಡ ಕಾಯಕ ಮಾಡಬೇಕು. ತಮ್ಮ ತಮ್ಮ ಬೇಡಿಕೆಗಳನ್ನು ತಮ್ಮ ತಮ್ಮ ಒಲುವಿನ ಕಾರ್ಯಗಳ ಮುಖಾಂತರ ಉತ್ಪಾದಿಸಿ ವಿನಿಮಯದಿಂದ ತಮ್ಮ ಆರ್ಥಿಕ ಅಡಚಣಿ ದೂರ ಮಾಡಿಕೊಳ್ಳಬೇಕು ಎಂದು ಹೇಳುತ್ತಿದೆ.

ಇದರ ಮೇಲಿಂದ ನೋಡಲಾಗಿ ಕಾಯಕದ ಅರ್ಥವು ಅರ್ಥಶಾಸ್ತ್ರದಲ್ಲಿ ಯೂ ಕೂಡ ಅಡಗಿದೆ ಎಂದು ನಮಗೆ ತೋರದೆ ಇರದು.

ಒಟ್ಟಿನ ಮೇಲೆ ಕಾಯಕ ಶಿಕ್ಷಣ, ಮನಶ್ಯಾಸ್ತ್ರ, ಅರ್ಥಶಾಸ್ತ್ರ ಇವೆಲ್ಲವುಗಳೂ ಒಂದನ್ನೊಂದು ಬೆರೆತುಕೊಂಡಿವೆ. ಒಂದಕ್ಕೊಂದು ಮಿಗಿಲಾದಬಾಂಧವ್ಯವಿದೆ, ಪ್ರೇಮವಿದೆ, ಸಂಬಂಧವಿದೆ. ಇವುಗಳಲ್ಲಿ ವಿಭಾಗಿಸಲು ದಾರಿಯಿಲ್ಲ. ಅಂದು ೧೨ನೇ ಶತಮಾನದಲ್ಲಿ ಸಬಿವಾದಿ ಪ್ರಮಥರು ಕಾಯಕಕ್ಕೆ ಬೆಲೆಕೊಟ್ಟು ಶ್ರೀಮಂತನೇ ಆಗಲಿ, ಬಡವನೇ ಆಗಲಿ, ಪಾಮರನೇ ಆಗಲಿ, ಪಂಡಿತನೇ ಆಗಲಿ, ಯಾರಾದರೇನು ಎಲ್ಲರೂ

ಕಾಯಕ ಮಾಡಿ ಸತ್ಪಾತ್ರದಿಂದ ಗಳಿಸಿ [illegible] ಜೀವನ್ಮುಕ್ತರಾಗಬೇಕು ಎಂದು ಹೇಳಿದ ಪ್ರಾತಃ ಇಂದು ಮಹಾತ್ಮಗಾಂಧಿಯವರು ಆ ನುಡಿಗಳು ಇಂದು ಬಾಲ್ಯದಿಂದಲೇ ಪ್ರಾರಂಭವಾಗಲಿ ಎಂದು ಪ್ರಾಥಮಿಕ ಶಾಲೆಗಳಿಂದಲೇ ತಮ್ಮ ಅಮೂಲ್ಯ ಸಂದೇಶವನ್ನು ಬೀರಿ ಕೃತಿಯಲ್ಲಿ ತೋರಿ ನಿರೀಕ್ಷಿಸುತ್ತ ಕುಳಿತಿದ್ದಾರೆ. ಆ ಮಹಾತ್ಮರ ಕಣ್ಣುಗಳು ನಿರೀಕ್ಷಿಸಿ ಆನಂದಪಡಿಸುವದೂ ಇಲ್ಲವೆ ಅವರ ಕಣ್ಣಿಗೆ ಮಣ್ಣೆರಚುವದೂ ನಮ್ಮನ್ನೇ ಕೂಡಿದೆ.

---

## ನುಲಿಯ ಚಂದಯ್ಯನ ಗ್ರಾಮ

ಯನ್. ಸಿ. ಶಿವಲಿಂಗಪ್ಪ ವಾಲದ ಸ್ಕೂಲು ಮಾಸ್ಟರ ರಾಮಗಿರಿ ಹೋಬಳಿ
ನೂಲೇನೂರು ತಾಲೂಕು ಹೊಳಲ್ಕೆರೆ ಜಿಲ್ಲೆ ಚಿತ್ರದುರ್ಗ.

ನಾವು ನಾಗಲಾಂಬಿಕೆಯ ಚರಿತ್ರೆಯನ್ನು ಬರೆಯುವ ಕಾಲಕ್ಕೆ ಆಕೆಯು ಉಳವಿಯ ಸಂಗ್ರಾಮವಾದ ನಂತರ ನುಲಿಯ ಚಂದಯ್ಯನನ್ನು ಕರೆದುಕೊಂಡು ಈಗ ಶಿವಮೊಗ್ಗಾ ಜಿಲ್ಲೆಯಲ್ಲಿರುವ ತರೀಕೆರೆ ಸಮೀಪವಾಗಿ ಒಂದು ಆಶ್ರಮದಲ್ಲಿದ್ದು ಅಲ್ಲಿಯೇ ಅವಳು ಸಮಾಧಿಸ್ಥಳಾದಳೆಂದೂ ಮುಂದೆ ಚಂದಯ್ಯನು ನಂದೀಗ್ರಾಮಕ್ಕೆ ಬಂದು ಅಲ್ಲಿಯೇ ಕೆಲಕಾಲ ನಿಂತನೆಂತಲೂ ಉಲ್ಲೇಖಿಸಿದ್ದೇವೆ. ಈ ವಿಷಯವಾಗಿ ನಮ್ಮ ಕಡೆಗೆ ಬಂದ ಕೆಲವು ಪತ್ರಗಳನ್ನು ನಾವು ಕೆಳಗೆ ಪ್ರಸಿದ್ಧಿಸಿದ್ದೇವೆ.

### ನೂಲೇನೂರು ನಂದೀಜಾತ್ರೆ

ಚಿತ್ರದುರ್ಗ ಜಿಲ್ಲೆ ಹೊಳಲ್ಕೆರೆ ತಾಲೂಕು ರಾಮಗಿರಿ ಹೋಬಳಿ ನೂಲೇನೂರಿನಲ್ಲಿ ಕೆರೆಯ ಏರಿಯಮೇಲೆ ಒಂದು ಶಿಥಿಲವಾದ ಗದ್ದಿಗೆ ಇದೆ. ಅದು ನುಲಿಯಚಂದಯ್ಯನವರ ಗದ್ದಿಗೆಯೆಂದು ಹಿರಿಯರು ಹೇಳುತ್ತಿರುವರು. ಕಲ್ಲಿನಲ್ಲಿ ಎರಡು ಪಾದಗಳಿವೆ ಈ ಹೆಸರಿನಲ್ಲಿ ಶ್ರೀ ಬಸವೇಶ್ವರ ದೇವಸ್ಥಾನದಲ್ಲಿ ಒಂದು ಶಿಲಾಮೂರ್ತಿ ಉದ್ಭವಿಸಿದೆ. ಬಹಳ ಹಿಂದಿನ ಕಾಲದಿಂದಲು ನುಲಿಯಚಂದಯ್ಯನೆಂದೆ ಕೆಲವರು ಕರೆಯುತ್ತಿ

ಒುವರು: ಇದು ನುಲಿಯಚಂದಯ್ಯನ ಸಮಾಧಿ. ಮತ್ತು ತಪಸ್ಸಿನ ಸ್ಥಳ ವಿರಬೇಕು: ಇಲ್ಲಿ ಯಾರಾದರು ಮಗ್ಗ ಹಾಕಿ ನೇಯ್ಗೆ ಕೆಲಸ ಮಾಡಿದರೆ ಶ್ರೇಯಸ್ಸಾಗುವದಿಲ್ಲ. ಎಂದು ಹಿರಿಯರು ಹೇಳುತ್ತಾರೆ ಈಗಲೂ ನುಲೇ ನೂರಿನಲ್ಲಿ ಮಗ್ಗದವರಿಲ್ಲ. ಶ್ರೀ ಶಿವಶರಣ ನೆನಹಿಗಾಗಿ ಪ್ರತಿ ಸಂವತ್ಸರ ಆಶ್ವೀಜ ಶುದ್ಧ ಮೊದಲನೆ ಸೋಮವಾರ ನಂದಿಜಾತ್ರೆಯೆಂಬ ಹೆಸರಿನಲ್ಲಿ ದೇವರಿಗೆ ರುದ್ರಾಭಿಷೇಕ, ಉತ್ಸವ, ಕೆಂಡದಾಜ್ತನ ದಾಸೋಹ ನಡೆಯುತ್ತಿದೆ. ಈ ವಿಜಯ ಸಂವತ್ಸರದಲ್ಲಿ ಸಹ ಆಶ್ವೀಜ ಶುದ್ಧ ೪ (ತಾ ೧೨—೧೦—೫೩) ನೇ ಸೋಮವಾರ ಈ ಉತ್ಸವ ಅತಿ ವಿಜೃಂಭಣೆಯಿಂದ ನಡೆದು ವಿಶೇಶ ದಾಸೋಹ ಸಮಸ್ತ ಜನಂಗಕ್ಕೂ ನಡೆಯಿತು.

ಸುಮಾರು ೧೦ ವರ್ಷಗಳ ಹಿಂದೆ ಒಬ್ಬ ಮೂಕ ಸಾಧುಗಳು ಬಂದಾಗ್ಗೆ ಅವರು ಈ ಗದ್ದುಗೆಯನ್ನು ನೋಡಿ ಇದು ಚಂದ್ರ ಗುರುಗಳ ಸಮಾಧಿಯೆಂದು ಬರೆದು ತೋರಿಸಿದರು. ಈ ಊರಿನ ಇತಿಹಾಸದಲ್ಲಿ ಎರಡನೆಯ ಗದ್ದುಗಿಯೊಂದು ಆಗಿದೆ. ಶ್ರೀ ಬಸವಸಿಯ ದತ್ತರಾಜ ಯೋಗೀಂದ್ರರೆಂಬ ಸಾಧುಗಳು ಈಗ ಹದಿನೈದು ವರ್ಷದ ಹಿಂದೆ ಸಮಾಧಿಯಾಗಿರುವರು. ಇದರಿಂದ ಇದು ಯೋಗಿಗಳ ಸಮಾಧಿ ಸ್ಥಳವೆಂಬುದರಲ್ಲಿ ಸಂಶಯವಿಲ್ಲವೆಂದು ತಿಳಿಯುತ್ತನೆ.

ಚಿಕ್ಕಮಗಳೂರು ಜಿಲ್ಲೆ ತರೀಕೆರೆ ತಾಲ್ಲೂಕು ನಂದಿ ಎಂಬ ಗ್ರಾಮದಲ್ಲಿ ಪ್ರತಿವರ್ಷವೂ ಆಶ್ವೀಜ ಶುದ್ಧ ಮೊದಲನೆ ಸೋಮವಾರದಿಂದ ಒಂದುವಾರ (ಏಳುದಿನ) ನುಲಿಯಚಂದಯ್ಯನ ಜಾತ್ರೆ ಎಂಬ ಹೆಸರಿನಿಂದ ದಾಸೋಹ ನಡೆಯುತ್ತದೆ. ನುಲಿಯನೂರಿನವರು ನಂದಿಜಾತ್ರೆಯೆಂದು ಕರೆಯುವರು. ನಂದಿಯವರು ನುಲಿಯಚಂದಯ್ಯನ ಜಾತ್ರೆ ಎಂದು ಕರೆಯುವರು. ಹೀಗೆ ಶ್ರೀ ಶರಣರ ದಾಸೋಹ ಎರಡುಕಡೆ ನಡೆಯುತ್ತಿದೆ.

# ಶ್ರೀ ನುಲಿಯ ಚಂದಪ್ಪ ಶರಣರ ಜಾತ್ರೆಯು.



ಮೈಸೂರ ಸ್ಟೇಟ ಚಿಕ್ಕಮಂಗಳೂರ ಡಿಸ್ಟ್ರಿಕ್ಟ ತರಿಕೇರಿ ತಾಲೂಕ ಲಿಂಗದಹಳ್ಳಿ ಹೋಬಳಿ ನಂದಿಗ್ರಾಮದ ಶ್ರೀ ಸಿದ್ಧಲಿಂಗೇಶ್ವರ ಕ್ಷೇತ್ರದಲ್ಲಿ ಅನುಚೀನವಾಗಿ ನಡೆದುಬಂದ ಪದ್ಧತಿಯಂತೆ ಶ್ರೀ ನುಲಿಯ ಚಂದಪ್ಪ ಶರಣರ ಜಾತ್ರೆಯು ಆಶ್ವೀಜ ಶುದ್ಧ ಪಂಚಮಿ ತಾರೀಖು ೧೨-೧೦-೫೩ ನೇ ಸೋಮವಾರ ಪ್ರಾರಂಭವಾಗಿ ಏಳು ದಿವಸ ದಾಸೋಹ ಗಣ ತೃಪ್ತಿ ನಡೆಯಿತು. ಆಶ್ವೀಜ ಶುದ್ಧ ದ್ವಾದಶಿ ತಾರೀಖು ೧೯—೧೦—೫೩ ನೇ ಸೋಮವಾರ ಸಮಾಪ್ತಿಯಾಗಿ, ತ್ರಯೋದಶಿ ಮಂಗಳವಾರ ಮುಂಜಾನೆ ಶರಣರು ಕಾಯಕವನ್ನು ಮುಗಿಸಿ ನಂದೀಗ್ರಾಮಕ್ಕೆ ಕ್ರಿಯಾಮೂರ್ತಿಗಳನ್ನೂ ಮತ್ತು ಸಿದ್ಧಲಿಂಗೇಶ್ವರನನ್ನೂ ದಯಮಾಡಿಸಿ ತಾವು ತಮ್ಮ ಸ್ವಸ್ಥಾನವಾದ ಕೈಲಾಸಕ್ಕೆ ತೆರಳಿದರು.

ಶ್ರೀಮನ್ನಿರಂಜನ ಜಗದ್ಗುರು ಶೂನ್ಯ ಸಿಂಹಾಸನಾಧೀಶ ಕಲ್ಯಾಣ ಪ್ರಭು ಮಹಾ ಸ್ವಾಮಿಗಳವರು ದಯಮಾಡಿಸಿದ್ದರು. ಎಲ್ಲಾ ಭಕ್ತರಿಗೂ ಆಶೀರ್ವದಿಸಿ ಜಾತ್ರೆಗೆ ಬಹಳ ಶೋಭೆಯನ್ನುಂಟುಮಾಡಿದರು. ಮತ್ತು ಶ್ರೀ ಹುಣಸೀಘಟ್ಟದ ನಂಜುಂಡಾರಾಧ್ಯರಿಂದ ಶಿವಕೀರ್ತನೆಯು ಸಹ ನಡೆಯಿತು.

ಸದ್ರಿ ಸ್ಟೇಟ ಶಿವಮೊಗ್ಗಾ ಡಿಸ್ಟ್ರಿಕ್ಟ ಭದ್ರಾವತಿ ತಾಲೂಕ ಗೋಣಿಬೀಡ ಮಠಕ್ಕೆ ಸಂಬಂಧಪಟ್ಟ ಮಾಳೆನಹಳ್ಳಿ ಶ್ರೀ ನುಲಿಯ ಚಂದಪ್ಪ ಶರಣರ ಜಾತ್ರೆಯು ಇದೇ ಆಶ್ವೀಜ ಬಹುಳ ಚೌಥಿ ೨೬—೧೦—೫೩ ನೇ ಸೋಮವಾರ ಪ್ರಾರಂಭವಾಗಿ ಮಂಗಳವಾರ, ಬುಧವಾರ ಎರಡು ದಿವಸ ನಡೆದು ಸಮಾಪ್ತಿಯಾಯಿತು. ಶರಣರು ತಮ್ಮ ಕಾಯಕವನ್ನು ಮುಗಿಸಿ ಕೈಲಾಸಕ್ಕೆ ತೆರಳಿದರು.

ಈ ಎರಡೂ ಕಾರ್ಯಗಳು ಶ್ರೀಮನ್ನಿರಂಜನ ಪ್ರಣಮಸ್ವರೂಪಿಗಳಾದ ಶ್ರೀ ಸಿದ್ಧವೀರ ಸ್ವಾಮಿಗಳ ನೇತೃತ್ವದಲ್ಲಿ ನೆರವೇರಿತು.

—ಒಬ್ಬ ಪ್ರೇಕ್ಷಕ.

## ತಿಳಿವಿನ ದೀಪ್ಪ

ಬಳ್ಪು ಬೆಳಗಿಸೋ ತಿಳವಿನ ದೀಪಾ
ಅಳಿಸೋ ಭವ ಶಾಪಾ ॥ ಪಲ್ಲವಿ ॥

ಹೃದಯ ಗುಡಿಯ ಬೆಳಗಿ
ಮದಚಕ್ಷು ಕಶ್ಮಲ ತೊಳೆದು
ಶಿವಎಂಬ ಗುಡಿಸಲೊಳಗೆ
ಶಿವನಾಮ ಘೋಷ ಬೀರಿ
ಬಳ್ಪು ಬೆಳಗಿಸೋ ತಿಳವಿನ ದೀಪಾ ॥೧॥

ಹೊಲೆಯ ಹಾರುವರೆಂಬ
ಕುಲಛಲವನ್ನು ನೀ
ಪ್ರೇಮ ಮಂದಿರದಿಂದ
ಸಮರದಿ ಶಮೆ ಬೀರಿ
ಬಳ್ಪು ಬೆಳಗಿಸೋ ತಿಳವಿನ ದೀಪಾ ॥೨॥

ಹೊಗಳಿಕೆಗೆ ತೆಗಳಿಕೆಗೆ
ಹಿಗ್ಗಿ ಕುಗ್ಗದಲೆ
ಸಾಗರದ ಶಾಂತಿಯ
ಉಗಮ ಮಾಧುರ್ಯವ ಬೀರಿ
ಬಳ್ಪು ಬೆಳಗಿಸೋ ತಿಳವಿನ ದೀಪಾ ॥೩॥

ಹುದಸುತ್ತಿದಾ ಮತಿಯ
ಮರ್ದಿಸಿ ನಿರ್ಮಲಗೊಳಿಸಿ
ಮೃದು ಮಾರುತದಂತೆ
ಶುದ್ಧ ಮತಿ ಬೀರಿ
ಬಳ್ಪು ಬೆಳಗಿಸೋ ತಿಳವಿನ ದೀಪಾ ॥೪॥

ಭಾತೃಭಾವವ ಬೀರಿ
ಮಿತ್ರ ಬಂಧುವ ಸೇರಿ
ಶತ್ರುಸಮ ತಿಳಿದು
ಶ್ವೇತರಶ್ಮಿಯ ಬೀರಿ
ಬಳ್ಪು ಬೆಳಗಿಸೋ ತಿಳವಿನ ದೀಪಾ ॥೫॥

—ನಾರಾಯಣ ಜೋಶಿ, ಮಮದಾಪೂರ.

ಅವಳು ವೀರಶೈವ ಧರ್ಮಾಭಿಮಾನಿಯಾಗಿದ್ದರಿಂದ ಅವಳು ಹಾಗೆ ಮಾಡಲಿಲ್ಲ. ಅವಳು ಇಷ್ಟರಲ್ಲಿ ವಿದ್ವಾಂಸಳೂ ಬಹುಶ್ರುತಳೂ ಆಗಿದ್ದರಿಂದ ಅವಳಲ್ಲಿ ವಿಚಾರ ಸ್ವಾತಂತ್ರ್ಯವು ಉಂಟಾಗಿದ್ದಿತು. ಹಾಗೆಯೇ ಅವಳು ತನ್ನ ಶಿಕ್ಷಣಕ್ಕೆ ಅನುಕೂಲ ಮಾಡಿಕೊಟ್ಟಂಥ ತಂದೆ ತಾಯಿಗಳ ಹಿತ ಮತ್ತು ಕ್ಷೇಮವನ್ನು ಲಕ್ಷಕ್ಕೆ ತರುವದು ಅವಶ್ಯವಾಗಿತ್ತು. ಅವರು ಅರಸನ ಕೋಪಕ್ಕೆ ಗುರಿಯಾಗಬಾರದೆಂಬುದಕ್ಕೆ ಅವಳು ಬಹಳ ಲಕ್ಷವನ್ನು ಪೂರೈಸಿದ್ದಾಳೆ. ಈ ಸಂಗತಿಗಳು ಈ ವರೆಗೆ ನಡೆದ ಘಟನೆಗಳಿಂದ ನಿಷ್ಪನ್ನವಾಗುತ್ತವೆ.

### ಲಗ್ನವಾಡಿಕೊಳ್ಳದಿರಲು ಮಹಾದೇವಿಯಕ್ಕನ ನಿರ್ಧಾರ

ಮಹಾದೇವಿಯಕ್ಕನು ಅರಸನ ಗೃಹಕ್ಕೆ ಹೋದಬಳಿಕ ಅವಳಿಗೂ ಕೌಶಿಕರಾಜನಿಗೂ ಯಥಾವಿಧಿ ಲಗ್ನವಾಯಿತೆಂದು ಕೆಲವು ಗ್ರಂಥಗಳಲ್ಲಿ ಹೇಳಿದೆ. ಬೇರೆ ಕೆಲವು ಗ್ರಂಥಗಳಲ್ಲಿ ಹಾಗೆ ಉಲ್ಲೇಖಗಳಿಲ್ಲ. ಹರಿಹರ ಕವಿಯು ಆಕೆಗೆ ಸರಿಯಾಗಿ ಲಗ್ನವಾಯಿತೆಂತಲೂ ಉಭಯತರು ಸತಿಪತಿಗಳಂತೆ ಇದ್ದಳೆಂತಲೂ ಹೇಳುತ್ತಾನೆ. ಆದರೆ ಈ ಕವಿಯು ಬರೆದ ಮಹಾದೇವಿಯಕ್ಕನ ಚರಿತ್ರೆಯನ್ನು ನೋಡಿದಲ್ಲಿ ಅವನಿಗೆ ಆಕೆಯ ಬಗ್ಗೆ ನಿಜವಾದ ಸಂಗತಿಗಳು ಗೊತ್ತಾಗಿದ್ದಿಲ್ಲವೆಂದು ತೋರುತ್ತದೆ. ಅವನು ತನ್ನ ರಗಳೆಯಲ್ಲಿ ಮಹಾದೇವಿಯಕ್ಕನು ಕಲ್ಯಾಣಕ್ಕೆ ಹೋದದ್ದನ್ನೂ ಅವಳು ಅಲ್ಲಿ ಶಿವಾನುಭವ ಮಂಟಪದಲ್ಲಿ ಇದ್ದು ಬಸವಣ್ಣನ ಪರಿಚಯು ಮಾಡಿಕೊಂಡದ್ದನ್ನೂ ಅವನು ಎಷ್ಟೂ ಉಲ್ಲೇಖಿಸಿರುವದಿಲ್ಲ. ಅರಸನ ಗೃಹದಲ್ಲಿ ಅವಳು ವಿಷಯಲೋಲುಪಳಾಗಿ ವಾಸಮಾಡಿದ್ದನ್ನು ಮಾತ್ರ ಸವಿಸ್ತಾರವಾಗಿ ಹೇಳುತ್ತಾನೆ. ಆದ್ಧರಿಂದ ಮಹಾದೇವಿಯಕ್ಕನ ಬಗ್ಗೆ ಅವನು ಮಾಡಿದ ವಿವರಣೆಗಳು ನಂಬಲರ್ಹವಲ್ಲವೆಂದು ನಮಗೆ ತೋರುತ್ತದೆ.

ಕೌಶಿಕ ರಾಜನ ಮಹಾದೇವಿಯಕ್ಕನು ಅರಮನೆಗೆಹೋಗುವ ಪೂರ್ವದಲ್ಲಿ ಅವಳ ಮನದಲ್ಲಿ ಅನೇಕ ವಿಚಾರಗಳೂ ಯೋಚನೆಗಳೂ ಬಂದಿರಬಹುದು. ಅವಳು ಆಗ ಚನ್ನಾಗಿ ಶಿಕ್ಷಣಹೊಂದಿ ಸ್ವತಂತ್ರ ವಿಚಾರವುಳ್ಳವಳೂ ಅನುಭಾವಿಯೂ ಆಗಿದ್ದಳೆಂಬುದು ಅವಳ ವಚನಗಳಿಂದ ನಾವು ಅನುಮಾನ ಮಾಡಬಹುದಾಗಿದೆ. ಹಾಗೆಯೇ ಅವಳು ಶಿವಶರಣ ಶರಣೆಯರ ಚರಿತ್ರೆಗಳನ್ನೂ ಚನ್ನಾಗಿ ಓದಿದವಳಾಗಿದ್ದಳು. ಮಹಾದೇವಿಯಕ್ಕನು ತನ್ನ ಶಿವಾನುಭವ ವರ್ತನೆಯಲ್ಲಿ ಅರಸನು ಅಡ್ಡಬರಬಾರದೆಂದು ಅವನಿಂದ ವಚನ ತೆಗೆದು

ಕೊಂಡಿದ್ದಳು. ಆದರೆ ಮುಂದೆ ತಾನು ಭಕ್ತಿ ಅವನು ಭವಿ ಹೀಗೆ ಉಭಯತರ್ರು ಕೂಡಿಕೊಂಡು ಸಂಸಾರ ನಡಿಸುವದು ಕಠಿಣವೆಂಬ ವಿಚಾರಗಳು ಅವಳ ಮನದಲ್ಲಿ ಬಂದಿರಬಹುದು. ವೈಜವ್ವೆಯು ಶಿವಭಕ್ತಿಯುಳ್ಳವಳಾಗಿ ಜೈನನಾದ ಗಂಡನಕೂಡ ಅಂಚರಿಸುತ್ತಿರುವಾಗ ಜೈನಮುನಿಗಳಿಗೋಸ್ಕರ ತಾನು ತಯಾರಿಸಿದ ಆಹಾರ ಸಾಮಗ್ರಿಗಳನ್ನು ಅವಳು ಆಕಸ್ಮಾತಾಗಿ ಮನೆಗೆ ಜಂಗಮ ಪತಿಥಿಗಳು ಬಂದದ್ದರಿಂದ ಅವರಿಗೆ ಅವುಗಳನ್ನು ಕೊಟ್ಟುಬಿಟ್ಟಳು. ಅದನ್ನು ಜೈನನಾದ ಆಕೆಯ ಪತಿಯು ಕಂಡು ಅತ್ಯಂತ ರೋಷತಾಳಿ ಅವಳನ್ನು ಹೊಡೆದು ಬಡಿದು ಬಹಳ ಘಾಸಿ ಮಾಡಿದನು. ಆ ಪೆಟ್ಟು ಗಳು ಗ್ರಾಮದಲ್ಲಿದ್ದ ಜೈನರಿಗೆ ತಾಗಿದವು ಮರುದಿನ ಬಸದಿಯ ಬಾಗಿ ಲವು ಏನು ಮಾಡಿದರೂ ತೆಗೆಯಲಿಲ್ಲ ಇದು ವೈಜವ್ವೆಯನ್ನು ಬಡಿದಿ ದ್ದರ ಪರಿಣಾಮವೆಂದು ಜೈನರು ತಿಳಿದು ವೈಜವ್ವೆಯ ಕೈಯ್ಯಿಂದ ಬಾಗಿ ಲವನ್ನು ತೆರಿಸಲು ಒಳಗಿದ್ದ ಜೈನ ಮೂರ್ತಿಗಳು ಒಡೆದು ಹೋಗಿ ಅವು ಶಿವಲಿಂಗಗಳಾಗಿದ್ದವು. ಮುಖ್ಯ ಪೀಠದಲ್ಲಿ ಲಿಂಗವು ಉದ್ಭವಿಸಿತ್ತು. ಅದ ರಲ್ಲಿಯೇ ಅವಳು ಲಯವಾಗಿ ಹೋದಳು. ಆ ದೇವಾಲಯವು ಪರಳೀ ವೈಜನಾಥವೆಂದು ಈಗಲೂ ಪ್ರಸಿದ್ಧವಾಗಿದೆ. ಇದೇ ಪ್ರಕಾರ ಸೋಹಳೀಯ ಸೋಮವ್ವೆ, ಹೇರೂರ ಹೆಣ್ಣು ಇವರು ಭವಿಗಳನ್ನು ಲಗ್ನವಾಗಲಾಗಿ ಅವರಿಗೆ ತಮ್ಮ ಶಿವಾಚಾರದಂತೆ ನಡೆಯಲು ಸಾಧ್ಯವಾಗಲಿಲ್ಲ. ಆಗ ಅವರು ಹಾನಿಗೆ ಒಳಗಾಗಬೇಕಾಯಿತು. ಬಸವೇಶ್ವರನ ಕಾಲದಲ್ಲಿ ಬಹು ಜನರು ವೀರಶೈವ ಧರ್ಮವನ್ನು ಸ್ವೀಕರಿಸಿದರು. ಆಗ ಶಿವಶರಣರು ವೀರಶೈವ ದೀಕ್ಷೆಯನ್ನು ಅವರಿಗೆ ಕೊಡುವಲ್ಲಿ ಅವರ ಹೆಂಡಂದಿರನ್ನು ಮೊದಲು ಬರಮಾಡಿಕೊಂಡು ಅವರನ್ನೊಡಗೊಂಡು ಅವರಿಗೆ ಲಿಂಗದೀಕ್ಷೆಯನ್ನು ಅವ ರಿಗೆ ಕೊಡುವ ಉಪಕ್ರಮವನ್ನು ಕೈಕೊಂಡರು. ಇದು ನನ್ನಯ್ಯನ ಚರಿತ್ರೆ ಯಿಂದ ತಿಳಿದು ಬರುತ್ತದೆ. ಮಹಾದೇವಿಯಕ್ಕನಿಗೆ ಈ ಸಂಗತಿಗಳು ಲಕ್ಷಕ್ಕೆ ಬಂದು ಅವಳು ಆಗ ಕೆಲವೊಂದು ಅತ್ಯಂತ ಕಠಿಣವಾದ ಮತ್ತು ಕ್ರಾಂತಿಕಾರಕವಾದ ನಿರ್ಧಾರವನ್ನು ದೃಢಪಡಿಸಿಕೊಂಡು ರಾಜನ ಮನೆಗೆ ಹೊರಟಳು.

## ದಿಗಂಬರತ್ವವನ್ನು ನಿಶ್ಚಯಿಸಿದ್ದು

ಅವಳು ರಾಜನ ಅಂತಃಪುರವನ್ನು ಪ್ರವೇಶ ಮಾಡಿದ ಕೂಡಲೇ ಕೌಶಿಕರಾಜನು ಮಹಾದೇವಿಯಕ್ಕನ ಕೂಡ ಲಗ್ನಸಮಾರಂಭವನ್ನು ಜರು

ಗಿಸುವ ಪ್ರಸ್ತಾಪವನ್ನು ಪ್ರಾರಂಭಿಸಿದನು. ಆಗ ಮಹಾದೇವಿಯಕ್ಕನು ಕೌಶಿಕರಾಜನು ತನ್ನ ಜೈನ ಧರ್ಮವನ್ನು ಬಿಟ್ಟುಕೊಟ್ಟು ವೀರಶೈವ ಧರ್ಮ ವನ್ನು ಸ್ವೀಕರಿಸಿದರೆ ಮಾತ್ರ ತಾನು ಅವನನ್ನು ವರಿಸುವೆನು, ಇಲ್ಲದಿದ್ದರೆ ಇಲ್ಲ. ಇದಕ್ಕೆ ಅವನ ಅಭಿಪ್ರಾಯವೇನೆಂಬುದನ್ನು ತಿಳಿದುಕೊಂಡು ಬರಲು ಮಂತ್ರಿಗಳಿಗೆ ತಿಳಿಸಿದಳು. ಆದಕ್ಕೆ ಕೌಶಿಕರಾಜನು ತಾನು ಜೈನ ಧರ್ಮ ವನ್ನು ಬಿಡುವದಿಲ್ಲೆಂದು ಮಾರುತ್ತರ ಕಳಿಸಲು ಮಹಾದೇವಿಯಕ್ಕನು ಇನ್ನು ಮೇಲೆ ನಾನು ಯಾರನ್ನೂ ಲಗ್ನವಾಗುವದಿಲ್ಲ, ಹರನೇ ನನಗೆ ಗಂಡನು, ಉಳಿದ ಗಂಡರು ನನಗೆ ಬೇಡ ಎಂದು ನುಡಿಯುತ್ತ, ಇನ್ನುಮೇಲೆ ನನಗೆ ಮಂಗಳವೇ ಮಜ್ಜನವು. ವಿಭೂತಿಯೇ ಒಳುಗುಂದದ ಅರಿಸಿನವು, ರುದ್ರಾ ಕ್ಷಿಯೇ ಮೈದೊಡಿಗೆ. ದಿಗಂಬರವೇ ದಿವ್ಯಾಂಬರವು ಎಂದು ಮಂತ್ರಿ ಗಳಿಗೆ ಹೇಳಿ ತಾನು ಧಾರಣ ಮಾಡಿದ್ದ ವಸ್ತ್ರಾಭರಣಗಳನ್ನೂ ಅಲಂಕಾರ ಗಳನ್ನೂ ತೆಗೆದಿಟ್ಟು, ತಾನುಟ್ಟುದನ್ನು ಕಳೆದು ಚೆಲ್ಲಿ, ಸಂಪೂರ್ಣ ದಿಗಂಬರಿ ಯಾದಳು. ಆಗ ಅವಳು ಇನ್ನುಮೇಲೆ – ನಾನು ಯಾರನ್ನೂ ಲಗ್ನವಾಗು ವದಿಲ್ಲ, ಆ ಜನ್ಮ ಹೇಗೆಯೋ ವಿರಕ್ತೆಯಾಗಿ ಕನ್ನಿಕೆಯಾಗಿ ಉಳಿಯುವೆನು, ಎಂದು ಪ್ರತಿಜ್ಞೆಯನ್ನು ಮಾಡಿ ರಾಜಭವನವನ್ನು ಬಿಟ್ಟು ಪಟ್ಟಣದ ಹೊರಕ್ಕೆ ಹೊರಟಳು.

## ವೀರಶೈವರಲ್ಲಿ ದಿಗಂಬರತ್ವವು.

ಈ ಕಾಲದಲ್ಲಿ ನಾಡಿನಲ್ಲಿ ಜೈನ ಸಂಸ್ಕೃತಿಯು ಪ್ರಬಲವಾಗಿತ್ತು. ಜೈನರಲ್ಲಿ ದಿಗಂಬರಿಗಳನೇಕರು ನಾಡಿನಲ್ಲಿ ಸಂಚರಿಸುತ್ತಿದ್ದರು. ಜನರಾದರೂ ಅವರ ತ್ಯಾಗವೃತ್ತಿಯನ್ನು ನೋಡಿ ಅವರನ್ನು ಪೂಜಿಸುವರು. ಆದರೆ ಶಿವಶರಣ ರಲ್ಲಿ ದಿಗಂಬರತ್ವವಿಲ್ಲ. ಆದರೂ ಮಹಾದೇವಿ, ಗೊಗ್ಗವ್ವೆ, ಬೊಂತಾದೇವಿ, ಇವರು ಕೆಲಕಾಲ ದಿಗಂಬರ ವೃತ್ತಿಯನ್ನು ತಾಳಿದರು. ಆದರೆ ಶಿವಶರ ಣರು ದೇಹವನ್ನು ಕ್ಲೇಶಪಡಿಸಬಾರದೆಂಬ ತತ್ವವನ್ನು ಅನುಸರಿಸಿದವರಾದ್ದ ರಿಂದ ಈ ತರದ ಪದ್ಧತಿಯು ಕರ್ನಾಟಕದಲ್ಲಿ ಹೋಗಿಬಿಟ್ಟಿತು. ಆದರೆ ಇದಕ್ಕೆ ಅಪವಾದವಾಗಿ ಮಹಾದೇವಿಯಕ್ಕನಂಥ ಕೆಲವು ಉದಾಹರಣೆಗಳು ಮಾತ್ರ ಇರುವದು ಕಂಡುಬರುತ್ತದೆ.

ಹರಿಹರ ಕವಿಯು ಮಹಾದೇವಿಯಕ್ಕನು ದಿಗಂಬರಿಯಾಗಿ ಉಳಿಯದೆ ಕೌಶಿಕನೊಡನೆ ಲಗ್ನವಾದಳೆಂದು ತನ್ನ ರಗಳೆಯಲ್ಲಿ ಹೇಳಿರುತ್ತಾನೆ. ಆದರೆ

ಮಹಾದೇವಿಯಕ್ಕನು ತಾನು ರಚಿಸಿದ ವಚನದಲ್ಲಿ ದಿಗಂಬರವೇ ತನಗೆ 'ದಿವ್ಯಾಂಬರವೆಂದು ಸ್ಪಷ್ಟವಾಗಿ ಹೇಳಿದರುವದರಿಂದ ಅವಳು ದಿಗಂಬರಿಯಾಗಿ ಉಳಿದು ಲಗ್ನವನ್ನು ನಿರಾಕರಿಸಿ ಆಚರಿಸಿದಳೆಂದು ನಮಗೆ ತೋರುತ್ತದೆ.

## ಗೃಹತ್ಯಾಗ

ಮಹಾದೇವಿಯಕ್ಕನು ಅರಸನೊಡನೆ ಹೀಗೆ ಲಗ್ನವನ್ನು ನಿರಾಕರಿಸಿ, ದಿಗಂಬರಿಯಾಗಿ ಉಡುತಡಿಯಲ್ಲಿರುವದು ಅವಳಿಗೆ ಉಚಿತವೆಂದು ತೋರ ಲಿಲ್ಲ. ಇಂಥ ಸ್ಥಿತಿಯಲ್ಲಿ ಕೌಶಿಕರಾಜನಿದ್ದ ಊರಲ್ಲಿ ಅವಳು ಇರುವದು ಹೇಗೆ ? ಮದಾಂಧನಾದ ಕೌಶಿಕನು ತನಗೆ ಹಾನಿತರಬಹುದೆಂಬ ಭೀತಿಯು ಅವಳಿಗಿತ್ತು. ಅವಳಿಗೆ ಪ್ರಿತ್ಯಾಸ್ಪದರಾದ ತಾಯಿ ತಂದೆಗಳ ಸಮೀಪದಲ್ಲಿ ಇರುವದೂ ಕ್ಷೇಮಕರವಲ್ಲೆಂದು ಅವಳಿಗೆ ತೋರಿತು. ಆದ್ದರಿಂದ ಅವಳು ಬಸವೇಶ್ವರ ನಿದ್ದಲ್ಲಿಗೆ ಹೊರಟಳು.

ಈ ಕಾಲದಲ್ಲಿ ಬಸವೇಶ್ವರನ ಪ್ರಭಾವವು ನಾಡಿನಲ್ಲಿ ಹೆಚ್ಚುತ್ತಲೇ ಇದ್ದಿತು. ಅವನು ದೀನರಿಗೆ ಸಹಾಯಕನಾಗಿಯೂ ವರ್ತಿಸುತ್ತಿದ್ದನು. ವರದಾನಿ ಗುಡ್ಡಮ್ಮೆಯು ಆವನ ಆಶ್ರಯದಲ್ಲಿದ್ದು ವಿಪನ್ನರಿಗೆ ಸಹಾಯ ಮಾಡುತ್ತ ಬಂದಳು. ಅನೇಕ ನಿರಾಶ್ರಿತ ಸ್ತ್ರೀಯರು ಬಸವೇಶ್ವರನ ಸಾನ್ನಿಧ್ಯದಲ್ಲಿ ಕಾಯಕಗಳನ್ನು ಮಾಡುತ್ತ ಉಪಜೀವಿಸುತ್ತಿದ್ದರು. ವೀರ ದೇವಮ್ಮನೆಂಬ ಶಿವಶರಣೆಯು ವಚನಶಾಸ್ತ್ರದಲ್ಲಿ ಪಾರಂಗತಳಾಗಿ ವಚನ ಗಳನ್ನು ದಿನಾಲು ಮೂರುಸಾರೆ ಕೂಡಿದ ಜನರಲ್ಲಿ ಉಗ್ಗಡಿಸುವಳು. ವಿಮಲಾ ದೇವಿ ಎಂಬುವಳು ಶಿವಾನುಭವದಲ್ಲಿ ಚೆನ್ನಾಗಿ ಜ್ಞಾನ ಸಂಪಾದನೆ ಮಾಡಿ ಕೊಂಡು ಸ್ತ್ರೀಯರಿಗೆ ಬೋಧೆಮಾಡುವ ಕಾಯಕವನ್ನು ಕೈಕೊಂಡಿದ್ದಳು. ಹೀಗೆಯೇ ಅನೇಕ ಸ್ತ್ರೀಪುರುಷರು ಬಸವೇಶ್ವರನ ಸನ್ನಿಧಿಯಲ್ಲಿ ಲಿಂಗಾನು ಭವವನ್ನು ಹೊಂದಿ ಶಿವಜ್ಞಾನವನ್ನು ಬೋಧಿಸುವವರಾಗಿದ್ದರು. ಆದ್ದರಿಂದ ಮಹಾದೇವಿಯಕ್ಕನು ಸ್ವಾಭಾವಿಕವಾಗಿ ಅವನಿದ್ದೆಡೆಗೆ ಹೊರಡಲು ಉದ್ಯುಕ್ತ ಳಾದಳು.

## ಕಲ್ಯಾಣಕ್ಕೆ ಪ್ರಯಾಣ.

ಆದರೆ ಉಡುತಡಿಯಿಂದ ಕಲ್ಯಾಣವು ಬಹುದೂರದ ಹಾದಿಯು. ಅವಳು ಸೌಂದರ್ಯವತಿಯು ಮತ್ತು ಚಿಕ್ಕವಳು. ದಿಗಂಬರಿಯಾಗಿ ಕಲ್ಯಾ ಣದ ವರೆಗೆ ಅವಳು ಏಕಾಕಿಯಾಗಿ ಪ್ರವಾಸ ಮಾಡುವದು ಕಠಿಣವೇ ಸರಿ.

ಆಗ ಪಟ್ಟಣದ ಜನರು ಹೀಗೆ ಪ್ರವಾಸ ಮಾಡದಿರಲು ಅವಳಿಗೆ ಬಹಳ ಬೋಧಿಸಿದರು. ಇಷ್ಟೇ ಅಲ್ಲ, ಅವರು ಅವಳನ್ನು ಪ್ರತಿಬಂಧಿಸಿದಹಾಗೆಯೂ ತೋರುತ್ತದೆ. ಯಾಕಂದರೆ ಒಂದು ವಚಚನದಲ್ಲಿ ಅವಳು ಹೇಳುವದೇನೆಂದರೆ:—

"ಮುಡಿಬಿಟ್ಟು ಮೊಗಬಾಡಿ ತನುಕರಗಿದವಳ ಎನ್ನನೇಕೆ ನುಡಿಸುವಿರಿ, ಎಲೆ ಅಣ್ಣಗಳಿರಾ ? ಎನ್ನನೇಕೆ ಕಾಡುವಿರಿ ಎಲೆ ತಂದೆಗಳಿರಾ ? ಬಲುಹಳಿದು ಭವಗೆಟ್ಟು ಛಲವಳಿದು ಭಕ್ತೆಯಾಗಿ ಚನ್ನಮಲ್ಲಿಕಾರ್ಜುನನ ಕೂಡಿ ಕುಲವಳಿದವಳ ? " ಈ ವಚನದಲ್ಲಿ ಮುಡಿಬಿಟ್ಟು ಮೊಗಬಾಡಿ ತನುಕರಗಿದಳೆಂದು ಅವಳು ತನ್ನ ಸ್ವರೂಪವನ್ನು ತಾನೇ ವರ್ಣನೆ ಮಾಡಿಕೊಂಡು ತನ್ನನ್ನು ಕಾಡಬೇಡಿರೆಂದು ಜನರಿಗೆ ಹೇಳಿದ್ದಾಳೆ. (ವಚನ ೬೩.)

## ಯೋಗಸಾಧನೆಯ ಪ್ರಯತ್ನ

ಅವಳು ತನ್ನ ಪ್ರವಾಸದಲ್ಲಿ ಆತ್ಮಶುದ್ಧಿಯನ್ನು ಮಾಡಿಕೊಳ್ಳಬೇಕೆಂಬ ವಿಚಾರವು ಬಂದು ಅವಳು ಕೆಲವು ಕಾಲ ಯೋಗಸಾಧನೆಗೆ ಸಹ ಲಕ್ಷಕೊಟ್ಟಂತೆ ಕೆಳಗಿನ ವಚನದಿಂದ ತೋರುತ್ತಿದೆ. ಅವಳು ಷಟ್‌ಚಕ್ರಗಳನ್ನು ಸಾಧಿಸಲು ಯತ್ನಿಸಿದ್ದಾಳೆ. ಈ ವಚನದಲ್ಲಿ ಅವಳು ಹೇಳುವದೇನೆಂದರೆ:—

" ಮೂಲಾಧಾರದ ಬೇರಮೆಟ್ಟಿ ಭೂಮಂಡಲವನೇರಿದೆ, ಆಧಾರದ ಬೇರೆ ಹಿಡಿದು ಐಕ್ಯದ ತುದಿಯನೇರಿದೆ, ಕೈವಿಡಿದು ತಗೆದುಕೊಳ್ಳಾ ಚನ್ನಮಲ್ಲಿಕಾರ್ಜುನಾ " (ವಚನ ೧೩೧, ೧೩೨.) ಈ ಕಾಲಕ್ಕೆ ಕರ್ನಾಟಕದಲ್ಲಿ ಯೋಗಾಭ್ಯಾಸದಲ್ಲಿ ನಿಷ್ಣಾತರಾದವರು ಅನೇಕರಿದ್ದರು. ಮಹಾದೇವಿಯಕ್ಕನು ಶ್ರೀಪರ್ವತ ಅಂದರೆ ಯೋಗ ಸಾಧನೆಯ ಕಡೆಯ ಮೆಟ್ಟಲನ್ನು ಸಾಧಿಸಿರಬೇಕೆಂದು ಈ ವಚನದಿಂದ ತೋರುತ್ತದೆ. ಆದರೆ ಈ ಸಾಧನೆಯು ಶಿವಶರಣರ ಮಾರ್ಗವಲ್ಲ. ಇದನ್ನು ಮಹಾದೇವಿಯಕ್ಕನು ತಿಳಿದುಕೊಂಡು ಹೇಳುವದೇನೆಂದರೆ ತನ್ನನ್ನು ತಾನು ಅರಿಯುವದರಿಂದಲೇ ನಿಜವು ಸಾಧ್ಯವಾಗುವದೇ ಹೊರ್ತು ಯೋಗಸಾಧನೆಯಿಂದ ಸಾಧ್ಯವಾಗದು ಎಂದು ನುಡಿದಿದ್ದಾಳೆ. ಈ ವಚನದಲ್ಲಿ ಮಹಾದೇವಿಯಕ್ಕನು ಅನ್ನುವದೇನೆಂದರೆ:—
"ಆಧಾರ, ಸ್ವಾಧಿಷ್ಠಾನ, ಮಣಿಪೂರಕ, ಅನಾಹತ, ವಿಶುದ್ಧಿ, ಆಜ್ಞೆಯ ಮಾತು ಹೇಳಿದೊಡೇನು ? ಕೇಳಿದೊಡೇನು ? ತನ್ನಲ್ಲಿದ್ದುದ ತಾನರಿಯ

ದನ್ನಕ್ಕ ಹೇಳಿದೊಡೇನು ? ಉನ್ಮನಿಯು ರಭಸದ ಪವನದಲ್ಲಿದ್ದು ಚನ್ನ ಮಲ್ಲಿಕಾರ್ಜುನಯ್ಯನ ಭೇದಿಸದನ್ನಕ್ಕಕ ?"

ಮಹಾದೇವಿಯಕ್ಕನು ಈ ಪ್ರಕಾರ ತನ್ನ ಪ್ರವಾಸದಲ್ಲಿ ಯೋಗಾಭ್ಯಾಸದ ಕಠಿಣ ಮಾರ್ಗವನ್ನು ಕೆಲವು ಕಾಲ ಅನುಸರಿಸಿದರೂ ಅವಳು ಈ ಮಾರ್ಗವನ್ನು ಬಿಟ್ಟುಕೊಟ್ಟು ಕಲ್ಯಾಣಪಟ್ಟಣದತ್ತ ಮಾರ್ಗಕ್ರಮಣಮಾಡುತ್ತ ಹೊರಡುವವಳಾದಳು.

## ಪ್ರವಾಸದಲ್ಲಾದ ಕಷ್ಟಗಳು.

ಮಹಾದೇವಿಯಕ್ಕನು ಮಾರ್ಗಕ್ರಮಣ ಮಾಡುವ ಕಾಲದಲ್ಲಿ ಸ್ವಾಭಾವಿಕವಾಗಿ ಅವಳಿಗೆ ಅನೇಕ ತರದ ಜನರು ಭೆಟ್ಟಿಯಾಗುತ್ತಿದ್ದರು. ಅವರಲ್ಲಿ ಕೆಲವರು ಅವಳ ನಗ್ನ ಸ್ಥಿತಿಯನ್ನು ನೋಡಿ ನಿಂದಿಸುವರು, ಬೇರೆ ಕೆಲವರು ಅವಳನ್ನು ಸ್ತುತಿಸುವರು. ಕುತ್ರೊಮ್ಮೆ ದುಷ್ಟ ಜನರು ಆಕೆಯು ದಿಕ್ಕಿಲ್ಲದವಳೆಂದು ತಿಳಿದು ಅವಳಿಗೆ ಅನೇಕ ರೀತಿಯಿಂದ ತೊಂದರೆಕಡಿಸಿದ್ದು ಕಂಡುಬರುತ್ತದೆ. ಆದರೆ ಯಾವ ಸ್ಥಿತಿಯು ಉಂಟಾದರೂ ಸಮಾಧಾನಿಯಾಗಿರಬೇಕೆಂದು ಅವಳು ತನ್ನ ಒಂದು ವಚನದಲ್ಲಿ ಹೇಳಿರುತ್ತಾಳೆ. "ಸಂತೆಯೊಳಗೆ ಮನೆಮಾಡಿ ಶಬ್ದಕ್ಕೆ ನಾಚಿದಡೆಂತಯ್ಯ ? ಲೋಕದೊಳಗೆ ಹುಟ್ಟಿದ ಬಳಿಕ ಮನದಲ್ಲಿ ಕೋಪವ ತಾಳದೆ ಸಮಾಧಾನಿಯಾಗಿರಬೇಕೆಂದು ಹೇಳುತ್ತಾಳೆ. (ವಚನ ೪೯) ಕೆಲವು ಜನರು ಅವಳು ಪ್ರವಾಸ ಮಾಡುವ ಕಾಲದಲ್ಲಿ ಅವಳಿಗೆ ತೊಂದರೆ ಕೊಡಲು ಅದಕ್ಕೆ ಅವಳು "ಏನು ಮಾಡಿದಡೆಯೂ ನಾನಂಜುವಳಲ್ಲ" ಎಂದು ಇಂಥವರನ್ನು ಉದ್ದೇಶಿಸಿ ಹೇಳಿದ್ದಾಳೆ. ಈ ಜನರು ನನಗೆ ಕೇಡುಮಾಡಿದರೆ ನಾನು ನನ್ನ ಪ್ರಾಣವನ್ನು ಪರಮಾತ್ಮನಿಗೊಪ್ಪಿಸಿ ಶುದ್ಧಳಾಗುತ್ತೇನೆಂದು ಅಂದಿದ್ದಾಳೆ. (ವಚನ ೧೦೭) ಇದರ ಮೇಲಿಂದ ಮಹಾದೇವಿಯಕ್ಕನು ಎಷ್ಟು ಗಟ್ಟಿ ಮನಸ್ಸಿನವಳಾಗಿದ್ದಳೆಂಬುದನ್ನು ನಾವು ಊಹಿಸಬಹುದು.

## ಮಾರ್ಗದಲ್ಲಿ ಪ್ರಯಾಸಗಳು.

ಮಹಾದೇವಿಯಕ್ಕನು ಪ್ರವಾಸಮಾಡುವ ಕಾಲದಲ್ಲಿ ಅವಳಿಗೆ ಕೆಲವು ಪ್ರಸಂಗಗಳಲ್ಲಿ ಇರಲಿಕ್ಕೆ ಸಹ ಯಾರೂ ಆಶ್ರಯಕೊಡುತ್ತಿದ್ದಿಲ್ಲೆಂದು ತೋರುತ್ತದೆ. ಅವಳಿಗೆ ಹೊಟ್ಟೆಗೆ ಹಾಕುವದೊತ್ತಟ್ಟಿಗಿರಲಿ, ಕುಡಿಯಲಿಕ್ಕೆ ನೀರು ಸಹ ಕೊಡುತ್ತಿದ್ದಿಲ್ಲೆಂದು ತಿಳಿಯುತ್ತದೆ. ಈ ಬಗ್ಗೆ ಅವಳು ಅನ್ನುವದೇ

ನೆಂದರೆ:— ಕುಡಿಯಲಿಕ್ಕೆ ನನಗೆ ನೀರುಕೊಡದಿದ್ದರೆ ನನಗೆ ಹಳ್ಳ ಬಾವಿಗಳಿವೆ, ಮಲಗಲಿಕ್ಕೆ ಸ್ಥಳ ಕೊಡದಿದ್ದರೆ ನಾನು ಹಾಳು ದೇಗುಲದಲ್ಲಿ ಮಲಗುವೆನು. ಹಸಿವಾದರೆ ಪುಣ್ಯಾತ್ಮರಾದ ಯಾರಾದರೊಬ್ಬರು ನನಗೆ ಭಿಕ್ಷೆ ಕೊಡುವರು, ಎಂದು ಧೈರ್ಯ ತಂದುಕೊಳ್ಳುತ್ತಿದ್ದಳು. ಒಮ್ಮೊಮ್ಮೆ ಅವಳ್ಗೆ ಹೊಟ್ಟೆಗಿಲ್ಲದೆ ಉಪವಾಸಬೀಳುವ ಪ್ರಸಂಗಗಳೂ ಬರುತ್ತಿದ್ದವು. ಆಗ ದೃಢಮನಸ್ಸಿನವಳಾಗಿ ಮಹಾದೇವಿಯಕ್ಕನು ಅನ್ನುವದೇನೆಂದರೆ:— ನನಗೆ ಹಸಿವೆಯಾಗಿಲ್ಲ, ಹಸಿಯು ದೂರಾಯಿತು ಎಂದು ಅನ್ನುವೆನು. ಹೀಗೆ ಅಂದಕೂಡಲೆ ಅವಳಿಗೆ ಹಾಗೆಯೇ ಅನಿಸಹತ್ತುವದು, ಇಷ್ಟು ಮನಸ್ಸಿನ ದೃಢತೆಯನ್ನು ಮಹಾದೇವಿಯಕ್ಕನು ತಂದುಕೊಂಡವಳಾಗಿದ್ದಳು. ಈ ವಿಷಯವಾಗಿ ಅವಳು ಹೇಳಿದ ವಚನಗಳು ಬಹು ಅಲೌಕಿಕವೂ ಗಂಭೀರವೂ ಆಗಿವೆ. ಅವುಗಳಿಂದ ಮಹಾದೇವಿಯಕ್ಕನು ಎಷ್ಟು ಗಟ್ಟಿ ಮನಸ್ಸಿನವಳಾಗಿದ್ದಳೆಂಬುದು ತಿಳಿದುಬರುತ್ತದೆ. ಈ ಕಾಲದಲ್ಲಿ ಅವಳು ಇನ್ನೂ ಬಹು ಚಿಕ್ಕವಳು. ಆದರೂ ಅವಳು ಆರಂಭದಿಂದಲೂ ವಾಙ್ಮಯದ ಅಭ್ಯಾಸ, ಶಿವಾನುಭವದ ನಡೆ, ಯೌಗಿಕ ಸಾಮರ್ಥ್ಯ ಇವುಗಳ ಮೂಲಕ ಒಂದು ಮಹತ್ತರವಾದ ಮಾನಸ ಶಕ್ತಿಯನ್ನು ತಂದುಕೊಂಡು ಆಚರಿಸುವವಳಾಗಿದ್ದಳು. ಆ ವಚನಗಳು ಯಾವವಂದರೆ:—

(೧) ಬೆಟ್ಟದಮೇಲೊಂದು ಮನೆಯ ಮಾಡಿ ಮೃಗಂಗಳಿಗಂಜಿದೊಡೆಂತಯ್ಯ ? ಸಮುದ್ರದ ತಡಿಯಲ್ಲಿ ಮನೆಯ ಮಾಡಿ ನೊರೆತೆರೆಗಳಿಗಂಜಿದೊಡೆಂತಯ್ಯ ? ಸಂತೆಯೊಳಗೊಂದು ಮನೆಯ ಮಾಡಿ ಶಬ್ದಕ್ಕೆ ನಾಚಿದೊಡೆಂತಯ್ಯ ? ಮಲ್ಲಿಕಾರ್ಜುನದೇವ ಕೇಳಯ್ಯ, ಲೋಕದೊಳಗೆ ಹುಟ್ಟಿದ ಬಳಿಕ ಸ್ತುತಿನಿಂದೆಗಳು ಬಂದರೆ ಮನದಲಿ ಕೋಪವ ತಾಳದೆ ಸಮಾಧಾನಿಯಾಗಿರಬೇಕು.

(೨) ಆರೂ ಇಲ್ಲದವಳೆಂದು ಅಳಿಗೊಳಲು ಬೇಡ ಕಂದಯ್ಯ ಏನು ಮಾಡಿದಡೆಯೂ ನಾನಂಜುವಳಲ್ಲ. ತರಗೆಲೆಯಮೇಲಿದ್ದು ನಾನಿಹೆನು. ಸುರಾಗಿಯ ಮೇಲೊರಗಿ ನಾನಿಹೆನು, ಚೆನ್ನಮಲ್ಲಿಕಾರ್ಜುನಯ್ಯ ಕರಕೆಡೆ ನೋಡಿದೊಡೆ ಒಡಲನು ಪ್ರಾಣವನು ನಿಮಗೊಪ್ಪಿಸಿ ಶುದ್ಧಳಿಹೆನು.

(೩) ಹಸಿವಾದೊಡೆ ಭಿಕ್ಷಾನ್ನಗಳುಂಟು. ತೃಷೆಯಾದೊಡೆ ಕೆರೆ ಹಳ್ಳ ಭಾವಿಗಳುಂಟು. ಶಯನಕ್ಕೆ ಹಾಳು ದೇಗುಲಗಳುಂಟು. ಚನ್ನ ಮಲ್ಲಿಕಾರ್ಜುನಯ್ಯ ಆತ್ಮ ಸಂಗಾತಕ್ಕೆ ನೀನೆನಗುಂಟು.

(೪). ಕಿಡಿಕಿಡಿಕೆದರಿದರೆ ಎನಗೆ ಹಸಿವುತೃಷೆ ಅಡಗಿತೆಂಬೆನು. ಮುಗಿಲು ಹರಿದು ಬಿದ್ದಡೆ ಎನಗೆ ಮಜ್ಜನಕ್ಕೆರೆದರೆಂಬೆನು. ಗಿರಿಯಮೇಲೆ ಬಿದ್ದಡೆ ಎನಗೆ ಪುಷ್ಪವೆಂಬೆನು. ಚನ್ನಮಲ್ಲಿಕಾರ್ಜುನಯ್ಯ ಶಿರಹರಿದು ಬಿದ್ದಡೆ ಪ್ರಾಣ ನಿಮಗರ್ಪಿತವೆಂಬೆನು.

## ಮಹಾದೇವಿಯಕ್ಕನ ದೃಢಸಂಕಲ್ಪ.

ಮಹಾದೇವಿಯಕ್ಕನು ಕೆಲವೊಂದು ತತ್ವವನ್ನು ಪರಿಪಾಲಿಸಬೇಕೆಂದು ಸುಖ ಸೌಕರ್ಯಗಳನ್ನು ಬಿಟ್ಟುಕೊಟ್ಟು ಕಷ್ಟದ ಮಾರ್ಗವನ್ನು ಕೈಕೊಂಡವಳಾಗಿದ್ದಳು. ಹೀಗೆ ಕೈಕೊಂಡ ಬಳಿಕ ಅದನ್ನು ಎಂದೂ ಬಿಡಕೂಡದೆಂದು ದೃಢಸಂಕಲ್ಪವುಳ್ಳವಳಾಗಿದ್ದಳು. ಅವಳು ಒಂದು ವಚನದಲ್ಲಿ ಹೇಳುವದೇನೆಂದರೆ— ಚಂದನನ ಕಡಿದು ಕೊರೆದು ತೇದೊಡೆ ನೊಂದೆನೆಂದು ಕಂಪ ಬಿಟ್ಟಿತ್ತೆ? ಸಂದು ಸಂದು ಕಡಿದ ಕಬ್ಬುನವ ಗಾಣದಲಿಕ್ಕಿ ಬೆಂದು ಪಾಕಾಗುಳ್ಳ ಸಕ್ಕರೆಯಾಗಿ ನೊಂದೆನೆಂದು ಸವಿಯು ಬಿಟ್ಟಿತ್ತೆ? ಅಂದರೆ ಎಂಥ ಕಷ್ಟಗಳು ಬಂದರೂ ತಾನು ಕೈಕೊಂಡ ಧ್ಯೇಯಗಳನ್ನು ಬಿಡಕೂಡದೆಂದು ಅವಳ ಅಭಿಪ್ರಾಯವಾಗಿತ್ತು. (ವಚನ ೧೯೯.)

ಮಹಾದೇವಿಯಕ್ಕನು ಸ್ವಗ್ರಾಮವನ್ನು ಬಿಟ್ಟಬಳಿಕ ಅವಳು ಪರಾವಲಂಬಿಯಾಗಿರುವ ಪ್ರಸಂಗವು ಬಂದಿತು. ಅವಳು ಅಶನಕ್ಕಾಗಿ ಎರಡನೆಯವರಿಂದ ಯಾಚನೆ ಮಾಡಿರಬಹುದು. ಒಂದು ವಚನದಲ್ಲಿ ಅವಳು ಅನ್ನುವದೇನೆಂದರೆ—

"ಮನೆ ಮನೆ ತಪ್ಪದೆ ಕೈಯ್ಯೊಡ್ಡಿ ಬೇಡುವಂತೆ ಮಾಡಯ್ಯ. ಬೇಡಿದೊಡೆ ಇಕ್ಕದಂತೆ ಮಾಡಯ್ಯ" ಎಂದು ಅನ್ನುತ್ತಾಳೆ. (ವಚನ ೧೧೦) ಭಿಕ್ಷೆ ಬೇಡುವದು ಸರಿಯಲ್ಲವೆಂದು ಅವಳಿಗೆ ಎನಿಸಿ ಆವಳು ಕೂಡಲೆ ಬೇಡಿದೊಡೆ ಇಕ್ಕದಂತೆ ಮಾಡಯ್ಯ ಎಂದು ತತ್‌ಕ್ಷಣ ನುಡಿಯುತ್ತಾಳೆ. ಎಂದರೆ ಅವಳಿಗೆ ಈ ಕಾಲದಲ್ಲಿ ಸರಿಯಾದ ಮಾರ್ಗವು ಯಾವದು ಮತ್ತು ಯಾವದು ಯೋಗ್ಯವಲ್ಲ ಎಂಬ ವಿಚಾರಗಳು ಮನಸ್ಸಿನಲ್ಲಿ ಬಂದು ತಳಮಳಿಸುತ್ತಿದ್ದಂತೆ ತೋರುತ್ತದೆ. ಅಷ್ಟರಲ್ಲಿ ತನ್ನ ಕಾಯಕ್ಕೋಸ್ಕರ ಇಷ್ಟೇಕೆ ಚಿಂತೆ ಎಂಬ ವಿಚಾರವು ಬಂದು ತನ್ನ ತನಗೆಯೇ ಸಮಾಧಾನ ಹೇಳಿಕೊಳ್ಳುವದೇನೆಂದರೆ- "ಕಾಯ ಕರ್‍ರನೆ ಕಂದಿದರೇನು? ಕಾಯ ಮಿರ್‍ರನೆ ಮಿಂಚಿದಡೇನು? ಅಂತರಂಗ ಶುದ್ಧವಾದಬಳಿಕ ಕಾಯಕವೇನಾದಡೇನಯ್ಯ?" (ವಚನ ೧೧೧.) ಎಂಬ ವಿಚಾರವು ಅವಳ ಮನಸ್ಸಿನಲ್ಲಿ ಬರುತ್ತದೆ. ಆಗ ಅವಳು ಎಂಥ



From
Shivanubhava
Office
Bijapur.

BOOK-POST

R. N. B. 2554



ಈ ಪತ್ರಿಕೆಯನ್ನು ಇದರ ಸಂಪಾದಕರಾದ, ರಾ|| ಬ|| ಪಿ. ಜಿ.
ಹಳಕಟ್ಟಿ. ಬಿ. ಎ. ಎಲ್. ಎಲ್. ಬಿ. ಇವರು ವಿಜಯಪುರ, ವಾರ್ಡ
ನಂ ೨. ಮನೆ ನಂ. ೧೩೬೮ ರಲ್ಲಿರುವ ತಮ್ಮ ಹಿತಚಿಂತಕ ಪ್ರಿಂಟಿಂಗ್
ಹಾರವ ಪ್ರೆಸ್ಸಿನಲ್ಲಿ ಮುದ್ರಿಸಿ ಅಲ್ಲಿಯೇ ಪ್ರಸಿದ್ಧಿಸಿದರು.

R. N. B. 2554

# ಶಿವಾನುಭವ

—ooo●ooo—

ಸಂಪುಟ ೨೭ ] [ ಸಂಚಿಕೆ ೧೨

ಸಂಪಾದಕರು
ಫ. ಗು. ಹಳಕಟ್ಟಿ
ಬಿ. ಏ. ಎಲ್. ಎಲ್. ಬಿ.



ವಾ. ಚ. ೫-೧೨-೦] ವಿಜಾಪೂರ [ ಡಿಸೆಂಬರ ೧೯೫೩

## ವಿಷಯಾನುಕ್ರಮಣಿಕೆ

# ಶಿವಾನುಭವ


| ವರ್ಷ ೨೭ | ಡಿಶಂಬರ ೧೯೫೩ | ಸಂಚಿಕೆ ೧೨ |
| --- | --- | --- |


## ಪ್ರಮಥರೂ ಆರಾಧ್ಯರೂ.


( ಲೇಖಕಃ— ಶ್ರೀ ಬಸನಪ್ಪ ಚನ್ನಪ್ಪ ಪಟ್ಟೇದ-ಹುಕ್ಕೇರಿ )




ಪ್ರಮಥರೆಂದರೆ— ಕಲ್ಯಾಣದ ಅನುಭವ ಮಂಟಪದ ಮೂಲಕವಾಗಿ ಶ್ರೀ ಪ್ರಭುದೇವರ ಅಧ್ಯಕ್ಷತೆಯಲ್ಲಿ, ವೀರಶೈವ ಮತತತ್ವಗಳನ್ನು ಒಳ್ಳೆತಾಗಿ ಪ್ರಮಥಿಸಿ ( ಚರ್ಚಿಸಿ ಚರ್ಚಿಸಿ, ) ಏಕ ಮತದಿಂದ ನಿರ್ಧರಿಸಿ, ಆದರಂತೆ ತಾವು ನಡೆದು, ಮುಂದಿನವರಿಗೆ ತಿಳಿದು ಅವರೂ ಹಾಗೆ ನಡೆದು, ಜನ್ಮೋದ್ಧಾರಹೊಂದಿ ಕೃತಾರ್ಥರಾಗಲೆಂದು, ವಚನಶಾಸ್ತ್ರರೂಪದಿಂದ ಬರೆದು ಇಟ್ಟವರು. ಇವರಿಗೆ ಅಮರಗಣ ( ಸಾವಿಲ್ಲದ-ಜೀವನ್ಮುಕ್ತ ) ಗಣಗಳು ಎಂಬ ಹೆಸರೂ ಇತ್ತು. ಅವರು ೭೭೦ ಜನರಿದ್ದರೆಂದು ಹೇಳುತ್ತಾರೆ. ಪ್ರಭುದೇವ, ಬಸವೇಶ್ವರ, ಚನ್ನಬಸವೇಶ್ವರ, ಮಡಿವಾಳಮಾಚಿದೇವ, ಸಿದ್ಧರಾಮೇಶ್ವರ ಮೊದಲಾದವರೇ ಇವರಲ್ಲಿ ಪ್ರಮುಖರು. ಬಸವನು ಭಕ್ತಿಮಾರ್ಗದಲ್ಲಿಯೂ ಚನ್ನಬಸವನು ಜ್ಞಾನಮಾರ್ಗದಲ್ಲಿಯೂ, ಪ್ರಭುದೇವರು ವೈರಾಗ್ಯದಲ್ಲಿಯೂ, ಮಡಿವಾಳಮಾಚಯ್ಯನು ಗಣಾಚಾರದಲ್ಲಿಯೂ ಅತ್ಯಂತ ಖ್ಯಾತಿಯನ್ನು ಹೊಂದಿದವರು. ಸಿದ್ಧರಾಮನಂತೂ ಮೊದಲಿನಿಂದಲೇ ಹಣೆಗಣ್ಣು ( ವಿರೂಪಾಕ್ಷಿ ಇಲ್ಲವೆ ರುದ್ರನೇತ್ರ ) ಪಡೆದವನು. ಶಿವನನ್ನು ಕಂಡವನು. ಇವರೇ ವೀರಶೈವ ಮತಕ್ಕೆ ಮೂಲಾಧಾರರು. ಇವರ ಜ್ಞಾನಾಚಾರಗಳು ತೀರ ಪರಿಶುದ್ಧವಾದವುಗಳು. ಇವರಿಂದಲೇ ಲಿಂಗಾಯತ ಮತವು ಊರ್ಜಿತಾವಸ್ಥೆಗೆ ಬಂದು ಎಲ್ಲ ರೀತಿ

ಯಿಂದಲೂ ಈಗಿನ ಸುಸ್ಥಿತಿಯನ್ನೂ ನಿರ್ದೋಷತ್ವವನ್ನೂ ಹೊಂದಿತು. ಜಗದ ಎಲ್ಲ ಜನರೂ ಸ್ವೀಕರಿಸುವಂತೆ ಉತ್ಕೃಷ್ಟವಾಯಿತು. ಆದರೆ ಪ್ರಮಥರು ಬಿಜ್ಜಳಾದಿಗಳ ಉಪಟಳದಿಂದ ಹೆಚ್ಚುಕಾಲ ಬಾಳಲಿಲ್ಲ. ಅಂತೆಯೇ ಅನಿವಾರ್ಹ ಪಕ್ಷಕ್ಕೆ ಬಾಲ್ಯಾವಸ್ಥೆಯಲ್ಲಿದ್ದ ವೀರಶೈವಮತವು ಆರಾಧ್ಯರ ಕೈಯ್ಯಲ್ಲಿ ಸಿಕ್ಕುಬಿದ್ದಿತು. ಇವರು ಜೈನರಿಂದ ಆಗ ನಮ್ಮ ಮತವನ್ನು ರಕ್ಷಿಸಿದರೆಂಬುದೇನೋ ನಿಜ, ಆದರೂ ನಮ್ಮನ್ನು ನಮ್ಮ ಗುರಿಯಿಂದ ಕದಲಿಸಿ ಬೇರೆದಾರಿ ಹಿಡಿಸಿದರು.

ಆರಾಧ್ಯರೆಂದರೆ ಆರಾಧನೆ (ಪೂಜೆ) ಹೊಂದುವವರು. ಇವರಿಗೆ ಲಿಂಗ ಜನಿವಾರಗಳೆರಡೂ ಇರುವವು. ಲಿಂಗವನ್ನು ಪೂಜಿಸಿ ಶಿವನ ಕೃಪೆ ಪಡೆಯುವ ಹಂಬಲವನ್ನೂ ಹಿಡಿಯುವರು. ಜನಿವಾರ ಹಾಕಿಕೊಂಡು ವೇದಾಧ್ಯಯನವನ್ನೂ ಮಾಡುವರು. ಅಂದರೆ ಯಜ್ಞ, ಯಾಗ, ವರ್ಣಾಶ್ರಮಗಳತ್ತಲೂ ಇವರು ಮನದಲ್ಲಿ ಹೆಚ್ಚಾಗಿ ಎಳೆತವುಳ್ಳವರು. ಅದರಿಂದ ಪ್ರಮಥರ ತೀರ ಶುದ್ಧವಾದ ಮಾರ್ಗದಿಂದ (ಷಟ್‌ಸ್ಥಲಮಾರ್ಗದಿಂದ) ಲಿಂಗವನ್ನು ಪೂಜಿಸಲೂ ಹೋಗುವದಿಲ್ಲ. ಆದರೆ ವೇದೋಕ್ತ ಕ್ರಮದಂತೆ ಋದ್ರಾಭಿಷೇಕಾದಿಗಳಿಂದ ಮಾತ್ರ ಇಷ್ಟಲಿಂಗವನ್ನು ಪೂಜಿಸುವರು. ರುದ್ರವೆಂದರೆ ಇವರಿಗೆ ಬಹು ಮೇಲಾದುದಾಗಿ ತೋರುವದು. ಯಾಕೆಂದರೆ, ಅದು ವೇದದಲ್ಲಿ ಹೇಳಲ್ಪಟ್ಟಿದೆ. ನಾನು ಒಬ್ಬ ಚರಂತಿಸ್ವಾಮಿಗೆ ಪೂರ್ವವಯಸ್ಸಿನಲ್ಲಿ ಭೆಟ್ಟಿಯಾಗಿದ್ದೆನು. ಆಗ ನಾನು ಮೂರನೆಯ ವರ್ಷದ ಮೊದಲನೆಯ ತರಗತಿಯ ಸರ್ಟಿಫಿಕೇಟು ಪಡೆದ ಟ್ರೇಂಡ ಮಾಸ್ತರನಾಗಿದ್ದೆನು. ಅವನು "ನಿಮಗೆ ರುದ್ರ, ಹಾಗೂ ಅದರ ನಮಕಚಮಕಗಳು ಗೊತ್ತವೆಯೇನು?" ಎಂದು ಕೇಳಿದನು. ನನಗೆ ಅವೇನು ಗೊತ್ತಿಲ್ಲದಿದ್ದುದರಿಂದ "ಇಲ್ಲ" ಎಂದೆನು. ನನಗೆ ಆ ಶಬ್ದಗಳು ಹೊಸದಾಗಿಯೇ ಕಿವಿಗೆ ಬಿದ್ದಂತಹವು. ಮುಂದೆ ಉತ್ತರ ವಯಸ್ಸಿನಲ್ಲಿ ಆ ರುದ್ರವೆಂದರೆ ಏನಿರುವದೆಂಬುದನ್ನು ತಿಳಿಯುವ ಅಪೇಕ್ಷೆಯಿಂದ ಅದನ್ನು ಓದಿದೆನು. ಅದರಲ್ಲಿ ಆರಂಭಕ್ಕೆ ರುದ್ರದೇವನ ಸ್ತುತಿಪರ ಕೆಲವು ಶ್ಲೋಕಗಳು ಕಂಡವು. ಹಾಗೆ ಸ್ತೋತ್ರ ಮಾಡಿ ಮಾಡಿ "ಇಂತಹ ರುದ್ರನಿಗೆ ನನ್ನ ನಮಸ್ಕಾರವಿರಲಿ" ಎಂದು ಪ್ರಾರ್ಥಿಸಿರುತ್ತದೆ. ಇದೇ ಆ ರುದ್ರನ ನಮಕವು. ಮುಂದೆ ಓದಲು ರುದ್ರನ ಮಹಿಮೆಯ ವರ್ಣನವು ಹೊರಟಿತು. ಇದೇ

ಆ ರುದ್ರನ ಚಮಕವು. ಈ ನಮಕ ಚಮಕಗಳ ಕೆಲಕೆಲವು ಭಾಗಗಳನ್ನು ಆ ಚರಂತಿಪ್ಪನು ಕಲಿತಿದ್ದನು. ಅವನ ಜ್ಞಾನವೆಂದರೆ ಇಷ್ಟೇ! ತೀರಿತು, ಅದನ್ನೇ ನನಗೆ ಆತನು ಕೇಳಿ ಬೆದರಿಸಿಬಿಟ್ಟನು. ಅನೇಕ ಅಯ್ಯಗಳು ದೇವರ ಗುಡಿಯಲ್ಲಿ ಅಭಿಷೇಕ ಮಾಡುವ ಸಲುವಾಗಿ ಈ ಈ ನಮಕ ಚಮಕಗಳನ್ನು ಸ್ವರಯುಕ್ತವಾಗಿ ಕಲಿತಿರುತ್ತಾರೆ. ಅದರಿಂದ ದಕ್ಷಿಣೆ, ಊಟಗಳು ದೊರೆಯುವವು. ಇತ್ತಿತ್ತ ಭಕ್ತರಿಗೆ ಭುಲ್-ಥಾಪ ಕೊಟ್ಟು ( ಕಣ್ಣಲ್ಲಿ ಮಣ್ಣು ಚೆಲ್ಲಿ ) ಅಲ್ಲಲ್ಲಿಗೆ ರುದ್ರ-ಮಹಾರುದ್ರಗಳ ಅಭಿಷೇಕವನ್ನು ನೆಟ್ಟಲಿಂಗಕ್ಕೆ ಇಲ್ಲವೆ ಬಸವಣ್ಣನೆಂದು ಕರೆಯಲ್ಪಡುವ ನಂದಿಯ ಮೂರ್ತಿಗೆ ಮಾಡಿಸುವರು. ಈ ವಿಧದ ಭಕ್ತಿಯು ವೀರಶೈವದ್ದಲ್ಲ ಅದು ಶೈವರ ಭಕ್ತಿಯು. ಅದಕ್ಕೂ ವೀರಶೈವಾಗೂ ಏನೇನೂ ಸಂಬಂಧವಿಲ್ಲ. ಅದು ಆರಾಧ್ಯರಿಗೆ ಮಾತ್ರ ಬೇಕಾದುದು. ಅದರಲ್ಲಿ ತಿಂಗಳು—ಎರಡು ಮೂರು ತಿಂಗಳು ಚೈನದಿಂದ ಸವಿಯೂಟ ಮಾಡಲು ಸಿಗುವದು.

ರುದ್ರನ ಈ ನಮಕ ಚಮಕಗಳಷ್ಟೇ ಈ ಅಯ್ಯಗಳಿಗೆ (ಆರಾಧ್ಯರಿಗೆ) ಗೊತ್ತು. ಆದರೆ ಅದರಲ್ಲಿರುವ ಗಮಕ, ಯಮಕಗಳ ಕಡೆಗೆ ಇವರು ನೋಡುವದೇ ಇಲ್ಲ. ಗಮಕವೆಂದರೆ ಜ್ಞಾನ. ಗಮ್ (ಜ್ಞಾನಹೊಂದು) ಧಾತುವಿನಿಂದ ಇದು ಆಗಿದೆ. ಅದರಂತೆ ಯಮ್ (ನಿಯಮನ ಹೊಂದು) ಎಂಬ ಧಾತುವಿನಿಂದ ಯಮಕ (=ಜ್ಞಾನದಂತೆ ನಡೆಯುವ) ಎಂಬುದು ಹುಟ್ಟಿದೆ. ಈ ಜ್ಞಾನಾಚಾರಗಳೆರಡೂ ಇಲ್ಲದೆ ಖರೇ ಸ್ವರಯುಕ್ತವಾಗಿ ಎಲ್ಲರೂ ಕೂಡಿ ಅದನ್ನು ದೊಡ್ಡದನಿಯಿಂದ ಉಚ್ಚರಿಸಿದರೆ ಅದರಿಂದೇನು ಪ್ರಯೋಜನವಾಗುವದು? ಆತ್ಮೋದ್ಧಾರಕ್ಕೆ ಎಳ್ಳನಿತಾದರೂ ಸಹಾಯವಾಗುವದೇ? ಇಲ್ಲ! ಇಲ್ಲವೇ ಇಲ್ಲ!

ಅಯ್ಯನವರಿಗೆ ಬರಿಯ ಲಿಂಗ ಮಾತ್ರ ಇರುತ್ತದೆ. ಜನಿವಾರ (ಯಜ್ಞೋಪವೀತ) ಇರುವದಿಲ್ಲ. ಇವರನ್ನು ಅದು ಹೇಗೆ ನೀವು, ಲಿಂಗ ಜನಿವಾರಗಳೆರಡೂ ಇರುವ ಆರಾಧ್ಯರಲ್ಲಿ ಸೇರಿಸುವಿ ? ಎಂದು ಯಾರಾದರೂ ಕೇಳಬಹುದು. ಅಹುದು! ನಿಮ್ಮ ಶಂಕೆಯು ಸರಿಯಿರುವದು. ಆದರೆ ಇದಕ್ಕೆ ಸಮಾಧಾನ ಇಷ್ಟೇ:— ಇವರು ಪ್ರತ್ಯಕ್ಷ ಜನಿವಾರ ಹಾಕದಿದ್ದರೂ ಲಿಂಗದ ಕರಡಿಗೆಗೆ ಕಟ್ಟಿದ ಶಿವದಾರವನ್ನೆ ಯಜ್ಞೋಪ

ಪೀತನೆಂದು ಮನದಲ್ಲಿ ಭಾವಿಸುವರು. ಅನೇಕರು ಈಗ ಚಂಡಿಕೆಗಳನ್ನು ಬಿಡುವರು. ಬಸವಾರಾಧ್ಯ-ರುದ್ರಾರಾಧ್ಯ-ಶಿವಲಿಂಗಾರಾಧ್ಯ-ಇತ್ಯಾದಿಯಾಗಿ ಕರೆಸಿಕೊಳ್ಳುವರು. ಹೆಚ್ಚಿಗೆ ಅಧ್ಯಯನಕ್ಕೆಂದು ಕಾಶಿಗೆ ಹೋದವರನಕ ಚಂಡಿಕೆ ಕಾಯ್ದು, ಲಿಂಗದ ಕರಡಿಗೆಗೆ ಜನಿವಾರವನ್ನೇ ಶಿವಧಾರದಂತೆ ಕಟ್ಟಿಕೊಂಡು ಆ ಕರಡಿಗೆ ಕಾಣದಂತೆ ಉಟ್ಟ ಪಂಜೆಯಲ್ಲಿ ಸಿಕ್ಕಿಸಿ ಕೊಂಡು, ಶುದ್ಧಬ್ರಾಹ್ಮಣರ ವೇಷವನ್ನೇ ಅಳವಡಿಸಿಕೊಳ್ಳುವರು. ಇದರ ವಿನಾ ಅಲ್ಲಿ ಅಧ್ಯಯನ ಮಾಡಿಸುವ ಬ್ರಾಹ್ಮಣ ಅಧ್ಯಾಪಕರು, ಇವ ರನ್ನು ಒಳಗೆ ತಮ್ಮ ಹತ್ತರ ಬರಗೊಡುವದೇ ಇಲ್ಲ. ಈ ರೀತಿ ಕಾಶಿ ಯಲ್ಲಿ ನಾಲ್ಕೆಂಟು ವರುಷ ಇದ್ದು, ಬ್ರಾಹ್ಮಣರ ಬಳಿಯಲ್ಲಿ ಬ್ರಾಹ್ಮ ಣೀಯ ಶಾಸ್ತ್ರಗಳನ್ನೇ ಓದಿ. ಒಮ್ಮೆ ಆ ಚಟ ಬಿದ್ದಿತೆಂದರೆ, ಅದು ಅವರ ಮೈಯಿಂದು ಬಿಡುವದು. ಇಂತಹ ಶಾಸ್ತ್ರಿಗಳು ಮುಂದೆ ನಮ್ಮ ಕಡೆಗೆ (ಕನ್ನಡದೇಶಕ್ಕೆ) ತಿರುಗಿ ಬಂದು ಇಲ್ಲಿಯ ಜನರಿಗೂ ಹಾಗೆಯೇ ಬೋಧಿಸುತ್ತಾರೆ. "ಜುಟ್ಟಾಕಾಯಿರಿ ವರ್ಣಾಶ್ರಮ ಧರ್ಮವನ್ನು ಪಾಲಿಸರಿ, ಸೂತಕ ಮಡಿ ಮೈಲಿಗೆಗಳನ್ನು ಎಣಿಸಿರಿ. ಸ್ತ್ರೀಯರನ್ನು ನಿಮ್ಮ ಸರಿಸಮ ತಿಳಿಯ ಬೇಡಿರಿ" ಇತ್ಯಾದಿಯಾಗಿ ಹೇಳಹತ್ತುವರು. ತಿಳಿಗೇಡಿಗಳಾದ ಬೋಳೆಯ ಸ್ವಭಾವದ ಭಕ್ತಜನರು ಅದೇ (ಶಾಸ್ತ್ರಿಗಳಾದವರು ಹೇಳು ವದೇ) ನಿಜವೆಂದು ನಂಬಿ ಹಾಗೆಯೇ ಮಾಡಹತ್ತುವರು. ಹೀಗಾಗಿಯೇ ನಮ್ಮಲ್ಲಿ ಜಾತಿಭೇದವೂ ಮಡಿಮೈಲಿಗೆಗಳೂ ಸೇರಿಕೊಂಡಿವೆ. ಸ್ತ್ರೀಯ ರನ್ನು ನಮ್ಮಂತೆ ಕಾಣುವದಿಲ್ಲ; ಅವರನ್ನು ಕಡಿಮೆಯವರೆಂದು ತಿಳಿಯು ತ್ತೇವೆ. ಹೊಡೆದು — ಬಡಿದು— ಪರಿಪರಿಯಿಂದ ಕಾಡಿಸಿ— ತ್ರಾಸ ಕೊಡುತ್ತೇವೆ. ಇದು ಅಲ್ಲದೆ ಗಂಡ ಸತ್ತವರನ್ನು ಪುನರ್ವಿವಾಹ ಮಾಡಿ ಕೊಳ್ಳಲಿಕ್ಕೆ ಹಿಂಜರಿಯುತ್ತೇವೆ. ಮಾಡಿಕೊಂಡವರಿಗೆ ಉಡಿಕಿಯವರೆಂದೂ ಅವರ ಸಂತತಿಗೆ ಹೀನವೆಂದೂ, ತಿಳಿಯುತ್ತೇವೆ. ಆಕೆಗನಕಾ ಕುಂಕುಮ ಹಚ್ಚಗೊಡುವದಿಲ್ಲ. ಆರತಿ ಹಿಡಿಯಲಿಕ್ಕೂ ದೆಳಗಲಿಕ್ಕೂ ಆಕೆಗೆ ಅಧಿ ಕಾರವೇ ಇಲ್ಲವಾಗಿದೆ. ಅದರಂತೆ ಅಯ್ಯಗಳು ತಾವು ನಡೆದು ನಮಗೂ ಅದರಂತೆಯೇ ನಡೆಯುವ ಪ್ರೇರಣೆಯನ್ನು ಉಂಟುಮಾಡುತ್ತಾರೆ. ಮತ್ತೂ ಏನೆಂದರೆ ಈ ಅಯ್ಯನವರು ಸಹ ಭಕ್ತರಿಂದ ಸರ್ವತೋಮುಖವಾಗಿ ಆರಾಧನೆ ಗೊಂಬುವರು. ಇದೆಲ್ಲ ನೋಡಿದರೆ ಇಂತಹರನ್ನು ಆರಾಧ ಕೆನ್ನುವದರಲ್ಲಿ ತಪ್ಪೇನು? ತರಲಿ·

"ಬೇಡುವವ ಜಂಗಮನಲ್ಲ" ಎಂದು ಹೇಳಿದ್ದಾರೆ. ಆದರೆ ಈ ಆರಾಧ್ಯರು ಬುಧ್ಯಾಜಂಗಮ ದೀಕ್ಷೆ ಹೊಂದಿ ಭಿಕ್ಷೆ ಬೇಡತೊಡಗುತ್ತಾರೆ. ಭಿಕ್ಷೆಯೆಂದರೆ ಪರರಲ್ಲಿ ಹೋಗಿ ಬೇಡುವದೇ ಅದೆ. ಅದರಿಂದ ಅವನು ಜಂಗಮನು ಹೇಗಾಗುವನು? ಬೇಡಿದೊಡನೆಯೇ ಆ ಜಂಗಮತ್ವಕ್ಕೆ ಚ್ಯುತಿಯು ಬರುವದು. ಅವರಿದ್ದಲ್ಲಿಯೇ ಪರರು ತಾವಾಗಿಯೇ ಸ್ವಸಂತೋಷದಿಂದಲೂ ಭಕ್ತಿಪೂರ್ವಕವಾಗಿಯೂ ತಂದ ಕೊಟ್ಟರೆ ಮಾತ್ರ ಅದನ್ನು ಸ್ವೀಕರಿಸಬಹುದು. ಆದರೆ ಅದನ್ನಾದರೂ ಎಷ್ಟು ಮಟ್ಟಿಗೆ, ತನಗೆ ಅದರ ಗರಜು ಇರುವ ಮಟ್ಟಿಗೆ! ಸಂಗ್ರಹಿಸಿ ಇಡವದಕ್ಕೆಂದು ತೆಗೆದುಕೊಳ್ಳಬಾರದು. ಅಥಣಿಯ ಮುರುಗೇಂದ್ರ ಸ್ವಾಮಿಗಳ (ಶಿವಯೋಗಿಗಳ) ಉದಾಹರಣೆಯನ್ನು ಎಲ್ಲರೂ ನೆನೆಯಬೇಕು.

ಈಗ ಎಷ್ಟೋ ಕಡೆ ಕಾಲೇಜುಗಳಿದ್ದಲ್ಲಿ ಪ್ರಸಾದ ನಿಲಯಗಳಾಗಿರುತ್ತವೆ. ಅವನ್ನು ದೂರ ದೃಷ್ಟಿಯ ಮಹಿಮರಾದ ಜಂಗಮರೇ ಸಾಗಿಸುತ್ತಿರುವರು. ಇಂತಹರು ಮಾತ್ರ ಎಲ್ಲೆಡೆಗೆ ಸಂಚರಿಸಿ ಸಿಕ್ಕಷ್ಟು ಸಂಗ್ರಹಿಸಿ ಅಲ್ಲಿರುವ ಬರುವ ವಿಧ್ಯಾರ್ಥಿಗಳ ಅನುಕೂಲತೆಗಾಗಿ, ಎಲ್ಲತರದ ಸಹಾಯವನ್ನು ನೀಡುತ್ತಿರುವರು ಸ್ತುತ್ಯವಾಗಿದೆ. ಇವರ ಬೇಡುವಿಕೆಯಿಂದ ಜಂಗಮತ್ವಕ್ಕೇನೂ ಹಾನಿ ಬರಲಾರದು. ಅದು ಭೇದ ಭಾವವಿಲ್ಲದೆ, ಎಲ್ಲ ವೀರಶೈವ ಬಡಜನ ಸಮಾಜದ ಉದ್ಧಾರಕ್ಕೋಸ್ಕರ ವಿರುವದು. ಅವರು ಮಾತ್ರ ತಮಗೊಂದು ವಿಧ್ಯಾರ್ಥಿಗಳಿಗೊಂದು ಹೀಗೆ ಭಿನ್ನಭಿನ್ನ ಅಡಿಗೆ ಮಾಡಿಸದೆ, (ಪಂಕ್ತಿ ಪ್ರಪಂಚ ಮಾಡದೆ) ನಡೆಯುತ್ತಿರುವದು ಭೂಷಣವು. ದಾಸೋಹ ಮಠಗಳಲ್ಲಿಯೂ ಇದೇ ಕ್ರಮ ವ್ಯವಸ್ಥೆಗಳಿರುವದು ಇಷ್ಟವಾದದ್ದು. ಇದಕ್ಕೆ ಅಂಕಲಗಿಯ ಆದಿ ಅಡವೀ ಸ್ವಾಮಿಗಳೇ ತಕ್ಕ ಉದಾಹರಣವಾಗಿರುವರು.

ಆರಾಧ್ಯರು (ಅಯ್ಯಗಳು) ತಮಗೆ ಅಯ್ಯಾಚಾರದಿಂದಲೇ ಮಹೇಶ್ವರತ್ವ— ಜಂಗಮತ್ವಗಳು ದೊರೆಯುತ್ತವೆಂದು ಭಾವಿಸುತ್ತಾರೆ. ಮಹೇಶ್ವರತ್ವವೆಂದರೆ ಗುರುವರ್ಗದವರೆಂದೂ, ಸ್ವಾಮಿಗಳೆಂದೂ, ಹೇಳಿಕೊಳ್ಳುಹಕ್ಕು. ಜಂಗಮತ್ವವೆಂದರೆ—ಜಂಗ ಕಟ್ಟಿಕೊಂಡು ಭಿಕ್ಷೆ ಬೇಡುವ ಹಾಗೂ ಭಕ್ತರಿಗೆ ಪಾದೋದಕ ಪ್ರಸಾದವೀಯುವ ಹಕ್ಕು. ಇದಕ್ಕಾಗಿ ಬೇರೆ ಶಿವಜ್ಞಾನ ಶಿವಾಚಾರಗಳನ್ನೇನೂ ಹೊಂದುವ ಗೋಜಿಗೆ ಅವರು ಬೀಳುವದಿಲ್ಲ.

ಆದರೆ ಪ್ರಮಥರ, ಮಾಹೇಶ್ವರತ್ವ, ಪ್ರಸಾದಿತ್ವ, ಜಂಗಮತ್ವಗಳು ಇವರಿಂದ ಶೀರಭಿನ್ನವಾಗಿವೆ. ಮಹೇಶ್ವರತ್ವದಲ್ಲಿ ಭಕ್ತನು, ಕ್ರಿಯಾಗಮ ಭಾವಾಗಮ, ಜ್ಞಾನಾಗಮಗಳನ್ನು ಪಡೆದು, ಸಕಾಯ - ಅಕಾಯ- ಪರಕಾಯಗಳಿಂದ ಧರ್ಮಾಚಾರ- ಭಾವಾಚಾರ-ಜ್ಞಾನಾಚಾರಗಳನ್ನು ಸಂಪಾದಿಸುವದಿರುತ್ತದೆ.

ಪ್ರಸಾದಿತ್ವದಲ್ಲಿ ತನ್ನಲ್ಲಿ ಶಿವನೇ ಇರುವನು, ಅವನೇ ಎಲ್ಲ ಕಾರ್ಯಗಳನ್ನು ಮಾಡುವನು. ನನಗೂ ಅದಕ್ಕೂ ಏನೇನು ಸಂಬಂಧವಿಲ್ಲ," ಎಂದು ಭಾವಿಸಿ, ಕಾಯಾನುಗ್ರಹ- ಇಂದ್ರಿಯಾನುಗ್ರಹ-ಪ್ರಾಣಾನುಗ್ರಹಗಳನ್ನು ಪಡೆದು, ಆ ಶಿವಲಿಂಗಕ್ಕೆ ಕಾಯಾರ್ಪಿತ-ಕರಣಾರ್ಪಿತ-ಭಾವಾರ್ಪಿತಗಳನ್ನು ಮಾಡಿ, ತಾನು ಅವನ ಶಿಷ್ಯನೂ -ಶೂಪ್ರಸವೂ ಆಗಿ, ಜನಸಮಾಜದಲ್ಲಿ ಸೇವ್ಯನಾಗುವದದೆ.

ಜಂಗಮತ್ವದಲ್ಲಿ ಜೀವಾತ್ಮ ಅಂತರಾತ್ಮ ಪರಮಾತ್ಮರ ಸತ್ಯಸ್ವರೂಪವನ್ನು ಮನನಪೂರ್ವಕವಾಗಿ ಭಾವಿಸಿಕೊಂಡು, ನಿರ್ದೇಹಾಗಮ ನಿರ್ಭಾವಾಗಮ ನಷ್ಟಾಗಮಗಳನ್ನು ಹೊಂದಿ, ಆದಿಪ್ರಸಾದಿ ಅಂತಪ್ರಸಾದಿ ಸೇವ್ಯಪ್ರಸಾದಿ ಯಾಗುವದಿದೆ. ಹೀಗೆ ಪ್ರಸಾದಿತ್ವ ಹೊಂದಿದಾಗಲೇ ಅವನು ಸ್ವಯ ಜಂಗಮ, ಚರಜಂಗಮ, ಪರಜಂಗಮ ಲಿಂಗಗಳನ್ನು ಪೂಜಿಸಿ ಜಂಗಮತ್ವವನ್ನು ಪಡೆಯಬೇಕಾಗುವದು.

ಇವಕ್ಕೂ ಮೇಲೆ ಹೇಳಿದ ಆರಾಧ್ಯರ ಈ ಸ್ಥಿತಿಗಳಿಗೂ ಏನಾದರೂ ಹೋಲಿಕೆ ಯುಂಟೆ? ಆರಾಧ್ಯರವು ಅನಾಯಾಸವಾಗಿ ಬರೇ ಅಯ್ಯತನ ದೀಕ್ಷೆ ಹೊಂದಿದೊಡನೆಯೇ ತಾವೇ ಬರುವವು. ಪ್ರಮಥಾನುಯಾಯಿ ಭಕ್ತರು ಬಹು ಶ್ರಮದಿಂದಲೂ ಅವನ್ನು ಪಡೆದು, ಜ್ಞಾನಾಚಾರಗಳುಳ್ಳವರಾಗುವದಿರುತ್ತದೆ. ಅಂತೆಯೇ ಹಿಂದೆ ಷಟ್‌ಸ್ಥಲಗಳನು ಬರೆಯುವಾಗ ಅಯ್ಯನವರ ಮಹೇಶ್ವರತ್ವಕ್ಕೂ ಪ್ರಮಥರ ಮಹೇಶ್ವರತ್ವಕ್ಕೂ ಅಜಗಜ ಅಂತರ ಉಂಟೆಂದು ಹೇಳಿರುವೆನು.

ಪ್ರಸಾದಿತ್ವವನ್ನು ಅಯ್ಯನವರು ಹೊಂದುತ್ತಾರೆ. ಆದರೆ ಅದರಲ್ಲಿ ತಮ್ಮೊಳಗೆ ಶಿವನಿರುವನೆಂದು ಮನಃಪೂರ್ವಕ ಭಾವಿಸಿ, ಅಹಂಕಾರವನ್ನು (ನಾನಾ) ಎಂಬುದನ್ನು ಪೂರ್ಣ ಹೊಡೆದು ಹಾಕುವ ಉದ್ಯೋಗಕ್ಕೆ

ಹೋಗುವದೇ ಇಲ್ಲ. ಬರೀ ಪ್ರಸಾದ ಮಂತ್ರದಿಂದ, ಊಟದ ಎಡೆಯನ್ನು ಅದು ಹೇಗೆ ಪ್ರಸಾದ ಗೊಳಿಸಬೇಕೆಂಬುದನ್ನು, ತಿಳಕೊಳ್ಳುವರು. ಇದರಿಂದೇನೂ ಅದು ನಿಜವಾದ ಪ್ರಸಾದ (ಶಿವರೂಪ) ವಾಗದೆ, ಬರೀ ಇವರು ಭಾವಿಸಿದ ಮಂತ್ರಪ್ರಸಾದ ವಾಗುತ್ತದೆ. ಅದನ್ನು ಹೊಟ್ಟೆತುಂಬ ಹೊಡೆದು ತೇಗುತ್ತ ಸಾಗಿದರೆ ತಾವು ಪ್ರಸಾದಿಗಳಾದಂತಾಯಿತು.

ಮೇಲೆ, ಭಕ್ತರು ಆರಾಧ್ಯರ ಕೈಯಲ್ಲಿ ಸಿಕ್ಕುಬಿದ್ದುದು ಒಳಿತಾಗಲಿಲ್ಲೆಂದು ಹೇಳಿರುವದಷ್ಟೇ. ಅದು ಹ್ಯಾಗೆ ಎಂಬುದನ್ನು ತಿಳಿಯುವ ಅಪೇಕ್ಷೆಯುಳ್ಳವರು, ನಾನು "ಭಕ್ತಮಾಹೇಶ್ವರರ ತುಲನೆ" ಎಂಬ ಒಂದು ಲೇಖವನ್ನು, ಸುಮಾರು ಒಂದು ವರ್ಷದ ಹಿಂದೆ ಪ್ರಕಟಿಸಿರುವೆನು. ಆ ನನ್ನ ಶಂಕೆಯನ್ನು ನಿವಾರಿಸಲಿಕ್ಕೆ ಮಾಹೇಶ್ವರರ ಸಮಾಜದ ಮುಂದಾಳುಗಳೂ, ಪಂಡಿತವರ್ಯರೂ ಆದ ಬೇರೆ ಬೇರೆ ಸುಕುಮಾರ, ಶರಣ ಸಾಹಿತ್ಯ, ಸಾವಧಾನ, ಶಿವಾನುಭವ) ಪತ್ರಿಕಾ ಸಂಪಾದಕ ಮಹಾಶಯರ ಕಡೆಗೆ ಕಳಿಸಿರುವೆನು. ಅದಕ್ಕೆ ಇದು ವರೆಗೆ ಯಾರೂ ನನ್ನ ಸಂದೇಹದ ನಿವೃತ್ತಿ ಮಾಡಲಿಲ್ಲ. ಆ ಎಡಿಟರರು ಸ್ವತಃ ಶಾಸ್ತ್ರಿಗಳು ಹೆಚ್ಚಾಗಿ ಬಲ್ಲವರೂ ಇದ್ದು ಸಹ ಅದಕ್ಕೆ ತಾವು ಮುಂದಾಗಿ ಉತ್ತರವನ್ನು ತಮ್ಮ ಪತ್ರಗಳಲ್ಲಿ ಪ್ರಕಟಿಸದೆ "ವಾಚಕರು ಉತ್ತರ ಬರೆದು ಕಳಿಸಿದರೆ ಅವಕ್ಕೆ ನಮ್ಮ ಪತ್ರದಲ್ಲಿ ಅವಶ್ಯವಾಗಿ ಸ್ಥಳ ಕೊಡುವೆವು" ಎಂದು ಬರೆದಿರುವರು. ಹೀಗೇಕೆ? ತಾವೇ ಏಕೆ ಬರೆಯಬಾರದು? ಸುಮ್ಮನೆ ಯಾರಮೇಲಾದರೂ ಹಾಕಿ, ತಾವು ಉದಾಸೀನರಾಗುವದು ಸರಿಯೆ! ಇನ್ನು ಮೇಲಾದರೂ ಆ ಮಹಾಶಯರು ಉಚಿತವಾದ ಉತ್ತರವನ್ನಿತ್ತು ನನ್ನನ್ನು ಸಂಶಯವಿಮುಕ್ತನನ್ನಾಗಿ ಮಾಡಬೇಕಾಗಿ ಬಿನ್ನಯಿಸುವೆನು. ಕೇವಲ ಸತ್ಯ ಸಂಗತಿಯನರಿಯುವ ಜಿಜ್ಞಾಸೆಯು ಹೊರತು ಬೇರೊಂದು ಉದ್ದೇಶವು ಇದರಲ್ಲಿ ಸಹಸಾ ಇರುವದಿಲ್ಲ. ಎಂತೂ ನನ್ನ ಸೇವೆಯು ಆ ಸಮಾಜಕ್ಕೆ ಸಲ್ಲಿ ಅವರ ಯೋಗ್ಯ ಹಿತವಾದರೆ ನಾನು ಕೃತಾರ್ಥನಾಗುವೆನು. "ಪರೋಪಯೋಗಾಯ ಇದಂ ಶರೀರಂ" ಎಂಬುದನ್ನೇ ಜನ್ಮದ ಧ್ಯೇಯವಾಗಿ ಇಟ್ಟುಕೊಂಡಿರುವೆನು. ಯಾರ ಮನಸ ನೋಯಿಸುವದನ್ನಾಗಲೀ ನಿಂದೆಯನ್ನಾಗಲೀ ನಾನು ಎಂದೆಂದೂ ಸ್ವೀಕರಿಸಿಲ್ಲ, ಸ್ವೀಕರಿಸುವದಿಲ್ಲ. ಮುಂದೆಯೂ ಸ್ವೀಕರಿಸಲಾರೆನು. ಅದರಿಂದೇನು ಗಳಿಸಿಕೊಳ್ಳಬೇಕಾಗಿದೆ? ತಿರುಗಿ ಅಧೋಗತಿಮಾತ್ರ ಕಟ್ಟಿಟ್ಟುದು. "ಸರ್ವ ಚಾಂಡಾಲೋ ನಿಂದಕಃ' (= ಕಾಗೆ,

ಕತ್ತೆ, ಕೋಪಿಷ್ಠರಿಗಿಂತಲೂ ಮಿಗಿಲಾದ ಚಾಂಡಾಲನು ನಿಂದಕನು ಎಂಬ ಸುಭಾಷಿತ ವಾಕ್ಯವನ್ನೂ, " ನಿಂದಿಸಿ ನುಡಿಯುದಿರಾರನು " ಎಂಬ ನಿಜಗುಣ ಶಿವಯೋಗಿಗಳ ವಾಕ್ಯವನ್ನೂ, " ಇದಿರ ಹಳಿಯಲು ಬೇಡ " ಎಂಬ ಬಸವೇಶ್ವರ ದೇವರ ವಾಕ್ಯವನ್ನೂ ಇನ್ನೂ ಬೇರೆ ಅನೇಕ ವಾಕ್ಯಗಳನ್ನೂ ನಾನು ಒಳಿತಾಗಿ ಬಲ್ಲೆನು. ಆದುದರಿಂದ ಸುಮ್ಮಸುಮ್ಮನೆ ಅಯ್ಯಗಳು ನನ್ನ ಸಲುವಾಗಿ ಸಂದೇಹಿಗಳಾಗಲಿಕ್ಕೆ ಕಾರಣವಿಲ್ಲೆಂಡು ನಮ್ರತೆಯಿಂದ ನಿವೇದಿಸಿ ಈ ಲೇಖವನ್ನು ಮುಗಿಸುವೆನು.

---

# ಕನ್ನಡ ಕುಲಗುರು ಅಲ್ಲಮಪ್ರಭು.

ಲೇ. :— ಶ್ರೀ. ಮಲ್ಲಿಕಾರ್ಜುನ ಶಿ. ಲಠ್ಠೆ (ಲಿಂಗರಾಜ ಕಾಲೇಜ, ಬೆಳಗಾವಿ.)



ನೆಲದ ಮರೆಯ ನಿಧಾನದಂತೆ, ಮುಗಿಲಮರೆಯಲಡಗಿರ್ದ
ಮಿಂಚಿನಂತೆ, ಬಯಲಮರೆಯಲಡಗಿರ್ದ ಮರೀಚಿಯಂತೆ,
ಕರಿಗಳ ಮರೆಯಲಡಗಿರ್ದ ಬೆಳಗಿನಂತೆ ಗುಹೇಶ್ವರಾ.
ನಿಮ್ಮ ನಿಲವು.— ಪ್ರಭುದೇವ.

ಭಕ್ತಿ, ಜ್ಞಾನ, ವೈರಾಗ್ಯಗಳ ಸ್ವರೂಪವನ್ನು ಲೋಕಕ್ಕೆ ಸಾರಿದ ಪ್ರಭುವು, ಗುರುತ್ವವನ್ನು ಜಗತ್ತಿಗೆ ತಿಳಿಸಬೇಕೆಂದು ದೇಶಪರ್ಯಟನ ಮಾಡುತ್ತ ನಡೆದಿದ್ದಾನೆ. ದಾರಿಯಲ್ಲಿ ಸೊಂಪಾಗಿ ಬೆಳೆದಿದ್ದ ತೋಟವನ್ನು ಕಂಡು ವಿಶ್ರಮಿಸಿಕೊಳ್ಳಲು ನಿಂತ. ಆ ತೋಟದ ಒಡೆಯ ಗೊಗ್ಗಯ್ಯ ಹೊಲ ಹಸನಮಾಡುತ್ತಿದ್ದಾನೆ. ಅದನ್ನು ಕಂಡ ಪ್ರಭುವು ಈ ವ್ಯವಸಾಯದಿಂದ ಬರುವ ಭಾಗ್ಯವೇನು? ಇಷ್ಟೇಕೆ ಕಷ್ಟಪಡುವೆ ಎಂದು ಮರುಗಿದರು. ಮನದಲ್ಲಿಯ ಮಲಿನತೆಯನ್ನು 'ತನುವ ತೋಟವ ಮಾಡಿ ಮನವ ಗುದ್ದಲಿ ಮಾಡಿ ಅಗಿದು ಕಳೆಯಯ್ಯ' ಎಂದು ಹೇಳಿ, 'ಶಿವನು ಬೇರಿಯಲ್ಲ, ತಾನು ಬೇರಿಯಲ್ಲ. ಪರಶಿವತತ್ವದ ಧ್ಯಾನದಲ್ಲಿಯೇ ಐಕ್ಯನಾದರೆ ಅದೇ ನಿಜಮುಕ್ತಿ' ಎಂದ್ಹೇಳಿದರು.

ಅಲ್ಲಿಯೇ ಜೀವನ್ಮುಕ್ತ ಅನಿಮಿಷಾರ್ಯನೆಂಬ ಪರಮಗುರುವನ್ನು ಕಂಡು, ' ಅರಸುವ ಬಳ್ಳಿ ಕಾಲಸುತ್ತಿತ್ತೆಂಬಂತೆ, ಬಯಸುವ ಬಯಕೆ ಕೈಸಾರುವಂತೆ, ಬಡವ ನಿಧಾನವ ನೆಡಹಿಕೊಂಡಂತೆ, ನಾನರಸುತ್ತಲರಸುತ್ತ ಬಂದು ಭಾವಕ್ಕಗಮ್ಯನ ಕಂಡೆನಯ್ಯ: ' ಎಂದು ಅನನ್ಯಭಾವದಿಂದ ಅನಿಮಿಷಯ್ಯನನ್ನು ಪ್ರಭುವು ಕೊಂಡಾಡಿದ. ಅಂಗೈಯೊಳಮೃತ ಫಲವನ್ನು ಪಡೆದ. ಲಿಂಗಾಂಗ ಸಮರಸಿಯಾಗಿ ಮರಣಾತೀತನಾದ ಆತ್ಮಜ್ಯೋತಿಯಿಂದ ತುಂಬಿರುವ ಅಲ್ಲಮನ ಹೃದಯ ಗಗನ ವಿಶಾಲವಾಯಿತು. ಸ್ಫಟಿಕದ ಶಲಾಕೆಯಂತೆ ಮನಸ್ಸು ನಿರ್ಮಲವಾಯಿತು. ಕರತಳಾಮಳಕ ತತ್ವಾನುಭವಿಗಳಾದರು. ಇಂಥ ಪುಣ್ಯಾತ್ಮನಿಂತ ನೆಲೆಯೇ ದಿವ್ಯಕ್ಷೇತ್ರವಾಯಿತು. ಪ್ರಭುವಿನ ಮಾತೇ ಜ್ಯೋತಿರ್ಲಿಂಗವಾಯಿತು. ಮುಟ್ಟಿದ ಮರಗಳು ಮನುಜರಾದವು. ಮೆಟ್ಟಿದ ಪ್ರಾಣಿಗಳು ಸ್ವರ್ಗಕ್ಕೆ ನಡೆದವು.

ಮುಂದೆ ಅಡಕ ಎಂಬ ಗ್ರಾಮವನ್ನು ನೋಡಿದನು. ಅಲ್ಲಿ ಮಹಾಜ್ಞಾನಿ ಅಜಗಣ್ಣ ಎಂಬ ಶರಣ ಲಿಂಗೈಕ್ಯನಾಗಿದ್ದ. ಸಮೀಪದಲ್ಲಿದ್ದ ಮೊಸರೂರಿನಿಂದ ಆತನ ತಂಗಿ ಮುಕ್ತಾಯಕ್ಕ ಬಂದು ಅಣ್ಣನ ವಿಯೋಗಕ್ಕಾಗಿ ಪರಿಪರಿಯಿಂದ ಪ್ರಲಾಪಿಸುತ್ತಿದ್ದಳು.

"ಅಂಗೈಯೊಳಗೊಂದು ಅರಳ್ದ ತಲೆಹಿಡಿದುಕೊಂಡು ಕಂಗಳ ಮುತ್ತು
ಪನಿಸುವಾಕೆ ನೀನಾರು ? ಸಂದ ಸಂಪಿಗೆಯರಳ್ಗೆ ತುಂಬಿ ಬಂದಂಬ
ಭೇದವನರಿಯದೆ ಹಂಬಲಿಸುವ ಪರಿತಾಪವೇನು ಹೇಳಾ ತಾಯೆ?
ಎಂದು ಪ್ರಭುವು ಕೇಳಿದಾಗ ಮಹಾ ಶರಣೆ ಮುಕ್ತಾಯಕ್ಕ '

' ಆರೆಂದು ಬೆಸಗೊಳಲು ಏನೆಂದು ಹೇಳುವೆನಯ್ಯ ? ಕಾಯದೊಳಗೆ ಮಾಯವಿಲ್ಲ ಭಾವದೊಳಗೆ ಭ್ರಮೆಯಿಲ್ಲ. ಕರೆದು ಬೆಸಗೊಂಡರೆ ಕುರುಹಿಲ್ಲ; ಎಂದೆಂದು ತನ್ನ ಅವಸ್ಥೆಯನ್ನೆಲ್ಲ ಅರುಹಿದಳು. ಅದಕ್ಕೆ ಪ್ರಭುವು ನಕ್ಕು ತಾಯಿ ! ಒಂದೆಂಬೆನೆ ಎರಡಾಗಿದೆ. ಎರಡೆಂಬೆನೆ ಒಂದಾಗಿದೆ. ಅಂದಬಳಿಕ ದುಃಖಿಸುವ ಕಾರಣವೇನು ? ಎಂದು **ಪ್ರಭುವು** ಮುಕ್ತಾಯಕ್ಕನನ್ನು ಅನುಗ್ರಹಿಸಿ ಸೊನ್ನಲಾಪೂರದ ಕಡೆಗೆ **ಹೊರಟನು.**

ಸೊನ್ನಲಾಪೂರದಲ್ಲಿ ಸಿದ್ಧರಾಮನೆಂಬ ಕರ್ಮಯೋಗಿ ಮಹಾಸಾಧಕನಾಗಿದ್ದನು. ಊರ ಬಳಿಯೊಂದು ಕೆರೆಯನ್ನು ಕಟ್ಟಿಸಲು ಎಷ್ಟೋ ಜನ

ಒಡ್ಡರನ್ನು ಕೆಲಸಕ್ಕೆ ಹಚ್ಚಿದ್ದ. ಅಲ್ಲಿಯೇ ಮಲ್ಲಿಕಾರ್ಜುನ ದೇವಾಲಯ ವನ್ನೂ ತನ್ನ ಮಠವನ್ನೂ ಕಟ್ಟಿಸಿಕೊಂಡಿದ್ದ. ಸಂಸಾರದ ಕೋಟಿಲೆಗೆ ಓಳ ಗಾಗದೆ ವಿರಕ್ತನಾಗಿಯೇ ಇದ್ದ. ಆದರೆ ಅಹಂಕಾರಿಯಾಗಿದ್ದ. ಪ್ರಭುವು ಅವನ ಅಹಂಕಾರವನ್ನು ನಿರ್ಮೂಲಮಾಡಿ ಜ್ಞಾನಪ್ರಭೆಯನ್ನು ಬೀರಬೇಕಾ ಯಿತು. ಮೊದಲು ಕಲ್ಲು ಕಟೆಯುತ್ತಿದ್ದ ಆ ಒಡ್ಡನಿಗೆ ಭೆಟ್ಟಿಯಾಗಿ 'ಈ ಒಡ್ಡರಾಮನು ಗೊಡ್ಡಗೊಡನೆಯನೊಡ್ಡಿಕೊಂಡು ವ್ಯರ್ಥವಾಗಿ ಕೆಟ್ಟ ನಲ್ಲಾ' ಎಂದ. 'ಆ ಒಡ್ಡರು ನಮ್ಮ ಒಡೆಯನಿಗೆ ಅವಮಾನವೇ' ಎಂದೆಂದು ರೇಗಿ ಕಲ್ಲುಗಳನ್ನು ಎಸೆಯತೊಡಗಿದರು. ಆದರೆ ಆ ಕಲ್ಲುಗಳು ಪ್ರಭುವಿಗೆ ತಾಗಲೇ ಇಲ್ಲ- ಬಯಲಿನಲ್ಲಿ ಬಿದ್ದ ರಾಶಿಯ ಮೇಲೆ ಮತ್ತೆ ಪ್ರಭುವು ಹೋಗಿ ನಿಂತ. ಎಲ್ಲರೂ ದಿಗ್ಭ್ರಾಂತರಾದರು. 'ಯಾವನೋ ಬಡ ಜಂಗಮ ನಿಮ್ಮನ್ನು ಹೀಯಾಳಿಸುತ್ತಿದ್ದಾನೆ" ಎಂದು ಸಿದ್ಧರಾಮನಿಗೆ ದೂರು ಹೇಳಿದರು. ಸಿದ್ಧರಾಮನು ಕೋಪಾವಿಷ್ಟನಾಗಿ 'ಆರು ನಮ್ಮನು ಜರಿದವರು ಜಂಭಾರಿಯೋ ಧನುಜಾರಿಯೋ ಕಾಮಾರಿಯೋ ತೋರವನ ಹೆಡತಲೆಗುಗಿವೆ. ನಾಲಿಗೆಯ ಬೇರು ಸಹಿತವೆ ಕೀಳುವೆ, ಎಂದು ಉರಿಗ ಣ್ಣನ್ನು ತೆರೆದನು. ಆದರೆ ಉರಿಗಣ್ಣಿನಿಂದ ಹೊರಟ ಆ ಕಿಡಿಗಳು ಅಲ್ಲಮ ನನ್ನು ಸೋಂಕಲಿಲ್ಲ.

ನೋಡೆ ಬಡವನ ಕೋಪ ದವಡೆಗೆ ಕೇಡು ತಹವೊಲ್' ಸಿದ್ಧರಾ ಮನಿಗೆ ಆಶ್ಚರ್ಯವಾಯಿತು. ತಾನೊಂದು ಬಗೆದರೆ ದೈವವೊಂದು ಬಗೆ ಯಿತು. ಪ್ರಭು ಆ ಬೆಂಕಿಯನ್ನೆಲ್ಲ ತನ್ನ ಅಂಗಾಲಿನ ಕಣ್ಣಿನಲ್ಲಿ ಅಡ ಗಿಸಿಕೊಂಡನು. ಪಟ್ಟಣವನ್ನು ಸುಡುತ್ತಲಿದ್ದ ಬೆಂಕಿ ಪ್ರಜ್ವಲಿಸಹತ್ತಿತು. ಸಿದ್ಧರಾಮನ ಅಹಂಕಾರ ಬೇರು ಸಹ ಹಾರಿಹೋಯಿತು. ಶರಣು ಬಂದನು. ಮನಸ್ಸನ್ನು ಗೆದೆಯುವುದೇ ಯೋಗಿಯ ಮೊದಲನೆಯ ಕೆಲ್ಸವೆಂದು

"ಹೊನ್ನು ಮಾಯೆಯೆಂಬರು ಹೊನ್ನು ಮಾಯೆಯಲ್ಲ,
ಮಣ್ಣು ಮಾಯೆಯೆಂಬರು ಹೆಣ್ಣು ಮಾಯೆಯಲ್ಲ,
ಮಣ್ಣು ಮಾಯೆಯೆಂಬರು ಮಣ್ಣು ಮಾಯೆಯಲ್ಲ,
ಮನದ ಮುಂದಣಾಸೆಯೇ ಮಾಯೆ ಕಾಣೊ ಗುಹೇಶ್ವರಾ"

ಎಂದು ಪ್ರಭುವು ಸಿದ್ಧರಾಮನಿಗೆ ಬೋಧಿಸಿದನು. ಕಡೆಗೆ ಸಿದ್ಧರಾಮ ಪ್ರಭುವಿನ ಪಾದಾರವಿಂದಗಳಲ್ಲಿ ತನ್ನ ಸಂಶಯಗಳನ್ನು ನಿವಾರಿಸಿ ಕೊಳ್ಳುತ್ತ ಪ್ರಭುವಿನಲ್ಲಿ ಬೆರೆತನು. ಮುಂದೆ ಪ್ರಭುವು ಅವನನ್ನು ಕಲ್ಯಾಣಕ್ಕೆ ಕರೆದೊಯ್ದನು.

ಈ ಪ್ರಕಾರ ನಿಚ್ಚವೂ ನಮ್ಮವರ ನಂಜನ್ನು ಹೀರಿ ಉದ್ಧರಿಸಿದ ಕನ್ನಡ ಗುರುವಿನ ಗುಣಗಳನ್ನು ಅರಿಯುವದು ಕನ್ನಡಿಗರಾದ ನಮಗೆಲ್ಲರಿಗೂ ಅತ್ಯವಶ್ಯ.

'ಎದ್ದೇಳು ಕನ್ನಡಿಗ ನಿದ್ದೆಗಂಬಳಿಯ ಕಿತ್ತೊಗೆ'

---

# ತತ್ವಾನುಭವ

( ಲೇಖಕ:— ಶ್ರೀಯುತ ಸಿ. ನಾ. ಮಹಾಂತಣ್ಣನವರು ಹೊನ್ನೂರ. )



ಪ್ರಪಂಚದ ಪರಿತಾಪದಿಂದ ನೊಂದುಬೆಂದು ಬೆಂಡಾದ ಮಾನವನು ತನ್ನೊಳಗೆ ತಾನು:— ದೇಶಕೋಶಗಳ ನಾಡುಪಾಡುಗಳ ಭಾಗವಿಭಾಗಗಳ ಊರುಕೇರಿಗಳ ನೆರೆಹೊರೆಯ ಮನೆಮಾರುಗಳ ದೇಶವಿದೇಶಗಳ ಕಲ್ಪನಾ ಕರ್ತವ್ಯಗಳಲ್ಲಿಯೂ, ಬೇನೆಬೇಸರಿಕೆ, ವ್ಯಾಧಿವಿಡ್ಡೂರು, ರೋಗರುಜೆ, ಪಾಪಪುಣ್ಯ, ತಾಪಾದಿಗಳ ತ್ರಾಸುಗಳಲ್ಲಿಯೂ, ಮಕ್ಕಳು ಮರಿಗಳ ಬಂಧು ಬಳಗಗಳ ಹತ್ತಿಹೊಂದಿದವರ ಸ್ನೇಹಸಂಬಂಧಿಗಳ ಪ್ರೇಮಪಾಶಗಳಲ್ಲಿಯೂ, ಮಕ್ಕಳ ಭಕ್ಷಣ ಶಿಕ್ಷಣ, ಹಾಗೂ ಅವರ ಪ್ರಕೃತಿ ವಿಕೃತಿ ಸುಕೃತಿ, ಅರಿವೆ ಅಂಚಡೆ, ಸ್ನಾನಪಾನ, ಊಟಉಪಚಾರ, ಆಹಾರವಿಹಾರ, ಓದುಬರಹ ನೇಮನಿತ್ಯಗಳ ಸತ್ಯವರ್ತನಗಳ ಮೇಲ್ವಿಚಾರಣೆಗಳಲ್ಲಿಯೂ, ಕುಲಗೋತ್ರ, ಮತಮಾರ್ಗ, ಧರ್ಮಕರ್ಮ, ಸಮಾಜ ಸಂಘಟನೆ, ಗುರುಹಿರಿಯರು, ಸ್ವದೇಶಪ್ರೀತ್ಯಭಿಮಾನ, ರಾಜ್ಯರಂಜನೆ ಸಹಕಾರಸಂಘಗಳಲ್ಲಿಯೂ ಸ್ವಂತ ಕಾಳುಕಡಿ, ಧಾನ್ಯದವಸ, ಅರಿವೆಅಂಚಡಿ, ಪಲ್ಲೆಕಾಯಿ ಮನೆಯಸ್ವಚ್ಛತೆ, ಆಳುಹೋಳುಗಳ ಕರ್ತವ್ಯವಲ್ಲದೆ ಸ್ವಂತಕರ್ತವ್ಯ ನಿಷ್ಠೆನೇಮ ಸೀಮೆಗಳ

ಕ್ಕಿಯೂ, ತತ್ಪರನಾಗುವದಲ್ಲದೆ, ಕಳ್ಳಕಾಕರ ತುಡುಗು ತಪ್ಪಡಿ, ಹರಕು ಮುರಕು, ಚಾರುಚೂರುಗಳ ಕಡೆಗೆ ಲಕ್ಷ್ಯಕೊಡುವದಲ್ಲದೆ, ಲಂಡತನ ಪುಂಡತನ ದುಷ್ಟದುಮ್ಮಾನುಗಳ ಉಳಿಮೆಯ ಕಡೆಗೂ ಲಕ್ಷ್ಯಪೂರೈಸಿ ಇಡೀ ಆಯುಷ್ಯವನ್ನೇ ಈ ಭವಸಾಗರದಲ್ಲಿ ಕಸವಿಸಿಕೊಂಡು ಕಳೆದರೂ, ಇಷ್ಟಕ್ಕೆ ತೀರಿತೆನ್ನಬೇಕೆ ? ಹೀಗೆ ಎಷ್ಟೋ ಜನ್ಮದಲ್ಲಿ ಈ ತಾಪವನ್ನು ಅನುಭವಿಸಿದರೂ ಈ ಬಂಡ ಜೀವನಿಗೆ ಸುಖದ ಸುಗ್ಗಿಯೋ ಸಿಗುವಲ್ಲದಲ್ಲ ? ಎಂದು ಪಶ್ಚಾತ್ತಾಪ ಪಡುವಷ್ಟರಲ್ಲಿ, ಶ್ರಾವಣಮಾಸದಲ್ಲಿ ತನ್ನಗೆಳೆಯ ಗುರುಲಿಂಗಪ್ಪನ ಕೂಡ ಶಿವಾನುಭವ ಸಂಘದ ಪ್ರವಚನ ಕೇಳಲಿಕ್ಕೆ ಹೋದಾಗ ಆತನು ಬರಕೊಂಡು ಪಾಠಮಾಡಿದ ಶ್ರೀ ಅಲ್ಲಮಪ್ರಭುವಿನ ತತ್ವಾನುಭವವು ನೆನಪಾಗಿ ಆತನಲ್ಲಿಗೆ ಹೋಗಿ ಅದನ್ನು ಇಸುದುಕೊಂಡು ಬಂದ ತತ್ವದ ಅನುಭವವನ್ನು ಪಾಠಮಾಡಲು ಅತ್ಯಾಚರಣೆಯಾಗಿದೆಯೆಂದು ಭಾವಿಸಿದುದು, ಈ ಬಗೆಯಾಗಿದೆ.

ಪ್ರಥಮದಲ್ಲಿ ವಸ್ತು ಏನೇನೂ ಇಲ್ಲದಂದು, ಮಹಾಘನಶೂನ್ಯ ಬ್ರಹ್ಮವಾಗಿದ್ದರೂ, ಅಂತಿರ್ದ ಪರವಸ್ತು ತಾನೆ ತನ್ನ ದಿವ್ಯಾನಂದ ಸ್ವಲೀಲಾ ಭಾವದಿಂದಾದುದು, ಆತ್ಮತತ್ವವೆಂಬ ಅಂಗಸ್ಥಲ. ಅಂತಪ್ಪ ಜೀವಾತ್ಮನೆಂಬ ಅಂಗಸ್ಥಲಕ್ಕೆ ಸೇರಿದ ತತ್ವಂಗಳಿಪ್ಪತ್ತೈದು, ಅವಾವೆಂದೊಡೆ ಶ್ರೋತ್ರಾದಿ ಜ್ಞಾನೇಂದ್ರಿಯಂಗಳೈದು, ವಾಗಾದಿ ಕರ್ಮೇಂದ್ರಿಯಂಗಳೈದು, ಪ್ರಾಣಾದಿ ವಾಯುಗಳೈದು, ಶಬ್ದಾದಿ ವಿಷಯಂಗಳೈದು, ಮನ ಬುದ್ಧಿ ಚಿತ್ತ ಅಹಂಕಾರ ಜೀವಂಗಳೈದು, ತನ್ನೊಳಗೆ ಸಮರಸವನೈದಯೋಸ್ಕರ, ಭಕ್ತಿ ತದರ್ಥವಾಗಿ ಮಹಾಘನ ಪರಾತ್ಪರವಪ್ಪ ದಿವ್ಯಲಿಂಗವು ಹನ್ನೊಂದು ತತ್ವವಾಗಿತ್ತು. ಹನ್ನೊಂದು ತತ್ವವಾದ ಪರಿಕ್ರಮವಂತೆಂದೊಡೆ ಶಾಂತ್ಯಾದಿ ಶಕ್ತಿಗಳೈದು, ಶಿವಾದಿ ಕರ್ತೃಗಳೈದು, ಪರಶಿವ ತತ್ವ ಒಂದು, ಇಂತೀ ಅಂಗತತ್ವ ಇಪ್ಪತ್ತೈದು, ಲಿಂಗತತ್ವ ಹನ್ನೊಂದು, ಅಂಗತತ್ವ, ಲಿಂಗತತ್ವವೆಂಬ ಉಭಯ ತತ್ವ ಮೂವತ್ತಾರು, ಇಂತಿವರ ಸಾಮರಸ್ಯದ ಐಕ್ಯವೆಂತುಟಯ್ಯಾ ಎಂದಡೆ, ನಿವೃತ್ತಿ ಶಕ್ತಿಯನ್ನೈದಿ, ವಾಗಾದಿ ಕರ್ಮೇಂದ್ರಿಯಂಗಳೈದು ಕರ್ಮಸಾದಾಖ್ಯವನೊಡಗೂಡಿದಲ್ಲಿ ಪೃಥ್ವಿತತ್ವ ಬಯಲಾಯಿತ್ತು. ಪ್ರತಿಷ್ಠಾಶಕ್ತಿಯನ್ನೈದು ಶಬ್ದವಿಷಯಂಗಳೈದು ಕರ್ತೃಸಾದಾಖ್ಯವನೊಡಗೂಡಿದಲ್ಲಿ ಅಪ್ಪುತತ್ವಬಯಲಾಯಿತ್ತು. ವಿದ್ಯಾಶಕ್ತಿಯನ್ನೈದಿ ಶ್ರೋತ್ರಾದಿ ಜ್ಞಾನೇಂದ್ರಿಯಂಗಳೈದು ಮೂರ್ತಿಸಾದಾಖ್ಯವನೊಡಗೂಡಿದಲ್ಲಿ ತೇಜ ತತ್ವ ಬಯಲಾಯಿತ್ತು. ಶಾಂತಿ

ಶಕ್ತಿಯನ್ನೈದಿ ಪ್ರಾಣಾದಿ ವಾಯುಗಳೈದು ಅಮೂರ್ತಿಸಾದಾಖ್ಯವನೊಡ ಗೂಡಿದಲ್ಲಿ ವಾಯು ತತ್ವ ಬಯಲಾಯಿತ್ತು. ಶಾಂತ್ಯಾತೀತ ಶಕ್ತಿಯನ್ನೈದಿ ಮನ ಬುದ್ಧಿ ಚಿತ್ತ ಅಹಂಕಾರ ಜೀವಂಗಳೈದು ಶಿವಸಾದಾಖ್ಯವನೊಡ ಗೂಡಿದಲ್ಲಿ ಆಕಾಶ ತತ್ವ ಬಯಲಾಯಿತ್ತು. ಇಂತೀ ಪಂಚವಿಶಂತಿ ತತ್ವಂ ಗಳು ಲಿಂಗೈಕ್ಯವಾಗಲೊಡನೆ, ಆ ಲಿಂಗತತ್ವ ಹನ್ನೊಂದು ತಾವು ಒಂದೊಂ ದನೊಡಗೂಡಿ ಏಕಾರ್ಥವಾದಲ್ಲಿ ಕುಳಸ್ಥಳವಡಗಿತು. ಇಂತೀ ಕುಳಸ್ಥಳವ ಡಗಲೊಡನೆ, ಮಹಾಘನ ಪರಾತ್ಪರವಪ್ಪ ದಿವ್ಯಲಿಂಗವು ವಾರಿಕಲ್ಲು ಕರಗಿ ನೀರಾದಂತೆ, ತನ್ನ ಪರಮಾನಂದದಿಂದವೇ ಸರ್ವ ಶೂನ್ಯವಾಯಿತ್ತು. ಅದೆಂ ತೆಂದೊಡೆ ಶೃತಿ " ಅನಾದಿ ಸಿದ್ಧ ಸಂಸ್ಕಾರಂ ಕರ್ತೃಕರ್ಮವಿವರ್ಜಿತಂ । ಸ್ವಯಮೇವ ಭವೇದ್ದೇಹಿ ತ್ವಯಮೇವಂ ವಿಲೀಯತೆ ॥ ಅಂತಃಶೂನ್ಯಂ ಬಹಿಃಶೂನ್ಯಂ । ಶೂನ್ಯಂ ಶೂನ್ಯಂ ದಶದಿಶಂ । ಸರ್ವಶೂನ್ಯ ನಿರಾಲಂಬಂ ನಿರ್ದ್ವಂದ್ವಂ ಪರಮಂ ಪದಂ ॥ ಎಂದುದಾಗಿ ಇಂತೀ ಅಂಗತತ್ವ ಇಪ್ಪ ತ್ತೈದು, ಲಿಂಗತತ್ವ ಹನ್ನೊಂದು, ಇಂತೀ ಉಭಯ ತತ್ವ ಮೂವತ್ತಾರು ಏಕಾರ್ಥವಾಗಿ, ಸರ್ವಶೂನ್ಯವನ್ನೈದಿ ಪರಿಕ್ರಮದ ನಿರ್ಣಯದ ಬೆಡಗು, ತತ್ವಮಸ್ಯಾದಿ ವಾಕ್ಯಾರ್ಥಂಗಳಲ್ಲಿ ಕಾಣಲಾಯಿತ್ತು. ಅದೆಂತೆಂದೊಡೆ, ತತ್ತ ದೇನೋಚ್ಯತೆಲಿಂಗಂ ತ್ವಂಪದೇನಾಂಗ ಮೀರಿತಂ । ಉಭಯೋರೈಕ್ಯ ಭಾವೇನ ಸಂಬಂಧೋಸಿಪದಂ ಖಲು ॥ ಎಂದುದಾಗಿ ತತ್ಪದವೇ ಲಿಂಗ, ತ್ವಂಪದವೇ ಅಂಗ, ಈ ಎರಡರ ಐಕ್ಯವೇ ಅಸಿ ಪದ ಎಂದುದಾಗಿ ಇಂತು ಸಕಲವಾಗ ಬಲ್ಲ, ನಿಃಕಲವಾಗಬಲ್ಲ, ಸಕಲ ನಿಃಕಲಾತೀತನಾಗಿ ಏನೂ ಏನೂ ಇಲ್ಲದ ಮಹಾ ಘನಶೂನ್ಯ ಬ್ರಹ್ಮವಾಗಿರಬಲ್ಲನಯ್ಯ ನಮ್ಮ ಗುಹೇಶ್ವರ ಲಿಂಗವು.

ಶ್ರೀ ಮಹಾಸ್ವಾಮಿಗಳ ತತ್ವಾನುಭವದ ವಚನಾರ್ಥವು ಏನೇನೂ ತಿಳಿ ಯದ್ದರಿಂದ ಇದರ ಅರ್ಥಾನುಭವವನ್ನು ಯಾರು ಎನ್ನ ಅವಗಾಹನಕ್ಕೆ ತಂದಾರೆಂದು ವಿಚಾರಿಸುವಷ್ಟರಲ್ಲಿ ಓಣಿಯಲ್ಲಿ " ಈ ದಿನಾರಂಭದಿಂದ ಒಂದು ತಿಂಗಳವರೆಗೆ ಹಿರೇಮಠದ ಪಟಾಂಗಣದಲ್ಲಿ ವಿಜಾಪೂರದ ರಾವಬಹಾದ್ದೂರ ಹಳಕಟ್ಟಿಯವರ ವತಿಯಿಂದ ಬಂದ ಶಿವಜ್ಞಾನದಾಸೋಹಿಗಳೂ ಶಿವಾನುಭವ ಪತ್ರಿಕೆಯ ಪ್ರಚಾರಿಗಳೂ ಶಿವಾನುಭವ ಸಂಘ ನಿರ್ಮಾಣ ನಿಷ್ಠಿಗಳೂ ಆದ ಶ್ರೀ ದೇಶಿಕ ಮೂರ್ತಿಯ ವೀರಶೈವ ತತ್ವಗಳೂ ತತ್ವಾನುಭವವೂ ಸಂಜೆಯ ೬ ರಿಂದ ೮ ಗಂಟೆಯ ವರೆಗೆ ನಡೆಯುವದೆಂದೂ ಎಲ್ಲರೂ ಸದರೀ ಪ್ರವಚನ ಶ್ರವಣಕ್ಕೆ ಆಗಮಿಸಬೇಕೆಂದೂ ಡಂಗುರವು ಢಣ್ ಢಣ್ ಎಂದು ಹೊಡೆ

ಯುಳ್ಳಪಟ್ಟಿತು. ಅದನ್ನು ಕೇಳಿ ಅತ್ಯಾನಂದಿಯಾಗಿ ದಿನಂಪ್ರತಿ ತನ್ನ ಕಾರ್ಯ ಕವನ್ನು ಕಡೆಗಾಣಿಸುತ್ತ ಜ್ಞಾನಾಕಾಂಕ್ಷಿಯಾಗಿ ಒಂದು ತಿಂಗಳವರೆಗೂ ತಪ್ಪದೆ ಹೋದದ್ದರಿಂದ ಅಲ್ಲಿ ದೀಕ್ಷಾತ್ರಯಂಗಳ ೩೬ ತತ್ವಂಗಳ, ಅಂಗಲಿಂಗಗಳ ಅನುಭವಾಮೃತವನ್ನುಂಡು ಕಡು ಹರ್ಷಿತನಾದನು. ಅದರಲ್ಲಿ ಮೇಲೆ ವಿವ ರಿಸಿದ ಶ್ರೀ ಪ್ರಭುದೇವರ ವಚನಾನುಭವವೂ ಒಂದು ದಿವಸ ಹೇಳಲ್ಪಟ್ಟಿತು.

ಸಣ್ಣಕ್ಕಿಯು ಭತ್ತ, ಇದು ಮೂಲ ಶಿವತತ್ವವೆಂದು ಗ್ರಹಿಸಿ, ಅದರ ಅಂಗವಾದ ಮೇಲಿನ ಶಕ್ತಿರೂಪವಾದ ಹೊದಿಕೆಯನ್ನು ತೆಗೆಯಲು ಅಕ್ಕಿ ಇದು ಸದಾಶಿವ ತತ್ವವೆಂದೂ, ಅವಲಕ್ಕಿಯು ಈಶ್ವರ ತತ್ವವೆಂದೂ, ಚುರು ಮುರಿಯು ಶುದ್ಧವಿದ್ಯಾತತ್ವವೆಂದೂ, ಅನ್ನವು ಪ್ರಕೃತಿ (ಮಾಯೆ) ತತ್ವ ವೆಂದೂ, ಅಕ್ಕೀಗಂಜಿಯು ರಾಗತತ್ವವೆಂದೂ, ಅಕ್ಕೀ ಹಿಟ್ಟು, ಅಟ್ಟು, ಗಟ್ಟಿ ಯಾದ ಪಡಿಗಳು ಕಲಾತತ್ವವೆಂದೂ, ಅಟ್ಟ ಸಾಧಾರಣಗಟ್ಟಿಗೊಂಡ ಮುದ್ದೆ ಯಿಂದ ಮಾಡಿದ ಕುರೋಡಿಗೆಗಳು ವಿದ್ಯಾತತ್ವವೆಂದೂ, ಅತಿಸೂಕ್ಷ್ಮವಾದ ಹಪ್ಪಳಕ್ಕೆ ನಿಯತಿ ತತ್ವವೆಂದೂ ವರ್ಷದ ಅಯಾ ಋತುಗಳಿಗೆ ಆರೋಗ್ಯ ಕರವಾದ ಸಂಡಿಗೆ ಚಕ್ಕುಲಿಗಳಿಗೆ ಕಾಲತತ್ವವೆಂದೂ ಉಪಮಾನೋಪಮೆಗ ಳಿಂದ ವರ್ಣಿಸುತ್ತ ಒಂದೇ ಅಕ್ಕಿಯಿಂದ ಆ ಅಕ್ಕಿಯನ್ನು ವಿಕಾರಗೊಳಿ ಸುತ್ತ ಬೇರೆ ಬೇರೆ ಭೋಜನೋಪಯೋಗಿ ಪದಾರ್ಥಗಳಾಗುವಂತೆ ಒಂದೇ ಶಿವತತ್ವವು ಜೀವನ ಭಕ್ತಿಶಕ್ತಿಗಾಗಿ ಹನ್ನೊಂದು ವಿದ್ಯಾ ತತ್ವಗಳಾದವೆಂದು ವಿವರಿಸಲಾಯಿತು. ಹನ್ನೊಂದು ತತ್ವಗಳಲ್ಲಿಯೂ ಅಕ್ಕಿಯು ಹನ್ನೊಂದು ಸ್ವರೂಪವನ್ನು ಹೊಂದಿದಂತೆ ಶಿವತತ್ವವು ಹನ್ನೊಂದರಲ್ಲಿಯೂ ಅಡಕವಾದ ಅನುಭವವು ಆದರ್ಶಿಸಲ್ಪಟ್ಟಿತು.

ಅಕ್ಕಿಯಲ್ಲಿ ಮಧುರಾಂಶವು ಹೆಚ್ಚು. ಈ ಅಂಶದ ಅಂಶವಾದ ಸಕ್ಕ ರೆಯೇ ಆತ್ಮಾಂಗವೆಂದು ಕಲ್ಪಿಸಿ, ಪೇಯಪಂಚಕ, ಪಕ್ವಾನ್ನಪಂಚಕ, ಪಂಚಕ, ಮಿಠಾಯಿಪಂಚಕಗಳ ಉದಾಹರಣೆಗಳಲ್ಲಿ ಮಧುರ ರಸವು ಮುಖ ವಾಗಿದ್ದು ೨೫ ಆತ್ಮತತ್ವಗಳಲ್ಲಿ ಆತ್ಮವೇ ಮುಖ್ಯವೆಂದು ಹೇಳಿ ಪಂಚೀ ಕರಣಗಳ ಅನುಭವವನ್ನು ಸಂದರ್ಶಿಸಲಾಯಿತು.

ಹನ್ನೊಂದು ವಿದ್ಯಾತತ್ವಗಳ ಪರ್ಯಾಯ ನಾಮವುಳ್ಳ ೫ ಸಾದಾಖ್ಯ ಲಿಂಗಗಳನ್ನೂ ೫ ಕಲಾಶಕ್ತಿಗಳನ್ನು ವಿವರಿಸುವಾಗ ವ್ಯವಹಾರದಲ್ಲಿ ವಿದ್ಯು ದ್ದೀಪಗಳು ಶಿವಸಾದಾಖ್ಯ ಲಿಂಗ ಪ್ರಕಾಶವೆಂದೂ, ಆ ಪ್ರಕಾಶದ ಶಕ್ತಿಸ್ವರೂಪ ವಾದ ಪರಾಶಕ್ತಿಯು ಶಾಂತ್ಯಾತೀತ ಕಲೆ ಎಂದೂ, ಗ್ಯಾಸದೀಪಗಳು ಅಮೂರ್ತಿ

ಸಾದಾಖ್ಯಲಿಂಗ ಪ್ರಕಾಶವೆಂದೂ ಆ ಪ್ರಕಾಶದ ಆದಿಶಕ್ತಿಯು ಶಾಂತಿ ಕಲೆಯೆಂದೂ, ಚಿಮಣಿ ಎಂಣೆಯ ಕಂದೀಲಾದಿ ದೀಪಗಳು ಮೂರ್ತಿ ಸಾದಾಖ್ಯಲಿಂಗ ಪ್ರಕಾಶವೆಂದೂ, ಆ ಪ್ರಕಾಶದ ಇಚ್ಛಾಶಕ್ತಿಯು ವಿದ್ಯಾ ಕಲೆಯೆಂದೂ, ಕುಸಿಬೆ ಎಣ್ಣೆಯ ಪ್ರಣತಿಯ ದೀಪಗಳು ಕರ್ತೃ ಸಾದಾಖ್ಯ ಲಿಂಗಪ್ರಕಾಶವೆಂದೂ, ಆ ಪ್ರಕಾಶದ ಜ್ಞಾನಶಕ್ತಿಸ್ವರೂಪವಾದ ಪ್ರತಿಷ್ಠಾ ಕಲೆಯೆಂದೂ, ಔಡಲ ಎಣ್ಣೆಯ ದೀಪಗಳು ಕರ್ಮಸಾದಾಖ್ಯ ಲಿಂಗ ಪ್ರಕಾಶವೆಂದೂ, ಆ ಪ್ರಕಾಶದ ಶಕ್ತಿಸ್ವರೂಪವಾದ ಕ್ರಿಯಾ ಶಕ್ತಿಯು ನಿವೃತ್ತಿ ಕಲೆಯೆಂದೂ, ಸಾಮ್ಯಾಲಂಕಾರದಿಂದ ಅನುಭವ ಗೊಳಿಸುತ್ತ ಒಟ್ಟಿನಲ್ಲಿ ಪ್ರಕಾಶ ಸ್ವರೂಪವಾದ ಪಂಚಜ್ಞಾನಗಳಿಂದ ಜೀವನ ಅಜ್ಞಾನಾವರಣವು ಹರಿಯುವದೆಂದು ಹೇಳೋಣವಾಯಿತು.

ವಿಶ್ವನ ಜಾಗ್ರತಾವಸ್ಥೆಯಲಿ ಹಲವು ಕಡೆ ಹರಿದು ಹೋದ ಆತ್ಮನ ೬೬ ಕೋಟಿ ಕರಣಕಿರಣಗಳು ಸ್ವಪ್ನಾವಸ್ಥೆಯ ತೈಜಸ್ಸಿನಲ್ಲಿ ಪ್ರಕಾಶಿಸಿ, ಸುಷುಪ್ತ್ಯಾವಸ್ಥೆಯ ಪ್ರಾಜ್ಞನಲ್ಲಿ ಅಡಗಿಸಿ (ಎಳೆಯಲ್ಪಟ್ಟು) ಬಯಲಾದಂತೆ, ಪೃಥ್ವೀ ತತ್ವವು ಆಚಾರ ಲಿಂಗದಲ್ಲಿಯೂ, ಅಪ್ಪು ತತ್ವವು ಗುರುಲಿಂಗದಲ್ಲಿಯೂ ತೇಜ ತತ್ವವು ಶಿವಲಿಂಗದಲ್ಲಿಯೂ, ವಾಯು ತತ್ವವು ಜಂಗಮ ಲಿಂಗದಲ್ಲಿಯೂ, ಆಕಾಶತತ್ವವು ಪ್ರಸಾದಲಿಂಗದಲ್ಲಿಯೂ ಬಯಲಾಗುವವೆಂಬ ತಿಳಿವಳಿಕೆಯು ಮಾಡಲ್ಪಟ್ಟು. ಕುಂಬಾರನ ದೇಹಸ್ವರೂಪವಾದ ಗಡಿಗೆ, ಆತ್ಮ ಸ್ವರೂಪವಾದ ಮಣ್ಣು, ಈ ಉದಾಹರಣೆಯಿಂದ ತತ್ವಮಸಿ ವಾಕ್ಯಾರ್ಥವೂ ವಿಶದೀಕರಿಸಲ್ಪಟ್ಟಿತು. ಹಾಗೂ ಪಂಚಸಾದಾಖ್ಯಗಳ ಪ್ರಕಾಶಗಳೇ ಪಂಚ ಲಿಂಗಗಳೆಂದು ಹೇಳೋಣಾಯಿತು.

ದೇಹ ಸಂಬಂಧವಾದ್ದ ಮೂರ್ವಾಶ್ರಯವು ಇಪ್ಪತ್ತೈದು ತತ್ವಂಗಳು. ಇವು ಯಾವ ಕಡೆಯಿಂದುಂಟಾದವು ? ಎತ್ತಣಿಂದ ಬಂದು ದೊರಕೊಂಡವು? ಎಂಬಲ್ಲಿ ಮೊದಲು ನಿರಾಕಾರವಾದ ನಿಃಕಲ ಬ್ರಹ್ಮವು, ಆ ನಿಃಕಲ ಬ್ರಹ್ಮನಿಂದ ಚಿತ್ತು, ಆ ಚಿತ್ತಿನಿಂದ ಚಿನ್ನಾದ ಚಿದ್ಬಿಂದು ಚಿತ್ಕಳೆಗಳು ಹುಟ್ಟಿದವು. ಆ ಚಿನ್ನಾದ, ಚಿದ್ಬಿಂದು, ಚಿತ್ಕಳೆ, ಮೂಲ ಚಿತ್ತೆಂಬ ಚತುರ್ವಿಧವು ಗಟ್ಟಿಗೊಂಡು ಆ ಅಖಂಡ ಗೋಳಕಾಕಾರ ತೇಜೋಮೂರ್ತಿಯಪ್ಪ ಮಹಾಲಿಂಗವಾಯಿತ್ತು. ಆ ಮಹಾಲಿಂಗವೇ ಪಂಚಸಾದಾಖ್ಯ ಮೂರ್ತಿಯೆಂದೆನಿಸಿತು, ಆ ಪಂಚಸಾದಾಖ್ಯವೇ ಪಂಚಲಿಂಗ ಪ್ರಕಾಶವೆಂದೆನಿಸಿತು. ಆ ಪಂಚಲಿಂಗಪ್ರಕಾಶವೇ ಪಂಚಮುಖವೆಂದೆನಿಸಿತು, ಆ ಪಂಚಮುಖದಿಂದಲೇ ಪಂಚಾಕ್ಷರಂಗಳ ಉತ್ಪತ್ತಿ. ಆ ಪಂಚಾಕ್ಷರಗಳಿಂದಲೆ ಪಂಚಕಲೆಗಳ ಉತ್ಪತ್ತಿ

ಆ ಪಂಚಕಲೆಗಳಿಂದಲೆ ಪಂಚಶಕ್ತಿಗಳ ಉತ್ಪತ್ತಿ, ಆ ಪಂಚಶಕ್ತಿಗಳಿಂದಲೆ ಪಂಚಕರಣಗಳ ಉತ್ಪತ್ತಿ, ಆ ಪಂಚಕರಣಗಳಿಂದಲೆ ಪಂಚ ತನ್ಮಾತ್ರಂಗಳು ತ್ಪತ್ತಿ, ಆ ಪಂಚ ತನ್ಮಾತ್ರಂಗಳಿಂದಲೆ ಪಂಚ ಭೂತಗಳುತ್ಪತ್ತಿ, ಆ ಪಂಚ ಭೂತಗಳೇ ಪಂಚಕರಣಾತ್ಮನೈದಿ ಒಂದೊಂದು ತತ್ವಂಗಳು ಐದು ಐದು ತತ್ವಂಗಳ ಸ್ವರೂಪವನ್ನು ತಾಳಿ, ಇಪ್ಪತ್ತೈದು ತತ್ವಂಗಳಾಗಿ ಆ ಇಪ್ಪತ್ತೈದು ತತ್ವಾತ್ಮಕವಾದ ಶರೀರವು ತನಗೆ ಬಂದು ದೊರಕಿಕೊಂಡಿತಲಾ ಎಂದು ವಿವೇಕಿಸುವದೇ ಪಿಂಡಜ್ಞಾನ ಸ್ಥಲವು.

ಯದ್ದೃಷ್ಟಂ ತನ್ನಷ್ಟಂ ಎಂದು ಹೇಳುತಿಪುದಾದ ಕಾರಣ ಯಾವಲ್ಲಿ ಹುಟ್ಟಿದ ವಸ್ತುವೆಂಬುದು ತಾನು ಅದರೊಳಗೆ ಅಡಗುತಿಹುದು. ಅದು ಹೇಗೆಂದೊಡೆ, ಆ ದೇಹಸಂಬಂಧವಾದ ಇಪ್ಪತ್ತೈದು ತತ್ವಗಳನ್ನೇ, ಪಂಚ ಭೂತಗಳಲ್ಲಿ, ಪಂಚವಿಷಯಂಗಳನ್ನೇ, ಪಂಚಕರಣಂಗಳಲ್ಲಿ. ಆ ಪಂಚಕರಣಂಗಳನ್ನೇ, ಪಂಚಶಕ್ತಿಯರಲ್ಲಿ, ಆ ಪಂಚಶಕ್ತಿಗಳನ್ನೇ, ಪಂಚಕಲೆಗಳಲ್ಲಿ, ಆ ಪಂಚಕಲೆಗಳನ್ನೇ ಪಂಚಾಕ್ಷರಗಳಲ್ಲಿ. ಆ ಪಂಚಾಕ್ಷರಗಳನ್ನೇ ಪಂಚಮುಖಗಳಲ್ಲಿ, ಆ ಪಂಚಮುಖಗಳನ್ನೇ ಪಂಚಲಿಂಗ ಪ್ರಕಾಶಂಗಳಲ್ಲಿ, ಆ ಪಂಚ ಲಿಂಗಪ್ರಕಾಶಗಳನ್ನೇ ಪಂಚಸಾದಾಖ್ಯಂಗಳಲ್ಲಿ, ಆ ಪಂಚಸಾದಾಖ್ಯಂಗಳನ್ನೇ ಮೇಲಣ ಮಹಾ ಸಾದಾಖ್ಯ ಸ್ವರೂಪವಾದ ಮಹಾಲಿಂಗದಲ್ಲಿ ಅಡಗಿಸಿ ಮಹಾಲಿಂಗ ಸ್ವರೂಪವೇ ತಾನು ಎಂದು ತಿಳಿಯುವದೇ ಸಂಸಾರ ಹೇಯ ಸ್ಥಲ.

ಆ ಸಕಲ ಸಂಸಾರ ಪ್ರಪಂಚವನ್ನು ತಿರಸ್ಕರಿಸಿ, ಗುರೂಪಾವಸ್ಥೆಯನ್ನು ಮಾಡಲು, ಆ ಉಪಾವಸ್ಥೆಗೋಸ್ಕರ ನಿಃಕಲ ಪರಶಿವನು ತಾನೆ ಗುರುವಾಗಿ ಬಂದು ಕ್ರಿಯಾ ಘನಮೂರ್ತಿಯಾಗಿ ಬಿಜಯಂಗೈದು. ಇಲ್ಲಿಗೆ ಗುರುಕಾರುಣ್ಯ ಸ್ಥಲ.

ಆ ದೇಹ ಸಂಬಂಧವಾದ ಪೂರ್ವಾಶ್ರಯನಂ ಇಪ್ಪತ್ತೈದು ತತ್ವಗಳ ವರ್ತನೆಯನ್ನು ನಷ್ಟವಮಾಡಿ ಇಪ್ಪತ್ತೈದು ಮಂತ್ರಗಳನು ಅಗ ಅಳವಡಿಸಿ ಆ ಮಂತ್ರಂಗಕ್ಕೆ ಮಹಾ ಘನಲಿಂಗವನ್ನು ವೇಧಿಸಿ ಭಾವಾದಿ ನಯನಂಗಳಿಂದ ಬಹಿಷ್ಕರಿಸಿ ತನುವಿನ ವಾಮಭಾಗದ ಕರಸ್ಥಳದಲ್ಲಿಪ್ಪ ಇಷ್ಟಲಿಂಗ ಲಕ್ಷಣವೆಂಬ ಕುಮಾರಮೂರ್ತಿಯಲ್ಲಿ ಮದುಗೊಳಿಸಿ ಆ ಚಿತ್ಕಲಾಲಿಂಗವನ್ನು ಕೊಟ್ಟು ಸಂಬಂಧವ ಮಾಡಿತ್ತು. ಇಲ್ಲಿಗೆ ಲಿಂಗಧಾರಣ ಸ್ಥಲ.

ಶ್ರೀ ದೇಶಿಕೇಂದ್ರರು ಶ್ರೀ ಪ್ರಭುದೇವರ ವಚನಾನುಭವನಗೆಯುತ್ತ ಶ್ರೀ ಮಹಾದೇವಿಯಕ್ಕಗಳ ಪಿಂಡಜ್ಞಾನ ಸ್ಥಲ ಸಂಸಾರ ಹೇಯ ಸ್ಥಲ ಗುರು ಕಾರುಣ್ಯ ಸ್ಥಲ ಲಿಂಗಧಾರಣ ಸ್ಥಲಗಳನ್ನೇ ವಿವರಿಸಿ ಆ ದಿನಸದ ಪ್ರವಚನವನ್ನು ಪೂರ್ಣಗೊಳಿಸಿದರು. ಮುಂದಿನ ಶ್ರೀ ಅಲ್ಲಮಪ್ರಭುದೇವರ ಸೃಷ್ಟಿಯವಚನಾನುಭವವು ವಿಶ್ವದ ಪ್ರತಿಯೊಬ್ಬ ಮಾನವನ ಮುಕ್ತಿಯ ಮಾರ್ಗಕ್ಕೆ ಯುಕ್ತವಾಗುವುದೆಂದು ಗ್ರಹಿಸಿ ಆ ವಚನವನ್ನು ವಿಸ್ತರಿಸತೊಡಗಿದರು.

ಊರ್ಧ್ವಸೃಷ್ಟಿ ಅಧೋಸೃಷ್ಟಿಗಳ ಕ್ರಮವನ್ನು ಹೇಳುವ ವಚನ ಮಾತ್ರಂತಮಲ್ಲದೆ ಅಂಗಲಿಂಗೋತ್ಪವಗಳ ಸ್ವರೂಪವನ್ನು ಹೇಳುವ ವಚನ.

ಮೊತ್ತ ಮೊದಲೊಳಗೆ ಬ್ರಹ್ಮವು ಏನೇನು ಇಲ್ಲದಂದು ಅವ್ಯಕ್ತನು ಶಿವಶಕ್ತಿಗಳ ಸಾಕಾರಂಗಳೊಂದು ಕುರುಹು ಕಾಣಿಸದ ಕಾಲದಲ್ಲಿ ಮಹಾ ದೊಡ್ಡಿತ್ತಾದ ಘನಸಾಂದ್ರವಾದ ಶೂನ್ಯ ತನುಶೂನ್ಯ ಮನಶೂನ್ಯ ಕರಣ ಶೂನ್ಯವಾದ ಬ್ರಹ್ಮನಾಗೊಪ್ಪುತ್ತಿರ್ದುದು.

ಅಂತಿರ್ದ ಹಾಗೆ ನಿರವಯ ನಿರಾಕಾರನಾಗಿ ಒಪ್ಪುತ್ತಿರ್ದ ಪರವಸ್ತು ತಾನೆ ತನ್ನಯ ಮನೋಹವಾದ ಸಗುಣಾನಂದ ಲೀಲಾ ವಿನೋದಕ್ಕೊಸ ಗಿದಂಥದ್ದೇ ಸ್ವಲೀಲೆ, ಆ ಸ್ವಲೀಲೆಯೇ ಚಿತ್ತು ಆ ಚಿತ್ತಿನ ಸ್ವಭಾವದಿಂದ ಆತ್ಮನೆಂದು ಮೂಲಾತ್ಮನೆಂದು ಹೇಳುವ ಅಂಗಸ್ಥಲ ಒಂದಾದುದು ಅದು ಹೇಗೆಂದೊಡೆ ಮೊದಲು ನಿಃಕಲ ಬ್ರಹ್ಮವು. ಆ ನಿಃಕಲ ಬ್ರಹ್ಮದಿಂದ ಚಿತ್ತು. ಆ ಚಿತ್ತುವಿನಿಂದ ಚಿನ್ನಾದ ಚಿದ್ಬಿಂದು ಚಿತ್ಕಳೆಗಳು ಹುಟ್ಟಿದವು. ಆ ಚಿನ್ನಾದ ಚಿದ್ಬಿಂದು ಚಿತ್ಕಳೆ ಮೂಲಚಿತ್ತೆಂಬ ಚತುರ್ವಿಧವು ಗಟ್ಟಿಗೊಂಡು ಅಖಂಡ ಗೋಳಾಕಾರ ತೇಜೋಮೂರ್ತಿಯಪ್ಪ ಮಹಾಲಿಂಗವಾಯಿತು. ಆ ಮಹಾ ಲಿಂಗದಿಂದ ಸದಾಶಿವಮೂರ್ತಿ ಪುಟ್ಟಿದನು. ಆ ಸದಾಶಿವನ ಪಂಚಮುಖ ದಿಂದ ಪಂಚ ಭೂತಂಗಳು ಹುಟ್ಟಿದವು. ಗೋಪ್ಯಮುಖದಲ್ಲಿ ಆತ್ಮನು ಪುಟ್ಟಿದನು. ಅಂತಪ್ಪ ಪರಬ್ರಹ್ಮದಿಂದಾದ ಚಿದಾತ್ಮನೆಂದು ಜ್ಞಾನಕಲಾತ್ಮ ನೆಂದು ಹೇಳುವ ಅಂಗಸ್ಥಲ ಒಂದಕ್ಕೆ ಕವಳಿಗೆಯಾಗಿ ಸೇರಿದ ಇಪ್ಪತ್ತೈದು ತತ್ವಂಗಳು ಅವೆಂತಾದವೆಲೆ ಸ್ವಾಮಿ ಎಂದು ಬೆಸಗೊಂಡೊಡೆ.

ಅರಿವು ರೂಪವಾದ ಶ್ರವಣಾದಿ ಇಂದ್ರಿಯಂಗಳೈದು ಕರ್ಮಕ್ರಿಯಾ ರೂಪವಾದ ವಾಗಾದಿ ಇಂದ್ರಿಯಗಳೈದು ಶಬ್ದವಿಷಯವೇ ಮೊದಲಾದ ವಿಷ ಯಂಗಳೈದು ಪ್ರಾಣಾದಿ ವಾಯುಗಳೈದು ಮನ ಬುದ್ಧಿ ಚಿತ್ತ ಅಹಂಕಾರ

ಮೂಲಾತ್ಮನೆಂಬ ಅಂತಃಕರಣಗಳೈದು ಈ ಪ್ರಕಾರದಿಂದ ಹೇಳಲ್ಪಟ್ಟವುಗಳಿಂದ ಕೂಡಿರುವದೇ ಅಂಗವು, ತನ್ನಲ್ಲಿ ಏಕಾರ್ಥವಾಗಬೇಕೆಂಬ ನಿಮಿತ್ಯ ಭಕ್ತಹಿತಾರ್ಥವಾಗಿ ಜೀವಾದ್ವೈತ ಭಕ್ತಿಕಾರಣಾರ್ಥವಾಗಿ ಶಿಷ್ಯನು ಉಪಾವಸ್ಥೆ ಭಕ್ತಿ ನಿಮಿತ್ಯಾರ್ಥವಾಗಿ ಎಂಬುವದು ಸರಿ.

ಮತ್ತಂತುವಲ್ಲದೆ ಜ್ಞಾನೋದಯವಾಗಲಡಿಗೆರಿಗಿ ಬಂದ ಜ್ಞಾನ ಕಲಾತ್ಮನ ವಿಶ್ವಾಸಕ್ಕೋಸ್ಕರ ಸಂಪ್ರತ್ಯರಸುಪ್ತ ಆವುದು ಪರವಾಗಿರುವದೋ ಅದಕ್ಕೆ ಪರವಾದ ಮನೋಹರವಾದ ಮಹಾಲಿಂಗವು ತಾನೆ ಹನ್ನೊಂದು ತೆರನಾಯಿತು, ಏಕಾದಶ ಸ್ವರೂಪವನ್ನು ತಳೆಯಿತು. ಇಂತು ಏಕಾದಶ ತನ್ನ ಸ್ವರೂಪವನ್ನು ತಾಳಿದ ಪರಿಕ್ರಮದ ತರುವಾಯದ ನಿಲುಕಡೆಯು ಹೇಗಿಪ್ಪುದಲೆ ಸ್ವಾಮಿ ಎಂದು ಬೆಸಗೊಂಡೊಡೆ.

ಶಾಂತಿ ಭಕ್ತಿಮೊದಲಾದ ಶಕ್ತಿಗಳೈದು, ಶಿವಸಾದಾಖ್ಯವೇ ಮೊದಲಾದ ಕರ್ತೃಗಳೈದು, ಈ ಎಲ್ಲಕ್ಕುಪರಿಯಾಗಿ ತೋರುವ ಮೇಲಣ ಮಹಾಲಿಂಗ ತತ್ವತಾನೊಂದು, ಪ್ರಥಮದಲ್ಲಿ ನಿರೂಪಣವ ಪಾಲಿಸಿದ ಅಂಗ ಸಂಬಂಧವಾದ ತತ್ವಂಗಳಿಪ್ಪತ್ತೈದು, ಲಿಂಗಸಂಬಂಧವಾದ ತತ್ವಂಗಳು ಹನ್ನೊಂದು ಅಂಗ ಲಿಂಗ ಸಂಬಂಧವಾದುಭಯ ತತ್ವಂಗಳು ಕೂಡಿ ಮೂವತ್ತಾರು ತತ್ವಂಗಳಾದವು. ಈ ಮೂವತ್ತಾರು ತತ್ವಂಗಳ ಸಮರಸೈಕ್ಯವೆಂಬುವದು ಸರಿ, ಅಂಗ ತತ್ವ ಇಪ್ಪತ್ತೈದು ಕಲಾ ಶಕ್ತಿಯರ ಬಲದಿಂದ ಸಾದಾಖ್ಯಂಗಳಲ್ಲಿ ಸಮರಸವಾಗುವ ನಿಲುಕಡೆಯು ಹೇಗಿಪ್ಪುದೆಲೆಸ್ವಾಮಿ ಎಂದು ಬೆಸಗೊಂಡೊಡೆ, ಕರ್ಮಕ್ರಿಯಾ ರೂಪವಾದ ವಾಗಾದಿ ಇಂದ್ರಿಯಗಳೈದು, ನಿವೃತ್ತಿ ಕಲಾಪರಿಯಾಯ ನಾಮವನಳ್ಳ ಕ್ರಿಯಾಶಕ್ತಿಯನ್ನು ಕೂಡಿ ಎಂಬಲ್ಲಿ ಶಿವಾ ಎಂಬುದೆ ವಾಕ್ಕು, ಶಿವಾಚಾರವನ್ನು ದೃಢವಿಡುವುದೇಪಾಣಿ ಗುರುಮಾರ್ಗಾಚಾರದಲ್ಲಿ ಆಚರಿಸುವುದೇಪಾದ, ಅಧೋಗತಿಗಳಿಸುವ ಮಲತ್ರಯಗಳನ್ನು ವಿಸರ್ಜಿಸಿ ಬಿಡುವದೇಪಾಯು ಶಿವಾನುಭಾವಿಗಳ ಸತ್ಸಂಗದಲ್ಲಿ ಸದಾ ಆನಂದಿಸುವದೇ ಗುಹ್ಯವು. ಈ ರೀತಿಯಾಗಿ ವಾಗಾದಿಕರ್ಮೇಂದ್ರಿಯಗಳು ನಿವೃತ್ತಿಯಾಗಿ, ಕಲಾಪರಿಯಾಮ ನಾಮವನುಳ್ಳ ಕ್ರಿಯಾಶಕ್ತಿಯನ್ನೈದಿ ಆ ಕ್ರಿಯಾಶಕ್ತಿಯ ಬಲದಿಂದ ಕರ್ಮಸಾದಾಖ್ಯ ಸ್ವರೂಪವಾದ ಆಚಾರ ಲಿಂಗವನೊಡಗೂಡಿದಲ್ಲಿ ಪೃಥ್ವಿತತ್ವ ಬಯಲಾಯಿತ್ತು.

ಪೃಥ್ವಿಯಳಿದು ಚಿತ್‌ಪೃಥ್ವಿಯ ಸ್ವರೂಪಿನಿಂ ಭಕ್ತಂಗೊಂಡಲಾಗಲು ಆ ಭಕ್ತನು ಆಚಾರ ಲಿಂಗದಂಗವಾಗಿ ಆಚಾರಲಿಂಗದಲ್ಲಿಯೇ ಅಡಗಿದನು ಎಂಬುದರ್ಥ

ಶಬ್ದ ವಿಷಯುವೇ ಮೊದಲಾದೈದು ತನ್ಮಾತ್ರೆಗಳು ಪ್ರತಿಷ್ಠಾ ಕಲಾ ಪರ್ಯಾಯ ನಾಮವುಳ್ಳ ಜ್ಞಾನಶಕ್ತಿಯನ್ನು ಕೂಡಿ ಎಂಬಲ್ಲಿ ಶಬ್ದ-ಗುರು ಸ್ಪರ್ಶನ, ಲಿಂಗ, ರೂಪು, ಶಿವಲಾಂಛನ, ರಸ, ಶಿವಪ್ರಸಾದ, ಗಂಧ ಶಿವ ನಿರ್ಮಾಲ್ಯ, ಶಬ್ದಾದಿ ವಿಷಯಂಗಳೈದು ನಿವೃತ್ತಿಯಾಗಿ ಪ್ರತಿಷ್ಠಾ ಕಲಾ ಪರಿಯಾಯ ನಾಮವುಳ್ಳ ಜ್ಞಾನಶಕ್ತಿಯನ್ನು ಕೂಡಿ, ಆ ಜ್ಞಾನಶಕ್ತಿಯ ಬಲ ದಿಂದ ಕರ್ತೃ ಸಾದಾಖ್ಯ ಸ್ವರೂಪವಾದ ಗುರುಲಿಂಗವನ್ನೊಡಗೂಡಿದಲ್ಲಿ ಅಪ್ಪು ತತ್ವಬಯಲಾಯಿತ್ತು.

ಅಪ್ಪು ತಿಳಿದು ಚಿದಪ್ಪು ಸ್ವರೂಪಿನಿಂದ ಮಹೇಶ್ವರಂಗೊಡಲಾಗಲು, ಆ ಮಹೇಶ್ವರನು ಗುರುಲಿಂಗವಾಗಿ ಗುರುಲಿಂಗದಲ್ಲಿಯೇ ಅಡಗಿದನೆಂಬರ್ಥ.

ಅರಿವು ರೂಪವಾದ ಶ್ರವಣಾದಿ ಇಂದ್ರಿಯ ವಿದ್ಯಾಕಲಾಪರಿಯಾಯ ನಾಮವನುಳ್ಳ ಇಚ್ಛಾಶಕ್ತಿಯನ್ನು ಕೂಡಿ ಎಂಬಲ್ಲಿ, ಶ್ರೋತ್ರದಲ್ಲಿ ಶಿವ ಕಥಾ ಶಿವಪುರಾಣಾದ್ಯರ ವಚನವಲ್ಲದ ಅನ್ಯವಪ್ಪ ಮಾಯಾ ಕುಶಾಸ್ತ್ರ ಕುಭಾ ಷೆಗಳು ಕೇಳದಿಹುದು. ತ್ವಕ್ಕಿನಲ್ಲಿ ಶ್ರೀ ವಿಭೂತಿ ರುದ್ರಾಕ್ಷಿ ಶಿವಲಿಂಗ ಧಾರಣವಲ್ಲದೆ ಅನ್ಯವಪ್ಪ ಮಾಯಾ ಚೋಹಂಗಳಂ ಧರಿಸದಿಹುದು, ನೇತ್ರ ದಲ್ಲಿ ಶಿವಲಿಂಗ ನಿರೀಕ್ಷಣೆಯಲ್ಲದೆ ಅನ್ಯವಪ್ಪ ಮಾಯಾ ಕುಶಾಸ್ತ್ರ ಕುಭಾಷೆ ಗಳಂ ರೂಪಗಳಂ ನೋಡದಿಹುದು. ಜಿಹ್ವೆಯಲ್ಲಿ ಶಿವಸುಖ ಪ್ರಸನ್ನೇತಿ ಸ್ವೀಕಾರವಲ್ಲದೆ ಅನ್ಯವಪ್ಪ ಮಾಯೋಚ್ಛಿಷ್ಟಂಗಳಂ ಭುಂಜಿಸದಿಹುದು. ಘ್ರಾಣದಲ್ಲಿ ಶಿವನಿರ್ಮಾಲ್ಯ ಗಂಧವಲ್ಲದೆ, ಅನ್ಯವಪ್ಪ ಮಾಯಾ ದುರ್ವಾ ಸನೆಯ ಘ್ರಾಣಿಸದಿಹುದು. ಈ ರೀತಿಯಲ್ಲಿ ಶ್ರೋತ್ರಾದಿ ಜ್ಞಾನೇಂದ್ರಿಯಂಗ ಳೈದು ನಿವೃತ್ತಿಯಾಗಿ ವಿದ್ಯಾಕಲಾಪರಿಯಾಯ ನಾಮವನುಳ್ಳ ಇಚ್ಛಾಶಕ್ತಿ ಯನ್ನು ಕೂಡಿ ಆ ಇಚ್ಛಾಶಕ್ತಿಯ ಬಲದಿಂದ ಮೂರ್ತಿಸಾದಾಖ್ಯ ಸ್ವರೂಪ ಮಾದ ಶಿವಲಿಂಗವನೊಡಗೂಡಿದಲ್ಲಿ ಅಗ್ನಿತತ್ವ ಬಯಲಾಯಿತ್ತು.

ಅಗ್ನಿ ಅಳಿದು ಚಿದಗ್ನಿ ಸ್ವರೂಪಿನಿಂದ ಪ್ರಸಾದಿಗೊಡಲಾಗಲು ಆ ಪ್ರಸಾ ದಿಯು ಶಿವಲಿಂಗದಂಗವಾಗಿ ಆ ಶಿವಲಿಂಗದಲ್ಲಿಯೇ ಅಡಗಿದನೆಂಬರ್ಥ.

ಪ್ರಾಣವಾಯುವೇ ಮೊದಲಾದ ವಾಯುಗಳೈದು ಶಾಂತಿ ಕಲಾಪರಿ ಯಾಯ ನಾಮವನುಳ್ಳ ಆದಿಶಕ್ತಿಯನ್ನು ಕೂಡಿ ಎಂಬಲ್ಲಿ, ಪ್ರಾಣವಾ ಯುವೇ ಸತ್ತು, ಅಪಾನವಾಯುವೇ ಚಿತ್ತು, ವ್ಯಾನವಾಯುವೇ ಆನಂದ ಉದಾನವಾಯುವೇ ನಿತ್ಯ, ಸಮಾನವಾಯುವೇ ಪರಿಪೂರ್ಣ, ಈ ರೀತಿಯಲ್ಲಿ ಪ್ರಾಣಾದಿವಾಯುಗಳು ಪಂಚಲಕ್ಷಣ ಸ್ವರೂಪಿನಿಂದ ನಿವೃತ್ತಿಯಾಗಿ ಶಾಂತಿ

ಕಲಾಪರಿಯಾಯ ನಾಮವನುಳ್ಳ ಆದಿಶಕ್ತಿಯನ್ನು ಕೂಡಿ ಆ ಆದಿಶಕ್ತಿಯ ಬಲದಿಂದ ಅಮೂರ್ತಿ ಸಾದಾಖ್ಯ ಸ್ವರೂಪವಾದ ಜಂಗಮಲಿಂಗವನೊಡಗೂಡಿದಲ್ಲಿ ವಾಯು ತತ್ವ ಬಯಲಾಯಿತ್ತು.

ವಾಯು ಅಳಿದು ಚಿದ್ವಾಯು ಸ್ವರೂಪಿನಿಂದ ಪ್ರಾಣಲಿಂಗಿಗೊಡಲಾಗಲು ಆ ಪ್ರಾಣಲಿಂಗಿಯು ಜಂಗಮಲಿಂಗಕ್ಕಂಗವಾಗಿ ಆ ಜಂಗಮಲಿಂಗದಲ್ಲಿಯೇ ಅಡಗಿದನೆಂಬುದರ್ಥ.

ಮನ ಬುದ್ಧಿ ಚಿತ್ತ ಅಹಂಕಾರ ಮೂಲಾತ್ಮನೆಂಬ ಐದು ಅಂತಃಕರಣಗಳು ಶಾಂತ್ಯಾತೀತ ಕಲಾಪರಿಯಾಯ ನಾಮವನುಳ್ಳ ಪರಾಶಕ್ತಿಯನ್ನು ಕೂಡಿ ಎಂಬಲ್ಲಿ ಮನದಲ್ಲಿ ಶಿವಧ್ಯಾನ, ಬುದ್ಧಿಯಲ್ಲಿ ನಿರ್ವಂಚನೆ, ಚಿತ್ತದಲ್ಲಿ ದಾಸೋಹ, ಅಹಂಕಾರದಲ್ಲಿ ನಿರಹಂಕಾರ, ಜೀವನಳಿದು ಸಜ್ಜೀವ ಈ ರೀತಿಯಲ್ಲಿ ಮನಸಾದಿ ಕರಣಂಗಳೈದು ನಿವೃತ್ತಿಯಾಗಿ, ಶಾಂತ್ಯಾತೀತ ಕಲಾಪರಿಯಾಯ ನಾಮವನುಳ್ಳ ಪರಾಶಕ್ತಿಯನ್ನು ಕೂಡಿ ಎಂಬಲ್ಲಿ ಆ ಪರಾಶಕ್ತಿಯ ಬಲದಿಂದ ಶಿವಸಾದಾಖ್ಯ ಸ್ವರೂಪವಾದ ಪ್ರಸಾದಲಿಂಗವನೊಡಗೂಡಿದಲ್ಲಿ ಆಕಾಶ ತತ್ವ ಬಯಲಾಯಿತ್ತು.

ಆ ಆಕಾಶವಳಿದು ಚಿದಾಕಾಶ ಸ್ವರೂಪಿನಿಂದ ಶರಣಂಗೊಡಲಾಗಲು ಆ ಶರಣನು ಪ್ರಸಾದ ಲಿಂಗದ ಅಂಗವಾಗಿ ಪ್ರಸಾದ ಲಿಂಗದಲ್ಲಿಯೇ ಅಡಗಿದನೆಂಬರ್ಥ

ಇಂತು ಈ ದೇಹ ಸಂಬಂಧವಾಗಿಪ್ಪ ಇಪ್ಪತ್ತೈದು ತತ್ವಂಗಳು ಕಲಾದಿ ಶಕ್ತಿಯರ ಬಲದಿಂದ ಸಾದಾಖ್ಯಾದಿ ಲಿಂಗಗಳಲ್ಲಿ ಸಮರಸವಾದ ಕೂಡಲೆ, ಆ ಲಿಂಗ ಸಂಬಂಧವಾದ ಹನ್ನೊಂದು ತತ್ವದೊಡನೆ ಬೆರೆಯಲು ಎಂಬಲ್ಲಿ ನಿವೃತ್ತಿ ಕಲಾ ಪರಿಯಾಯ ನಾಮವನುಳ್ಳ ಕ್ರಿಯಾ ಶಕ್ತಿಯೇ ಪ್ರತಿಷ್ಠೆ ಕಲೆ ಪರಿಯಾಯ ನಾಮವುಳ್ಳ ಜ್ಞಾನಶಕ್ತಿಯನು ಪ್ರತಿಷ್ಠೆ ಕಲಾಪರ್ಯಾಯ ನಾಮವನುಳ್ಳ ಜ್ಞಾನಶಕ್ತಿಯೇ ವಿದ್ಯಾಕಲಾಪರಿಯಾಯ ನಾಮನುಳ್ಳ ಇಚ್ಛಾ ಶಕ್ತಿಯನ್ನು, ವಿದ್ಯಾಕಲಾ ಪರಿಯಾಯ ನಾಮವನುಳ್ಳ ಇಚ್ಛಾಶಕ್ತಿಯೆ ಶಾಂತಿಕಲಾಪರ್ಯಾಯ ಆದಿ ಶಕ್ತಿಯನ್ನು, ಶಾಂತಿಕಲಾಪರ್ಯಾಯ ನಾಮವನುಳ್ಳ ಆದಿಶಕ್ತಿಯೆ ಶಾಂತ್ಯಾತೀತ ಕಲಾಪರ್ಯಾಯ ನಾಮವನುಳ್ಳ ಪರಾಶಕ್ತಿಯನ್ನು ಆ ಪರಾಶಕ್ತಿಯು ಶಾಂತ್ಯಾತೀತೋತ್ತರ ಕಲಾಪರ್ಯಾಯ ನಾಮವವುಳ್ಳ ಚಿಚ್ಛಕ್ತಿಯನ್ನು ಬೆರೆದೇಕಾರ್ಥವಾಗಿದ್ದಾಗ ಎಂಬಲ್ಲಿ। ಕರ್ಮ ಸಾದಾಖ್ಯ ಸ್ವರೂಪವಾದ ಆಚಾರಲಿಂಗವೇ ಕರ್ತೃ ಸಾದಾಖ್ಯ ಸ್ವರೂಪ

ವಾದ ಗುರುಲಿಂಗದಲ್ಲಿ, ಕರ್ತೃ ಸಾದಾಖ್ಯ ಸ್ವರೂಪವಾದ ಗುರುಲಿಂಗವೇ ಮೂರ್ತಿ ಸಾದಾಖ್ಯ ಸ್ವರೂಪವಾದ ಶಿವಲಿಂಗದಲ್ಲಿ, ಮೂರ್ತಿ ಸಾದಾಖ್ಯ ಸ್ವರೂಪವಾದ ಶಿವಲಿಂಗವೇ ಅಮೂರ್ತಿ ಸಾದಾಖ್ಯ ಸ್ವರೂಪವಾದ ಜಂಗಮಲಿಂಗದಲ್ಲಿ, ಅಮೂರ್ತಿ ಸಾದಾಖ್ಯ ಸ್ವರೂಪವಾದ ಜಂಗಮಲಿಂಗವು ಶಿವಸಾದಾಖ್ಯ ಸ್ವರೂಪವಾದ ಪ್ರಸಾದಲಿಂಗದಲ್ಲಿ ಶಿವಸಾದಾಖ್ಯ ಸ್ವರೂಪವಾದ ಪ್ರಸಾದಲಿಂಗವೇ ಮಹಾಸಾದಾಖ್ಯ ಸ್ವರೂಪವಾದ ಮಹಾಲಿಂಗದಲ್ಲಿ ಸಮರಸವಾಗಲು ಕುಳಸ್ಥಳ, ಅಂಗಲಿಂಗದಾಚರಣೆಯಡಗಿತ್ತು, ನಿಃಪತಿಯಾಗಿ ಹೋಯಿತ್ತು.

ಇಂತು ಈ ಅಂಗ ಲಿಂಗದಾಚರಣೆಯು ನಿಃಪತಿಯಾದ ಕೂಡಲೆ ಪರಾತ್ಪರವಪ್ಪ ಮಹಾಲಿಂಗವು ಒಂದಾನೊಂದು ಪಯೋಧರೋಪಲವು ನೋಡನೋಡುತ ಕರಗಿ ಶೀತಳ ನೀರಾದಂತೆ ತನ್ನ ಪರಮ ನಿರ್ಗುಣಾನಂದ ಲೀಲಾ ವಿಲಾಸದಿಂದಲೆ ತೋರಿಕೆಯನೆಲ್ಲಾ ತನ್ನಲ್ಲಿ ಒಡಗೊಂಡು, ತಾನೆಂದಿನಂತೆ ನಿರಾಕಾರವಾಯಿತ್ತು. ಆ ವಿಚಾರವು ಹೇಗಿಪ್ಪುದೆಲೆ ಸ್ವಾಮಿ ಎಂದು ಬೆಸಗೊಂಡೊಡೆ, ಗುರುವಾಕ್ಯಕ್ಕೆ ಸದೃಶವಾದ ಹರವಾಕ್ಯವನ್ನು ನಿರೂಪಿಸುತಿಹರು.

ಪೂರ್ವದಲ್ಲಿ ಪ್ರಸಿದ್ಧವಾದ ಖಲದ ತಂಡುಲದೋಪಾದಿಯಲ್ಲಿ ಸಕಲ ತತ್ವಗಳ ಆವರಣವಿಲ್ಲದ ಪರಬ್ರಹ್ಮವು (ಕರ್ತಾ ಕರ್ಮ ವಿವರ್ಜಯೇತ್) ಕರ್ತಾ, ಪೂಜಿಸುವ ಭಕ್ತನು, ಕರ್ಮ ಪೂಜಾಕ್ರಿಯೆಗಳನ್ನು, ವಿವರ್ಜಯೇತ್ ಬಿಡಬೇಕು. ಅಂದರೆ ಇವೇನು ಇಲ್ಲದೆ ತಾನೊಂದೊಪ್ಪುತ್ತಿದ್ದಿತು. ಹಾಗೆ ನಿರವಯ ನಿರಾಕಾರವಾಗೊಪ್ಪುತ್ತಿರ್ದ ಪರಬ್ರಹ್ಮವು ತಾನೆಸಾಕಾರವಾದ ಶರಣನಾದನು. ಸಾಕಾರವಾದ ಶರಣನಾಗಿ ಸರ್ವಾಚಾರ ಸಂಪತ್ತು ವಿಡಿದಾಚರಿಸಿ ಆ ಆಚರಣೆ ಸಮಾಪ್ತವಾದ ಬಳಿಕ ಸ್ವಯಮೇವ ಅವನೆಲ್ಲವ ತನ್ನೊಳಗೊಳಕೊಂಡು ತಾನೆಂದಿನಂತೆ ನಿರಾಕಾರವಾಗುತ್ತಿರ್ದಿತ್ತು. ಅಂತಿರ್ದ ಪರಬ್ರಹ್ಮಕ್ಕೆ ಅಂತರಂಗವು ಬಹಿರಂಗವು ಭೂವ್ಯಾಕಾಶ ವೊದಲಾದ ಹತ್ತು ದಿಕ್ಕುಗಳು ಇಲ್ಲ ನಿರ್ದ್ವಂದ್ವಂ ಕರ್ತುಕರ್ಮಗಳೆಂಬ ಭೇದ ಪ್ರಪಂಚವಿಲ್ಲದಂಥಾದ್ದು ಪರಮಂ ಪದಂ ಉತ್ಕೃಷ್ಟವಾದ ಪರಬ್ರಹ್ಮವಾದಂಥಾದ್ದು ಹೀಗೆಂಬುದಾಗಿ ಶ್ರುತಿವಾಕ್ಯವು ಹೇಳುತ್ತಿಹುದಾದ ಕಾರಣ ಪ್ರಥಮದಲ್ಲಿ ನಿರೂಪಣವ ಪಾಲಿಸಿದ ಅಂಗ ಸಂಬಂಧವಾ ತತ್ವಗಳುಪ್ಪತ್ತೈದು, ದ್ವಿತೀಯದಲ್ಲಿ ನಿರೂಪಣವ ಪಾಲಿಸಿದ ಲಿಂಗ ಸಂಬಂಧವಾದ ತತ್ವಂಗಳ

ಕೂಡಿ ಮೂವತ್ತಾರು, ಒಂದರೊಳಗೊಂದು ಸಮರಸವಾಗಿ ಎಂಬಲ್ಲಿ ಅಂಗ ತತ್ವ ಇಪ್ಪತ್ತೈದು ಕಲಾಶಕ್ತಿಯ ಬಲದಿಂದ ಸಾದಾಖ್ಯ ಲಿಂಗಗಳಲ್ಲಿ ಸಮ ರಸವಾಗಿ ಸರ್ವಶೂನ್ಯವನ್ನೈದಿದ ಸಮಸ್ತ ತೋರುವ ತೋರಿಕೆ ಎಲ್ಲ ತನ್ನಲ್ಲಿ ಒಳಗೊಂಡು ತಾನೆಂದಿನಂತೆ ನಿರಾಕಾರ ಸ್ವರೂಪವನ್ನು ತಾಳಿದ ಪರಿಕ್ರಮದ ನಿರ್ಣಯದ ಬೆಡಗು ತತ್ವಮಸ್ಯಾದಿ ವಾಕ್ಯಗಳಲ್ಲಿ ತತ್, ತ್ವಂ, ಅಸಿ ಎಂಬ ಪದತ್ರಯಂಗಳ ಸ್ವರೂಪವನ್ನು ಹೇಳುವ ಉಪನಿಷದ್ವಾಕ್ಯಂಗಳ ಅರ್ಥಂಗ ಳಲ್ಲಿ ಕಾಣಲಾಯಿತ್ತು, ಅದೆಂತೆಂನೊಡೆ.

॥ಶ್ಲೋಕ॥ ತತ್ಪದೇನೋಚ್ಯತೆ ಲಿಂಗಂ। ತತ್ಪದದಿಂದ ಹೇಳುವದೇ ಲಿಂಗಂ, ಶಿವ ತತ್ವನೊಂದನೊಳಕೊಂಡು ತೋರುವ ಮಹಾಲಿಂಗವೆಂದು ಉಚ್ಯತೆ, ಹೇಳಲ್ಪಟ್ಟಿತು. ತ್ವಂ, ಪದೇನಾಂಗಮಿರಿತಂ ತ್ವಂ, ಪದದಿಂದ ಹೇಳುವುದೇ ಅಂಗ, ಇಪ್ಪತ್ತೈದು ತತ್ವವನೊಳಕೊಂಡು ತೋರುವ ಶರೀ ರವೆಂದು ಈ ರೀತಿ ಹೇಳಲ್ಪಟ್ಟಿತ್ತು. ಅನಯೋರೈಕ್ಯಭಾವೇನ ಸಂಬಧೋಸಿ ಪದೇನ ಪದದೊಡನೆ ಸಂಬಂಧಃ ಸಮರಸವು ಅಸಿ ಆಗಿದ್ದಿತು ಅಂತಹ ವಿದ್ಯಾತತ್ವವನೊಳಕೊಂಡು ತೋರುವ ಅಸಿ ಪದವಲಾ ಹೀಗೆಂದು ಶೃತಿ ವಾಕ್ಯವು ಹೇಳುವದು ಲಿಂಗಾಂಗವೆಂಬ ಉಭಯ ಪದದ ವಾಕ್ಯವೇ ಅಸಿ ಪದವು ಮತ್ತು ವಿದ್ಯಾತತ್ವವ ಹತ್ತನೊಳಗೊಂಡು ತೋರುವ ಅಸಿಪದವೆಂದು ಹೇಳುವುದು. ಒಂದು ವೇಳೆ ಪರಶಿವನಿಗೆ ವಿಶ್ವವ ಸೃಜಿಸಿ ವಿನೋದಿಸಬೇ ಕೆಂಬ ಸಗುಣಾನಂದಲೀಲಾ ವಿಲಾಸದ ನೆನವು ತೋರಿದೊಡೆ, "ಇದಂಭೂತ್ವಾ" ಎಂದು ನೆನೆದಾಕ್ಷಣವೆ ಅನಂತಕೋಟಿ ಬ್ರಹ್ಮಾಂಡ ತಂಡಗಳಂ ಪುಟ್ಟಿಸಿ ಅವರೊಳಗಿರುವ ದೇವದಾನವ ಮಾನವಾದಿಗಳೇ ಭೃತ್ಯರಾಗಿ ತಾನೇ ಕರ್ತ ನಾಗಿ ಅವರಿಂದ ಪೂಜಾ ನಮಸ್ಕಾರವ ಕೈಕೊಂಡು ಅವರವರ ಮನೋ ಭೀಷ್ಟಂಗಳಂ ಕೊಟ್ಟು ವಿನೋದಿಸಬಲ್ಲನು. ಒಂದು ವೇಳೆ ಪರಶಿವಂಗೆ ಆ ಲೀಲೆ ಸಾಕಾದೊಡೆ "ಹುತಭುಕ್" ಎಂದು ನೆನೆದಾಕ್ಷಣವೆ ಅವನ್ನೆಲ್ಲ ತನ್ನಲ್ಲಿ ಒಳಕೊಂಡು ತಾನೆಂದಿನಂತೆ ನಿರಾಕಾರವಾಗಿರಬಲ್ಲನು. ಸಾವಯವ ನಿರವಯವ ಲೀಲೆಗಳೆರಡನ್ನು ಮೀರಿದವನಾಗಿ, ಏನೇನು ಇಲ್ಲದ ತೋರುವ ತೋರಿಕೆ ಒಂದಕ್ಕೂ ಕುರುಹುಗಾಣಿಸದ ಬ್ರಹ್ಮನಾಗಿ ಒಪ್ಪುತ್ತಿಹನು. ಎಲೆ ಸ್ವಾಮಿ ನಿಮ್ಮ ಷಟ್‌ಸ್ಥಲ ಬ್ರಹ್ಮಿಗಳಿಗೆ ಕರ್ತನಾದ ಗುಹೇಶ್ವರ ಲಿಂಗವು ಸರ್ವರ ಹೃದಯಾಂತರ್ಯಾಮಿಯಾದ ಪರಶಿವಲಿಂಗಮೂರ್ತಿಯು ಎಂಬರ್ಥ.

ಪ್ರಭುದೇವರು ನಿರೂಪಿಸಿದ ಸೃಷ್ಟಿಯ ವಚನವು ಸಮಸ್ತ ಶಿವಶರಣರ ಶ್ರೋತ್ರಮುಖದಲ್ಲಿಯೇ ಮುಕ್ತವಾಯಿತ್ತು. ಇಂತಪ್ಪ ಜ್ಞಾನ ಶಾಸ್ತ್ರವನ್ನು ಬರೆದು ಪಾಠವ ಮಾಡಿಕೊಂಡು ಜ್ಞಾನ ಗುರುಗಳು ಇದ್ದೆಡೆಗೆ ಹೋಗಿ, ದೀರ್ಘದಂಡ ನಮಸ್ಕಾರವಂ ಮಾಡಿ ಭಕ್ತಿಯುಪಚಾರಂಗಳಿಂದ ಇದರರ್ಥಾಭಿಪ್ರಾಯವನ್ನು ಶ್ರೋತ್ರಮುಖದಲ್ಲಿ ಕೇಳಿ ಮನೋಮುಖದಲ್ಲಿ ಧಾರೈಸಿ ಹೃದಯ ಮುಖದಲ್ಲಿಂಬುಗೊಂಡು ಅಂಗವ ಮಾಡಿಕೊಂಡು ಆಚರಿಸುವ ಶಿವಶರಣರೆಲ್ಲರು ನಿರತಿಶಯ ಜ್ಞಾನದ ನಿಜೈಶ್ವರ್ಯವನ್ನು ಪಡೆದು ಸುಖದಿಂದ ಬಾಳುತಿಹರೆಂಬುದು ಈ ಶಾಸ್ತ್ರದ ಫಲಶೃತಿಯು.

ಈ ಪ್ರಕಾರವಾಗಿ ಒಂದು ತಿಂಗಳವರೆಗೆ ಶಿವಾನುಭವ ಪ್ರವಚನ ರೂಪದ ಜ್ಞಾನ ದಾಸೋಹವು ನಡೆದು, ಕಡೆಯ ದಿವಸ ಅಲ್ಲಿಯ ಸೆಟ್ಟಿ ಸಾವುಕಾರರು ಶ್ರೀ ದೇಶಿಕೇಂದ್ರ ಮೂರ್ತಿಗಳ ಆಭಾರ ಮನ್ನಿಸಿ, ಹಾರ ತುರಾಯಿ ಹಾಕಿದ ಬಳಿಕ, ಮೊದಲು ಶ್ರಾವಣ ಮಾಸದಲ್ಲಿ ಬರೆಕೊಂಡು ಪಾಠಮಾಡಿದ ಗುರುಲಿಂಗಪ್ಪನು ಶ್ರೀ ಪ್ರಭುದೇವರ ಸೃಷ್ಟಿವಚನದ ಅನುಭವಾರ್ಥವನ್ನು ತನ್ನ ಗುರುಗಳು ಅಗಮಿಸಿದಾಗ ದೀಕ್ಷಾತ್ರಯಗಳನ್ನು ಹೊಂದಿ ಕ್ರಿಯಸ್ಥನಾದ್ದರಿಂದ ಆತನು ಎದ್ದು ನಿಂತು, ತರುಣರ ವತಿಯಿಂದ ಬಸವನ ಬಳಗವೆಂಬ ಸಂಘವನ್ನೂ ಆತನ ಹೆಂಡತಿಯಾದ ಶಿವಕ್ಕನು ಕಲಿತವಳಿದ್ದು ಆಕೆಯೂ ದೀಕ್ಷಾಬದ್ಧಳಾದ್ದರಿಂದ ಹೆಣ್ಣು ಮಕ್ಕಳಿಗೆ ಸದ್ಬೋಧಿಸಿ, ಅಕ್ಕನಬಳಗವೆಂಬ ಸಂಘವನ್ನೂ ಸ್ಥಾಪಿಸಿದ್ದಾಯಿತು. ಎರಡೂ ಸಂಘಗಳ ವತಿಯಿಂದ ಎರಡು ಶಿವಾನುಭವ ಪತ್ರಿಕೆಗಳನ್ನು ಬರಮಾಡಿಕೊಳ್ಳಬೇಕೆಂದು ಸೂಚಿಸುವದಾದ ಬಳಿಕ ಶೆಟ್ಟರ ಸಂಗಣ್ಣನವರು ಎದ್ದು ನಿಂತು ಈ ತಿಂಗಳ ವರೆಗೆ ನಡೆದ ಪ್ರವಚನಗಳ ಮಾಲೆಯ ಬಗ್ಗೆ ಚರ್ಚಿಸಿ, ಒಂದೊಂದು ವಿಷಯವನ್ನು ಕುರಿತು ವಿಷಯ ವಿಸ್ತಾರಕ್ಕನುಸರಿಸಿ ಒಂದು ಆಣೆಮಾಲಾ, ೧॥ಆಣೆಮಾಲಾ ಎರಡುಆಣೆ ಮಾಲಾ ಎಂಬ ಪತ್ರಿಕೆಗಳನ್ನು ಸುಲಭ ಶೈಲಿಯಲ್ಲಿ ಬರೆಯಿಸಿ, ಅವುಗಳನ್ನು ಪ್ರತಿಯೊಂದು ಗ್ರಾಮಕ್ಕೂ ಮಠಸ್ಥರ ಕಡೆಗೆ ಭರಪೂರ ಕಮಿಶನ್ ಕೊಟ್ಟು ರೋಖ ಹಣದಿಂದ ಕಳುಹಿಸಿದಲ್ಲಿ ಶಿವಾನುಭವ ಪ್ರವಚನ ಪ್ರಚಾರವು ಸಹಜವಾಗಿ ಆಗುವದೆಂದು ಸೂಚಿಸಿದರು ಆಮೇಲೆ ಶ್ರೀ ದೇಶಿಕೇಂದ್ರ ಶಿವಮೂರ್ತಿಗಳು ಈ ಸಂಗತಿಯನ್ನು ರಾವಬಹಾದ್ದೂರವರಿಗೆ ತಿಳಿಸಿ ಅವರು ಒಪ್ಪಿದರೆ ಪ್ರಚಾರ ಪಡಿಸುವದರಲ್ಲಿ ಬರುವದೆಂದು ಹೇಳಿದ ಬಳಿಕ ಕಡೆಯ ದಿವಸದ ಶಿವಾನುಭವವು ಮುಕ್ತಾಯಗೊಳಿಸಲ್ಪಟ್ಟಿತು.

**ಕಂದ:—** ವಿದ್ಯಾತತ್ತ್ವದಿಂಸುತ।
ಬುದ್ಧ್ಯಾತ್ಮಕತ್ವದ ತತ್ವನಿಂದು ನತಿಗಳೆಯುತ್ತಂ॥
ಸಾಧ್ಯವ ಸಾಧಿಸನಾವಂ।
ಬೋಧ್ಯ ಪದತ್ರಯವ ತಿಳಿದು ತಳೆದುದೆ ತತ್ವಂ ॥೧॥

ತತ್ವಂಗಳ ವಿಸ್ತರಿಸುತ।
ತತ್ವದ ಮೂಲ ಶಿವತತ್ವದೊಡನಾಡುತ್ತಂ॥
ತತ್ವಪದಾರ್ಥವ ತಿಳಿಯುತ।
ತತ್ವದೊಳೇಕಾರ್ಥವಾಗಿ ಪೊಪನೆ ಜಾಣಂ ॥೨॥

ತತ್ವಜ್ಞಾನಾಸಕ್ತಂ।
ತತ್ವಾತೀತೇಷ್ಟಲಿಂಗ ಪೂಜಾ ಬಲದಿಂ॥
ಸತ್ವರಜ ತಮ ಗುಣಂಗಳ।
ಹತ್ವವ ಮಾಡುತ ನಿಜಾತ್ಮ ಲಿಂಗಹೊಯುಕ್ಕುಂ ॥೩॥

ಅಂಗಗಳಾರುಂ ಗುರ್ತಿಸಿ।
ಲಿಂಗಗಳಾಯಾ ಸ್ಥಳಾಂಗ ಸಂಬಂಧಿಸುತಂ॥
ಲಿಂಗಾಂಗದ ಸಂಗದೊಳಿರೆ।
ಮಂಗಳ ಪದ ಪರಮ ಲಿಂಗ ತಾನಾಗನೆ ಹೇಳ್ ॥೪॥

ತನು ಮೂರೊಳ್ ಗುರು ಮೂರುಂ।
ಮನ ಮೂರೊಳ್ ಲಿಂಗಮೂರು ಜಂಗಮ ಮೂರುಂ॥
ಧನಮೂರೊಳ್, ಆತ್ಮ ಮೂರೊಳ್।
ಘನ ಪಾದೋದಕ, ಪ್ರಸಾದನಸ್ಥಾತ್ರಯದೊಳ್ ॥೫॥

ಕರಣತ್ರಯದೊಳ್ ಭಸಿತಂ।
ಮೂರುಂ ಗುಣದೊಳಗೆ ಮಂತ್ರ ಮೂರಕ್ಷರಗಳ್॥
ಮೂರುಂ ಜೀವಂಗಳೊಳಂ।
ಪತಿತರ ರುದ್ರಾಕ್ಷಿಮೂರು ಶರಣಾನುಭವಂ ॥೬॥

**ವಚನ**:— ಜೀವತ್ರಯಗಳ ಕಿವಿಗಳ ಹಿಂಡಿ, ಗುಣತ್ರಯಗಳ ತ್ರಾಣವ ತೆಗೆದು, ಚತುಃಕರಣಗಳ ಹತಿಸಿ, ಪಂಚೇಂದ್ರಿಯಗಳ ಸಂಚಲ ವಡಗಿಸಿ, ಅರು ಅರಿಗಳ ಶಿರವ ಶೀಳಿ, ಸಪ್ತವ್ಯಸನಂಗಳ ಹಸನಂಗೈದು ಎಂಟುಮದಂಗಳ ಗಂಟಲಹರಿದು, ನವದ್ವಾರಗಳ ಭವ ಸಂಗವ ಬಿಡಿಸಿ, ದಶವಾಯುಗಳ ಪ್ರಸರಣ ನಿಲಿಸಿ, ಶಶಿಧರನ ಉಪುರಾದ ಮೂಲಮಂತ್ರವ ಮರೆಯದಿರೆಂದ ನಮ್ಮ ಸಿದ್ಧೇಶ್ವರಾ॥

ತತ್ವಾನುಭವದಿಂದ ಜೀವಭಾವ ಸುಟ್ಟು ದೀಕ್ಷಾತ್ರಯಗಳಿಂದ ಶಿವ ಭಾವ ನಟ್ಟು, ಅಂಗಾನುಭವಗಳಿಂದ ಇಟ ಲಿಂಗಾಂಗದೊಳು ಜ್ಞಾನದೃಷ್ಟಿಯು ನಿಟ್ಟು, ಲಿಂಗಾಂಗಳು ಅಳವಡಲು ದ್ವಾದಶಾಚಾರಗಳ ಕಟ್ಟು ಈ ದಶಾ ಚಾರಗಳ ಕ್ರಿಯಾಕಾರಣವಾದ ಅಷ್ಟಾವರಣಂಗಳ ಗುಟ್ಟು ಆ ಕ್ರಿಯೆ ಯೊಳು ಆತ್ಮೋದ್ಧಾರದ ದಶವಿಧ ಪಾದೋದಕಗಳ ಮುಟ್ಟು ಹಾಗು ಏಕಾದಶ ಪ್ರಸಾದಗಳ ತಟ್ಟು, ಸರ್ವಾಚಾರದ ಶಿವಯೋಗದ ಮಟ್ಟು ಸದಾ ಸರ್ವದಾ ಗುರುಲಿಂಗ ಜಂಗಮದ ಭಕ್ತಿಯ ಇಟ್ಟು, ಅಂಗ ಲಿಂಗ ಗಳ ಸಮರಸದ ಶ್ರೇಷ್ಠ ಶಿವತತ್ವದೊಳು ಗಟ್ಟಿಗೊಳಿಸಯ್ಯ ಎನ್ನ ಸಿದ್ಧೇ ಶ್ವರಾ. ।೨।

"ಕೋಣೆಯ ಕೂಸು ಕೊಳೆಯಿತು, ಓಣಿಯ ಕೂಸು ಬೆಳೆಯಿತ್ತು" ಎಂಬ ಸಂಸಾರಿಗಳ ಅನುಭವೋಕ್ತಿಯಂತೆ, ಮಠ, ಹಿರೇಮಠ, ಗವಿಮಠ, ಗುಹೇಶ್ವರ ಮಠಗಳ ಹಿಂದಿನ ಮಠಮೂರ್ತಿಗಳೆಲ್ಲ ತಮ್ಮ ತಮ್ಮ ಗವಿ ಗುಹಾ ಗುರುಮಠಗಳಲ್ಲಿಯೇ ಲಿಂಗಾಂಗ ಸಾಮರಸ್ಯದ ಸುಖದ ಸುಗ್ಗಿಯ ಅಮೃತಾನ್ನವನುಂಡು ಅಲ್ಲಿಯೇ ಸೊರಗದೆ ವಾನರನಂತೆ ಓಡಿಹೋಗುವ ಮನದ ಮಹಾ ಹಾರಿಕೆಗಳನ್ನು ವ್ಯವಸಾಯಾತ್ಮಕ ಬುದ್ಧಿಯನ್ನು ಚಿತ್ತಿನ ವಿಚ್ಛೇದನವನ್ನು ಅಹಂಕಾರದ ಅಹಂತೆಯನ್ನು ದಹರವನಾಡಲು; ದಿನದ ಕೆಲವೇಳೆಯನ್ನಾದರೂ ಅನುಭಾವದ ಅಡಿಗೆಯ ಮಾಡಿ ತಮ್ಮ ವಚನಾ ಮೃತದ ಪೇಯ ಪದಾರ್ಥಗಳನ್ನು ಜ್ಞಾನಾಕಾಂಕ್ಷಿಗಳಿಗೆ ಉಣಿಸಿ, ತಮ್ಮ ತಮ್ಮ ಶಿವಜ್ಞಾನ ಮಂದಿರವಾದ ಮಠಮಾನ್ಯಗಳ ಮಹತ್ವವನ್ನು ಬೆಳೆಯಿ ಸುತ್ತಿದ್ದರೆಂದ ನಮ್ಮ ಸಿದ್ಧೇಶ್ವರಾ. ॥೩॥

ಆಡಿದ ಮಾತು ಅಚ್ಚೊತ್ತಿದಂತಿರಬೇಕು ಕೇಳುವವರಿಗೆ, ಮಾಡಿದ ಕೃತಿಗಳು ಶಿಲಾ ಶಾಶ್ವತವಾಗಿರಬೇಕು ಆ ಚಂದ್ರಾರ್ಕವಾಗಿ, ಆಡಿ ನಡೆ ಯನೆ, ನಡೆದಂತೆ ನುಡಿಯದೆ, ಇರುವ ಜೀವಭಾವಿಗಳಂತಲ್ಲ ಶಿವಶರಣರು

ಜನನ ಮರಣರೂಪೀ ಪ್ರಪಂಚ ಬಿಟ್ಟು, ಲಿಂಗಾಂಗ ಸಾಮರಸ್ಯದ ಜ್ಞಾನ ಶೂನ್ಯ ಸ್ಥಳವನ್ನು ಹಿಡಿದು ಬಿಡದ ಕಾರಣ "ಬಿಟ್ಟುದು ಹಿಡಿವನಲ್ಲ ಶರಣ, ಹಿಡಿದುದು ಬಿಡುವನಲ್ಲ ಶರಣ" ಎಂಬ ಸಿದ್ಧೋಕ್ತಿಯು ಸ್ಥಿರವಾಗಿ ನಿಂತ ಕುರುಹುಗಾಣೆಂದ ನಮ್ಮ ಸಿದ್ಧೇಶ್ವರಾ ॥೪॥

ರಾಜಿಸುವ ಜಗದೊಳಗೆ ಪೂಜದ ಮಹಾತ್ಮ ಕೋಟಿಯ ಕೂಡಿ ಜಗದಾರಾಧ್ಯ ಜಂಗಮ ದೇವನಿಂ ತೈಜಸ ತತ್ವವಾದ ಇಷ್ಟಲಿಂಗ ದೇವನಂ ಕರಕೆ ಬಿಜಯಂಗೈಸಿಕೊಂಡು ಅನುದಿನದಿ ಪೂಜಿಸುತ ಪೂಜಕ ಪೂಜ್ಯಗಳ ಭಿನ್ನತ್ವನತಿಗಳೆದು ಸಹಜಾನಂದದ ಸದ್ಭಕ್ತನಾಗಿ ಜನನ ಮರಣವ ನೀಗಿ ನಿಜತತ್ವದೊಳು ನಿಲ್ಲೆಂದ ನಮ್ಮ ಸಿದ್ಧೇಶ್ವರಾ ॥೫॥

ಶಿವಶರಣರ ಸಂಗದೊಳು ಶಿವಾನುಭವನುಣ್ಣು ಅಂಗ ತತ್ವವ ನರಿದು ಲಿಂಗ ತತ್ವವ ಬೆರೆದು ಅಂಗ ಲಿಂಗಗಳೆಂಬ ಭಿನ್ನಭೇದವ ಮರೆದು ಮಂಗಳಾತ್ಮಕ ಮಹಾಜ್ಞಾನ ಮಂದಿರವ ಸಂದಿದುರ್, ಹಿಂದಕೆ ಸರಿಯದಿರೆಂದ ನಮ್ಮ ಸಿದ್ಧೇಶ್ವರಾ ॥೬॥



# ಗೃಹಸುಖ.

(ಲೇಖಕಿ:— ಕುಮಾರಿ ಲೀಲಾವತಿ ಗುರಪ್ಪಗೌಡ ಪಾಟೀಲ, ಭೈರುಣಗಿ)



ನಿಜವಾದ ಮನೆಯು ಕಲ್ಲುಕಟ್ಟಿಗೆಗಳಿಂದ ಕಟ್ಟಲ್ಪಟ್ಟಿರುವದಿಲ್ಲ. ಪ್ರೇಮ ಭಾವನೆಯಿಂದ ಕಟ್ಟಲ್ಪಟ್ಟಿರುತ್ತದೆ. ಯಾವ ಮನೆಯಲ್ಲಿ ಸ್ನೇಹ ಪ್ರೇಮ ಭಾವನೆಯುಳ್ಳವರಿರುವರೋ ಅದೇ ನಿಜವಾದ ಮನೆಯು. ಅಂಥ ಮನೆಯಲ್ಲಿಯೇ ನಿಜವಾದ ಸುಖಶಾಂತಿ, ಸಮೃದ್ಧಿಗಳಿಗೆ ಎಡೆಯುಂಟು. ಆದರೆ ಯಾವ ಮನೆಯಲ್ಲಿ ಕಲಹ, ದ್ವೇಷ, ಅಸೂಯೆ, ಸ್ವಾರ್ಥಭಾವನೆಗಳು ತುಂಬಿತುಳುಕುವವೋ ಅಂಥ ಮನೆಯು ಹರಳು, ರತ್ನ, ವಜ್ರವೈಢೂರ್‍ಯಗಳಿಂದ ಕಟ್ಟಿದ್ದರೂ ಅಂಥ ಮನೆಯು ನಿಜವಾದ ಮನೆಯಲ್ಲ. ಅಂಥ ಮನೆಯಿಂದ ಜನರಿಗೆ ಸುಖಶಾಂತಿಗಳು ಎಂದೂ ದೊರಕಲಾರವು. ಅಂಥ ಮನೆಯು ಸ್ಮಶಾನಕ್ಕಿಂತಲೂ ಕಡೆಯೆಂದು ಹೇಳಬಹುದು. ಗೃಹಸುಖದಂಥ ಶ್ರೇಷ್ಠ ಸುಖವು ಮತ್ತೊಂದಿಲ್ಲ. ಈ ಜಗತ್ತಿನಲ್ಲಿ ರಾಜರಾಗಲಿ, ಮಂತ್ರಿಗಳಾಗಲಿ, ಜ್ಞಾನಿಗಳಾಗಲಿ, ಮುಂದಾಳುಗಳಾಗಲಿ ಅವರಿಂದ ಆಗುವ ಭಾಗ್ಯವು ಎಲ್ಲರಿಗೂ ಇರುವದಿಲ್ಲ. ಆದರೆ ಸಾಮಾನ್ಯರಿಗೆ ಗೃಹಸುಖವೇ ಹೆಚ್ಚಿನ ಸುಖವು. ಯಾವನ ಮನೆಯಲ್ಲಿ ಆಜ್ಞಾಧಾರಕಳೂ, ಸುಶೀಲಳೂ, ಧರ್ಮವಂತಳೂ ಆದ ಹೆಂಡತಿಯೂ, ಜಾಣರಾದ ಮಕ್ಕಳೂ ಇರುವರೋ ಅಂಥವರು ನಿಜವಾಗಿಯೂ ಧನ್ಯರೆಂದು ಹೇಳಬಹುದು.— ರಥಕ್ಕೆ ಎರಡು ಗಾಲಿಗಳು ಸಮವಾಗಿರುವದರಿಂದ್ಧಲೇ ಆ ರಥವು ಸರಿಯಾಗಿ ನಡೆಯುತ್ತದೆ. ಅದರಂತೆ ಸಂಸಾರವೆಂಬ ರಥಕ್ಕೆ ಸ್ತ್ರೀ ಪುರುಷರೆಂಬ ಗಾಲಿಗಳು ಸರಿಯಾಗಿದ್ದರೇನೆ ಸಂಸಾರವು ಸುಸೂತ್ರವಾಗಿಯೂ ಸುಖರೂಪವಾಗಿಯೂ ಸಾಗುತ್ತದೆ.

ಗಂಡನು ವಿದ್ಯಾವಂತನೂ, ಸತತೋದ್ಯೋಗಿಯೂ, ಸತ್ಯವಂತನೂ ಅನುರಾಗಿಯೂ ಆಗಲಿಕ್ಕೇಬೇಕು. ಅದರಂತೆ ಹೆಂಡತಿಯು ಬಲ್ಲವಳೂ, ವಿನಯಶೀಲಳೂ, ಚಟುವಟಿಕೆಯುಳ್ಳವಳೂ, ಅತಿಥಿ ಸತ್ಕಾರಬಲ್ಲವಳೂ, ಗಂಡನ ಬಗ್ಗೆ ಭಕ್ತಿಯುಳ್ಳವಳೂ. ಮನೆತನದ ಸ್ಥಾನ-ಮಾನ ತಿಳಿದವಳೂ ಆಗಲಿಕ್ಕೇಬೇಕು. ಸತಿಪತಿಯರಿಬ್ಬರೂ ಪ್ರೇಮದಿಂದಲೂ, ಐಕ್ಯದಿಂದಲೂ

ನಡೆದುಕೊಂಡಿದ್ದಾದರೆ, ಅಂಥ ಮನೆತನದಲ್ಲಿ ನಿಜವಾದ ಶಾಂತಿಯೂ, ಸಮಾಧಾನವೂ ನೆಲೆಗೊಂಡು ಜೀವನ ಯಾತ್ರೆಯು ಸುಖಕರವಾಗಿಯೂ ಸುಲಭವಾಗಿಯೂ ಜರಗುತ್ತದೆ. ಸದ್ಗುಣೆಯಾದ ಸತಿಯಳು ಇದ್ದರೆ ಮನುಷ್ಯನು ಸುಖಿಯೂ, ಕೀರ್ತಿವಂತನೂ ಆಗುತ್ತಾನೆ. ರಾಮಚಂದ್ರ, ಹರಿಶ್ಚಂದ್ರಾದಿಗಳು ಕೀರ್ತಿವಂತರಾಗಲಿಕ್ಕೆ ಸೀತಾದೇವಿ ತಾರಾಮತಿಯರಂಥ ಸಾಧ್ವೀಮಣಿಯರೇ ಕಾರಣರು. ಮಹಾತ್ಮಾಗಾಂಧಿಯವರು ತಾವು ಇಷ್ಟೊಂದು ಪೂಜ್ಯರೂ ಸಾಮರ್ಥ್ಯವಂತರೂ ಆಗಲಿಕ್ಕೆ ತಮ್ಮ ಧರ್ಮಪತ್ನಿಯರಾದ ಕಸ್ತೂರಿಬಾಯಿಯವರೇ ಕಾರಣರೆಂದು ಅವರು ಸ್ಪಷ್ಟವಾಗಿ ಹೇಳಿದ್ದಾರೆ. ಯಾವ ಸ್ತ್ರೀಯಳು ಸ್ವಧರ್ಮನಿಷ್ಠಳೂ, ಗುರುಹಿರಿಯರ ಸೇವೆಯನ್ನು ಮಾಡುವವಳೂ, ಸತ್ಯವನ್ನು ನುಡಿಯುವವಳೂ, ಪ್ರೇಮಶೀಲಳೂ, ಸರಳವಾದ ರೀತಿನೀತಿಗಳುಳ್ಳವಳೂ, ದೇವರ ಮೇಲೆ ಭಕ್ತಿಯುಳ್ಳವಳೂ, ವಿನಯಗುಣವುಳ್ಳವಳೂ ಆಗಿರುವಳೋ ಅಂಥವಳ ಬಳಿಯಲ್ಲಿ ಲಕ್ಷ್ಮಿಯು ಸದಾ ವಾಸಿಸುತ್ತಾಳೆ. ಯಾವ ಸ್ತ್ರೀಯು ಸದಾ ತನ್ನ ಪತಿಯನ್ನು ಪೀಡಿಸುತ್ತಲೂ ಪ್ರತಿಕೂಲಳಾಗಿ ವರ್ತಿಸುತ್ತಲೂ ಕೆಲಸದಲ್ಲಿ ಆಲಸ್ಯವುಳ್ಳವಳೂ, ಬಹಳ ಮಾತನಾಡುವವಳಾಗಿಯೂ, ಇರುವಳೋ ಅವಳು ತಾನೂ ದರಿದ್ರಳಾಗುವಳಲ್ಲದೆ ತನ್ನನ್ನು ನಂಬಿದವರನ್ನು ಸಹ ದರಿದ್ರರನ್ನಾಗಿ ಮಾಡುತ್ತಾಳೆ.

ಯಾವ ಹೆಣ್ಣುಮಗಳು ಪತಿಯೇ ದೇವರೆಂದು ನಂಬಿ ಪತಿಯ ಪ್ರೇಮಕ್ಕೆ ಪಾತ್ರಳಾಗಿ ಪ್ರತಿಯೊಂದು ಕಾರ್ಯದಲ್ಲಿ ಸಹಾಯಕಳಾಗಿ ಪತಿಗೆ ಸದಾವ ಕಾಲದಲ್ಲಿ ಅನುಕೂಲಳಾಗಿ ಮನೆತನದ ಸುಖಶಾಂತಿಗಳಿಗೆ ತವರು ಮನೆಯಾಗುವಳೋ ಅಂಥ ಸ್ತ್ರೀಯು ಪ್ರತ್ಯಕ್ಷ ದೇವತೆಯಾಗುವದರಲ್ಲಿ ಸಂದೇಹವಿಲ್ಲ. ಯಾವ ಮನೆಯಲ್ಲಿ ಸುಶೀಲಳೂ, ಸದ್ಗುಣವಂತಳೂ ಅನುಕೂಲಳೂ ಆದ ಸ್ತ್ರೀಯಳಿರುವಳೋ ಅಲ್ಲಿ ದೇವತೆಗಳು ನೆಲೆಸಿರುತ್ತಾರೆ.

ಮನೆತನವೆಂಬ ರಾಜ್ಯಕ್ಕೆ ಗಂಡನು ರಾಜನಂತೆಯೂ ಹೆಂಡತಿಯು ಮಂತ್ರಿಯಂತೆಯೂ ಇರಬೇಕು. ಆದ್ದರಿಂದ ಗೃಹ ಕಾರಭಾರವು ಸುಖಕರವಾಗಿ ಸಾಗಬೇಕಾದರೆ, ಹೆಂಡತಿ ಎಂಬ ಮಂತ್ರಿಯು ಕಾರ್ಯತತ್ಪರಳೂ ಸುಶೀಲಳೂ, ಸಮಾಧಾನ ಗುಣವುಳ್ಳವಳೂ, ಸಮಯನಿಷ್ಠಳೂ ಆಗಲಿಕ್ಕೆ ಬೇಕು. ಮನೆತನಕ್ಕೆ ಗೃಹಣಿಯೇ ಲಕ್ಷ್ಮಿಯಲ್ಲದೆ ಜಡವಾದ ಧನವು ಲಕ್ಷ್ಮಿ ಎನಿಸಲಾರದು. ಗೃಹಲಕ್ಷ್ಮಿಯಿಂದ ದೊರೆಯತಕ್ಕ ಸುಖವು

ಧನದಿಂದ ದೊರೆಯಲಾರದು. ನಾನಾತರದ ರುಚಿ ರೂಪಗಳುಳ್ಳ ಸಿರಿವಂತನ ಊಟಉಪಚಾರಗಳಿಗಿಂತಲೂ ಸಾಧ್ವೀಮಣಿಯಾದ ಬಡವನ ಹೆಂಡತಿಯ ಅಂಬಲಿಯ ಊಟವು ಹೆಚ್ಚು ಸುಖಕರವಾಗಿದೆ. ಈ ಸಂಸಾರದಲ್ಲಿ ಅಮೃತವು ಉಂಟು, ವಿಷವು ಉಂಟು; ಸುಖವು ಉಂಟು, ದುಃಖವು ಉಂಟು. ಆದರೆ ಇವೆಲ್ಲಕ್ಕೆ ಸ್ತ್ರೀಯರೇ ಕಾರಣರು. ದುಷ್ಟರಾದ ಸ್ತ್ರೀಯರಿಂದ ದುಃಖವು, ಸಜ್ಜನರಾದ ಸ್ತ್ರೀಯರಿಂದ ಸುಖವು ಸಹಜವಾಗಿ ದೊರೆಯುತ್ತವೆ.

---

# ಬಹುರೂಪಿ ಚೌಡಯ್ಯನ ಧರ್ಮ ಪ್ರಸಾರ ಕಾರ್ಯಗಳು

( ಲೇಖಕ:— ರಾ|| ಬ|| ಫ. ಗು. ಹಳಕಟ್ಟಿ, ವಿಜಾಪುರ. )

ವೀರಶೈವ ಧರ್ಮವು ಬಸವೇಶ್ವರನ ಕಾಲದಲ್ಲಿ ಹೇಗೆ ಪ್ರಸಾರಹೊಂದಿತೆಂಬುದನ್ನು ತಿಳಿಯುವದು ಬಹು ಮಹತ್ವದ್ದಾಗಿದೆ. ಇದರ ಪೂರ್ಣ ವೃತ್ತಾಂತವು ಇನ್ನೂ ನಮಗೆ ತಿಳಿದುಬಂದಿಲ್ಲ. ವೀರಶೈವ ಧರ್ಮವು ಉತ್ತರಕ್ಕೆ ಗೋದಾವರಿಯಿಂದ ದಕ್ಷಿಣಕ್ಕೆ ಕಾಂಚೀನಗರದ ವರೆಗೆ ಮತ್ತು ಪಶ್ಚಿಮಕ್ಕೆ ಸಹ್ಯಾದ್ರಿಪರ್ವತ ಪ್ರದೇಶದಿಂದ ಪೂರ್ವ ಸಮುದ್ರಕ್ಕೆ ಸಮೀಪವಿರುವ ಗಂಜಾಮ ರಾಜಮಹೇಂದ್ರಿ ವರೆಗೆ ವಿಸ್ತಾರಹೊಂದಿದ್ದು ತಿಳಿದು ಬರುತ್ತದೆ. ಈ ಪ್ರಾಂತದಲ್ಲೆಲ್ಲ ಶಿವಶರಣರು ಉದ್ಭವಿಸಿದ್ದಾರೆಂಬುದು ಶಿವಶರಣರ ಚರಿತ್ರೆಗಳನ್ನು ನೋಡಿದಲ್ಲಿ ತಿಳಿದುಬರುತ್ತದೆ.

ಪಶ್ಚಿಮಕ್ಕೆ ಗೊಗ್ಗವ್ವೆ, ಮಹಾದೇವಿಯಕ್ಕ, ಚಾರಮರಾಖು, ಇವರು ಪ್ರಸಿದ್ಧಿಹೊಂದಿದ್ದಾರೆ. ಗೋದಾವರೀ ತೀರದಲ್ಲಿ ಉರಿಲಿಂಗದೇವ, ವೈಜವ್ವೆ, ಉರಿಲಿಂಗಪೆದ್ದಿ ಇವರು ಪ್ರಸಿದ್ಧರಾಗಿದ್ದಾರೆ. ಪೂರ್ವಸಮುದ್ರದಲ್ಲಿ ಪಂಡಿತಾರಾಧ್ಯ ತಂಗಟೂರ ಮಾರಯ್ಯಾ ಮೊದಲಾದವರೂ ದಕ್ಷಿಣದೇಶದಲ್ಲಿ ಶಿವಪ್ರಿಯನಾಚಿ, ಮೆರೆಮಿಂಡದೇವ ಇವರೂ ಪ್ರಸಿದ್ಧಿಯನ್ನು ಹೊಂದಿದ್ದಾರೆ. ವೀರಶೈವ ಧರ್ಮವು ಈ ಪ್ರಕಾರ ಹೇಗೆ ಪ್ರಸಾರ ಹೊಂದಿತೆಂಬುದನ್ನು ಸಂಶೋಧನೆ ಮಾಡುವದು ಬಹಳ ಮಹತ್ವದ ವಿಷಯವಾಗಿದೆ.

ಬಸವೇಶ್ವರನು ಮಹತ್ವಿಕನು, ಅವನು ಪಂಚಪರುಷಗಳನ್ನು ಸಾಧಿಸಿದವನು, ಒಬ್ಬ ಪೊವಾಡ ಪುರುಷನು, ಆದ್ದರಿಂದ ಅವನಿಂದಲೇ ಇಂಥ ಮಹತ್ವದ ಪ್ರಸಾರಕಾರ್ಯಗಳು ಜರಗಿವವೆಂದು ಅನೇಕರು ತಿಳಿದಿದ್ದಾರೆ. ಆದರೆ ಶಿವಶರಣರ ಚರಿತ್ರೆಗಳನ್ನು ಸಂಶೋಧನೆ ಮಾಡಿದಲ್ಲಿ ಮತ್ತು ಬಸವೇಶ್ವರನ ವಚನಗಳನ್ನು ಪರಿಶೀಲಿಸಿದಲ್ಲಿ ಇಂಥ ತಿಳುವಳಿಕೆಯಲ್ಲಿ ಪೂರ್ಣ ಸತ್ಯತೆಯು ಇದ್ದಂತೆ ತೋರುಬರುವದಿಲ್ಲ. ಬಸವೇಶ್ವರನು ತನ್ನ ವಚನಗಳಲ್ಲಿ ತಾನೊಬ್ಬ ಸಾಮಾನ್ಯ ಪುರುಷನು, ಸಿದ್ಧಿಗಳು ನನ್ನಿಂದಾಗವು, ನಾನೊಬ್ಬ ದೀನ ಮನುಷ್ಯನೆಂದು ಹೇಳಿಕೊಂಡಿದ್ದಾನೆ. ಬಸವೇಶ್ವರನ ಕಾಲದಲ್ಲಾದ ವಚನಗಳು ಯೋಗವನ್ನು ಸಾಧಿಸಿ ಸಿದ್ಧಿಗಳನ್ನು ಮಾಡುವದನ್ನು ಲಕ್ಷಿಸಬಾರದೆಂದು ಹೇಳುತ್ತ ಬಂದಿವೆ. ಆದರೆ ಅವು ಧರ್ಮ, ನೀತಿ, ಸದಾಚಾರ, ಭಕ್ತಿ, ಸದ್ವೃತ್ತಿ ಇವುಗಳಿಗೆ ಉಚ್ಚಸ್ಥಾನವನ್ನು ಕೊಟ್ಟಿರುತ್ತವೆ. ಇವುಗಳನ್ನು ಜನತೆಯಲ್ಲಿ ಪ್ರಸಾರ ಮಾಡಿ ಜನರನ್ನು ಸನ್ಮಾರ್ಗಕ್ಕೆ ಹಚ್ಚುವದರ ಕಡೆಗೆ ಮೊದಲಿನ ಕಾಲದ ಶಿವಶರಣರು ಪ್ರಯತ್ನಿಸಿದ್ದು ಕಂಡುಬರುತ್ತವೆ.

ಈ ವಿಷಯದಲ್ಲಿ ಬಹುರೂಪಿ ಚೌಡಯ್ಯನ ಚರಿತ್ರೆಯು ಬಹು ಮಹತ್ವದ ಪ್ರಕಾಶವನ್ನು ಕೆತಹುತ್ತದೆ. ಅವನು ಮೊದಲು ಶೈವ ಬ್ರಾಹ್ಮಣನಾಗಿದ್ದನು. ಮುಂದೆ ಅವನು ವೀರಶೈವದೀಕ್ಷೆಯನ್ನು ಹೊಂದಿ ಧರ್ಮಪ್ರಸಾರ ಕಾರ್ಯವನ್ನು ಮಾಡಿರುವನು. ಅವನ ಚರಿತ್ರೆಯು ಬಹು ಬೋಧಪ್ರದವಾಗಿದೆ.

ಅವನು ಶಿವನ ಗಣಾಧೀಶ್ವರರಲ್ಲಿ ಒಬ್ಬನಾದ ಶ್ರೀಧರ ಗಣೇಶ್ವರನ ಅವತಾರವೆಂದು ಅವನ ಚರಿತ್ರೆಯಲ್ಲಿ ಉಲ್ಲೇಖವಿದೆ. ಅವನು ಶಿವನ ಅಜ್ಞೆಯನ್ನು ಹೊಂದಿ ಈಗ ಬೀದರ ಜಿಲ್ಲೆಯಲ್ಲಿರುವ ರೇಕಳಿಕೆ ಎಂಬ ಗ್ರಾಮದಲ್ಲಿ ಜನವಶ್ಯ ಮತ್ತು ಧರ್ಮವತಿ ಎಂಬ ದಂಪತಿಗಳ ಉದರದಲ್ಲಿ ಜನಿಸಿದನು. ಅವನು ರೇಕನಾಥಾಚಾರ್ಯ ಎಂಬವನಿಂದ ವೀರಶೈವ ದೀಕ್ಷೆಯನ್ನು ಹೊಂದಿದನು. ಈ ಕಾಲಕ್ಕೆ ಯಾವನಾದರೊಬ್ಬನು ದೀಕ್ಷೆಯನ್ನು ಹೊಂದಿದಬಳಿಕ ಅವನು ಕೆಲವೊಂದು ಕಾಯಕವನ್ನು ಮಾಡಲೇಬೇಕೆಂಬ ನಿಯಮವಿತ್ತು. ಇದಕ್ಕನುಸಾರವಾಗಿ ಚೌಡಯ್ಯನು ಬಹುರೂಪಿಯ ಕಾಯಕವನ್ನು ಪಾಲಿಸಬೇಕೆಂಬ ಆದೇಶವನ್ನು ಅವನ ಗುರು

ವಾದ ಲೋಕನಾಥನು ಕೊಟ್ಟನೆಂದು ತಿಳಿಯುತ್ತದೆ. ಚೌಡಯ್ಯನು ಈ ಕಾರ್ಯಕಕ್ಕೆ ಬೇಕಾಗುವ ಗಾಯನ ವಿದ್ಯೆಯಲ್ಲಿ ಪ್ರವೀಣನಾಗಿ ಹಿಂದಿನ ಕಾಲದ ಮಹಾಭಾರತ, ರಾಮಾಯಣಾದಿಗಳಲ್ಲಿರುವ ಮಹಾವಿಭೂತಿಗಳ ಚರಿತ್ರೆಗಳನ್ನು ಗಾಯನ ಆಟ ಮೊದಲಾದವುಗಳ ಮೂಲಕ ಆಡಿತೋರಿಸುವವನಾದನು. ಅವನು ಈ ಬಹುರೂಪಿ ವಿದ್ಯೆಯಲ್ಲಿ ಅತ್ಯಂತ ಪ್ರವೀಣನೆಂದು ಹೆಸರಾದನು.

ಹೀಗಿರುವಲ್ಲಿ ಈಗ ಹೈದರಾಬಾದ ಸಂಸ್ಥಾನದಲ್ಲಿರುವ ಕೊಟ್ಟಿಗಿರಿ ಎಂಬ ಪಟ್ಟಣದಲ್ಲಿ ರಾಮದೇವನೆಂಬ ಅರಸನು ರಾಜ್ಯವಾಳುತ್ತಿದ್ದನು, ಅವನಲ್ಲಿ ಅಚ್ಚುತನೆಂಬ ಬಹುರೂಪಿಯು ಅತ್ಯಂತ ಪ್ರಸಿದ್ಧಿಯನ್ನು ಹೊಂದಿದ್ದನು. ಚೌಡಯ್ಯನು ಅವನಲ್ಲಿಗೆ ಹೋಗಿ ಅರಸನ ಇದಿರಿನಲ್ಲಿ ಅನೇಕ ತರದ ವೇಷಗಳನ್ನು ತೊಟ್ಟು ತನ್ನ ಗಾನ ವಿದ್ಯೆಯನ್ನು ತೋರಿಸಿದನು. ಇದರಲ್ಲಿ ಅವನು ಅಚ್ಚುತನಕಿಂತಲೂ ಶ್ರೇಷ್ಠನೆಂದು ಕಂಡುಬಂದಿತು. ಆಗ ಅಚ್ಚುತನು ಚೌಡಯ್ಯನಲ್ಲಿ ನಿಂತುಕೊಂಡು ಅವನ ಸೇವೆಯನ್ನು ಮಾಡಹತ್ತಿದನು. ಮುಂದೆ ಕೆಲವು ದಿವಸಗಳಾದ ಮೇಲೆ ಯಕ್ಷನಾಥನೆಂಬ ಇನ್ನೊಬ್ಬ ಬಹುರೂಪಿಯು ತನ್ನ ಮೇಳದವರೊಡನೆ ಚೌಡಯ್ಯನಿದ್ದ ಊರಿಕ್ಕೆ ಬಂದನು. ಆಗ ಈ ಉಭಯತರು ತಮ್ಮ ತಮ್ಮ ವಿದ್ಯೆಗಳನ್ನು ಅರಸನ ಇದಿರಿಗೆ ತೋರಿಸಲಾಗಿ ಅದರಲ್ಲಿ ಚೌಡಯ್ಯನ ಗಾಯನ ಮತ್ತು ನಟನೆ ಇವು ಬಹು ಶ್ರೇಷ್ಠತರವಾದುವೆಂದು ಅರಸನು ನಿರ್ಣಯಿಸಿದನು.

ಈ ಪ್ರಕಾರ ಚೌಡಯ್ಯನು ದೇಶದಲ್ಲಿ ಬಹು ಪ್ರಸಿದ್ಧರಾದ ಗಾಯನಪಟುಗಳನ್ನು ಸೋಲಿಸಿದ್ಧರಿಂದ ಅವನ ಕೀರ್ತಿಯು ಸುತ್ತಲೂ ಹಬ್ಬಿತು. ಆಗ ದೇಶದಲ್ಲಿಯ ಅಸಂಖ್ಯ ಗಾನವಿದ್ಯಾ ಪ್ರವೀಣರು ಅವನಲ್ಲಿಗೆ ಬಂದು ಸೇರಹತ್ತಿದರು. ಚೌಡಯ್ಯನಾದರೂ ನಾನಾವಿಧ ರಾಗಗಳನ್ನು ಅವರಿಗೆ ಕಲಿಸಿ ಸಂಗೀತಕಲೆಯಲ್ಲಿ ಅವರನ್ನು ನಿಷ್ಣಾತರನ್ನಾಗಿ ಮಾಡಿದನು. ಇದರಿಂದ ನಾಡಿನಲ್ಲಿ ಸಂಗೀತ ಕಲೆಯು ಹೆಚ್ಚಿತು.

ಆದರೆ ಚೌಡಯ್ಯನ ರಾಗಗಳಲ್ಲಿ ರಾಮಕ್ರಿಯಾ ರಾಗ ಎಂಬುದು ಅತ್ಯಂತ ಶ್ರೇಷ್ಠತರದ್ದಾಗಿತ್ತು. ಆ ರಾಗದಲ್ಲಿಯೇ ಅವನು ಪರಮಾತ್ಮನ ಭಜನೆಯನ್ನು ಮಾಡುವನು. ಮುಂದೆ ಇದು ಅವನಿಗೆ ಲಿಂಗ ಪೂಜೆ

ಯಂತೆ ಪರಿಣಮಿಸ ಹತ್ತಿತು. ಆಗ ಚೌಡಯ್ಯನು ಭಕ್ತ ಶ್ರೇಷ್ಠನೆಂದು ನಾಡಿನಲ್ಲಿ ಪ್ರಸಿದ್ಧನಾದನು. ಇದರಂತೆಯೇ ಅವನಲ್ಲಿದ್ದ ಸಾವಿರಾರು ಜನ ಶಿಷ್ಯರು ಲಿಂಗಧಾರಿಗಳಾಗಿ ತಮ್ಮ ಗಾನವಿದ್ಯೆಯಿಂದ ಪರಮಾತ್ಮನನ್ನು ಭಜಿಸುವವರಾದರು. ಹೀಗೆ ನಾಡಿನಲ್ಲಿ ಭಕ್ತಿಭಾವವು ಭರದಿಂದ ಬೆಳೆಯ ಹತ್ತಿತು.

ಮುಂದೆ ಚೌಡಯ್ಯನ ಮನಸ್ಸಿನಲ್ಲಿ ಭಕ್ತ ಜಂಗಮರಿಗೆ ಒಂದು ಮಹತ್ತಾದ ಗಣಪರ್ವವನ್ನು ಮಾಡಬೇಕೆಂಬ ಬಯಕೆಯು ಉತ್ಪನ್ನವಾಯಿತು. ಆದರೆ ಇದಕ್ಕೆ ಬೇಕಾಗುವ ಹಣವು ಅವನಲ್ಲಿರಲಿಲ್ಲ. ಆಗ ಅವನು ಅರಸನಲ್ಲಿಗೆ ಬಂದು ನನಗೆ ಹನ್ನೆರಡುಸಾವಿರ ವರಾಹಗಳನ್ನು ಕಡವಾಗಿ ಕೊಡಲು ಬೇಡಿದನು. ಅದಕ್ಕೆ ಅರಸನು ಈ ಹಣಕ್ಕೋಸ್ಕರ ನೀನು ಯಾವ ವಸ್ತುವನ್ನು ನನ್ನಲ್ಲಿ ಅಡವು ಇಡುವಿ ಎಂದು ಕೇಳಲು ಅದಕ್ಕೆ ಚೌಡಯ್ಯನು ನನ್ನ ಹತ್ತರ ಯಾವ ಸೊತ್ತೂ ಇಲ್ಲ. ಆದರೆ ರಾಮಕ್ರಿಯಾ ರಾಗವು ಮಾತ್ರ ನನ್ನ ಸೊತ್ತಾಗಿ ಇದೆ. ಅದನ್ನೇ ನಾನು ನಿನ್ನಲ್ಲಿ ಅಡವು ಇಡುತ್ತೇನೆ, ಎಂದು ಹೇಳಿದನು. ಅದಕ್ಕೆ ಅರಸನು ಒಡಂಬಟ್ಟು ಚೌಡಯ್ಯನಿಗೆ ಹನ್ನೆರಡು ಸಾವಿರ ವರಾಹಗಳನ್ನು ಸಾಲವಾಗಿ ಕೊಟ್ಟನು. ಆಗ ಚೌಡಯ್ಯನು ತನಗೆ ಬಂದ ಈ ಹಣದಿಂದ ಭಕ್ತ ಜಂಗಮರಿಗೆ ಒಂದು ಮಹತ್ತರವಾದ ಪರ್ವವನ್ನು ಮಾಡಿಸಿದನು.

ಈ ಪ್ರಕಾರ ಚೌಡಯ್ಯನು ತನ್ನ ಶ್ರೇಷ್ಠವಾದ ರಾಗವನ್ನು ಒತ್ತೆ ಇಟ್ಟಿದ್ದರಿಂದ ಅದನ್ನು ಅವನಾಗಲಿ ಅಥವಾ ಅವನ ಶಿಷ್ಯರಾಗಲಿ ನಾಡಿನಲ್ಲಿ ಹಾಡುವದು ನಿಂತಿತು. ಅದನ್ನು ಸರಿಯಾಗಿ ಭಕ್ತಿಭಾವದಿಂದ ಹಾಡುವದು ಬೇರೆಯಾರಿಗೂ ಆಗುತ್ತಿರಲಿಲ್ಲ. ಇದರಿಂದ ನಾಡಿನಲ್ಲಿ ಇರುವ ಭಕ್ತರಿಂದ ಪರಮಾತ್ಮನ ಸೇವೆಯು ನಿಂತು ಹೋಯಿತು. ಈ ಸ್ಥಿತಿಯ ಮೂಲಕ ಪರಮಾತ್ಮನಲ್ಲಿ ವಿವಂಚನೆಯು ಉಂಟಾಗಿ ಇದರ ನಿಜ ಸ್ಥಿತಿಯನ್ನು ಅರಿಯಬೇಕೆಂದು ಅವನು ಜಂಗಮರೂಪ ಧಾರಣಮಾಡಿಕೊಂಡು ಚೌಡಯ್ಯನಲ್ಲಿಗೆ ಬರುವವನಾದನು.

ಪರಮಾತ್ಮನು ಚೌಡಯ್ಯನ ಮನೆಯ ಮುಂದೆ ಬಂದು ನಿಂತು ಕೊಂಡನು. ಆಗ ಚೌಡಯ್ಯನು ಅವನಾರೆಂಬುವದನ್ನು ತಿಳಿಯದೆ ನೀವಿಲ್ಲಿ ಏಕೆ ಬಂದಿರಿ ಎಂದು ಕೇಳಲು ಆ ಜಂಗಮನು ನೀನು ಹಾಡುವ ಆ ರಾಮಕ್ರಿಯಾ ರಾಗದ ಹಾಡುಗಳನ್ನು ಕೇಳಲಿಕ್ಕೆ ಬಂದಿದ್ದೇನೆ, ಎಂದು

ಹೇಳಿದನು. ಅದಕ್ಕೆ ಚೌಡಯ್ಯನು ಹಿಂದೆ ನಡೆದ ಸಂಗತಿಗಳನ್ನು ಹೇಳಿ ಅದನ್ನು ನಾನು ಈಗ ಹಾಡಲಾರೆನು ಎಂದು ಅವನಿಗೆ ಉತ್ತರಕೊಟ್ಟನು. ಆದರೆ ನಿನಗೆ ಬೇಕಾದರೆ ನಾನು ನನ್ನ ಸಾಲವನ್ನು ತೀರಿಸಿಕೊಳ್ಳುವವರೆಗೆ ನೀನು ನಿನ್ನ ಇಷ್ಟವಿದ್ದರೆ ನನ್ನ ಮನೆಯಲ್ಲಿ ಇರಬಹುದು ಎಂದು ಎಂದು ಹೇಳಿದನು. ಆದಕ್ಕೆ ಆ ಜಂಗವನು ಒಪ್ಪಿ ಅವನಲ್ಲಿರಹತ್ತಿದನು.

ಆ ಜಂಗಮನ ಹೆಸರು ನಾಗಿನಾಥ ಎಂಬುದಾಗಿತ್ತು. ಅವನು ಜ್ಞಾನಿಯಾಗಿದ್ದರಿಂದ ಚೌಡಯ್ಯನಿಗೆ ವಚನಗಳ ಮೂಲಕ ಶಿವಾನುಭವದ ತತ್ವಗಳನ್ನು ಬೋಧಿಸ ಹತ್ತಿದನು ಇದರಿಂದ ಚೌಡಯ್ಯನು ತಾನೂ ವಚನಗಳನ್ನು ರಚಿಸಲಿಕ್ಕೆ ಪ್ರಾರಂಭಿಸಿದನು. ಇಷ್ಟೇ ಅಲ್ಲ, ಅವುಗಳನ್ನು ಅವನು ತನ್ನ ಗಾಯನಪಟುಗಳಾದ ಶಿಷ್ಯರಿಗೂ ಬೋಧಿಸಹತ್ತಿದನು. ಈ ಶಿಷ್ಯರು ತಮಗೆ ಬೋಧಿಸಿದ್ದನ್ನೆಲ್ಲ ಎಲ್ಲ ಕಡೆಗೂ ಹಾಡುಗಳ ರೂಪದಲ್ಲಿ ಪ್ರಸಾರ ಮಾಡಹತ್ತಿದರು. ಇದರಿಂದ ನಾಡಿನಲ್ಲೆಲ್ಲ ಶಿವಶರಣರ ಧರ್ಮವು ವಿಸ್ತಾರವಾಗಿ ಹಬ್ಬಿತು.

ಇಷ್ಟಾದ ಮೇಲೆ ನಾಗಿನಾಥನು ಹಿಂದಿನ ಕಾಲದಲ್ಲಿ ಆಗಿ ಹೋದ ಶಿವಶರಣರ ಚರಿತ್ರೆಗಳನ್ನು ಚೌಡಯ್ಯನಿಗೆ ತಿಳಿಸಹತ್ತಿದನು ಇವು ಚೌಡಯ್ಯನಿಗೆ ಯಾವವೂ ಗೊತ್ತಿರಲಿಲ್ಲ ಅವುಗಳನ್ನು ಅವನು ಕೇಳಿದಕೂಡಲೇ ಅವನಲ್ಲಿ ಹೊಸ ಪ್ರಕಾಶವು ಉಂಟಾಯಿತು. ಆಗ ಅವನಿಗೆ ವೀರಶೈವ ಧರ್ಮದ ಹೆಚ್ಚಳವು ತಿಳಿದು ಬಂದಿತು. ಮತ್ತು ಅವುಗಳ ಬಗ್ಗೆ ಹಾಡುಗಳನ್ನು ರಚಿಸಹತ್ತಿದನು.

ಆಗ ನಾಗಿನಾಥನು ಅವನಿಗೆ ಬೋಧಿಸಿದ್ದೇನಂದರೆ, ನೀನು ಇನ್ನು ಮೇಲೆ ಶಿವಶರಣರ ಚರಿತ್ರೆಗಳನ್ನೇ ಹೆಚ್ಚಾಗಿ ಆಡಿತೋರಿಸು, ಶಿವಶರಣರು ಆಡಿದ್ದನ್ನು ನಿನ್ನ ಬಹುರೂಪಿನ ವಿದ್ಯೆಯ ಮೂಲಕ ಆಡಹತ್ತಬೇಕು. ನೀನು ಇನ್ನು ಮೇಲೆ ನಿನ್ನ ಮೊದಲಿನ ಶೈವದ ರೀತಿಯನ್ನು ಬಿಟ್ಟುಕೊಡು ಎಂದು ಹೇಳಿ, ಮುಂದೆ ನೀನು ಮೊರನ ಮೇಮಯ್ಯನು ಧನವನ್ನು ಹೊರಗೆ ಬಿಸಾಡಿದನ್ನೂ ಬಡಿಹೋರಿ ಬೊಮ್ಮಯ್ಯನು ಭಕ್ತರಿಂದ ಬಡಿಸಿಕೊಂಡದ್ದನೂ ಚನ್ನಯ್ಯನೊಡನೆ ಶಿವನು ಉಂಡಿದ್ದನ್ನೂ ದೇವರ ದಾಸಿಮಯ್ಯನಿಗೆ ಶಿವನು ತವನಿಧಿಯನ್ನು ಕೊಟ್ಟಿದ್ದನ್ನೂ ಇಂಥ ಶಿವ

ಶರಣರ ಚರಿತ್ರೆಗಳನ್ನು ಜನರ ಮುಂದೆ ಆಡಿತೋರಿಸೆಂದು ಬೋಧಿಸಿದನು. ಇದರಿಂದ ನೀನು ಹಣವನ್ನು ಹೆಚ್ಚಾಗಿ ಸಂಪಾದಿಸಿ ನೀನು ಮಾಡಿದ ಸಾಲವನ್ನು ತೀರಿಸಿ ಬಿಡುವಿ ಎಂದು ಹೇಳಿದನು.

ನಾಗಿನಾಥನು ಹೇಳಿದ ಪ್ರಕಾರ ಚೌಡಯ್ಯನು ಶಿವಶರಣರ ಚರಿತ್ರೆಗಳನ್ನು ಬಹುರೂಪಿನಲ್ಲಿ ಮನೋವೇಧಕವಾಗಿ ಆಡುತೋರಿಸಹತ್ತಿದನು. ಇದರಿಂದ ಜನರಲ್ಲಿ ಶಿವಶರಣರ ಬಗ್ಗೆ ಭಕ್ತಿಭಾವವು ಬೆಳೆಯಿತು. ನಾಡಿನಲ್ಲೆಲ್ಲ ವೀರಶೈವ ಧರ್ಮವು ತೀವ್ರವಾಗಿ ಪ್ರಸಾರವಾಗಹತ್ತಿತು.

ಈ ಪ್ರಕಾರ ಶಿವಶರಣರ ವಿಷಯವಾಗಿ ಭಕ್ತಿಯು ದೇಶದಲ್ಲಿ ಬೆಳೆಯಲಾಗಿ ಅವರ ಆಟಗಳನ್ನು ಆಡುವ ಚೌಡಯ್ಯನಿಗೆ ಹಣವೂ ಕೂಡ ವೃದ್ಧಿಯಾಗಹತ್ತಿತು. ಇದರಿಂದ ಅರಸನ ಸಾಲವನ್ನೆಲ್ಲ ಅವನು ಮುಟ್ಟಿಸಿಬಿಟ್ಟನು.

ಆಗ ಅವನ ಜ್ಞಾನ ಗುರುವಾದ ನಾಗಿನಾಥನು ಅತ್ಯಂತ ಹರ್ಷಿತನಾಗಿ ಚೌಡಯ್ಯನಿಗೆ ನಾನು ಈವರೆಗೆ ನಿನ್ನ ರಾಮಕ್ರಿಯಾ ರಾಗವನ್ನು ಕೇಳಲು ನಿನ್ನಲ್ಲಿ ಕಾಯ್ದುಕೊಂಡಿದ್ದೇನೆ. ಅದನ್ನು ಈಗ ನನಗೆ ಹಾಡಿತೋರಿಸು ಎಂದು ಹೇಳಿದನು. ಆಗ ಚೌಡಯ್ಯನು ಸಂತೋಷಪಟ್ಟು ಅದನ್ನು ಅತ್ಯುತ್ತಮ ರೀತಿಯಿಂದ ಭಕ್ತಿಭಾವಪೂರಿತನಾಗಿ ಹಾಡಿತೋರಿಸಿದನು. ಅದಕ್ಕೆ ನಾಗಿನಾಥನು ಸಂತುಷ್ಟನಾಗಿ ಚೌಡಯ್ಯನಿಗೆ ನಿಜರೂಪವನ್ನು ತೋರಿಸಿದನು. ಆಗ ಅವನು ಚೌಡಯ್ಯನಿಗೆ ಇನ್ನುಮೇಲೆ ನೀನು ಭೂಲೋಕದಲ್ಲಿರಬೇಡ. ನನ್ನೊಡನೆ ಈಗ ಕೈಲಾಸಕ್ಕೆ ನಡೆ ಎಂದು ಹೇಳಿದನು. ಅದಕ್ಕೆ ಚೌಡಯ್ಯನು ನನಗೆ ಕೈಲಾಸವು ಬೇಡ, ನಾನು ಶಿವಶರಣರ ಸೇವೆ ಮಾಡುತ್ತ ಈ ಭೂಲೋಕದಲ್ಲಿಯೇ ಇರುವೆನು, ಎಂದು ಹೇಳಲಾಗಿ ಪರಮೇಶ್ವರನು ಕೈಲಾಸಕ್ಕೆ ಹೊರಟುಹೋದನು.

ಬಹುರೂಪಿ ಚೌಡಯ್ಯನ ಈ ಚರಿತ್ರೆಯು ಬಹು ಬೋಧಪ್ರದವಾಗಿರುತ್ತದೆಂಬುದು ವಾಚಕರ ಲಕ್ಷ್ಯಕ್ಕೆಬಾರದೆ ಇರಲಾರದು. ಇದರಿಂದ ಬಸವಾದಿ ಪ್ರಮಥರ ಕಾಲದಲ್ಲಿ ವೀರಶೈವ ಧರ್ಮವು ಹೇಗೆ ಪ್ರಸಾರವಾಗುತ್ತ ಹೋಯಿತೆಂಬುದು ಗೊತ್ತಾಗುತ್ತದೆ. ಬಸವೇಶ್ವನ ಶಿವಾನ್ಯ

ಭವ ಮಂಟಪದಲ್ಲಿ ವೀರಶೈವ ಮತತತ್ವಗಳು ಮೊದಲು ನಿಶ್ಚಯಿಸಲ್ಪಟ್ಟವು. ಅವುಗಳನ್ನು ವಚನಗಳ ರೂಪದಲ್ಲಿ ಅನೇಕ ಶಿವಶರಣರು ಬೋಧಿಸತೊಡಗಿದರು. ಅವುಗಳಲ್ಲಿರುವ ಉದಾರ ವಿಚಾರಗಳು ಎಲ್ಲರ ಮನಸ್ಸನ್ನು ಆಕರ್ಷಿಸಿದವು. ಆಗ ಅನೇಕ ತತ್ವಜ್ಞಾನಿಗಳು ಅಲ್ಲಲ್ಲಿ ಉದಯವಾಗಿ ತಮ್ಮ ತಮ್ಮ ವಿಚಾರಗಳನ್ನು ಎಲ್ಲಕಡೆಗೂ ಪ್ರಕಟಮಾಡಹತ್ತಿದರು. ಇದರಿಂದ ವಚನವಾಙ್ಮಯವು ಬೆಳೆಯಹತ್ತಿತು. ವಚನಕಾರರಲ್ಲಿ ಚೌಡಯ್ಯನಂಥ ಅನೇಕ ಬ್ರಾಹ್ಮಣರೂ ಸಹ ಇದ್ದರು. ಅವರೂ ಕೂಡ ಶಿವಶರಣರ ತತ್ವಗಳನ್ನು ಪ್ರಕಟಮಾಡುವಲ್ಲಿ ಮುಂದುವರಿದರು. ಈ ಕಾರ್ಯವನ್ನು ಎಲ್ಲ ಜಾತಿಯ ಜನರು ತಾವಾಗಿಯೇ ಮಾಡತೊಡಗಿದರು. ಇಂಥವರ ಸಂಖ್ಯೆಯು ಅಸಂಖ್ಯವಾಗಿರುತ್ತದೆ. ಅವರ ಚರಿತ್ರೆಗಳಲ್ಲಿ ಅನೇಕವುಗಳನ್ನು ನಾವು ಶಿವಾನುಭವ ಪತ್ರಿಕೆಯಲ್ಲಿ ಕಾಲಕಾಲಕ್ಕೆ ಪ್ರಕಟಮಾಡುತ್ತ ಬಂದಿದ್ದೇವೆ. ಈ ಪ್ರಕಾರ ಬಸವೇಶ್ವರನ ಕಾಲದಲ್ಲಿ ಒಂದು ಮಹತ್ತರವಾದ ಧಾರ್ಮಿಕಕ್ರಾಂತಿಯು ಕರ್ನಾಟಕದಲ್ಲಿ ಉದ್ಭವಿಸಿರುತ್ತದೆ. ಈ ತರದ ಪ್ರಯತ್ನಗಳು ಬೇರೆ ಯಾವ ಪ್ರಾಂತದಲ್ಲಿಯೂ ಆದಂತೆ ಕಂಡುಬರುವದಿಲ್ಲ. ಈ ಕ್ರಾಂತಿಯ ಇತಿಹಾಸವು ಇನ್ನೂ ಪ್ರಕಾಶಕ್ಕೆ ಬಂದಿರುವದಿಲ್ಲ. ವೀರಶೈವ ವಿದ್ವಜ್ಜನರು ಇದನ್ನು ಸಂಶೋಧನೆ ಮಾಡಿ ಅದನ್ನು ಹೊರಗೆಡುವುವದು ಒಂದು ಮಹತ್ತರವಾದ ಕಾರ್ಯವಾಗಿರುತ್ತದೆ.

# ಭಕ್ತಿ

( ಲೇಖಕ:— ಒಬ್ಬ ಶಿವಾನುಭವ ಪ್ರೇಮಿ )

## ಭಕ್ತಿ ಭಾವದ ಬೆಳಕು

ಭಕ್ತಿಭಾವವು ಜೀವನ್ಮುಕ್ತಿಗೆ ಕಾರಣವಾಗಿರುವಂತೆ ಜೀವಿಸಲಿಕ್ಕೂ ಸಹ ಕಾರಣವಾಗಿರುತ್ತದೆ. ದೇವರ ಭಜನೆ, ಪ್ರಾರ್ಥನೆ, ಪೂಜನೆ, ಕೀರ್ತನೆ, ನಾಮಸ್ಮರಣೆ, ವ್ರತ, ಉಪವಾಸ, ಜಪತಪ ಅನುಷ್ಠಾನಾದಿಗಳಿಗೆಯೇ ಲೋಕದಲ್ಲಿ ಸಾಮಾನ್ಯವಾಗಿ ನಿಜವಾದ ಭಕ್ತಿಯೆನ್ನುವ ರೂಢಿಯುಂಟಾಗಿದೆ. ಆದರೆ ಭಕ್ತಿ ಹಾಗೂ ಭಕ್ತಿಭಾವ ಈ ಎರಡೂ ವಿಷಯಗಳು ಪರಸ್ಪರ ಭಿನ್ನವಾಗಿವೆ. ಭಕ್ತಿಭಾವವು ಒಂದು ವಿಶಿಷ್ಟ ತರವಾದ ಮಾನಸಿಕ ಸ್ಥಿತಿಯಾಗಿದ್ದು ಆ ಭಾವನೆಯನ್ನು ಮನಸ್ಸಿನಲ್ಲಿ ನಿರ್ಮಾಣಮಾಡುವದಕ್ಕಾಗಿ ಯಾವ ಕ್ರಿಯೆಯನ್ನು ಮಾಡಬೇಕಾಗಿರುವದೋ ಅದಕ್ಕೆ ಭಕ್ತಿಯೆಂಬುದಾಗಿ ಹೇಳುತ್ತಾರೆ.

ಭಕ್ತಿಯ ಸ್ವರೂಪವು ಪ್ರತ್ಯೇಕ ಧರ್ಮದಲ್ಲಿ ಮತ್ತು ಮತಪಂಥಗಳಲ್ಲಿ ಬೇರೆ ಬೇರೆಯಾಗಿರುತ್ತಿದ್ದು ಭಕ್ತಿಭಾವವು ಮಾತ್ರ ಯಾವ ಧರ್ಮ ಮತ ಪಂಥಗಳನ್ನವಲಂಬಿಸಿರದೆ ಮುಖ್ಯವಾಗಿ ಮನುಷ್ಯನ ಜ್ಞಾನವನ್ನವಲಂಬಿಸಿರುತ್ತದೆ. ಬಾಹ್ಯತಃ ಭಕ್ತಿಯ ಆಚರಣೆಯನ್ನು ಮಾಡುತ್ತಿರುವವನ ಮನಸ್ಸಿನಲ್ಲಿ ನಿಜವಾದ ಭಾವವಿರುವದೆಂಬುದರ ನೇಮವಿಲ್ಲ. ಇಂಥ ಭಕ್ತಿಭಾವಶೂನ್ಯವಾದ ಆಚರಣೆಯ ಸಂಬಂಧವಾಗಿಯೇ "ಬಂಡಿ ತುಂಬಿದ ಪತ್ರಿಯ ತಂದು, ಕಂಡ ಕಂಡಲ್ಲಿ ಮಜ್ಜನಕೆರೆವಿರಿ। ತಾಪತ್ರಯವ ಕಳೆದು ಪೂಜಿಸಿ। ತಾಪತ್ರಯವ ಲಿಂಗನೊಲ್ಲ" ಎಂಬ ಉದ್ಗಾರವನ್ನು ಭಕ್ತಿಭಾಂಡಾರಿ ಬಸವಣ್ಣನವರು ತೆಗೆದಿದ್ದಾರೆ. ಮನುಷ್ಯನು ಭಕ್ತಿಮಾಡುತ್ತಾನೆಯೋ ಇಲ್ಲವೋ ಎಂಬುವದಕ್ಕಿಂತ ಅವನ ಮನಸ್ಸಿನಲ್ಲಿ ಭಕ್ತಿಭಾವವಿದೆಯೋ ಇಲ್ಲವೋ ಎಂಬುವದೇ ಮಹತ್ವದ ಪ್ರಶ್ನೆಯಾಗಿದೆ.

ವ್ಯವಹಾರದೊಳಗೆ ಭಕ್ತಿ ಹಾಗೂ ಭಕ್ತಿಭಾವಗಳಲ್ಲಿರುವ ಭೇದದ ಕಡೆಗೆ ದುರ್ಲಕ್ಷಿಸಿ ಒಬ್ಬನಲ್ಲಿ ಭಕ್ತಿ ಎಂಬ ಶಬ್ದವನ್ನೇ ವಿಶೇಷವಾಗಿ ಉಪಯೋಗಿಸುವ ರೂಢಿಯಾಗಿರುವದು. ಆದರೆ ಭಕ್ತಿಭಾವವು ನಿಜವಾಗಿ ಸಾಧ್ಯ

ಶಾಗಿದ್ದು; ಭಕ್ತಿಯು ಬಾಹ್ಯಾಚರಣೆಯು ಕೇವಲ ಒಂದು ಸಾಧನೆಯಾಗಿ ರುವದು. ಇದನ್ನು ಯಾವಾಗಲೂ ಲಕ್ಷದಲ್ಲಿಟ್ಟಿರಬೇಕು. ಸಾಧ್ಯ ಹಾಗು ಸಾಧನೆಗಳಲ್ಲಿಯ ಈ ಭೇದವನ್ನು ಲಕ್ಷಿಸದಿರುವದರಿಂದಲೇ ಸಾಧ್ಯಕ್ಕಿಂತ ಸಾಧ ನೆಗೆಯೇ ಸಾಮಾನ್ಯತಃ ಅಧಿಕವಾದ ಮಹತ್ವವು ಬಂದಿರುವದು. ಇದರಿಂದ ಸಾಧನ ವಿಷಯದಲ್ಲಿ ಮತಭೇದ ಉತ್ಪನ್ನವಾಗಿ ಅನೇಕ ಸಲ ಅದು ವಿಕೋಪಕ್ಕೆ ಹೋದದ್ದು ಸಹ ಕಂಡುಬರುತ್ತದೆ.

ಭಿನ್ನಭಿನ್ನವಾದ ಧರ್ಮ ಹಾಗು ಧಾರ್ಮಿಕ ಪಂಥಗಳ ಅನುಯಾಯಿ ಗಳಲ್ಲಿ ಹಿಂದೆ ಆಗಿರುವ ಈಗ ಆಗುತ್ತಿರುವ ಕಲಹ, ಕೊಲೆ, ಸುಲಿಗೆ, ಯುದ್ಧ ಮೊದಲಾದ ಅತ್ಯಾಚಾರಗಳ ಮೂಲದಲ್ಲಿ ಈ ಆಚಾರ ವಿಷಯಕ ವಾದ ಮತಭೇದವೇ ಮುಖ್ಯಕಾರಣವಾಗಿರುವದು. ಭಕ್ತಿ ಮತ್ತು ಭಕ್ತಿ ಭಾವಗಳಲ್ಲಿರುವ ಅಂತರವು ಲಕ್ಷದಲ್ಲಿದ್ದರೆ ನಿಜವಾಗಿ ಇಂಥ ಕಲಹಗಳಾಗುವ ಸಂಭವವೇ ಅತಿ ಕಡಿಮೆಯಾಗಿರುವದು.

ಪ್ರಸ್ತುತ ಲೇಖದಲ್ಲಿ ಭಕ್ತಿಯ ಬಾಹ್ಯಾಚಾರಣೆಯ ಸಂಬಂಧವಾಗಿ ವಿಚಾರಮಾಡದೆ ಕೇವಲ ಭಕ್ತಿಭಾವದ ವಿಷಯವಾಗಿ ವಿಚಾರಮಾಡುವದಿದೆ. ಪರಮಾರ್ಥದಲ್ಲಿಯೇ ಆಗಲಿ, ಪ್ರಪಂಚದಲ್ಲಿಯೇ ಆಗಲಿ, ನಿಜವಾದ ಭಕ್ತಿ ಭಾವಕ್ಕೆಯೇ ಮಹತ್ವವಿದ್ದು, ಭಕ್ತಿಭಾವದ ವಿನಹ ಕೇವಲ ಭಕ್ತಿಯ ಬಾಹ್ಯಾಚರಣೆಗೆ ವಿಶೇಷವಾದ ಬೆಲೆಯೇ ಇರುವದಿಲ್ಲ.

## ಭಕ್ತಿಭಾವವೆಂದರೇನು ?

ಎಲ್ಲ ವಿಶ್ವದ ಕಾರಭಾರ ನಿಯಂತ್ರಣ ಮಾಡುವ ಸರ್ವಸಾಮರ್ಥ್ಯ ಸಂಪನ್ನ ಸರ್ವಜ್ಞತ್ವಾದಿ ಗುಣಗಳಿಂದ ಕೂಡಿದ ಒಂದುಶಕ್ತಿಯು ವಿಶ್ವಕ್ಕೆ ಆಧಾರವಾಗಿರುತ್ತದೆ. "ಈಶಾವಾಸ್ಯ ಮಿದಂ ಸರ್ವ ಎಂಬ" ಈಶಾವಾಸ್ಯ ಪತಿಷತ್ತಿನ ಒನೇ ಮಂತ್ರದಂತೆ ಜಗತ್ತಿನಲ್ಲಿಯ ಸ್ಥಾವರ ಜಂಗಮ ಪದಾರ್ಥ ಗಳಲ್ಲಿಯೂ ಆ ಶಕ್ತಿಯು ತನ್ನ ಕರ್ತವ್ಯ ಲೀಲೆಯಿಂದ ಧಾರಣೆ ಮಾಡಿ ರುವ ಬೇರೆ ಬೇರೆ ರೂಪಗಳಾಗಿರುತ್ತವೆ. ಆದರ ಪ್ರೇರಣೆಯಿಂದಲೇ ವಿಶ್ವ ದೊಳಗಿನ ಎಲ್ಲಕಾರಭಾರವು ನಡೆದಿರುತ್ತದೆ- ಸೂರ್ಯ ಚಂದ್ರ ತಾರೆಗಳ, ಆಕಾಶದಲ್ಲಿ ಭ್ರಮಣ ಮಾಡುತ್ತಿರುತ್ತವೆ. ಪೃಥ್ವಿಯು ನಿಯಮದಂತೆ ಸೂರ್ಯನ ಸುತ್ತಲೂ ಸತತವಾಗಿ ತಿರುಗುತ್ತಿರುವದು. ಮನುಷ್ಯ, ಪಶು

ಪಕ್ಷಿ, ಕ್ರಿಮಿಕೀಟಕಾದಿ ಪ್ರಾಣಿಗಳು ತಮ್ಮ ತಮ್ಮ ವ್ಯವಹಾರ ಮಾಡು ತ್ತಿರುವವು. ಪ್ರಕಾಶ, ಉಷ್ಣತೆ, ವಿದ್ಯುತ್ ಗುರುತ್ವಾಕರ್ಷಣಾದಿ ಭೌತಿಕ ಶಕ್ತಿಗಳು ಸಹ ತಮ್ಮ ಕಾರ್ಯಾದಿಗಳನ್ನು ಮಾಡುತ್ತಿರುವವು. ಒಂದು ಹುಲ್ಲುಕಡ್ಡಿಯೂ ಕೂಡಾ ಆ ಅತರ್ಕ್ಯಶಕ್ತಿಯ ಪ್ರೇರಣೆಯ ಹೊರ್ತು ಚಲಿಸುತ್ತಿರುವದಿಲ್ಲ, ಎಂಬ ತಿಳವಳಿಕೆಯು ಮನುಷ್ಯನ ಬುದ್ಧಿಯಲ್ಲಿ ಸ್ಥಿರವಾಗಿದ್ದರೆ ಆಗ ಅವನ ಮನಸ್ಸಿನಲ್ಲಿ ಯಾವ ಭಾವನೆಯು ನಿರ್ಮಾಣವಾಗುವದೋ ಅದಕ್ಕೆಯೇ ಭಕ್ತಿಭಾವವೆನ್ನುತ್ತಾರೆ. ಆ ಅತರ್ಕ್ಯ ಶಕ್ತಿಗೆಯೇ ದೇವರು ಈಶ್ವರ, ಶಿವ, ಲಿಂಗ ಪರಬ್ರಹ್ಮವೆಂದು ಕರೆಯುತ್ತಾರೆ. ಈ ಭಕ್ತಿಭಾವಕ್ಕೆಯೇ ಈಶ್ವರ ನಿಷ್ಠೆಯೆನ್ನುವರು.

ಕಾಮ, ಕ್ರೋಧ, ಲೋಭ ಭಯ ಇತ್ಯಾದಿ ಭಾವನೆಗಳು ನೈಸರ್ಗಿಕವಾಗಿರುವಂತೆ ಭಕ್ತಿಭಾವನೆಯು ನೈಸರ್ಗಿಕವಾಗಿರುವದಿಲ್ಲ. ಸಂಣಮಕ್ಕಳಲ್ಲಿ ಅಸಂಸ್ಕೃತ ಜನದಲ್ಲಿ ಈ ಭಾವನೆಯು ಕಾಣುವದಿಲ್ಲ. ಮನುಷ್ಯನು ಹ್ಯಾಗೆ ಹ್ಯಾಗೆ ಜ್ಞಾನವಂತನಾಗುತ್ತ ಹೋಗುತ್ತಾನೆಯೋ ಹಾಗೆ ಹಾಗೆ ಈ ಭಾವನೆಯು ಅವನ ಮನಸ್ಸಿನಲ್ಲಿ ಹೋಗುವದು. ಜ್ಞಾನ ಶೂನ್ಯವಾದ ಭಕ್ತಿಯನ್ನಾಚರಿಸುವಲ್ಲಿ ಈ ಭಾವನೆಯು ಕಿಂಚಿನ್ಮಾತ್ರವಾಗಿ ತೋರಬಹುದು. ಆದರೆ ಜ್ಞಾನವಂತನಲ್ಲಿ ಮಾತ್ರ ಜ್ಞಾನದ ಸಮಕಾಲದಲ್ಲಿಯೇ ಈ ಭಾವವು ತನ್ನಿಂದ ತಾನೇ ಉದಯವಾಗುವದು. ಜ್ಞಾನಿಪುರುಷನಿಗೆ ಭಕ್ತಿಯ ಬಾಹ್ಯಾಡಂಬರವನ್ನು ಬೆಳೆಸುವ ಅವಶ್ಯಕತೆಯು ತಿಲಮಾತ್ರವಾಗಿಯೂ ಇರುವದಿಲ್ಲ.

### ಭಕ್ತಿಭಾವದ ಪರಿಣಾಮ

ಭಕ್ತಿಭಾವದ ಸುಪರಿಣಾಮವು ವ್ಯವಹಾರದಲ್ಲಿ ಅನೇಕ ಪ್ರಕಾರವಾಗಿ ತೋರುತ್ತದೆ. ಭಕ್ತಿಭಾವವು ದೈವಿ ಭಾವವಿರುವದರಿಂದ ಯಾರ ಮನಸ್ಸಿನಲ್ಲಿ ಇದು ಇರುವದೋ ಅವರಲ್ಲಿ ಅಸುರೀ ಭಾವನೆಗಳು ಪ್ರವೇಶವಾಗಲು ಶಕ್ಯವಾಗುವದಿಲ್ಲ. ಅನೇಕ ಯಂತ್ರಗಳಲ್ಲಿ ಬೇರೆ ಬೇರೆ ಚಕ್ರಗಳ ಗತಿಯನ್ನು ಸಮತೋಲ ಸ್ಥಿತಿಯಲ್ಲಿಡುವದಕ್ಕಾಗಿ ಒಂದು ಸಮತೋಲಕ ಚಕ್ರ ( *Balance Wheel* ) ಇರುವದು. ಇದರಿಂದ ಎರಡನೆಯ ಚಕ್ರಗಳ ಗತಿಯು ಒಮ್ಮೆಲೆ ಹೆಚ್ಚೂ ಆಗುವದಿಲ್ಲ ಹಾಗೂ ಕಡಿಮೆಯೂ ಆಗುವದಿಲ್ಲ ಹೀಗೆ ಸರ್ವಚಕ್ರಗಳ ಗತಿಯು ಯೋಗ್ಯವಾಗಿ ಸಮತೋಲವಾಗಿರುವಂತೆ ಈ ಮನುಷ್ಯ ಶರೀರದಲ್ಲಿರುವ ಮನೋಮಯ ಯಂತ್ರವನ್ನು ಸಮತೋಲ

ವಾಗಿಡುವದು ಬಹು ಮಹತ್ವದ ಕಾರ್ಯವನ್ನು ಭಕ್ತಿಭಾವವು ಮಾಡುವ ದಾಗುತ್ತದೆ. ಮನಸ್ಸಿನಲ್ಲಿ ಉತ್ಕಟವಾದ ಭಕ್ತಿಭಾವವಿದ್ದದ್ದಾದರೆ ಅನಿಷ್ಟ ಭಾವನೆಗಳು ಅಲ್ಲಿ ನಿಲ್ಲಲು ಸಾಧ್ಯವೇ ಇಲ್ಲ. ಇದು ವ್ಯವಹಾರದಲ್ಲಿ ನಮ್ಮೆಲ್ಲರ ಅನುಭವದ ವಿಷಯವಾಗಿರುವದು. ಅಹಂಕಾರ, ಭೀತಿ, ದುಃಖ, ಕ್ರೋಧ, ದ್ವೇಷ, ಲೋಭ, ಮತ್ಸರ ಇತ್ಯಾದಿ ಅನಿಷ್ಟ ಭಾವನೆಗಳು ಭಕ್ತಿಭಾವಯುಕ್ತ ಪುರುಷನಲ್ಲಿ ಎಂದಿಗೂ ಕಾಣಿಸುವದಿಲ್ಲ. ಹಾಗೂ ಆತನ ಮನಸ್ಸಿನ ಶಾಂತಿಯೂ ಕೂಡಾ ಭಂಗವಾಗುವದಿಲ್ಲ.

ಯಾವ ಮನುಷ್ಯನ ಪರಿಸ್ಥಿತಿಯೇ ಆಗಲಿ ಆಯುಷ್ಯದ ತುಂಬ ಒಂದೇ ರೀತಿಯಾಗಿರಲು ಸಾಧ್ಯವಿಲ್ಲ. ಪ್ರತಿಯೊಬ್ಬನ ಸ್ಥಿತಿಯು ಕಾಲಮಾನಕ್ಕನುಸರಿಸಿ ಬದಲಾವಣೆಯಾಗುತ್ತಿರುತ್ತದೆ. ಊರ್ಜಿತ ಕಾಲವು ಬಂದಾಗ್ಗೆ ಮನಸ್ಸಿನಂತೆ ಎಲ್ಲವೂ ಸಾಧಿಸುತ್ತ ಹೋಗುತ್ತದೆ. ಆ ಕಾಲದಲ್ಲಿ ಮಣ್ಣು ಹಿಡಿದರೂ ಹೊನ್ನಾಗುತ್ತದೆ. ಅದೇ ಅವನತಿಯ ಕಾಲವು ಪ್ರಾರಂಭವಾದರೆ ಸಂಕಟಗಳು ಅಡ್ಡಿ ಆತಂಕಗಳು ಕೈತೊಳಕೊಂಡು ಬೆನ್ನು ಹತ್ತುತ್ತವೆ. ಆ ಕಾಲದಲ್ಲಿ ಹೊನ್ನು ಹಿಡಿದರೂ ಮಣ್ಣಾಗಿ ತೋರುವದು. ಈ ಎರಡು ಸ್ಥಿತಿಗಳಲ್ಲಿ ಸಾಮಾನ್ಯ ಮನುಷ್ಯನ ಇರುವಿಕೆಯು ತೀರ ಭಿನ್ನವಾಗಿರುತ್ತದೆ. ಸಾಮಾನ್ಯ ಮನುಷ್ಯರು ತನ್ನ ಏಳಿಗೆಯ ಕಾಲದಲ್ಲಿ ಎಲ್ಲವೂ ನನ್ನ ಪ್ರಯತ್ನ ಹಾಗೂ ಸಾಹಸದಿಂದಲೇ ಸಾಧಿಸುತ್ತಿರುವರೆಂಬ ಅಹಂಕಾರದ ಮಾತುಗಳನ್ನೆ ಆಡುತ್ತಿರುತ್ತಾನೆ. ತನ್ನ ಯಶಸ್ಸಿನಲ್ಲಿ ಪರಿಸ್ಥಿತಿಯ ಹಾಗೂ ಪರರಿಂದ ದೊರೆತ ಸಹಕಾರದ ಭಾಗವು ಕೆಲಮಟ್ಟಿಗಾದರೂ ಅದೆ, ಎಂಬುವ ಎಚ್ಚರಿಕೆಯು ಕಿಂಚಿನ್ಮಾತ್ರವಾದರೂ ಆತನಿಗಿರುವದಿಲ್ಲ. ಈ ಅಹಂಕಾರದ ಭಾವನೆಯನ್ನು ಸಕಾಲದಲ್ಲಿ ತಡೆಯುವದಾಗದಿದ್ದರೆ ಮನುಷ್ಯನ ಸಮತೋಲನ ಸ್ಥಿತಿಯು ನಷ್ಟವಾಗಲಿಕ್ಕೆ ಬಹಳ ವೇಳೆ ಹಿಡಿಯುವದಿಲ್ಲ. ಉನ್ನತಿಯ ಪರಿಸ್ಥಿತಿಯಲ್ಲಿ ಅಹಂಕಾರದಿಂದ ಮದೋನ್ಮತ್ತರಾಗದ ಮನುಷ್ಯರು ವಿರಲವಾಗಿರುತ್ತಾರೆ. ಆದ್ದರಿಂದಲೇ ಉನ್ನತಿಯನಂತರ ಅವನತಿಗೆ ಹೋದ ಉದಾಹರಣೆಗಳೂ ಪ್ರಪಂಚದಲ್ಲಿ ಇತಿಹಾಸದಲ್ಲಿ ಹೇರಳವಾಗಿ ದೊರೆಯುತ್ತವೆ.

ತಾರಕಾಸುರ, ರಾವಣ, ಕೌಂಸ, ಕೌರವಾದಿಗಳ ಪುರಾಣ ಕಾಲದ ಉದಾಹರಣೆಗಳು ಆಧುನಿಕ ಕಾಲದ ನೆಪೋಲಿಯನ್, ಕೈಸರ್, ಹಿಟ್ಲರ, ಮುಸೋಲಿನಿ ಮೊದಲಾದವರ ಉದಾಹರಣೆಗಳೂ ಅಹಂಕಾರದಿಂದ ವ್ಯೈಮೂರಿತು ಅಧೋಗತಿಗೆ ಹೋದ ಪುರುಷರುಗಳಾಗಿರುತ್ತವೆ.

ಯಾವಾತನ ಮನಸ್ಸಿನಲ್ಲಿ ನಿಜವಾದ ಭಕ್ತಿಭಾವವು ಜಾಗ್ರತವಾಗಿ ರುವದೋ ಅವನಿಗೆ ಸರ್ವದರ ಕರ್ತಾ ಕರವಿತಾ ಪರಮಾತ್ಮನೇ ಇದ್ದಾನೆಂಬ ವಿಷಯವು ಸದಾ ಮನದಲ್ಲಿ ಸ್ಥಿರವಾಗಿದ್ದು ದೇವರ ಕೃಪೆಯಿಂದಲೇ ನನಗೆ ಉನ್ನತಿ ಸ್ಥಿತಿಯು ಲಭಿಸಿರುವದೆಂದು ನಿಶ್ಚಯಿಸಿ ದೇವರಿಗೆ ಧನ್ಯವಾದಗಳನ್ನ ರ್ಪಿಸುತ್ತಾನೆ. ಧನ, ಕೀರ್ತಿ, ಮಾನ, ಮರ್ಯಾದೆಗಳು ದೊರೆತಾಗ್ಗೆ ತನ್ನ ಕರ್ತೃತ್ವಕ್ಕಿಂತಲೂ ದೇವರ ಕೃಪೆಯೇ ವಿಶೇಷ ಕಾರಣವಾಗಿರುವದೆಂಬ ಅನಿಸಿ ಕೆಯು ಸದಾ ಅವನ ಮನಸ್ಸಿನಲ್ಲಿರುವದರಿಂದ ಆತನು ಗರ್ವ ಅಹಂಕಾರ ಗಳಿಂದ ಉನ್ಮತ್ತನಾಗದೆ ನಯ, ವಿನಯ, ಸೌಜನ್ಯ, ಔದಾರ್ಯ, ಸಹಾ ನುಭೂತಿ ಮೊದಲಾದ ಉಚ್ಚಗುಣಗಳಿಂದ ಕೂಡಿದವನಾಗಿರುತ್ತಾನೆ.

ಕರ್ಮ ಮಾಡುವದು ನಮ್ಮ ಕೈಯಲ್ಲಿದೆ. ಆದರೆ ಅದರ ಫಲದೊರೆ ಯುವದು ದೇವರ ಕೈಯಲ್ಲಿದೆ ( ಗೀತಾ ೨-೪೨ ) ಎಂಬ ಭಾವನೆಯು ಜಾಗ್ರತವಾಗಿದ್ದಾದರೆ ಫಲಾಸಕ್ತಿ ಅಹಂಕಾರ, ಪರಪೀಡಕ ವೃತ್ತಿ ಮೊದ ಲಾದ ಅನಿಷ್ಟ ಭಾವನೆಗಳು ತಲೆಯೆತ್ತುವದಿಲ್ಲ. ಪರರಿಂದ ದೊರೆತ ಸಹಾ ಯದ ಬಗೆಗೆ ಕೃತಜ್ಞನಾಗುವನು. ಅವನ ವರ್ತನೆಯು ಸೌಜನ್ಯಯುಕ್ತ ವಾಗಿರುವದರಿಂದ ಇತರರಿಂದಲೂ ಶಕ್ಯವಾದ ಮಟ್ಟಿಗೆ ಸಹಕಾರವು ದೊರೆ ಯಹತ್ತುವದು. ಮತ್ತು ಆತನ ಕಾಲದಲ್ಲಿ ಇತರರಿಂದ ಅಡ್ಡಿ ಆತಂಕಗಳು ಸಹಸಾ ಆಗುತ್ತಿರುವದಿಲ್ಲ. ಈ ಕಾರಣಗಳಿಂದ ಅವನ ಉನ್ನತಿಯು ಉತ್ತ ರೋತ್ತರ ಅಭಿವೃದ್ಧಿಯಾಗುತ್ತ ನಡೆಯುವದು.

## ಭಕ್ತಿಭಾವದ ಫಲವು

ಉನ್ನತಿಯ ಕಾಲದಲ್ಲಿ ಉನ್ಮತ್ತನಾಗದಂತೆಯೂ ಆಪತ್ತಿನಕಾಲದಲ್ಲಿ ಅಂಜುಗುಳಿಯಾಗದಂತೆಯೂ ಮಾಡಿ, ಧೈರ್ಯ, ಸ್ಥೈರ್ಯ ಶಾಂತ್ಯಾದಿಗ ಳನ್ನು ಕೊಟ್ಟು ಮಾನವನ ಉತ್ಸಹವನ್ನು ಹೆಚ್ಚಿಸುವದರಲ್ಲಿ ಭಕ್ತಿ ಭಾವ ದಂಥ ರಾಮಬಾಣ ಔಷದವು ಮತ್ತೊಂದಿಲ್ಲವೆಂದು ನಿಶ್ಚಯದಿಂದ ಹೇಳ ಬಹುದು.

ಭಕ್ತಿಭಾವ ಶೂನ್ಯವಾದ ಮನುಷ್ಯನು ತನ್ನ ಊರ್ಜಿತಾವಸ್ಥೆಯಲ್ಲಿ ಅಹಂಕಾರದಿಂದ ವರ್ತಿಸುತ್ತಿರುವದರಿಂದ ಅವನು ಒಮ್ಮೆಲ್ಲೊನ್ಮೆ ನಿಶ್ಚಯ

ವಾಗಿ ಕೆಳಗೆ ಬೀಳಲೇ ಬೇಕು. ಆ ಕಾಲದಲ್ಲಿ ಜನರ ಸಹಾನುಭೂತಿಯ ದೊರೆಯದ್ದರಿಂದ ಸಹಕಾರ ಸಿಗದ್ದರಿಂದ ಆತನ ಸ್ಥಿತಿಯು ಅತ್ಯಂತ ಹೀನ ದೀನತೆಯಿಂದ ಕೂಡಿದ್ದಾಗಿರುವದು.

ಭಕ್ತಿಭಾವದಿಂದ ಕೂಡಿದ ಪುರುಷನು ಆಪತ್ತಿಗೆ ಅಂಜುವದಿಲ್ಲ. ಅತ್ಯಂತ ನಿರಾಶ ಜನಕ ಸ್ಥಿತಿಯಲ್ಲಿಯೂ ಸ್ಥಿತಿಯಲ್ಲಿಯೂ ಕೂಡಾ ಧೈರ್ಯದಿಂದ ಉತ್ಸಾಹದಿಂದ ದೃಢನಿಶ್ಚಯದಿಂದ ಪ್ರಯತ್ನ ಮಾಡುತ್ತಿರುವದರಿಂದ ಬಿದ್ದ ಚಂಡು ಪುಟಿಯುವಂತೆ ಅವನತಿ ಬಂದಿದೆಯನ್ನುವಷ್ಟರಲ್ಲಿಯೇ ಪುನಃ ಉನ್ನತಿಯ ಮಾರ್ಗದಲ್ಲಿರುವವನಾಗುತ್ತಾನೆ. ಯಾವ ಅನಿಷ್ಟ ಘಟನೆಯೊ ದಗಿದರೂ ಅದರ ಹಿಂದೆ ದೇವನ ಏನಾದರೊಂದು ಉದ್ದೇಶವಿರಬಹುದೆಂದು ತಿಳಿದು ಸಮಾಧಾನಿಯಾಗಿರುತ್ತಾನೆ. ಆ ಘಟನೆಯನ್ನು ಬದಲಿಸಲು ಬರು ವಂತಿದ್ದಾದರೆ ಅನಾಸಕ್ತಿಯಿಂದ ಪ್ರಯತ್ನಿಸುವನು. ಬದಲಿಸಲಿಕ್ಕೆ ಬರದಂ ತಿದ್ದರೆ ಈಶ್ವರೇಚ್ಛೆಯಿಂದ ಬಂದುದನ್ನು ಶಾಂತರೀತಿಯಿಂದ ಸಹನೆ ಮಾಡಿ ಕೊಳ್ಳುವನು. ಇದರಿಂದ ಅವನ ಮನಸ್ಸು ಸಂಪತ್ತು ಹಾಗೂ ವಿಪತ್ತು ಈ ಎರಡು ಕಾಲಗಳಲ್ಲಿಯೂ ಸ್ಥಿರವಾಗಿದ್ದು ಸಂಕಟಗಳ ತೀವ್ರತೆಯನ್ನು ಸಹಿ ಸುವ ಶಕ್ತಿಯುಳ್ಳದ್ದಾಗುವದು.

ಭಕ್ತಿಭಾವ ಶೂನ್ಯನಾದವನ ಸ್ಥಿತಿಯು ಊರ್ಜಿತಕಾಲದಲ್ಲಿ ಉನ್ಮತ್ತ ನದ್ದಾಗಿದ್ದಾದರೆ ಆಪತ್ತಿನ ಸ್ಥಿತಿಯಲ್ಲಿ ಆಧಾರ ವೃತ್ತಿಯುಳ್ಳದ್ದಾಗಿರುವದು. ಆಪ್ತಹಾನಿ. ಧನಹಾನಿ. ಆರೋಗ್ಯಹಾನಿ ಮೊದಲಾದ ಸಂಕಟಗಳ ಚಕ್ರ ಗಳಲ್ಲಿ ಸಿಕ್ಕನೆಂದರೆ ಮೊದಲಿನ ಸೊಕ್ಕು ಠಕ್ಕುಗಳು ಮಾಯವಾಗಿ ಬಹು ಅಂಜುಬುರುಕ ಹಾಗೂ ಹೇಡಿ ಬಂದಸಂಕಟಗಳಿಗೆ ಎದೆಗೊಟ್ಟು ನಿಲ್ಲುವ ಧೈರ್ಯವಿಲ್ಲದವನಾಗುವನು. ಈ ಕಾರಣಗಳಿಂದ ಯೋಗ್ಯದಿಶೆಯಲ್ಲಿ ಪ್ರಯತ್ನ ಮಾಡುವದಾಗದೆ ಸಿಕ್ಕಕಡೆ ಓಡಾಡುತ್ತಾನೆ. ಇಲ್ಲವೆ ಪ್ರಯತ್ನವನ್ನೇ ಮಾಡದೆ ಹತಾಶಯನಾಗಿ ಸ್ವಸ್ಥಕೂಡ್ರುತ್ತಾನೆ. ಹೀಗಾಗಿ ಅವನ ಕೆಟ್ಟ ಪರಿಸ್ಥಿತಿಯು ಸುಧಾರಿಸುವ ಬದಲು ಮತ್ತಿಷ್ಟು ಕೆಡುವದಕ್ಕೆಯೇ ಕಾರಣವಾಗುತ್ತದೆ.

## ಅಂಧಪರಂಪರೆಯ ಭಕ್ತಿಭಾವವು

ನಿಜವಾದ ಭಕ್ತಿಭಾವ ಹಾಗೂ ವ್ಯವಹಾರದಲ್ಲಿ ಕಾಣುವ ಬಹು ಜನರ ಅಂಧ ಪರಂಪರೆಯ ಭಕ್ತಿಭಾವ ಇವುಗಳಲ್ಲಿ ಮಹದಂತರವಿದೆ. ಅಭ್ಯಾಸವನ್ನು ಮಾಡದೆ ಕೇವಲ ದೇವರ ಗುಡಿಗೆ ನಿತ್ಯ ಹೋಗಿ ನಮಸ್ಕಾರ ಮಾಡಿ ಬಂದು ಪರೀಕ್ಷೆಯಲ್ಲಿ ಉತ್ತೀರ್ಣನಾಗಬೇಕೆಂಬುವ ವಿದ್ಯಾರ್ಥಿಯು

ಧನಪ್ರಾಪ್ತಿಗಾಗಿ ಯಾವ ಪರಿಶ್ರಮವನ್ನು ಮಾಡದೆ ಕೇವಲ ವರದಶಂಕರ ಸತ್ಯನಾರಾಯಣರ ಪೂಜೆಯನ್ನು ಮಾಡಿ ಶ್ರೀಮಂತ ನಾಗಬೇಕೆಂಬುವ ಅರ್ಥಾರ್ಥಿಯು ನಿಸರ್ಗ ನಿಯಮಕ್ಕನುಸರಿಸಿ ನಡೆಯದೆ ಮತ್ತು ಯೋಗ್ಯವಾದ ಔಷಧೋಪಚಾರ ಮಾಡಿಕೊಳ್ಳದೆ ಕೇವಲ ದೇವರ ತೀರ್ಥ ಪ್ರಸಾದದಿಂದಲೇ ಆರೋಗ್ಯವಂತನಾಗಬೇಕೆಂಬುವ ಆರೋಗ್ಯಾರ್ಥಿಯು ವೈರಿಗಳ ನಿಗ್ರಹಾರ್ಥವಾಗಿ ಸಾಮ ದಾನ, ಭೇದ, ದಂಡಗಳ ಯೋಜನೆಮಾಡದೆ ಕೇವಲ ರುದ್ರಾಭಿಷೇಕಾದಿ ಷೋಡಶಪೂಜಾದಿಗಳಿಂದಲೇ ವೈರಿಗಳನ್ನು ಗೆಲ್ಲಬೇಕೆಂಬುವ ರಾಜಕಾರಣಿಯು ಈಶ್ವರೀ ನಿಯಮಗಳನ್ನು ಕುರಿತು ಸತತವಾಗಿ ಸಂಶೋಧನೆಗಳನ್ನು ನಡಿಸದೆ ಕೇವಲ ಜಪಾನುಷ್ಠಾನಗಳಿಂದಲೇ ಜ್ಞಾನ ಪ್ರಾಪ್ತಿಮಾಡಿಕೊಳ್ಳಬೇಕೆಂಬುವ ತಪಸ್ವಿಯು ಇವರೆಲ್ಲರ ಭಕ್ತಿಭಾವವು ನಿಜವಾದದ್ದಿರದೆ ಅಜ್ಞಾನ ಮೂಲಕವಾಗಿದ್ದು ಕೇವಲ ಅಂಧಾನುಕರಣವುಳ್ಳದ್ದಾಗಿರುತ್ತದೆ.

ಮೇಲ್ತರದ ಪೂಜಾಸಾಹಿತ್ಯ ದೀಪದ ಪ್ರಕಾಶ, ಧೂಪದ ಸುಗಂಧ ವಾದ್ಯಗಳ ಮಂಜುಳಸ್ವರ, ಅನೇಕ ವಿಧದ ನೈವೇದ್ಯಗಳು ಪುಸ್ತಕಗಳ ಅರ್ಥಶೂನ್ಯಪಾಠ ಭಾವವಿಲ್ಲದ ಅಖಂಡ ನಾಮಸ್ಮರಣೆ ಇತ್ಯಾದಿಗಳಿಂದ ದೇವರು ಪ್ರಸನ್ನನಾಗಿ ಭಕ್ತರ ಇಚ್ಛಾನುಸಾರವಾಗಿ ನಡೆಯುತ್ತ ನಿಸರ್ಗ ವಿರುದ್ಧವಾದ ಕಾರ್ಯಗಳನ್ನು ಸಹ ಮಾಡುತ್ತಾನೆಂದು ನಂಬುವದು ಸಾಂಪ್ರದಾಯಿಕವಾದ ಭಕ್ತಿ ಭಾವವಾಗಿದೆ.

ನಿಸರ್ಗವೆಂದರೆ ಈಶ್ವರೀಯ ನಿಯಮವೇ ಆಗಿದೆ. ಈಶ್ವರಭಕ್ತಿ ಮಾಡೋಣದರಿಂದ ಭಕ್ತನ ಹಿತಕ್ಕಾಗಿ ಆ ನಿಯಮದ ವಿರುದ್ಧವಾದ ಸಂಗತಿಗಳನ್ನುಂಟು ಮಾಡುವನೆಂಬುದು ತಿಳಿಯುವದು. ಶುದ್ಧ ಅಜ್ಞಾನದ ಲಕ್ಷಣವಾಗಿದೆ. ನಿಜವಾದ ಭಕ್ತಿಭಾವದಿಂದ ಕೂಡಿದ ಜ್ಞಾನಿ ಮನುಷ್ಯರು ಇಂಥ ಹುಚ್ಚು ತನದ ಅಪೇಕ್ಷೆಯನ್ನೆಂದಿಗೂ ಮಾಡುವದಿಲ್ಲ. ಅವರು ತನ್ನ ವರ್ತನೆಯನ್ನು ನಿಸರ್ಗ ನಿಯಮಕ್ಕನುಸರಿಸಿಯೇ ಕಾಯ್ದುಕೊಂಡು ಹೋಗುತ್ತಾನೆ.

ಸಾಂಪ್ರದಾಯಿಕ ಭಕ್ತಿಭಾವವು ಎಷ್ಟೇ ಉತ್ಕಟವಾಗಿದ್ದರೂ ಅದು ಕೃತ್ರಿಮವಿದ್ದು ಕ್ಷಣಕಾಲ ಅಮಲನ್ನುಂಟು ಮಾಡುವ ಮಾದಕ ಪದಾರ್ಥದಂತಿರುತ್ತದೆ. ಪ್ರಯುಕ್ತ ಅದು ವಸ್ತುತಃ ಅಪಾಯಕಾರಕವೇ ಇರುವದು. ಕೇವಲ ಭಜನೆ ಪೂಜಾದಿಗಳಿಂದಲೇ ತನ್ನ ಮನಸ್ಸಿನಂತೆ ಎಲ್ಲ ಕಾರ್ಯಗಳನ್ನು ದೇವರು ಮಾಡಿಕೊಡುವನೆಂಬ ಭಾವನೆಯು ಯಾವಾತನ ಮನಸಿ

ನಲ್ಲಿರುವದೋ ಅವನು ವ್ಯವಹಾರದೊಳಗಿನ ತನ್ನಪಾಲಿನ ಕರ್ತವ್ಯದ ಕಡೆಗೆ ದುರ್ಲಕ್ಷಿಸುತ್ತಾನೆ. ಕರ್ತವ್ಯದ ಕಡೆಗೆ ದುರ್ಲಕ್ಷಿಸುವದರಿಂದ ವ್ಯವಹಾರದಲ್ಲಿ ಆತನಿಗೆ ಅಪಯಶಸ್ಸು ಪ್ರಾಪ್ತವಾಗುವದು. ಈ ಕಾರಣದಿಂದ ಅತ್ತ ಪಾರಮಾರ್ಥವೂ ಸಿದ್ಧಿಸುವದಿಲ್ಲ. ಇತ್ತ ಪ್ರಪಂಚವೂ ಸಿದ್ಧಿಸುವದಿಲ್ಲ. ಹೀಗಾಗಿ ಸರ್ವಕಡೆಯಿಂದಲೂ ದಿನದಿನಕ್ಕೆ ಅವನತಿ ಯಾಗುತ್ತ ನಡೆದು ಕಡೆಗೆ ದುಃಖದಲ್ಲಿಯೇ ಅವನ ಜೀವನವು ಮುಕ್ತಾಯವಾಗುವದು.

ಎತ್ತೆತ್ತ ನೋಡಿದತ್ತ ನೀನೇ ದೇವ ಎಂಬ ಬಸವಣ್ಣನವರ ವಚನದಂತೆ ಭಕ್ತಿಯುಕ್ತ ಪುರುಷನು ಈ ಜಗತ್ತಿನಲ್ಲಿಯ ಮನುಷ್ಯಾದಿ ಎಲ್ಲ ಪ್ರಾಣಿಗಳು ದೇವರ ಸ್ವರೂಪವೆಂದು ತಿಳಿದು ತಾನು ಯಾವ ಕರ್ಮಗಳನ್ನು ಮಾಡಿದರೂ ಸಹ ಈಶ್ವರ ಸೇವೆಯನ್ನು ಮಾಡಿರುವೆನೆಂದು ದೃಢವಾಗಿ ನಂಬಿರುತ್ತಾನೆ. ಒಕ್ಕಲತನ, ಉದ್ಯೋಗ, ವ್ಯಾಪಾರ ರಾಜಕಾರಣ ಸಮಾಜಸೇವೆ, ಜ್ಞಾನಾರ್ಜನೆ, ಪರಸೇವೆ, ಸ್ವಕೀಯ ಸಂಸಾರದೊಳಗಿನ ಯಾವ ಕಾರ್ಯಗಳನ್ನು ಮಾಡುತ್ತಿದ್ದರೂ ಈಶ್ವರಾರ್ಪಣ ಭಾವದಿಂದಲೇ ಮಾಡುತ್ತಿರುತ್ತಾನೆ. ಅವನ ಕಾರ್ಯದಲ್ಲಿ ಅಪ್ರಮಾಣಿಕತನ, ಆಲಸ್ಯತನ ಅಜಾಗರೂಕತೆಗಳಿಲ್ಲದಿರುವದರಿಂದ ಆತನು ಕೈಕೊಂಡು ಯಾವ ಕಾರ್ಯವಾದರೂ ಸಹಜವಾಗಿ ಸಮಾಧಾನಕಾರಕವಾಗಿ ಪೂರೈಸುತ್ತ ಅವನಲ್ಲಿರುವ ಕೌಶಲ್ಯವು ದಿನದಿನಕ್ಕೆ ಬೆಳೆಯುತ್ತ ಹೋಗುವದಲ್ಲದೆ ಅವನ ವಿಷಯದಲ್ಲಿ ಜನರಲ್ಲಿ ಆದರತೆಯು ಹೆಚ್ಚುತ್ತಹೋಗಿ ಜೀವನವು ಪುಣ್ಯಮಯವಾಗುತ್ತದೆ. ಐಹಿಕ ಜೀವನದಲ್ಲಿ ಉತ್ಕರ್ಷಹೊಂದುವಂತೆ ಪಾರಮಾರ್ಥದಲ್ಲಿಯೂ ಪವಿತ್ರಾತ್ಮನಾಗುತ್ತಾನೆ. ಇದುವೇ ಭಕ್ತಿಭಾವದ ಬೆಳಕು. ಇದನ್ನೇ ಭಗವದ್ಗೀತೆಯು ಆಡಿತೋರಿಸಿತು, ಬಸವಣ್ಣನವರು ಮಾಡಿತೋರಿಸಿದರು.

---

# ದೇವರ ದಾಸಿಮಯ್ಯನೂ ಜಯಸಿಂಹರಾಜನೂ

(ಲೇಖಕ ವಿದ್ವಾನ್ ಕೇ. ವೆಂಕಟರಾಮಾಚಾರ್ಯ, ಸುರತ್ಕಲ್)



ವೀರಶೈವ ಮತೋದ್ಧಾರಕನಾದ ಬಸವಣ್ಣನ ವಚನಗಳಲ್ಲಿ ಹೆಸರಿಸಿದ, ಅದುಕಾರಣ ಬಸವೇಶ್ವರನಿಂದ ಹಿಂದಣವನಾದ ದೇವಾಂಗ ದಾಸಿಮಾಯ್ಯನ ಪ್ರಶಸ್ತಿಪರವಾದ ಉದ್ಗ್ರಂಥವು ಇತ್ತೀಚಿಗೆ ಬೆಂಗಳೂರಲ್ಲಿ ಪ್ರಕಟವಾದುದು ವಾಚಕರಿಗೆ ತಿಳಿದಿರಲೂ ಬಹುದು, ಅಥವಾ ತಿಳಿಯತಕ್ಕದೂ ಅಹುದು.

'ದೇವಾಂಗ ದಾಸಿಮಯ್ಯನು ಇಸ್ವಿ ಸುಮಾರು ೧೮೦-೧೦೪೦ರಲ್ಲಿ ಇದ್ದಿರಬಹುದೆಂದು ಶ್ರೀಮಾನ, ಎಂ. ಗೋವಿಂದ ಪೈಯವರೂ; ಡಾ. ಶ್ರೀಕಂಠ ಶಾಸ್ತ್ರಿಗಳವರೂ ಅದರಲ್ಲಿ ಬರೆದಿದ್ದಾರೆ.

"ಆ ಶಿವಶರಣನು ಚಾಳುಕ್ಯರಾಜರಲ್ಲೊಬ್ಬರಾದ ಮೊದಲನೆಯ ಜಗದೇಕಮಲ್ಲನೂ ಎರಡನೆ ಜಯಸಿಂಹನೂ ಎಂಬವನ ಕಲ್ಯಾಣನಗರಕ್ಕೆ ಆ ರಾಜನ ಪಟ್ಟಣದರಸಿಯಾದ ಸುಗ್ಗಲದೇವಿಯು ಕರೆಸಿದುದರಿಂದ ಬಂದು ಆಕೆಯು ಅರಿಯದಂತೆ ಆಕೆಯ ಪತಿಯತನ್ನು ವೀರಶೈವನನ್ನಾಗಿ ಮಾಡಿದನೆಂದು" ಹರಿಹರನ ರಗಳೆಯಲ್ಲಿ ಹೇಳಿದುದನ್ನು ಈ ಮೇಲೆ ಹೆಸರಿಸಿದ ಉಭಯರು ವಿದ್ವಾಂಸರೂ ಉದ್ಧರಿಸಿದ್ದಾರೆ. ಆದರೆ ಆ ರಾಜಧಾನಿಯು ಕಲ್ಯಾಣವಾಗಿತ್ತೆಂದೂ, ಆ ರಾಜನು ಆಮೊದಲು ಜೈನ-ವೀರಶೈವೇತರನಾಗಿದ್ದನೆಂದೂ ಹೇಳಿದುದನ್ನು ಬೇಕುಬೇಕೆಂದೇ ಅಲ್ಲಗಳೆದಿದ್ದಾರೆ ಇದು ವಿಚಾರಣೀಯವದೆ.

೧) ಆರಾಜನು ವೀರಶೈವನಾದನು ಎಂಬೀ ನುಡಿಯಿಂದ, ಆತನು ಆಮೊದಲು ವೀರಶೈವೇತರನೆಂದು ಅರ್ಥಾತ್ ಹರಿಹರನೆಂದಂತೆ ಜೈನನೆಂದು ತಿಳಿದರೆ ತಪ್ಪಿಲ್ಲ. ಈ ಬಗೆತವನ್ನು ವಿನಾಕಾರಣ ತಳ್ಳಿರುವುದು ಚೆನ್ನಲ್ಲ. ಹಾಗೂ ಇನ್ನೂ ಸೂಕ್ಷ್ಮವಾಗಿಯೂ ಸೂಕ್ತವಾಗಿಯೂ ವಿಚಾರಿಸತಕ್ಕುದೆ ದೂ, ಆತನಕ ಆರಾಜನು ವೀರಶೈವೇತರ-ಜೈನ-ನೆಂದು ಹರಿಹರನ ಮಾತನ್ನು ನಾವುನಂಬಬಹುದೆಂದೂ ತೋರುತ್ತದೆ. ಈ ಮುಂದೆ ಬರೆಯು

ವಂತೆ ಆರಾಜನ ರಾಜಧಾನಿ ಕಲ್ಯಾಣವಾಗಿತ್ತೆಂದು ಸಿದ್ಧವಾಗುವುದರಿಂದಲೂ, ಈ, ಮಾತೂ ನಿಜವಾದುದೇ ಆಗಿದೆ.

(೨) ಆ ಜಯಸಿಂಹನ ಪಟ್ಟಣವು ಕಲ್ಯಾಣವಾಗಿತ್ತೆಂದು ಹರಿಹರನು ಹೇಳಿದುದು ಮಾತ್ರವಲ್ಲ, ಆಗಣ ಶಿಲಾಶಾಸನಗಳಿಂದಲೂ ತಿಳಿಯುವುದೆಂದು ಶ್ರೀಯುತರುಗಳೇ ಬರೆದಿದ್ದಾರೆ, ಅಲ್ಲಗಳೆದಿದ್ದಾರೆ! H. K. D. ಪುಟ 345 ಪ್ರಬುದ್ಧಕರ್ಣಾಟಕ 19-10 S. J. S. XI-I ರಲ್ಲಿಯ ನಂ. 69 ನೋಡಿರಿ.)

ಇವು ಮಾತ್ರವಲ್ಲದೆ ಇತ್ತೀಚೆಗೆ ನನಗೆ ತಿಳಿದುಬಂದ ಆಗಣ ಇನ್ನೊಂದು ಶಿಲಾಶಾಸನದಲ್ಲೂ 'ಕಲ್ಯಾಣವು ಜಯಸಿಂಹನ ರಾಜಧಾನಿ'ಯಾಗಿತ್ತೆಂದು ಉಲ್ಲೇಖಿಸಿದೆ.

"......There is also another inscription) B. K. No. 128 of 1953-4. riviewed in the A. R. on S. T. E. for the year) of Iayasimha which mentions Kalyana as his capitol. It is dated sak 958 (Mistake for saka 955) Srimukha, Pushya see. Qannani Sunday. The details of the date do not work out correctly. But there is nothing suspicious obout the record. So the infor mation contained in it may be taken as correct......'

ಈ ಜಯಸಿಂಹನ ರಾಜಧಾನಿಯಾದ ಕಲ್ಯಾಣದ ಉಲ್ಲೇಖದ ಈ ಶಾಸನವು ಶಕ 955 ನೆ ಶ್ರೀಮುಖಸಂವತ್ಸರದ ಪುಷ್ಯಶುದ್ಧ ಪೂರ್ಣಿಮೆಯೆಂದು ರಚಿತವಾದುದು. ಈ ಮೊದಲು ಹೇಳಿದ S. I. I. XI-I ನಂ 69 ನೆ ಶಾಸನವೂ ಇದೇ ಶ್ರೀಮುಖದ ವೈಶಾಖ ಶುದ್ಧ ಪೂರ್ಣಿಮೆಯಂದು ರಚಿತವಾಗಿ ಅದರಲ್ಲೂ 'ಕಲ್ಯಾಣ ಪುರದ ನೆಲೆವೀಡೆಂದು' ಉಲ್ಲೇಖವಿದೆಯೆಂದೂ ನಾವು ನೆನೆಹಿಡಬೇಕು. ಇದೀಗ ಈ ಹೊಸತು ಶಾಸನವನ್ನು ಪತ್ರಮುಖದಿಂದ ನನಗೆ ದಯಿವಿಟ್ಟು ತಿಳುಹಿದ ಉದಕಮಂಡಲದ ಶಾಸನ

ಇಲಾಖೆಯ ಅಧಿಕಾರಿಗಳಾದ ಶ್ರೀಮಾನ್ ನೆಲಮಂಗಲ ಲಕ್ಷ್ಮೀನಾರಾಯಣರಾಯರಿಗೆ ನನ್ನ ಕೃತಜ್ಞತೆಗಳು ಸಲ್ಲಬೇಕಾಗಿವೆ.

ಈ ಆಧಾರಗಳಿಂದ ತಿಳಿಯುವ ಕಲ್ಯಾಣನಗರದ ಉಲ್ಲೇಖವಿದ್ದರೂ ಇವನೆಲ್ಲಾ ಬಿಟ್ಟು ಅರ್ವಾಚೀನಾಧಾರಗಳೇ ಸರಿಯೆಂದು ನಂಬಿ; ಈ ಜಯಸಿಂಹನ ಮಗನಾದ ಸೋಮೇಶ್ವರನೇ ಕಲ್ಯಾಣ ನಗರಿಯನ್ನು ಉಂಟು ಮಾಡಿದನೆಂದು ಬರೆಯುವುದೂ ಬಗೆಯುವದೂ ಚೆನ್ನಲ್ಲ. ಆದುಕಾರಣ ಈ ಜಯಸಿಂಹನು ಆ ಮೊದಲಲ್ಲಿ ಜೈನನೆಂದೂ ದೇವರದಾಸಿಮಯ್ಯನಿಂದ ವೀರಶೈವನಾದನೆಂದೂ ಆತನ ರಾಜಧಾನಿ ಕಲ್ಯಾಣವಾಗಿತ್ತೆಂದೂ ತಿಳಿಯುವುದೇ ಸರಿಯಾದುದು!



## ಶಿಕ್ಷಣ.

( ಲೇಖಕ:— ಮ. ಮಲ್ಲಪ್ಪ ಜ್ಞಾನಮಂದಿರ, ಹಲಗೂರು. )

ಶಿಕ್ಷಣ ಮತ್ತು ವಿದ್ಯಾಭ್ಯಾಸ ಎಂಬ ಎರಡು ಪದಗಳೂ ಒಂದೇ 'ವಿದ್ಯಾಭ್ಯಾಸ' ಕ್ಕೆ ಜ್ಞಾನಾರ್ಜನೆ ಎಂಬುದೇ ಅರ್ಥವು. ಓದುವುದು, ಬರೆಯುವುದು ಮಾತ್ರ ವಿದ್ಯಾಭ್ಯಾಸವೆನ್ನುವುದು ರೂಢಿಯು. ವಿದ್ಯೆಯನ್ನು ಕಲಿಯಲು ಓದುಬರಹಗಳು ಹಾದಿಯನ್ನು ಮಾತ್ರ ತೋರಿಸುವುವೇ ಹೊರತು ಅಷ್ಟೇ ವಿದ್ಯೆಯಾಗುವುದಿಲ್ಲ- 'ಮಾನವನ ಶಕ್ತಿತ್ರಯ— ಕಾಯ, ಮಾನಸಿಕ ಮತ್ತು ನೈತಿಕಬಲಗಳನ್ನು ವಿಕಸಿತ ಮಾಡುವುದೇ ವಿದ್ಯೆಯು. ಮನುಷ್ಯನು ತನ್ನ ಅಪೂರ್ಣತೆಯನ್ನು ಪರಿಹರಿಸಿ ಸಂಪೂರ್ಣತ್ವವನ್ನು ಹೊಂದಲು ಸಾಧನವೇ ಶಿಕ್ಷಣವು. "ಶಿಕ್ಷಣವು ಜ್ಞಾನವನ್ನು ಹೆಚ್ಚಿಸತಕ್ಕದ್ದಾಗಿಯೂ, ಬಾಳಿಗೆ ಆಧಾರವಾಗಿಯೂ ಮತ್ತು ಇಹಪರಸಾಧನವಾಗಿಯೂ ಇರಬೇಕು. ಸ್ವಾವಲಂಬನ ಶಕ್ತಿಯು ಹೆಚ್ಚಬೇಕು ಜನರ ಆಚಾರ ವಿಚಾರಗಳಿಗೆ ಹೊಂದಿಕೊಂಡಿದ್ದು ಸಂಸ್ಕೃತಿಯನ್ನುಂಟು ಮಾಡಬೇಕು, ಎಂಬ ತತ್ವವನ್ನು ಪೂರ್ಣೀಕರಿಸಿದರೆ ಶಿಕ್ಷಣವು ಸಾರ್ಥಕವಾಗುವುದು. ನಾಡಿನ ಪ್ರಗತಿಯೇ ಸತ್ಪ್ರಜೆಗಳ ಪ್ರಧಾನೋದ್ದೇಶವು ಜನರಲ್ಲಿ ಪೌರಸಾಮಾಜಿಕ ವಿಚಾರಗಳ ವಿವಾ

ಹಕ ಶಕ್ತಿಯನ್ನು ಹೆಚ್ಚಿಸುವುದೇ ಸತ್ಪ್ರಜೆಗಳನ್ನಾಗಿ ಮಾಡುವುದು. ಇದು ಶಿಕ್ಷಣದಿಂದ ಲಭಿಸುವಂತಾಗಬೇಕು. ವ್ಯಕ್ತಿತ್ವದ ವಿಕಾಸವೂ ಅವರಿಂದ ಜಗತ್ತಿನ ಸೇವೆಯೂ ಉತ್ಪತ್ತಿಯಾಗುವಂತೆ ಶಿಕ್ಷಣವು ಮಾಡಬೇಕು. ನಹಿಜ್ಞಾನೇನ ಸದೃಶಂ ಎಂಬ ನುಡಿಯನ್ನು ನೋಡಿದರೆ ಜ್ಞಾನದ ಪ್ರಾಶಸ್ತ್ಯವು ಅರಿವಾಗುವುದು.

ಶಿಕ್ಷಣವು ಅನಂತಸ್ವರೂಪಿಯೂ ವಿಶ್ವಮುಖಿಯೂ ಆಗಿ ಉದಾತ್ತ ಉತ್ತುಂಗ ಮತ್ತು ಉಜ್ವಲವಾಗಿದೆ. ಶ್ರೇಷ್ಠ ಹುಟ್ಟಿದ ಬಾಳನ್ನು ಮನುಷ್ಯನಿಗೆ ತಂದುಕೊಡಲು ಬೇಕಾಗುವ ಸಾಧನಸೌಲಭ್ಯಗಳನ್ನೊದಗಿಸಿ ಅಂತಶ್ಶುದ್ಧಿಯಿಂದ ಹೊರಗಿನಬಾಳಿನಲ್ಲಿ ಸುಖವಾಗಿ ಕಾಲಕಳೆಯುವಂತೆ ಮಾಡುವುದೇ ವಿದ್ಯೆಯ ಗುರಿಯಾಗಿದೆ. ವ್ಯಕ್ತಿಯನ್ನು ಸಮಷ್ಟಿಗೆ ಅನುನಯಪಡಿಸುವುದೇ ಇದರ ಜೀವದ ಜೀವಾಳವು. ವ್ಯಕ್ತಿಯ ಆಹಾರಾರ್ಜನೆ, ಮಾನಸಿಕ ಜೀವನವು ಸಮಷ್ಟಿಗೆ ಅನುನಯವಾಗಬೇಕು. ಪಂಚಪಾಂಡವರ ಪ್ರತಿಭಾವಹಿಮೆಯೂ ಕೂಡ ಕೊಳಹೋಗಬೇಕು. ಮಾನಸಿಕ ಜೀವನಕ್ಕೆ ಧರ್ಮರಾಯ, ವ್ಯಕ್ತಿತ್ವಕ್ಕೆ ಭೀಮ, ವರ್ಚಸ್ಸಿಗೆ–*Personality* ಪಾರ್ಥ, ಅನುಸ್ಮರಿಸಿಕೊಂಡು ನಡೆದುಕೊಂಡು ಹೋಗುವುದಕ್ಕೆ ನಕುಲ ಸಹದೇವರು. ಆಯಾಯ ಕಾಲದ ಸಕಲಜ್ಞಾನವನ್ನು ನೀಡುವುದೂ, ಆಯಾಯ ಸಮಾಜಕ್ಕೆ ಸರಿಹೋಗುವಂತಹ ಶೀಲವನ್ನು ಕಲಿಸುವುದೂ ಶಿಕ್ಷಣದ ಗುರಿ. ಸಕಲರೂ ಒಪ್ಪಬಹುದಾದ ಆದರ್ಶ ಮಾನವ ಶೀಲವೊಂದನ್ನು ನಿರ್ದಿಷ್ಟಪಡಿಸಲು ವಿದ್ಯಾಪ್ರವೀಣರಲ್ಲೊಬ್ಬರಾದ ಬರ್ಟ್ರೆಂಡ್ ರಸ್ಸೆಲರವರು ತೊಡಗಿದ್ದಾರೆ. ಚೈತನ್ಯ *Vitality* ಧೈರ್ಯ *Courage* ಸೂಕ್ಷ್ಮತೆ–*Sensitive* ತಿಳಿವಳಿಕೆ *intelligence* ಗಳಿಂದ ಕೂಡಿದ ಶೀಲವುಳ್ಳ ಗಂಡು ಹೆಣ್ಣನ್ನು ನಿರ್ಮಿಸುವುದು ಶಿಕ್ಷಣದ ಧ್ಯೇಯವು. ಶೀಲವು ನೈತಿಕ ಜೀವನಕ್ಕೆ ಸಂಬಂಧಿಸಿದ್ದು. ವಿದ್ಯಾರ್ಥಿಯ ಶಕ್ತಿತ್ರಯಗಳ ವಿಕಾಸದ ಜೊತೆಗೆ ವ್ಯಕ್ತಿತ್ವದ ಸ್ವತಂತ್ರ ವಿಕಾಸ ಆಗುವುದು ಅಗತ್ಯ. ಒಂದು ನಾಡಿನ ಇಲ್ಲವೇ ಆಯಾಕಾಲದ ರಾಜಕೀಯ ಪ್ರಭುತ್ವದ ಸ್ವೇಚ್ಛೆಯಂತೆ ಪ್ರಜೆಗಳನ್ನು ಸಿದ್ಧಗೊಳಿಸುವುದು ಶಿಕ್ಷಣ ಯಂತ್ರದ ಕೆಲಸವು. "ಮಾನವ ವ್ಯಕ್ತಿಗಳ ಸ್ವತಂತ್ರ ಚಲನವಲನಗಳಲ್ಲಿ ಮಾತ್ರ ಪ್ರಪಂಚದ ಕಲ್ಯಾಣವಿದೆ. ಆದ ಕಾರಣ ವ್ಯಕ್ತಿ ಸ್ವತಂತ್ರ್ಯಕ್ಕೆ ಅನುಗುಣವಾಗಿ ಶಿಕ್ಷಣವು ನಡೆಯಬೇಕು.." ಎಂದು ನನ್ ಮಹಾಶಯರು ಹೇಳಿರುವರು. ಕಲೆಯ

ಲೀಲೆಯು ಹೆಚ್ಚು ಹೆಚ್ಚಾಗಿರುವಂತೆಲ್ಲ ಕಲಿಕೆಯ ಕರುಳು ಕಾರ್ಯಕ್ಕೆ
ಕಾಲನ್ನು ಹಾಕುವುದು. ಮಗುವೇ ಮನುಜನ ತಂದೆಯು ಎಂಬ ನಾಣ್ಣುಡಿ
ಯಂತೆ ಇಂದಿನ ತಂದೆಯೇ ಹಿಂದಿನ ಮಗುವು. ಇಂದಿನ ಮಗುವೇ
ಮುಂದಿನ ತಂದೆಯು. ಚಿಕ್ಕ ಚಿಕ್ಕ ಬಾಲಕರು ಬೆಳೆಬೆಳೆಯುತ್ತಾ ದೊಡ್ಡವ
ರಾಗುವರು. ಮಾನವನ ಜೀವನ ಚಿಲುಮೆಯಲ್ಲಿನ ಜ್ಞಾನಜಲವು ಬುಗ್ಗೆ
ಬುಗ್ಗೆಯಾಗಿ ಉಕ್ಕುವುದರಿಂದಲೇ ಬಾಳಿನ ಸಾರ್ಥಕವು. ಉಚ್ಚ ಪದವಿ
ಯನ್ನು ಪಡೆಯುವದಕ್ಕೆ ಜ್ಞಾನವೇ ಏಣಿ ಯೆಂದೂ, ಹತ್ತುವಾಗ
ಹವಣು ತಪ್ಪಿ ಬೀಳದಂತೆ ಹಿಡಿದು ಕೊಳ್ಳುವುದಕ್ಕೆ ಶಾಸ್ತ್ರಪವ ಊಹವೇ
ಸರಪಣಿಯೆಂದೂ ಲಾರ್ಡ ಬೇಕನ್ ಪಂಡಿತನು ಹೇಳಿರುವನು. ರಾಷ್ಟ್ರ
ಹಿತವೇ ಪ್ರತಿಯೊಬ್ಬನ ಗುರಿಯೆಂದೂ ರಾಷ್ಟ್ರಹಿತಕ್ಕಾಗಿ ತನು ಮನ ಧನಾ
ರ್ಪಣೆ ಮಾಡಬೇಕೆಂಬ ಗುರಿಯಿಂದಲೂ ಶಿಕ್ಷಣವು ಇರಬೇಕು. ರಾಷ್ಟ್ರದ
ಹಿತದೃಷ್ಟಿಯಲ್ಲಿ ಸ್ವಾರ್ಥಕ್ಕೆ ಜಾಗವಿಲ್ಲ, ಮನೆಮಾರನ್ನು ತ್ಯಜಿಸಿ ಸತಿಸುತರ
ವ್ಯಮೋಹಕ್ಕೆ ತಿಲಾಂಜಲಿ ಹಾಕಿ ಅಂತ್ಯಕ್ಕೆ ತನ್ನ ಪ್ರಾಣವನ್ನೇ ಸಮ
ರ್ಪಿಸುವಂತಾಗಬೇಕು. ಈ ತೆರನ ಉನ್ನತಿ ಉತ್ತುಂಗ ಭಾವನೆಗಳಿಂದ
ತುಂಬಿ ಪ್ರತಿಯೊಬ್ಬನೂ ಪವಿತ್ರ ಜೀವನವನ್ನು ಸಾಗಿಸುವಂತೆ ಮಾಡು
ವುದೇ ಶಿಕ್ಷಣದ ಪರಮಾವಧಿಯ ಗುರಿಯು.

ಶಿಕ್ಷಣಕ್ಕೆ ಪ್ರತಿಯೊಬ್ಬರೂ ಪ್ರಶಸ್ತಿ ಪಟ್ಟಪೀಠವನ್ನು ಕೊಟ್ಟಿದ್ದಾರೆ.
ಅರಿಸ್ಟಾಟಲ್, ಸಾಕ್ರಟೀಸ್, ಪೆಸ್ಟಲಾಜಿ, ಪ್ರೋಬೆಲ್, ಕಾರ್ಡಿನಲ್ ನ್ಯೂ
ಮನ್, ಮಾಂಟಸೋರಿ, ರವಿಂದ್ರನಾಥ, ಗಾಂಧೀಜಿ ಇತ್ಯಾದಿ ವಿದ್ಯಾ
ಪ್ರವೀಣರೂ ವಿದ್ಯೆಯಿಂದಲೇ ಸರ್ವಸಂಪತ್ತು ಎಂದು ಹೇಳಿದ್ದಾರೆ. ತತ್ತ್ವ
ಜ್ಞರ ನಾಡಾದ ಭಾರತವು ವಿದ್ಯೆಯ ನೆಲೆವೀಡಾಗಿದ್ದುದು ತಿಳಿದ ಸಂಗ
ತಿಯೇ ಆಗಿದೆ. ವಿದ್ಯೆಯಿಂದಲೇ ರಾಷ್ಟ್ರೈಕ್ಯ, ವಿದ್ಯೆಯಿಂದಲೇ ಪರಮ
ಪುರುಷಾರ್ಥ ಸಾಧನವು ಎಂಬ ಅರಿವು ಇಂದೂ ಕೂಡಾ ಇದೆ. ಯಾವ
ವಿದ್ಯೆಯನ್ನೇ ಆಗಲಿ ಗುರುವಿನ ಮೂಲಕವೇ ಕಲಿಯುವ ತತ್ವವು ಬಹು
ಹಿಂದಿನಿಂದಲೂ ಬಂದಿದೆ. ಶ್ರೀ ರಾಮಚಂದ್ರನು ಅವತಾರ ಪುರುಷನಾ
ಗಿದ್ದರೂ ಗುರೂಪದೇಶವು ಪ್ರಧಾನವು ಎಂದು ಅರಿತು ಗುರುಮುಖೇಣ
ವಿದ್ಯೆ ಕಲಿತನು ಎಂಬುದು ಇಂದು ರೂಢಿವಾಚಕವಾಗಿದೆ. ಗುರುಕುಲ
ಶಿಕ್ಷಣ ಪದ್ಧತಿಯು ಪ್ರಾಚೀನದಿಂದಲೂ ಬಂದಿದೆ. ಯೋಗ್ಯ ವಿದ್ಯಾಭ್ಯಾಸ
ವನ್ನಾರಂಭಿಸಲು ಯೋಗ್ಯ ಕಾಲವು ಬಂದಕೂಡಲೆ ಬಾಲಕರನ್ನು ಗುರು

ಪೀಸ ವರ್ಷಕ್ಕೆ ಒಪ್ಪಿಸಿ ವಿದ್ಯಾವಂತನಾಗುವವರೆಗೆ ಗುರುವಿನ ಹತ್ತಿರದಲ್ಲಿಯೇ ಬಿಟ್ಟುಬಿಡುತ್ತಿದ್ದುದು ಹಿಂದಿನ ಪದ್ಧತಿಯಾಗಿದೆ. ಗುರುಕುಲವಾಸಿಗಳಲ್ಲಿನ ವಿದ್ಯಾರ್ಥಿಗೆ ಬರುವ ದೇಹಪಟುತ್ವವನ್ನು, ವೀರ್ಯವೈಪುಲ್ಯವನ್ನೂ ಹಿಂದಿನವರು ಚೆನ್ನಾಗಿ ಅರಿತಿದ್ದರು. ಆದುದರಿಂದಲೇ ಅವರು ವೀರರೂ, ಶೂರರೂ, ಮೇಧಾವಿಗಳೂ ಪ್ರತಿಭಾಶಾಲಿಗಳೂ ಆಗಿದ್ದರು. ಪ್ರಾಚೀನ ಶಿಕ್ಷಣ ಸಂಸ್ಥೆಗಳಾದ ಗುರುಕುಲಗಳಲ್ಲಿ ಆಧ್ಯಾತ್ಮಿಕ ಹಾಗೂ ಲೌಕಿಕ ಪ್ರಗತಿ ಎರಡಕ್ಕೂ ಗಮನ ಕೊಟ್ಟಿದ್ದರು. ಆದ ಕಾರಣವೇ ಅಂದಿನ ಶಿಕ್ಷಣದಗುರಿಗಳಲ್ಲಿ ಸ್ವಭಾವ ಸಂವರ್ಧನೆ ಉಪಯುಕ್ತತೆಯೂ ಸಮಾವಶಿಷ್ಟವಾಗಿದ್ದವು.

ಶಿಕ್ಷಣದ ಇತಿಹಾಸವನ್ನು ವೇದಕಾಲ, ಪುರಾಣಕಾಲ, ಸೂತ್ರಕಾಲ, ಇತಿಹಾಸಕಾಲ, ನವೀನಕಾಲ ಎಂದು ಐದು ವಿಭಾಗ ಮಾಡಬಹುದು. ವೇದಗಳ ಕಾಲದಲ್ಲಿ ವ್ಯವಹಾರಿಕ ಭಾಷೆಯು ಸಂಸ್ಕೃತ. ದೊಡ್ಡದೊಡ್ಡ ವಿದ್ವತ್ ಸಭೆಗಳಲ್ಲಿ ವಿದ್ಯಾರ್ಥಿಗಳನ್ನು ಪರೀಕ್ಷಿಸಿ ತೇರ್ಗಡೆಯಾದವರಿಗೆ ಅಧ್ಯಾಪನದ ಅಧಿಕಾರವನ್ನು ಕೊಡುತ್ತಿದ್ದರು. ವಿದ್ಯಾರ್ಥಿಗಳು ಪ್ರತಿಭೆ ಯೋಚನಾಶಕ್ತಿ ಸ್ಮೃತಿಬಲ್ಲ ವಾದಪಟುತ್ವಗಳಲ್ಲಿ ಪರೀಕ್ಷಿಸಲ್ಪಡುತ್ತಿದ್ದರು. ತತ್ಫಲವಾಗಿ ಶತಾವಧಾನಿ ವಾದಿ ಶೂರಾದಿ ಬಿರುದುಗಳು ಬರುತ್ತಿದ್ದವು. ವಿದ್ಯಾರ್ಥಿಗಳ ಜೀವನವು ಹೆಚ್ಚು ನೈಸರ್ಗಿಕವಾಗಿತ್ತು. ಹಲವಾರು ವಿದ್ವನ್ಮಹಿಳೆಯರು ವಿದ್ವತ್ ಸಭೆಗಳಲ್ಲಿ ಭಾಗವಹಿಸುತ್ತಿದ್ದರು. ಸದ್ಗೃಹಿಣಿಯರಾಗಿಯೂ ಸನ್ಮಾತೆಯರಾಗಿಯೂ ಇರುವಂತಹ ಶಿಕ್ಷಣವನ್ನು ಸ್ತ್ರೀಯರು ಪಡೆಯುತ್ತಿದ್ದರು. ವೇದಸೂಕ್ತಗಳನ್ನೂ ಸಹ ಸ್ತ್ರೀಯರು ರಚಿಸಿದರು. ಕಾವ್ಯ ನಾಟಕ ಅಲಂಕಾರ ಶಿಲ್ಪ ವೈದ್ಯ ಕೈಗಾರಿಕೆ ಜ್ಯೋತಿಷ್ಯ ಇತ್ಯಾದಿಗಳಿಂದ ಕೂಡಿದ ಶಿಕ್ಷಣವು ಗುರುಕುಲದಲ್ಲಿ ಸಿಕ್ಕುತ್ತಿತ್ತು. ಪುರಾಣ ಕಾಲದಲ್ಲಿ ಗುರುಕುಲಕ್ಕೆ ಕಳಿಸುತ್ತಿತು. ಬ್ರಾಹ್ಮಣ ಬಾಲಕರು ಉಪನಯನ ಸಂಸ್ಕಾರವನ್ನು ಪಡೆದು ವಿದ್ಯಾರ್ಜನೆಗಾಗಿ ಗುರುವಿನ ಸನ್ನಿಧಿಗೆ ಹೋಗುತ್ತಿದ್ದರು. ಬಾಲಕನನ್ನು ವಿದ್ಯಾಭ್ಯಾಸಕ್ಕಾಗಿ ಗುರುವಿನ ಸನ್ನಿಧಿಗೆ ಕರೆದು ಹೋಗಲು ನೆರವೇರಿಸುತ್ತಿದ್ದ ಪವಿತ್ರ ಕ್ರಿಯೆಯೇ ಉಪನಯನವು. ಬಾಲಕನು ಗುರುವಿನ ಸಂಗಡ ವಾಸಮಾಡಿಕೊಂಡು ಅವಶ್ಯ ವಿಚಾರಗಳನ್ನು ಕಲಿಯುತ್ತಿದ್ದನು. ವಿದ್ಯಾರ್ಥಿಗಳು ಆಹಾರ ಆಚಾರ ಸಹವಾಸ ಸಂಭಾಷಣೆ ಇತ್ಯಾದಿಗಳಲ್ಲಿ ಗುರುವಿನ ಕಟ್ಟಿಗೆ ಒಳಪಟ್ಟಿದ್ದನು. ಮರ್ಯಾದೆ ಗಾಂಭೀರ್ಯ ವಿನಯ ಆತ್ಮನಿಗ್ರಹಾದಿ ಸದ್ಗುಣಗಳನ್ನು ಅತ್ಯಗತ್ಯವಾಗಿ

ಕಲಿಯುತ್ತಿದ್ದನು. ಯಜ್ಞಯಾಗಾದಿಗಳ ಜ್ಞಾನವನ್ನು ಪಡೆಯುವುದೇ ಹೆಚ್ಚು ಹೆಚ್ಚಿಗೆ ರೂಢಿಯಲ್ಲಿ ಶಿಕ್ಷಣದ ಪ್ರಧಾನಾಂಗವಾಗಿತ್ತು. ಗುರುಕುಲಗಳು ಬರಬರುತ್ತ ಉನ್ನತಸ್ಥಿತಿಗೆ ಏರಿದವು. ಕಣ್ವಮುನಿಯ ಗುರುಕುಲದಲ್ಲಿ ಹತ್ತು ಸಾವಿರಮಂದಿ ವಿದ್ಯಾರ್ಥಿಗಳಿದ್ದರಂತೆ. ಗುರುಗಳ ಆಡಳಿತದಲ್ಲಿಯೇ ಗುರುಕುಲಗಳಿದ್ದವು. ಇವುಗಳ ಮೇಲೆ ಅರಸರಿಗೆ ಅಧಿಕಾರವಿರಲಿಲ್ಲ. ಕ್ಷತ್ರಿಯರಿಗೂ ವೈಶ್ಯರಿಗೂ ಯೋಗ್ಯ ಶಿಕ್ಷಣವು ಸಿಕ್ಕುತ್ತಿತ್ತು. ಸೂತ್ರಕಾಲದಲ್ಲಿ ವೇದಾಂಗಗಳ ಜೊತೆಗೆ ಹಲವು ಲೌಕಿಕ ವಿಚಾರಗಳು ಶಿಕ್ಷಣ ಭಾಗಕ್ಕೆ ಸೇರಿದವು. ಅಧ್ಯಾಪನ ಅಧ್ಯಯನಗಳು ಧಾರ್ಮಿಕ ಕ್ರಿಯೆಗಳಾದವು. ಗುರುಕುಲಗಳಿಗೆ ಅರಸರು ಕೈಹಾಕತೊಡಗಿದರು. ವಿದ್ಯೆಗೆ ಸ್ತ್ರೀಯರು ಅನರ್ಹರೆಂದು ನಿರ್ಧರಿಸಿದರು. ರಾಜನೀತಿ, ವಾಣಿಜ್ಯ, ದಂಡನೀತಿ, ಯುದ್ಧಕಲೆಗಳನ್ನು ಕ್ಷತ್ರಿಯರಿಗೂ, ಆಯುವ್ಯಯ ಸಾಗುವಳಿ ಇತ್ಯಾದಿಗಳನ್ನು ವೈಶ್ಯರಿಗೂ ಕಲಿಸುತ್ತಿದ್ದರು. ಇತಿಹಾಸ ಕಾಲದಲ್ಲಿ ಉಪನಯನವು ನಾಮಮಾತ್ರಶಿಷ್ಟವಾಯಿತು. ವಾಸವು ಮನೆಯಲ್ಲಿ, ಅಭ್ಯಾಸವು ಗುರುಕುಲದಲ್ಲಿ, ವೈದಿಕರ ಮತ್ತು ಬುದ್ಧರ ಪೈಪೋಟಿಯಿಂದ ಧರ್ಮಜ್ಞಾನದ್ವಯ ಪ್ರಸಾರಣೆಯಾಯಿತು. ಈಗ ಲಿಪಿಯ ಪ್ರಚಾರವು ವಿಶೇಷವಾಗಿತ್ತು. ವೇದಾಧ್ಯಯನವು ಕೊಂಚ ಹಿಂದೆ ಬಿದ್ದಿತು. ಹಲವು ಶಾಸ್ತ್ರಗ್ರಂಥಗಳು ಆಯುರ್ವೇದ, ರಸಾಯನ ಶಾಸ್ತ್ರ, ಶಸ್ತ್ರಚಿಕಿತ್ಸಾ ಶಾಸ್ತ್ರ, ರಚಿಸಲ್ಪಟ್ಟವು. ಕ್ಷತ್ರಿಯರಿಗೆ ಬೇರೆ ವಿದ್ಯೆಯ ವ್ಯವಸ್ಥೆಯಿರಲಿಲ್ಲ. ಬೌದ್ಧ ಧರ್ಮ ಪ್ರಸಾರಣಾ ಪ್ರಭಾವದಿಂದ ಯುದ್ಧಕಲಾ ಶಿಕ್ಷಣವು ನಿರ್ನಾಮವಾಯಿತು. ಗುರುಕುಲಗಳಿಗೆ ವೈಶ್ಯರು ಹೋಗುತ್ತಿರಲಿಲ್ಲ. ಪ್ರತಿಯೊಂದನ್ನು ಕಂಠಪಾಠಮಾಡುತ್ತಿದ್ದರು. ಈ ಕಾಲದಲ್ಲಿ ಕಾವ್ಯ, ಚಿತ್ರ, ಶಿಲ್ಪಾದಿಲಲಿತ ಕಲೆಗಳು ಉನ್ನತವುಟ್ಟಕ್ಕೇರಿದವು.

ನವೀನ ಕಾಲದಲ್ಲಿ ಗುರುಕುಲ ಪದ್ಧತಿಯು ಗುಪ್ತಗುಟ್ಟುವ ಪರಿಸ್ಥಿತಿಗೆ ಇಳಿಯಿತು. ಗುರುಕುಲಪತಿಗೆ ಬೆಂಬಲ ಪ್ರೋತ್ಸಾಹವು ಅಸ್ಪಷ್ಟ. ಪಾಶ್ಚಿಮಾತ್ಯ ಪ್ರಚಾರಕ್ಕೆ ಬಲಿಯಾಗುವಂತಾದರು. ಲಾರ್ಡ ಮೆಕಾಲೆ, ಸರ್ ಹಂಟರ್ ಸಾಹೇಬ, ಎಡ್ವರ್ಡ ಇವರು ತಮ್ಮ ಜನಾಂಗದ ಹಾಗೂ ಧರ್ಮದ ಉಪಯೋಗಕ್ಕಾಗಿ ಹಲವಾರು ಇಂಗ್ಲೀಷು ಶಾಲೆಗಳನ್ನು ಸ್ಥಾಪಿಸಿದರು. ಸ್ವಾಭಿವೃದ್ಧಿಗೂ, ಪೌರಸೌಖ್ಯಕ್ಕೂ ವಿದ್ಯಾಭ್ಯಾಸವು ಎನ್ನುತ

ಮುಂದೆ ಹೋಗುತ್ತಿದ್ದರೂ ತತ್ತ್ವವು ಮಾತ್ರ ಅನುಷ್ಠಾನಕ್ಕೆ ಅಂಟಿಕೊಂಡಂತಾಗಲಿಲ್ಲ. ಬರೀ ಕಾರಕೂನರನ್ನು ತಯಾರಮಾಡುವ ಕಾರ್ಖಾನೆಗಳು ವಿದ್ಯಾಸಂಸ್ಥೆಗಳಾದವು. ವಿದ್ಯಾರ್ಥಿಗಳು ತಮ್ಮ ವ್ಯಾಸಂಗ ಕಳೆದಮೇಲೆ ಸ್ವಾವಲಂಬಿಗಳಾಗಿ ಸಾಗಲಾರರು ಎಂಬ ಅಪವಾದವನ್ನು ಕಳೆಯಲು, ಅಲ್ಲಲ್ಲಿ ಔದ್ಯೋಗಿಕ ಮತ್ತು ಕಲಾಶಾಲೆಗಳನ್ನು ತೆರೆದರು. ವಿದ್ಯಾವಂತಿಕೆಯು ಬರೀ ಕಾಗದದಮೇಲೆ ಬೀಳುವಂತಾಯಿತು. ಸಕಲರೂ ವಿದ್ಯೆಯನ್ನು ಕಲಿಯಲು ಅವಕಾಶವಿದ್ದರೂ, ಬಾಲ್ಯದಲ್ಲಿ ಕಲಿತ ವಿದ್ಯೆಯು ಬಡ್ಡಿಹಾಕಿದ ಹಣದಂತೆ ಮುಂದೆ ಮಾನವನ ಬಾಳನ್ನು ಸಾಮಾನ್ಯವಾಗಿ ಸುಸೂತ್ರತೆಯಿಂದ ನಡೆಸುವುದು ಎಂಬುದನ್ನು ಮರೆತು ಮಂದಗಮನರಾಗುವಂತಾಯಿತು. ಯಾವದು ನಮಗೆ ತಿಲಕರನ್ನೂ ಗಾಂಧೀಜಿಯವರನ್ನೂ ಕೊಟ್ಟಿರೋ ಅಂತಹ ಆರ್ಯಜನಾಂಗದ ಅಡಿಗಲ್ಲಾದ ವೈರಾಗ್ಯವು ವಿದ್ಯಾರ್ಥಿಗಳಿಗೆ ವಿರೋಧವಾಗುವಂತಾಯಿತು. ಆತ್ಮಸಂಶೋಧನೆಗಿಂತ ಅನ್ನಪರಿಶೋಧನೆಯನ್ನೇ ಹೆಚ್ಚಾಗಿ ಪರಿಗ್ರಹಿಸುವಂತಾಯಿತು. ಸ್ವತಂತ್ರ ವಿಚಾರವು ಸುಟ್ಟುಹೋಗಿ ಬರೀ ಪುಸ್ತಕ ರೇಟ ಜ್ಞಾನರ್ಜನೆಗೆ ಆರಂಭವಾಯಿತು. ಮಾನವನ ನೈಸರ್ಗಿಕ ಗುಣವೇ ಗುಳಿಬಿದ್ದು ಗುಂಡಿಯಾಗುವಂತಾಯಿತು.

ತತ್ಫಲವಾಗಿ ಈಗೀಗ ಜನತೆಯಲ್ಲಿ *Back toinature* ಗಾಗಿ ಹಂಬಲಿಕೆಯು ಹಾತೊರೆಯುವಂತಾಗಿದೆ. ಪ್ರಾಥಮಿಕ, ಮಾಧ್ಯಮಿಕ, ಪ್ರೌಢಶಾಲೆ ಮತ್ತು ವಿಶ್ವವಿದ್ಯಾಲಯಗಳನ್ನೂ ಕಲಾ, ಉದ್ಯೋಗ, ಶಿಲ್ಪಶಾಸ್ತ್ರಕ್ಕೆ ಸಂಬಂಧಪಟ್ಟ ಶಾಲೆಗಳನ್ನೂ ಸ್ಥಾಪಿಸಿ ವಿದ್ಯಾಭ್ಯಾಸದ ಉನ್ನತಿಗಾಗಿ ಹಲವಾರು ಪರಿಶೋಧನೆಗಳನ್ನು ನಡೆಸುತ್ತಿದ್ದಾರೆ. ನಾವು ಕಲಿಯುವ ವಿದ್ಯೆಯನ್ನು ನಮ್ಮದನ್ನಾಗಿ ಮಾಡಿಕೊಳ್ಳಲು ಹೊಸ ಹೊಸ ಸುಧಾರಣೆಗಳನ್ನು ಜಾರಿಗೆ ತರುತ್ತಲಿದ್ದಾರೆ. ವಿಶ್ವವಿದ್ಯಾನಿಲಯವನ್ನು ಬಿಟ್ಟು ಹೋಗುತ್ತಲಿರುವ ವಿದ್ಯಾರ್ಥಿಗಳಿಗೆ ಸಹಜ ವಿದ್ಯೆಯ ಲಕ್ಷಣವನ್ನು ಕುರಿತು ಅನೇಕ ವಿದ್ವನ್ಮಣಿಗಳು ಪ್ರತಿವರುಷವೂ ಉಪದೇಶವನ್ನು ಕೊಡುತ್ತಿದ್ದಾರೆ. ಹಿಂದಿನವರ ನಡೆನುಡಿಯ ಸತ್ಯಪರಿಪೂರ್ಣತೆಗಾಗಿ ಈಗೀಗ ಹಲವರು ಪಶ್ಚಾತ್ತಾಪ ಪಡುತ್ತಿದ್ದಾರೆ. ಶತೇಷುಜಾಯತೇ ಶೂರಃ ಸಹಸ್ರೇಷುಚ ಪಂಡಿತಃ ಎಂಬ ನುಡಿಯನ್ನು ಕಣ್ಣಾರೆ ಕಾಣುವಂತಾಗಿದೆ. ಓದುಬಕ್ಕಾಲು ಬುದ್ಧಿಮುಕ್ಕಾಲು ಎಂಬುದು ಈಗೀಗ ಕಂಡುಕಾಣದಂತೆ

ಗೋಚರವಾಗುತ್ತಲಿದೆ. ಬುದ್ಧಿ ಕಡಿಮೆಯಾದವನು ಎಷ್ಟೇ ಓದಿದರೂ ವಿದ್ಯಾವಂತಿಕೆಯ ಪೂರ್ಣತೆಯು ಬಾರದು. ಯಾವ ನಾಡಿನಲ್ಲಿ ವೀರರೂ, ಶೂರರೂ, ಆಸ್ತಿಕಾಗ್ರಣಿಗಳೂ, ದೇಶಪ್ರೇಮಿಗಳೂ, ವಿಲಾಸಪ್ರಿಯರೂ, ಭೋಗಿಗಳೂ, ಹೇಡಿಗಳೂ, ಸೋಮಾರಿಗಳೂ ಜನಿಸಿರುವುದನ್ನು ನೋಡಿದರೆ ಯಾರಿಗೆ ತಾನೇ ಎದೆಒಡೆಯದು! ಅಕ್ಷರ ಪ್ರಚಾರದ ಮೂಲಕ ಜ್ಞಾನಪ್ರಚಾರ ಮಾಡಿ, ನಾಡವೈರಿಯಾದ ಅನಿಕ್ಷರತೆಯನ್ನು ನಿರ್ಮೂಲ ಮಾಡಿ, ಶಾರದೆಯ ಸಾಕ್ಷಾತ್ಕಾರ ಮಾಡಿಕೊಳ್ಳಲು ಇಡೀ ನಾಡಿಗೆನಾಡೆ ಟೊಂಕಕಟ್ಟಿ ನಿಂತು, ನಾಡಿನ ಅಭ್ಯುದಯಕ್ಕೆ ಜನಾಂಗದ ಸಂಪೂರ್ಣ ವಿಕಾಸಕ್ಕೆ ಅವಕಾಶವಾಗುವಂತೆ ಶಿಕ್ಷಣ ದೇವಿಯನ್ನು ರೂಪುಗೊಳಿಸಿ, ಸಿಂಗರಿಸಿ, ರಾಷ್ಟ್ರವು ಕೈಗೊಳ್ಳುವ ಅತ್ಯಗತ್ಯ ಉದ್ಯಮಗಳಲ್ಲಿ ಮೊದಲನೆಯದು ಶಿಕ್ಷಣ ಎಂಬ ನೆಪೋಲಿಯನ್ನನ ನುಡಿಯತ್ತ ಗಮನಕೊಟ್ಟು ಗಮಿಸಲಿ.

ತೊಂದರೆಗಳು ಬಂದರೂ ಅಂತರಂಗ ಶುದ್ಧವಾಗಿದ್ದರೆ ಸಾಕು, ಎಂಬ ವಿಚಾರವು ಬರುತ್ತದೆ. ಈ ಕಾಲದಲ್ಲಿ ಅವಳಿಗೆ ಅನೇಕ ಕಷ್ಟಗಳು ಸಂಭವಿಸಿರಬೇಕೆಂದು ತೋರುತ್ತದೆ. ಆದರೆ ಅವಳು ಅವುಗಳಿಗಾಗಿ ಧೈರ್ಯಗೆಡವೆ ಅನ್ನುವದೇನೆಂದರೆ—"ಒಡಲ ಕಳವಳಕ್ಕಾಗಿ ಅಡವಿಯ ಹೊಕ್ಕೆ. ಗಿಡುಗಿಡುವದ್ಪದೆ ಬೇಡಿವೆನೆನ್ನಂಗಕ್ಕೆಂದು. ಅವು ನೀಡಿವವು ತಮ್ಮ ಲಿಂಗಕ್ಕೆಂದು. ಆನು ಬೇಡಿ ಭವಿಯಾದೆನು. ಅವು ನೀಡಿ ಭಕ್ತರಾದವು. ಇನ್ನು ಬೇಡಿದೆನಾದರೆ ಚನ್ನಮಲ್ಲಿಕಾರ್ಜುನಯ್ಯ ನಿಮ್ಮಾಣೆ" ಹೀಗೆ ಅವಳು ಧೈರ್ಯವನ್ನು ತಂದುಕೊಂಡು ಮಾರ್ಗಕ್ರಮಣ ಮಾಡುತ್ತ ಕಲ್ಯಾಣ ನಗರವನ್ನು ಪ್ರವೇಶಿಸುವವಳಾದಳು.

## ಕಲ್ಯಾಣಕ್ಕೆ ಆಗಮನ

ಅವಳು ಕಲ್ಯಾಣ ಪಟ್ಟಣವನ್ನು ಸಮೀಪಿಸಿದ ಹಾಗೆ ಅವಳ ಆನಂದಕ್ಕೆ ಪಾರಾವಾರವೇ ಇರಲಿಲ್ಲ. ಅವಳು ಈ ಕಾಲದಲ್ಲಿ ಅನ್ನುವದೇನೆಂದರೆ—"ಅಯ್ಯಾ ನಿಮ್ಮ ಶರಣರು ಮೆಟ್ಟಿದ ಧರೆ ಪಾವನವಯ್ಯಾ ಅಯ್ಯಾ ನಿಮ್ಮ ಶರಣರು ಇದ್ದ ಪುರವೇ ಕೈಲಾಸ ಪುರವಯ್ಯ. ಅಯ್ಯಾ ನಿಮ್ಮ ಶರಣರು ನಿಂದುದೇ ನಿಜನಿವಾಸವಯ್ಯ" ವಚನಗಳಿಂದ ಎಂದು ನುಡಿಯುತ್ತಾಳೆ. ಈ ಕಾಲದಲ್ಲಿ ಅವಳಿಗೆ ಹರ್ಷವು ಉಕ್ಕೇರಿ ಬಂದು ಅವಳು ನುಡಿದ ಮಾತುಗಳು ಇವಾಗಿವೆ. ಕಲ್ಯಾಣ ಪಟ್ಟಣವು ಕೈಲಾಸ ಪುರವೆಂದು ಅವಳಿಗೆ ಭಾಸವಾಗುತ್ತದೆ.

## ಬಸವೇಶ್ವರನ ಅಂತಃಪುರದಲ್ಲಿ ವಾಸ.

ಮಹಾದೇವಿಯಕ್ಕನು ಕಲ್ಯಾಣ ಪಟ್ಟಣಕ್ಕೆ ಬಂದ ಬಳಿಕ ಅವಳ ಶ್ರೇಷ್ಠ ವೃತ್ತಿಯನ್ನು ನೋಡಿ ಬಸವೇಶ್ವರನೂ ಅವನ ಹೆಂಡತಿ ನೀಲಾಂಬಿಕೆಯೂ ಅವಳನ್ನು ತಮ್ಮ ಅರಮನೆಯಲ್ಲಿಯೇ ಇಟ್ಟುಕೊಂಡಿರಬೇಕೆಂದು ತೋರುತ್ತದೆ. ಮಹಾದೇವಿಯಕ್ಕನು ಉಚ್ಚ ಪಾರಮಾರ್ಥಿಕ ವಿಚಾರವುಳ್ಳವಳು. ಬಸವೇಶ್ವರನೂ ನೀಲಾಂಬಿಕೆಯೂ ಅದೇ ಬಗೆಯುವ ಸೋತ್ಪೃತ್ತಿಯುಳ್ಳವರು. ಆದ್ದರಿಂದ ಅವರೆಲ್ಲರೂ ಒಂದೆಡೆಯಲ್ಲಿಯೇ ಇದ್ದಿರಬೇಕೆಂದು ತೋರುತ್ತದೆ. ಯಾಕಂದರೆ ಮಹಾದೇವಿಯಕ್ಕನು ತನ್ನ ಒಂದು ವಚನದಲ್ಲಿ—"ಅಪ್ಪ ನೀಲಮ್ಮನ ಮೋಹದ ಮಗಳೇ, ಅಪ್ಪ ಬಸವಣ್ಣನ ಸುಚಿತ್ತದ ಪುತ್ಥಳಿಯೇ, ಎಂದು ತನ್ನನ್ನು ತಾನೇ ನಿರ್ದೇಶಿಸಿ

ಕೊಂಡಿದ್ದಾಳೆ.'' ಇದು ಕೇವಲ ಕಾಲ್ಪನಿಕವಾಗಿರದೆ ನಿಜ ಸ್ಥಿತಿಯನ್ನೇ ತೋರಿಸುತ್ತಿರಬಹುದು. ಇಲ್ಲಿ ಅವಳು ತಾನು ಬಸವೇಶ್ವರ ಮತ್ತು ನೀಲಾಂಬಿಕೆಯರ ಮಗಳೆಂದು ಹೇಳಿಕೊಳ್ಳುತ್ತಾಳೆ ಇದು ಕೇವಲ ಔಪಚಾರಿಕವಾಗಿರಲಾರದೆಂದು ತೋರುತ್ತದೆ. (ವಚನ ೯೨, ೧೦೦)

## ಬಸವೇಶ್ವರನು ಜ್ಞಾನದೀಕ್ಷೆ ಕೊಟ್ಟಿದ್ದು.

ಅವಳು ಬಸವೇಶ್ವರನಲ್ಲಿದ್ದಾಗ್ಗೆ ಬಸವೇಶ್ವರನು ಅವಳಿಗೆ ಲಿಂಗ ಜ್ಞಾನದ ಗೂಢ ತತ್ವಗಳನ್ನು ಅರುಹಿದ್ದಾನೆ. (ವಚನ ೩೮) ಅವಳು ತನ್ನ ತಾಯಿ ತಂದೆಗಳ ಮನೆಯಲ್ಲಿ ಇದ್ದಾಗ್ಗೆ ತನ್ನ ಮನೆಗುರುವಿನಿಂದ ದೀಕ್ಷೆಯನ್ನು ಹೊಂದಿ ಲಿಂಗಾಚಾರವನ್ನನುಸರಿಸಿ ಅವಳು ಆಚರಿಸುತ್ತ ಬಂದಿರಬಹುದು. ಆದರೆ ಕಲ್ಯಾಣದಲ್ಲಿ ಶಿವಶರಣರು ಈ ಜ್ಞಾನವನ್ನು, ಮುಖ್ಯವಾಗಿ ತ್ರಿಲಿಂಗಗಳ ರೀತಿ ನಡೆಗಳನ್ನು ವಿಸ್ತರಿಸುತ್ತ ಬಂದಿದ್ದು ತಿಳಿಯುತ್ತದೆ. ಈ ನಡೆಗಳು ಈ ಆರಂಭ ಕಾಲದಲ್ಲಿ ಜನರಿಗೆ ಪರಿಚಿತವಾದವುಗಳಾಗಿದ್ದಿಲ್ಲ. ಇವುಗಳು ಕಲ್ಯಾಣದ ಶಿವಾನುಭವ ಮಂಟಪದಲ್ಲಿ ವಿಸ್ತೃತವಾಗಿ ಚರ್ಚಿಸಲ್ಪಟ್ಟವು. ಅವುಗಳನ್ನು ಬಸವೇಶ್ವರನು ಮಹಾದೇವಿಯಕ್ಕನಿಗೆ ತಿಳಿಸಿ ಹೇಳಿದನೆಂಬುದು ಕೆಳಗಿನ ವಚನದಿಂದ ವ್ಯಕ್ತವಾಗುತ್ತದೆ. ಅವಳು ಈ ವಚನದಲ್ಲಿ ಹೇಳಿರುವದೇನೆಂದರೆ:—

"ಎನ್ನಂಗದಲ್ಲಿ ಆಚಾರವ ತೋರಿದನಯ್ಯಾ ಬಸವಣ್ಣನು, ಆಚಾರವೇ ಲಿಂಗವೆಂದರುಹಿದನಯ್ಯ, ಬಸವಣ್ಣನು, ಎನ್ನ ಪ್ರಾಣದಲ್ಲಿ ಅರಿವ ತೋರಿದನಯ್ಯ ಬಸವಣ್ಣನು, ಅರಿವೇ ಜಂಗಮವೆಂದು ಅರುಹಿದನಯ್ಯ ಬಸವಣ್ಣನು, ಚನ್ನಮಲ್ಲಿಕಾರ್ಜುನಯ್ಯ ಎನ್ನ ಹೆತ್ತ ತಂದೆ ಸಂಗನ ಬಸವಣ್ಣ ಎನಗೀ ಕ್ರಮವನರುಹಿದನಯ್ಯ'' (ವಚನ ೯೨)

## ತ್ರಿಲಿಂಗ ಸಾಧನೆ

ಇಲ್ಲಿ ಮಹಾದೇವಿಯಕ್ಕನು ತ್ರಿಲಿಂಗಗಳನ್ನು ಗುರುಲಿಂಗ ಜಂಗಮ್ಮಗಳಿಂದ ಹೇಗೆ ಸಾಧಿಸಬೇಕೆಂಬುದನ್ನು ತಿಳಿಸಿದ್ದಾಳೆ. ಈ ತಿಳವಳಿಕೆಯು ತನಗೆ ಗುರುವಾದ ಬಸವಣ್ಣನಿಂದ ಬಂದಿತೆಂದು ಇಲ್ಲಿ ಹೇಳಿದ್ದಾಳೆ. ಇದೇ ಭಾವವನ್ನು ಅವಳು ಕೆಳಗಿನ ವಚನದಲ್ಲಿಯೂ ವ್ಯಕ್ತಪಡಿಸಿದ್ದಾಳೆ. ಅದು ಯಾವದೆಂದರೆ:—

"ಬಸವಣ್ಣಾ ನಿಮ್ಮಂಗದಾಚಾರವ ಕಂಡು ಎನಗೆ ಲಿಂಗ ಸಂಗವಾಯಿತ್ತು. ಅಯ್ಯ ಬಸವಣ್ಣ ನಿಮ್ಮ ಮನದ ಸುಜ್ಞಾನವ ಕಂಡು ಎನಗೆ ಜಂಗಮ ಸಂಬಂಧವಾಯಿತ್ತಯ್ಯ ಬಸವಣ್ಣ. ನಿಮ್ಮ ಸದ್ಭಕ್ತಿಯ ತಿಳಿದು ಎನಗೆ ನಿಜವು ಸಾಧ್ಯವಾಯಿತ್ತು. ಚನ್ನಮಲ್ಲಿಕಾರ್ಜುನಯ್ಯನ ಪೆಸರಿಟ್ಟ ಗುರು ನೀವಾದ ಕಾರಣ ನಿಮ್ಮ ಶ್ರೀಪಾದಕ್ಕೆ ನಮೋ ನಮೋ ಎನುತಿರ್ದೆನು" (ವಚನ ೯೩)

## ಸದ್ವೃತ್ತಿಯಿಂದ ನಡೆಯುವದು.

ಮಹಾದೇವಿಯಕ್ಕನು ತಾನು ಭಕ್ತ್ಯಾಚಾರವನ್ನು ಹೊಂದಿದ ಬಳಿಕ ತಾನು ಹೇಗೆ ವರ್ತಿಸುವೆನೆಂಬುದನ್ನು ಕುರಿತು ಒಂದು ವಚನದಲ್ಲಿ ಸುಂದರವಾಗಿ ಹೇಳಿದ್ದಾಳೆ. ಅದು ಯಾವುದೆಂದರೆ—

ಹುಟ್ಟಿದೆ ಶ್ರೀಗುರುವಿನ ಹಸ್ತದಲ್ಲಿ, ಬೆಳೆದೆನು ಅಸಂಖ್ಯಾತರ ಕರುಣದೊಳಗೆ, ಭಾವವೆಂಬ ಹಾಲು ಸುಜ್ಞಾನವೆಂಬ ತುಪ್ಪ ಪರಮಾರ್ಥವೆಂಬ ಸಕ್ಕರೆಯನಿಕ್ಕಿದರು ನೋಡಾ. ಇಂತಪ್ಪ ತ್ರಿವಿಧಾಮೃತವ ದಣಿಯಲೆರೆದು ಸಲಹಿದರೆನ್ನ. ವಿವಾಹವ ಮಾಡಿದಿರಿ. ಸಯವಪ್ಪ ಗಂಡಗೆ ಕೊಟ್ಟಿರಿ. ಕೊಟ್ಟಮನೆಗೆ ಕಳುಹಲೆಂದು ಅಸಂಖ್ಯಾತರೆಲ್ಲರು ನೆರೆದು ಬಂದಿರಿ. ಬಸವಣ್ಣ ಮೆಚ್ಚಲು ಒಗತನವ ಮಾಡುವೆ. ಚನ್ನಮಲ್ಲಿಕಾರ್ಜುನನ ಕೈವಿಡಿದು ನಿಮ್ಮ ಮಂಡೆಗೆ ಹೂವ ತಾಹೆನಲ್ಲದೆ ಹುಲ್ಲು ತಾರೆನು. ಅವಧರಿಸಿ ನಿಮ್ಮಡಿಗಳೆಲ್ಲರು. ಮರಳಿ ಬಿಜಯಂಗೈವುದು. ಶರಣಾರ್ಥಿ (ವಚನ ೪೬)

## ಶಿವಾನುಭವ ಮಂಟಪದಲ್ಲಿ ಪ್ರವೇಶ

ಶಿವದೀಕ್ಷೆಯಾದ ಬಳಿಕ ಭಕ್ತನು ಸದ್ವೃತ್ತಿಯಿಂದ ನಡೆಯಬೇಕೆಂದು ಮಹಾದೇವಿಯಕ್ಕನು ಇದರಲ್ಲಿ ಹೇಳಿದ್ದು ತಾನಾದರೂ ಹಾಗೆಯೇ ನಡೆಯುವೆನೆಂದು ಈ ವಚನದಲ್ಲಿ ಅವಳು ಹೇಳಿದ್ದಾಳೆ.

ಮಹಾದೇವಿಯಕ್ಕನು ಕಲ್ಯಾಣಕ್ಕೆ ಬರುವ ಪೂರ್ವದಲ್ಲಿಯೇ ಬಹುಜನ ಶಿವಶರಣರು ಬಸವೇಶ್ವರನಲ್ಲಿ ಆಗಮಿಸಿದ್ದರು. ಅವರು ಅವನ ಸನ್ನಿಧಿಯಲ್ಲಿ ಶಿವಾನುಭವದ ಚರ್ಚೆಗಳಲ್ಲಿ ಅಂಗ ವಹಿಸುತ್ತಿದ್ದರು. ಮಹಾದೇವಿಯಕ್ಕನು ಆ ಚರ್ಚೆಗಳನ್ನು ಕೇಳಿ ತಾನು ತನ್ನ ಆಯುಷ್ಯವಿರುವವರೆಗೂ ಅವುಗಳನ್ನು ಕೇಳಿ ಆನಂದಿಸುವೆನೆಂದು ಒಂದು ವಚನದಲ್ಲಿ ಹೇಳಿದ್ದಾಳೆ.

ಇಷ್ಟು ಆ ಚರ್ಚೆಗಳು ಅವಳಿಗೆ ಆಕರ್ಷಕವಾಗಿದ್ದವು. ಅಲ್ಲಿ ನೆರೆದ ಶಿವ
ಶರಣರು ತಮ್ಮ ತಮ್ಮ ವಿಶಿಷ್ಟ ಜ್ಞಾನವನ್ನು ಈ ಶಿವಾನುಭವ ಕೂಟ
ದಲ್ಲಿ ಪ್ರಕಟಮಾಡುತ್ತಿದ್ದರು. ಅದರಿಂದ ಅದರಲ್ಲಿದ್ದ ಶಿವಶರಣರ ಅನು
ಭವಗಳು ಮತ್ತು ವಿಚಾರಗಳು ಪ್ರಘೋಷಿತವಾಗುತ್ತಲೇ ಇದ್ದವು. ಅವಳು
ಒಂದು ವಚನದಲ್ಲಿ ಅಂದಿರುವದೇನಂದರೆ—

"ಬಸವಣ್ಣನ ಭಕ್ತಿ, ಚನ್ನಬಸವಣ್ಣನ ಜ್ಞಾನ, ಮಡಿವಾಳಯ್ಯನ ನಿಷ್ಠೆ
ಪ್ರಭುದೇವರ ಜಂಗಮಸ್ಥಲ, ಅಜಗಣ್ಣನ ಐಕ್ಯಸ್ಥಲ, ನಿಜಗುಣನ ಆರೂ
ಢಸ್ಥಲ ಸಿದ್ಧರಾಮಯ್ಯನ ಸರ್ವಾಧಿಕಸ್ಥಲ, ಇಂತಿವರ ಕರುಣ ಪ್ರಸಾದ
ವೆನಗಾಯಿತ್ತು ಚನ್ನಮಲ್ಲಿಕಾರ್ಜುನಯ್ಯಾ." ಇವರೆಲ್ಲರೂ ವಚನಕಾರರಿ
ದ್ದಾರೆ. ಅವರ ವಚನಗಳಲ್ಲಿ ಮಹಾದೇವಿಯಕ್ಕನು ಈ ವಚನಗಳಲ್ಲಿ
ಹೇಳಿದ ಪ್ರಕಾರ ವಿಶಿಷ್ಟರಿಂದ ವಿಚಾರಗಳಿದ್ದುದು ಕಂಡುಬರುತ್ತದೆ.
ಅವೆಲ್ಲವುಗಳನ್ನು ಮಹಾದೇವಿಯಕ್ಕನು ತಿಳಿದುಕೊಂಡು ಅವುಗಳಂತೆ ಅವಳು
ಆಚರಿಸುವವಳಾಗಿದ್ದಳೆಂದು ಈ ವಚನದಿಂದ ತಿಳಿದು ಬರುತ್ತದೆ. ಇವೇ
ವಿಚಾರಗಳನ್ನು ಅವಳು ಮುಂದುವರಿಸುತ್ತ ನುಡಿದ ನುಡಿಗಳನ್ನೂ ನಾವು
ಕೆಳಗೆ ಕೊಟ್ಟಿದ್ದೇವೆ. ಅವು ಯಾವವೆಂದರೆ—

(೧) ಬಸವಣ್ಣ, ಎನ್ನ ಭಕ್ತಿಯೇ ನಿಮ್ಮ ಧರ್ಮ, ಎನ್ನ ಜ್ಞಾನವೇ
ಪ್ರಭುದೇವರ ಧರ್ಮ, ಇಂತೀ ಮೂವರು ಒಂದೊಂದು ಕೊಟ್ಟಕಾರಣ
ಎನಗೆ ಮೂರು ಭಾವವಾಗಿತ್ತು. ಆ ಮೂರು ಭಾವವ ನಿಮ್ಮಲ್ಲಿ ಸಮ
ರ್ಪಿಸಿದ ಕಾರಣ ಚನ್ನಮಲ್ಲಿಕಾರ್ಜುನನ ನೆನಹು ಹೋದಲ್ಲಿಯೇ ನಿಮ್ಮ
ಕರುಣದ ಕಂದನು ಕಾಣಾ ಸಂಗನಬಸವಣ್ಣ. (ವಚನ ೯೮)

(೨) ಬಸವಣ್ಣನ ಮನೆಯ ಮಗಳಾದ ಕಾರಣ ಭಕ್ತಿಪ್ರಸಾದ
ಕೊಟ್ಟನು. ಪ್ರಭುದೇವರ ತೊತ್ತಿನ ತೊತ್ತಿನ ಮರಿದೊತ್ತಿನ ಮಗಳಾದ
ಕಾರಣ ಜ್ಞಾನಪ್ರಸಾದವ ಕೊಟ್ಟನು. ಸಿದ್ಧರಾಮಯ್ಯನ ಶಿಶುಮಗಳಾದ
ಕಾರಣ ಪ್ರಾಣಪ್ರಸಾದವ ಕರುಣಿಸಿ ಕೊಟ್ಟನು. ಮಡಿವಾಳಯ್ಯನ ಮಗ
ಳಾದ ಕಾರಣ ನಿರ್ಮಲ ಪ್ರಸಾದವ ನಿಶ್ಚಯಿಸಿ ಕೊಟ್ಟನು. ಇಂತೀ
ಅಸಂಖ್ಯಾತ ಗಣಂಗಳೆಲ್ಲರೂ ತಮ್ಮ ಕರುಣದ ಕಂದನೆಂದು ತಲೆದಡ
ಹಿದ ಕಾರಣ ಚನ್ನಮಲ್ಲಿಕಾರ್ಜುನಯ್ಯನ ಶ್ರೀಪಾದಕ್ಕೆ ಯೋಗ್ಯಳಾದೆನು.
(ವಚನ ೯೯)

(೩) ಸಂಗನ ಬಸವಣ್ಣನ ಪಾದವ ಕಂಡೆನಾಗಿ ಎನ್ನ ಪ್ರಾಣ ಸಾಕ್ಷಿಯಾಯಿತ್ತು. ಪ್ರಭುವೇ ನಿಮ್ಮ ಶ್ರೀಚರಣಕ್ಕೆ ಶರಣೆಂದೆನಾಗಿ ಎನಗೆ ಆರುಹು ಸ್ವಾಯತವಾಯಿತ್ತು. ಚನ್ನಮಲ್ಲಿಕಾರ್ಜುನಯ್ಯ ನಿಮ್ಮ ಶರಣನ ಕರುಣವ ಪಡೆದೆನಾಗಿ ಎನಗಾವ ಜಂಜಡವಿಲ್ಲವಯ್ಯ ಪ್ರಭುವೇ. (ವಚನ ೧೦೦)

(೪) ಮಾಟಕೂಟ ಬಸವಣ್ಣಂಗಾಯಿತ್ತು. ನೋಟಕೂಟ ಪ್ರಭುದೇವರಿಂಗಾಯಿತ್ತು. ಭಾವಕೂಟ ಅಜಗಣ್ಣಂಗಾಯಿತ್ತು. ಸ್ನೇಹಕೂಟ ಬಾಚಿರಾಜಯ್ಯಂಗಾಯಿತ್ತು. ಇವರೆಲ್ಲರ ಕೂಟ ಚನ್ನಬಸವಣ್ಣಂಗಾಯಿತ್ತು. ಎನಗಿನ್ನಾವ ಕೂಟವಿಲ್ಲವಯ್ಯಾ ಚನ್ನಮಲ್ಲಿಕಾರ್ಜುನಯ್ಯ. (ವಚನ ೧೩೧)

ಮೇಲಿನ ವಚನಗಳ ಮೇಲಿಂದ ವಚನಕಾರರ ರೀತಿ ನಡೆಗಳೆಂತಹವು ಎಂಬುದನ್ನು ತಿಳಿದುಕೊಂಡು ಮಹಾದೇವಿಯಕ್ಕನು ಆಚರಿಸುತ್ತಿದ್ದಳೆಂಬುದು ವ್ಯಕ್ತವಾಗುತ್ತದೆ. ಶಿವಾನುಭವಮಂಟಪದಲ್ಲಿ ಭಿನ್ನ ಭಿನ್ನ ಆಚಾರಗಳುಳ್ಳ ಶಿವಶರಣರಿದ್ದರೂ ಅವರು ಪರಸ್ಪರ ವಿಚಾರವಿನಿಮಯ ಮಾಡುತ್ತಿದ್ದುದರಿಂದ ಅವರು ತಮ್ಮ ವಿಚಾರಗಳನ್ನು ಸಂಪಾದಿಸಿಕೊಂಡು ಆಚರಿಸುವವರಾಗಿದ್ದರೆಂದು ಕಂಡು ಬರುತ್ತದೆ. ಇದು ಅವರ ಪ್ರಗತಿ ಮಾರ್ಗದ ಕುರುಹಾಗಿದೆ.

## ಅನುಭಾವಿಯಾಗಿರುವದು.

ಶಿವಶರಣರು ಅನುಭಾವಕ್ಕೆ ಬಹಳ ಮಹತ್ವ ಕೊಡುತ್ತಾರೆ. ಹೇಗೆ ಕ್ರೈಸ್ತರು ಪ್ರಾರ್ಥನೆಗೆ, ಇಸ್ಲಾಂ ಧರ್ಮೀಯರು ನಮಾಜಕ್ಕೆ ಮಹತ್ವ ಕೊಡುತ್ತಾರೋ ಹಾಗೆಯೇ ಶಿವಶರಣರು ಅನುಭಾವಕ್ಕೆ ಮಹತ್ವ ಕೊಡುತ್ತಾರೆ. ವಿಚಾರವಂತರು ಒಂದೆಡೆಗೆ ಸೇರಿ ವಿಚಾರವಿನಿಮಯ ಮಾಡುವದೇ ಅನುಭಾವವಾಗಿದೆ. ಇದನ್ನು ಶಿವಶರಣರು ನಿತ್ಯ ಪರಿಪಾಲಿಸತಕ್ಕದ್ದು. ಗುರುವು ಹೇಗೆ ನಿತ್ಯ ಉಪದೇಶ ಮಾಡುತ್ತಾನೋ ಹಾಗೆಯೇ ಅನುಭಾವವು ಕಾರ್ಯ ಮಾಡುತ್ತದೆ. ವೀರಶೈವರು ಗುರುವಿನ ವಿಷಯವಾಗಿ ಅಂಧ ಭಕ್ತಿಯನ್ನು ವಹಿಸುವದಕ್ಕಿಂತ ಅನುಭಾವವನ್ನು ಹೊಂದಿ ಆಚರಿಸುವದು ಪರಿಣಾಮಕಾರಿ ಎಂದು ಶಿವಶರಣರ ಮತವಿದೆ. ಈ ವಿಷಯವನ್ನು ಕೆಳಗಿನ ವಚನಗಳು ಬಹು ಚನ್ನಾಗಿ ವಿವರಿಸಿರುತ್ತವೆ.

(೧) ಮರ ಮರ ಮಥನಿಸಿ, ಕಿಚ್ಚು ಹುಟ್ಟಿ ಸುತ್ತಣ ತರುವರಾದಿಗಳ ಸುಡಲಾಯಿತ್ತು. ಆತ್ಮನಾತ್ಮ ಮಥನಿಸಿ ಅನುಭಾವ ಹುಟ್ಟಿ ತನು ಗುಣಾದಿಗಳ ಸುಡಲಾಯಿತ್ತು. ಇದು ಕಾರಣ ನಿಮ್ಮ ಮಹಾನುಭಾವಿಗಳ ಅನುಭಾವತೋರಿ ಎನ್ನೊಡಲನುಳುಹಿಕೊಳ್ಳ ಚನ್ನಮಲ್ಲಿಕಾರ್ಜುನಾ (ವಚನ ೭೬)

(೨) ಅಯ್ಯಾ ನಿಮ್ಮನುಭಾವಿಗಳ ಸಂಗದಿಂದ ಎನ್ನ ತನುಶುದ್ಧವಾಯಿತ್ತು, ನಿಮ್ಮನುಭಾವಿಗಳ ಸಂಗದಿಂದ ಎನ್ನ ಮನಶುದ್ಧವಾಯಿತ್ತು, ಅಯ್ಯ ನಿಮ್ಮನುಭಾವಿಗಳನೋರೆದೋರೆದು ಮಾಡಿದ ಕಾರಣ ಚನ್ನಮಲ್ಲಿಕಾರ್ಜುನ ನಿಮಗಾನು ಕೊಡುಗೆಯಾನೆನು (ವಚನ ೭೭)

(೩) ಸಂಗದಿ ದಲ್ಲದೆ ಅಗ್ನಿಹುಟ್ಟದು, ಸಂಗದಿಂದಲ್ಲದೆ ದೇಹವಾಗದು ಸಂಗದಿಂದಲ್ಲದೆ ಸರ್ವಸುಖದೋರದು. ಚನ್ನಮಲ್ಲಿಕಾರ್ಜುನ ದೇವಯ್ಯ ನಿಮ್ಮ ಶರಣರ ಅನುಭಾವ ಸಂಗದಿಂದಾನು ಪರಮ ಸುಖಿಯಾದೆನು. (ವಚನ ೭೫)

ಜೈನಧರ್ಮೀಯರೂ ಹಾಗೆಯೇ ಸನಾತನಿಗಳೂ ಕೂಡ ಕಾಯವು ಮನುಷ್ಯನನ್ನು ಪಾಪಕ್ಕೆ ಎಳಿಸುವದೆಂದು ಭಾವಿಸಿ ಅದನ್ನು ಅವರು ಅನೇಕ ವಿಧವಾಗಿ ಕ್ಲೇಶಪಡಿಸಲು ಮುಂದಾಗುತ್ತಾರೆ. ಜೈನರು ದಿಗಂಬರತ್ವವನ್ನು ಸ್ವೀಕರಿಸುವ ಉದ್ದೇಶವಾದರೂ ಇದೇ ಇರುತ್ತದೆ. ಮಹಾದೇವಿಯಕ್ಕನು ದಿಗಂಬರಿಯಾಗಿ ಆಚರಿಸುತ್ತಿದ್ದರೂ ಅವಳು ಕಾಯವನ್ನು ಕಷ್ಟಪಡಿಸಬಾರದೆಂಬ ಅಭಿಪ್ರಾಯವುಳ್ಳವಳಾಗಿದ್ದದು ಅವಳ ಕೆಳಗಿನ ವಚನದಿಂದ ಕಂಡುಬರುತ್ತದೆ. ಅವಳು ಇದರಲ್ಲಿ ಅನ್ನುವದೇನಂದರೆ:—

"ಹಾವಿನ ಹಲ್ಲ ಕಳೆದು ಹಾವನಾಡಿಸಬಲ್ಲರೆ ಹಾವಿನ ಸಂಗವೇ ಲೇಸು ಕಂಡಯ್ಯ, ಕಾಯದ ಸಂಗವೇ ಲೇಸುಕಂಡಯ್ಯ ತಾಯಿರಕ್ಕಸಿಯಾದಂತೆ ಕಾಯವಿಕಾರವು ಚನ್ನಮಲ್ಲಿಕಾರ್ಜುನಯ್ಯ ನೀನೊಲಿದವರು ಕಾಯಗೊಂಡಿದ್ದರೆನಬೇಡ"

ಕಾಯವು ವಿಷಯ ಲೋಲುಪತೆಯಿಂದ ದೂರಾಗಿದ್ದಲ್ಲಿ ಕಾಯದೊಡನಿರುವದು ಹಾನಿಕರವಲ್ಲ, ಇಷ್ಟೇ ಅಲ್ಲ. ಅದರ ಸಂಗವು ಇಷ್ಟವಾದದ್ದೆಂದು ಮಹಾದೇಯಕ್ಕನು ಈ ವಚನದಲ್ಲಿ ಅಭಿಪ್ರಾಯಪಟ್ಟಿದ್ದಾಳೆ. ಅಂದರೆ ಕಾಯದೊಡನಿದ್ದು ಅದರ ಮೂಲಕ ಮನುಷ್ಯನು ಅನುಭಾ

ವದ ಶ್ರೇಷ್ಠ ಸ್ಥಿತಿಯನ್ನು ಹೊಂದಲು ಯಾವಾಗಲೂ ಪ್ರಯತ್ನಿಸುವದು ಮನುಷ್ಯನ ಕರ್ತವ್ಯವೆಂಬ ಭಾವವನ್ನು ಮಹಾದೇವಿಯಕ್ಕನು ಈ ವಚನದಲ್ಲಿ ಸೂಚಿಸಿದ್ದಾಳೆ. ಹಿಂದೂ ಧರ್ಮದಲ್ಲಿ ಶರೀರವು ತ್ಯಾಜ್ಯವಾದದ್ದು, ಸಂಸಾರವು ನಿಃಸಾರವು ಎಂಬ ಅಭಿಪ್ರಾಯವುಳ್ಳ ನುಡಿಗಳು ಅಸಂಖ್ಯಾತವಾಗಿರುತ್ತವೆ. ಮನುಷ್ಯನು ಇವುಗಳಿಂದ ಪ್ರೇರಿತವಾಗಿ ಪ್ರಪಂಚವನ್ನು ಬಿಟ್ಟು ಹೋದವರ ಉದಾಹರಣೆಗಳು ಅನೇಕವಾಗಿರುತ್ತವೆ. ಆದರೆ ಮಹಾದೇವಿಯಕ್ಕನು ಈ ವಿಚಾರಗಳನ್ನು ಪುರಸ್ಕರಿಸಿಲ್ಲವೆಂಬುದು ಮೇಲ್ಕಂಡ ವಚನದಿಂದ ಕಂಡುಬರುತ್ತದೆ.

ಮಹಾದೇವಿಯಕ್ಕನು ಪ್ರಮಥರ ಆಚರಣೆಯಂತೆ ಆಚರಿಸುತ್ತ ಷಟ್‌ಸ್ಥಲಗಳನ್ನು ತನ್ನಲ್ಲಿ ಅಳವಡಿಸಿಕೊಂಡು ಕಡೆಗೆ ಬಯಲು ಅಥವಾ ಶೂನ್ಯಸ್ಥಿತಿಯನ್ನು ಹೊಂದಿದ್ದು ಅವಳ ವಚನಗಳಿಂದ ಗೊತ್ತಾಗುತ್ತದೆ.

ಮಹಾದೇವಿಯಕ್ಕನು ಬಸವೇಶ್ವರನ ಸಾನ್ನಿಧ್ಯದಲ್ಲಿ ಷಟ್‌ಸ್ಥಲಾಚರಣೆಯನ್ನು ಚನ್ನಾಗಿ ತಿಳಿದುಕೊಂಡು ಅದನ್ನು ತನ್ನಲ್ಲಿ ಅಳವಡಿಸಿಕೊಂಡವಳಾಗಿದ್ದಳು. ಬಸವೇಶ್ವರನ ಆಚರಣೆಗಳನ್ನು ಅವಳು ಸೂಕ್ಷ್ಮವಾಗಿ ನಿರೀಕ್ಷಿಸಿ ಅವುಗಳಲ್ಲಿ ಅವಳು ೫೨ ವಿಧಗಳನ್ನು ಕಲ್ಪಿಸಿದ್ದಾಳೆ. ಇವುಗಳನ್ನು ಅವಳು ತನ್ನ ೯೫ನೇ ವಚನದಲ್ಲಿ ನಿರೂಪಿಸಿದ್ದಾಳೆ. ಈ ವಚನವು ಷಟ್‌ಸ್ಥಲ ಸಿದ್ಧಾಂತದ ಸಂಕ್ಷಿಪ್ತ ವಿವರಣೆಯೇ ಆಗಿದೆ. ಆದರೂ ಕೂಡ ವಚನಶಾಸ್ತ್ರದಲ್ಲಿರುವ ತತ್ವಗಳ ವಿಸ್ತೃತ ನಿರೂಪಣೆಯಾಗಿದೆ. ಈ ವಚನವನ್ನು ವಾಚಕರು ಗ್ರಂಥದಲ್ಲಿಯೇ ಅವಲೋಕಿಸಬೇಕು. ವಿಸ್ತಾರ ಭಯಕ್ಕಾಗಿ ನಾವು ಅದನ್ನು ಇಲ್ಲಿ ಉದಹರಿಸಿಲ್ಲ. ವಚನಶಾಸ್ತ್ರವು ಬಹು ಬಿಗಿಯಾದ ಮತ್ತು ಕ್ಲಿಷ್ಟವಾದ ತತ್ವಗಳಿಂದ ಕೂಡಿರುತ್ತದೆ. ಆದರೂ ಕೂಡ ಮಹಾದೇವಿಯಕ್ಕನು ಅವುಗಳನ್ನೆಲ್ಲ ತಿಳಿಗನ್ನಡದಲ್ಲಿ ಭಾವಗರ್ಭಿತವಾಗಿ ನಿರೂಪಿಸಿದ್ದಾಳೆ. ಅನೇಕ ವಚನಕಾರರು ಮಹಾದೇವಿಯಕ್ಕನ ಈ ವಚನವನ್ನು ಆಯ್ದು ತಮ್ಮ ಉಕ್ತಿಗಳಲ್ಲಿ ಅದನ್ನು ಉದಹರಿಸಿದ್ದುದು ಕಂಡುಬರುತ್ತದೆ.

ಮಹಾದೇವಿಯಕ್ಕನು ತನ್ನ ೧೯೯ನೇ ವಚನದಲ್ಲಿ ಷಟ್‌ಸ್ಥಲ ಪ್ರೇಮಿಗಳು ಬರೀ ಆರು ಸ್ಥಲಗಳನ್ನು ಬಾಹ್ಯದಲ್ಲಿ ಹೇಳುವದರಲ್ಲಿ ಸಮಾಧಾನ ಹೊಂದದೆ ಅವುಗಳ ಸಕೀಲ ಸಂಬಂಧಗಳನ್ನು ಅರಿಯುವದು

ಬಹು ಅವಶ್ಯವೆಂದು ಹೇಳಿದ್ದಾಳೆ. ಇಲ್ಲದಿದ್ದರೆ ಅವರು ಇಂದ್ರಿಯಗಳ ಲಂಪಟತೆಗಳಲ್ಲಿ ಬೀಳದೆ ಇರಲಾರರೆಂದು ಎಚ್ಚರು ಕೊಟ್ಟಿದ್ದಾಳೆ. ಷಟ್ಸ್ಥಲಗಳಲ್ಲಿ ಸಕೀಲಗಳ ಪರಸ್ಪರ ಸಂಬಂಧವನ್ನು ಅರಿಯುವದು ಬಹು ಅವಶ್ಯವು. ಇವುಗಳ ಜ್ಞಾನವಿಂದಿದ್ದರೆ ಮನುಷ್ಯನು ಅವುಗಳನ್ನು ಬರೀ ಯಾಂತ್ರಿಕ ರೀತಿಯಿಂದ ಮಾಡುತ್ತ ಹೋಗುತ್ತಾನೆ. ಹೀಗೆ ಆಚರಿಸುವದು ನಿಷ್ಪ್ರಯೋಜಕವೆಂದು ಮಹಾದೇವಿಯಕ್ಕನ ಅಭಿಪ್ರಾಯವಿದೆ.

ಮಹಾದೇವಿಯಕ್ಕನು ವಚನಶಾಸ್ತ್ರದಲ್ಲಿ ಚನ್ನಾಗಿ ಬಲ್ಲಿದಳಾಗಿ ಅವಳು ಪಾದೋದಕ ಪ್ರಸಾದಗಳಿಗೆ ಉಚ್ಚ ಸ್ಥಾನವನ್ನು ಕೊಟ್ಟಿದ್ದಾಳೆ. ಅವಳು ಈ ವಿಷಯಗಳನ್ನು ಕುರಿತು ತನ್ನ ವಚನಗಳಲ್ಲಿ ವಿಸ್ತಾರವಾಗಿ ಬೋಧಿಸಿದ್ದಾಳೆ. ಈ ಬಗ್ಗೆ ಅವಳ ವಚನಗಳು ೧೧೫, ೧೧೬ ಮತ್ತು ೧೨೦ ಇವುಗಳನ್ನು ನೋಡಿರಿ. ಗುರುಲಿಂಗ ಜಂಗಮಗಳ ಬಗೆಯನ್ನು ಅವಳು ಅರಿತವಳಾಗಿ ಇವುಗಳ ಆಚರಣೆಯನ್ನು ಕುರಿತು ಈ ವಚನಗಳಲ್ಲಿ ಅವಳು ಹೇಳಿರುವಳು. ಇವುಗಳ ರೀತಿಯನ್ನು ತಿಳಿಯಬೇಕಾದರೆ ಬಾಹ್ಯದ ಇಂದ್ರಿಯಗಳನ್ನು ಅಂತರಿಂದ್ರಿಯಗಳಿಗೆ ಸಂಬಂಧಿಸಿ ಆಚರಿಸಬೇಕಾಗುತ್ತದೆ. ಇದು ಎಲ್ಲ ಶಿವಶರಣರ ವೈಶಿಷ್ಟ್ಯವಾಗಿರುತ್ತದೆ. ಈ ಪ್ರಕಾರದ ಆಚರಣೆಯಿಂದ ಬಾಹ್ಯ ಇಂದ್ರಿಯಗಳ ಕಡೆಗೆ ಮನುಷ್ಯನಲ್ಲಿರುವ ಲೋಲುಪತೆಯು ಹೊರಟುಹೋಗಿ ಕ್ರಮೇಣ ಅಂತರಿಂದ್ರಿಯಗಳು ಬಲಪಡುವವು ಮತ್ತು ಅವುಗಳ ಸಹಾಯದಿಂದಲೇ ಮನುಷ್ಯನು ಲಿಂಗಾಂಗ ಸಾಮರಸ್ಯವನ್ನು ಹೊಂದಲು ಶಕ್ತನಾಗುತ್ತಾನೆ. ಶಿವಶರಣರು ಈ ತೆರದ ಆಚರಣೆಗೆ ತಮ್ಮ ಶಿವಾನುಭವದ ನಡೆಯಲ್ಲಿ ಮಹತ್ವವನ್ನು ಕೊಟ್ಟಿದ್ದಾರೆ. ಈ ಸಂಗತಿಯನ್ನು ನಾವು ಮಹಾದೇವಿಯಕ್ಕನ ವಚನಗಳು ಮಾತ್ರವಲ್ಲದೆ ಎಲ್ಲ ಶಿವಶರಣರ ಉಕ್ತಿಗಳಲ್ಲಿಯೂ ಕಾಣಬಹುದು. ಇದರಿಂದ ಮನುಷ್ಯನ ಮೇಲೆ ಕ್ರಿಯೆಗಳು ಪರಿಣಾಮಮಾಡಲಾರವು. ಈ ಸ್ಥಿತಿಯು ಒದಗಿದ ಕೂಡಲೆ ಜನನ ಮರಣಗಳು ಲಯವಾಗುತ್ತವೆ. ಮತ್ತು ಬಯಲು ಸ್ಥಿತಿಯು ಪ್ರಾಪ್ತವಾಗುತ್ತದೆ. ಸಾಮರಸ್ಯಸ್ಥಿತಿಯನ್ನು ಕುರಿತು ಅವಳು ಒಂದು ವಚನದಲ್ಲಿ ಹೇಳಿರುವದೇನೆಂದರೆ—

"ಕ್ರಿಯೆಗಳು ಮುಟ್ಟಲರಿಯವು. ನಿಮ್ಮನೆಂತು ಪೂಜಿಸುವೆ? ನಾದಬಿಂದುಗಳು ಮುಟ್ಟಲರಿಯವು ನಿಮ್ಮನೆಂತು ಹಾಡುವೆ? ಕಾಯ ಮುಟ್ಟ

# ಶಿವಾನುಭವ

ಸಂಪುಟ ೨೭ ] [ ಸಂಚಿಕೆ ೧

ಸಂಪಾದಕ

**ಫ. ಗು. ಹಳಕಟ್ಟಿ,**

ಬಿ.ಎ. ಎಲ್.ಎಲ್.ಬಿ.



ವಾ. ವ. ೫-೧೨-೦ ] ವಿಜಾಪುರ. [ ಜಾನೇವಾರಿ ೧೯೫೩

# ವಿಷಯಾನುಕ್ರಮಣಿಕೆ.





—卐—

# ಶಿವಾನುಭವ


| ವರ್ಷ ೨೬ | ಜಾನೇವಾರಿ ೧೯೫೪ | ಸಂಚಿಕೆ ೦ |
|---|---|---|


## ಭಕ್ತಿ

((([ಲೇಖಕರು:- ಶ್ರೀಯುತ ಎನ್. ಆರ್. ದೇಸಾಯಿ. ವಕೀಲ ಸಿಂದಗಿ])))

≡≡≡≡ಶ್ರೀ≡≡≡≡

ಇವನಾರವ ಇವನಾರವ ಇವನಾರವನೆಂದೆನಿಸದಿರಯ್ಯ !
ಇವ ನಮ್ಮವ ಇವ ನಮ್ಮವ ಇವ ನಮ್ಮವನೆಂದೆನಿಸಯ್ಯ !
ಕೂಡಲಸಂಗಮ ದೇವ, ನಿಮ್ಮ ಮನೆಯ ಮಗನೆಂದೆನಿಸಯ್ಯ'
[ನಾನು ಕಂಡ ಗುರು ಪು. ೧೨೫]

ಇದು ಶ್ರೀ ಬಸವೇಶ್ವರರ ಭಕ್ತಿಯ ಉದ್ರೇಕದ ಒಂದು ಭಾವ; ಅವರ ಭಕ್ತಿ ಭಂಡಾರದಿಂದ ಹೊರಸೂಸಿ ಹರಿದು ಬಂದ ಭಕ್ತಿ ಗಂಗೆ. ಹೀಗಿದ್ದು ಇದನ್ನರಿಯದಲೆ, ಬಸವೇಶ್ವರರ ವಚನಗಳಲ್ಲಿ ಇಲ್ಲಿ ಒಂದು ಪುನರುಕ್ತಿ ದೋಷವಿದ್ದಿರಬಹುದೇ ? ಎಂದು ಸಂಶಯ ವ್ಯಕ್ತಪಡಿಸಿದ ಓರ್ವ ಹಿರಿಯ ಕನ್ನಡ ಪಂಡಿತರನ್ನು ನಮ್ಮ ಗುರುಗಳು ಖಂಡಿಸಿ ಹೇಳಬೇಕಾಗಿ ಬಂದಿತ್ತು.

ಶರಣರ ವಚನದ ಅರ್ಥವೂ ಭಾವವೂ ತಿಳಿಯಬೇಕಾದರೆ, ಶರಣರ ನಿಲುವನ್ನು ತಿಳಿಯಲೇ ಬೇಕು; ಶರಣರ ನಿಲುವನ್ನು ತಿಳಿಯಬೇಕಾದರೆ, ಶರಣ ಸಾಹಿತ್ಯ ಶಾಸ್ತ್ರವನ್ನು ಅಭ್ಯಸಿಸಲೇ ಬೇಕು. ಅದು ಬಹು ಆಳವಾಗಿ, ಬಹು ತಿಳಿಯಾಗಿ, ಬಹು ಉಚ್ಚ ಭಾವದಲ್ಲಿ ಹರಿದಾಡುವದು. ಶರಣರ ಅಂತರಂಗದಿಂದ ಉಕ್ಕಿ ಬಂದ ಯಾವದೇ ವಚನದಲ್ಲಿ ಅದರ ಆಧ್ಯಾತ್ಮಿಕ ತತ್ವದಲ್ಲಿ, ಅದರ ಭಾವದಲ್ಲಿ, ಅದರ ರಚನೆಯಲ್ಲಿ ಅಥವಾ ಭಾಷಾ ಗೌರವದಲ್ಲಿ ಎಲ್ಲೆಲ್ಲಿಯೂ ದೋಷವಿರಲಾರದು. ಅದು ಒಂದು ಆದ್ಯರ

ವಚನ; ವೇದವಾಕ್ಯವಿದ್ದಂತೆ. ಅಲ್ಲಿ ಇಲ್ಲಿ ಎಲ್ಲಿಯಾದರೂ ದೋಷವಿದೆ ಎಂದು ತೋರಿ ಬಂದಲ್ಲಿ, ಅದು ನಮಗೆ ಹೊಳೆಯಲಾರದ ಒಂದು ಒಗಟು, ಒಂದು ರಹಸ್ಯ, ಒಂದು ತತ್ತ್ವಮಾತ್ರವಿದೆ, ಎಂದು ತಿಳಿಯಬಹುದಲ್ಲದೆ, ಅದರಲ್ಲಿ ದೋಷ ಕಾಣಲು ಶಕ್ಯವಿಲ್ಲ.

ಕೋಟ್ಯಾನುಕೋಟಿ ವಚನಗಳು ಆಳವಾದ ತತ್ತ್ವಾರ್ಥದಿಂದಲೂ ಸುಂದರವಾದ ಶೈಲಿಯಿಂದಲೂ ಕೂಡಿದ್ದು ಅಲ್ಲಲ್ಲಿ ತಕ್ಕ ತಕ್ಕ ಶಬ್ದಗಳನ್ನೇ ಉಪಯೋಗಿಸಿದ್ದನ್ನು ಗಮನಿಸಿದರೆ, ಆಗಿನ ಅವರ ಕನ್ನಡ ಭಾಷೆಯ ಹಿರಿಮೆಯು ಕಂಡು ಬರುವದು. ಹೀಗಿದ್ದಲ್ಲಿ ಶ್ರೀ ಬಸವೇಶ್ವರರು ತಮ್ಮ ವಚನದಲ್ಲಿ ಈ ಪದಗಳನ್ನು ಬೇಕೆಂದಲೇ ಮೂರು ಮೂರು ಸಲ ಉಪಯೋಗಿಸಿರಬೇಕು. * ಅಂದಲ್ಲಿ ಈ ವಚನದ ಅರ್ಥವೇನು ?

ಈ ವಚನದ ಕಡೆಯ ಪಾದದಲ್ಲಿ "ನಿಮ್ಮ ಮನೆಯ ಮಗ" ಎಂದು ಎನಿಸಯ್ಯಾ ! ಎಂದು ಅನನ್ಯ ಭಾವದಿಂದ ಕೂಡಲ ಸಂಗಮದೇವನ ಮರೆಹೋಗಿರುವರು. ಇಲ್ಲಿ ಇದು ಈ ವಚನದ ತಿರುಳು ಎಂದು ಸೂಚಿಸುವರು. ಅಂದಲ್ಲಿ ಪರಮೇಶ್ವರನು ತಂದೆಯೆಂದೂ, ಜೀವನು ಮನೆಯ ಮಗನೆಂದೂ ಇಟ್ಟುಕೊಂಡು ವಿಚಾರಿಸಬೇಕು. ಹೀಗೆ ಮನೆಯ ಮಗನಂತೆ ಇದ್ದ ಜೀವನನ್ನೂ ತಂದೆಯಾದ ಪರಮಾತ್ಮನನ್ನೂ ಮೂರು ವಿಧವಾದ ರೀತಿಯಲ್ಲಿ ತೂಗಿ ತೂಗಿ ಕಂಡು ಶ್ರೀ ಬಸವೇಶ್ವರರು ಪರವಶರಾಗುತ್ತಾರೆ. ಇದು ಒಂದು ಸುಂದರ ನೋಟ; ತತ್ತ್ವಮಯ ನೋಟ.

ತಂದೆ ಮಕ್ಕಳಿಗೆ ಬಹುದಿನದ ಸಂಪರ್ಕ ತಪ್ಪಿದೆ. ಅಜ್ಞಾನದಿಂದ ಮಗನಿಗೆ ತಂದೆಯು ಮರೆಯಾಗಿದೆ. ಎಷ್ಟೋ ದಿನ ಕಳೆದಮೇಲೆ ಜ್ಞಾನ ಬರಹತ್ತಿ ಹಿಂದಿನ ಆ ಸುಸಂಬಂಧದ ನೆನಪಾಗಹತ್ತಿದೆ. ಹೀಗೆ ಜೀವನು ಮಾಯೆಯಲ್ಲಿ ಮುಳುಗಿ ದೇವನನ್ನು ಮರೆತುಬಿಟ್ಟಿರುವನು. ಜೀವ

---

* ಇಂಥದೇ ಮತ್ತೊಂದು ವಚನ:—

ಜಜ್ಜನೆ ಜರಿದೆನು, ಜಜ್ಜನೆ ಜರಿದೆನು, ಜಜ್ಜನೆ ಜರಿದೆ ನೋಡಯ್ಯಾ !
ಬಿಬ್ಬನೆ ಬಿರಿದೆನು, ಬಿಬ್ಬನೆ ಬಿರಿದೆನು, ಬಿಬ್ಬನೆ ಬಿರಿದೆ ನೋಡಯ್ಯಾ !
ನಾನೊಬ್ಬನೆ ಉಳಿದೆನು, ನಾನೊಬ್ಬನೆ ಉಳಿದೆನು!
ಕೂಡಲಸಂಗಮ ದೇವ, ನಿಮ್ಮ ಶರಣರನಗಲಿದ ಕಾರಣ !

ಪರಮಾತ್ಮರಿಗೆ ಇರುವ ಸಂಬಂಧವನ್ನು ಅಜ್ಞಾನದಲ್ಲಿ ಮರೆಯುವನು. ಆದರೆ ಆ ಸವಿನೆನಹು ಪುನಃ, ಹುಟ್ಟಿ ಬೆಳೆ ಬೆಳೆದಂತೆ ಆ ಸಂಬಂಧವನ್ನು ನೆನೆ ನೆನೆದು ಪರವಶನಾಗುವನು. ಇದೇ ಈ ವಚನದ ಒಂದು ದೃಶ್ಯ.

ಅದನ್ನೇ ಅಧ್ಯಾತ್ಮದಲ್ಲಿ ಮೂರು ಮೆಟ್ಟಲಿನಲ್ಲಿ ಗಣಿಸುವರು:—

೧. ಪರಮಾತ್ಮನು ನನ್ನ ತಂದೆಯು. — ( ದ್ವೈತ )

೨. ಪರಮಾತ್ಮನಿಂದ ಬಂದವನು ನಾನು—( ಅದ್ವೈತ ಭಾವ )

೩. ಪರಮಾತ್ಮನ ಸ್ವರೂಪವೇ ನಾನು —( ಅದ್ವೈತ )

ಈ ಮೂರು ತತ್ವಗಳನ್ನು ತಿಳಿಯಬೇಕಾದರೆ ವಿಶ್ವದ ಉತ್ಪತ್ತಿಯ ಒಂದು ನೋಟವನ್ನು ಅರಿಯುವದು ಅವಶ್ಯ.

ಹಿಂದೆ, ಹಿಂದೆ, ಅತಿ ಹಿಂದೆ ಹೊರಳಿ ನೋಡಿದಲ್ಲಿ ಜೀವ-ವಿಶ್ವ-ಪ್ರಕೃತಿಗಳು ಮೊದಲು ಬಯಲುಮಯ (COSMOS) ದಲ್ಲಿ ಸಮರಸವಾಗಿದ್ದವೆಂದು ಕಂಡುಬರುವದು. ಅವಕ್ಕೆ ಬೇರೆ ಅಸ್ತಿತ್ವವೇ ಇಲ್ಲ- ಆ ಆದಿ ಬಯಲನ್ನೇ ನಿರ್ಬಯಲು ಅಥವಾ ಪರಮಾತ್ಮಮಯ ರೂಪರಹಿತ ಬಯಲು ಎಂದು ಕರೆಯಬಹುದು. ಈ ಬಯಲಿನ ಸ್ವಭಾವಕ್ಕನುಗುಣವಾಗಿ ಅದರಲ್ಲಿ ಪ್ರವೃತ್ತಿ ಶಕ್ತಿ, ನಿವೃತ್ತಿ ಶಕ್ತಿ, ಎಂಬ ಈಶ್ವರೀ ಶಕ್ತಿಗಳು ಇವೆ. ಆ ಶಕ್ತಿಯ ಪ್ರಭಾವಕ್ಕನುಸರಿಸಿ ಮುಂದೆ ಉತ್ಪತ್ತಿ, ಸ್ಥಿತಿ, ಲಯಗಳು ಉಂಟಾಗುವವು ಎಂದು ಹೇಳಬಹುದು.

ಸ್ಥೂಲವಾಗಿ ಹೇಳುವದಾದರೆ, ಆ ಈಶ್ವರೀ ಬಯಲಿನಲ್ಲಿ ಮೊದಲು ಒಂದು ಪ್ರಕಾಶಮಯ ಗ್ರಹವು ಕಂಡುಕೊಂಡಿತು. ಈ ಬಯಲುಮಯ ಮೊದಲು ಏನಿರಬಹುದು, ಇದು ಎಲ್ಲಿಂದ ಬಂದಿರಬಹುದು, ಯಾಕೆ ಬಂದಿರಬಹುದು ಎಂಬುದನ್ನು ನಿಶ್ಚಯಿಸುವದು ಕಠಿಣ. ಎಲ್ಲೆಲ್ಲಿಯೂ ಆ ಈಶ್ವರೀ ಬಯಲೇ (COSMOS) ತುಂಬಿದೆ ಎಂದು ಮಾತ್ರ ಹೇಳಬಹುದು. ಆ ಬಯಲಿನಿಂದ ಆ ಬಯಲಿನಲ್ಲಿಯೇ ಆ ಬಯಲಿನ ಶಕ್ತಿಯ ಮೂಲಕವೇ ಒಂದು ಪ್ರಕಾಶಮಾನವಾದ ಗ್ರಹವು ವಿರಚಿತವಾಗಿ ಉದ್ಭವಿಸಿ ಬಂದಿದೆ ಎಂದು ಹೇಳುವರು. ಆ ಪರಮಾತ್ಮಮಯ ಬಯಲಿನಿಂದ ಆಕಾಶ ( Ether or space ) ಉದ್ಭವಿಸಿತು. ಆ ಆಕಾಶದಿಂದ ವಾಯು (Air) ಉದ್ಭವಿಸಿತು; ಆ ವಾಯುವಿನಿಂದ ಅಗ್ನಿ ( Fire ) ಉದ್ಭವಿಸಿತು; ಆ ಅಗ್ನಿಯಿಂದ ಜಲ ( Water ) ಉದ್ಭವಿಸಿತು; ಜಲದಿಂದ ಪೃಥ್ವಿ

(Earth) ಉದ್ಭವಿಸಿತು; ಪೃಥ್ವಿಯಿಂದ ಶಾಕಾದಿಗಳು ( Vegetabls ) ಶಾಕಾದಿಗಳಿಂದ ಅನ್ನವು (Food ) ಅನ್ನದಿಂದ ಮನುಷ್ಯನು ಉದ್ಭವಿಸಿದನು * ಎಂದು ಹೇಳುವರು.

ಆಧುನಿಕ ಶಾಸ್ತ್ರದ ಪ್ರಕಾರ ಕೂಡ, ಆ ಬಯಲಿನಿಂದ ಒಂದು ಪ್ರಕಾಶಮಯ ಗ್ರಹವು ಹುಟ್ಟಿತು ಎಂದು ಹೇಳುವರು. ಆ ಗ್ರಹವು ಚಲನಯುಕ್ತವಾದದ್ದರಿಂದ ತನ್ನ ಸುತ್ತಲೂ ತಿರುಗುತ್ತಿರುವದಲ್ಲದೆ (rotating) ಆ ಬಯಲಲ್ಲಿ ಅದು ನಿರ್ದಿಷ್ಟವಾಗಿ ಪ್ರದಕ್ಷಣೆ (revolving) ಯನ್ನು ಕೂಡ ಹಾಕುತ್ತಿರುವದು. ಈ ತಿರುಗುವ ಹಾಗು ಪ್ರದಕ್ಷಿಣೆ ಹಾಕುವ ಕಾರ್ಯವು ಯಾವದೋ ಒಂದು ವಿಚಿತ್ರ ಶಕ್ತಿಯ ಮೂಲಕ ನೇಮಬದ್ಧವಾಗಿ ನಡೆದಿದೆ ಎಂದು ಹೇಳಬಹುದು. ಆ ಶಕ್ತಿಯೇ ಚಿತ್‌ಶಕ್ತಿ ಚಾಲಕಶಕ್ತಿ (Spirituai energy).

ಈ ಪ್ರಕಾರ ಚಾಲನೆ ನಡೆದಾಗ್ಗೆ ಆ ಪ್ರಕಾಶಮಯ ಗ್ರಹದಿಂದ ಕಿಡಿಗಳ ದೊಡ್ಡ ದೊಡ್ಡ ತುಣುಕುಗಳು ಸಿಡಿದು ಹೋಗಿ ಪೃಥ್ವಿ ಮೊದಲಾದ ಗ್ರಹಗಳೂ (Planet) ತಾರೆಗಳೂ ಉಂಟಾದವು. ಆಗ್ಗೆ ಆ ಆಕಾಶಮಯದಲ್ಲಿ ಇವು ಮೊದಲು ಉರಿಯುವ ಪ್ರಕಾಶಮಯ ಅವಸ್ಥೆಯಲ್ಲಿ ಇದ್ದು ಮುಂದೆ ಆರಿದಂತೆಲ್ಲ ಬೇರೆ ಬೇರೆ ರೂಪಗೊಂಡವು. ಆಗ್ಗೆ ಪೃಥ್ವಿ-ಆಪ-ತೇಜ-ವಾಯು-ಆಕಾಶ ಎಂಬ ಐದು ಮಹಾ ತತ್ವಗಳು ಉದ್ಭವಿಸಿದವು.

ಇಲ್ಲಿ ಒಂದು ಮಾತು ಕಂಡು ಬರುವದು. ಆ ಗ್ರಹವು ಪ್ರಕಾಶಮಯವಿದೆ ಎನ್ನುವಾಗ್ಗೆ ಅದರಲ್ಲಿ ಎರಡು; ವಸ್ತುಗಳು ಅಡಕವಾಗಿರಲೇ ಬೇಕು; ಒಂದು ಪ್ರಕಾಶಿಸುವ ಶಕ್ತಿ, ಇನ್ನೊಂದು ಪ್ರಕಾಶ ದರ್ಶಕ ವಸ್ತು. ಉದಾಹರಣಾರ್ಥವಾಗಿ ವಿದ್ಯುದ್ದೀಪದ ಬುಡ್ಡಿಯನ್ನು (ಇಲೆಕ್ಟ್ರಿಕ್ ಬಲ್ಬ) ತೆಗೆದು ಕೊಳ್ಳಿ. ಅಲ್ಲಿ ವಿದ್ಯುತ್ತು ಒಂದು ಚಲನಾತ್ಮಕ ಶಕ್ತಿ ಅಥವಾ ಪ್ರಕಾಶಿಸುವ ಶಕ್ತಿ ಇದೆ. ಆ ಬುಡ್ಡಿಯಲ್ಲಿ ಇದ್ದ ಸೂಕ್ಷ್ಮ ತಂತಿಯು ಒಂದು ಪ್ರಕಾಶದರ್ಶಕ ವಸ್ತು. ಹೀಗೆ ಈ ಪ್ರಕಾಶಿಸುವ ಶಕ್ತಿ ಹಾಗು

---

* ಆತ್ಮನ್ ಆಕಾಶಃ ಸಂಭೂತಃ। ಆಕಾಶಾತ್‌ವಾಯುಃ। ವಾಯೋರ್ ಅಗ್ನಿಃ। ಅಗ್ನೇರ್ ಆಪಃ। ಅದ್ಭ್ಯಃ ಪೃಥ್ವೀ। ಪೃಥ್ವ್ಯಾ ಓಷಧಯಃ। ಓಷಧಿಭ್ಯಃ ಅನ್ನಂ ಅನ್ನಾತ್ ಪುರುಷಃ। ತೈತ್ತಿರೀಯೋಪನಿಷತ್ (೨. ೧.)

ಪ್ರಕಾಶ ದರ್ಶಕ ವಸ್ತುಗಳ ಸಂಮಿಲನವಾದಾಗಲೇ ಅದೂ ಕೂಡ ಯೋಗ್ಯ ಪ್ರಮಾಣದಲ್ಲಿ ಯೋಗ್ಯ ಪರಿಸ್ಥಿತಿಯಲ್ಲಿ ಕೂಡಿದಾಗ ಮಾತ್ರ ಪ್ರಕಾಶ ಹೊರಡುವದು. ವಿದ್ಯುತ್ತು ಚೈತನ್ಯಮಯ ಶಕ್ತಿ; ಆ ತಂತಿಯು ಜಾಡ್ಯ ಮಯ ವಸ್ತು. ಈ ಚೈತನ್ಯ, ಆ ಜಾಡ್ಯಗಳ ಸಮ್ಮಿಲನದಿಂದ ಉತ್ಪತ್ತಿ ಸ್ಥಿತಿಗಳೂ ಭೇದನದಿಂದ ಲಯವೂ ಉಂಟಾಗುವವು. ಅದರಂತೆಯೇ ಮೇಲೆ ಹೇಳಿದ ಮೂಲ ಪ್ರಕಾಶಮಯ ಗ್ರಹದಲ್ಲಿ ಪ್ರಕಾಶಿಸುವ ಶಕ್ತಿಯು ವಿದ್ಯುತ್ತಿನಂತೆ ಚೈತನ್ಯಮಯದಿಂದಲೂ ಪ್ರಕಾಶದರ್ಶಕ ವಸ್ತುವು ತಂತಿಯಂತೆ ಜಾಡ್ಯಮಯದಿಂದಲೂ ಕೂಡಿದ್ದು ಇರಲೇಬೇಕು, ಎನಿಸುವದು. ಅವೇ ಪುರುಷ ಪ್ರಕೃತಿಗಳು. ಅವೇ ಒಂದರಲ್ಲಿಯ ಎರಡು ಕಲೆಗಳು.

ಹೀಗೆ ಪೃಥ್ವಿ-ಅಪ-ತೇಜ-ವಾಯು-ಆಕಾಶಗಳು ಜಡರೂಪ ಪ್ರಕೃತಿಯೆಂದೂ ಅವುಗಳಲ್ಲಡಕವಾದ ಶಕ್ತಿಯು ಚೈತನ್ಯ ರೂಪವೆಂದೂ ಗಣಿಸಲ್ಪಡುವದು. ಈ ಪ್ರಕೃತಿಯ ಕೂಡ ಬುದ್ಧಿ ಅಹಂಕಾರ ಹಾಗು ಮನಸ್ಸು ಕೂಡ ಕೂಡಿವೆ ಎಂದೂ ಹೇಳುವರು. ಅವೂ ಕೂಡ ಸೂಕ್ಷ್ಮತರದ ಜಡಪ್ರಕೃತಿಗಳಾಗಿರುವವು. ಇವಕ್ಕೆ ಕೂಡ ಕಾರ್ಯಮಾಡಲು ಹಿಂದೆ ಒಂದು ಚೈತನ್ಯ ಶಕ್ತಿ ಬೇಕು. ದೇಹದ ಸತ್ವ-ರಜಸ್-ತಮಸ್ ಗುಣಗಳಿಗನುವಾಗಿ ಇವುಗಳ ವರ್ಚಸ್ಸು ಹೊರಬೀಳುವದು.

ಈ ಪ್ರಕಾರ ಪೃಥ್ವಿ ಮೊದಲಾದ ಐದು ಹಾಗು ಬುದ್ಧಿ-ಅಹಂಕಾರ-ಮನಸ್ಸು ಕೂಡಿ ಮೂರು-ಅಂತು ಒಟ್ಟು ಎಂಟು ತತ್ವಗಳು 'ಅಪರಾ' ಪ್ರಕೃತಿಗಳೆಂದೂ ಇವುಗಳಲ್ಲಡಕವಾದ ಅಂತರಂಗದಲ್ಲಿ ಕಾರ್ಯಮಾಡುವ ಶಕ್ತಿಯು 'ಪರಾ' ಪ್ರಕೃತಿ ಅಥವಾ ಜೀವ ಎಂದೂ ಅನ್ನುವರು.

"ಭೂಮಿ, ಜಲ, ಅಗ್ನಿ, ವಾಯು, ಆಕಾಶ, ಹಾಗು ಮನಸ್ಸು ಬುದ್ಧಿ, ಅಹಂಕಾರ ಹೀಗೆ ನನ್ನ ಪ್ರಕೃತಿಯು ಎಂಟು ವಿಧವಾಗಿದೆ. ಇವು ಅಪರಾ ಪ್ರಕೃತಿಗಳು ಇವುಗಳಲ್ಲದಲೆ ವಿಶ್ವಧಾರಣ ಮಾಡುವ ಜೀವರೂಪಿಯಾದ ಇನ್ನೊಂದು ನನ್ನ ಪ್ರಕೃತಿ ಇದೆ. ಅದಕ್ಕೆ ಪರಾಪ್ರಕೃತಿ ಎನ್ನುವರು.

ಈ ಎರಡರಿಂದಲೇ ಎಲ್ಲದರ ಉತ್ಪತ್ತಿ ಎಂಬುವದನ್ನು ಲಕ್ಷದಲ್ಲಿಡು " ಎಂದು ಗೀತೆಯು ಹೇಳುವದು ●

ಇದೇ ಮಾತನ್ನೇ ಇನ್ನಿಷ್ಟು ಹೆಚ್ಚು ವಿಶದೀಕರಿಸಿ ಪ್ರಭುದೇವರು ಹೇಳುವರು:—

ಗಗನದ ಮೇಲೊಂದು ಅಭಿನವ ಗಿಳಿ ಹುಟ್ಟಿ,
ಸ್ವಯಂ ಸಂಭ್ರಮದಲ್ಲಿ ಮನೆಯ ಮಾಡಿತ್ತು.
ಒಂದು ಗಿಳಿ ಇಪ್ಪತ್ತೈದು ಗಿಳಿಯಾಗಿತ್ತು.
ಬ್ರಹ್ಮನಾ ಗಿಳಿಗೆ ಹಂಜರನಾದ
ವಿಷ್ಣುವಾ ಗಿಳಿಗೆ ಕೊರೆಗೂಳಾದ
ರುದ್ರನಾ ಗಿಳಿಗೆ ತಾ ಕೋಲನಾದ
ಇಂತೀ ಮೂವರ ಮುಂದಣ ಕಂದನ ನುಂಗಿದ ಪೃಷ್ಟನಾನು ನಷ್ಟ ವಾಯಿತ್ತು ಕಾಣಾ ಗುಹೇಶ್ವರಾ.

ಪ್ರಭುವಿನ ಈ ಮುಂಡಿಗೆಯನ್ನು ಶ್ರೀ ಆರ್. ಆರ್. ದಿವಾಕರರು (ಈಗಿನ ಬಿಹಾರದ ಗವ್ಹರನರರು) ತಮ್ಮ ವಚನ ಶಾಸ್ತ್ರರಹಸ್ಯದಲ್ಲಿ + ಸುಂದರವಾಗಿ ಬಿಡಿಸಿರುವರು. ಇಲ್ಲಿ 'ಒಂದು ಅಭಿನವ ಗಿಳಿ' ಎಂದರೆ ಚಿತ್‌ಸ್ವರೂಪನಾದ ಪರಮಾತ್ಮನು (ಆದಿ-ಅನಾದಿಶಕ್ತಿ ಎಂಬರು. ಅದನಾರು ಬಲ್ಲರಯ್ಯಾ ............... ನಿಜಶಕ್ತಿ-ಚಿತ್‌ಶಕ್ತಿಯಾಯಿತ್ತು ನೋಡಾ।) * ಒಂದು ಗಿಳಿ ೨೫ ರೂಪದಿಂದ ಹೊರಬಿದ್ದವು. ಅವು :—

(ಗೀತೆಯಲ್ಲಿ ಹೇಳಿದಂತೆ)

---

● ಭಗವದ್ಗೀತಾ. ಅ. ೭ :—

ಭೂಮಿರಾಪೋಽನಲೋ ವಾಯುಃ ಖಂ ಮನೋ ಬುದ್ಧಿರೇವ ಚ।
ಅಹಂಕಾರ ಇತೀಯಂ ಮೇ ಭಿನ್ನಾ ಪ್ರಕೃತಿರಷ್ಟಧಾ ॥೪॥
ಅಪರೇಯಮಿತಸ್ತ್ವನ್ಯಾಂ ಪ್ರಕೃತಿಂ ವಿದ್ಧಿ ಮೇ ಪರಾ।
ಜೀವಭೂತಾಂ ಮಹಾಬಾಹೋ ಯಯೇದಂ ಧಾರ್ಯತೇ ಜಗತ್ ॥೫॥
ಏತದ್ಯೋನೀನಿ ಭೂತಾನಿ ಸರ್ವಾಣೀತ್ಯುಪಧಾರಯ।
ಅಹಂ ಕೃತ್ಸ್ನಸ್ಯ ಜಗತಃ ಪ್ರಭವಃ ಪ್ರಲಯಸ್ತಥಾ ॥೬॥

+ ೧೯೪೫ನೇ ಆವೃತ್ತಿ ಪುಟ ೧೨ ಹಾಗು ೮೨

* 'ನಾನು ಕಂಡ ಗುರು' ಪುಟ ೩೧ ಹಾಗು ೬೯

೧. ಪರಾಶಕ್ತಿ—ಪುರುಷ—ಚೈತನ್ಯಮಯಜೀವ....... ೧
೨. ಅಪರಾಶಕ್ತಿ—ಪ್ರಕೃತಿ .... .... .... ೧

ಅಪರಾ ಪ್ರಕೃತಿಯಿಂದ:—

೧. ಪೃಥ್ವಿ-ಅಪ-ತೇಜ ವಾಯು-ಆಕಾಶ } ............ ೫
೨. ಬುದ್ಧಿ-ಅಹಂಕಾರ-ಮನಸ್ಸು ೩
೮ = ೮

(ಪ್ರಭುವಿನ ವಿಸ್ತರಣೆಯಂತೆ)

(೩) ಪಂಚ ಜ್ಞಾನೇಂದ್ರಿಯಗಳು........ ೫
(೪) ಪಂಚಕರ್ಮೇಂದ್ರಿಯಗಳು....... ೫
(೫) ಪಂಚ ತನ್ಮಾತ್ರೆಗಳು........ ೫
೧೫ = ೧೫

ಅಂತು ... ... .... ೨೫

ಈ ಪ್ರಕಾರ ೨೫ ತತ್ವಗಳು ಉತ್ಪತ್ತಿಯಾಗಿ ವಿಶ್ವದ ಉತ್ಪತ್ತಿಸ್ಥಿತಿ ಲಯಗಳು ನಡೆದಿವೆ ಎಂದು ಹೇಳುವರು.

ಹೀಗೆ ಪರಾಶಕ್ತಿಯಾದ ಜೀವಾತ್ಮನು ಕೂಡ ಪರಮಾತ್ಮನಿಂದ ಬಂದವ ಎಂದು ತಿಳಿಯುವದು. ಅಂದಲ್ಲಿ ಪರಮಾತ್ಮನ ವೀರ್ಯ-ತೇಜ-ಶಕ್ತಿಗಳು ಅಂಶತ: ನಮ್ಮಲ್ಲಿ ಅಡಕವಾಗಿರಲೇ ಬೇಕು. ಆ ಶಕ್ತಿಯು ಪ್ರೇರಣೆಯಿಲ್ಲದಲೆ ಏನೂ ಮಾಡಲರಿಯೆವು.

ಇದೆಲ್ಲ ಮಾತನ್ನು ಲಕ್ಷದಲ್ಲಿ ತಂದು, ಪರಮಾತ್ಮನು ತಂದೆ-ಮೂಲ ಪುರುಷ:—ಜೀವನು ಅವನಿಂದ ಹುಟ್ಟಿದ ಮಗ-ಚಿಗುರು—ಎಂದು ಗಣಿಸಿ ವಿಚಾರಿಸಬಹುದು. ಈ ತಂದೆ-ಮಕ್ಕಳ ಭಾವವನ್ನೇ ಇಲ್ಲಿ 'ಇವನಾರವ' ಎಂದು ಮೂರು ಸಲ ಕೇಳಿಕೊಂಡು, 'ಇವ ನಮ್ಮವ' ಎಂದು ಗಣಿಸಬೇಕು; ಎಂದು ಮೂರುಸಲ ಮೂರು ಬೇರೆ ಬೇರೆ ಉಪಮೆಗಳಿಂದ ತಿಳಿಯಬಹುದು:—

(೧)

(ಸ್ಥೂಲ-ಸೂಕ್ಷ್ಮ-ಭಾವ-ಶರೀರ)

ಈ ದೇಹದಲ್ಲಿ (೧) ಸ್ಥೂಲ ಶರೀರ (೨) ಸೂಕ್ಷ್ಮ ಶರೀರ (೩) ಕಾರಣ ಅಥವಾ ಭಾವ ಶರೀರ ಎಂದು ಮೂರುವಿಧವಾಗಿ ಭೇದಮಾಡಿ, ಗಣಿಸ ಬಹುದು. ದೃಷ್ಟಿಗೋಚರವಾಗುವ ಬಾಹ್ಯ ಶರೀರವು ಸ್ಥೂಲ ಶರೀರವು. ಇದರ ಒಳಗೆ ಕಾರ್ಯ ಮಾಡುವ ಮನಸ್ಸು, ಬುದ್ಧಿ, ಅಹಂಕಾರ ಜ್ಞಾನೇಂದ್ರಿಯ ಮುಂತಾದ ಸೂಕ್ಷ್ಮ ಗೋಚರವಾಗದ ವಸ್ತುಗಳು ಕೂಡಿ ಸೂಕ್ಷ್ಮ ಶರೀರ ಎಂದು ಎನ್ನಿಸಿಕೊಳ್ಳುವವು. ಕಾರಣ ಅಥವಾ ಭಾವ ಶರೀರವು ಇವೆಲ್ಲವಕ್ಕೆ ಮೂಲಾಧಾರವಾಗಿ ಚೈತನ್ಯವನ್ನು ಉಂಟು ಮಾಡುವದು. ಇದು ಅಂತರಾತ್ಮ (*Inner voice*)

ಆ ಕಾರಣ ಶ್ರೀಬಸವೇಶ್ವರರು (೧) ಸ್ಥೂಲಶರೀರದಿಂದಲೂ (೨) ಸೂಕ್ಷ್ಮಶರೀರದಿಂದಲೂ ಹಾಗು (೩) ಭಾವಶರೀರದಿಂದಲೂ ಪರಮಾತ್ಮನೆಡೆ 'ಇವನಾರವ' ಎಂದು ಗಣಿಸ ಬೇಡಯ್ಯ ಎಂದು ಮೂರುಸಲ ಬೇಡಿ, 'ಇವನಮ್ಮವ' ಎಂದು ಗಣಿಸಯ್ಯ! ಎಂದು ಮರೆಹೋಗುವರು. ಈ ಮೂರು ಸಲ ಬೇಡಿದ್ದೂ ಈ ಮೂರು ಶರೀರದ ಪ್ರತೀಕವಾಗಿ ಕಾಯಾ-ವಾಚಾ-ಮನಸದಿಂದು ಬೇರೆ ಬೇರೆಯಾಗಿ ಬೇಡಿಕೊಂಡಿರುವರು.

(೨)

(ತಂದೆ-ಮಗ ಭಾವ)

(ಅ) ಹಿಂದೆ ಹೇಳಿದಂತೆ ಮಗನಾದ ಜೀವನಿಗೆ ತಂದೆಯಾದ ಪರಮಾತ್ಮನ ಮರುವಾಗಿದೆ. ಅಜ್ಞಾನ ಹುಟ್ಟಿ ತಂದೆ-ಮಕ್ಕಳ ಪರಸ್ಪರ ಸಂಬಂಧದ ಅರಿವು ತಪ್ಪಿದೆ. ಬಹುಕಾಲದ ನಂತರ ಮಗನಿಗೆ ತಂದೆಯೆಡೆ ಅರಿವು ಬರಹತ್ತಿ ಮರೆಹೋಗುತ್ತಾನೆ. "ತಂದೆಯೇ, ನಾನು ನಿನ್ನಮಗ! ಇವನಾರು ಎಂದು ಗಣಿಸಬೇಡ! ನನ್ನನ್ನು ದೂಡಬೇಡ! ನಿನ್ನಹೊಟ್ಟೆಯಲಿ ಹುಟ್ಟಿದವ! ನಿಮ್ಮವನೇ ಎಂದು ಗಣಿಸು! ಎಂದು ಬೇಡಿಕೊಳ್ಳುವನು. ಇಲ್ಲಿ ಜೀವನಿಗೆ ತನ್ನ ನಿಜಸ್ಥಿತಿಯ ಅರಿವು ಪೂರ್ಣವಾಗಿರುವದಿಲ್ಲ. ಇದು ಭಕ್ತಿಯ ಮೊದಲನೆಯ ಮೆಟ್ಟಲು ಸಾಮಾನ್ಯನು ದ್ವೈತ ಭಾವದಿಂದ ಬೇಡಿಕೊಳ್ಳುವ ಸ್ಥಿತಿಯು; ಭಕ್ತನು ಬೇಡಿಕೊಳ್ಳುವ ಭಾವ. "ಪರಮಾತ್ಮನು ನನ್ನ ತಂದೆ" ಎಂಬ ಭಾವ.

(ಬ) ಎರಡನೇ 'ಇವನಾರವ' ಎಂಬಲ್ಲಿ ಜೀವನಿಗೆ ಹೆಚ್ಚು ಜ್ಞಾನ ಬೆಳೆದಿರುತ್ತದೆ. ಇಲ್ಲಿ ಭಿಕ್ಷುಕನಂತೆ ಬೇಡುವದಕ್ಕಿಂತ ಸ್ವಲ್ಪ ಮುಂದೆ

ಹೋಕಿ ಧೃಡವಾಗಿ 'ಇವನನ್ಮವ' ಎಂದು ಗಣಿಸಯ್ಯ! ಎಂದು ಕೇಳಿ ಕೊಳ್ಳುವರು. ಪರಮಾತ್ಮನು ಶಕ್ತಿಯು ಒಂದು ಹೊಂಡ ( *Fountain*) ಆ ಹೊಂಡದಿಂದ ಹರಿದು ಹಿರಿದು ಬಂದವ ಜೀವ ಆಕಾರಣ ಆಹೊಂಡ 'ನನ್ನದೇ' ಎಂದು ಹೇಳುವನು. ಕರ್ನಾಟಕದಿಂದ ಹೊರ ಸೀಮೆಗೆ ಹೋದ ವರು ಹೇಗೆ 'ನಾನು ಕರ್ನಾಟಕದವನು' ಎಂದು ಧೈರ್ಯದಿಂದ— ಹೆಮ್ಮೆಯಿಂದ—ಹೇಳುವನೋ ಹಾಗೆ ಇಲ್ಲಿ ಪರಮಾತ್ಮನು ತನ್ನ ಮೂಲ ವೆಂದು ಹೇಳುವನು ಇಲ್ಲಿ ದ್ವೈತ-ಭಾವವು ಅಳಿಯಹತ್ತುವದು ಭೇದ ಭಾವವು ಅಳಿಯಹತ್ತಿ ತನಗೂ ಪರಮಾತ್ಮನಿಗೂ ನಿಕಟ ಸಂಬಂಧವಿದೆ ಎಂದು ಅನಿಸ ಹತ್ತುವದು "ಇದು ಪರಮಾತ್ಮನಿಂದ ಬಂದವ" ಎಂಬ ಭಾವ.

(ಕ) ಮೂರನೇ 'ಇವನಾರವ' ಎಂಬಲ್ಲಿ ಸಂಪೂರ್ಣ ಜ್ಞಾನ ಬಂದಿರುತ್ತದೆ. ಪರಮಾತ್ಮನಿಂದ ಹರಿದು ಶಕ್ತಿಯಿಂದ 'ನಾನು'. ಆಗಿ ದ್ದರೆ-ಆ ಪರಮ ಶಕ್ತಿಯು ರೂಪವೇ 'ನಾನು' ಆಗಿದ್ದರೆ- 'ನಾನು' ಆ ಪರಮಾತ್ಮನ ಶಕ್ತಿಯ ಸ್ವರೂಪವೇ ಆಗಿರುವೆನು ಪರಮಾತ್ಮನಿಗೂ 'ನನ್ನಲ್ಲಿ' ಇರುವ ಆತ್ಮನಿಗೂ ತತ್ವತಃ ಭೇಧವಿಲ್ಲ ಭೇದ ಕಾಣುವದು ಪ್ರಕೃತಿ-ಗುಣ-ದೋಷದ ಮೂಲಕ 'ನನ್ನಲ್ಲಿ' ಅಡಕವಾದ ಶಕ್ತಿ— ನನ್ನ ಮೂಲಶಕ್ತಿ—ಪರಮಾತ್ಮ ಶಕ್ತಿ—ಎಲ್ಲವೂ ಸೂಕ್ಷ್ಮ ವಿಚಾರಿಸಿದಲ್ಲಿ ಒಂದೇ ಕಾರಣ "ಪರಮಾತ್ಮನ ಸ್ವರೂಪವೇ ನಾನು" "ಅವನೇ ನಾನು" ಎಂಬ ಭಾವ.

(೩)

(ರಕ್ತ ಸಂಬಂಧ ಭಾವ)

(ಅ) ಮೊದಲನೇ 'ಇವ ನಾರವ' ಎಂಬಲ್ಲಿ ಸಾಮಾನ್ಯವಾಗಿ ಮಗನು ಸಾಹಾಯ್ಯಾರ್ಥವಾಗಿ ತಂದೆಯನ್ನು ಬೇಡುವ ಭಾವದಂತೆ ಜೀವನು ಪರ ಮಾತ್ಮನನ್ನು ಸಹಾಯಾರ್ಥವಾಗಿ ಕೋರುವನು. ಮಗನನ್ನು ಎತ್ತಿಹಿಡಿ ಯುವದು ಉದ್ಧಾರದ ಹಾದಿ ಹಿಡಿಸುವದು ತಂದೆಯ ಹೊಣೆ. ಆ ಕಾರಣ ಇಲ್ಲಿ ಪರಮ ತಂದೆಯ ಮರೆ ಹೋಗಿದೆ-ಇದು "ಪರಮಾತ್ಮನು ನನ್ನ ತಂದೆ" ಎಂಬ ಭಾವ.

(ಬ) ಎರಡನೇ 'ಇವ ನಾರವ' ಎಂಬಲ್ಲಿ ತಂದೆ ಮಕ್ಕಳ ಸಂಬಂ ಧವು ಹೆಚ್ಚು ಅಡಕವಾಗಿರುವದು. ತಂದೆಯ ವೀರ್ಯ ತಂದೆಯರಕ್ತ. ತಂದೆಯ ಚೈತನ್ಯದಿಂದ ಮಗನ ಉತ್ಪತ್ತಿ. ತಂದೆಯಲ್ಲಿ ಯಾವ

ವೀರ್ಯ, ಯಾವ ರಕ್ತ, ಯಾವ ಚೈತನ್ಯವಿರುವದೋ ಅದರ ಅಂಶದಿಂದಲೇ ಮಗನು ಹುಟ್ಟಿದ್ದು, ಆ ಮಗನು ತಂದೆಯ ವೀರ್ಯ-ರಕ್ತ-ಚೈತನ್ಯದ ಖಣಿಯಿಂದ ಹರಿದು ಬಂದಂಥ ಒಂದು ಕಣವಾಗಿರುವನು. ಅದರಿಂದಲೇ ಮುಂದೆ ಹೆಚ್ಚಾಗಿ ಬೆಳೆಯುವನು. ಅದಕ್ಕಾಗಿ ಮಗನು ಆ ತಂದೆಯು ಖಣಿಯುವ ಆ ಖಣಿಯಿಂದ ಬಂದವ ಎಂದು ಹೇಳುವದು. ಇದ್ದರಿಂದ "ತಂದೆಯೇ ನಾನು ನಿಮ್ಮ ಖಣಿಯಿಂದ ನಿಮ್ಮವ" ಎನ್ನುವಂತೆ ತಂದೆ ಮಕ್ಕಳ ಭಾವದಿಂದ ಜೀವಾತ್ಮನು ಪರಮಾತ್ಮನಿಗೆ ಬೇಡಿಕೊಳ್ಳುವನು.

(ಆ) ಮೂರನೇ 'ಇವ ನಾರವ' ಎಂಬಲ್ಲಿ ಇದೇ ಮಾತನ್ನೇ ಇನ್ನಿಷ್ಟು ಮುಂದೆ ಹೋಗಿ ವಿಚಾರಿಸಿದೆ. ಒಂದು ರೀತಿಯಿಂದ ನೋಡಿದರೆ, ಮಗನು ತಂದೆಯ ಪ್ರತಿಬಿಂಬನಾಗಿರುವನು. ಅರ್ಥಾತ್ ತಂದೆಯ ರೂಪವೇ ಆಗಿರುವನು. ಮೇಲೆ ಹೇಳಿದಂತೆ ರಕ್ತ ಸಂಬಂಧವೆಲ್ಲ ತಂದೆಯದೇ ಆಗಿರುವದಲ್ಲದೆ, ಮಗನು ತಂದೆಯ ಗುಣಾವಗುಣಗಳನ್ನೂ ತಂದೆಯ ಹೋಲಿಕೆಯನ್ನೂ ಪಡೆದಿರುವನು. ಸಾಮಾನ್ಯವಾಗಿ ತಂದೆಯ ಪಡಿಯಚ್ಚಿನಿಂದ ಬಂದವನಾಗಿರುವನು. ಮುಖಚರ್ಯೆಯಿಂದ ಎಷ್ಟೋ ಸಲ ಇಂಥವನ ಮಗನೆಂದು ಹೇಳಬಹುದು. ತಂದೆಯ ಹಾವಭಾವವೂ ತಂದೆಯ ಕಂಠಸ್ವರವೂ ಮಗನಲ್ಲಿ ಕಂಡುಬರುವವು. ತಂದೆಯ ಸ್ವಭಾವವೂ ಮಗನಲ್ಲಿ ಮೂಡಿರುವದು. ಆದ್ದರಿಂದ ಅವನು "ಅದೇ ಬೊಡ್ಡೆಯ ತುಣುಕು" (Chip of the some kock) ಎಂದು ಹೇಳಬಹುದು. ಅಂದಮೇಲೆ ತಂದೆ ಮಗನಿಗೆ ಏನು ಭೇದ! ತತ್ವತಃ ತಂದೆಯೇ ಅನು; ಅವನೇ ತಂದೆಯು ತಂದೆಯೇ ಮಗನು; ಮಗನೇ ತಂದೆಯು. ಅದೇ ಉಪಮೆಯಂತೆ ಆತ್ಮನೇ ಪರಮಾತ್ಮನು; ಪರಮಾತ್ಮ ಸ್ವರೂಪನೇ ಆತ್ಮನು.

(೪)

( ಪಾಲಿನ ಅಂಗಡಿಯ ಭಾವ )

ಇನ್ನೊಂದು ಸಾಮಾನ್ಯ ದೃಷ್ಟಿಯಿಂದ ನೋಡಿದರೂ ಅದೇ ಸುಂದರ ಉಪಮೆಯು ಹೊರಡುವದು. ಶ್ರೀ ಬಸವೇಶ್ವರರು "ನಿನ್ನ ಮನೆಯ ಮಗ" ಎಂದು ಗಣಿಸಯ್ಯ! ಎಂದು ಬೇಡಿಕೊಳ್ಳುವರು. ತಂದೆ ಎಂದರೆ ಅಂಗಡಿಯ ಒಬ್ಬ ಒಡೆಯ, ಮನೆಯ-ಮಗ ಎಂದರೆ ಆ ಅಂಗಡಿಯ ಒಬ್ಬ ಆಳು ನೌಕರ ಈ ದೃಷ್ಟಿಯಿಂದ ವಿಚಾರಿಸೋಣ:—

(ಅ) ಮೊದಲನೇ 'ಇವನಾರವ' ಎಂಬ ಹಂತವು ಸಾಮಾನ್ಯ ಆಳಿನದು, ದುಡ್ಡಿಗಾಗಿ ದುಡಿಯುವವನದು, ಹೊಟ್ಟೆ ಹೊರಕೊಳ್ಳಲು ಹಂಬಲಿಸುವವನದು. ಆಗ್ಗೆ ಅಂಗಡಿಯ ಆ ಒಡೆಯನ ಕೃಪೆ ಅವನಿಗೆ ಬೇಕು. ಆ ಕೃಪೆಯನ್ನು ಅವನು ಬೇಡಿಕೊಳ್ಳಲೇಬೇಕು. ಅದರಂತೆ ಒಡೆಯನ ಸ್ಥಾನದಲ್ಲಿದ್ದ ಪರಮಾತ್ಮನನ್ನು ಆಳಿನ ಸ್ಥಾನದಲ್ಲಿದ್ದ ಜೀವನು ಅನನ್ಯ ಭಾವದಿಂದ ಬೇಡಿಕೊಳ್ಳುವನು " ಇವನಾರು? ಎಂದು ಅಲಕ್ಷ್ಯ ಮಾಡಬೇಡ. ಒಡೆಯಾ! ಹೊಟ್ಟೆ ತುಂಬಿಕೊಳ್ಳಲು ಬಂದ ಯಾವನೋ ಒಬ್ಬ ಭಿಕಾರಿ ಆಳು, ಎಂದು ತುಚ್ಛಮಾಡಿ ನೋಡಬೇಡ ! ಹಡೆದ ತಂದೆಯಂತೆ ದಯವಿಟ್ಟು ನೋಡು ! ನಾನು ನಿನ್ನ ಮನೆಯ ಒಂದ ಆಳು ! ನಿನ್ನ ವಿಶ್ವಾಸ ಪ್ರೇಮಗಳಿಲ್ಲದಲೆ ಬಾಳಲಾರದ ಆಳು ! "ಎಂದು ಭಕ್ತಿಭಾವದಿಂದ ಮರೆಹೊಕ್ಕ ಭಾವ. ಈ ದೃಶ್ಯವು ಪ್ರಪಂಚದ ಹೆಜ್ಜೆ ಹೆಜ್ಜೆಗೆ ಕಡು ಬರುವದು ಪರಮೇಶ್ವರನು ವಿಶ್ವದ ಒಡೆಯನೆಂದೂ ಅವನ ವಿಶ್ವಚಾಲನೆಯ ಕಾರ್ಯದಲ್ಲಿ ದುಡಿಯಲು ನಾವು ದೀನ ಆಳುಗಳು ಮಾತ್ರ ಎಂದೂ ಗಣಿಸಿ ಬೇಡಿಕೊಳ್ಳುವ ಭಾವವಿದು. ಪರಮಾತ್ಮನು ನನ್ನ ಒಡೆಯ ನನ್ನನ್ನು ಕಾಯುವವ ಎಂಬ ಭಾವ.

(ಬ) ಎರಡನೇ 'ಇವನಾರವ' ಎಂಬ ಹಂತವು ಅದಕ್ಕೂ ಮುಂದೆ ಹೋಗುವದು. ಈ ಮೆಟ್ಟಿಲಲ್ಲಿ ಅವನು ವಿಶ್ವಾಸದಿಂದ ದುಡಿದು ದುಡಿದ; ಒಡೆಯನ ಆ ಅಂಗಡಿಯು ತನ್ನದೇ ಎಂಬಂತೆ ಭಾವನೆಯನ್ನು ಆಳವಡಿಸಿಕೊಳ್ಳುವನು. ವಿಶ್ವಾಸಿಕ ಆಳು " ಅಂಗಡಿಯು ನಮ್ಮದು" ಅನ್ನುವದಿಲ್ಲವೆ? ಹಾಗೆ ಇಲ್ಲಿ ಹೊಟ್ಟೆಗಾಗಿ ದುಡಿಯುವದಕ್ಕಿಂತ ಆ ಅಂಗಡಿಯು "ತನ್ನದು ಎಂಬ ಭಾವ ಹೆಚ್ಚಾಗಿ ಬೆಳೆದಿರುವದು. ಆಗ ಅವನು "ನಮ್ಮ" ಅಂಗಡಿ ಎಂದು ಹೇಳುವನು. ಈ ಭಾವವನ್ನೇ ಪರಮಾತ್ಮನಲ್ಲಿ ಪರಿವರ್ತಿಸಿ ಪರಮಾತ್ಮನು ನನ್ನವ ಎಂದು ಹೇಳುವಂತಾಗಬೇಕು. ಇದು ಈ ಎರಡನೇಯದರ ಭಾವ.

(ಕ) ಮುಂದೆ ಮೂರನೇಯ 'ಇವನಾರವ' ಎಂಬ ಹಂತವು ಬರುವದು ಅಲ್ಲಿ ಅವನ ಆಳಿನ ಭಾವ ಅಳಿದು, ಆ ಅಂಗಡಿ ಎಂದ ವಿಶ್ವಾಸವು ಹೆಚ್ಚೆಚ್ಚು ಬೆಳೆಯುವದು. ಅವನ ದುಡಿತದ ಫಲವಾಗಿ ಅವನೂ ಪಾಲುಗಾರನಾಗುವನು. ಹೀಗೆ ಆ ಅಂಗಡಿಯಲ್ಲಿಯ ಮಾಲಕನ ಸ್ಥಾನ ಪಡೆಯುವನು ಆಗ್ಗೆ ನಾನು ಅಂಗಡಿಯ ಮಾಲಕ ಎಂದು ಹೇಳುವ ಸ್ಥಿತಿ

ಯನ್ನು ಮುಟ್ಟುವನು. ಅದರಂತೆ 'ವಿಶ್ವದ ಅಂಗಡಿಯ ಮಾಲಕನ ಸ್ಥಾನವನ್ನು ಮುಟ್ಟಿರುವೆನು' ಎಂದು ಹೇಳುವಂಥ ಸ್ಥಿತಿಯನ್ನು ಮುಟ್ಟುವನು ಎಂಬ ಭಾವವಿರುವದು.

(೫)

( ಕರ್ಮ-ಭಕ್ತಿ-ಜ್ಞಾನ-ಯೋಗ)

ಶ್ರೀ ಆರ್. ಕೃಷ್ಣಸ್ವಾಮಿಯವರು ಶ್ರೀ ಮಧುಸೂಧನ ಸರಸ್ವತಿಯವರ ಉಕ್ತಿಯನ್ನು 'ಭಕ್ತಿ' ಎಂಬ ವಿಷಯದ ಮೇಲೆ ವಿವೇಚಿಸಿದ್ದು○ ಇಲ್ಲಿಯೂ ಕೂಡ ಶ್ರೀ ಬಸವೇಶ್ವರರ ಈ ಮೂರು ತತ್ವಗಳೇ ಹೊರಬಿದ್ದಿವೆ:—

" ಶಾಸ್ತ್ರದ ತಿರುಳು "

" ತಸ್ಯೈವಾಹಂ ಮಮೈವಾಸೌ ಸ ಏವಾಹಂ-ಇತಿತ್ರಿಧಾ ।

ಅಂದರೆ:—

(೧) ತಸ್ಯೈವಾಹಂ=ತಸ್ಯ+ಏವ+ಅಹಂ=ನಾನು ಅವನವ=ಆತ್ಮ ಪರಮಾತ್ಮನವ=*I belong to the Lord*

(೨) ಮಮೈವಾಸೌ=ಮಮ+ಏವ+ಅಸೌ =ಅವನೇ ನನ್ನವ = ಪರಮಾತ್ಮನೇ ಜೀವಾತ್ಮನವ = *Lord belongs to me*

(೩) ಸ ಏವಾಹಂ = ಸ+ಏವ+ಅಹಂ=ಅವನೇ ನಾನು=ಪರಮಾತ್ಮನ ಸ್ವರೂಪವೇ ನಾನು=*He is verily my self*

ಭಕ್ತಿಯನ್ನು ಪರಮಾತ್ಮನೆಡೆ ತಂದೆ-ಮಕ್ಕಳ ಭಾವದಿಂದ ಮೂರು ತರಗತಿಯಲ್ಲಿ ಕಾಣಬಹುದು ಪರಮಾತ್ಮನೆಡೆ ಹೆಚ್ಚೆಚ್ಚು ಸಮೀಪಿಸಿದಂತೆಲ್ಲ ಹೆಚ್ಚೆಚ್ಚು ಉಚ್ಚ ರೀತಿಯು ಪರಸ್ಪರ ಸಂಬಂಧವು ಸಮೀಪಿಸುತ್ತ ಹೋಗಿ ಆತ್ಮನಿವೇದನವೂ ಕೂಡ ಆಗುವದು ಅದು ಹೀಗೆ:—

(ಅ) ತಂದೆಯ ಮನೆಯಲ್ಲಿ ಇರುವ ಮಗನು ತಂದೆಗೆ ವಿಧೇಯನಾಗಿ ತಂದೆಯ ಆಜ್ಞೆಗಳನ್ನು ಪರಿಪೂರ್ಣಗೊಳಿಸುವನು;

---

○ ಕಲ್ಯಾಣ ಕಲ್ಪತರು—ಗೋರಖಪುರ-೧೨ನೇ ವ್ಹಾಲೂಮು—೫ ನೇ ಸಂಚಿಕೆ-ಡಿಸೆಂಬರ ೧೯೫೩-ಪುಟ ೪೦೫

(ಬ) ಮುಂದೆ ಮಗನು ದೊಡ್ಡವನಾದಂತೆ ತಂದೆಯು ಮನೆತನದ ಕಾರ್ಯ ನಿರ್ವಹಣೆಯನ್ನು ಹೊರಲು ಮಗನಿಗೆ ಒಪ್ಪಿಸುವನು. ಆಗ್ಗೆ ಮಗನೂ ಕೂಡ, ತಾನು ಮಾಡಿದ ಕಾರ್ಯಗಳನ್ನು ತಂದೆಯು ಅಲ್ಲಗಳೆಯಲಾರನು—ಅವಕ್ಕೆಲ್ಲ ತಂದೆಯು ಒಪ್ಪುವನಲ್ಲದೆ ಆ ಎಲ್ಲ ಕಾರ್ಯಗಳು ತನ್ನವೇ ಎಂದು ಒಪ್ಪಿಕೊಳ್ಳುವನು ಎಂದು ಮನಗಂಡು ನಡೆಯುವನು.

(ಕ) ಆ ಮಗನು ಇನ್ನಿಷ್ಟು ದೊಡ್ಡವನಾದಮೇಲೆ ಮಗನ ಕತೃತ್ವ ಶಕ್ತಿಯ ಮೇಲೆ ತಂದೆಯ ವಿಶ್ವಾಸ ಹುಟ್ಟಿ ತಂದೆಯು ತನ್ನ ಎಲ್ಲ ಕಾರ್ಯಗಳನ್ನು ಮಗನಿಗೆ ಒಪ್ಪಿಸಿಬಿಡುವನು ಆಗ್ಗೆ ಮಗನೇ ಮನೆಯ ಮುಖ್ಯಸ್ಥನಾಗುವನು ಅಂಥ ಎಷ್ಟೋ ದೃಶ್ಯಗಳು ನಮ್ಮ ಕಣ್ಣೆದುರಿಗೆ ಬಂದಿಲ್ಲವೇ?

ಹೀಗೆ:—

(ಅ) ಮಗನು ಆಜ್ಞಾಧಾರಿಕದ ಮೊದಲನೇಯ ಮೆಟ್ಟಿಲದಲ್ಲಿ ಇದ್ದಾಗ 'ನಾನು ಅವನವ'—'ನಾನು ಪರಮಾತ್ಮನೆಂಬ ತಂದೆಯ ಮಗ'—ಎಂದು ಗಣಿಸಿ ಕೊಳ್ಳುವನು ಇದು 'ತಸ್ಯ ಎವ ಅಹಂ' ಭಾವ.

(ಬ) ಎರಡನೇ ಮೆಟ್ಟಿಲದಲ್ಲಿ ಅಂದರೆ ತಾನು ಕಾರ್ಯ ನಿರ್ವಹಿಸುತ್ತಿದ್ದರೂ ತಾನು ಬೇರೆ-ತಂದೆ ಬೇರೆ ತಂದೆಯೇ ಮನೆಯ ಯಜಮಾನನು ಎಂದು ಗಣಿಸುವಾಗ್ಗೆ, 'ಅವನು ನನ್ನವ'—'ಪರಮಾತ್ಮನಾದ ತಂದೆಯು ನನ್ನವ'—ಎಂದು ಹೇಳುವನು ಇದು 'ಮಮ ಎವ ಅಸೌ' ಭಾವ.

(ಕ) ಮುಂದೆ ಮಗನು ಬೆಳೆದು ಮತ್ತಿಷ್ಟು ಬುದ್ಧಿವಂತನಾದ ಮೇಲೆ ರೂಢಿಯಲ್ಲಿ ಕಂಡುಬಂದ ಭೇದಭಾವವು (ದ್ವೈತ) ಅಳಿದು, ಮಗನು ಸಂಪೂರ್ಣ ಯಜಮಾನತ್ವವನ್ನು ಹೊಂದಿರುವನು ಆಗ್ಗೆ ಯೋಗ್ಯವಾಗಿಯೇ ಅವನು "ನಾನು ಯಜಮಾನ"—'ಆ ತಂದೆಯೇ ನಾನು'—ಎಂದು ಗಣಿಸಿಕೊಳ್ಳುವನು, ಇದು 'ಸ ಎವ ಅಹಂ' ಭಾವ.

ಈ ಭಾವಗಳನ್ನು ಭಕ್ತಿ ಸಾಮ್ರಾಜ್ಯದತ್ತ ಹೋಲಿಸಿದಲ್ಲಿ (ಅ) ಮೊದಲನೇಯ ಮೆಟ್ಟಿಲಾದ ಆಜ್ಞಾಧಾರಕ ಭಾವವು ಕರ್ಮಯೋಗವೆಂದೂ, (ಬ) ಎರಡನೆಯ ಮೆಟ್ಟಿಲಾದ 'ತಂದೆಯು ನನ್ನವ' ಎನ್ನುವ ಭಾವವು ಭಕ್ತಿಯೋಗವೆಂದೂ, (ಕ) ಮೂರನೆಯ ಮೆಟ್ಟಿಲಾದ ದ್ವೈತ-ವಳಿದ ಭಾವವು ಜ್ಞಾನಯೋಗವೆಂದೂ ಹೇಳಬಹುದು ಇದು ಶಾಸ್ತ್ರದ ತಿರುಳು

ಶ್ರೀ ಬಸವೇಶ್ವರರು ತಮ್ಮ ಭಕ್ತಿ ಗಂಗೆಯು ಪ್ರವಾಹದಲ್ಲಿ ಶಾಸ್ತ್ರದ ಇದೇ ಆಳವಾದ ತಿರುಳನ್ನು ಮೇಲೆ ಹೇಳಿದ ತಮ್ಮ ವಚನದಲ್ಲಿ ಸರಳ ಶಬ್ದಗಳಿಂದ ಸುಂದರ ಶೈಲಿಯಲ್ಲಿ ಎಂಟುನೂರು ವರ್ಷಗಳ ಪೂರ್ವದಲ್ಲಿಯೇ ತೋರಿಸುವರು ಎಂದು ಹೇಳಬಹುದಲ್ಲವೇ?

[ **ಸೂಚನೆ:**— ಈ ವಿವೇಚನೆಯು ಇನ್ನೂ ಸಂಪೂರ್ಣವಾಗಿ ಮುಗಿದಿಲ್ಲ ನಮ್ಮ ಗುರುಗಳಾದ ಶ್ರೀ ಮೃತ್ಯುಂಜಯ ಸ್ವಾಮಿಗಳವರ ಅಮೃತವಾಣಿಯಿಂದ ಹೆಚ್ಚಾಗಿ ಕೇಳಿ ತಿಳಿದು ಕೊಳ್ಳಬಹುದು. ]



## ಬೆದರ ಬೇಡ

ಲೇ: ಶ್ರೀ ಆನಂದ ಕವಿಗಳು ಕುರುಗುಂದ

( ರಾಗ-ಭೈರವಿ ತಾಳ-ದಾದರಾ )

ಬೆದರ ಬೇಡ! ಮನವೆ ನೀನು
ಎದುಳದಿಂದ ಪರಶಿವನು ಪೊರೆಯುತಿರುವನು ॥
( ಕಾಯುತಿರುವನು ॥ಪಲ್ಲ॥

೧

ಧೀರನಾಗಿ ಮುಂದೆನಡೆ! ಕಾರ್ಯ ಸಿದ್ಧಿಯಾಗುತಿಹುದು
ಪಾರಮಾರ್ಥ ಮಾರ್ಗವಿಡಿದು ಚಾರು ಚರಿತನಾಗುಮನವೆ!

೨

ಕರುಣೆಯಿಂದೆ ಬಸವದೇವ! ಶರಣ ಜನರ ಕಾವು ತಿರಲು
ಬರಿದೆ ನೀನು ಚಿಂತಿವೇಕೆ? ಬಾಳ ಭ್ರಮೆಯುಲಿ

೩

ವಸುಧಿಗೀಶ ಬಸವದೇವ! ವಿಶ್ವವನ್ನೆ ಕಾಯುತಿರಲು
ನಿರುತನೀನು ಕೊರಗುವೇಕೆ? ಬಸವನನ್ನೆ ನಂಬುಮನವೆ!



# ಕಾರ್ಗೀಮನೆ.

( ಲೇಖಕರು:— ಶ್ರೀ ಈಶ್ವರಪ್ಪ ಉಮರಾಣಿ, ಮು.-ಬೈಲಹೊಂಗಲ. )

ಬೆಳಗಾವ ಜಿಲ್ಹಾ, ಬೈಲಹೊಂಗಲ ತಾಲೂಕಿನ ಮುರಗೋಡ ಗ್ರಾಮದಿಂದ ಉತ್ತರಕ್ಕೆ ಅಜಮಾಸ ಎರಡು ಫರ್ಲಾಂಗದ ಮೇಲೆ "ಕೆಂಗೆರಿ" ಎಂದು ಕರೆಯಲ್ಪಡುವ ಹಿಂದು ಕೆರೆ ಇದೆ. ಅದರ ಕ್ಷೇತ್ರವು ಅಜಮಾಸು ಎಂಟು ಎಕರೆ ಆಗಬಹುದು. ಅದರ ಸುತ್ತಲೂ ದೊಡ್ಡ ಒಡ್ಡು ಇದೆ. ಈ ಕೆರೆಯ ಪಶ್ಚಿಮ ದಂಡೆಯ ಸಮೀಪಕ್ಕೆ ದಕ್ಷಿಣಾಭಿಮುಖವಾಗಿ ಒಂದು 'ಬಸವನ ಗುಡಿ' ಇದೆ. ಕಲ್ಲಿನ ಕಂಬಗಳು ಮತ್ತು ಕಲ್ಲಿನ ತೊಲಿಗಳು ಇದ್ದ ಮೂರು ಅಂಕಣದ ಶಿಲಾಮಂಟಪವು ಅದಕ್ಕೆ ಹತ್ತಿ ಗರ್ಭಗುಡಿ ಇದೆ. ಇದಾದರೂ ಪೂರ್ಣ ಕಲ್ಲಿನ ಕಟ್ಟಡವು. ಈ ಗುಡಿಯು ಅಜಮಾಸ ಕಾಲ ಫೂಟ ಎತ್ತರ ಇದ್ದು, ಗರ್ಭಗುಡಿಯ ಮೇಲೆ ಗೋಪುರ, ಶಿಖರ ಮುಂತಾದವು ಏನೂ ಇಲ್ಲ. ಶಿಲಾಮಂಟಪದ ಮೇಲೆ ನಾಲ್ಕೂ ಮೂಲಿಗೆ ನಾಲ್ಕು ಬಸವನ ಮೂರ್ತಿಗಳಿವೆ.

ಈ ಗುಡಿಯಲ್ಲಿ ಹಿಂದು ವಿಚಿತ್ರಮೂರ್ತಿಯು ಇದೆ. ಅದರ ವರ್ಣನೆ ಈ ಕೆಳಗಿನಂತೆ ಇದೆ. ಏನಂದರೆ:—

ಕಲ್ಲಿನ ಬಸವನ ಒಂದು ಮೂರ್ತಿಯು ನಿಂತಿದೆ. ಆ ಮೂರ್ತಿಯ ಮುಖವು ಭೂಮಿಗೆ ಹತ್ತುವಷ್ಟು ಬಾಗಿದೆ. ಆ ಬಸವನ ಬೆನ್ನಮೇಲೆ ಒಬ್ಬ ಪುರುಷನ ಮೂರ್ತಿಯು ಕುಳಿತಿದೆ. ಅವನು ತನ್ನ ಎದೆಗೆ ತನ್ನ ಎರಡು ಕೈ ಕಟ್ಟಿಕೊಂಡು ಮೇಲಕ್ಕೆ ಆಕಾಶದ ಕಡೆಗೆ ಮುಖಮಾಡಿ ಕುಳಿತಿದ್ದಾನೆ. ಆಕಾಶವನ್ನು ದಿಟ್ಟಿಸಿ ನೋಡುತ್ತಿದ್ದಾನೆ.

ಈ ಬಸವನ ಮೂರ್ತಿಯು ಅರ್ಧ ಕುತ್ತಿಗೆ ವರೆಗೆ ಈಗ ಒಡೆದಿರುತ್ತದೆ. ಈ ಮೂರ್ತಿಯು ಅಜಮಾಸ ೯ ಇಂಚು ಎತ್ತರವಿದ್ದು, ೧ ಫೂಟು ಉದ್ದ ಇದೆ. ಈ ಅಳತೆಗೆ ಅನುಸರಿಸಿ ಮೂರ್ತಿಯು ದಪ್ಪ ದುಂಡ ಇದೆ. ಮೇಲೆ ಕೂತ ಮನುಷ್ಯನ ಮೂರ್ತಿಯು ಅಜಮಾಸ ೪ ಇಂಚ ಎತ್ತರ ಇದ್ದು, ಇಷ್ಟು ಸಣ್ಣದಿದ್ದರೂ ಸ್ಪಷ್ಟವಿದೆ.

ಈ ಕೆಂಗೆರೆಯಲ್ಲಿ ಉಳವಿಯ ಕಡೆಗೆ ಹೊರಟ ಶರಣರ ದಂಡು, ತಮ್ಮ ರಕ್ತಮಯ ಶರೀರಗಳನ್ನು ಮತ್ತು ತಮ್ಮ ಆಯುಧಗಳನ್ನು ತೊಳೆ

ದದ್ದರಿಂದ ಈ ಕೆರೆಯ ನೀರು ಕೆಂಪು ಇವೆ ಎಂದು ಹೇಳುತ್ತಾರೆ. ಅಷ್ಟ
ಕ್ಕಾಗಿಯೇ ಕೆಂಪುಕೆರೆ-ಕೆಂಗೆರೆ ಎಂಬ ಹೆಸರು ಬಂದಿದೆಂದು ಹೇಳುತ್ತಾರೆ.

ಈ ಕೆಂಗೆರೆಯಿಂದ ದಕ್ಷಿಣಕ್ಕೆ ಅಜಮಾಸ ೩-೪ ಫರ್ಲಾಂಗಗಳ ಮೇಲೆ
ಈ ಮುರಗೋಡ ಊರ ಪಶ್ಚಿಮಕ್ಕೆ ಊರಿಗೆ ಹತ್ತಿ, ಒಂದು ಬೈಲ
ಬಸವಣ್ಣನ ಕಟ್ಟೆ ಇದೆ. ಆ ಕಟ್ಟೆ, ಈಗ ಅಜಮಾಸ ೩೦-೩೨ ಫೂಟು
ಉದ್ದ ಮತ್ತು ೨೪-೨೫ ಫೂಟ ಅಗಲು ಮತ್ತು ೪ ಫೂಟ ಎತ್ತ ಇವೆ.
ಅದರ ಮೇಲೆ ಬಸವನ ಸುಂದರ ಮೂರ್ತಿಯು ಇದೆ. ಅದರ ಮುಂದೆ
ಒಂದು ಸುಂದರವಾದ ಶಿವಲಿಂಗವಿದೆ. ಅದೂ ಸಾಧಾರಣ ದೊಡ್ಡದೇ
ಇದೆ. ಈ ಬಸವನ ಮೇಲೆ ಗುಡಿ-ಗೋಪುರ ಮುಂತಾದವು ಏನೂ ಇರದೆ
ಇರುವದರಿಂದ ಇದಕ್ಕೆ ಬೈಲ ಬಸವಣ್ಣ ಎಂಬ ಹೆಸರಿದೆ. ಮೊದಲು
ಆ ಕಾಲದಲ್ಲಿ ಇದು ಬಹಳ ದೊಡ್ಡ ಬೈಲು ಇದ್ದು. ಇಲ್ಲಿ ಉಳುವೆಯ
ಕಡೆಗೆ ಹೊರಟ ಶರಣ ಸಮೂಹವು ಈ ಬೈಲಿನಲ್ಲಿ ಠಾಳ್ಯ (ಬೀಡು)
ಬಿಟ್ಟಂತೆ ಎನಿಸುತ್ತದೆ. ಈ ಬೈಲ ಬಸವನ ಮೂರ್ತಿ ಎಡಗಾಲ ಮುಂದೆ
ಮಾಡಿ ಕುಳಿತಿದೆ.

ಇನ್ನು ಈ ಬೈಲ ಬಸವನ ಕಟ್ಟೆಯಿಂದ ಪೂರ್ವಕ್ಕೆ (ಮುರಗೋಡ)
ಊರಲ್ಲಿ ಹಾಯ್ದು, ಅಜಮಾಸ ನಾಲ್ಕು ಫರ್ಲಾಂಗ ಹೋದರೆ ಅಲ್ಲಿ
ಊರ ಹೊರಗೆ ಒಂದು ಉಳವಿಯ ಬಾಗಿಲು ಎಂದು ಒಂದು ಕಲ್ಲಿನ
ಬಾಗಿಲು ಇದೆ. ಸೊಂಟಮಟ ಎತ್ತರವಾದ ಒಂದು ಕಟ್ಟೆ, ಅಜಮಾಸ
೮ ಫೂಟ ಉದ್ದ ಮತ್ತು ೬ ಫೂಟ ಅಗಲು ಇದ್ದದ್ದು, ಆ ಕಟ್ಟೆಯ
ಮೇಲೆ ಅಜಮಾಸು ೫ ಫೂಟ ಎತ್ತರ ಮತ್ತು ೪ ಫೂಟ ಅಗಲುಳ್ಳ
ಕಲ್ಲಿನ ಬಾಗಿಲು. ಆ ಬಾಗಿಲದ ಎರಡೂ ತೋಳಿನ ಕಲ್ಲಗಂಬಗಳ
ಮೇಲೆ ಅಡ್ಡಾಗಿ ಒಂದು ಕಲ್ಲು ಇಟ್ಟು, ಬಾಗಿಲು ಮಾಡಿದ್ದಾರೆ. ಆ ಎರಡೂ
ತೋಳುಗಂಬಗಳ ಮಧ್ಯದಲ್ಲಿ ಒಂದು ಕಲ್ಲು, ಆ ಕಲ್ಲಿನ ಮೇಲೆ ಎರಡು
ಪಾದಗಳು, ಅವು ಕಲ್ಯಾಣದತ್ತ ಬೆರಳು ಮಾಡಿ (ಮುಖವಾಗಿ) ಇವೆ.
ಈ ಪಾದಗಳಿಗೆ ಜನರು ಈಗ್ಯೂ ಅಲ್ಲಿಂದ ಹಾಯ್ದು ಹೋಗುವಾಗ್ಗೆ,
ಬರುವಾಗ್ಗೆ ಪೂಜ್ಯಭಾವನೆಯಿಂದ ನಮಿಸುತ್ತಾರೆ.

ಈ ಬಾಗಿಲಕ್ಕೆ ಸರಿಯಾಗಿ ದಕ್ಷಿಣಕ್ಕೆ ಅಜಮಾಸ ಒಂದು ೫೦
ಯಾರ್ಡ ಅಂತರದ ಮೇಲೆ ಒಂದು ಬಸವನ ಗುಡಿ ಇದೆ. ಆ ಗುಡಿ
ಯಲ್ಲಿದ್ದ ಬಸವಣ್ಣನಿಗೆ "ಕೂಗೂ" ಬಸವಣ್ಣ ಎಂದು ಅನ್ನುತ್ತಾರೆ.

ವೈರಿಗಳ ದಂಡು ಬರುವದನ್ನು ತನ್ನ ಜನಸ್ತೋಮಕ್ಕೆ ತಿಳಿಸುವ ಕುರಿತು ಇವನು ಕೂಗಿದ್ದರಿಂದ ಇವನಿಗೆ ಈ ಹೆಸರು ಬಂದಿತು ಎಂದು ಹೇಳುತ್ತಾರೆ. ಈ ಬಸವನ ಮೂರ್ತಿಯು ಆ ಬೈಲಬಸವನ ಮೂರ್ತಿಗಿಂತ ಸ್ವಲ್ಪ ದೊಡ್ಡ ಪ್ರಮಾಣದಲ್ಲಿ ಇದೆ. ಅಜಮಾಸ ೩ ಫೂಟ ಎತ್ತರವಿದ್ದು, ೫ ಫೂಟು ಉದ್ದ ಇದೆ. ಎಡಗಾಲ ಮುಂದೆ ಮಾಡಿ ಕುಳಿತಿದೆ. ಗುಡಿಯ ಬಾಗಿಲು ಪಶ್ಚಿಮಕ್ಕೆ ಇದ್ದು, ಒಳಗಿನ ಮೂರ್ತಿಯ ಮುಖವು ಮಾತ್ರ ಉತ್ತರಕ್ಕೆ ಚನ್ನಾಗಿ ಹೊರಳಿದೆ. ಈ ಮೂರ್ತಿಯ ಎರಡೂ ಕಿವಿಗಳನ್ನು ಮತ್ತು ಕುತ್ತಿಗೆ ಬುಡದಲ್ಲಿದ್ದ ಗಂಗೆದೊಗಲನ್ನು ಈಚೆಗೆ ನಾಶಗೊಳಿಸಿದ್ದಾರೆ. ಕಿವಿ ಇರುವ ಸ್ಥಾನದಲ್ಲಿ ಎರಡು ಕಡೆಗೆ ಒಂದೊಂದು ತೂತು ಮಾತ್ರ ಕಾಣುತ್ತದೆ. ಇದಕ್ಕೆ ಗರ್ಭಗುಡಿ ಒಂದೇ ಇದ್ದು, ಅದಕ್ಕೆ ಗೋಪುರ-ಕಳಸ ಮುಂತಾದವು ಇಲ್ಲ. ಗಚ್ಚು ಕಲ್ಲಿಗಿನ ಶಿಸ್ತಾಗಿ ಕಟ್ಟಿದ ಇಮಾರತಿಯು ಇದೆ. ಇಲ್ಲಿರುವ ಬಸವಗೆ ಪೂಜೆ ದಿನಾಲು ಆಗುತ್ತಿದೆ.

ಇಲ್ಲಿಂದ ಮುಂದೆ ಗುಡ್ಡದದಾರಿಯಿಂದ ಹಾಯ್ದು ಶರಣರ ತಂಡು ಕಾರೀಮನೆ ಊರ ಕಡೆಗೆ ಹೋಗಿರಬೇಕೆಂದು ಊಹಿಸಬಹುದು. ಯಾಕಂದರೆ ಕಾರೀಮನೆ ಇನ್ನೂ ಎರಡು ಮೂರು ಫರ್ಲಾಂಗ ಇರುವಾಗ ಅಲ್ಲಿ ಗುಡ್ಡದ ಸಮೀಪ ತಿಳಿ ಸ್ಥಳದಲ್ಲಿ ಮೇಲೆ ವರ್ಣಿಸಿದಂಥ ಒಂದು ಕಲ್ಲಿನ ಬಾಗಿಲು ಇದೆ. ಅದೂ ಉಳಿವೆಯ ಬಾಗಿಲ ಇರಲಿಕ್ಕೆಬೇಕು. ಈಗ ಅದಕ್ಕೆ ಪಾದಗಟ್ಟಿ ಎಂದು ಅನ್ನುತ್ತಾರೆ. ಆದರೆ ಪಾದಗಟ್ಟಿ ಎನ್ನಬೇಕಾದರೆ, ಸಮೀಪದಲ್ಲಿ ಯಾವ ಗುಡಿಯೂ ಇಲ್ಲ. (ಅರ್ಧ ಮೈಲಿನ ಆಚೆಗೆ ಗುಡ್ಡದಲ್ಲಿ ಒಂದು ಮಲ್ಲಯ್ಯನ ಗುಡಿ ಅದೆ. ಅದರ ಪಾದಗಟ್ಟಿ ಅದರ ಸಮೀಪಕ್ಕೆ ಇದೆ.) ಇಲ್ಲಿಯೂ ಪಾದ ಇರುವದರಿಂದ ಪಾದಗಟ್ಟಿ ಎಂದು ಜನರು ಅನ್ನುತ್ತಿರಲಿಕ್ಕೆಬೇಕೆಂದು ತರ್ಕಿಸಬಹುದು.

ಈ 'ಉಳಿವೆಯ ಬಾಗಿಲದಿಂದ ೨-೨॥ ಫರ್ಲಂಗದ ಅಂತರದಲ್ಲಿ ಕಾರಿಮನೆ ಊರು ಇದೆ. ಈ ಊರ ಹತ್ತಿರವೇ ಹೊರಗೆ ಗುಡ್ಡದ ಅಡಿಯಲ್ಲಿ ಒಂದು "ಗದ್ದುಗಿ" ಕಟ್ಟಿ ಇದೆ. ಈ ಕಟ್ಟಿಯು ಕಾರಿಮನೆ ಊರಿನ ಪೂರ್ವಕ್ಕೆ ಆಗುತ್ತಿದೆ. ಈ ಗದ್ದುಗೆಯು ಕಲ್ಲಮಣ್ಣಿನಿಂದ ಕಟ್ಟಿದ್ದು ವಿಶಾಲವಾಗಿದೆ. ಇದು ಅಜಮಾಸ ೧೮ ಫೂಟ ಉದ್ದ ೧೫ ಫೂಟ ಅಗಲವಿದ್ದು, ಎರಡು ಫೂಟ ಎತ್ತರವಿದೆ. ಈ ಗದ್ದಿಗೆಯ ಕಟ್ಟಿಯನ್ನು

ಈ ಊರವರು ಆಗಾಗ್ಗೆ ದುರಸ್ತಿಮಾಡುತ್ತ ಬಂದಿದ್ದಾರೆ. ಈ ಗದ್ದುಗೆ ಸ್ಥಳದಲ್ಲಿ ಸುತ್ತಲೂ ಮೊದಲು ಮುಳಗಳ್ಳಿ ಬಹಳ ಜಡವಾಗಿ ಬೆಳೆದಿದ್ದು, ಅದು ಒಬ್ಬ ಮಹಾಪುರುಷರ ಗದ್ದುಗೆ ಸ್ಥಳ ಇದ್ದುದರಿಂದ ಇದಕ್ಕೆ "ಅಯ್ಯನವರ ಕಳ್ಳಿ" ಎಂದು ಆ ಊರವರು ಕರೆಯುತ್ತಾರೆ. ಈಗ ಕಳ್ಳಿ ಮುಂತಾದ್ದು ಏನೂ ಇರುವದಿಲ್ಲ. ಈ ಗದ್ದುಗೆಯ ಸ್ಥಳದ ಮೇಲೆ ಯಾರೂ ಪಾದರಕ್ಷೆಹಾಕಿಕೊಂಡು ಈಗಲೂ ಹತ್ತುವದಿಲ್ಲ. ಈ ಕಳ್ಳಿಯನ್ನು ಒಳ್ಳೇ "ಅಯ್ಯನವರ ಕಳ್ಳೀಜಾಗಾ" ಎಂದು ಪವಿತ್ರ ಭಾವನೆಯಿಂದ ನೋಡುತ್ತಾರೆ.

ಈ ಗದ್ದುಗೆ ಜಾಗಾದಿಂದ ದಕ್ಷಿಣಕ್ಕೆ ಒಂದು ಫರ್ಲಾಂಗದ ಮೇಲೆ ಊರಿಗೆ ಸಮೀಪಿಸಿ ಒಂದು ಬಸವನ ಗುಡಿ ಇದೆ. ಅಲ್ಲಿ ನಿತ್ಯ ಪೂಜೆ ನಡೆಯುತ್ತಿದೆ. ಊರವರು ಈ ಬಸವನ ತೇರುಮಾಡಿ ಉತ್ಸವ ಮಾಡ ಲಿಕ್ಕೆ ಹತ್ತಿ ೭—೮ ವರ್ಷಗಳಾದವು. ಸದರೀ ತೇರು ಎಲ್ಲಿಯ ವರೆಗೆ ಎಳೆಯಬೇಕು, ಯಾವ ದಿಕ್ಕಿಗೆ ಎಳೆಯಬೇಕು ಎಂಬುವದೊಂದು ಈ ಕಾರೀಮನೆಯ ಊರವರಿಗೆ ಒಂದು ಸಮಸ್ಯೆಯಾಗಿತ್ತು. ಮೊದಲವರ್ಷದ ಕೆಳಗೆ, ಗಿಣಿಯಾರ, ಹೊಸೂರ ಎಂಬ ಗ್ರಾಮದಲ್ಲಿ ಒಬ್ಬ ದೇವರ ಹೇಳು ವವನ ಕಡೆಗೆ ಈ ಊರವರು ಹೋದಾಗ್ಗೆ "ಏನ್ರೆಪಾ, ಅಲ್ಲೇ ಮಡಿವಾಳಪ್ಪನ ಗದ್ದುಗೆ ಅದೆ. ಅಲ್ಲೀ ವರೆಗೆ ನಿಮ್ಮ ತೇರ ಎಳೆಯಿರಿ" ಎಂದು ಹೇಳಿದ ನಂತೆ ಅಂದಿನಿಂದ ಈ "ಅಯ್ಯನವರ ಕಳ್ಳಿ" ಗದ್ದಿಗಿ ವರೆಗೆ ಎಳೆಯಹತ್ತಿ ದ್ದಾರೆ. ಮತ್ತು ಇದಕ್ಕೆ ಹತ್ತಿ ಒಂದು ಸಣ್ಣದಾದ ಪಾದಗಟ್ಟೆ ಮಾಡಿ ಕೊಂಡಿದ್ದಾರೆ. ಈ ಗದ್ದುಗೆ ಹತ್ತರ ಪ್ರತಿವರ್ಷ ಅನ್ನಸಂತರ್ಪಣೆ ಮಾಡು ತ್ತಾರೆ. ಈ ಸಾರೆ ಎರಡೇ ಕೊಪ್ಪರಿಗೆ ಪ್ರಸಾದ ಮಾಡಿದರೂ ಸುತ್ತಲಿನ ಮೂರು ಹಳ್ಳಿ ಜನರೆಲ್ಲ ಎರಡು ದಿವಸ ಪ್ರಸಾದ ಊಟಮಾಡಿದ್ದು, ಈ ಕಾರೀಮನೆ ಜನರಿಗೆ ಈ ಪ್ರಸಾದ ಮಹಿಮೆಯನ್ನು ನೋಡಿ ಅತಿ ಆಶ್ಚರ್ಯವಾದರೆಂದು ಹೇಳಿದರು.

ಮುರಗೋಡದಿಂದ ಈಗ ಮಾಡಿರುವ ರಸ್ತೇಯ ಗುಂಟ ಹೋದರೆ ಕಾರೀಮನೆ ಎರಡು ಮೈಲು ಆಗುತ್ತದೆ. ನಡುವೆ ರುದ್ರಪುರ ಎಂಬ ಹಳ್ಳಿ ಇದೆ. ಅದಕ್ಕೂ ಕಾರೀಮನೆಗೂ ಅರ್ಧ ಮೈಲು ಇದೆ. ರುದ್ರಾಪೂರ ದಿಂದ ದೂರದಲ್ಲಿ ಒಂದು ಬಸವನ ಗುಡಿ ಇದೆ. ಅದರಲ್ಲಿದ್ದ ಬಸವನ

ಮೂರ್ತಿ ಎಡಗಾಲ ಮುಂದೆಮಾಡಿ ಕುಳಿತಿದೆ. ಈ ಬಸವನ ಗರ್ಭಗುಡಿಯ ಮೇಲೆ ಗೋಪುರ ಇದೆ. ಗರ್ಭಗುಡಿಯಲ್ಲಿ ಪುರಾತನದ್ದು ಇದ್ದು, ಅದರ ಮುಂದೆ ಮೂರಂಕಣದು ಹೇರಿ ಚೌಕಪ್ಪೆ ಈಚೆಗೆ ಕಟ್ಟಿಸಿದ್ದಾರೆ.

ಮೇಲೆ ವರ್ಣಿಸಿದ ಬಸವಣ್ಣನ ಮೂರ್ತಿಗಳೆಲ್ಲವೂ ಎಡಪಾದ ಮುಂದೆ ಮಾಡಿ ಕುಳಿತಿದ್ದು ಸ್ವಲ್ಪ ಗಮನಾರ್ಹವಾದ ಸಂಗತಿ ಇದೆ. ಯಾಕಂದರೆ ಬಲಪಾದ ಮುಂದೆಮಾಡಿ ಕುಳಿತ ಬಸವಣ್ಣನ ಮೂರ್ತಿಗಳು ಶ್ರೀ ಬಸವೇಶ್ವರ ಕುರುಹಾಗಿಯೂ ಎಡಪಾದ ಮುಂದೆಮಾಡಿ ಕುಳಿತ ಮೂರ್ತಿಗಳು ಚನ್ನಬಸವನ ಕುರುಹಾಗಿಯೂ ಇರುತ್ತವೆಂದು ಈ ಭಾಗದ ಹಿರಿಯರು ಹೇಳುವ ಬಳಿಕೆಯು ಮಾತಾಗಿವೆ. ಇದರ ಮೇಲಿಂದ ಮತ್ತು ಮೇಲೆ ವರ್ಣಿಸಿದ ಉಳಿದ ಸಂಗತಿಗಳ ಮೇಲಿಂದ ನೋಡುತ್ತಿರಲಾಗಿ, ಇವೆಲ್ಲ ಗುಡಿಗಳಿಗೆ ಬಸವನ ಗುಡಿ ಅಂತ ಅನ್ನುತ್ತಿದ್ದರೂ ಇವು ಚನ್ನಬಸವಣ್ಣನವರು ಇದೇ ಮಾರ್ಗವಾಗಿ ಉಳವಿಗೆ ಹೋದ ಬಗ್ಗೆ ಸೂಚಿಸುವ ನೆನಹಿನ ಗುರುತು ಆಗಿರಲುಬೇಕು.

ಮೇಲೆ ೩ನೇ ಪ್ಯಾರಾದಲ್ಲಿ ಉತ್ತರಾರ್ಧದಲ್ಲಿ ವಿವರಿಸಿದ "ಕೂಗೂ" ಬಸವನ ಗುಡಿಯು ಸ್ಥಾನದಿಂದ ಪೂರ್ವ ದಕ್ಷಿಣ ಮೂಲೆ ದಿಕ್ಕಿನಗುಂಟ ಗುಡ್ಡದ ದಾರಿಯಿಂದ ಶರಣರ ತಂಡವು ಮುಂದೆ ಸಾಗಿ, ಅಜಮಾಸು ಎರಡು ಮೈಲು ಹೋದಬಳಿಕ ಅಲ್ಲಿ ಕಾರೀಮನೆ ಗ್ರಾಮದ ಸಮೀಪದ ಗುಡ್ಡದ ಪ್ರದೇಶದಲ್ಲಿ, ಪುನಃ ಬೆನ್ನಟ್ಟಬಂದಿದ್ದ ವೈರಿಗಳ ಕೂಡ ಯುದ್ಧ ನಡೆದಿರಬೇಕೆಂದೂ, ಅದರಲ್ಲಿ ಮಡಿವಾಳ ಮಾಚಯ್ಯನವರು ಲಿಂಗೈಕ್ಯರಾಗಿರಬೇಕೆಂದೂ ಆ ಬಳಿಕ ಅವರನ್ನು ಈ ಕಾರೀಮನೆಯ "ಅಯ್ಯನವರ ಕಳ್ಳಿ" ಎಂದು ಕರೆಯಲ್ಪಡುವ ಸ್ಥಳದಲ್ಲಿ ಸಮಾಧಿಗೆ ಕಳಿಸಿರಬೇಕೆಂದೂ ಊಹಿಸಲು, ಅದೇಕೆ? ತಿಳಿಯಲು ಅಡ್ಡಿ ಇಲ್ಲ.

ಮುರಗೋಡ ಊರಿಂದ ಪ್ರಾರಂಭ ಆಗಿ ಬಹಳ ದೂರದ ವರೆಗೂ ಒಂದು ದೊಡ್ಡ "ಹಳವು" ಅಂದರೆ ದೊಡ್ಡ ಕಾಡಾರಣ್ಯವು ಈ ಮೊದಲು ಇಲ್ಲಿ ಇತ್ತೆಂದು ಈ ಮುರಗೋಡ ಊರವರು ತಮ್ಮ ಹಿರಿಯರ ಮುಖಾಂತರ ತಲೆತಲಾಂತರ ಕೇಳುತ್ತ ಬಂದ ಸಂಗತಿಯನ್ನು ಇಂದಿಗೂ ಹೇಳುತ್ತಾರೆ. ಮೇಲೆ ೩ನೇ ಪ್ಯಾರಾದ ಪೂರ್ವಾರ್ಧದಲ್ಲಿ ವರ್ಣಿಸಿದ ಕಲ್ಲಿನ "ಉಳವಿಯ ಬಾಗಿಲು" ಸೂಚಿಸುವದೇನಂದರೆ, ಉಳವಿಯ ಅರಣ್ಯದಂತೆ ಒಂದು ಮಹಾ

ಆರಣ್ಯವು ಇಲ್ಲಿಂದಲೇ ಪ್ರಾರಂಭವಾಯಿತೋ ಏನೋ ಎಂಬುವ ತರ್ಕವು
ಈಗ ಮುರಗೋಡ ಹಿರಿಯರು ಹೇಳುವ "ಹಳುವ"ದ ಮಾತನ್ನು ಪುಷ್ಟೀ
ಕರಿಸುತ್ತದೆ.

ಶರಣರ ತಂಡವು ಮುರಗೋಡ, ಕಾರೀಮನೆ, ಮೂಗಬಸವ
ಮುಂತಾದ ಊರಗಳ ಮೇಲಿಂದ ಹಾಯ್ದು, ಉಳವಿಯ ಕಡೆಗೆ ಹೋಗಿದ್ದು
ಈಗ ತಿಳಿದುಬಂದದ್ದರಿಂದ, ಈ ಕಲ್ಲಿನ "ಉಳವಿ ಬಾಗಿಲು" ಇದೇ ಮೊದ
ಲನೆಯದು ಎಂದು ಮುರಗೋಡದವರು ಹೇಳುತ್ತಿರುವದು ನಿಜವೆಂದು
ತೋರುತ್ತದೆ. ಯಾಕಂದರೆ ಇಂಥ ಬಾಗಿಲುಗಳು ಅಥಣಿ, ಗೋಕಾಕ,
ಮುಂತಾದ ಮಾರ್ಗಗಳಲ್ಲಿ ಅಲ್ಲಿಯೂ ಇದ್ದ ಬಗ್ಗೆ ಇನ್ನೂ ವರೆಗೆ ಶೋಧ
ವಾಗಿಲ್ಲ. ಆದರೆ ಮುರಗೋಡದಿಂದ ಪೂರ್ವ ದಕ್ಷಿಣ ದಿಕ್ಕುಗಳ ಕಡೆಗೆ
ಹೋದಹೋದಂತೆ, ಅಲ್ಲಲ್ಲಿಗೆ ಇಂಥ ಬಾಗಿಲುಗಳು ಮಹಗಾಂವ ಅಡವಿಯ
ವರೆಗೆ ಸಹ ಇದ್ದದ್ದು ನೋಡಿದವರೊಬ್ಬರು ಮುರಗೋಡದಲ್ಲಿ ನನಗೆ
ಹೇಳಿದರು. ಇವೆಲ್ಲವು ಶಿವಶರಣರ ಸ್ಥಾನಗಳೆಂದು ಊಹಿಸಬಹುದು.

# ನಡೆ ಮತ್ತು ನುಡಿ

( ಲೇಖಕರು:- ಶ್ರೀ ಬಿ. ವ್ಹಿ. ಶೆಟ್ಟಿ ಮು. ಕಾದರವಳ್ಳಿ. )

ಜಗತ್ತಿನಲ್ಲಿ ಪ್ರತಿಯೊಬ್ಬ ಮಾನವನಿಗೆ ಕೀರ್ತಿ ಪಡೆಯಬೇಕೆಂಬ ಆಶೆ ಇರುತ್ತದೆ. ಆದರೆ ಅದನ್ನು ಪಡೆಯುವ ವಿಧಾನಗಳನ್ನು ಮಾತ್ರ ಪ್ರತಿಯೊಬ್ಬನು ಬೇರೆ ಬೇರೆ ರೀತಿಯಿಂದ ಉಪಯೋಗಿಸುತ್ತಾನೆ. ಪ್ರಪಂಚದಲ್ಲಿ ಯಾವನಾದರೂ ತಾನು ಕೀರ್ತಿವಂತನಾಗಬೇಕಾದರೆ ಅವನು ಜನರಿಗೆ ಆದರಣೀಯನಾಗಬೇಕು. ಜನರಿಂದ ಹೊಗಳಿಸಿಕೊಳ್ಳಬೇಕೆಂಬ ಬಯಕೆ ವಿಶೇಷವಾಗಿ ಹೆಚ್ಚು ಜನರಲ್ಲಿ ಕಂಡು ಬರುವದು. ನಾಲ್ಕು ಜನರ ಬಾಯಿಯಲ್ಲಿ ತಾನಿರಬೇಕೆಂಬ ಹವ್ಯಾಸ ಮಾನವನಿಗಿದೆ. ಅಂತೆಯೇ ಆತನು ಕಾರ್ಯಗಳನ್ನು ಮಾಡುವನು. ಮೊದಲನೆಯದಾಗಿ ಹೊಟ್ಟೆ ಬಟ್ಟೆಗಳ ವ್ಯವಸ್ಥೆ ಮಾಡಿಕೊಂಡನಂತರ ಆತನು ತನ್ನ ಮಾನದ ಕಡೆಗೆ ಗಮನಕೊಡುವನು. ಇದು ಸ್ವಾಭಾವಿಕವಾಗಿ ಪ್ರಾಪಂಚಿಕರ ಸ್ವಭಾವವು.

ಪ್ರಾಪಂಚಿಕರಂತೆಯೇ ಪರಮಾರ್ಥ ಸಾಧನೆಯಲ್ಲಿದ್ದ ಸಾಧಕರಿಗೂ ಕೆಲವು ಇಚ್ಛೆಗಳಿರುವವು. ಮೊದಲನೆಯದಾಗಿ ತನ್ನನು ತಾನು ಅರಿಯುವದು ನಂತರ ಜಗದ ಜನರಿಗೆ ಆ ವಿಷಯದಲ್ಲಿ ಮುಂನಡಿಯಿಡಲು ಸಹಾಯ ಮಾಡುವದು. ಅಂದರೆ ಉಪದೇಶಮಾಡಲು ಮೊದಲು ಮಾಡುವದು ಸಧ್ಯದ ಜಗತ್ತನ್ನು ಕೂಲಂಕಷ ದೃಷ್ಟಿಯಿಂದ ಅವಲೋಕಿಸಿದಲ್ಲಿ ಉಪದೇಶಕರು ಹೆಚ್ಚುತಲಿರುವರು. ಉಪದೇಶಕರು ತಮ್ಮ ಉಪದೇಶವನ್ನು ಹೊಟ್ಟೆ ಹೊರೆದುಕೊಳ್ಳುವ ಸಾಧನವನ್ನಾಗಿ ಮಾಡಿಕೊಂಡಿದ್ದಾರೆ. ಎಲ್ಲಿ ನೋಡಿದಲ್ಲಿ ಇಂಥವರ ಸಂಖ್ಯೆಯು ಇಮ್ಮಡಿಯಾಗುತ್ತಿದೆ. ಉಪದೇಶದ ಹುಚ್ಚು ಜನಸಾಮಾನ್ಯರಿಗೂ ತಟ್ಟದೆ ಹೋಗಿಲ್ಲ ಇದು ಕಾಷ್ಟ ಮಹಿಮೆಯ ಪರಿಣಾಮವಲ್ಲವೇ!

ಹನ್ನೆರಡನೆಯ ಶತಮಾನದಲ್ಲಿ ಬಸವಣ್ಣನವರು ಅತ್ಯಂತ ಮಹತ್ವದ ಅನೇಕ ಕಾರ್ಯಗಳನ್ನು ಮಾಡಿರುವದು ಸರ್ವರಿಗೂ ವಿಧಿತವಾದ ಸಂಗತಿಯಾಗಿದೆ ಈಗಿನಂತೆ ಆಗ್ಗೆಯೂ ಕೂಡ ಕೇವಲ ‘ ನುಡಿಯು ’ ಹೆಚ್ಚಿನ ಪ್ರಮಾಣದಲ್ಲಿ ಬಳಕೆಯಲ್ಲಿತ್ತೆಂಬುದು ಗೋಚರಿಸುವದು. ಬಸವಣ್ಣನವರು ವೀರಶೈವ ಧರ್ಮದ ತತ್ವಗಳನ್ನು ಜನರಿಗೆ ತಿಳಿಸಲು ತಾವು ತತ್ವವೇದ್ಯರಷ್ಟು

ಕಲಿ ಹಾಕಲಿಲ್ಲ ಧಾರ್ಮಿಕ ಭಾವನೆಯನ್ನು ಜನರಲ್ಲಿ ಮೂಡಿಸಬೇಕಾದರೆ ಕೇವಲ ಧರ್ಮದ ತತ್ವಗಳನ್ನರಿತ ಪಂಡಿತರನ್ನು ಕಲಿ ಹಾಕಿ ಅವರಿಂದ ಜನ ಸಾಮಾನ್ಯರಿಗೆ ಉಪದೇಶ ಕೊಡಿಸಲಿಲ್ಲ. ಧರ್ಮದ ತತ್ವಗಳನ್ನು ತಮ್ಮ ಜೀವನದಲ್ಲಿ ಪ್ರತ್ಯಕ್ಷ ಅನುಭವಿಗಳನ್ನು ಕಲಿ ಹಾಕುತ್ತ ಹಾಕುತ್ತ ಅನುಭವ ಮಂಟಪವನ್ನೇ ರಚಿಸಿದರು.

ಒಂದು ವೇಳೆ ಬಸವಣ್ಣನವರು ಈ ರೀತಿಯಿಂದ ಕಾರ್ಯ ಕೈಕೊಳ್ಳದೆ ಕೇವಲ ಧರ್ಮ ಗ್ರಂಥಗಳನ್ನು ಪ್ರಕಟಿಸಿ ಸರ್ವರಿಗೂ ಸಿಗುವಂತೆ ಮಾಡಿದ್ದರೂ ಸಹ ಧಾರ್ಮಿಕ ಭಾವನೆ ಇಷ್ಟೊಂದು ಬೆಳೆಯುತ್ತಿರಲಿಲ್ಲ. ಬಸವಣ್ಣನವರ ಜೀವನವನ್ನೇ ನಾವು ನೋಡಿದಲ್ಲಿ ಅವರು ಸ್ವತಃ ಮಾಡಿ ಅದರಂತೆ ಜನರು ಮಾಡಲು ಅಪೇಕ್ಷೆ ಪಡುತ್ತಿದ್ದರೆಂಬುದು ನಮಗೆ ಗೋಚರಿಸದಿರದು. ಉದಾಹರಣೆಗಾಗಿ ಹೇಳಬೇಕಾದರೆ ಅವರು ಜಂಗಮನನ್ನು ಶಿವನೆಂದು ಕಾಣಬೇಕೆಂದು ಹೇಳುತ್ತಿದ್ದರು. ತಾವು ಅದನ್ನು ತಮ್ಮ ಜೀವನದಲ್ಲಿ ಹೇಗೆ ಅಳವಡಿಸಿಕೊಂಡಿದ್ದರೆಂಬುದು ನಮಗೆ ಒಂದೇ ಒಂದು ಸಂಗತಿಯಿಂದ ಗೊತ್ತಾಗುತ್ತದೆ. ಒಂದು ರಾತ್ರಿಯಲ್ಲಿ ಒಬ್ಬ ಕಳ್ಳನು-ಆತನಿಗೆ ಶಿವನೇ ಅನ್ನಿ ಇಲ್ಲವೇ ಯಾವನೇ ಅನ್ನಿ, ಆತನು ಜಂಗಮವೇಷಧಾರಿಯಾಗಿ ಬಸವಣ್ಣನವರ ಅರಮನೆಗೆ ಬಂದು ಅವರ ಪತ್ನಿಯ ಮೈಮೇಲಿನ ಒಡವೆಗಳನ್ನು ತೆಗೆದುಕೊಳ್ಳಲು ಆರಂಭಿಸಿದನು ಆಗ ಅವರ ಪತ್ನಿಯಾದ ನೀಲಾಂಬಿಕೆಯು ಬಸವಣ್ಣನವರನ್ನು ಎಚ್ಚರಿಸಲು, ಅವರು ಜಂಗಮವೇಷಧಾರಿಯನ್ನು ನೋಡಿ ಕೂಡಲಸಂಗಮ ದೇವನೆಂದೇ ಬಗೆದು ಒಡವೆಗಳನ್ನು ತೆಗೆದು ಅವನಿಗೆ ಕೊಡು ಎಂದು ತನ್ನ ಪತ್ನಿಗೆ ತಿಳಿಸುವನು. ಹೀಗೆ ಜಗತ್ತಿನಲ್ಲಿ ಮಹಾ ಮಹಾ ವಿಭೂತಿಗಳು ನುಡಿದದ್ದನ್ನು ನಡೆದು ತೋರಿಸಿದ್ದಾರೆ.

ಸಧ್ಯದ ಪರಿಸ್ಥಿತಿಯನ್ನು ನೋಡಿದರೆ ಮನಸ್ಸಿಗೆ ವ್ಯಸನವಾಗುತ್ತದೆ. ನಡೆಯಿಲ್ಲದೆ ನುಡಿಯುವವರೇ ಬಹಳ. ಉಪದೇಶಕನಲ್ಲಿ ಕೆಲವೊಂದಾದರೂ ಗುಣಗಳಿರುವದು ಅತ್ಯವಶ್ಯ, ಇಲ್ಲವಾದರೆ ಉಪದೇಶಕನ ಸ್ಥಾನವು ಅವನಿಗೆ ಅಗೌರವ ತಾನು ಮೊದಲು ಶುದ್ಧನಾಗಿ, ಆಚರಣೆಯಲ್ಲಿ ತಂದು ಎರಡನೆಯವರಿಗೆ ಶುದ್ಧವಾಗಲು ಆಚರಣೆಯಲ್ಲಿ ತರಲು ಉಪದೇಶಿಸುವದೊಳಿತು. 'ಒಳಗೆ ತೊಳೆದು ಹೊರಗೆ ಹೊಳೆಯ ಬೇಕು ಉಪದೇಶದ ಸಾರ್ಥಕತೆ ಅಲ್ಲಿ ಮೂಡುವದು ನುಡಿಯಲ್ಲಿ ಶುದ್ಧನಾಗಿ, ನಡೆಯಲ್ಲಿ ಶುದ್ಧವಿಲ್ಲದಿರ್ದೊಡೆ ಶಿವನೊಪ್ಪನು. ನಡೆಯಲ್ಲಿ ಶುದ್ಧನಿದ್ದು ಏನೂ ನುಡಿಯದಿದ್ದರೂ ಸಹ ಅವನ

ಜೀವನ ಪವಿತ್ರವಾದುದೇ. ಜಗತ್ತಿನ ಜನರ ಧಾರ್ಮಿಕ, ನೈತಿಕ ಬೆಳವಣಿಗೆಗೆ ನುಡಿಯೂ ಅವಶ್ಯವಾದುದೇನೋ ಸರಿ. ಆದರೆ ನುಡಿಯಲ್ಲಿ ಕೃತ್ರಿಮತೆ ಇರಬಾರದು. ಆ ನುಡಿಯು ಹೃದಯದಿಂದ ಹೊರಹೊಮ್ಮಬೇಕು. ಅಂದರೇನೇ ಅದು ಮಾನವರ ಮನಸ್ಸಿನ ಮೇಲೆ ಪರಿಣಾಮ ಮಾಡಬಹುದು.

ನಡೆಯಿಲ್ಲದೆ ನುಡಿಯಿಂದ ಏನೂ ಉಪಯೋಗವಿಲ್ಲ ನಡೆದು ನುಡಿಯಬೇಕಲ್ಲದೆ ಬರಿದೆ ನುಡಿಯುವ ಪ್ರಯತ್ನ ಮಾಡುವದು ಒಳಿತಲ್ಲ. ಅದರಿಂದ ಏನೂ ಪ್ರಯೋಜನವು ಇಲ್ಲ. ಭಾಷಣ ಪ್ರವೀಣನೆಂದು ನಾಲ್ಕು ಜನರಿಂದ ನಮಗೆ ಮನ್ನಣೆ ದೊರೆಯಬಹುದು. ಆದರೆ ಲೋಕದ ಜನರಿಂದ ನಮಗೆ ಮನ್ನಣೆ ದೊರೆಯಬೇಕಾಗಿಲ್ಲ. ಅದು ದೇವನಿಂದ ದೊರಯು ಬೇಕಾಗಿದೆ. ಅದಕ್ಕೆ ಆತನ ಅನುಗ್ರಹವಾಗಬೇಕಾದರೆ ಆತನ ಪ್ರೇಮಕ್ಕೆ ಪಾತ್ರನಾಗಬೇಕು. ಪ್ರೇಮಕ್ಕೆ ಪಾತ್ರನಾಗಬೇಕಾದಲ್ಲಿ ನಡೆದು ತೋರಿಸಬೇಕು. ಹೀಗೆ ಸಕಲಕ್ಕೂ ಕಾರಣವಾದ, ಮೂಲವಾದ ನಡೆಯು ಜೀವನದಲ್ಲಿ ಅಳವಡಬೇಕು. ಅದಕ್ಕೆ ಯಶಾಯಶಗಳನ್ನು ಕೊಡುವದು ದೇವನ ಕೈಯಲ್ಲಿ. ಮಾಡುವದೊಂದೇ ನಮ್ಮದು ' ಮಾಡುವ ಮಾಟದಲ್ಲಿ ತಾನಿರದಂತಿರಬೇಕು , ಎಂಬ ಶರಣರ ಸಂದೇಶವು ನಮ್ಮ ಕರ್ಮಮಯ ಜೀವನದಲ್ಲಿ ಅಳವಡಬೇಕು.

ಮೇಲೆ ವಿವರಿಸಿದ ಕೆಲಸ ಹಿರಿದಾದರೂ ಸಕಲವನ್ನೂ ಜಯಿಸಿದ ಮಾನವನ ಮತಿಗೆ ಸಿಲುಕಿ ಕಿರಿದಾಗುವದರಲ್ಲಿ ಸಂದೇಹವಿಲ್ಲ. ತನ್ನನ್ನು ತಾನು ಬಂಧಮುಕ್ತನನ್ನಾಗಿ ಮಾಡಿಕೊಂಡ ನಂತರ ಇತರರ ಬಂಧ ಮುಕ್ತನೆಗೋಸುಗ ಪ್ರಯತ್ನಮಾಡುವದು ಬಂಧಮುಕ್ತನನ್ನಾಗಿ ಮಾಡುವದೆಂದರೆ ಏನು? ಸ್ವಾತಂತ್ರ್ಯತೆ ಕೊಡುವದೋ? ಹಾಗಲ್ಲ ಪಾರತಂತ್ರ್ಯ ಅಳಿದಲ್ಲಿ ಸ್ವಾತಂತ್ರ್ಯ ನೆಲೆಗೊಳ್ಳುವದು ಸಹಜ ಆದರೆ ವ್ಯಕ್ತಿಯ ಸ್ವಾತಂತ್ರ್ಯ ಅದಕ್ಕಿಯೂ ವ್ಯಕ್ತಿಯು ಅಂತರಂಗದ ಸ್ವಾತಂತ್ರ್ಯವನ್ನೇ ಪಡೆಯಬೇಕಾಗಿದೆ ಮಾಡಬೇಕಾದ ಕಾರ್ಯಗಳು ಸಾಕಷ್ಟಿವೆಯೆಂದು ಈ ಮೊದಲೇ ಹೇಳಿದೆ ಅವುಗಳೆಲ್ಲವನ್ನೂ ಮಾಡಲು ನೂರು ವರುಷಗಳು ಸಾಲವು. ಕಾರ್ಯಗಳನ್ನೇನೋ ಮಾಡಲೇ ಬೇಕಾಗಿದೆ ದಾರಿ ತೋಚದಾಯಿತಲ್ಲ! ಯಾವ ಕಾರ್ಯವನ್ನು ಮಾಡುವದೊಳಿತಲ್ಲವೇ ?

ಹೀಗೆ ಯಾವದೊಂದನ್ನು ಮಾಡಬೇಕಾದರೂ 'ನಡೆ' ಬೇಕು. ಕೇವಲ ನುಡಿಯಿಂದ ನಿಜವನರಿಯುವದು ಅಸಾಧ್ಯವಾದ ಮಾತು. ಸಧ್ಯಕ್ಕೆ ವೀರಶೈವ ಮತವು ಎತ್ತ ಸಾಗಿದೆಯೆಂಬುದನ್ನು ವಿಚಾರಿಸಿದಲ್ಲಿ ಅದು ' ನುಡಿ '

ಯಲ್ಲಿಯೇ ವಿಶೇಷವಾಗಿ ಪರ್ಯವಸಾನ ಹೊಂದುತಲಿದೆ. ವಿಶ್ವಧರ್ಮ ವಾಗಲು ಯೋಗ್ಯವಾದ ತತ್ವಗಳು ವೀರಶೈವ ಮತದಲ್ಲಿ ಸಾಕಷ್ಟಿರುವವು ಆದರೆ ಹಳ್ಳಿಗಳಲ್ಲಿ ಈ ತತ್ವಗಳು ಜನರಿಗೆ ಎಷ್ಟರ ಮಟ್ಟಿಗೆ ಆಚರಣೆಯಲ್ಲಿ ಬಂದಿವೆ? ಇವೆಲ್ಲವುಗಳನ್ನು ಕಣ್ಣಾರೆ ಕಂಡವರು ಕೊರಗದಿರರು. ನಾಲ್ವತ್ತು ಲಕ್ಷ ಜನರುಳ್ಳ ವೀರಶೈವರ ಸ್ಥಿತಿಯು ಹೇಗಿದೆ? ಅದು ತನ್ನದೇ ಆದ ಆದರ್ಶ ದಲ್ಲಿ ಸಾಗುತ್ತಲಿದೆಯೇ? ಧಾರ್ಮಿಕ ಭಾವನೆಯು ಜನರಲ್ಲಿ ಮೂಡಿ ಬೆಳೆ ಯುತಲಿವೆಯೇ? ವೀರಶೈವ ಧರ್ಮದ ಅಂತರಂಗ, ಬಹಿರಂಗಗಳೆನಿಸಿದ ಅಷ್ಟಾವರಣ, ಪಂಚಾಚಾರ, ಷಟ್‌ಸ್ಥಲ ಸಿದ್ಧಾಂತಗಳನ್ನು ಅಭ್ಯಸಿಸಿದವರೆಷ್ಟು ಜನರು? ಕಾರ್ಯರಂಗಕ್ಕಿಳಿಸಿದ ಮಹನೀಯರದೆಷ್ಟು ಜನರಿರುವರು! ಇದೆಲ್ಲ ಪ್ರಶ್ನೆಗಳಿಗೆ ತೃಪ್ತಿಕರವಾದ ಉತ್ತರ ದೊರೆಯಲಾರದೆಂದು ಧಾರಾಳ ವಾಗಿ ಹೇಳಬಹುದು. ಇದರಿಂದ ಇನ್ನು ಕೆಲವೇ ವರುಷಗಳಲ್ಲಿ ವೀರಶೈವ ಮತವು ಗ್ರಂಥಗತವಾಗಿಯೇ ಉಳಿಯುವದೆಂಬುದು ವಿಮರ್ಶಕರಿಗೆ ಹೊಳೆಯ ದಿರಲಾರದು. ಯಾವದೇ ತತ್ವವಾಗಲಿ, ಅದು ವ್ಯಕ್ತಿಗಳ ಹೃದ್ಗತವಾಗದ ಹೊರತು ಅದರ ಹಿರಿಮೆ ಹೊರಗೆಬರಲಾರದು.

ಪ್ರತಿಯೊಂದು ಹಳ್ಳಿಯಲ್ಲಿ ಮಠಮಹಾಂತಗಳಿವೆ. ಅವುಗಳಿಗೆ ಅಧಿ ಕಾರಿಗಳೂ ಇರುವರು. ಅವರು ಮಾಡತಕ್ಕ ಕರ್ತವ್ಯ ಅತ್ಯಂತ ಮಹತ್ವ ವಾದುದು. ವೀರಶೈವರು ಹೆಚ್ಚಾಗಿ ಹಳ್ಳಿಗಳಲ್ಲಿ ವಾಸಿಸುವರು. ಅವ ರಲ್ಲಿ ಧಾರ್ಮಿಕ ಭಾವನೆಯನ್ನು ಜಾಗೃತಗೊಳಿಸುವದು ಅಲ್ಲಿಯ ಮಠಾಧಿ ಕಾರಿಗಳ ಹೊಣೆಯಾಗಿದೆ. ಅನೇಕ ಮಠಾಧಿಕಾರಿಗಳು ತಮ್ಮ ಹೊಣೆ ಯನ್ನು ನಿರತವಾಗಿ ಹೊತ್ತಿದ್ದಾರೆ. ಅದುವೆ ಹರುಷ. ಹೀಗೆ ಎಲ್ಲ ಹಳ್ಳಿ ಗಳಲ್ಲಿಯೂ ಆಗಬೇಕಾಗಿದೆ. ನಮ್ಮ ಮತದ ತತ್ವಗಳು ಮೊದಲು ತಮ್ಮವರಿಗೆ ತಿಳಿಯಬೇಕಾಗಿದೆಯೇ ಹೊರತು ಮತಪ್ರಚಾರ ಬೇಕಾಗಿಲ್ಲ. ಈಗ ಕೂಡಲಿರುವ ವೀರಶೈವ ಸಭೆ, ಸಮ್ಮೇಲನಗಳು ಇನ್ನು ಹಳ್ಳಿಗ ಳಲ್ಲಿ ಕೂಡಿದರೆ ಒಳಿತೆಂದು ಅನಿಸುತ್ತದೆ. ಅನುಕೂಲವಾದ ಹಳ್ಳಿಯೊಂದನ್ನು ಆರಿಸಿಕೊಂಡು ಅಲ್ಲಿಯೇ ಸಮ್ಮೇಲನ ಜರುಗಿಸಿದರೆ ಆ ಹಳ್ಳಿಯವರಿಗೂ ಸುತ್ತುಮುತ್ತಲಿನ ಹಳ್ಳಿಯ ಜನರಿಗೂ ಮಹದುಪಕಾರವಾಗುವದು ಪಟ್ಟ ಣಿಗರು ತತ್ವಗಳನ್ನು ಗ್ರಂಥಗಳಿಂದ ತಿಳಿದುಕೊಳ್ಳಬಹುದು. ಅವರು ಓದು ಬರಹ ಬಲ್ಲವರಾಗಿರುವರು. ಇದರಂತೆಯೇ ಆಗಬೇಕೆಂಬಾಶೆ ನನಗಿಲ್ಲ.

ಅಂತೂ ಧಾರ್ಮಿಕ ಭಾವನೆಯನ್ನು ಜಾಗೃತಗೊಳಿಸಲು ಯಾವ ಕ್ರಮ ವನ್ನು ಕೈಕೊಂಡರೂ ಸರಿಯೇ. ಆದರೆ ಅದು ಯಶಸ್ವಿಯಾಗಬೇಕೆಂಬುದೇ ನನ್ನಿಚ್ಛೆ.

ಜೀವನವೆಂಬುದು ಮುಳ್ಳಿನ ಹಾಸಿಗೆಯೇನೋ ಸರಿ. ಆದರೆ ಅದನ್ನು ತುಚ್ಛೀಕರಿಸಿ ಬಿಡಲೂ ಬರುವಂತಿಲ್ಲ. ಜೀವನವು ತತ್ವಮಯವಾಗಿ ಕಂಗೊಳಿಸಬೇಕು. ಸಂಸಾರ ಹೇಯವಾದುದೇನೋ ಸರಿ. ಆದರೆ ಸಂಸಾರ ದಿಂದಲೇ ಸದ್ಗತಿಯು ದೊರಕುವದು. ಆದಕ್ಕಾಗಿಯೇ ಬಾಳು ಹಾಳೆನಿಸದಂತೆ ಹವಣಿಸಿ ಮುಂಜಾಗೃತೆ ವಹಿಸಬೇಕು. ಶರಣರ ಜೀವನ ಚರಿತ್ರೆಗಳನ್ನು ಓದಬೇಕು. ಅವರ ಜೀವನದಲ್ಲಿ ನಡೆದ ಆಗು, ಹೋಗು ಗಳನ್ನು ನಿರೀಕ್ಷಿಸಬೇಕು. ಅವರು ನಡೆದ ರೀತಿಯಲ್ಲಿಯೇ ನಾವೂ ನಡೆಯಲೆತ್ನಿಸಬೇಕು. ಅವರ ಜೀವನ ಚರಿತ್ರೆಗಳನ್ನು ಇತಿಹಾಸದ ಜ್ಞಾನದ ದೃಷ್ಟಿಯಿಂದ ಅಭ್ಯಸಿಸಿದರೆ ಇತಿಹಾಸದ ಜ್ಞಾನವಾದೀತು. ಅವರು ತಲುಪಿದ ತಾಣವನ್ನೇ ನಾವೂ ತಲುಪಬೇಕಾಗಿದೆ. ಆದಕ್ಕಾಗಿಯೇ ನಡೆಯು ಅವಶ್ಯವೆಂದು ಹೇಳಬೇಕಾಯಿತು. ನುಡಿಯು ನಡೆಯೊಡನೆ ಬೆರೆತು ಸಮರಸವಾದಲ್ಲಿ ಅದಕ್ಕೊಂದು ವಿಶಿಷ್ಟ ರೂಪು ಗೋಚರಿಸುವದು.

ಕೊನೆಯದಾಗಿ, ಈ ಮೊದಲು ಉಪದೇಶಕರ ಬಗೆಗೆ ಕೆಲವು ಮಾತು ಗಳನ್ನು ಆಡಿದ್ದಾಗಿದೆ. ಆ ಮಾತುಗಳು ಯಾವದೇ ವ್ಯಕ್ತಿಯ ದೂಷಣೆ ಗಾಗಿ ಇಲ್ಲ. ದ್ವೇಷ, ಅಸೂಯೆಗಳು ನಮ್ಮೀ ಕಾಲದಲ್ಲಿ ವಿಶೇಷವಾಗಿ ಬೆಳೆಯುತಲಿವೆ. ಪಕ್ಷಪಂಗಡಗಳು ತಲೆದೋರುತಲಿವೆ. ಆದರೆ ಅವುಗಳಿಂದ ನಮಗೇನು ಲಾಭವಿದೆಯೋ ಅರಿಯದಂತಾಗಿದೆ. ಎಗಡನೆಯವರಿಗೆ ಮಸಿಯ ಬಡೆಯಹೋದರೆ ನಮ್ಮ ಕರಕ್ಕೂ ಮಸಿಯು ಹತ್ತುವದೆಂಬುದರ ಅರಿವು, ಪರರಿಗೆ ಹಚ್ಚಹೋಗದ ಮುನ್ನ ಎಚ್ಚರಾಗಿಂಲಿ. ' ಇಲ್ಲಿ ಸಲ್ಲುವವರು ಅಲ್ಲಿಯೂ ಸಲ್ಲುವರು. ' ಮತ್ತು ಆಚಾರವೇ ಸ್ವರ್ಗ, ಅನಾಚಾರವೇ ನರಕ ? ಎಂಬ ಬಸವಣ್ಣನವರ ಹಿತೋಕ್ತಿಗಳು ನಮಗೆ ತಿಳಿದು ಬರಲಿ. ನಮ್ಮ ಜೀವನದಲ್ಲಿ ಅನೇಕ ಕಷ್ಟ-ಕಾರ್ಪಣ್ಯಗಳು ಬಂದು ತೊಡಕಬಹುದು. ನಿಂದೆಯು ಹಿಂದಿನಿಂದ ಹಿಂಬಾಲಿಸಬಹುದು. ಆದರೆ ಇವೆಲ್ಲವುಗಳ ನಿಜವಾದ ಕಲ್ಪನೆ ನಮಗೆ ಬರಲು ನಡೆ-ನುಡಿಯೊಂದಾದ ಮಹಾತ್ಮರ ಆಶೀರ್ವಾದವು ದೊರಕಿ ನಮ್ಮ ಉದ್ದೇಶವು ಬಯಕೆ ಇಲ್ಲದೆ ಈಡೇರಲೆಂದು ಹಾರೈಸುವಾ.

---

# ಜೀವನ ಮತ್ತು ಗುರಿ

[ ಲೇಖಕ:— ಮುಕಳಿ ಜೀವಣ್ಣ ವಿಜಯಪುರ ]



ಜೀವವಿದ್ದಲ್ಲಿ ಜೀವನವಿದೆ ಎಂಬುದು ಅನಿವಾರ್ಯ ಹೇಗೋ ಹಾಗೆ ಜೀವನಕ್ಕೊಂದು ಗುರಿಯೂ ಅನಿವಾರ್ಯವು. ಗುರಿಯಿಲ್ಲದ ಜೀವನವು ಹರಿದ ಗಾಳಿ ಪಟವಿದ್ದಂತೆ ಜೀವನಕ್ಕೊಂದು ಗುರಿ ಅವಶ್ಯ. “ಅಗತ್ಯ ಬಂದಲ್ಲೆಲ್ಲ ‘ಉಪಾಯ’ ಇದೆ” ಎಂದು ಟಾಲಸ್ಟಾಯರು ಹೇಳಿದರು. ಜೀವನಕ್ಕೊಂದು ಗುರಿ ಅಗತ್ಯವಾದರೆ ಅದಕ್ಕೆ ತಕ್ಕ ಉಪಾಯವೂ ಇದ್ದೇ ಇದೆ. ಬಾಹ್ಯ ಸಾಮಾಜಿಕ, ರಾಜಕೀಯ, ಆರ್ಥಿಕ ಮಟ್ಟಗಳನ್ನೂ ಮುಟ್ಟಲು ಇಲ್ಲವೆ ಉತ್ತರಿಸಲು ಸಾಧಿಸುವ ಗುರಿ ಒಂದು ತೆರನಾಗಿದ್ದು. ಆತ್ಮನ ಅಂತರಿಕ ಆದರೂ ಬಾಹ್ಯ ಅಂತರಿಕ ಗುರಿಗಳಲ್ಲಿ ಮೇಳವಿರಬೇಕು “ಒಂದು ಬಿಟ್ಟು ಒಂದು ದೊರೆಯಾವ” ತಂಗೀ” ಎಂದ ‘ಮಧುರ ಚೆನ್ನರ’ ಪದದ ಪಲ್ಲವಿಯಲ್ಲಿ ತ್ರಿವೇಣಿ ಸಂಗಮದ ಸಾಮ್ಯವಿದೆ.

ಜಲಸಂಚಾರ ಮಾಡಬೇಕಾಗಿ ಅಗತ್ಯ ಬಂತು ಪಾಶ್ಚಾತ್ಯರಿಗೆ ಕೂಡಲೆ ಉಪಾಯ ಹುಡುಕಿ ಉಗಿಹಡಗ ತಯಾರಿಸಿದರು ಆಕಾಶ ಯಾನದ ಅಗತ್ಯ ಬಿತ್ತು ಒಡನೆಯೇ ಉಪಾಯ ಹುಡುಕಿ ‘ಬಾನಾಡಿ’ ತಯಾರಿಸಿದರು.

ಹೀಗೆ ಅಗತ್ಯ ಬಂದಲ್ಲೆಲ್ಲ ಉಪಾಯ ಇದ್ದೇ ಇದೆ. ವೈಜ್ಞಾನಿಕ ಪ್ರಣೀತ ಭೌತಿಕ ತತ್ವಗಳ ಅದ್ಭುತ ಶೋಧನೆಯಿಂದ ಪ್ರಸ್ತುತ ಪ್ರಪಂಚವು ವೈಜ್ಞಾನಿಕ ಯುಗವೆಂದು ಹೇಳಿಸಿಕೊಂಡಿತು. ಆಧುನಿಕ ಜಗತ್ತು ವಿಜ್ಞಾನಿಗಳನ್ನು ಅವಲಂಬಿಸಿಯಾದರೂ ತೃಪ್ತಿಹೊಂದುತ್ತಾ ಇಲ್ಲ ಇದಕ್ಕೆ ಕಾರಣ ‘ಅಗತ್ಯ ಅಗತ್ಯ’ ಎಂಬಕೂಗು ಹೇಗೆ ಹೇಗೆ ಅಗತ್ಯದ ಅನಿಸಿಕೆಗಳಲ್ಲಿ ಉಪಾಯದಿಂದ ಈಡೇರ ಹತ್ತುವವೋ ಹಾಗೆ ಹಾಗೆ ಅಗತ್ಯದ ಪೂರ್ತಿ ಆಗುತ್ತಾ ಇಲ್ಲ. ಈಗೀಗ ಭೌತಿಕದಿಂದ ಜೀವನಕ್ಕೆ ತೃಪ್ತಿಯಿಲ್ಲ ಎಂಬ ಮಾತು ಕರತಲಾಮಲಕವಾಗಿದೆ. ಜನತೆಗೆ ವಿಜ್ಞಾನಿಗಳ ಧ್ವಂಸಮಯ ಶೋಧನೆಗಳು ಮಾನವನಿಗೆ ಇಂದಿನ ಜಗತ್ತಿನ ಪಿಶಾಚಿ ವೃತ್ತಿಯನ್ನು ಕಂಡು ಇರುವಿಕೆಯ ಬಗ್ಗೆ ಜಿಗುಪ್ಸೆಯುಂಟಾಗಿದೆ ಅಂತೆಯೇ ಎಷ್ಟೋ ರಾಷ್ಟ್ರಗಳು ನಿರಂಕುಶ ರಾಜ್ಯ ನಡೆಸಿದ ಭಾರತದ ಕಡೆಗೇನೆ ಕಣ್ಣಾಲೆಗಳನ್ನು ತಿರುವುತಲಿವೆ.

ಪೂರ್ಣ ಆಧ್ಯಾತ್ಮದ ತೃಪ್ತಿಯಾವಾಗ ಜೀವನಕ್ಕೆ ಆಗುವದೋ ಅವಾಗ ಅಗತ್ಯದ ಪೂರ್ತಿಯಾಗುವದು ಎಂದು ಆಧ್ಯಾತ್ಮಿಗಳು ಹೇಳುವದುಂಟು ಆ ಪೂರ್ಣ ಆಧ್ಯಾತ್ಮದ ಒಂದು ಮಗ್ಗಲಿನ ಕಣಗಳು ವೈ ಎನಿಸಿಕೊಂಡ ಈ ಭೌತಿಕ ಅದ್ಭುತ ಶೋಧನೆಯಿಂದ ಹೇಗೆ ತಾನೆ ತೃಪ್ತಿಯಾದೀತು? ಭೌತಿಕ ಶೋಧನೆಯಾದರೂ ಈ 'ಆಧ್ಯಾತ್ಮಯೋಗದ ಒಂದು ಭಾಗ ಎಂದು ಗುರು ಶ್ರೀ ಅರವಿಂದರೇ ಹೇಳಿದ್ದಾರೆ.

ಆನೆಯನ್ನು ಕಂಡು ಮೂರು ಮಂದಿ ಕುರುಡರು ತಂತಮ್ಮ ಸ್ಪರ್ಶ ಮಾತ್ರ ಶೋಧನೆಯ ಪರಿವೃತ್ತಾಂಶವನ್ನು ಪರಿಪೂರ್ಣವೆಂದು ತಿಳಿದು ತಾನು ಕಂಡ ಆನೆಯಗಾತ್ರವನ್ನು ತಿಳಿಸುತ್ತಾ ನಿಜವೆಂದೆ ಸಾಧಿಸುತ್ತಾನೆ. ಭೌತಿಕ ಶೋಧನೆಯ ಅಧ್ಭುತ ರಹಸ್ಯವನ್ನು ಹೇಳುವಾಗ ಪೂರ್ಣ ಆಧ್ಯಾತ್ಮದ ಅವಹೇಳನ ಮಾಡುವದರಲ್ಲಿ ಹಿಂದು ಮುಂದು ನೋಡಿಲ್ಲ ಜನರು.

ತನ್ನ ಅನಿಸಿಕೆಯು ಪೂರ್ಣವೆಂದು ( ವಾಗ್ವಾದದಲ್ಲಿ ) ಸಾಧಿಸುವ ಕುರುಡನು ತಾನು ಕಂಡದ್ದು ಆನೆಯ ಒಂದಂಗವೆಂಬುವದು ಆತನಿಗೆ ಕಲ್ಪನೆಗೂ ಬಹುದೂರ. ವಿಜ್ಞಾನಯುಗದ ಆರಾಧನಿಮಾಡುವವರ ಕಲ್ಪನೆಯೂ ಹಾಗೆ.

ಯಾವುದರಿಂದ ಜೀವನಕ್ಕೆ ತೃಪ್ತಿಯಿಲ್ಲವೋ ಅದಕ್ಕಿಂತಲೂ ಮಿಗಿಲಾದ ಅಜರಾಮರವಾದ ಶಾಶ್ವತವಾದ 'ಅಗತ್ಯ' ದ ಅನಿಸಿಕೆಯು ನಮ್ಮಲ್ಲಿ ಹೊರಹೊಮ್ಮಬೇಕು ಅಗತ್ಯವೆಂದರೆ ( ಯಾವುದೇ ಒಂದು ಬೇಡಿಕೆ ) ಇದು ಇಲ್ಲದೆ ಜೀವನವು ಸಾಗದು ಎಂದು "ಅಗತ್ಯವೆಂಬುದು ಅಜ್ಞಾತ ಗುರು" ಎಂದರು ಟಾಲಸ್ಟಾಯರು ಇಂಥದೊಂದು ರಾಜಮಾರ್ಗವನ್ನೂ ಹುಡುಕಬೇಕು ಅದು ಯಾವದೆಂದರೆ ಆಧ್ಯಾತ್ಮದ ಹಸಿವು. ಈ ಹಸಿವೆಯನ್ನು ಹಿಂಗಿಸಲು ಉಪಾಯಬೇಕು. ಜೀವನಕ್ಕೂ ಆಧ್ಯಾತ್ಮಕ್ಕೂ ನಿಕಟ ಸಂಬಂಧವಿದೆ ಜೀವನದಲ್ಲಿ ಏನಿದೆ? ಎಂದು ಶೋಧಿಸುವದೆ ಆಧ್ಯಾತ್ಮ ಟಾಲಸ್ಟಾಯರಿಗೆ ಈ ತೆರನಾದ ಅಗತ್ಯ ಬೇಕಾಗಿತ್ತು. ಅದಕ್ಕೆ ತಕ್ಕ ಉಪಾಯಹುಡುಕಿ ಮಹರ್ಷಿಯಾದರು. ಆಧ್ಯಾತ್ಮವೆಂದರೆ ಶರೀರ ಆತ್ಮಗಳ ವಿಷಯವಾಗಿ ತಿಳಿದುಕೊಳ್ಳುವದು ಸತ್ಯ ನೀತಿ ಸಮತೆ ಸ್ವಾತಂತ್ರ್ಯ ಈ ನಾಲ್ಕು ತತ್ವಗಳಲ್ಲಿ ಜೀವನದ ಗುರಿಯು ಅಡಕವಾಗಿದೆ ಎಂದರು ಮಹಾತ್ಮರು ಅಲ್ಲಿ ಶಾಂತಿ ಇದೆ ಆನಂದವಿದೆ.

ಸತ್ಯವೆಂದರೆ ತನ್ನ ಅನಿಸಿಕೆಯು ಸರಿಯಿದೆ ಎಂದು ಮನಗಾಣುವದು ಆ ಮನಗಂಡದ್ದನ್ನು ಜೀವನದಲ್ಲಿ ಸಮರಸವಾಗಿರಿಸಿ ನಿರ್ಮಲ ಹೃದಯದಿಂದ ಆಚರಿಸುವದು ಈ ಆಚರಣೆಗೆನೇ ನೀತಿಯೆಂದೆನ್ನುವರು. ನೀತಿ ಮತ್ತು ಜೀವನದಲ್ಲಿ ಅಳವಟ್ಟು ಅದು ಅನಿವಾರ್ಯವಾಗಿಯೇ ಉಳಿದು ಪರಮಾತ್ಮನಲ್ಲಿ ಸರ್ವಭಾವದಿಂದ ಶರಣುಹೋಗುವದೆ ಸಮತೆಯ ಭಾವ. ಇದಕ್ಕೇನೆ ದೇವಭಾವನೆಯೆಂದರು ಕೆಲವರಾಗ "ಒಂದೆಂಬುದು ಜಗದ ತಂದೆ" ಎಂಬ ಶ್ರೀ ಅಂಬಿಕಾತನಯ ದತ್ತರ ಪದದ ಪಲ್ಲವಿಯನ್ನು ಬಾಯಿಯಲ್ಲಿ ಭಪ್ಪರಿಸಬೇಕು. ಅಲ್ಲಿ ಬಣ್ಣ ಬಣ್ಣದ ಬೇಸಣಿಕೆಗಳಿಲ್ಲ, ತಾರತಮ್ಯಗಳಿಲ್ಲ "ಎಲ್ಲರೂ ದೇವರ ಮಕ್ಕಳು" ಸರ್ವರಿಗೂ ಜೀವಿಸಲಿಕ್ಕೆ ಸಮಾನ ಹಕ್ಕುಂಟು. ಯಾರ ಸ್ವಾತಂತ್ರ್ಯವನ್ನೂ ಯಾರೂ ಅಪಹರಣ ಮಾಡಲಾರರು ವಿಚಾರವಾಕ್ಯಾಚಾರ ಅಭಿಪ್ರಾಯಗಳನ್ನೂ ವ್ಯಕ್ತಪಡಿಸುವ ನಿರ್ಭಯತೆ ಮೊದಲಾದ ನಾಗರಿಕನಿಗಿರತಕ್ಕ ಎಲ್ಲ ಸ್ವಾತಂತ್ರ್ಯವೂ ಲಭ್ಯವುಂಟು "ಹಿಂದು ತುರ್ಕರಿಗೆ ಚಂದ್ರನೊಬ್ಬನೆ" ಇವರು ಹಿಂದುಗಳು ಆದಕಾರಣ ಇವರಿಗೆ ಹೆಚ್ಚು ಪ್ರಕಾಶವನ್ನೂ ಇವರು ಮುಸಲ್ಮಾನರು ಕಾರಣ ಇವರಿಗೆ ಕಡಿಮೆ ಪ್ರಕಾಶವನ್ನೂ ನೀಡಬೇಕೆಂಬ ಭೇದಭಾವ ಆ ಚಂದ್ರನಲ್ಲಿಲ್ಲ ಸೃಷ್ಟಿ ನಿಯಮದಂತೆ ಎಲ್ಲವೂ ನಡೆದೇ ನಡೆಯುವದು ಇದೇ ಸಮತೆ ಭಾವ.

ನಾವು ಬಾಳಿನುದ್ದಕ್ಕೂ ದೇವರನ್ನು ಸ್ಮರಿಸುವದು ಅಗತ್ಯವಾಗಿದೆ. ಜೀವನ ಬೇಕಾದರೆ ಜತೆಗೆ ದೇವನೂ ಬೇಕು. ದೇವನು ಬೇಕೆಂದರೆ ಜೀವನ ಬೇಕು ಜೀವನ ಬಿಟ್ಟು ದೇವನಿಲ್ಲ, ದೇವನನ್ನು ಬಿಟ್ಟು ಜೀವನವಿಲ್ಲ. ದೇವನ ರೂಪಾಂತರವೇ ಈ ಜೀವನು. ಜೀವವಿದ್ದಲ್ಲಿ ಜೀವನವಿದೆ, ಜೀವನವಿದ್ದಲ್ಲಿ ದೇವನಿದ್ದಾನೆ. ಜೀವ, ಜೀವನ, ದೇವ ಇವು ಸರಪಳಿಯ ಕಡಿಯಂತಿರುವವು "ದೇವನನ್ನು ಅರಿಯುವದೂ, ಬಾಳಿ ಬದುಕುವದೂ ಒಂದೆ ಆಗಿದೆ ದೇವನೆ ಜೀವನಾಗಿದ್ದಾನೆ" ಎಂದರು ಟಾಲಸ್ಟಾಯರು.

ಆದ್ದರಿಂದ ಬಾಳಿನುದ್ದಕ್ಕೂ ಸತ್ಯ ನೀತಿ ಸಮತೆ ಸ್ವಾತಂತ್ರ್ಯ ಈ ನಾಲ್ಕು ತತ್ವಗಳನ್ನೂ ಗುರಿಯಾಗಿಟ್ಟುಕೊಂಡು ಜೀವನ ಸಾಗಿಸಬೇಕು. ಇದು ಅನಿವಾರ್ಯವೆಂದೇ ತಿಳಿದು ಕಾರ್ಯರಂಗಕ್ಕಿಳಿಯಬೇಕು.

## ಬೇಡೆನಗೆ ಭವದ ಸಂಗ.

ಬೇಡೆನಗೆ ಭವದ ಸಂಗ
ಬೇಡೆಂದು ನುಡಿಯುತಿರುವೆ ॥ಪಲ್ಲ॥

೧.

ಬಾಳೆಂಬ ಕಡಲಿನೊಳಗೆ
ಬೀಳೇಳುತ್ತಿರಲು ಮುಳುಗಿ
ಆಸರಕೆ ಹೊರಳುತಿರಲು
ಬೇಸರವೆ ಬರುತಲಿಹುದು

೨.

ಅನೊಂದು ನೆನೆಯುತಿರಲು
ತಾನೊಂದು ಫಲಿಸುತಿಹುದು
ತಿಳಿಯದೊ ಮಾಯ ಮರ್ಮ
ಎನಗೆಂದೊ ಸಿದ್ಧಿ ಕರ್ಮ

೩.

ನೀರೊಳಗೆ ಗುಳ್ಳೆ ವಿರಳ
ಜೀವನದಿ ಸೊಗವು ವಿರಲ
ಸ್ಥಿರವಲ್ಲೊ ಭವದ ಸಂಗ
ಬೇಕೆನಗೆ ದಿವ್ಯಾನಂದ

೪.

ಜಗವೆಂಬ ಜಂಜಡದಲಿ
ಹಗಲಿರುಳು ಮಿಡುಕುತಿರುವೆ
ಹರುಷದೆಡೆ ನುಗ್ಗುತಿರಲು
ಬರುತಿಹುದು ಕಷ್ಟವೆನಗೆ

೫.

ವ್ಯರ್ಥ ನಿಮ್ಮ ನಾಮ ನೆನೆವೆ
ಅಡಿಗಡಿಗೆ ಪಠಿಸುತಿರುವೆ
ಮೊರೆಹೊಕ್ಕೆ ನಿಮ್ಮ ದೇವಾ
ಕರೆದೊಯ್ಯೊ ಸುಗುಣಶೀಲಾ

—ಶ್ರೀ. ಎಸ್. ವ್ಹಿ. ಕಂಬಿ, "ಸಾಹಿತ್ಯಭೂಷಣ"
(ಬೆಳಗಾಂವ-)

ಮಾಡುತ್ತನೆ. ಇವರು ಹಿಂದುಗಳು ಆದಕಾರಣ ಇವರಿಗೆ ಹೆಚ್ಚು ಪ್ರಕಾಶವನ್ನೂ, ಇವರು ಮುಸಲ್ಮಾನರು ಕಾರಣ ಇವರಿಗೆ ಕಡಿಮೆ ಪ್ರಕಾಶವನ್ನು ನೀಡಬೇಕೆಂಬ ಮನುಷ್ಯನಲ್ಲಿ ಈಗಿರತಕ್ಕ ಮೂಢತನವು ಅವುಗಳಲ್ಲೇನು ಇಲ್ಲ. ಆದ್ದರಿಂದ ಆ ದೇವ ನಿರ್ಮಿತ ಗ್ರಹಗಳಲ್ಲಿ ಕಳೆದ ಸಮತೆಯು ಮಾನವನಲ್ಲಿಯೂ ಬರಬೇಕು. ದೇವನಲ್ಲಿರತಕ್ಕ ಸಮತೆಯು ಯಾವಾಗ ಬರುವದೋ ಆವಾಗ ಜೀವತ್ವಕ್ಕೆ ದೇವತ್ವ ಬರುವದು. ಇದಕ್ಕೇನೆ ದೇವ ಭಾವನೆಯನ್ನುವರು ಈ ಭಾವನೆಯ ಮನುಷ್ಯನು ಕೃತ್ರಿಮವಾದ ಯಾವದೇ ತರಹದ ಕುಲ, ಜಾತಿ, ಪಂಥ ಪಂಗಡಗಳಲ್ಲಿ ಜನಿಸಿದ್ದರೂ ಅವನು ಮಾನವೋತ್ತಮನೇ ಸರಿ. ಇದನ್ನು ಕುರಿತು ಮಹಾನೇಶ್ವರನು ವಚನವೊಂದನ್ನು ಹೇಳಿದ್ದಾನೆ.

ಮಧುರ ಕೀಟಕದ ಹುಳುವು ಮಾಂಸದೊಳಗಿನ ಕ್ಷೀರ,
ಮಲಹರ ನಿಮ್ಮ ಶರಣರು ಹೊಲೆಯಲ್ಲಿ ಜನಿಸಿದರೆ
ಅಧಮ ಕುಲವೆಂದು ಎನಸಲ್ಲ ಲೋಕದೊಳು
ಸದರು ಮಾಡುವವರೆ ಹೊಲೆಯರು ಬಸವಣ್ಣ

ಜೇನು ಹುಳುವು ಕೀಳೆಂದು ಉಪೇಕ್ಷಿಸಿದ್ದಾರೆ ಅದರಿಂದ ಲಭಿಸುವ ಅತ್ಯಂತ ಮಧುರವಾದ ಜೇನುತುಪ್ಪವು ಮಲಕ್ಕೆ ಸಮಾನವೆಂದು ಯಾರಾದರೂ ಕೀಳು ಬಗೆಯುವದುಂಟೇ? ರಕ್ತ ಮಾಂಸಾದಿಗಳಿಂದ ತುಂಬಿದ ಕೆಚ್ಚಲಗಳಿಂದ ಸಿಗತಕ್ಕ ಅಮೃತ ಸಮಾನನಾದ ಹಾಲನ್ನು ಯಾರಾದರೂ ಉಪೇಕ್ಷಿಸಿ ಬಿಡುವದುಂಟೆ? ಆ ಪ್ರಕಾರ ಉತ್ತಮರು ಯಾವ ಜಾತಿ ಪಂಥ ಪಂಗಡಗಳಲ್ಲಿ ಜನಿಸಿದರೂ ಅವರು ಲೊಕೋತ್ತಮರೆ ಆದ್ದರಿಂದ ಕೃತ್ರಿಮವಾಗಿ ಮಾಡಲ್ಪಟ್ಟ ಈ ಭೇದಾಭೇದಗಳನ್ನು ಕಿತ್ತುಹಾಕಿ ಎಲ್ಲರೂ ಸಮಾನರು ಎಂದು ತಿಳಿಯಬೇಕು ಮಹಾನೇಶ್ವರನು ಮತ್ತು ಎರಡು ಉಪಮೆಯುಗಳನ್ನು ಹೇಳಿ ಸಮತೆ ಭಾವವನ್ನು ಇನ್ನಷ್ಟು ದೃಢೀಕರಿಸಿದ್ದಾರೆ.

ಮುತ್ತು ಚಿಪ್ಪೆಯೊಳು ಹುಟ್ಟುವದು
ರತ್ನ ಪಾಷಾಣದಲಿ ಹುಟ್ಟುವದು
ಉತ್ತಮ ಶರಣರೆಲ್ಲ ಹೊಲೆಯೊಳಗೆ
ಹುಟ್ಟಿದ ಮೇಲೆ ನನ್ನಕುಲ ನಿನ್ನಕುಲ
ಹೆಚ್ಚೆನಬಹುದೆ ಬಸವಣ್ಣ

ಮನುಷ್ಯನು ಉದರ ಪೋಷಣೆಗಾಗಿ ಯಾವುದಾದರೊಂದು ಕಾಯಕವನ್ನು ಮಾಡಲೇಬೇಕಾಗುತ್ತದೆ. ಒಬ್ಬನು ಒಕ್ಕಲುತನವನ್ನು ಮಾಡಿದರೆ ಇನ್ನೊಬ್ಬನು ಆ ಒಕ್ಕಲುತನಕ್ಕೆ ಬೇಕಾಗುವ ಸಾಧನೆಗಳನ್ನು ಒದಗಿಸಿ ಕೊಡುವುದಕ್ಕಾಗಿ ಬಡಿಗತನ, ಕಮ್ಮಾರಿಕೆ, ಇತ್ಯಾದಿ ಉದ್ಯೋಗಗಳನ್ನು ಮಾಡಬೇಕಾಗುತ್ತದೆ. ಅನೇಕರು ಅನೇಕ ಉದ್ಯೋಗಗಳನ್ನು ಮಾಡಿ ಒಬ್ಬರಿಗೊಬ್ಬರು ಸಹಕಾರಿಗಳಾಗುವದೇ ಜೀವಿತದ ಗುರಿಯಾಗಿರುತ್ತದೆ. ಅಂತೆಯೇ ಬಸವಣ್ಣನವರು "ಕಾಯಕವೇ ಕೈಲಾಸ" ವೆಂದರು ಮಹಾನುಭಾವರು "ದುಡಿತವೇ ದುಡ್ಡಿನ ತಾಯಿ" ಎಂದರು ಗಾಂಧೀಜಿಯವರು "ಎಲ್ಲರೂ ನೂಲಿರಿ!" ಎಂದರು. ಮೌನೇಶ್ವರರು "ಕಾಯಕವೇ ಕಮ್ಮಾರ, ಕಾಯವೆ ಹೊಲೆಮಾದಿಗ, ವಾಯು ಅಗ್ನಿ+ಪರಬ್ರಹ್ಮ ಇದರೊಳಗೆ ಆವ ಕುಲವೆಂದು ಬದಕಲೋ ಬಸವಣ್ಣ" ಎಂದರು. ಮೌನೇಶ್ವರರು ವಿಶ್ವಕರ್ಮರಾದುದರಿಂದ ಕಮ್ಮಾರಕಾಯಕವನ್ನೂ ಮಾಡುತ್ತಿದ್ದರು. ಆದ್ದರಿಂದ ತಮ್ಮ ಕಾಯಕವೆ ಕಮ್ಮಾರವೆಂದು ಹೇಳಿದ್ದಾರೆ. ಉದ್ಯೋಗದಿಂದ ನೀಚೋಚ್ಚಗಳು ಪ್ರಾಪ್ತವಾದದ್ದಾದರೆ ಶರೀರವು ಮಲಮಾಂಸ ರಕ್ತಾದಿಗಳಿಂದ ಕೂಡಿದೆ; ಅದು ಎಲ್ಲರಲ್ಲಿಯೂ ಇರುವದರಿಂದ ಎಲ್ಲರೂ ಹೊಲೆಯರಲ್ಲವೆ? ಎಲ್ಲರೂ ಮಾದಿಗರಲ್ಲವೆ? ಹಾಗಲ್ಲ ಭಕ್ತಿ ಕರ್ಮ ಜ್ಞಾನಗಳು ಯಾವನಲ್ಲಿ ಪ್ರಾಪ್ತವಾಗಿವೆಯೋ ಅವನೇ ಉತ್ತಮನು. ಇವು ಯಾವಾತನಲ್ಲಿ ಇಲ್ಲವೋ ಅವನು ನೀಚನು. ವಾಯು, ನೀರು, ಅಗ್ನಿ, ಪೃಥ್ವಿ, ಆಕಾಶ ಈ ಪಂಚ ಮಹಾಭೂತಗಳಿಂದ ಕೂಡಿದ ಈ ಕಾಯವು (ಶರೀರ)ಮಾಯೆಯಾಗಿ ಕಂಡರೂ ಭಕ್ತಿ ಕರ್ಮಜ್ಞಾನಗಳಿಂದ ಅದು ಪರಮಾತ್ಮನ ಸ್ವರೂಪವೇ ಆಗುವದು ಜೀವಾತ್ಮನು ಪರಮಾತ್ಮನ ಸ್ವರೂಪವಾದುದರಿಂದ ಎಲ್ಲರಲ್ಲಿಯೂ ಪಂಚ ಭೂತಗಳು ಹಾಗು ಜೀವಾತ್ಮನು ಇರುವದರಿಂದ ಎಲ್ಲರೂ ಸಮಾನರೆ ತಮ್ಮ ತಮ್ಮ ಇಷ್ಟ ಉದ್ಯೋಗ ಮಾಡಿ, ಸತ್ಯ, ನೀತಿ, ಸಮತೆ ತತ್ವಗಳನ್ನು ತಿಳಿದುಕೊಂಡು ಚಾರಿತ್ರ್ಯವಾನರಾಗಬೇಕು ಇದನ್ನೆ ಗುರು ಮೌನೇಶ್ವರರು ಹೇಳಿದರು.

# ಭಕ್ತ

(ಕವಿ:— ಗುರುಸಿದ್ಧ ಶಿವಾಚಾರ್ಯರು. ಗುರುವಿನ ಹುರಮಠ)



ಶರಣನವೆ ಲಿಂಗಪತಿ.
ನೀನೆ ಜಗದಧಿಪತಿ !
ಸತ್ಯದೆಡೆಗೆ ಸಾಗಿನಿಂತ
ನೀನೆ ಕುಲಪತಿ ! ॥೧॥

ಭಕ್ತಿಯಿಂದ ಮುಕ್ತಿಪಡೆದ
ಯುಕ್ತಿ ವಂತನೈ !
ಧೈರ್ಯದಿಂದ ಸತ್ಯದೆಡೆಗೆಸಾಗಿದ
ಮಾನ್ಯವಂತನೈ ! ॥೨॥

ಮಾಯೆಯನ್ನು ಬಿಸುಟ
ಕರ್ಮಯೋಗಿಯೈ !
ಆಸೆಯನ್ನು ತ್ಯಜಿಸಿನಿಂತ
ಮರ್ಮಯೋಗಿಯೈ ॥೩॥

ಜಗದ ಜನರ ಮರುಹುಕಳೆದು
ಪೂಜ್ಯನಾದೆಯೈ !
ಮನದ ಮಲಿನದುಡಿಗೆಯನ್ನು
ಕಡಿದುನಿಂದೆಯೈ ! ॥೪॥

ಜಗದದುಃಖ ನನ್ನದುಃಖ
ಎಂದು ಬಾಳ್ದಯೈ !
ಜಗದಸುಖವೆ ನನ್ನಸುಖವು
ಎಂದುಬೇಡಿದೈ ! ॥೫॥

ಅಷ್ಟಾವರ್ಣದ ಮಹಿಮೆ ಯನು
ಜನಕೆ ತೋರ್ದೆಯ್ಯ !
ಷಡಾಕ್ಷರಿಯಮಂತ್ರ [illegible]
ಮನನಮಾಡಿದ್ಯೆ ! ೧೬

ಲಿಂಗಪತಿ ನಾನೆಸತಿ
ಎಂದು ಸಾಗಿದ್ಯೆ !
ಭೃತ್ಯಭಾವದಲ್ಲಿನಿಂದು
ಜಗದಿಬೆಳಗಿದ್ಯೆ ! ೧೭

ಶರಣವಾಣಿ ಬೆಳಗಲೆಂದು
ಜಗದಿ ಬಂದೆಯ್ಯ !
ದೇವ ದೇವನಂಘ್ರಿಗಳಿಗೆ
ಬಾಗಿನಿಂದೆಯ್ಯ ! ೧೮

ನೀನೆಗತಿ ನೀನೆಮತಿ
ಎಂದುಸಾಗಿದ್ಯೆ !
ಶಿವನೆಪತಿ ಅವನೆಗತಿ ಎಂದು
ಅವನೊಳೊಂದುಗೂಡಿದ್ಯೆ !! ೧೯

# ತಿಳಿಮನವೆ !

(ಕವಿ:— ಗುರುಸಿದ್ಧ ಶಿವಾಚಾರ್ಯರು. ಗುರವಿನ ಶ್ರೀಮಠ)

ಏರು ಏರು ಏರು ಮನವೆ
ದೇವಸುಖ ಬಾಳನೇರು;
ಕಳಚು ಕಳಚು ಭವದ ಬಂಧನಾ
ಮರೆತೊಮ್ಮೆ ಹಿಮನನೀನುತಿಳಿಮನಾ ॥

ಕ್ಷುದ್ರನಾಗಿಜಗದಿನಿಂದು, ರುದ್ರನಾಗಲೆಂತುನೀನು;
ಬಾಳಗುರಿಯನೆಂದುತಿಳಿದು ಸುಖವ ಪಡುವುದು ?
ದೇವಸುಖವ ಕಾಣ್ವದೆಂತು ಹಿರಿಯರಂತೆನೀನು ನಿಂತು;
ಸತ್ಯಜ್ಯೋತಿಯಲ್ಲಿ ಕೂಡಿ ಬೆಳಗುವುದೆಂದಿಗೆ ?
ಮೇಲು ಕೀಳು ಭಾವಕಳೆದು ಹಿರಿಯ ಕಿರಿಯಭೇದ ಅಳಿದು;
ಅಣುರೇಣು ತೃಣಕಾಷ್ಠದಲ್ಲಿ ಶಿವನ ಕಾಣ್ಬುದೆಂದಿಗೆ ?
ಸತ್ಯಧರ್ಮವನ್ನು ಹಿಡಿದು, ನಿಷ್ಠೆಯಿಂದ ಜಗದಿನಿಂದು;
ಬಾಳಬೆಳಗ ಜ್ಯೋತಿಯಲ್ಲಿ ಕೂಡುವೆಂದಿಗೆ ?
ಇಹದ ಸುಖದ ಮರೆದು ನೀನು, ಪರದ ಸುಖವತಿಳಿದು ನೀನು;
ಓಂಕಾರ ನಾದದಲ್ಲಿ ಬೆರೆವುದೆಂದಿಗೆ ?
ಜೀವಭಾವ ಅಳಿದು ನೀನು, ಪಂಚಭೂತದಂತೆ ನೀನು;
ಸೌಮ್ಯಸುಖವ ಕಂಡು ಶಾಂತಿಯಲ್ಲಿರುವುದೆಂದಿಗೆ ?
ಆರುಗುಣವ ಕಳೆದು ನೀನು, ಆರುಸ್ಥಲವ ಬೆರೆದುನೀನು;
ಭವದಬೇರು ಕಿತ್ತೊಗೆವುದೆಂದಿಗೆ ?

ಹಲವು ನುಡಿಯ ಮರೆದು ನೀನು, ಶಿವನ ಮಂತ್ರವನ್ನುತಿಳಿದು;
ದೇವದೇವನಲ್ಲಿ ನೀನು ಬೆರೆವುದೆಂದಿಗೆ ?

ಯನ್ನು ಮಾಡಿದ ಹಾಗೆ ತೋರುತ್ತದೆ. ಆದ್ದರಿಂದ ಅವನು ಪಾದೋದಕ ಪ್ರಸಾದಗಳು, ಅಷ್ಟಾವರಣ ಸಂಬಂಧದ ಆಚರಣೆಗಳು ಅಂದರೆ ಗುರುಲಿಂಗ ಜಂಗಮಗಳ ವಿವರಣೆ ಇಂಥ ವಿಷಯಗಳ ಬಗ್ಗೆ ಅವನು ರಚಿಸಿದ ಉಕ್ತಿಗಳು ಬಹಳ ಮಹತ್ವದ್ದಾಗಿವೆ. ಷಟ್‌ಸ್ಥಲಶಾಸ್ತ್ರ ಸಂಶೋಧನದಲ್ಲಿ ಅವನು ಮಾಡಿದ ಈ ಕಾರ್ಯವು ಅತ್ಯಂತ ಬೆಲೆಯುಳ್ಳದ್ದಾಗಿದೆ.

## ಬಸವೇಶ್ವರನಿಗೆ ಚನ್ನಬಸವೇಶ್ವರನ ಸಹಾಯ.

ಬಸವೇಶ್ವರನು ಕಲ್ಯಾಣದಲ್ಲಿದ್ದಾಗ್ಗೆ ಅನೇಕ ತರದ ವಾದ ವಿವಾದಗಳು ಪಟ್ಟಣದಲ್ಲಿ ಏಳುತ್ತಿದ್ದವು. ಒಮ್ಮೊಮ್ಮೆ ಕೈಗೆ ಕೈಹತ್ತಿ ಹೋರಾಡುವ ಪ್ರಸಂಗಗಳೂ ಬರುತ್ತಿದ್ದವು. ರಕ್ತಪಾತವೂ ಆಗುತ್ತಿತ್ತು. ಇಂಥ ಪ್ರಸಂಗಗಳು ಬಂದ ಕಾಲದಲ್ಲಿ ಬಸವೇಶ್ವರನು ಅಂಥಸ್ಥಳಗಳಿಗೆ ಸ್ವತಃ ಹೋಗಿ ಎಲ್ಲರಿಗೂ ಸಮಾಧಾನ ಹೇಳುವನು. ಆಗ ಅವನು ತನ್ನ ಕೂಡ ಕೆಲವು ಜೋಡಿಗರನ್ನು ಕರೆದುಕೊಂಡು ಹೋಗುತ್ತಿದ್ದನು. ಆಗ ಅವನು ತನ್ನ ಕೂಡ ಚನ್ನಬಸವೇಶ್ವರನನ್ನು ಯಾವಾಗಲೂ ಕರೆದುಕೊಂಡು ಹೋಗುವನು. ಇದರ ಮೇಲಿಂದ ಚನ್ನಬಸವೇಶ್ವರನು ಕಲ್ಯಾಣಪಟ್ಟಣದಲ್ಲಿ ಬಹು ವರ್ಚಸ್ಸುಳ್ಳವನಾಗಿದ್ದನೆಂದು ನಾವು ಅನುಮಾನ ಮಾಡಬೇಕಾಗುತ್ತದೆ. ಇಂಥ ಸಮಯದಲ್ಲಿ ಬಸವೇಶ್ವರನು ತನ್ನ ಕೂಡ ಚನ್ನಬಸವೇಶ್ವರನಲ್ಲದೆ ಮಡಿವಾಳ ಮಾಚಿದೇವ, ಕಿನ್ನರೀಬ್ರಹ್ಮಯ್ಯ, ಮೇದಾರ ಕೇತಯ್ಯ ಇವರನ್ನು ಸಹ ಕರೆದುಕೊಂಡು ಹೋಗುವನು. ಈ ಐವರು ಶಿವಶರಣರಲ್ಲಿ ಉನ್ನತ ಸ್ಥಾನವನ್ನು ಹೊಂದಿದವರಾಗಿದ್ದಾರೆ-

## ಶಿವಾನುಭವ ಮಂಟಪದಲ್ಲಿ
## ಚನ್ನಬಸವೇಶ್ವರನ ಅಭಿಪ್ರಾಯವು ಕೊನೆಯ ನಿರ್ಣಯವು.

ಶಿವಾನುಭವ ಮಂಟಪದಲ್ಲಿ ಅನೇಕ ಕ್ಲಿಷ್ಟ ವಿಷಯಗಳ ಬಗ್ಗೆ ವಾದ ವಿವಾದಗಳು ಜರಗುತ್ತಿದ್ದವು. ಆಗ ಅನೇಕ ಸಾರೆ ವಿಷಯ ಚರ್ಚೆಗಳು ಯಾರಿಗೂ ತಿಳಿಯದೆ ಕುಂಠಿತವಾಗಿ ಹೋಗುತ್ತಿದ್ದವು. ಇಂಥ ಪ್ರಸಂಗಗಳಲ್ಲಿ ಈ ವಿಷಯಗಳ ಕೊನೆಯ ನಿರ್ಣಯವನ್ನು ಹೇಳುವ ಕಾರ್ಯವನ್ನು ಮಂಟಪದಲ್ಲಿ ನೆರೆದ ಶಿವಶರಣರು ಚನ್ನಬಸವೇಶ್ವರನಿಗೆ ಬಹುಶಃ ಒಪ್ಪಿಸಿಬಿಡುವರು. ಆಗ ಅವನು ಎಲ್ಲರಿಗೂ ಸಮರ್ಪಕವಾಗುವಂತೆ ತನ್ನ ವಿಚಾರಗಳನ್ನು ಹೇಳು

ವನು. ಈ ಪ್ರಸಂಗದಲ್ಲಿ ಅವನು ನುಡಿದ ವಚನಗಳು ನಾನಾ ವಚನಗಳಲ್ಲಿ ಬಹಳ ಕಡೆಗೆ ಬಂದಿರುತ್ತವೆ. ಅವುಗಳ ಮೂಲಕ ಚನ್ನಬಸವೇಶ್ವರನು ತಾನು ಹೇಳುವ ವಿಚಾರಗಳನ್ನು ಕ್ರಿಯೆಯಲ್ಲಿ ತಂದಿದ್ದಾನೆ, ತಾನು ನುಡಿದಂತೆ ಆಚರಿಸುತ್ತ ಬಂದಿದ್ದಾನೆ, ಮತ್ತು ತನ್ನ ವಿಧಾನಗಳಿಗೋಸ್ಕರ ತಕ್ಕ ಕಾರಣಗಳನ್ನು ಸಹ ಹೇಳಲು ಸಾಕಷ್ಟು ಜ್ಞಾನವನ್ನು ಸಂಪಾದಿಸಿದ್ದಾನೆ, ಎಂಬುದು ವ್ಯಕ್ತವಾಗುತ್ತದೆ. ಈ ಪ್ರಕಾರ ಶಿವಶರಣರಲ್ಲಿ ಚನ್ನಬಸವೇಶ್ವರನು ಉಚ್ಚಸ್ಥಾನವನ್ನು ಹೊಂದಿದ್ದಾನೆ.

## ಷಟ್‌ಸ್ಥಲಶಾಸ್ತ್ರದಲ್ಲಿ ಚನ್ನಬಸವೇಶ್ವರನ ಸಂಶೋಧನೆಗಳು.

ಚನ್ನಬಸವೇಶ್ವರನು ನಾವು ಹಿಂದೆ ಹೇಳಿದಂತೆ ಕರಣ ಹಸಿಗೆ, ಮಿಶ್ರಾರ್ಪಣ, ರಾಜಯೋಗದ ವಚನಗಳು, ಪದಮಂತ್ರಗೋಪ್ಯ ಮೊದಲಾದ ಗ್ರಂಥಗಳನ್ನು ರಚಿಸಿರುವದು ಗೊತ್ತಾಗುತ್ತದೆ. ಅವನು ರಚಿಸಿದ ಈ ಗ್ರಂಥಗಳಿಗೆ ವೀರಶೈವರು ಯಾವಾಗಲೂ ಅತ್ಯಂತ ಮನ್ನಣೆಯನ್ನು ಕೊಡುತ್ತ ಬಂದಿದ್ದಾರೆ. ಆದರೆ ನಮಗೆ ದೊರೆದ ಅವನ ಉಕ್ತಿಗಳೂ, ಗ್ರಂಥಗಳೂ, ಬಹು ಅಪೂರ್ಣವಾಗಿರುತ್ತವೆ. ಅವುಗಳನ್ನು ಸಂಶೋಧಿಸುವದು ಬಹಳ ಅಗತ್ಯವಿರುತ್ತದೆ.

ಚನ್ನಬಸವೇಶ್ವರನು ಷಟ್‌ಸ್ಥಲಗಳ ಬಗ್ಗೆ ಮಾಡಿದ ಸಂಶೋಧನೆಗಳ ಮೂಲಕ ಅವನು ಷಟ್‌ಸ್ಥಲ ಸ್ಥಾಪನಾಚಾರ್ಯ, ಶಿವಾನುಭವಿ ಎಂದು ವೀರಶೈವ ಗ್ರಂಥಕಾರರೆಲ್ಲರೂ ಅವನನ್ನು ಯಾವಾಗಲೂ ಹೊಗಳುತ್ತ ಬಂದಿದ್ದಾರೆ.

## ಶಿವಾನುಭವಕ್ಕೆ ವಿರೋಧಗಳು

ಶಿವಾನುಭವ ಮಂಟಪದಲ್ಲಿ ನಡೆದ ಕಾರ್ಯಗಳು ಪರವಾದಿಗಳಿಗೂ ಸನಾತನ ಧರ್ಮಸಂಪ್ರದಾಯಿಗಳಿಗೂ ಬರಬರುತ್ತ ಬಹು ವಿರೋಧವಾಗಿ ಭಾಸವಾಗಹತ್ತಿದವು. ಶಿವಶರಣರು ದೇವರಾರು ಮತ್ತು ಅವನು ಎಂಥವನು ಎಂಬುದರ ವಿಷಯವಾಗಿ ಪ್ರಸಾರ ಪಡಿಸಿದ ವಿಚಾರಗಳಿಗೂ ಜಾತಿಭೇದ ಗುರು ಲಿಂಗಜಂಗಮಗಳಿಗೂ ಅವರ ಷಟ್‌ಸ್ಥಲಸಿದ್ಧಾಂತ ಇವೇ ಮೊದಲಾದವುಗಳಿಗೂ ಅತ್ಯಂತ ವಿರೋಧ ಭಾವವನ್ನು ತಾಳಹತ್ತಿದರು. ಮುಖ್ಯವಾಗಿ ವೀರಶೈವರು ಅಸ್ಪೃಶ್ಯರ ಕೂಡ ಸಂಬಂಧವನ್ನಿಟ್ಟುಕೊಂಡು ಅವರೊಡನೆ ಅನ್ನೋದಕ ವ್ಯವಹಾರಗಳನ್ನು ಮಾಡುತ್ತಿರುವದಕ್ಕೆ ಬಹಳ ಖತಿಗೊಂಡರು. ಆದರೆ

ಸಮಾಜದಲ್ಲಿಯ ಬಹುಜನರು ಶಿವಾನುಭವ ಮಂಟಪದಲ್ಲಿ ಸೇರಿಕೊಳ್ಳು ತ್ತಿದ್ದು ಬ್ರಾಹ್ಮಣ ಸಮಾಜದ ಮನಸ್ಸಿಗೆ ಬಹಳ ನೋವನ್ನುಂಟು ಮಾಡು ತ್ತಿದ್ದಿತು. ಆ ಕಾಲದಲ್ಲಿ ನಾಡಿನಲ್ಲಿ ಬಹುಜನ ಸಮಾಜವು ಜೈನ ಧರ್ಮ ವನ್ನು ಪಾಲಿಸುತ್ತ ಬಂದಿದ್ದಿತು. ವೀರಶೈವ ಧರ್ಮಪ್ರಸಾರವು ನಾಡಿನಲ್ಲಿ ಹೆಚ್ಚಿಗೆ ಆದ ಹಾಗೆ ಜೈನಧರ್ಮದವರು ಸಹ ಬಹಳವಾಗಿ ಶಿವಶರಣರೊಡನೆ ಹೋರಾಟ ನಡೆಸಿದ್ದರು. ಬಿಜ್ಜಳನು ಜೈನ ಧರ್ಮವನ್ನು ಪಾಲಿ ಸುವವನಾಗಿದ್ದನು. ಆದರೆ ಅವನ ಆಸ್ಥಾನದಲ್ಲಿ ಬಹುಜನ ಅಧಿಕಾರಿಗಳು ಮೊದಲು ಜೈನರಿದ್ದು ಅವರು ಮುಂದೆ ವೀರಶೈವ ಧರ್ಮವನ್ನು ಪಾಲಿ ಸುವವರಾದರು. ಇದರಿಂದ ಜೈನರು ಬಸವೇಶ್ವರನ ವಿಷಯವಾಗಿ ಕಡುತ ರವಾದ ವೈರಭಾವನ್ನು ತಾಳಹತ್ತಿದರು.

### ಮಧುವರಸ ಹರಳಯ್ಯ ಇವರಲ್ಲಿ ಮಿಶ್ರವಿವಾಹ

ಈ ಸ್ಥಿತಿಯಲ್ಲಿ ಬ್ರಾಹ್ಮಣನಾದ ಮಧುವರಸ ಮತ್ತು ಮಚ್ಚೆಗಾರ ನಾದ ಹರಳಯ್ಯ ಇವರಲ್ಲಿ [illegible] ಸಂಬಂಧವು ಉಂಟಾಯಿತು. ಇದರಿಂದ ಶಿವಶರಣರ ವಿರುದ್ಧವಾಗಿ ಜೈನರೂ ಬ್ರಾಹ್ಮಣರೂ ದೂರನ್ನು ಎಬ್ಬಿ ಸಿದರು. ಅರಸನು ಅವರ ಪಕ್ಷ ಹಿಡಿದವನಾಗಿ ಹರಳಯ್ಯ ಮಧುವಯ್ಯ ಗಳನ್ನು [illegible] ಕೊಲ್ಲಬೇಕೆಂಬ ಶಿಕ್ಷೆಯನ್ನು ವಿಧಿಸಿ ದನು. ಆ ಪ್ರಕಾರ ಅವರು ಘಾತಿಸಲ್ಪಟ್ಟರು.

### ನಾಡಿನಲ್ಲಿ ದಂಗೆಗಳು

ಬಿಜ್ಜಳನ ಈ ಕಾರ್ಯದ ಮೂಲಕ ನಾಡಿನಲ್ಲಿ ಭಯಂಕರವಾದ ಕ್ಷೋಭೆ ಯುಂಟಾಯಿತು. ಹಿಂಸಾಚಾರಗಳು ಎಲ್ಲೆಲ್ಲಿಯೂ ನಡೆದಿರಬೇಕೆಂದು ತೋರು ತ್ತದೆ. ಬಸವೇಶ್ವರನು ಯಾವಾಗಲೂ ಶಾಂತಿಪ್ರಿಯನು. ಅವನು ಈ ಪರಿಸ್ಥಿತಿಯನ್ನು ನೋಡಿ ಪಟ್ಟಣದಲ್ಲಿರಬಾರದೆಂದು ಕೂಡಲಸಂಗಮ ಕ್ಷೇತ್ರಕ್ಕೆ ತೆರಳಿದನು.

### ಚನ್ನಬಸವೇಶ್ವರನಿಗೆ ಸರ್ವಾಧಿಕಾರವು

ಅಲ್ಲಿಗೆ ಹೋಗುವ ಮುಂದೆ ಅವನು ತನ್ನ ಎಲ್ಲ ಅಧಿಕಾರಗಳನ್ನು ಚನ್ನಬಸವೇಶ್ವರನಿಗೆ ಒಪ್ಪಿಸಿ ಅವನ ಅಪ್ಪಣೆಯಂತೆ ಎಲ್ಲರೂ ನಡೆಯಬೇಕೆಂದು ವಿಧಿಸಿದನು. ಚನ್ನಬಸವೇಶ್ವರನು ಚಿಕ್ಕ ವಯಸ್ಸಿನವನಾದ್ದರಿಂದ ಮಡಿವಾಳ ಮಾಚಿದೇವ ಮತ್ತು ನಾಗಲಾಂಬಿಕೆ ಇವರು ಅವನಿಗೆ ಸಲಹೆಗಾರರನ್ನಾಗಿ ನಿಯಮಿಸಿದನು.

ಬಸವೇಶ್ವರನು ಕಲ್ಯಾಣವನ್ನು ಬಿಟ್ಟು ಹೋದಬಳಿಕ ದೇಶದಲ್ಲಿ ಉಂಟಾದ ವೈಮನಸ್ಸು ನಿಲ್ಲದೆ ಅವು ಹೆಚ್ಚುತ್ತಲೇ ಹೋದವು. ಉಭಯ ಪಕ್ಷಗಳಲ್ಲಿ ಪರಸ್ಪರ ವಿಶ್ವಾಸಗಳು ಹಾರಿ ಹೋಗಿದ್ದವು ಬಿಜ್ಜಳನು ಯಾವಾಗ್ಗೆ ತಮ್ಮನ್ನು ಪೀಡಿಸುವನೋ ಎಂಬ ವಿಷಯವಾಗಿ ಶಿವಶರಣರು ಅವನಲ್ಲಿ ನಂಬುಗೆಯನ್ನು ಇಡಲಾರದವರಾಗಿದ್ದರು.

## ಕಲ್ಯಾಣಕ್ಕೆ ರುದ್ರಮುನಿ ಮತ್ತು ಸಿದ್ಧರಾಮೇಶ್ವರರ ಆಗಮನ.

ಈ ಸಮಯದಲ್ಲಿ ರೇವಣಸಿದ್ಧೇಶ್ವರನ ಮಗನಾದ ರುದ್ರಮುನಿಯು ಮಂಗಳವಾಡದಿಂದಲೂ ಸೊಲ್ಲಾಪುರದಿಂದ ಸಿದ್ಧರಾಮೇಶ್ವರನೂ ಕಲ್ಯಾಣ ಪಟ್ಟಣಕ್ಕೆ ಬರುವವರಾದರು. ಅವರು ನಾಡಿನಲ್ಲೆಲ್ಲ ಅತ್ಯಂತ ವರ್ಚಸ್ಸುಳ್ಳವರಾಗಿದ್ದರು. ಅವರು ಮೊದಲಿನಿಂದಲೂ ಬಸವೇಶ್ವರನೊಂದಿಗೆ ಇದ್ದು ಅವನ ಕೂಡ ಯಾವಾಗಲೂ ವಿಚಾರ ವಿನಿಮಯ ಮಾಡಿ ತಮ್ಮ ತಮ್ಮ ಕಾರ್ಯಗಳನ್ನು ಮಾಡುತ್ತ ಬಂದಿದ್ದರು.

## ದೇಶತ್ಯಾಗವನ್ನು ನಿಶ್ಚಯಿಸಿದ್ದು

ಆಗ ಎಲ್ಲರೂ ಕೂಡಿ ವಿಚಾರ ವಿನಿಮಯವನ್ನು ಮಾಡಿದಂತೆ ತೋರುತ್ತದೆ ಕಡೆಗೆ ಅವರು ದೇಶತ್ಯಾಗ ಮಾಡುವದೊಂದೇ ಮುಖ್ಯ ಉಪಾಯವೆಂದು ತಿಳಿದರು. ಯಾಕಂದರೆ ವೀರಶೈವರ ಸಂಖ್ಯೆಯು ದೇಶದಲ್ಲಿ ಈ ಕಾಲದಲ್ಲಿ ಅತ್ಯಲ್ಪವಾಗಿದ್ದಿತು. ಈಗಿನಂತೆ ಹೇಗೆ ಕರ್ನಾಟಕ ಪ್ರಾಂತದಲ್ಲಿ ಅವರ ಸಂಖ್ಯೆಯು ದಟ್ಟವಾಗಿ ಪಸರಿಸಿದೆಯೋ ಹಾಗೆ ಈ ಕಾಲದಲ್ಲಿ ಅದು ಪಸರಿಸಿದ್ದಿಲ್ಲ. ಜೈನರೂ ಸನಾತನಿಗಳೂ ಅವರ ಅನುಯಾಯಿಗಳಾದವರೂ ಇದ್ದು ಇವರ ಸಂಖ್ಯೆಯು ಬಹಳ ಹೆಚ್ಚಿಗಿದ್ದಿತು. ಈ ಸನಾತನರು ಸ್ವಾಭಾವಿಕವಾಗಿ ವೀರಶೈವರ ಕೂಡ ಹಗೆತನವನ್ನು ತಾಳಿದ್ದರು. ವೀರಶೈವರು ಇವರ ನೆರೆಯಲ್ಲಿರುವದೇ ಕಠಿಣವಾಗಹತ್ತಿತು. ಈ ಉಭಯತರಲ್ಲಿ ಪರಸ್ಪರ ಹೋರಾಟಗಳೂ ಆಗಿಂದಾಗ್ಗೆ ನಡೆಯುತ್ತಿದ್ದವು. ಕಲ್ಯಾಣ ಪಟ್ಟಣದಲ್ಲಿಯಂತೂ ಇವು ಯಾವಾಗಲೂ ನಡೆಯುತ್ತಿದ್ದವು. ಹೀಗೆ ಹೋರಾಟಗಳು ನಡೆದಾಗ್ಗೆ ಬಸವೇಶ್ವರನು ಉಭಯ ಪಕ್ಷದವರನ್ನು ಸಮಾಧಾನಗೊಳಿಸಲು ಯಾವಾಗಲೂ ಪ್ರಯತ್ನಿಸುವನು. ಆದರೆ ಬಸವೇಶ್ವರನು ಈಗ ಹೋಗಿ ಬಿಟ್ಟಿದ್ದನು. ಶಿವಶರಣರು ತಮ್ಮ ಧರ್ಮದಂತೆ ನಡೆಯುವದೇ ಅವರಿಗೆ ಕಷ್ಟವಾಗಹತ್ತಿತು. ಅವರ ಉದಾರ ತತ್ವಗಳು ಪ್ರಸಾರವಾದ ಹಾಗೆ ಎಲ್ಲ ಕಡೆಗೂ ಅವರ ಸಂಖ್ಯೆಯು

ಭರದಿಂದ ಬೆಳೆಯ ಹತ್ತಿತ್ತು. ಇದು ನಾಡಿನಲ್ಲಿ ಪ್ರಮುಖ ಸಂಗಡಗಳಾದ ಜೈನರಿಗೂ ಬ್ರಾಹ್ಮಣ ಧರ್ಮದವರಿಗೂ ಸೇರಿಕೆ ಯಾಗುತ್ತಿರಲಿಲ್ಲ. ಇದರಿಂದ ಅವರಲ್ಲಿ ಬಲವಾದ ದ್ವೇಷಾಸೂಯೆಗಳು ಶಿವಶರಣರ ವಿರುದ್ಧವಾಗಿ ಉಂಟಾಗ ಹತ್ತಿದವು. ಈ ಸ್ಥಿತಿಯಲ್ಲಿ ಶಿವಶರಣರೂ ಅವರ ಅನುಯಾಯಿಗಳೂ ತಾವು ದೇಶ ತ್ಯಾಗಮಾಡಿ ಕೆಲವೊಂದು ಭದ್ರವಾದ ಪ್ರದೇಶದಲ್ಲಿ ಸುರಕ್ಷಿತವಾಗಿರುವದೇ ಲೇಸೆಂದು ಅವರಿಗೆ ಭಾಸವಾಗಹತ್ತಿತು.

ಈ ಪ್ರಕಾರ ಚನ್ನ ಬಸವೇಶ್ವರ, ರುದ್ರಮುನಿ, ಮಡಿವಾಳ ಮಾಚಿದೇವ, ಸಿದ್ಧರಾಮೇಶ್ವರ, ಅಲ್ಲಮಪ್ರಭು ಮೊದಲಾದ ಪ್ರಮುಖ ವೀರಶೈವರಿಗೆ ತೋರ ಹತ್ತಿತು. ಆದ್ದರಿಂದ ಉತ್ತರ ಕನ್ನಡ ಜಿಲ್ಲೆ ಮತ್ತು ಶ್ರೀಶೈಲಪ್ರಾಂತ ಇವು ಗಳಲ್ಲಿರುವದೇ ಹೆಚ್ಚಿಗೆ ಸುರಕ್ಷಿತವೆಂದು ಅವರಿಗೆ ತೋರಿತು.

ಅಲ್ಲಮಪ್ರಭು, ಮಹಾದೇವಿಯಕ್ಕಗಳು ಶ್ರೀಶೈಲ ಪ್ರಾಂತಕ್ಕೆ ಮತ್ತು ಚನ್ನ ಬಸವ ಮಡಿವಾಳಮಾಚಿದೇವ ಮೊದಲಾದ ಅನೇಕ ಶಿವಶರಣರು ಪಶ್ಚಿಮ ಘಟ್ಟಗಳ ಪ್ರಾಂತಕ್ಕೆ ಹೊರಡಲು ಸಿದ್ಧತೆ ನಡಿಸಿದರು. ಈ ಎರಡೂ ಪ್ರಾಂತ ಗಳು ಅವರಿಗೆ ಅಪರಿಚಿತವಾದವುಗಳಿದ್ದಿಲ್ಲ. ಅಷ್ಟರಲ್ಲಿ ಕೆಳಗೆ ಕಾಣಿಸಿದಂತೆ ಸಂಗತಿಗಳು ಸಂಭವಿಸಿದವು.

## ಚಾವುಂಡರಾಯನು ಬಿಜ್ಜಳನ ಮುಖ್ಯ ಸೇನಾಪತಿಯು.

ಇಷ್ಟರಲ್ಲಿ ಬಿಜ್ಜಳನು ತನ್ನ ಸೈನ್ಯವನ್ನು ಯುದ್ಧಕ್ಕೋಸ್ಕರ ಅಣಿಮಾಡುತ್ತ ಲಿದ್ದನು. ಈ ಕಾಲದಲ್ಲಿ ರಾಜ್ಯದಲ್ಲಿ ಅವನಿಗೆ ರಾಜಕೀಯ ಅಂತಸ್ಥ ಕಲಹ ಗಳು ಹೆಚ್ಚುತ್ತಲಿದ್ದವು. ಅವನ ಮಗನಾದ ರಾಯ ಮುರಾರಿ ಸೋಯಿದೇವನು ಬಿಜ್ಜಳನ ಕೂಡ ಸ್ನೇಹಭಾವದಿಂದ ಇರುತ್ತಿರಲಿಲ್ಲ. ಬಿಜ್ಜಳನಿಗೆ ಕರ್ಣದೇವನೆಂಬ ಒಬ್ಬ ತಮ್ಮನಿದ್ದನು. ಅವನು ಬಿಜ್ಜಳನ ರಾಜ್ಯದಲ್ಲಿ ಕೆಲಭಾಗವನ್ನು ಸಾಧಿಸಲು ಪ್ರಯತ್ನಿಸುತ್ತಿದ್ದನು. ಆದ್ದರಿಂದ ಈ ಉಭಯತರ ಮೇಲೆ ಬಿಜ್ಜಳನ ವಿಶ್ವಾಸ ವಿಠ ಲಿಲ್ಲ. ಅವನಿಗೆ ಶಿರಿಯದೇವಿ ಎಂಬ ಒಬ್ಬ ಮಗಳಿದ್ದಳು. ಅವನು ಅವಳನ್ನು ಎರಿ ಯಂಬರಾಗೆಯ ಸಿಂದವಂಶದ ರಾಜನಾದ ಎರಡನೆಯ ಚಾಮುಂಡ ರಾಯನಿಗೆ ಕೊಟ್ಟು ಲಗ್ನಮಾಡಿದ್ದನು. ಎರಿಯಂಬರಾಗೆ ಇದು ಈಗಿನ ಯಲಬುರ್ಗಿಯಾಗಿ ರುತ್ತದೆ. ಇಲ್ಲಿ ಆಳುತ್ತಿದ್ದ ಈ ರಾಜರು ಬಿಜ್ಜಳನಿಗೆ ಅಧೀನರಾಗಿ ಅವನ ರಾಜಕಾರಣದಲ್ಲಿ ಅವನಿಗೆ ಯಾವಾಗಲೂ ಸಹಾಯ ಮಾಡುತ್ತಿದ್ದರು. ಇವರ ವಂಶದಲ್ಲಿದ್ದ ಪೆರ್ಮಾಡಿ ರಾಜನು ಬಿಜ್ಜಳನ ದಂಡನ್ನು ತೆಗೆದುಕೊಂಡು ಗೋವೆಯ

ದಂಬರನ್ನೂ ಹೊಯ್ಸಳ ರಾಜರನ್ನೂ ಸೋಲಿಸಿದ್ದನು. ಆದ್ದರಿಂದ ಬಿಜ್ಜಳನು ಚಾಮುಂಡರಾಯನನ್ನು ತನ್ನ ಬಳ ಮಾಡಿಕೊಂಡು ತನ್ನ ದಂಡಿನ ಸರ್ವಾಧಿಕಾರವನ್ನು ಅವನಿಗೆ ಒಪ್ಪಿಸಿದನು. ವೀರಶೈವ ಗ್ರಂಥಗಳಲ್ಲಿ ತಳಿಯ ಬಿಜ್ಜಳನ ಉಲ್ಲೇಖಗಳು ಆಗಿಂದಾಗ್ಗೆ ಬರುತ್ತವೆ. ಈತನು ಸಿಂದವಂಶದ ಈ ಎರಡನೇ ಚಾಮುಂಡನೇ ಹೊರತು ಬೇರೆ ಯಾರೂ ಇರುವದಿಲ್ಲ.

### ರಾಯಮುರಾರಿ ಸೋವಿದೇವ ಮತ್ತು ಕರ್ಣದೇವ ಇವರು ಬಿಜ್ಜಳನನ್ನು ವಿರೋಧಿಸಿದ್ದು.

ಬಿಜ್ಜಳನು ಈ ಪ್ರಕಾರ ತನ್ನ ಅಳಿಯನ ಮೇಲೆ ಭರವಸೆ ಇಟ್ಟು ರಾಜ್ಯಭಾರ ನಡೆಸುತ್ತಿದ್ದರಿಂದ ಅವನ ಮಗನಾದ ರಾಯಮುರಾರಿಯು ಮತ್ತು ತಮ್ಮ ಕರ್ಣದೇವನು ಬಿಜ್ಜಳನಿಗೆ ಈ ಕಾಲದಲ್ಲಿ ಎಷ್ಟು ಮಾತ್ರವೂ ಸಹಾಯ ಮಾಡಿದ್ದು ಕಂಡು ಬರುವದಿಲ್ಲ.

### ಬಿಜ್ಜಳನ ವಧೆಯನ್ನು ನಿಶ್ಚಯಿಸಿದ್ದು

ಬಿಜ್ಜಳನು ಪ್ರಬಲರಾಜನಾಗಿ ಚಾಲುಕ್ಯರಾಜರ ರಾಜ್ಯವನ್ನು ಆಕ್ರಮಿಸಿ ಅತ್ಯಂತ ಬಲಾಢ್ಯನಾಗಿದ್ದನು. ಅವನ ಹತ್ತಿರ ಕಲ್ಯಾಣ ಪಟ್ಟಣದಲ್ಲಿ ಒಂದು ಲಕ್ಷ ೨೫ಸಾವಿರ ಸೈನ್ಯವು ಸಿದ್ಧವಾಗಿತ್ತು. ಅದರ ಶಿವಶರಣರ ಕಡೆಗೆ ಇಷ್ಟು ದೊಡ್ಡ ಸೈನ್ಯವಿರಲಿಲ್ಲ. ಪಟ್ಟಣದಲ್ಲಿಯೂ ಸುತ್ತಲಿನ ಪ್ರದೇಶದಲ್ಲಿಯೂ ವೀರಶೈವರ ಸಂಖ್ಯೆಯು ಹೆಚ್ಚುತ್ತಿದ್ದರೂ ಬಿಜ್ಜಳನ ಬಲವನ್ನು ಎದುರಿಸುವಷ್ಟು ಸಾಮರ್ಥ್ಯವು ಅವರಲ್ಲಿರಲಿಲ್ಲ. ಯುದ್ಧ ಹೂಡುವ ಪ್ರಸಂಗವು ಬಂದಲ್ಲಿ ರಾಜಧಾನಿಯನ್ನು ಬಿಟ್ಟುಹೋಗುವ ಪ್ರಸಂಗವು ತಮಗೆ ಬರುವದೆಂದು ಅವರಿಗೆ ತೋರಿತು. ಒಂದು ವೇಳೆ ಈ ಭಾಗದಲ್ಲಿ ಅವರು ಉಳಿದರೆ ಶತ್ರುಗಳು ತಮ್ಮನ್ನು ಘಾತಿಸುವರೆಂದು ಅವರಿಗೆ ತೋರಿತು. ಆದ್ದರಿಂದ ಚನ್ನಬಸವೇಶ್ವರ ಭದ್ರಮುನಿ, ಮಡಿವಾಳಮಾಚಿದೇವ, ಮೋಳಿಗೆಮಾರಯ್ಯ, ಕಿನ್ನರಿಬ್ರಹ್ಮಯ್ಯ, ಮೊದಲಾದ ಶಿವಶರಣರು ಉಳವಿಪ್ರಾಂತ ಮತ್ತು ಶ್ರೀಶೈಲಪ್ರಾಂತ ಇಲ್ಲಿ ತಾವು ಇರಬೇಕಾದ ಸ್ಥಳಗಳನ್ನು ಆಯ್ದು ಅತ್ತ ಹೊರಡಲು ಸಿದ್ಧತೆನಡಿಸಿದರು.

ಆದರೆ ವೈರಿಗಳು ತಮ್ಮನ್ನು ಸಮಾಧಾನದಿಂದ ಅತ್ತ ಕಡೆಗೆ ಹೋಗಗೊಡದೆ ತಮ್ಮನ್ನು ಘಾತಿಸುವರು ನಿಶ್ಚಯವೆಂದು ಅವರಿಗೆ ಗೊತ್ತಾಗಿತ್ತು. ಅವರಲ್ಲಿ ದ್ವೇಷಗಳು ಇಷ್ಟು ಬೆಳೆದು ನಿಂತಿತ್ತು. ಈ ಸ್ಥಿತಿಯಲ್ಲಿ ಬಿಜ್ಜಳನನ್ನು ವಧಿಸಿ ತಾವು ಕಲ್ಯಾಣ ಬಿಡುವುದೊಂದೇ ಯೋಗ್ಯ ಮಾರ್ಗವೆಂದು ಅವರಿಗೆ ತೋರಿತು

## ಪೂರ್ವ ಸಿದ್ಧತೆಗಳು

ಆದ್ದರಿಂದ ಅವರು ಇದಕ್ಕೋಸ್ಕರ ಪೂರ್ವ ಸಿದ್ಧತೆಗಳನ್ನು ಮಾಡುವುದರಲ್ಲಿ ತೊಡಗಿದರು. ತಾವಿದ್ದಕ್ಕ ಅರಮನೆ ಮತ್ತು ಇತರ ಸ್ಥಳಗಳನ್ನು ಭದ್ರಪಡಿಸಿಕೊಂಡರು. ಆಹಾರ ಸಾಮಗ್ರಿಗಳನ್ನು ಸಂಗ್ರಹಿಸಿದರು.

ಬಿಜ್ಜಳನ ವಧೆಯಾದ ಕೂಡಲೆ ರಾಜ್ಯದಲ್ಲಿ ಅಶಾಂತತೆಯು ಆಗುವದೆಂದು ಅವರಿಗೆ ಪೂರ್ಣವಾಗಿ ತಿಳಿದಿತ್ತು. ಆದ್ದರಿಂದ ಅವರು ಕಲ್ಯಾಣದಲ್ಲಿದ್ದ ತಮ್ಮ ಸ್ತ್ರೀಯರನ್ನೂ ಬಾಲಕರನ್ನೂ ಪಟ್ಟಣವನ್ನು ಬಿಟ್ಟು ಅಂಜನೇಯು ಹೊಳೆಯ ಆಚೆಗೆ ಕಳಿಸಿಕೊಡುವ ವ್ಯವಸ್ಥೆ ಮಾಡಿದರು. ಅವರ ಕೂಡ ಮಡಿವಾಳ ಮಾಚಿದೇವನು ಸೈನಿಕರ ಒಂದು ತಂಡವನ್ನು ಕೊಟ್ಟು ಕಳಿಸಿದ್ದನು. ಚನ್ನಬಸವೇಶ್ವರನು ಬಿಜ್ಜಳನ ವಧೆಯಾದ ಬಳಿಕ ಉಳಿವಿಯ ಅರಣ್ಯದ ಕಡೆಗೆ ಬಹು ತೀವ್ರವಾಗಿ ಎಲ್ಲ ಶರಣರನ್ನು ಕಳಿಸಿಕೊಡಬೇಕೆಂದು ಗೊತ್ತು ಮಾಡಿದಂತೆ ತೋರುತ್ತದೆ. ಒಂದು ವೇಳೆ ಬಿಜ್ಜಳನ ದಂಡು ತಮ್ಮ ಮೇಲೇರಿಬಂದರೆ ಅದನ್ನು ಅಂಜನೇಯು ಹೊಳೆಯ ದಡದಲ್ಲಿ ತಡೆಹಿಡಿಯಬೇಕೆಂತಲೂ ಯೋಚಿಸಿದ್ದನು. ವೈರಿಗಳನ್ನು ಅಲ್ಲಿಯೇ ಕೆಲಕಾಲ ತಡೆಹಿಡಿದು ಉಳಿದವರನ್ನೆಲ್ಲ ಪಶ್ಚಿಮ ಘಟ್ಟದ ಅರಣ್ಯದ ಕಡೆಗೆ ಒತ್ತರದಿಂದ ಸಾಗಿಸಬೇಕೆಂತಲೂ ಅವನ ಯೋಜನವಾಗಿತ್ತು.

## ಶ್ರೀಶೈಲಕ್ಕೆ ಶಿವಶರಣರ ಪ್ರಯಾಣ.

ಇದೇ ಕಾಲಕ್ಕೆ ಮಹಾದೇವಿಯಕ್ಕ, ಅಲ್ಲಮಪ್ರಭು ಇವರ ನೇತೃತ್ವದಲ್ಲಿ ಶಿವಶರಣರ ಬೇರೊಂದು ತಂಡವು ಶ್ರೀಶೈಲ ಪ್ರಾಂತದ ಕಡೆಗೆ ತೆರಳಿತು. ಇವರೊಡನೆ ಪಟ್ಟಣದಲ್ಲಿರುವ ಅಸಂಖ್ಯಾತ ಶಿವಶರಣರು ಹೊರಟು ಹೋದರು. ಈ ಪ್ರಕಾರ ಚನ್ನಬಸವೇಶ್ವರನು ಮೊದಲಿಗೆಯೇ ವ್ಯವಸ್ಥೆ ಮಾಡಿ ಪಟ್ಟಣದಲ್ಲಿ ಎಷ್ಟು ಜನರೂ ಬೇಕೋ ಅಷ್ಟೇ ಜನರು ಉಳಿಯುವಂತೆ ಮಾಡಿದನು.

## ರಾಜಕೀಯ ಅವ್ಯವಸ್ಥೆಗಳು

ಈ ಕಾಲದಲ್ಲಿ ಬಿಜ್ಜಳನ ರಾಜ್ಯದಲ್ಲಿ ರಾಜಕೀಯ ಕಲಹಗಳು ಮತ್ತಿಷ್ಟು ಬೆಳೆಯುತ್ತಿದ್ದವು. ಅವನಿಗೆ ನಾಲ್ಕು ಜನ ಮಕ್ಕಳು ಮತ್ತು ತಮ್ಮನಾದ ಕರ್ಣ ಇವರು ಇದ್ದು ಅವರು ಅವನಿಗೆ ಎಷ್ಟು ಮಾತ್ರವೂ ಸಹಾಯ ಮಾಡುತ್ತಿರಲಿಲ್ಲ. ಬಿಜ್ಜಳನ ತರುವಾಯ ಯಾರು ಪಟ್ಟವೇರಬೇಕೆಂಬುದರ ಬಗ್ಗೆ

ಇವರಲ್ಲಿ ಅಂತಃ ಕಲಹಗಳು ಏಳುವವೆಂಬುದು ಚನ್ನಬಸವೇಶ್ವರನಿಗೆ ಚನ್ನಾಗಿ ಗೊತ್ತಿತ್ತು. ಇದನ್ನೆಲ್ಲ ಅವನು ತಿಳಿದುಕೊಂಡು ಬಿಜ್ಜಳನ ಕೊಲೆಯನ್ನು ಅವನು ಯೋಗ್ಯ ವೇಳೆಗೆ ಆಗುವಂತೆ ಸಿದ್ಧತೆ ಮಾಡಿದನು.

## ಅನ್ನಸಾಮಗ್ರಿಗಳ ಸಂಗ್ರಹ

ಮಧುವರಸ ಹರಳಯ್ಯ ಇವರ ಕೊಲೆಯ ತರುವಾಯ ಮೂರುವರೆ ತಿಂಗಳುಗಳಾದ ಮೇಲೆ ಬಿಜ್ಜಳನು ಘಾತಿಸಲ್ಪಟ್ಟನೆಂದು ವೀರಶೈವ ಗ್ರಂಥಗಳಲ್ಲಿ ಉಲ್ಲೇಖಗಳಿವೆ. ಈ ಅವಧಿಯಲ್ಲಿ ಚನ್ನ ಬಸವೇಶ್ವರನು ಉಳಿವಿಯ ಅರಣ್ಯದಲ್ಲಿ ಇರಲಿಕ್ಕೆ ಬೇಕಾಗುವ ಎಲ್ಲ ತರದ ಅನ್ನಸಾಮಗ್ರಿಗಳನ್ನು ಸಂಗ್ರಹಿಸಿ ಅತ್ತ ಕಡೆಗೆ ಕಳುಹಿಸುತ್ತ ಬಂದನು. ಅವನು ಹೀಗೆ ಮಾಡುವಲ್ಲಿ ತಾನು ಅಲ್ಲಿ ಗಣಪರ್ವ ಮಾಡುವೆನೆಂದು ಜನರಿಗೆ ಹೇಳುತ್ತ ಬಂದನು.

## ಬಿಜ್ಜಳನ ಕೊಲೆ.

ಬಿಜ್ಜಳನನ್ನು ಕೊಲೆ ಮಾಡಬೇಕೆಂಬ ಸಂಚಿನಲ್ಲಿ ಯಾರು ಇದ್ದರು ಮತ್ತು ಅದು ಯಾವ ಸ್ಥಳದಲ್ಲಿ ಆಗಬೇಕು ಇವೇ ಮೊದಲಾದವುಗಳನ್ನು ಗೊತ್ತು ಪಡಿಸಿದ್ದರ ವಿವರಗಳು ನಮಗೆ ನಿಶ್ಚಿತವಾಗಿ ತಿಳಿದು ಬಂದಿಲ್ಲ. ಆದರೆ ಇದರಲ್ಲಿ ಚನ್ನಬಸವೇಶ್ವರ, ಮಡಿವಾಳಮಾಚಿದೇವ, ರುದ್ರಮುನಿ, ಜಗದೇವ ಮಲ್ಲಿಬೊಮ್ಮಣ್ಣಗಳು ಮುಖ್ಯ ಭಾಗವನ್ನು ವಹಿಸಿದ್ದರೆಂದು ತೋರುತ್ತದೆ. ಅವರು ಬಿಜ್ಜಳನನ್ನು ಕಪಟ ರೀತಿಯಿಂದ ಘಾತಿಸದೆ ಬಹಿರಂಗವಾಗಿ ಜನರೆಲ್ಲರೂ ನೋಡುವಂತೆ ಹೊಡೆಯಬೇಕೆಂದು ನಿರ್ಧರಿಸಿದರು. ಈ ಕಾರ್ಯಮಾಡಲು ಜಗದೇವ ಮಲ್ಲಿ ಬೊಮ್ಮಣ್ಣಗಳು ಸಿದ್ಧರಾದರು.

ಈ ಕಾರ್ಯದಲ್ಲಿ ಅಥವಾ ಸಂಚಿನಲ್ಲಿ ಬಸವೇಶ್ವರನ ಅಂಗವಿತ್ತೆಂದು ನಮಗೆ ತೋರುವದಿಲ್ಲ. ಉಭಯ ಪಕ್ಷಗಳಲ್ಲಿ ಕ್ರೋಧಾವೇಶಗಳು ಹೆಚ್ಚಿದವು. ಅವುಗಳನ್ನು ನಿಲ್ಲಿಸುವದು ಅಸಾಧ್ಯವೆಂದು ಅವನಿಗೆ ತೋರಿತು. ಆದ್ದರಿಂದ ಅವನು ಕಲ್ಯಾಣವನ್ನು ಬಿಟ್ಟು ಕೂಡಲಸಂಗಮಕ್ಕೆ ಹೋದನು.

## ವೀರಶೈವರ ಗಣಾಚಾರ

ಹಿಂದೂ ಧರ್ಮ ಶಾಸ್ತ್ರದಲ್ಲಿ ಕೆಲವೊಂದು ಕಾರ್ಯವನ್ನು ಚತುರೋಪಾಯಗಳಿಂದ ಸಾಧಿಸಬೇಕೆಂದು ಹೇಳಲ್ಪಡುವದುಂಟು. ಎಲ್ಲ ಉಪಾಯಗಳು ತಪ್ಪಿದಲ್ಲಿ ದಂಡೋಪಾಯವನ್ನು ಕಡೆಗೆ ಸ್ವೀಕರಿಸಬೇಕೆಂದು ಅದು ಹೇಳು

ತ್ತಿದೆ. ವೀರಶೈವರಲ್ಲಿ ಪಂಚಾಚಾರಗಳಿದ್ದು ಅವುಗಳಲ್ಲಿ ಗಣಾಚಾರವು ಒಂದು ಇದೆ. ಯಾರಾದರು ವೀರಶೈವ ಸಮಾಜ ಅಥವಾ ಧರ್ಮಕ್ಕೆ ಚ್ಯುತಿ ತಂದಲ್ಲಿ ಅದರ ನಿವಾರಣೆ ಮಾಡುವಲ್ಲಿ ಶತ್ರುವಿನನ್ನು ಹೊಡೆದುಹಾಕ ಶಕ್ಯದ್ದೆಂತಲೂ ಅದು ಶಕ್ಯವಾಗದಿದ್ದರೆ ತನ್ನನ್ನು ತಾನೇ ಕೊಂದುಹಾಕಿ ಕೊಳ್ಳಬೇಕೆಂತಲೂ ಇದರ ವಿವರಣೆ ಇದೆ. ಶಿವಶರಣರ ಚರಿತ್ರೆಗಳಲ್ಲಿ ಹೀಗೆ ಆಚರಿದಂಥವರ ಅಸಂಖ್ಯ ಉದಾಹರಣೆಗಳಿವೆ. ಆದ್ದರಿಂದ ಶಿವಶರಣರನ್ನು ಕ್ರೂರತನದಿಂದ ಘಾತಿಸಿದ ಬಿಜ್ಜಳನಿಗೆ ಪ್ರತಿಕಾರ ಮಾಡಬೇಕೆಂದು ಅವರು ನಿಶ್ಚಯಿಸಿದಲ್ಲಿ ಅವರ ದೃಷ್ಟಿಗನುಸಾರವಾಗಿ ಏನು ಮಾತ್ರವೂ ಅದರಲ್ಲಿ ದೋಷವು ಇರುವದಿಲ್ಲ. ಸಮಾಜಕ್ಕೆ ಹಾನಿಮಾಡಿದವರ ಬಗ್ಗೆ ನಿವಾರಣೋಪಾಯಗಳನ್ನು ಕೈಕೊಳ್ಳದೆ ಹೋದಲ್ಲಿ ಅದರ ಅಸ್ತಿತ್ವಕ್ಕೆ ಭಂಗಬಾರದೆ ಇರಲಾರದು. ಈ ತತ್ವವನ್ನು ಎಲ್ಲ ಧರ್ಮದವರು ಯಾವಾಗಲೂ ಅನುಸರಿಸುತ್ತ ಬಂದಿದ್ದಾರೆ.

## ಬಿಜ್ಜಳನ ಕೊಲೆ

ಜಗದೇವ ಮೊಲ್ಲಿಬೊಮ್ಮಣ್ಣಗಳು ಬಿಜ್ಜಳನನ್ನು ಘಾತಿಸಿದಾಗ ಅವನ ಪಲ್ಲಕ್ಕಿಯ ಸುತ್ತಲೂ ಅವನ ಸೈನ್ಯವು ಕಾದಿದ್ದಿತು. ಅವನನ್ನು ಅವರು ಹೊಡೆದದ್ದು ಚಾವಡಿ ಇದಿರಿಗೆ ಇದ್ದು ಅದು ಗುಪ್ತಸ್ಥಳವಾಗಿರಲಿಲ್ಲ. ಅವನನ್ನು ಹೊಡೆಯುವಾಗ ಜಗದೇವ ಮೊಲ್ಲಿಬೊಮ್ಮಣ್ಣಗಳು ತಾವಾರೆಂಬುದನ್ನು ಮೊದಲು ಉದ್ಘೋಷಿಸುತ್ತ ಹೊಡೆದಿದ್ದಾರೆ.

## ಹೋರಾಟಗಳು

ಹೀಗೆ ಹೊಡೆದ ಸಮಯವು ಸಾಯಂಕಾಲವಾಗಿತ್ತು, ಇನ್ನೂ ಬೆಳಕಿತ್ತು. ಆಗ ಮಡಿವಾಳ ಮಾಚಿದೇವನು ತನ್ನ ಸೈನ್ಯದೊಂದಿಗೆ ಸಮೀಪದಲ್ಲಿಯೇ ಕಾದುಕೊಂಡಿದ್ದನು. ಬಿಜ್ಜಳನನ್ನು ಹೊಡೆದದ್ದು ತಿಳಿದಕೂಡಲೇ ಉಭಯ ದಳಗಳಲ್ಲಿ ಹೋರಾಟಗಳು ನಡೆದವು. ಬಿಜ್ಜಳನ ಸೈನ್ಯದವರಲ್ಲಿ ಕೆಲವರು ಚನ್ನಬಸವೇಶ್ವರನಿದ್ದ ಅರಮನೆಗೆ ಹೋಗಿ ಮುತ್ತಿಗೆ ಹಾಕಿದರು. ಆದರೆ ಅಷ್ಟರಲ್ಲಿ ಪಟ್ಟಣದಲ್ಲಿದ್ದ ಶಿವಶರಣರೂ ಅವರ ಸೈನಿಕರೂ ಅಲ್ಲಿ ಕೂಡಿದ್ದರಿಂದ ಬಿಜ್ಜಳನ ದಂಡಾಳುಗಳು ಅಲ್ಲಿಂದ ಚದರಿಹೋದರು. ಅಷ್ಟರಲ್ಲಿ ಕತ್ತಲೆಯಾಗಿತ್ತು. ಪಟ್ಟಣದಲ್ಲೆಲ್ಲ ಹಾಹಾಕಾರವಾಯಿತು. ಹೋರಾಟಗಳು ನಿರಾತಂಕವಾಗಿ ನಡೆದವು. ಎಲ್ಲ ಕಡೆಗೂ ಅವ್ಯವಸ್ಥೆಯಾಯಿತು.

## ಶಿವಶರಣರು ಕಲ್ಯಾಣವನ್ನು ಬಿಟ್ಟಿದ್ದು

ಆಗ ರಾತ್ರಿಯಲ್ಲಿ ಶಿವಶರಣರು ಪಟ್ಟಣವನ್ನು ಬಿಟ್ಟು ಹೋಗುವ ಸಿದ್ಧತೆಯನ್ನು ನಡಿಸಿದರು. ಆಗ ಚನ್ನಬಸವ ಮಡಿವಾಳಮಾಚಿದೇವ ರುದ್ರಮುನಿ ಮೊದಲಾದ ಶಿವಶರಣರು ಶಿವಶರಣರ ಸ್ಥಾನಗಳಲ್ಲಿಗೆ ಹೋಗಿ ಉಳಿವಿಗೆ ಹೊರಡಲು ವಿನಂತಿ ಮಾಡಿಕೊಳ್ಳಹತ್ತಿದರು. ಅವರಲ್ಲಿ ಪಂಚಾಕ್ಷರಿದೇವ, ಶಿವಪೂಜೆಯ ಸಂಗಮನಾಥದೇವ, ಪ್ರಸಾದಿ ಸೋಮೇಶ್ವರ, ಆರಾಧ್ಯದೇವ ಮೊದಲಾದವರು ಅವರ ವಿನಂತಿಯನ್ನು ನಿರಾಕರಿಸಿದರೆಂದು ಕಾಲಜ್ಞಾನದ ವಚನಗಳಲ್ಲಿ ಹೇಳಿರುತ್ತದೆ. ಶಿವಶರಣರಲ್ಲಿ ಮುಖ್ಯರೆನಿಸಿಕೊಂಡವರು ಹೀಗೆ ಹಿಂದೆಗೆದದ್ದು ಕಂಡುಬರಲು ಶರಣರೆಲ್ಲ ಉಳಿವಿಗೆ ಹೊರಡಬೇಕೆಂದು ಚನ್ನಬಸವೇಶ್ವರನು ಡಂಗುರ ಹೊಡಿಸಿದನು ಆಗ ಶಿವಶರಣರ ತತ್ವಗಳನ್ನು ಆದರಿಸುತ್ತ ಬಂದ ಅಸಂಖ್ಯ ಶಿವಶರಣರು ಯುದ್ಧಮಾಡುತ್ತ ಉಳಿವಿಗೆ ಚನ್ನಬಸವೇಶ್ವರನಕೂಡ ಹೋಗಲು ಸಿದ್ಧರಾದರು. ಹೀಗೆ ಸಿದ್ಧರಾದವರ ಸಂಖ್ಯೆ ಸುಮಾರು ೧೩ ಸಾವಿರವಿದ್ದಿತೆಂದು ತಿಳಿದುಬರುತ್ತದೆ. ಆದರೆ ಬಿಜ್ಜಳನ ದಂಡಾಳುಗಳ ಸಂಖ್ಯೆಯು ಒಂದು ಲಕ್ಷದಮೇಲೆ ಇಪ್ಪತ್ತೈದು ಸಾವಿರವಿದ್ದಿತು. ಇಷ್ಟು ದೊಡ್ಡದಂಡನ್ನು ಎದುರಿಸುವದು ಶಿವಶರಣರಿಗೆ ಅಶಕ್ಯವೆನಿಸಿತು. ಆದ್ದರಿಂದ ಬಿಜ್ಜಳನನ್ನು ಕೊಂದ ರಾತ್ರಿಯಲ್ಲಿಯೇ ಚನ್ನಬಸವೇಶ್ವರನು ಬಹಳಷ್ಟು ಜನರನ್ನು ಕೂಡಿಕೊಂಡು ಕಲ್ಯಾಣ ಪಟ್ಟಣದಿಂದ ಹೊರಬಿದ್ದನು.

## ಬಿಜ್ಜಳನ ವಧೆಯಿಂದಾದ ಅವ್ಯವಸ್ಥೆ

ನಾವು ಹಿಂದೆ ಹೇಳಿದ ಪ್ರಕಾರ ಬಿಜ್ಜಳನ ವಧೆಯಾದ ಬಳಿಕ ಅವನ ರಾಜ್ಯದಲ್ಲಿ ಯಾರು ಪಟ್ಟವೇರಬೇಕೆಂಬುದರ ಬಗ್ಗೆ ಅಂತಃಕಲಹಗಳು ಉಂಟಾಗಿ ಅವ್ಯವಸ್ಥೆಯುಂಟಾಯಿತು. ಆದ್ದರಿಂದ ಚನ್ನಬಸವೇಶ್ವರನ ಸೈನ್ಯವನ್ನು ಯಾರು ಎದುರಿಸಬೇಕೆಂಬುದು ಗೊತ್ತಾಗಿರಲಿಲ್ಲ. ಬಿಜ್ಜಳನಿಗೆ ರಾಯಮುರಾರಿ, ಸೋವಿದೇವ, ನಿಃಶಂಕಮಲ್ಲ ಸಂಕಮ, ವೀರನಾರಾಯಣ ಆಹವಮಲ್ಲ, ಮತ್ತು ಸಿಂಗಣ ಎಂಬ ನಾಲ್ಕುಜನ ಮಕ್ಕಳೂ ಕರ್ಣ ಮತ್ತು ಮೈಳುಗಿದೇವ ಎಂಬ ತಮ್ಮಂದಿರೂ ರಾಜ್ಯದಲ್ಲಿದ್ದರು. ಆದರೆ ಅವರಲ್ಲಿ ಯಾರೂ ಚನ್ನಬಸವನ ಮೇಲೆರಿ ಹೋಗಲಿಲ್ಲ. ಬಿಜ್ಜಳನ ಅಳಿಯನಾದ ಎರಡನೇ ಚಾವುಂಡನು ಸೇನಾಧಿಪತಿಯಾಗಿದ್ದನು. ಅವನು ಬಿಜ್ಜಳನ ವಧೆಯಾದ ದಿವಸ ಪಟ್ಟಣದಲ್ಲಿ ಇದ್ದಹಾಗೆ ತೋರುವದಿಲ್ಲ. ಚನ್ನ

ಬಸವೇಶ್ವರನು ಈ ಸಂಧಿಯನ್ನು ಸಾಧಿಸಿ ಬಿಜ್ಜಳನನ್ನು ವಧಿಸಿ ಪಟ್ಟಣ
ವನ್ನು ಬಿಟ್ಟು ತೀವ್ರಗತಿಯಿಂದ ಪಯಣಮಾಡುತ್ತ ಉಳಿವಿಯತ್ತ ಸಾಗಿದ
ನೆಂದು ನಮಗೆ ತೋರುತ್ತದೆ.

## ಕಲಬುರ್ಗಿ ವಿಜಾಪುರ ಜಿಲ್ಲೆಗಳಲ್ಲಿ ಶಿವಶರಣರ ಪ್ರಯಾಣ.

ಅವನು ಕಲಬುರ್ಗಿ ಜಿಲ್ಹೆ ಮತ್ತು ವಿಜಾಪೂರ ಜಿಲ್ಹೆಗಳೊಳಗಿಂದ
ತೀವ್ರಗತಿಯಿಂದ ಸಾಗಿ ಬೆಳಗಾವ ಜಿಲ್ಹೆಯಲ್ಲಿರುವ ತೊರಗಲ್ಲುನಾಡು
ಅಂದರೆ ಈಗಿನ ಬೈಲುಹೊಂಗಲ ತಾಲೂಕನ್ನು ಪ್ರವೇಶಿಸಿದನು. ಇದಕ್ಕೆ
ಅವನಿಗೆ ಹದಿನೈದು ಇಪ್ಪತ್ತು ದಿನಸಗಳು ಹತ್ತಿರಬಹುದು. ಈ ಕಾಲದಲ್ಲಿ
ಶಿವಶರಣರು ಈ ಪ್ರಾಂತದಲ್ಲಿ ಬಿಜ್ಜಳನ ದಂಡಾಳುಗಳ ಕೂಡ ಎಲ್ಲಿಯೂ
ಯುದ್ಧಮಾಡುವ ಪ್ರಸಂಗವು ಬಂದಿರುವದಿಲ್ಲ. ಒಂದು ವೇಳೆ ಅವರಲ್ಲಿ
ಯುದ್ಧಗಳಾಗಿದ್ದರೆ ಅವುಗಳ ಉಲ್ಲೇಖವು ವೀರಶೈವ ಗ್ರಂಥಗಳಲ್ಲಿ ಬರು
ತ್ತಿತ್ತು. ಅಥವಾ ಈ ಭಾಗದಲ್ಲಿ ಚನ್ನಬಸವ, ಮಡಿವಾಳಮಾಚಿದೇವ, ಮೊದ
ಲಾದ ಶಿವಶರಣರು ಕೆಲವುಕಾಲ ತಡೆದು ನಿಂತಿದ್ದರೆ ಅವರು ನಿಂತಸ್ಥಳಗಳಲ್ಲಿ
ದೇವಾಲಯಗಳಾಗಲೀ ಸಮಾಧಿಗಳಾಗಲೀ ಇರುತ್ತಿದ್ದವು. ಆದರೆ ಇವಾವು
ಇಲ್ಲಿ ಇರುವದಿಲ್ಲ. ಆದರೆ ಇಂಥ ಕುರುಹುಗಳು ಬೈಲಹೊಂಗಲ, ಖಾನಾ
ಪೂರ, ಧಾರವಾಡ ಮತ್ತು ಕಲಘಟಗಿ ತಾಲೂಕುಗಳಲ್ಲಿ ಹೇರಳವಾಗಿ
ದೊರೆಯುತ್ತವೆ. ಈ ಸಂಗತಿಗಳ ಮೇಲಿಂದ ನಾವು ಚನ್ನಬಸವೇಶ್ವರನು
ಯೋಗ್ಯಸಂಧಿಯನ್ನು ಸಾಧಿಸಿ ಬಿಜ್ಜಳ ವಧೆ ಮಾಡಿದ್ದಾನೆಂಬುದು ವ್ಯಕ್ತ
ವಾಗುತ್ತದೆಂದು ತಿಳಿಯಬಹುದು.

## ಶಿವಶರಣರ ಧರ್ಮ ಯುದ್ಧ

ಬಿಜ್ಜಳನ ವಧೆಯಾದುದು ವೈಯಕ್ತಿಕ ಕಾರಣದ ಮೂಲಕ ಇರ
ಲಿಲ್ಲ. ಶಿವಶರಣರ ತತ್ವಗಳ ಬಗ್ಗೆ ಸಮಾಜಗಳಲ್ಲಿ ಉಂಟಾದ ಪರಸ್ಪರ
ದ್ವೇಷ ಮತ್ತು ಹಗೆತನದ ಮೂಲಕ ಆಗಿದೆಂಬುದನ್ನು ನಾವು ಲಕ್ಷಿಸುವದು
ಅವಶ್ಯವಿದೆ. ಈ ಸಮಾಜಗಳಲ್ಲಿ ಆದ ಯುದ್ಧಗಳು ಒಬ್ಬರನ್ನೊಬ್ಬರು ಸೋಲಿಸು
ವದಕ್ಕೋಸ್ಕರ ಮಾತ್ರವಲ್ಲ, ಪರಸ್ಪರನ್ನು ಪೂರ್ಣವಾಗಿ ಸಂಹರಿಸುವದೇ
ಅವುಗಳ ಮುಖ್ಯ ಉದ್ದೇಶವಾಗಿತ್ತು. ಶಿವಶರಣರು ನಾಡಿನಲ್ಲಿ ಉಳಿಯ
ದೇಕೋ ಅಳಿಯಬೇಕೋ ಎಂಬುದು ಮುಖ್ಯ ಪ್ರಶ್ನೆಯಾಗಿತ್ತು. ಇದು ಒಂದು
ಧರ್ಮಯುದ್ಧವಾಗಿತ್ತು ಇದರಲ್ಲಿ ಶಿವಶರಣರು ಅತ್ಯಲ್ಪ ಸಂಖ್ಯಾಕರು
ಅವರ ವಿರುದ್ಧವಾಗಿ ಹೋರಾಡುವವರು ಪುರಾತನ ಧರ್ಮವನ್ನು ಪಾಲಿ

ಸುತ್ತ ಬಂದ ವರ್ಣಾಶ್ರಮಿಗಳೂ ಜೈನರೂ ಆಗಿದ್ದರು. ಅವರು ಚನ್ನಬಸವಾದಿ ಪ್ರಮಥರನ್ನು ಸಂಹರಿಸಲು ಉದ್ಯುಕ್ತರಾಗಿದ್ದರು. ಈ ಕಾಲದಲ್ಲಿ ಶಿವಶರಣರು, ತಾವು ಸೋತರೆ ತಮ್ಮ ಅಸ್ತಿತ್ವವು ಉಳಿಯಲಾರದೆಂಬುದು ಅವರಿಗೆ ತಿಳಿದಿತ್ತು. ಆದ್ದರಿಂದ ಅವರು ಸಹ್ಯಾದ್ರಿಯ ಕಾಡನ್ನು ಪ್ರವೇಶಿಸಿ ಅಲ್ಲಿ ಸುರಕ್ಷಿತವಾಗಿ ಇರಬೇಕೆಂದು ಬಯಸಿದ್ದರು. ಅವರಲ್ಲಿ ಅನೇಕರು ಪೂರ್ವ ದಿಶೆಯತ್ತ ಶ್ರೀಶೈಲ ಪ್ರಾಂತಕ್ಕೆ ಹೋಗಿ ಅಲ್ಲಿಯ ಬೆಟ್ಟಗಳ ಆಶ್ರಯವನ್ನು ಹೊಂದಲಪೇಕ್ಷಿಸಿದರು. ಈ ತರದ ಧರ್ಮಯುದ್ಧಗಳನ್ನು ಈ ಪೂರ್ವ ಪ್ರಾಂತದಲ್ಲಿ ಪಂಡಿತಾರಾಧ್ಯನು ನಡಿಸುವ ಪ್ರಸಂಗವು ಒಂದುಸಾರೆ ಬಂದಿತ್ತು. ಆವುಗಳನ್ನು ಆತನ ಅನುಯಾಯಿಗಳು ಎದುರಿಸಿ ಜಯವನ್ನು ಸಂಪಾದಿಸಿದ್ದರು. ಆಮೇಲೆ ಅವರು ಕಲ್ಯಾಣಕ್ಕೆ ಹೊರಡಲು ಉದ್ಯುಕ್ತರಾಗಿದ್ದರು. ಅಷ್ಟರಲ್ಲಿ ಕಲ್ಯಾಣ ಪಟ್ಟಣದಲ್ಲಿ ಹರಳಯ್ಯ ಮಧುವಯ್ಯಗಳ ಪ್ರಸಂಗವು ಉಂಟಾಗಿತ್ತು ಮತ್ತು ಘೋರಯುದ್ಧಗಳು ಉತ್ತರ ಕರ್ನಾಟದಲ್ಲೆಲ್ಲ ಪ್ರಾರಂಭಿಸಿದ್ದವು. ಈ ತರದ ದೃಶ್ಯವು ಭಾರತದಲ್ಲಿ ಉಂಟಾದ ಯಾವ ಧಾರ್ಮಿಕ ಕ್ರಾಂತಿಗಳಲ್ಲಿ ಕಂಡು ಬರುವದಿಲ್ಲ.

### ದೇಶದ ಪರಿಸ್ಥಿತಿ

ಈ ಕಾಲದಲ್ಲಿ ಅನೇಕ ಸಾಮಂತ ರಾಜರು ಕರ್ನಾಟಕದಲ್ಲಿದ್ದರು. ಅವರಲ್ಲಿ ಸವದತ್ತಿಯ ರಟ್ಟರು, ನೊಳಂಬ ಪಲ್ಲವರು ಮತ್ತು ಪಾಂಡ್ಯ ರಾಜರು ಮುಖ್ಯರಾಗಿದ್ದರು. ಇವರಲ್ಲಿ ಅನೇಕರು ಜೈನಧರ್ಮವನ್ನು ಪಾಲಿಸುತ್ತಿದ್ದರು. ಇವರಲ್ಲದೆ ಜೈನಧರ್ಮೀಯರ ನಿಬಿಡವಾದ ವಸ್ತಿಯು ನಾಡಿನಲ್ಲಿತ್ತು. ಬಿಜ್ಜಳನು ಸಹ ಜೈನ ಧರ್ಮವನ್ನು ಪಾಲಿಸುವವನಾಗಿದ್ದನು. ಜೈನರಲ್ಲಿ ಬಹಳ ಜನರು ಆಡಳಿತೆಯಲ್ಲಿಯೂ ಸೈನ್ಯದಲ್ಲಿಯೂ ಸೇರ್ಪಡೆಯಾಗಿದ್ದರು. ಇದರಂತೆಯೇ ವರ್ಣಾಶ್ರಮಿಗಳು ವಿಕ್ರಮಾದಿತ್ಯನ ಕಾಲದಿಂದಲೂ ನಾಡಿನಲ್ಲಿ ಬಹಳ ಪ್ರಾಬಲ್ಯವನ್ನು ಹೊಂದಿದ್ದರು. ಅವರು ಶಿವಶರಣರಿಗೆ ಕಡುತರವಾದ ವಿರೋಧಿಗಳಾಗಿದ್ದರು. ಇವರೂ ಕೂಡ ಶಿವಶರಣರು ಪ್ರತಿಪಾದಿಸುತ್ತಿದ್ದ ತತ್ವಗಳನ್ನು ವಿರೋಧಿಸುವವರಾಗಿದ್ದರು. ಇವರಲ್ಲದೆ ಈ ಕಾಲದಲ್ಲಿ ಪಾಶುಪತರೂ ಕಾಳಾಮುಖರೂ ಪ್ರಬಲ ಸಮಾಜದವರಾಗಿದ್ದರು. ಅವರು ಮುತ್ತಿಗಿ, ವಿಜಾಪೂರ, ಶಿರಸಂಗಿ, ಬಳ್ಳಿಗಾಂವಿ ಮೊದಲಾದ ಕಡೆಗೆ ದಟ್ಟವಾಗಿ ವಾಸಿಸುತ್ತಿದ್ದರು. ಇವರ ಧರ್ಮವನ್ನು ಪಾಲಿಸುತ್ತಿದ್ದ ಬಮ್ಮಿದೇವನು ಬಹು ಬಲಾಢ್ಯ ದಂಡಾಧಿ

ಪತಿಯಾಗಿದ್ದನು. ಇವನು ಶಿವಶರಣರಿಗೆ ಸಹಾಯ ಮಾಡುವನೆಂದು ಚನ್ನಬಸವೇಶ್ವರರಿಗೆ ಮೊದಲು ತೋರಿತ್ತು. ಆದ್ದರಿಂದ ಅವನು ಕೊರಗಲ್ಲು ನಾಡನ್ನು ಪ್ರವೇಶಿಸಿದ್ದನು. ಆದರೆ ಬರ್ಮದೇವನು ಶಿವಶರಣರಿಗೆ ಎಷ್ಟು ಮಾತ್ರವೂ ಸಹಾಯ ಮಾಡಲಿಲ್ಲ. ಇವನಲ್ಲದೆ ಈ ಕಾಲದಲ್ಲಿ ಶಿಲಾಹಾರರೂ ಕದಂಬ ವಂಶದ ಸಾಮಂತ ರಾಜರೂ ಪಶ್ಚಿಮಕಡೆಯ ನಾಡುಗಳಲ್ಲಿ ಆಳುತ್ತಿದ್ದರು. ಆದರೆ ಶಿವಶರಣರು ದುರ್ಬಲರಾಗಿದ್ದರಿಂದ ಅವರು ಸಹ ತಟಸ್ಥರಾಗಿ ಉಳಿದರು.

## ಶಿವಶರಣರ ಬಿಕ್ಕಟ್ಟಿನ ಪರಿಸ್ಥಿತಿ

ಈ ತರದ ಪರಿಸ್ಥಿತಿಯು ಶಿವಶರಣರಿಗೆ ಉಂಟಾಗಿತ್ತು. ಇದರಿಂದ ಅವರ ಸ್ಥಿತಿಯು ಅತ್ಯಂತ ಬಿಕ್ಕಟ್ಟಿನದಾಗಿದ್ದಿತು. ಆದರೆ ಅವರು ಧೈರ್ಯಗೆಡಲಿಲ್ಲ. ಇದಿರಾಳಿಗಳಿಗೆ ಅವರು ಶರಣು ಹೋಗಲಿಲ್ಲ. ಅವರು ಉಳಿವಿಯವರೆಗೆ ನಿರ್ಭಯವಾಗಿ ಹೋರಾಡುತ್ತ ಸಾಗಿದರು. ಇದರಲ್ಲಿ ಹೆಂಗಳೆಯರೂ ಕೂಡ ಅವರೊಡನೆ ಅಂಗ ವಹಿಸಿದ್ದರು. ಹೀಗೆ ಶಿವಶರಣರು ಶತ್ರುಗಳನ್ನು ಇದಿರಿಸುತ್ತ ಮುಂದೆಸಾಗುತ್ತ ಬಂದರು.

ಈ ಹೋರಾಟಗಳ ಸಾದ್ಯಂತ ವೃತ್ತಾಂತವು ನಮಗೆ ಇನ್ನೂ ಉಪಲಬ್ಧವಾಗಿಲ್ಲ. ಆದರೆ ನಡೆದ ವೃತ್ತಾಂತಗಳು ವೀರಶೈವ ಗ್ರಂಥಗಳಲ್ಲಿ ಕೆಲಮಟ್ಟಿಗೆ ಬಂದಿರುತ್ತವೆ. ಅವುಗಳನ್ನೇ ನಾವಿಲ್ಲಿ ವಿವರಿಸಿದ್ದೇವೆ.

## ಶಿವಶರಣರ ನಡೆ

ಪ್ರಸ್ತುತ ಕಾಲದಲ್ಲಿ ಬಹುಜನ ಸಮಾಜದಲ್ಲಿ ಶಿವಶರಣರ ವಿಷಯವಾಗಿ ಕೆಲವು ವಿಶೇಷತರದ ಕಲ್ಪನೆಗಳಿದ್ದು ಅವುಗಳ ವಿಷಯವಾಗಿ ನಾವು ಇಲ್ಲಿ ವಿವೇಚಿಸುವದು ಅವಶ್ಯವಿದೆ. ಶಿವಶರಣರೆಂದರೆ ಅದ್ಭುತ ಶಕ್ತಿಯುಳ್ಳವರು, ಅವರು ತಮ್ಮ ಯೋಗ ಸಾಮರ್ಥ್ಯದಿಂದ ಸಿದ್ಧಿಗಳನ್ನು ಮಾಡಬಲ್ಲವರು ಮತ್ತು ಜಗತ್ತಿನಲ್ಲಿಯ ಸೃಷ್ಟಿಯ ವ್ಯಾಪಾರಗಳನ್ನು ತಮ್ಮ ಅಂಕಿತದಲ್ಲಿಟ್ಟುಕೊಂಡವರು ಎಂದು ಅವರ ಪುರಾಣಗಳಲ್ಲಿ ಹೇಳಿರುತ್ತದೆ. ಸಾಮಾನ್ಯ ಜನರು ಇವು ನಿಜವೆಂದು ತಿಳಿದಿರುತ್ತಾರೆ. ಬೇರೆ ಕೆಲವರು ಶಿವಶರಣರೆಂದರೆ ಯಾವಾಗಲೂ ಶಿವಪೂಜೆಯನ್ನು ಮಾಡುತ್ತ ದೇವರ ಧ್ಯಾನದಲ್ಲಿರುವಂಥವರೆಂದೂ ಯೋಗಸಾಧನೆಯಲ್ಲಿದ್ದುಕೊಂಡು

ಕಾಂತವಾಸಿಗಳೆಂತಲೂ ತಿಳಿಯುವದುಂಟು. ಆದರೆ ನಾವು ಈವರೆಗೆ ಸುಮಾರು ೧೫೦-೨೦೦ ಶಿವಶರಣರ ಚರಿತ್ರೆಗಳನ್ನು ಪ್ರಕಟಿಸುತ್ತ ಬಂದಿದ್ದೇವೆ. ವುಗಳ ಮೇಲಿಂದ ಶಿವಶರಣರಲ್ಲಿ ಕೆಲವರು ಇಂಥ ಅದ್ಭುತ ಶಕ್ತಿಯನ್ನು ಪಡೆದವರಿದ್ದರೆಂದು ತೋರಿಬಂದರೂ ಅವರೆಲ್ಲರು ಮೇಲಿನಂತೆ ಆಚರಿಸದೆ ಎಲ್ಲ ಜನರು ಹೇಗೆ ದುಡಿದು ಜೀವಿಸುತ್ತಾರೋ ಹಾಗೆ ಅವರೂ ಕೂಡ ಈ ಜಗತ್ತಿನಲ್ಲಿದ್ದುಕೊಂಡು ತಮ್ಮ ಜನ್ಮ ಸಾರ್ಥಕ್ಯ ಮಾಡಿಕೊಂಡಿದ್ದಾರೆಂಬುದು ತಿಳಿಯುತ್ತದೆ. ಎಲ್ಲಜನರಂತೆ ದುಡಿದು ತಮ್ಮ ಲಿಂಗಜೀವನವನ್ನು ಸಾಗಿಸುತ್ತಬಂದಿದ್ದಾರೆ. ಬಸವೇಶ್ವರ ಮೊದಲುಗೊಂಡು ಎಲ್ಲರೂ ತಮ್ಮ ಜೀವನದಲ್ಲಿ ಕಷ್ಟಗಳನ್ನು ಅನುಭವಿಸಿದ್ದಾರೆ. ಅವರಲ್ಲಿ ಅನೇಕರನ್ನು ದುಷ್ಟ ಜನರು ಪೀಡಿಸಿದ್ದಾರೆ. ಆದರೆ ಶಿವಶರಣರು ಶಿವಾನುಭವದ ತತ್ವಗಳಂತೆ ಕಾರ್ಯಮಾಡುತ್ತ ಶಿವಾನುಭವದ ಮಾರ್ಗದಿಂದ ಚ್ಯುತಿಯನ್ನು ಹೊಂದಿರುವದಿಲ್ಲ. ಅವರು ತಮ್ಮ ಷಟ್‌ಸ್ಥಲಗಳ ಆಚರಣೆಯನ್ನು ಬಿಟ್ಟಿರುವದಿಲ್ಲ. ಹೀಗೆ ಅವರು ಆಚರಿಸಿದ್ದರಿಂದ ಬಹುಜನ ಸಮಾಜವು ಅವರನ್ನು ಆದರಿಸಿತು

ಶಿವಶರಣರು ತಮ್ಮಲ್ಲಿ ಅಲೌಕಿಕ ಸಾಮರ್ಥ್ಯವನ್ನು ಉಂಟು ಮಾಡಿಕೊಂಡು ಅದರ ಮೂಲಕ ಜನರನ್ನು ಅಂಕಿತದಲ್ಲಿ ಇಟ್ಟು ಕೊಳ್ಳಲು ಎಂದೂ ಪ್ರಯತ್ನಿಸಿರುವದಿಲ್ಲ. ಅವರ ಅಸಂಖ್ಯ ವಚನಗಳು ಈಗ ಪ್ರಕಟವಾಗಿವೆ. ಅವುಗಳಲ್ಲಿ ಅವರು ಮನುಷ್ಯನು ಹೇಗೆ ನಡೆಯಬೇಕೆಂಬುದನ್ನು ಸವಿಸ್ತಾರವಾಗಿ ನಿರೂಪಿಸಿರುವರು. ಅವುಗಳಲ್ಲಿ ಅವರು ಸಿದ್ಧಿಗಳನ್ನು ಸಾಧಿಸಿಕೊಂಡು ಅವುಗಳ ಮೂಲಕ ಜನರನ್ನು ತಮ್ಮ ವಶದಲ್ಲಿಟ್ಟುಕೊಳ್ಳಬೇಕೆಂದು ಅವರು ಹೇಳಿಲ್ಲ. ಆದರೆ ನೀತಿಯಿಂದ ಆಚರಿಸುತ್ತ ಕಷ್ಟಗಳನ್ನು ದೂರಮಾಡಿಕೊಳ್ಳಲು ಅವರು ಬೋಧಿಸುತ್ತಾರೆ. ದುಷ್ಟ ಜನರಿದ್ದರೆ ಅವರಿಂದ ದೂರಿರಲು ಅವರು ಹೇಳುತ್ತಾರೆ. ಒಂದು ವೇಳೆ ಇವರು ತಮ್ಮ ಮೈಮೇಲೆ ಬಂದು ತಮ್ಮ ಆಚರಣೆಗೆ ಭಂಗ ತಂದರೆ ಅವರನ್ನು ಶಿಕ್ಷಿಸಲು ಹಿಂಜರಿಯಬಾರದೆಂತಲೂ ಅವರು ಬೋಧಿಸಿದ್ದಾರೆ. ಪ್ರಸಂಗ ಬಂದರೆ ಅವರೊಡನೆ ಯುದ್ಧ ಹೂಡಲೂ ಸಿದ್ಧರಿರಬೇಕೆಂದು ಅವರು ಹೇಳುತ್ತಾರೆ. ಈ ವಿಷಯಗಳು ಅವರು ಬೋಧಿಸುವ ಆಚಾರಗಳಲ್ಲಿ ಸ್ಪಷ್ಟವಾಗಿ ಉಲ್ಲೇಖವಾಗಿವೆ.

## ಶಿವಶರಣರ ಕಠಿಣ ಪರಿಸ್ಥಿತಿ

ಬಿಜ್ಜಳನು ಶಿವಶರಣರನ್ನು ಮೊದಲು ಘಾತಿಸಲು ಮುಂದಾದನು. ಅವನು ಅವರಲ್ಲಿ ಕೆಲವರನ್ನು ಕೊಂದು ಹಾಕಿದನು. ಹೀಗೆ ತಮ್ಮ ನಡೆಯಂತೆ ನಡೆಯಲು ಶಿವಶರಣರಿಗೆ ಅವನು ಪ್ರತಿಬಂಧವನ್ನುಂಟು ಮಾಡಿದನು. ಇದರಿಂದ ಅವರಿಗೆ ದೇಶದಲ್ಲಿ ತಮ್ಮ ಧರ್ಮದಂತೆ ನಡೆಯುವದೇ ಅಶಕ್ಯವಾಗಹತ್ತಿತು. ಆಗ ಶಿವಶರಣರಿಗೆ ಬಿಜ್ಜಳನ ಕೂಡ ಯುದ್ಧಮಾಡುವ ಪ್ರಸಂಗವು ಬಂದಿತು. ಒಂದು ವೇಳೆ ಅವರು ಈ ಕಾಲದಲ್ಲಿ ಶಸ್ತ್ರ ಹಿಡಿಯದೆ ಹೋಗಿದ್ದರೆ ಪರಧರ್ಮೀಯರು ಅವರನ್ನು ಜೀವದಿಂದ ಉಳಿಯಗೊಡುತ್ತಿದ್ದಿಲ್ಲ. ಆದ್ದರಿಂದ ಅವರು ಈ ದೇಶವನ್ನು ಬಿಟ್ಟು ತಮ್ಮ ಸುರಕ್ಷಿತೆಯ ಸಲುವಾಗಿ ಕಾರವಾರ ಜಿಲ್ಲೆಯಲ್ಲಿರುವ ಉಳವಿಯ ಭಯಾನಕವಾದ ಅರಣ್ಯದಲ್ಲಿ ವಾಸಮಾಡಲು ಹೊರಟರು. ಆದರೆ ವೈರಿಗಳು ಅವರನ್ನು ಅಲ್ಲಿಯೂ ಬೆನ್ನಟ್ಟಿ ಅವರ ಸಂಹಾರಮಾಡಲು ಉದ್ಯುಕ್ತರಾದರು. ಇಂಥ ಸಮಯದಲ್ಲಿ ಶಿವಶರಣರು ಶಸ್ತ್ರವನ್ನು ಹಿಡಿದು ಹೋರಾಡದೆ ಗತ್ಯಂತರವಿರಲಿಲ್ಲ. ಶತ್ರುಗಳ ಕಡೆಗೆ ಬಲಾಢ್ಯವಾದ ಸೈನ್ಯವಿತ್ತು. ಆದರೆ ಶಿವಶರಣರು ಅಲ್ಪಸಂಖ್ಯಾಕರಾಗಿದ್ದರು. ಆದರೂ ಪರವಾದಿಗಳು ಅವರನ್ನು ನಾಶಮಾಡಲು ಹಾತೊರೆಯುತ್ತಿದ್ದರು. ಈಗಿನ ಕಾಲದಲ್ಲಿ ಬಹುಜನರು ಶಿವಶರಣರಿಗೊದಗಿದ ಈ ಸಂಕಟ ಕಾಲವನ್ನು ಅಲಕ್ಷಿಸಿ ಅವರು ಯುದ್ಧ ಮಾಡಿದ್ದನ್ನು ದೂರುತ್ತಿರುವದು ಕಂಡುಬರುತ್ತದೆ. ಆದರೆ ಅವರು ಸಿಕ್ಕ ಸ್ಥಿತಿಯನ್ನು ತಿಳಿದಲ್ಲಿ ಶಿವಶರಣರು ಈ ಕಾಲದಲ್ಲಿ ತೋರಿಸಿದ ಧೈರ್ಯ ಮತ್ತು ಸಾಹಸ ಇವುಗಳನ್ನು ನೋಡಿದಲ್ಲಿ ಅವರ ಬಗ್ಗೆ ಆದರ ಭಾವವನ್ನು ತಾಳದೆ ಇರಲಾರರು. ಈ ಕಾಲದಲ್ಲಿ ದೇಶದಲ್ಲಿ ಸುರಕ್ಷತೆಯು ಎಲ್ಲಿಯೂ ಇದ್ದಿದ್ದಿಲ್ಲ. ರಾಜ್ಯಗಳು ಅಸ್ಥಿರವಾಗಿದ್ದವು. ಇದ್ದ ರಾಜ್ಯಗಳಲ್ಲಿ ಯಾವಾಗಲೂ ಪರಸ್ಪರ ಯುದ್ಧಗಳಾಗುತ್ತಿದ್ದವು. ಇದಲ್ಲದೆ ಇಲ್ಲಿ ಬೇರೆ ಬೇರೆ ಧರ್ಮದವರು ವಾಸಿಸುತ್ತಿದ್ದು ಅವರಲ್ಲಿಯೂ ಪರಸ್ಪರರಿಗೋಸ್ಕರ ಸಹಕಾರಬುದ್ಧಿಯು ಇರಲಿಲ್ಲ. ಜೈನ ಬೌದ್ಧರು ಹಿಂದುಗಳಕೂಡ, ಶೈವ ವೈಷ್ಣವರು ಪರಸ್ಪರವಾಗಿ, ವೈಮನಸ್ಸು ತಾಳಿದವರಾಗಿದ್ದರು. ಇದರಿಂದ ಕೆಲವೊಂದು ಧರ್ಮದವರು ದೇಶತ್ಯಾಗ ಮಾಡಿದ್ದುಂಟು. ಜೈನರು ಕಾರವಾರ ಜಿಲ್ಲೆಯಲ್ಲಿ ಸ್ವಾದಿ, ಬೀಳಗಿ, ಈ ಕಾಡು ಪ್ರದೇಶಗಳಿಗೆ ಹೋದದ್ದುಂಟು. ಅಲ್ಲಿ ಅವರು ರಾಜ್ಯಸ್ಥಾಪನೆ ಮಾಡಿದರು. ಮುಂದೆ ಅವರು ಮಂಗಳೂರು ಪ್ರಾಂತಕ್ಕೂ ಹೋದರು.

ಇದೇ ಪ್ರಕಾರ ವೀರಶೈವರು ಮುಸಲ್ಮಾನರು ಕರ್ನಾಟಕವನ್ನು ಅಭಿಯೋಗಿಸಲು ಗೋವೆಯ ಕಡೆಗೆ ಮೊದಲು ಹೋದರು. ಅಲ್ಲಿ ಅವರು ಬಹಳ ದಿವಸ ಇರದೆ ಮುಂದೆ ಬಾಳೇಹಳ್ಳಿ ಕಾಡುಪ್ರದೇಶವನ್ನು ತಮ್ಮ ಮುಖ್ಯ ಸ್ಥಾನವನ್ನಾಗಿ ಮಾಡಿಕೊಂಡರು. ಇದರ ತರುವಾಯ ಅವರು ಉತ್ತರ ಕರ್ನಾಟಕವನ್ನು ಬಿಟ್ಟು ಕಾವೇರಿಯ ದಕ್ಷಿಣಕ್ಕೆ ತೆರಳಿದರು. ಇದರಂತೆಯೇ ಚನ್ನಬಸವೇಶ್ವರನು ತನ್ನೊಡನೆ ಇದ್ದ ಶಿವಶರಣರನ್ನು ಕರೆದುಕೊಂಡು ಉಳವಿಯ ಹತ್ತಿರವಿದ್ದ ಬಿಕ್ಕಟ್ಟಿನ ಪ್ರದೇಶದಲ್ಲಿ ವಸಾಹತು ಮಾಡಲು ಯೋಚಿಸಿದ್ದನು. ಆದರೆ ಜೈನರು ಅವನನ್ನು ಅಲ್ಲಿಯೂ ಬೆನ್ನಟ್ಟಿ ಶಿವಶರಣರನ್ನು ಸಂಹಾರ ಮಾಡಲು ಉದ್ಯುಕ್ತರಾದರು. ಆ ಪ್ರಕಾರ ಅವರು ಅಲ್ಲಿಗೆ ಬಂದು ಕಡೆಗೆ ಅವರ ಕೊಲೆ ಮಾಡಿದರು. ಆಗ ಜೀವದಿಂದ ಉಳಿದ ನಾಗಲಾಂಬಿಕೆಯು ಭದ್ರಮುನಿಯ ಸಲಹೆಯಿಂದ ಉಳವಿ ಪ್ರಾಂತವನ್ನು ಬಿಟ್ಟು ಬಾಳೇಹೊನ್ನೂರು ಇದ್ದ ಕಡೆಗೆ ಸ್ಥಳಾಂತರ ಮಾಡಿದಳು. ಆದರೆ ಮುಂದೆ ದೇಶದಲ್ಲಿ ಹೊಸವಾತಾವರಣವು ಉಂಟಾಯಿತು. ಎಲ್ಲೆಲ್ಲಿಯೂ ಶಿವಶರಣರ ತತ್ವಗಳು ಪ್ರಸಾರವಾಗಹತ್ತಿದ್ದವು. ವಚನಗಳನ್ನು ಬೋಧಿಸುವವರ ಸಂಖ್ಯೆಯು ಅಪರಿಮಿತವಾಗಿ ಬೆಳೆಯಿತು. ಇದರಿಂದ ಕರ್ನಾಟಕದಲ್ಲಿ ವೀರಶೈವರ ಸಂಖ್ಯೆಯು ಬೆಳೆದು ಇಲ್ಲಿ ಅವರ ಸಮಾಜವು ಸ್ಥಾಯಿಕವಾಗಿ ಉಳಿಯಿತು.

### ಉಳವಿಯು ಬಿಕ್ಕಟ್ಟಿನ ಸ್ಥಳವನ್ನು ಆಯ್ದದ್ದು.

ಈ ಬಿಕ್ಕಟ್ಟಿನ ಪರಿಸ್ಥಿತಿಯಲ್ಲಿ ಶಿವಶರಣರು ಪ್ರಸಂಗ ಬಂದರೆ ಉಳವಿಯ ಪರ್ವತ ಪ್ರದೇಶದಲ್ಲಿ ಆಗಮಿಸಿ ಅಲ್ಲಿ ಚಿರಸ್ಥಾಯಿಯಾಗಿ ವಾಸ ಮಾಡಬೇಕೆಂದು ನಿಶ್ಚಯಿಸಿಕೊಂಡು ಬಂದಿದ್ದರೆಂದು ನಮಗೆ ತೋರುತ್ತದೆ. ಆದ್ದರಿಂದ ಅವರು ಇದಕ್ಕೋಸ್ಕರ ಒಂದು ಅತ್ಯಂತ ಬಿಕ್ಕಟ್ಟಿನ ಪ್ರದೇಶವನ್ನು ಆಯ್ದುಕೊಂಡಿದ್ದರು. ಅದರ ಉತ್ತರಕ್ಕೆ ಜಗತ್ ಬೆಟ್ಟದಂಥ ಕಠಿಣ ಪ್ರದೇಶವಿದೆ. ಅದರ ದಕ್ಷಿಣಕ್ಕೆ ಕಾಳೀನದಿಯು ಇದ್ದಿತು. ಈ ನದಿಯಲ್ಲಿ ಆರುತಿಂಗಳು ನೀರು ಹರಿಯುತ್ತದೆ. ದೊಡ್ಡದಂಡುಗಳು ಅದನ್ನು ಹಗುರಾಗಿ ದಾಟುವದು ಕಠಿಣವಾದದ್ದು. ಈ ನದಿಯು ಉಳವಿಯು ಇದ್ದ ಭಾಗದಲ್ಲಿ ಉತ್ತರದಿಂದ ಪೂರ್ವಕ್ಕೆ ಹರಿದು ಲಾಳಗುಳಿ ಮತ್ತು ಕಿರವತ್ತಿ ಪ್ರದೇಶಗಳಲ್ಲಿ ಅತ್ಯಂತ ರಭಸದಿಂದ ಹರಿಯುತ್ತ ಮುಂದೆ ಅದು ದಕ್ಷಿಣಕ್ಕೆ ಸಾಗಿ ಕಾರವಾರದ ಬಳಿಯಲ್ಲಿ ಸಮುದ್ರಕ್ಕೆ ಕೂಡುತ್ತದೆ. ಈ ಪ್ರದೇಶದಲ್ಲಿ ಕಿನ್ನರೀ

(೪೧) ಪಾದ್ಯಾರ್ಘ್ಯಾಚಮನ (೪೨) ಲಿಂಗಕ್ಕೆ ವಿಭೂತಿಧಾರಣ (೪೩) ರುದ್ರಾಕ್ಷಧಾರಣ (೪೪) ಗಂಧಸಮರ್ಪಣ (೪೫) ಅಕ್ಷತಸಮರ್ಪಣ (೪೬) ಪುಷ್ಪಸಮರ್ಪಣ.

(೪೭) ಲಿಂಗಾವಯವ ಪೂಜೆ (೪೮) ಶಿವಸಹಸ್ರನಾಮ ಪಠನ (೪೯) ಲಿಂಗದಲ್ಲಿ ಮಂತ್ರಾನುಸಂಧಾನ (೫೦) ಲಿಂಗದಲ್ಲಿ ಮಾತೃಕಾನ್ಯಾಸ (೫೧) ಲಿಂಗದಲ್ಲಿ ಕಲಾನ್ಯಾಸ.

(೫೨) ಧೂಪಸಮರ್ಪಣ (೫೩) ದೀಪಸಮರ್ಪಣ (೫೪) ಕರ್ಪೂರ ಸಮರ್ಪಣ (೫೫) ಪತಾಕಸಮರ್ಪಣ (೫೬) ಅರ್ಘ್ಯಸಮರ್ಪಣ (೫೭) ತಾಂಬೂಲ ಸಮರ್ಪಣ (೫೮) ಮುಖವಾಸನ ಸಮರ್ಪಣ (೫೯) ಆಸನಸಮರ್ಪಣ (೬೦) ಪಾದುಕಸಮರ್ಪಣ (೬೧) ಘಂಟಾನಾದ ಸಮರ್ಪಣ (೬೨) ಆದರ್ಶ ದರ್ಶನ (೬೩) ಚಾಮರ ಸಮರ್ಪಣ (೬೪) ವ್ಯಜನ ಸಮರ್ಪಣ (೬೫) ಛತ್ರಸಮರ್ಪಣ. (೬೬). ಪುಷ್ಪಾಂಜಲಿ.

(೬೭) ನಮಸ್ಕಾರ. (೬೮) ಪುರಾಣಶ್ರವಣ (೬೯) ಸ್ತೋತ್ರಸಮರ್ಪಣ (೭೦) ಮುಖವಾದ್ಯ ಸಮರ್ಪಣ (೭೧) ನಾಮಸಂಕೀರ್ತನ (೭೨) ಪುಷ್ಪಸಮರ್ಪಣ (೭೩) ತರ್ಪಣ (೭೪) ಪುಷ್ಪಾಂಜಲಿ (೭೫) ಮಂತ್ರಪುಷ್ಪ ಸಮರ್ಪಣ (೭೬) ಪೂಜಾಸಮಾಪ್ತಿ.

ಷೋಡಶೋಪಚಾರಗಳು:- ಪಾದ್ಯ, ಅರ್ಘ್ಯ, ಆಚಮನ, ಪತ್ರ, ಪುಷ್ಪ, ಗಂಧ, ಅಕ್ಷತೆ, ರುದ್ರಾಕ್ಷಮಾಲಿಕೆ, ಛತ್ರ, ಚಾಮರ, ವ್ಯಜನ, ಗೀತ, ವಾದ್ಯ, ನರ್ತನ, ಪ್ರದಕ್ಷಿಣ, ನಮಸ್ಕಾರ, ಸ್ತೋತ್ರ.

ಅಷ್ಟವಿಧಾರ್ಚನೆ:— ಜಲಾಭಿಷೇಕ, ಗಂಧಧಾರಣ, ಅಕ್ಷತಾರ್ಪಣ, ಪತ್ರಪುಷ್ಪಾರ್ಪಣ, ಧೂಪಸಮರ್ಪಣ, ದೀಪಸಮರ್ಪಣ, ನೈವೇದ್ಯ ಸಮರ್ಪಣ, ತಾಂಬೂಲ ಸಮರ್ಪಣ.

ಷಡಂಗನ್ಯಾಸಗಳು:— ಅವು ಅಂಗನ್ಯಾಸ, ಇಂದ್ರಿಯನ್ಯಾಸ, ಕರಾಂಗುಲಿನ್ಯಾಸ, ಚಕ್ರನ್ಯಾಸ, ಭೂತನ್ಯಾಸ, ಧಾತುನ್ಯಾಸ ಎಂದಿವೆ.

ಸಪ್ತೋದಕಗಳು:— ಅವು ಗಂಧೋದಕ, ಪುಷ್ಪೋದಕ, ಸುವರ್ಣೋದಕ, ರತ್ನೋದಕ, ಮಂತ್ರೋದಕ, ತಿಲೋದಕ, ತೀರ್ಥೋದಕ ಎಂದಿವೆ.

ಪಂಚಾಮೃತ:— ಅವು ಕ್ಷೀರ, ಘೃತ, ದಧಿ, ಮಧು, ಶರ್ಕರ ಇವು ಸೇರಿದರೆ ಪಂಚಾಮೃತ.

ದ್ವಾದಶವಿಧ ಪೂಜೆ:— ಅಭಿಷೇಕ, ಅಂಗಾರಕಾಸನ, ಛತ್ರಧಾರಣ, ಗಂಧಧಾರಣ, ಅಕ್ಷತಧಾರಣ, ಪತ್ರಪುಷ್ಪಧಾರಣ, ಧೂಪಸಂವೀಜನ, ಧೂಪಪ್ರಸಾರಣ, ದೀಪಪ್ರಕಾಶನ, ನೈವೇದ್ಯಸಮರ್ಪಣ, ತಾಂಬೂಲ ಪ್ರದಾನ, ವಸ್ತ್ರಪ್ರಾವರಣ.

ತ್ರಯೋಪಚಾರಗಳು:— ಸ್ನಾನ, ಪೂಜಾ, ನೈವೇದ್ಯ.

ಪಂಚೋಪಚಾರಗಳು:— ಸ್ನಾನ, ಪೂಜಾ, ನೈವೇದ್ಯ, ಪ್ರದಕ್ಷಿಣ, ನಮಸ್ಕಾರ.

ಅಷ್ಟೋಪಚಾರಗಳು:— ಅಭಿಷೇಕ, ಪೂಜೆ, ನೈವೇದ್ಯ, ಪ್ರದಕ್ಷಿಣ, ನಮಸ್ಕಾರ, ಸಂಗೀತ, ನರ್ತನ, ವಾದ್ಯ.

ಚತುರ್ವಿಂಶೋಪಚಾರಗಳು:— ಆಹ್ವಾನ, ಆಸನ, ಪಾದ್ಯ, ಅರ್ಘ್ಯ, ಆಚಮನ, ಸ್ನಾನ, ಗಂಧ, ಅಕ್ಷತೆ, ಪತ್ರಪುಷ್ಪ, ವಸ್ತ್ರ, ಯಜ್ಞೋಪವೀತ, ಧೂಪ, ದೀಪ, ನೈವೇದ್ಯ, ಫಲ, ತಾಂಬೂಲ, ದರ್ಪಣ, ಪ್ರದಕ್ಷಿಣೆ, ನಮಸ್ಕಾರ, ಸ್ತೋತ್ರ, ಸಂಗೀತ, ವಾದ್ಯ, ನರ್ತನ, ಆತ್ಮಾರ್ಪಣ.

ದ್ವಾತ್ರಿಂಶದುಪಚಾರಗಳು:— ಆಹ್ವಾನ, ಆಸನ ಪಾದ್ಯ, ಅರ್ಘ್ಯ, ಆಚಮನ, ಅಭಿಷೇಕ, ವಸ್ತ್ರ, ಯಜ್ಞೋಪವೀತ, ಅಲಂಕಾರ, ಅನುಲೇಪನ, ತಿಲಾಕ್ಷತೆ, ಪತ್ರಪುಷ್ಪ, ಧೂಪ, ದೀಪ, ನೀರಾಜನ, ನೈವೇದ್ಯ ಫಲ, ತಾಂಬೂಲ, ದರ್ಪಣ, ಘಂಟಾನಾದ, ಪ್ರದಕ್ಷಿಣ, ನಮಸ್ಕಾರ, ಸ್ತೋತ್ರ, ಪುರಾಣಪಠನ, ಛತ್ರ, ಚಾಮರ, ವ್ಯಜನ, ಶಯ್ಯಾ, ಸಂಗೀತ, ವಾದ್ಯ, ನರ್ತನ, ಆತ್ಮಾರ್ಪಣ.

ಪಂಚಗವ್ಯ:— ಗೋಮೂತ್ರ, ಗೋಮಯ, ಗೋಕ್ಷೀರ, ಗೋದಧಿ, ಗೋಘೃತ.

ಷಟ್ಸಮ್ಮಾರ್ಜನ:— ಗೋಮಯ, ಗೋರೋಚನ, ಗೋಮೂತ್ರ, ಗೋದಧಿ, ಗೋಕ್ಷೀರ, ಗೋಘೃತ.

ಧೂಪಕ್ಕೆ ಉಪಯೋಗಿಸುವ ಪದಾರ್ಥಗಳು:— ಕೃಷ್ಣಾಗರು, ಗಂಧಸಾರ, ಗುಗ್ಗುಳ, ಬಿಳಿಯಗರು, ಹಾಲುಮಡ್ಡಿ, ಬಿಲ್ವಪತ್ರೆಯ ಹಣ್ಣಿನೊಳಗಿನ ತಿರುಳು, ಆಕಳ ತುಪ್ಪ, ಜೇನತುಪ್ಪ, ತಿಲಾಂಶ, ಕರ್ಪೂರ.

ಲಿಂಗದ ಪಂಚಸೂತ್ರ:— (೧) ಲಿಂಗದ ಸುತ್ತಳತೆ (೨) ಸುತ್ತಳತೆಯಷ್ಟೇ ಪೀಠ (೩) ಸುತ್ತಳತೆಯಷ್ಟೇ ದೀರ್ಘ (೪) ಸುತ್ತಳತೆಯಷ್ಟೇ ಅಗಲ (೫) ಸುತ್ತಳತೆಯ ಅರ್ಧ ಪ್ರವಣಾ ಗೋಮುಖ.

ಟೀಕು: ಮೇಲೆ ಹೇಳಿದ ಕ್ರಮಗಳು ಶೈವರಿಂದ ತೆಗೆದುಕೊಂಡಂಥವುಗಳಾಗಿರುತ್ತವೆ. ಸ್ಥಾವರ ಲಿಂಗ ಪೂಜೆಗಳು ಆ ರೀತಿ ನಡೆಯುವದುಂಟು. ವೀರಶೈವದಲ್ಲಿ ಅವುಗಳನ್ನೇ ಇಷ್ಟಲಿಂಗ ಪೂಜೆಯಲ್ಲಿಯೂ ನಡೆಸುವವರುಂಟು. ಆದರೆ ಸ್ಥೂಲವಾಗಿ ಅವುಗಳಲ್ಲಿ ಕೆಲವು ಮಾತ್ರ ಶಿವಾನುಭವಕ್ಕೆ ಅನ್ವಯಿಸುತ್ತವೆ. ಅವು ಯಾವವೆಂದರೆ:—ನ್ಯಾಸಗಳು, ಧಾರಣೆಗಳು, ಮುದ್ರೆಗಳು, ಆಸನಗಳು ಮತ್ತು ಮಂತ್ರ ಸಂಬಂಧ ಇವುಗಳು ಮುಖ್ಯವಾಗಿರುತ್ತವೆ.

ನ್ಯಾಸಗಳು:— ಇವು ಕಲಾನ್ಯಾಸ, ಷಡಂಗನ್ಯಾಸ, ಪಂಚಬ್ರಹ್ಮನ್ಯಾಸ, ಪಂಚಾಕ್ಷರ ನ್ಯಾಸ ಎಂದಿರುತ್ತವೆ. ದೇಹದ ಅವಯವಗಳಲ್ಲಿ ಮಂತ್ರಗಳನ್ನು ನ್ಯಾಸಮಾಡುವದು ಕಲಾನ್ಯಾಸ. ಹೃದಯ, ಶಿರಸ್ಸು, ಶಿಖಾ, ಕವಚ, ನೇತ್ರ, ಇವುಗಳಲ್ಲಿ ನಿಶ್ಚಿತ ಮಂತ್ರಗಳನ್ನು ನ್ಯಾಸ ಮಾಡುವದು ಷಡಂಗ ನ್ಯಾಸ. ಪಂಚಬ್ರಹ್ಮಗಳನ್ನು ಶಿರಸ್ಸು, ಮುಖ, ಹೃದಯ, ಗುಹ್ಯ, ಪಾದ ಇವುಗಳಲ್ಲಿ ನ್ಯಾಸ ಮಾಡುವದು ಪಂಚಬ್ರಹ್ಮನ್ಯಾಸ. ಮೂರ್ಧ, ಲಲಾಟ, ಕಂಠ, ಹೃದಯ, ನಾಭಿಗಳಲ್ಲಿ ಯಕಾರಾದಿ ನಕಾರಾಂತವಾಗಿ ಪಂಚಾಕ್ಷರಗಳನ್ನು ನ್ಯಾಸಮಾಡುವದು ಪಂಚಾಕ್ಷರನ್ಯಾಸ. ಇವುಗಳಲ್ಲಿ ಕೆಲವು ಶೈವಪರ ಮಂತ್ರಗಳಿವೆ. ವೀರಶೈವ ಸಂಪ್ರದಾಯದವುಗಳಲ್ಲ.

ಅಂಗನ್ಯಾಸಗಳು:— ಇವು ಸೃಷ್ಟಿನ್ಯಾಸ, ಸ್ಥಿತಿನ್ಯಾಸ, ಸಂಹಾರ ನ್ಯಾಸ ಎಂದಿವೆ. ಷಡಕ್ಷರ ಮಂತ್ರಗಳನ್ನು ದೇಹಕ್ಕೆ ಸಂಬಂಧಿಸುವ ವಿಧಗಳು ಇವು ಇವೆ.

ಅಂಗುಲಿ ನ್ಯಾಸಗಳು:—ಇವುಗಳ ಮೂಲಕ ಜಪಕಾಲದಲ್ಲಿ ಅಂಗುಲಿಗಳಲ್ಲಿ ಷಡಕ್ಷರಗಳನ್ನು ಆಯಾ ಶಕ್ತಿಗಳೊಡನೆ ತನಗೆ ಸಂಬಂಧಪಡಿಸಿಕೊಳ್ಳುವದು ಇರುತ್ತದೆ. ಇವುಗಳಲ್ಲಿ ಕರನ್ಯಾಸ, ದೇಹನ್ಯಾಸ, ಷಡಂಗನ್ಯಾಸ ಎಂಬ ಭೇದಗಳಿವೆ. ಪುನಃ ಪ್ರತಿಯೊಂದರಲ್ಲಿ ಸೃಷ್ಟಿ ಸ್ಥಿತಿ ಸಂಹಾರ ಎಂಬ ಭಾಗಗಳಿವೆ. ಬೆರಳುಗಳಲ್ಲಿ ಮಂತ್ರ ಸಂಬಂಧಿಸುವದು ಕರನ್ಯಾಸವು. ಶಿರಸ್ಸು, ಮುಖ, ಹೃದಯ, ಗುಹ್ಯ, ಪಾದ.

(೫) ಹೀಗೆ ಶುದ್ಧಾತ್ಮನ ಮಾಡಿದ ಬಳಿಕ ಗಣ ತಿಂಥಿಣಿಯ ಮುಂದೆ ನಿಲ್ಲಿಸಿ ದಂಡಪ್ರಣಾಮವನ್ನು ಮಾಡಿಸುವುದು, ಮತ್ತು ಕೈವಿಡಿದೆತ್ತುವುದು.

(೬) ಭೂಶುದ್ಧಿಯನ್ನು ಮಾಡುವುದು. ಆಮೇಲೆ ಚೌಕಮಧ್ಯದಲ್ಲಿ ಕುಳ್ಳಿರಿಸುವುದು. ಗುರುಕಲಶ ಸ್ಥಾಪನೆ ಮಾಡುವುದು.

(೭) ಜಲಶುದ್ಧಿಯನ್ನು ಮಾಡುವದು (೮) ಜಂಗಮಕ್ಕೆ ಪಾದಾರ್ಚನೆಯನ್ನು ಮಾಡುವುದು. (೯) ಕುಮಾರ ತಂವನ್ನು ಜಲಾಧಿವಾಸ ಮಾಡುವುದು.

(೧೦) ಶಿಷ್ಯನ ಹಸ್ತವನ್ನು ಶೋಧಿಸುವುದು. (೧೧) ವಿಭೂತಿಯನ್ನು ಧರಿಸುವದು, (೧೨) ರುದ್ರಾಕ್ಷಿಧಾರಣ. (೧೩) ಜಲಾಧಿವಾಸದೊಳಗಿನ ಕುಮಾರ ತಂವನ್ನು ತೆಗೆಯುವುದು. ಶಿಲೆಯ ಪೂರ್ವಾಶ್ರಯವನ್ನು ಕಳೆಯುವುದು. (೧೪) ಶಿಲೆಗೆ ಪ್ರಾಣಪ್ರತಿಷ್ಠೆ ಮಾಡುವುದು.

(೧೧) ದೇವರಿಗೆ ಸ್ನಪನ, (೧೨) ದೇವರಿಗೆ ವಸ್ತ್ರಸಮರ್ಪಣ, (೧೩) ಗಂಧಸಮರ್ಪಣ, (೧೪) ಅಕ್ಷತಸಮರ್ಪಣ, (೧೫) ಪುಷ್ಪಸಮರ್ಪಣ, (೧೬) ಧೂಪವನ್ನರ್ಪಿಸುವುದು, (೧೭) ದೀಪಸಮರ್ಪಣ, (೧೮) ನೈವೇದ್ಯಸಮರ್ಪಣ, (೧೯) ತಾಂಬೂಲ ಸಮರ್ಪಣ. (೨೦) ಮಂತ್ರಪುಷ್ಪ ಸಮರ್ಪಣ, (೨೧) ನಮಸ್ಕಾರ, (೨೨) ಅನುಷ್ಠಾನ, (೨೩) ಉರಸ್ಥಲದ ಸೆಜ್ಜೆಯಲ್ಲಿ ಲಿಂಗವನ್ನು ಧರಿಸುವುದು.

(೨೩) ಶಿಷ್ಯನ ವಾಯು ಪ್ರಾಣತ್ವವ ಕಳೆದು, ಲಿಂಗ ಪ್ರಾಣವ ಮಾಡುವುದು., (೨೪) ಅಗ್ರೋದಕವನ್ನು ಸರ್ವಾಂಗದ ಮೇಲೆ ತಳಿವುದು, (೨೫) ವಿಭೂತಿಯ ಪಟ್ಟವನ್ನು ಕಟ್ಟುವುದು, (೨೬) ಶಿಷ್ಯನ ದೀಕ್ಷಾಕ್ಷರವ ತೊಡೆವುದು, (೨೭) ಲಲಾಟದಲ್ಲಿ ಲಿಂಗ ಲಿಖಿತವನ್ನು ಬರೆವುದು.

(೨೮) ಶಿಷ್ಯನ ಮಸ್ತಕದಲ್ಲಿ ಹಸ್ತವನಿರಿಸುವುದು, (೨೯) ಶಿಷ್ಯನ ಕರ್ಣದಲ್ಲಿ ಶಿವಮಂತ್ರವನ್ನು ನಿರೂಪಿಸುವುದು, (೩೦) ಶತಪತ್ರದೊಳಗಣ ಕಳೆಯನ್ನು ಪ್ರಜ್ವಲಿಸಿ ಪ್ರಾಣದಲ್ಲಿ ಪ್ರಾಣಲಿಂಗವನ್ನು ನೆಲೆಗೊಳಿಸಿ ಇಷ್ಟಲಿಂಗಸ್ಥಲವನ್ನು ತೋರಿಸಿ ಶಿಷ್ಯನನ್ನು ಕೃತಕೃತ್ಯನನ್ನು ಮಾಡುವುದು.

ಬೇರೆ ದೀಕ್ಷಾವಿಧಿಗಳು ಅನೇಕ ಇವೆ. ಆದರೆ ಇವುಗಳಲ್ಲಿ ಶೈವ ಪದ್ಧತಿಗಳು ಬಹಳ ಸೇರಿಕೊಂಡಿವೆ. ಅವು ಅನೇಕ ಕಡೆಗೆ ಪ್ರಚಾರದಲ್ಲಿಯೂ ಇವೆ. ಆದರೆ ಅವು ವಚನಕಾರರ ತತ್ವಗಳಿಗೆ ಹೊಂದುವದಿಲ್ಲ. ಹೇಗೆ ಶಿವಪೂಜೆಯಲ್ಲಿ ಶೈವಪದ್ಧತಿಗಳು ಕೂಡಿಯೋ, ಹಾಗೆಯೇ ಇವುಗಳಲ್ಲಿಯೂ ಕೂಡಿವೆ. ಆದುದರಿಂದ ಅವುಗಳನ್ನು ನಾವು ಇಲ್ಲಿ ಉಲ್ಲೇಖಿಸುವದಿಲ್ಲ.

ತ್ರಿವಿಧ ದೀಕ್ಷೆಗಳು:— ಇವು ಕ್ರಿಯಾದೀಕ್ಷೆ, ಮಂತ್ರದೀಕ್ಷೆ, ಮತ್ತು ವೇಧಾದೀಕ್ಷೆ ಎಂದಿವೆ. ಕ್ರಿಯಾದೀಕ್ಷೆಯಿಂದ ಕಾಯಕ್ಕೆ, ಮಂತ್ರದೀಕ್ಷೆಯಿಂದ ಪ್ರಾಣಕ್ಕೆ, ಮತ್ತು ವೇಧಾದೀಕ್ಷೆಯಿಂದ ಮನಕ್ಕೆ ಉಪದೇಶ ಮಾಡುವದು.

೨೧ವಿಧ ದೀಕ್ಷೆಗಳು:— (೧) ಆಜ್ಞಾದೀಕ್ಷೆ, ಉಪಮಾದೀಕ್ಷೆ, ಸ್ವಸ್ತಿಕಾರೋಹಣ, ಕಲಶಾಭಿಷೇಕ, ವಿಭೂತಿಪಟ್ಟ, ಲಿಂಗಾಯತ, ಲಿಂಗಸ್ವಾಯತ ಈ ಏಳನ್ನು ಕಾಯಕ್ಕುಪದೇಶ ಮಾಡುವದು. (೨) ಸಮಯ, ನಿಸ್ಸಂಸಾರ, ನಿರ್ವಾಣ, ತತ್ವದೀಕ್ಷೆ, ಅಧ್ಯಾತ್ಮ, ಅನುಗ್ರಹ, ಸತ್ಯಶುದ್ಧ ಈ ಏಳನು ಪ್ರಾಣಕ್ಕುಪದೇಶ ಮಾಡುವದು. (೩) ಏಕಾಗ್ರಚಿತ್ತ, ದೃಢವ್ರತ, ಪಂಚೇಂದ್ರಿಯಾರ್ಪಿತ, ಅಹಿಂಸೆ, ಲಿಂಗನಿಜ ಮನೋಲಯ, ಸದ್ಯೋನ್ಮುಕ್ತಿ ಈ ಏಳನು ಮನಕ್ಕುಪದೇಶ ಮಾಡುವದು.

ಅಷ್ಟವಿಧ ಸಮಾಧಿಗಳು:— ಇವು ಯಾವವೆಂದರೆ— (೧) ನಿರ್ವಾಣ ಸಮಾಧಿ:— ಇದು ನಿರವಯಸ್ಥಲಕ್ಕೆ ಕಾರಣವಾದ ಶೂನ್ಯಲಿಂಗಾನುಭವವುಳ್ಳವರಿಗೆ ಸಂಬಂಧವು. (೨) ಚಿದಾನಂದ ಸಮಾಧಿ— ನಿರಾಮಯಸ್ಥಲಕ್ಕೆ ಕಾರಣವಾದ ನಿಃಕಲ ಲಿಂಗಾನುಭವವನ್ನು ಹೊಂದಿದವರಿಗೆ ಸಂಬಂಧವು. (೩) ನಿರವಯ ಸಮಾಧಿ:— ನಿಜೈಕ್ಯಸ್ಥಲಕ್ಕೆ ಕಾರಣವಾದ ಮಹಾಲಿಂಗಾನುಭವವನ್ನು ಹೊಂದಿದವರಿಗೆ ಸಂಬಂಧವು. (೪) ನಿಜಶಿವಸಮಾಧಿ:—ಶರಣಸ್ಥಲಕ್ಕೆ ಕಾರಣವಾದ ಪ್ರಸಾದ ಲಿಂಗಾನುಭವವುಳ್ಳವರಿಗೆ ಸಂಬಂಧವು. (೫) ಬಯಲು ಸಮಾಧಿ:— ಪ್ರಾಣಲಿಂಗಕ್ಕೆ ಕಾರಣವಾದ ಜಂಗಮ ಲಿಂಗಾನುಭವವನ್ನು ಹೊಂದಿದವರಿಗೆ ಸಂಬಂಧವು. (೬) ಗೋಳಕಸಮಾಧಿ:— ಪ್ರಸಾದಿಸ್ಥಲಕ್ಕೆ ಕಾರಣವಾದ ಶಿವಲಿಂಗಾನುಭವವ ಹೊಂದಿದವರಿಗೆ ಸಂಬಂಧವು. (೭) ಗೋಮುಖಸಮಾಧಿ—

ಪ್ರಾಶನ (೮) ಸೂರ್ಯಚಂದ್ರಾವಲೋಕನ (೯) ನಿಷ್ಕ್ರಮಣ (೧೦) ಕರ್ಣವೇಧ (೧೧) ಅನ್ನಪ್ರಾಶನ (೧೨) ಚೌಲ (೧೩) ವಿದ್ಯಾರಂಭ (೧೪) ದೀಕ್ಷಾ (೧೫) ವಿವಾಹ (೧೬) ಅಂತ್ಯೇಷ್ಟಿ ಹೀಗೆ ಎರಡು ಪ್ರಕಾರವಾಗಿ ಉಲ್ಲೇಖಗಳಿವೆ.

ಷಟ್ಕರ್ಮಗಳು:— ಇವು ಯಜನ, ಯಾಜನ, ಅಧ್ಯಯನ, ಅಧ್ಯಾಪನ, ದಾನ, ಪ್ರತಿಗ್ರಹ, ಎಂದಿವೆ.

ದಶಕರ್ಮಗಳು:— ಗರ್ಭಾಧಾನ, ಸೀಮಂತ, ಜಾತಕರ್ಮ (ಲಿಂಗಧಾರಣ), ನಾಮಕರಣ, ಕರ್ಣವೇಧ, ಚೌಲ, ವಿದ್ಯಾರಂಭ, ದೀಕ್ಷಾ, ವಿವಾಹ, ಅಂತ್ಯೇಷ್ಟಿ,

ನವವಿಧ ಭಕ್ತಿಗಳು:— ಇವು ಶ್ರವಣ, ಕೀರ್ತನ, ಸ್ಮರಣ ಪಾದಸೇವನ, ಅರ್ಚನ, ವಂದನ, ದಾಸ್ಯ, ಸಖತ್ವ, ಆತ್ಮಾರ್ಪಣ, ಎಂದಿವೆ.

ನವಶಕ್ತಿಗಳು:— ಕಾಕಿನಿ, ದಾಕಿನಿ, ಲಾಕಿನಿ, ಶಾಕಿನಿ, ಡಾಕಿನಿ, ಆಕಿನಿ, ನಿವಾರ್ಯಶಕ್ತಿ, ನಿಭ್ರಾಂತಶಕ್ತಿ, ನಿರ್ಭಗ್ನಶಕ್ತಿ ಎಂದಿವೆ.

೨೮ ಆಗಮಗಳು:— ಕಾಮಿಕಾಗಮ, ಯೋಗಜಾಗಮ, ಚಿಂತ್ಯಾಗಮ, ಕಾರಣಾಗಮ, ಅಜಿತಾಗಮ, ದೀಪ್ತಾಗಮ ಸೂಕ್ಷ್ಮಾಗಮ, ಸಹಸ್ರಾಗಮ, ಅಂಶುಮಾನಾಗಮ, ಸುಪ್ರಬೋಧಾಗಮ, ವಿಜಯಾಗಮ ನಿಶ್ವಾಸಾಗಮ, ಸ್ವಯಂಭುವಾಗಮ, ಅನಿಲಾಗಮ, ವೀರಾಗಮ, ರೌರವಾಗಮ, ಮುಕುಟಾಗಮ, ವಿಮಲಾಗಮ, ಚಂದ್ರಜ್ಞಾನಾಗಮ, ಬಿಂಬಾಗಮ, ಪ್ರೋದ್ಗೀತಾಗಮ, ಲಲಿತಾಗಮ, ಸಿದ್ಧಾಗಮ, ಸಂತಾನಾಗಮ, ಸರ್ವೋಕ್ತಾಗಮ, ಪಾರಮೇಶ್ವರಾಗಮ, ಕಿರಣಾಗಮ, ವಾತುಲಾಗಮ, ಎಂದು ೨೮ ಆಗಮಗಳಿವೆ.

ಹದಿನೆಂಟು ಪುರಾಣ:— ಬ್ರಹ್ಮಪುರಾಣ, ಪದ್ಮಪುರಾಣ, ವಿಷ್ಣುಪುರಾಣ, ಶೈವಪುರಾಣ, ಭಾಗವತಪುರಾಣ, ನಾರದೀಯಪುರಾಣ, ಮಾರ್ಕಂಡೇಯಪುರಾಣ, ಆಗ್ನೇಯಪುರಾಣ, ಭವಿಷ್ಯತ್ಪುರಾಣ, ಬ್ರಹ್ಮವೈವರ್ತಪುರಾಣ, ಲೈಂಗಪುರಾಣ, ವರಾಹಪುರಾಣ, ಸ್ಕಾಂದಪುರಾಣ, ವಾಮನಪುರಾಣ, ಕೂರ್ಮಪುರಾಣ ಮತ್ಸ್ಯಪುರಾಣ, ಗಾರುಡಪುರಾಣ, ಬ್ರಹ್ಮಾಂಡಪುರಾಣ, ಎಂದಿವೆ. ಇವುಗಳಲ್ಲಿ ಸ್ಕಂದ, ಶೈವ, ಲೈಂಗ, ಕೂರ್ಮ, ವಾಮನ, ವರಾಹ, ಭವಿಷ್ಯತ್ತು, ಮತ್ಸ್ಯ, ಮಾರ್ಕಂಡೇಯ, ಬ್ರಹ್ಮಾಂಡ, ಇವು ಹತ್ತು ಶಿವಪುರಾಣಗಳು.

# ಶಿವಾನುಭವ

**ಮಾಸ ಪತ್ರಿಕೆ ವಿಜಯಪುರ**

**ವಾರ್ಷಿಕ ಚಂದಾ: ೫—೧೨—೦**

# ವಿಷಯಾನುಕ್ರಮಣಿಕೆ

# ಶಿವಾನುಭವ

| ವರ್ಷ ೨೭ | ಅಗಷ್ಟ ೧೯೫೩ | ಸಂಚಿಕೆ ೮ |
|---|---|---|


## ಶೈವವೂ ವೀರಶೈವವೂ

( ಲೇಖಕ:- ಶರಣರ ಅಭಿಮಾನಿಯಾದ ಸಮಾಜ ಹಿತೈಷಿ. )

—)o(—

ಸಾವಧಾನ ಪತ್ರಿಕೆಯ ೧೦-೬-೫೩ ದಿನಾಂಕದ ಸಂಚಿಕೆಯಲ್ಲಿ ಮೈಸೂರ ಶ್ರೀಮಾನ್ ಮಹಾರಾಜರವರು ಅಪ್ಪಣೆ ಕೊಡಿಸಿದ ಭಾಷಣವೆಂದು ಪ್ರಕಟಿಸಿದ ಲೇಖದ ವಿಮರ್ಶೆ. ಬೆಟ್ಟದ ಪುರದಲ್ಲಿ ಆದ ಈ ಭಾಷಣವು ಸಂಯುಕ್ತ ಕರ್ನಾಟಕ ಪತ್ರಿಕೆಯಲ್ಲಿ ಪ್ರಕಟವಾಗಿದ್ದು ಅದು ಈಗ ಸಾವಧಾನ ಪತ್ರಿಕೆಯಲ್ಲಿ ಪ್ರಕಟವಾದದ್ದಕ್ಕಿಂತಲೂ ವಿಶೇಷ ಭಿನ್ನವಾಗಿದೆ. ಸಂಯುಕ್ತ ಕರ್ನಾಟಕ ಪತ್ರಿಕೆಯ ಪ್ರಕಟಣೆಯು ಭಾಷಣದ ನಿಜಾಂಶವೇ ಇರಲು ಅಭ್ಯಂತರವಿಲ್ಲ. ಸಾವಧಾನ ಪತ್ರಿಕೆಯು ಲೇಖಕರು ತಮಗೆ 'ಹೇಳಬೇಕಾದ ಸಂಗತಿಗಳು ಶ್ರೀಮಾನ್ ಮಹಾರಾಜರವರು ಅಪ್ಪಣೆ ಕೊಡಿಸಿದ ಭಾಷಣವೆಂದು ಸಾಧಿಸಿದ್ದಾರೆ. ಲೇಖಕರು ತಮ್ಮ 'ಪ್ರತಿಪಾದನೆಯ ವಿಧಾನಗಳನ್ನು ಮಹಾರಾಜರವರ ಭಾಷಣದ ಭಾಗಗಳಲ್ಲಿ ಸೇರಿಸಿ ಎಲ್ಲವನ್ನೂ ಮಹಾರಾಜರವರೇ ಅಪ್ಪಣೆಕೊಡಿಸಿದರೆಂದು ಪ್ರಕಟಿಸಿದ್ದಾರೆ.

ಉದಾಹರಣಾರ್ಥವಾಗಿ ವೀರಶೈವ ಧರ್ಮದ ಅತಿ ಮುಖ್ಯ ಲಕ್ಷಣಗಳಲ್ಲಿ ಒಂದಾದ ಇಷ್ಟಲಿಂಗ ಧಾರಣೆಯು ಶೈವ ಧರ್ಮದ ಉತ್ಕ್ರಾಂತಿಯ ಫಲವಾಗಿದ್ದು ಅತ್ಯಂತ ಪ್ರಾಚೀನವೆಂದು ಲಿಂಗಧಾರಣ ಚಂದ್ರಿಕೆ, ಶ್ರೀಕರ ಭಾಷ್ಯ, ವೀರಶೈವಾನಂದ ಚಂದ್ರಿಕೆ ಶ್ರುತಿ ಸಾರ ಭಾಷ್ಯ ಮೊದಲಾದ ಗ್ರಂಥಗಳಲ್ಲಿ ಸಿದ್ಧವಾಗಿರುವದು ಇಲ್ಲಿ ಗಮನಾರ್ಹವಾಗಿದೆ. ಈ ವಿಧವಾದ

ವಿಧಾನವು ಸಾವಧಾನ ಪತ್ರಿಕೆಯ ಲೇಖಕರದೇ ಇರಬೇಕು. ಏಕೆಂದರೆ ಅದು ಸಂಯುಕ್ತ ಕರ್ನಾಟಕ ಪತ್ರಿಕೆಯಲ್ಲಿ ಪ್ರಕಟವಾದ ಮಹಾರಾಜರವರ ಭಾಷಣದಲ್ಲಿ ಇಲ್ಲ. ಲೇಖಕರು ಇಂಥ ವಿಧಾನಗಳನ್ನು ತಮ್ಮ ವಿಚಾರ ಇಲ್ಲವೆ ಅಭಿಪ್ರಾಯವೆಂದು ಪ್ರಕಟಿಸಲು ಅಸ್ತಿ ಇಲ್ಲ. ಆದರೆ ಇದು ಮಹಾರಾಜರವರ ವಿಚಾರವೆಂದು ಪ್ರಕಟಿಸಿ ಅದಕ್ಕೆ ಸತ್ಯದ ಬಣ್ಣ ಇಲ್ಲವೆ ಆಭಾಸವಾಗಬೇಕೆಂದು ಹಾಗೆ ಪ್ರಕಟಿಸುವದು ಉದ್ದೇಶಪೂರ್ವಕವಾದ ದ್ದೆಂಬುವದು ಸ್ಪಷ್ಟವಿದೆ.

ಶೈವ ಧರ್ಮವು ಪ್ರಾಚೀನವಾದದ್ದೆಂಬುವದರಲ್ಲಿ ವಾದವಿಲ್ಲ. ಈ ಪ್ರಾಚೀನ ಶೈವ ಧರ್ಮವು ಸ್ಥಾವರ ಲಿಂಗ ಭಕ್ತಿ ಪೂಜಾದಿಗಳನ್ನು ಪ್ರತಿಪಾದಿಸುತ್ತದೆ. ಈ ಶೈವ ಸ್ಥಾವರ ಲಿಂಗ ಭಕ್ತಿಯು ದ್ರಾವಿಡರ ಶೈವಾಗಮೋಕ್ತವು. ಈ ಸ್ಥಾವರ ಲಿಂಗ ಪೂಜೆಯನ್ನು ಖಂಡಿಸಿ ಅಹಂಗ್ರ ಹೋಪಾಸನೆಯ ಕುರುಹಾದ ಇಷ್ಟಲಿಂಗ ಧಾರಣ ಮತ್ತು ಉಪಾಸನೆಯು ಹಾಗು ಆತ್ಮ ಜ್ಞಾನ (ತತ್ತ್ವಂ ಅಸಿ ಮಹಾ ವಾಕ್ಯ ಜ್ಞಾನ) ಸೂಚಕವಾದ ಜಂಗಮ ಜ್ಞಾನಿಯ ಪೂಜೆಯು ಎಂದು ಮತ್ತು ಯಾರಿಂದ ಆರಂಭ ವಾಯಿತೆಂಬದನ್ನು ಹೇಳುವದು ಕಠಿಣವಿದ್ದರೂ ಶಿವಶರಣರಾದ ಪ್ರಮ ಥರು ಈ ಇಷ್ಟಲಿಂಗ ಧಾರಣೆ ಮತ್ತು ಜಂಗಮ ಜ್ಞಾನಿಯ ಪೂಜೆಯನ್ನು ಬಹು ಪ್ರಾಮುಖ್ಯವಾಗಿ ಹಾಗು ಬಲವತ್ತರವಾಗಿ ಪ್ರತಿಪಾದಿಸಿದ್ದಾರೆಂಬುದು ಸರ್ವಶ್ರುತ ಹಾಗು ಸರ್ವ ಮಾನ್ಯವಾದದ್ದು.

ಸ್ಥಾವರ ಲಿಂಗ ಭಕ್ತಿಯೇ ಮುಖ್ಯ ಲಕ್ಷಣವುಳ್ಳ ಶೈವ ಧರ್ಮವು ಎಂದು ಮತ್ತು ಯಾರಿಂದ ಉತ್ಕ್ರಾಂತಿ ಹೊಂದಿ ಖಂಡಿಸಲ್ಪಟ್ಟು ಅಹಂಗ್ರ ಹೋಪಾಸನೆಯ ಕುರುಹಾದ ಇಷ್ಟಲಿಂಗ ಪೂಜೆ ಮತ್ತು ಆತ್ಮ ಜ್ಞಾನದ ಕ್ರಿಯಾರೂಪವಾದ ಜಂಗಮ ಜ್ಞಾನಿಯ ಪೂಜೆಯೇ ಮುಖ್ಯ ಲಕ್ಷಣ ವುಳ್ಳ ವೀರಶೈವವಾಗಿ ಪರಿಣಮಿಸಿತೆಂಬುದು ನಿಶ್ಚಿತ ತಿಳಿಯದೇ ಇದ್ದರೂ ಷಟ್‌ಸ್ಥಲ ವಚನಕಾರರೂ ಜಯಸಿಂಹ ರಾಜನ ಗುರುವೂ ಆದ ದೇವರ ದಾಸಿಮಯ್ಯನವರು ಆ ರಾಜನ ಹೆಂಡತಿಗೆ ಇಷ್ಟಲಿಂಗ ಧಾರಣಮಾಡಿಸಿದ ರೆಂಬುದು ಸರ್ವ ಶ್ರುತವಿದೆ. ಅವರ ಷಟ್‌ಸ್ಥಲ ವಚನ ಗ್ರಂಥವು ಇಷ್ಟಲಿಂಗ ಧಾರಣೆ ಮತ್ತು ಜಂಗಮ ಜ್ಞಾನಿಯ ಪೂಜೆಯನ್ನು ಪ್ರತಿ ಪಾದಿಸುತ್ತದೆ. ತತ್ಪೂರ್ವದಲ್ಲಿ ಇಷ್ಟಲಿಂಗ ಧಾರಣೆ, ಜಂಗಮ ಜ್ಞಾನಿಯ ಪೂಜೆ ಇದ್ದದ್ದು ಕಂಡುಬಂದಿಲ್ಲ.

ಹೀಗಿದ್ದು ಸಾವಧಾನ ಪತ್ರಿಕೆಯ ಲೇಖಕರು ಈ ಇಷ್ಟಲಿಂಗ ಧಾರಣೆಯು ವೀರಶೈವವು ಬಹು ಪ್ರಾಚೀನವದ್ದೆಂದು ಹೇಳುವದು ಅದು ಕೂಡ ಮಹಾರಾಜರವರ ಅಭಿಪ್ರಾಯವೆಂದು ಪ್ರಕಟಿಸಿದ್ದು ಈ ವಿಮರ್ಶೆಗೆ ಕಾರಣವಾಗಿದೆ. ಈ ಪ್ರಕಾರ ವೀರಶೈವವು ಬಹು ಪ್ರಾಚೀನವದ್ದೆಂದು ಅಂದಿಗೂ ಸಾಧಿಸುವಿಕೆಯು ಈ ರೀತಿಯಿಂದ ನಡದೇ ಅದೆ. ಇದೇನೂ ಆಶ್ಚರ್ಯವಲ್ಲ.

ಸಿದ್ಧಾಂತ ಶಿಖಾಮಣಿಕಾರರಾದ ಶಿವಯೋಗಿ ಶಿವಾಚಾರ್ಯರು ಕೂಡ ೧೩ನೆಯ ಶತಮಾನದ ಅಂತ್ಯದಲ್ಲಿ ಬರೆದ ತಮ್ಮ ಸಿದ್ಧಾಂತ ಶಿಖಾಮಣಿಗ್ರಂಥದಲ್ಲಿ ತನ್ನ ವಿಚಾರ ಹಾಗು ಅಭಿಪ್ರಾಯದ ಪ್ರಕಾರ ಬರೆದದ್ದನ್ನು ರಾಮಾಯಣ ವಿಭೀಷಣರ ಕಾಲದಲ್ಲಿ ರೇಣುಕಾಚಾರ್ಯರು ಅಗಸ್ತ್ಯ ಮುನಿಗೆ ಬೋಧಿಸಿದ್ದನ್ನೇ ತಮ್ಮ ಗ್ರಂಥದಲ್ಲಿ ಬೋಧಿಸುತ್ತೇವೆಂದು ಹೇಳಿದ್ದಾರೆ. ಹೀಗೆ ಹೇಳಿದ್ದು ಅಷ್ಟು ಪ್ರಾಚೀನಕಾಲದಲ್ಲಿ ವೀರಶೈವವು ಪ್ರಚಲಿತವಿತ್ತೆಂದು ತೋರಿಸುವದಕ್ಕಾಗಿ ಅಲ್ಲವೆ? ಹೀಗಿದ್ದ ಪಕ್ಷದಲ್ಲಿ ಶೈವವು ಉತ್ಕ್ರಾಂತಿ ಹೊಂದಿ ವೀರಶೈವವಾದದ್ದೆಂದು? ಆದರೆ ಗ್ರಂಥಕಾರರು ತಮ್ಮ ಗ್ರಂಥದ ಪ್ರತಿಪರಿಚ್ಛೇದದ ಅಂತ್ಯದಲ್ಲಿ ಸಿದ್ಧಾಂತ ಶಿಖಾಮಣಿ ಗ್ರಂಥವು ಶಿವಯೋಗಿ ಹೆಸರಿನ ರೇಣುಕಾಚಾರ್ಯರಿಂದ ಬರೆಯಲ್ಪಟ್ಟಿದೆಂದು ವ್ಯಕ್ತಮಾಡಿದ್ದಾರೆ. ಇದರಿಂದ ತಾವೇ ಶಿವಯೋಗಿಯೇ ರೇಣುಕಾಚಾರ್ಯರೆಂಬ ಪರಿಯಾಯದಿಂದ ತಿಳಿಸಿದ್ದಾರೆ. ಇದರಿಂದ ರೇಣುಕಾಚಾರ್ಯರು ರಾಮ ವಿಭೀಷಣರ ಕಾಲದಲ್ಲಿ ಅಗಸ್ತ್ಯ ಮುನಿಗೆ ವೀರಶೈವವನ್ನು ಬೋಧಿಸಿ ವಿಭೀಷಣನಿಂದ ಮೂರುಕೋಟಿ ಲಿಂಗಗಳನ್ನು ಸ್ಥಾಪಿಸಿದರೆಂಬ ಸಂಗತಿಯು ಹುರುಳಿಲ್ಲದ್ದಾಗುವದು.

ಇದರಂತೆ ಸಾವಧಾನ ಪತ್ರಿಕೆಕಾರರು ಶ್ರೀಮನ್ನ ಮಹಾರಾಜರವರು ವೀರಶೈವವು ಬಹು ಪ್ರಾಚೀನವದ್ದೆಂದು ಅಪ್ಪಣೆಕೊಡಿಸಿದರೆಂದು ತಮ್ಮ ಪತ್ರಿಕೆಯಲ್ಲಿ ಪ್ರಕಟಿಸಿದ ಮಾತಾದರೂ ಅಷ್ಟೇ ಹುರಳಿಲ್ಲದ್ದಾಗುವದು. ಅಹಂಗ್ರಹೋಪಾಸನೆಯ ಮರ್ಮವುಳ್ಳ ಇಷ್ಟಲಿಂಗೋಪಾಸನೆ ಮತ್ತು ಆತ್ಮಜ್ಞಾನದ ಕುರುಹಾದ ಜಂಗಮ ಜ್ಞಾನಿಯ ಪೂಜೆಯ ಶಿವಾನುಭವವುಳ್ಳ ವಚನಕಾರರ ವಿಚಾರ ಅನುಭವಗಳಿಂದ ಕಂಡುಕೊಂಡದ್ದಾಗಿದೆ.

ಶಿವಶರಣರಾದ ವಚನಕಾರರು ತಮ್ಮ ವಚನ ಗ್ರಂಥಗಳಲ್ಲಿ ತಮ್ಮ ಅರುಹಿನ ಕುರುಹಾದ ಅಥವಾ ಅವರ ಗ್ರಹೋಪಾಸನೆಯ ಕುರುಹಾದ

ಇಷ್ಟಲಿಂಗ ಧಾರಣೆ ಹಾಗು ಉಪಾಸನೆ ಮತ್ತು ಆತ್ಮ ಜ್ಞಾನದ ಗುರು ಹಾಗು ಜಂಗಮ ಜ್ಞಾನಿಯ ಪೂಜೆ ಪಾದೋದಕದ ಸ್ವೀಕಾರಗಳನ್ನು ಬಹು ಬಲವತ್ತರವಾಗಿ ಮಂಡಿಸಿ ಶೈವಧರ್ಮದ ಸ್ಥಾವರಲಿಂಗ ಪೂಜೆಯನ್ನು ಅನೇಕ ಮೂರ್ತಿಪೂಜೆಯನ್ನು ಧರೆಯ ಕಲ್ಲಿಗೆ ಶರಣೆನ್ನ ಬಾರದೆಂದು ಖಂಡಿಸಿ ನುಡಿದು ಅದರಂತೆ ಆಚರಣೆಗೆ ತಂದು ರೂಢಿಗೈದಿದ್ದಾರೆ. ಅಲ್ಲದೆ ಶೈವಧರ್ಮದ ವರ್ಣಾಶ್ರಮ ಚಾತುರ್ವರ್ಣ ವಿಭೇದ ಜಾತಿಗಳ ಕಲ್ಪನೆಯನ್ನು ಬಹು ಕಠೋರವಾಗಿ ಹೇದು ಇಷ್ಟಲಿಂಗಧಾರಣೆ, ನಿಷ್ಠೆ, ಸಮತಾಭಾವದ ಸಮಾಜ ರಚನೆಯುಳ್ಳ ವೀರಶೈವವನ್ನು ಶೈವರ ಉತ್ಕ್ರಾಂತಿಯ ರೂಪವಾಗಿ ಮಾರ್ಪಡಿಸಿದ್ದರೆಂಬ ವಿಷಯವು ಸರ್ವಶ್ರುತ ಹಾಗು ಸರ್ವಸಮ್ಮತವಿದ್ದಾಗ್ಯೂ ಸಾವಧಾನ ಪತ್ರಿಕೆಕಾರರು ಇಷ್ಟಲಿಂಗ ಧಾರಣೆಯ ವೀರಶೈವವನ್ನು ಶೈವದಷ್ಟೇ ಪ್ರಾಚೀನದ್ದೆಂದು ಸಾಧಿಸ ಹೊರಟಿದ್ದಾರೆ.

ಲಿಂಗ ರೂಪೇನೋ ಧ್ಯಾನಸ್ಥ ಲಿಂಗಧಾರಿಯ ರೂಪವೆಂದು ಇತ್ತಿತ್ತಲಾಗಿ ಗುರುತಿಸಲಾಗಿದೆ. ವಚನಕಾರರಾದರೂ ಇದನ್ನು ಅರಿತವರಾದ್ದರಿಂದಲೇ ಸ್ಥಾವರ ಲಿಂಗವನ್ನು ಇಷ್ಟಲಿಂಗವನ್ನಾಗಿ ಮಾರ್ಪಡಿಸಿಕೊಂಡಿದ್ದಾರೆ. ಇಷ್ಟಲಿಂಗೋಪಾಸನೆಯು ಶಿವಾನುಭವಕ್ಕೆ ಹೆಚ್ಚು ಸಮೀಪವರ್ತಿಯಾಗಿದೆ ಎಂಬ ಅನುಭವದಿಂದ ಯಾರಿಗಾದರೂ ಹೊಳೆಯುವಂತಿದೆ.

ಈ ರೀತಿಯಾಗಿ ವಚನಕಾರರಾದ ಶಿವಶರಣರು ಶೈವರ ಉತ್ಕ್ರಾಂತಿಗೈದು ವೀರಶೈವವನ್ನು ಆಚರಿಸಿ ಧೈರ್ಯದಿಂದ ರೂಢಿಗೈದಿದ್ದಾರೆ. ಆಸ್ಥಾನ ವಿದ್ವಾಂಸರಾದ ಶ್ರೀ ಶಿವಮೂರ್ತಿ ಶಾಸ್ತ್ರಿಗಳು ನೀಲಕಂಠಾಚಾರ್ಯರು ತಮ್ಮ ವೀರಶೈವ ಪರಗ್ರಂಥದಲ್ಲಿ ಶಂಕರಾಚಾರ್ಯರ ಅದ್ವೈತವನ್ನಾಗಲಿ ಮಾಯಾವಾದವನ್ನಾಗಲಿ ಖಂಡಿಸಿ ಬರೆದಿದ್ದರಿಂದ ಅವರು ಶಂಕರಾಚಾರ್ಯರ ಸಮಕಾಲೀನರಿರಬೇಕೆಂದೂ ವೀರಶೈವವು ಶಂಕರಾಚಾರ್ಯರ ಕಾಲವಾದ ೮ನೆಯ ಶತಮಾನದಷ್ಟಾದರೂ ಪೂರ್ವದ್ದಿರಬೇಕೆಂದೂ ಅಭಿಪ್ರಾಯಪಡುತ್ತಿದ್ದಾರೆ. ಆದರೆ ಶಂಕರಾಚಾರ್ಯರ ವಿಚಾರವನ್ನು ಖಂಡಿಸಿದ ಮಾತ್ರದಿಂದ ನೀಲಕಂಠಾಚಾರ್ಯರು ಶಂಕರಾಚಾರ್ಯರ ಸಮಕಾಲೀನರಾದರು. ಇಂದು ಸಹ ಒಬ್ಬರು ಶಂಕರಾಚಾರ್ಯರ ಮತವನ್ನು ಖಂಡಿಸಿ ಬರೆದರೆ ಅವರು ಶಂಕರಾರ್ಯರ ಸಮಕಾಲೀನರಾದರು.

ಇದಲ್ಲದೆ ಕನ್ನಡ ಕವಿಚರಿತೆಕಾರರು ನೀಲಕಂಠಾಚಾರ್ಯರು ಕ್ರಿ. ಶ. ೧೪೦೦ರ ಸುಮಾರಕ್ಕೆ ಇದ್ದರೆಂದು ಅಭಿಪ್ರಾಯಪಟ್ಟಿದ್ದಾರೆ. ವೀರಶೈವ ಪರಗ್ರಂಥಗಳು ಸಂಸ್ಕೃತದಲ್ಲಿ ಬರೆಯಲ್ಪಟ್ಟ ಮಾತ್ರದಿಂದ ವೀರಶೈವವು ಪ್ರಾಚೀನವಾಗಲಾರದು. ಲಿಂಗರೂಪವು ಧ್ಯಾನಸ್ಥ ಲಿಂಗಧಾರಿಯ ರೂಪವೆಂದು ತಿಳಿದಾಕ್ಷಣವೇ ಸ್ಥಾವರ ಲಿಂಗ ಪೂಜೆಯ ಶೈವರಿಗೂ ಇಂದಿನ ಶಿವಶರಣರ ಅನುಯಾಯಿಗಳಾದ ವೀರಶೈವರಿಗೂ ಇರುವ ಅನೇಕ ಬಗೆಯ ವಿಚಾರ ಆಚಾರ ಭೇದಗಳು ಇಲ್ಲದಂತಾಗಲಾರವು. ವರ್ಗದವರು ಉತ್ಕ್ರಾಂತಿ ಹೊಂದಿದ ವಚನಕಾರರ ವೀರಶೈವತನ್ನು ಮರೆಯಿಸಿ ರೂಢಿಯಲ್ಲಿ ಶೈವವನ್ನೇ ಆಚರಿಸಿ ವೀರಶೈವವು ವಚನ ಗ್ರಂಥಗಳಲ್ಲಿಯೇ ಉಳಿಯುವಂತೆ ಸಾಧಿಸಿದ್ದಾರೆ. ಶಿವಶರಣರೂ ಪ್ರಮಥರೂ ಆದ ವಚನಕಾರರ ವಿಚಾರ ಹಾಗು ಜ್ಞಾನಯುಕ್ತವಾದ ಜ್ಞಾನಕ್ರಿಯೆಗಳಿಂದೊಡಗೂಡಿದ ವೀರಶೈವ ಮತಿ ಧರ್ಮವು, ಶರಣರ ವಚನಗಳ ವಿಚಾರಗಳನ್ನು ಅಡಗಿಸಬೇಕೆಂಬ ಧ್ಯೇಯವುಳ್ಳ ವರ್ಗದವರಿಂದ ಪ್ರೋತ್ಸಾಹಗೊಂಡು ಮುಂದುವರಿಯಲಾರದು. ಶರಣರ ಉದಾತ್ತ ವಿಚಾರಗಳಿಂದ ಉತ್ಕ್ರಾಂತಿ ಹೊಂದಿ ಪರಿಣಮಿಸಿದ ವೀರಶೈವವನ್ನು ವರ್ಗದವರು ಪುನಃ ಶೈವವನ್ನಾಗಿ ಹಿಮ್ಮೆಟ್ಟಿಸಲು ಶರಣರ ವಿಚಾರಪರ ವಚನಗಳ ಅಭ್ಯಾಸಕ್ಕೆ ಉತ್ತೇಜನ ಕೊಡದೆ ಧರ್ಮದ ಅನುಯಾಯಿಗಳಿಗೆ ಧರ್ಮದ ಮರ್ಮವನ್ನು ತಿಳಿಯದೆ ಕೇವಲ ಅರ್ಥವಾಗದ ಕ್ರಿಯಾಚರಣೆಯಲ್ಲಿ ಉಳಿಯುವಂತೆ ಕೇವಲ ವಿಚಾರವಿಲ್ಲದ ಕ್ರಿಯೆಯನ್ನೇ ಬೋಧಿಸುತ್ತಿದ್ದಾರೆ. 'ಧರ್ಮವು ಎಲ್ಲಿಯ ವರೆಗೆ ಒಂದು ವರ್ಗದವರ ಗುತ್ತಿಗೆ ಇಲ್ಲವೆ ಸ್ವತ್ತಾಗಿ ಉಳಿಯುವದೋ ಮತ್ತು ವಚನಕಾರರ ವಿಚಾರಗಳು ಪ್ರಚಾರವಾಗದೆ ಗ್ರಂಥಸ್ಥವಾಗಿ ಉಳಿಯುವವೋ ಅಲ್ಲಿಯ ವರೆಗೆ ಧರ್ಮದ ಮರ್ಮವು ಸಾಮಾನ್ಯರಿಗೆ ತಿಳಿಯಲಾರದು. ಆದ್ದರಿಂದ ಶಿವಶರಣರ ವಿಚಾರಗಳು ಬೇಗ ಪ್ರಚಾರವಾದಷ್ಟು ಸಮಾಜದವರ ಅಂಧ ಶ್ರದ್ಧೆ ಮೂಢ ಭಕ್ತಿಗಳು ಮಾಯವಾಗಿ ಅವರಿಗೆ ಧರ್ಮದ ಜ್ಞಾನವಾಗಿ ಅವರು ಕ್ರಿಯೆಯನ್ನು ಅರ್ಥವರಿತು ಆಚರಿಸುವರು. ವರ್ಗದವರು ಧರ್ಮವನ್ನು ತಮ್ಮ ಉಪಜೀವನದ ಕಾಯಕವನ್ನಾಗಿ ಮಾಡಿಕೊಂಡಿದ್ದರಿಂದ ಧರ್ಮದ ಕ್ರಿಯಾ ಭಾಗವನ್ನಷ್ಟೇ ಆಚರಿಸಿ ಅದರ ವಿಚಾರದ ಮರ್ಮವನ್ನು ತಾವೂ ತಿಳಿದುಕೊಳ್ಳದೆ ಅನುಯಾಯಿಗಳಿಗೂ ತಿಳಿಸದೆ ಗುಪ್ತವಾಗಿ ಉಳಿಯುವಂತೆ ಮಾಡಿದ್ದರಿಂದ ತಿಳಿಯದೆ ಆಚರಿಸುವ

ಕ್ರಿಯೆಯಲ್ಲಿ ಆಸ್ಥೆ ಇಲ್ಲದಂತಾಗಿ ಕೇವಲ ಡಂಭಾಚಾರ ಕ್ರಿಯೆಯು ಆಚರಿಸಲ್ಪಡುತ್ತಿದೆ. ಆದ್ದರಿಂದ ಧರ್ಮದ ಆಚರಣೆಗೆ ಅನುಯಾಯಿಗಳಲ್ಲಿ ಆಸಕ್ತಿ ಇಲ್ಲದಾಗಿ ಧರ್ಮಾಚರಣೆಯು ಲೋಪವಾಗತೊಡಗಿದೆ. ಹೀಗಾಗಲಿಕ್ಕೆ ಬಸವಾದಿ ಶಿವಶರಣರ ಅರ್ಥವುಳ್ಳ ವಚನಗಳ ವಿಚಾರಗಳನ್ನು ತಿಳಿಸದೆ ಅಡಗಿಸಲ್ಪಟ್ಟು ಮರೆತು ಹೋದದ್ದೇ ಮುಖ್ಯ ಕಾರಣವು.

ವರ್ಗದವರ ಸ್ವಾರ್ಥದಿಂದ ಭೇದಭಾವದ ಸಂಕುಚಿತ ದೃಷ್ಟಿಯಿಂದ ಜಾತಿಭೇದದ ವಿಚಾರಗಳು ಬೆಳೆದುಬಂದು ಶರಣರ ವೀರಶೈವವು ಪುನಃ ಪ್ರಾಚೀನ ಕಾಲದ ಶೈವವಾಗಿ ರೂಢಿಯೊಳಗೆ ಬಂದು ಶರಣರ ವಿಚಾರಗಳು ಅನುಯಾಯಿಗಳ ಬುದ್ಧಿಗೆ ಹಿಡಿಸದಂತಾಗಿದೆ. ಇದರ ಜವಾಬ್ದಾರಿಯು ವರ್ಗದವರ ಮೇಲೆ ಇದೆ. ಧರ್ಮದ ಬಗ್ಗೆ ವರ್ಗದವರನ್ನೇ ಅವಲಂಬಿಸಿ ಕೆಳತರೆ ಲಿಂಗವಂತರೆಂದರೆ ಮೂಢ ಭಕ್ತಿಯ ಕಲ್ಲಪ್ಪಗಳೆಂದು ಧರ್ಮದ ನಿಜವಾದ ಮರ್ಮದ ವಿಚಾರಗಳಿಲ್ಲದ್ದಕ್ಕಾಗಿ ಕರೆಯಿಸಿಕೊಳ್ಳುತ್ತಿರಬೇಕಾಗುವದು. ಈ ಸ್ಥಿತಿಯು ಶೀಘ್ರ ಮಾಯವಾದಷ್ಟು ವಿಹಿತವು.

ಧರ್ಮವು ಕೇವಲ ಕುರುಡ ಆಚಾರವಾಗದೆ ವಿಚಾರಪರವಾಗುವಂತೆ ಪ್ರಯತ್ನ ಮಾಡುವದು ಅನೇಕ ಶತಮಾನಗಳ ವರೆಗೆ ಕೇವಲ ಕ್ರಿಯೆಯನ್ನೇ ಆಚರಿಸಿ ಶರಣರ ವಿಚಾರಗಳನ್ನು ಅಡಗಿಸಿದ ಹಾಗು ಧರ್ಮದ ಗುತ್ತಿಗೆಯನ್ನು ಹೊತ್ತ ವರ್ಗದವರದಾಗಿದೆ. ಈ ಜವಾಬ್ದಾರಿಯನ್ನು ನಿರ್ವಹಿಸುವ ಉತ್ತಮ ಉಪಾಯವೆಂದರೆ ಧರ್ಮದ ಗುತ್ತಿಗೆಯನ್ನು ಬಿಟ್ಟು ಕೊಟ್ಟು ಧರ್ಮದ ಮರ್ಮವನ್ನು ತಿಳಿಸಬಹುದಾದ ಶರಣರ ವಿಚಾರಗಳನ್ನು ಪ್ರಚಾರ ಮಾಡಿ ಕನ್ನಡ ವಚನಶಾಸ್ತ್ರದ ಅಭ್ಯಾಸಕ್ಕೆ ಉತ್ತೇಜನ ಕೊಡುವದು.

ಕನ್ನಡ ವಚನಶಾಸ್ತ್ರದ ಹೆಚ್ಚಿನ ಗೌರವಕ್ಕಾಗಿ ಪರಧರ್ಮದವರ ದರ ಸಹಾನುಭೂತಿ ದೊರಕಿಸುವದಕ್ಕಾಗಿ ಅನುಭವದಿಂದ ಬರೆಯಲ್ಪಟ್ಟ ಚನಗಳ ವಿಚಾರವನ್ನೇ ಹೆಚ್ಚು ತರ್ಕಬದ್ಧವಾಗಿ ಶಾಸ್ತ್ರೀಯ ಪದ್ಧತಿ ಯಿಂದ ಸಂಸ್ಕೃತದಲ್ಲಿ ಗ್ರಂಥಗಳು ನಿರ್ಮಾಣವಾಗಿವೆ. ಮುಂದೆ ಆಗಲೂ ದ್ದಿ ಇಲ್ಲ. ಶಿವಾನುಭವದ ವಚನಗಳನ್ನು ಹಿಂದೀ ಇಂಗ್ಲೀಷ ಭಾಷೆ ಲ್ಲಿ ಅನುವಾದ ಮಾಡಬೇಕೆಂದು ಪ್ರಯತ್ನಗಳು ನಡೆದಂತೆ ಈ ಪೂರ್ವ

ದಲ್ಲಿ ಧರ್ಮದ ವಿಚಾರಗಳಿಗೆ ಸಂಸ್ಕೃತವೇ ಗೌರವಯುಕ್ತ ಭಾಷೆಯೆಂದು ಪರಿಗಣಿಸಲ್ಪಟ್ಟ ಪ್ರಕಾರ ವೀರಶೈವರ ಗ್ರಂಥಗಳು ಸಂಸ್ಕೃತದಲ್ಲಿಯೂ ಶರಣರ ಅನುಭವದ ವಚನಗಳನ್ನೇ ಆಧಾರವಾಗಿಟ್ಟುಕೊಂಡು ಬರೆಯಲ್ಪಟ್ಟವೆ.

ವೀರಶೈವ ಪರ ಸಂಸ್ಕೃತ ಗ್ರಂಥಗಳಲ್ಲಿ ೧೩೦೦ ಕ್ರಿ. ಶ. ದ ಸುಮಾರಕ್ಕೆ ಬರೆಯಲ್ಪಟ್ಟ ಸಿದ್ಧಾಂತ ಶಿಖಾಮಣಿಯೇ ಮೊದಲಿನದು. ಅನುಭವ ಸೂತ್ರ ೧೪೫೦ ಲಿಂಗಧಾರಣ ಚಂದ್ರಿಕೆ ೧೭೫೦ ರ ಸುಮಾರಕ್ಕೆ ಬರೆಯಲ್ಪಟ್ಟವೆಂದು ಲಿಂಗೈಕ್ಯ ಎಂ. ಆರ್. ಸಾಖರೆ ಎಂ. ಎ ಅವರು ತಮ್ಮ ಗ್ರಂಥದಲ್ಲಿ ಸ್ಪಷ್ಟಗೊಳಿಸಿದ್ದಾರೆ. ಇವರು ಇಂಗ್ಲೀಷದಲ್ಲಿ ಬರೆದ "ವೀರಶೈವ ಧರ್ಮ ತತ್ವ ಹಾಗೂ ಅದರ ಆಚರಣೆಗೆ" "*Veera Shaiva Religion Philosophy and its Practice*" ಎಂಬ ಗ್ರಂಥವು ಸಾಕಷ್ಟು ಆಧಾರ ಪೂರ್ವಕವಾಗಿ ಬರೆಯಲ್ಪಟ್ಟಿದೆ. ಅದ್ದರಿಂದ ವೀರಶೈವ ಧರ್ಮದ ಎಲ್ಲ ವಿಚಾರಗಳೂ ತಿಳಿಯಲ್ಪಡುವವು. ಈ ಗ್ರಂಥವನ್ನು ಬಲ್ಲ ಎಲ್ಲ ವೀರಶೈವರು ಓದುವಷ್ಟು ಅದು ಮಹತ್ವದ್ದಿದೆ. ಈ ಗ್ರಂಥದ ಬಗ್ಗೆ ವೀರಶೈವರೆಲ್ಲರೂ ಲಿಂಗೈಕ್ಯ ಸಾಖರೆಯವರಿಗೆ ಅತ್ಯಂತ ಋಣಿಯಾಗಿರತಕ್ಕದ್ದೆಂದು ಅದನ್ನು ಓದಿದವರು ಒಪ್ಪಿಕೊಳ್ಳುವಂತಿವೆ. ಅದ್ದರಿಂದ ಧರ್ಮದ ಅನುಯಾಯಿಗಳೆಲ್ಲರೂ ತಮ್ಮ ಧರ್ಮದ ಮರ್ಮವನ್ನು ತಿಳಿದುಕೊಳ್ಳಬೇಕೆನ್ನುವವರು ಲಿಂಗೈಕ್ಯ ಸಾಖರೆಯವರ ಗ್ರಂಥಗಳನ್ನೂ ಶರಣರ ಶಿವಾನುಭವ ವಚನ ಗ್ರಂಥಗಳನ್ನೂ ಅವಶ್ಯ ಓದತಕ್ಕದ್ದು.

ಸಮಾಜದವರು ಸ್ಥಾವರಲಿಂಗ ಪೂಜೆ ಮತ್ತು ಇಷ್ಟಲಿಂಗ ಪೂಜೆಯಲ್ಲಿರುವ ಭೇದದ ಮರ್ಮವನ್ನು ಅವಶ್ಯ ತಿಳಿದುಕೊಳ್ಳತಕ್ಕದ್ದು. ಸ್ಥಾವರಲಿಂಗ ಪೂಜೆಯು ತನಗೆ ಅನನ್ಯವಾದ ತನ್ನ ಸ್ವರೂಪದ ತನ್ನ ಅರುಹಿನ ಕುರುಹಿನ ಪೂಜೆಯೆಂದು ಲಿಂಗವು ಧ್ಯಾನಸ್ಥ ಲಿಂಗಧಾರಿಯ ರೂಪದಲ್ಲಿದೆ ಎಂದು ಕಂಡು ಕೊಂಡ ಶಿವಶರಣರಿಗೆ ಅಹಂಗ್ರಹೋಪಾಸನೆಯಾಗುವದೆಂದು ಹೊಳೆದದ್ದರಿಂದ ಇಷ್ಟಲಿಂಗ ಧಾರಣೆ ಪೂಜಾದಿಗಳು ವಚನಶಾಸ್ತ್ರದಲ್ಲಿ ಪ್ರತಿಪಾದಿಸಲ್ಪಟ್ಟು ಆಚರಣೆಯಲ್ಲಿ ಶಿವಶರಣರಿಂದ ತರಲಾಗಿದೆ. ಇಷ್ಟೆಲ್ಲ ಪೂರ್ಣ ವಿಚಾರದಿಂದ ಶೈವದ ಉತ್ಕ್ರಾಂತಿಯಾಗಿ ಆಚರಣೆಗೆ ಬಂದ ವೀರಶೈವವನ್ನು ಪುನಃ ಶೈವವನ್ನಾಗಿ ಮಾಡಲು ಶಿವ

ಶರಣರ ವಚನಗಳ ಜ್ಞಾನವನ್ನು ಬಚ್ಚಿಡಲು ವರ್ಗದವರು ಮಾಡುವ ಸಹಾಸವು ಎಷ್ಟು ಹಾನಿಕರವಾಗಿದೆಂಬುದನ್ನು ವಾಚಕರೇ ಊಹಿಸಬಹುದು.

ಸಮಾಜದಲ್ಲಿ ವಿದ್ಯಾಬುದ್ಧಿಗಳಿಲ್ಲದೆ, ಧರ್ಮದ ಕ್ರಿಯಾಚರಣೆಯು ವಿಚಾರ, ಶಿವಾನುಭವದ ಜ್ಞಾನ, ಬ್ರಹ್ಮಚರ್ಯ ಪಾಲನೆಯು ನೈತಿಕ ನಿಷ್ಠೆ ಮುಂತಾದ ದುಡಿಮೆ, ಪೂರ್ವ ತಯಾರಿ ಇಲ್ಲದೆ ಜನನ ಮಾತ್ರದಿಂದ ಗುರು ಜಂಗಮಸ್ಥಾನಗಳು ಮಠಮಾನ್ಯಾದಿಗಳು ಮಾನಮರ್ಯಾದೆ ಗೌರವಗಳು ಅನಾಯಾಸವಾಗಿ ದೊರೆಯುವ ವ್ಯವಸ್ಥೆ ಸಮಾಜದಲ್ಲಿ ಈಗಿನಂತೆ ಇದ್ದರೆ ಯಾರು ತಾನೆ ಕಷ್ಟಪಟ್ಟು ಶ್ರಮವಹಿಸಿ ದೀರ್ಘ ಪ್ರಯತ್ನದಿಂದ ಯೋಗ್ಯತೆ ಪಡೆಯಲು, ವೇದಾಂತಾಚಾರ್ಯ ಕೀರ್ತನ ಕೇಸರಿ, ಪುರಾಣ ಪಂಡಿತ, ಪ್ರವಚನ ಪ್ರವೀಣ, ಮಂತ್ರ ಮಾರ್ತಂಡರಾಗಿ ಸಮಾಜದಲ್ಲಿ ಆಧ್ಯಾತ್ಮ ವಿದ್ಯೆಯನ್ನು ಪಸರಿಸಿ ಅನುಯಾಯಿಗಳಲ್ಲಿ ಧರ್ಮಾಸಕ್ತಿ, ವಿಚಾರಗಳು ಬೆಳೆಯುವಂತೆ ಸಾಹಸಪಟ್ಟಾರು ?

ಈ ಪರಿಸ್ಥಿತಿಯಲ್ಲಿ ಯಥಾ ಗುರು ತಥಾ ಶಿಷ್ಯನೆಂಬಂತೆ ಧರ್ಮದವರ ಧರ್ಮ ಮೌಢ್ಯವು ಹೇಗೆ ತಾನೆ ದೂರಾದೀತು ? ಆದ್ದರಿಂದ ಸರ್ವತ್ರ ಶಿವಾನುಭವಸಂಘಗಳು ಸ್ಥಾಪಿಸಲ್ಪಟ್ಟು ಇಂಥಸಂಘಗಳಲ್ಲಿಯೂ ಮನೆಮಾರುಗಳಲ್ಲಿಯೂ ಮಠಮಾನ್ಯಗಳಲ್ಲಿಯೂ ನಿತ್ಯವೂ ವಚನಶಾಸ್ತ್ರದ ಅಭ್ಯಾಸ, ಶ್ರವಣ, ಪಠನೆಗಳು ನಡೆಯುವದು ಅತ್ಯಗತ್ಯ. ಅಂದರೆ ಮಾತ್ರ ವೀರಶೈವವು ಮಡ್ಡ ಸಿದ್ಧಾಂತವಾಗದೆ ಮತಧರ್ಮವಾಗಿ ಸಮಾಜದವರು ಮತಿವಂತರಾಗಿ ಆಚರಿಸುವಂತೆ ಸಾಧ್ಯವಾಗುವದು.

ವಿಮರ್ಶೆಯು ಕಿಂಚಿತ್ ಕಠೋರವಾಗಿ ಕಂಡರೂ ಕೇವಲ ಸಮಾಜದ ಹಿತಚಿಂತನೆಯಿಂದ ಬರೆದದ್ದಾಗಿದೆಂದು ಬಗೆದು ಸುಜ್ಞರು ಕ್ಷಮಿಸುವರೆಂದು ಆಶಿಸಲಾಗಿದೆ.

# ಭಸ್ಮಾಸುರ

(ಲೇಖಕ— ಶ್ರೀ ಬಸವಪ್ಪ ಚನ್ನಪ್ಪ ಪಟ್ಟೇದ. ಮು ಹುಕ್ಕೇರಿ)

---

ಭಸ್ಮಾಸುರ= ಭಸ್ಮ + ಅಸುರ, ಅಂದರೆ ಭಸ್ಮವೆಂಬ ಹೆಸರಿನ ರಾಕ್ಷಸ ಇಲ್ಲವೆ ಭಸ್ಮವೆಂಬುದೇ ರಾಕ್ಷಸ. ಶಿವನ ಲಿಂಗಪೂಜೆಗೆ ದಿನಾಲು ತಪ್ಪದೆ ಚಿತಭಸ್ಮ ತಂದು ಕೊಡುವ ಸೇವೆಯಲ್ಲಿ ಭಸ್ಮಾಸುರನೆಂಬ ನಾಮವುಳ್ಳ ರಾಕ್ಷಸನಿರುತ್ತಿದ್ದನು. ಅವನಿಗೆ ಹಾಗೆ ಒದಗಿಸಲು ಎಷ್ಟೋ ಸಲ ಬಲು ಪ್ರಯಾಸ ಪಡಬೇಕಾಗುತ್ತಿದ್ದಿತು. ಆ ಕಾರಣ ಅದನ್ನು ತಪ್ಪಿಸಿಕೊಳ್ಳಲಿಕ್ಕೆ ಅವನು ಶಿವನಲ್ಲಿ— "ನಾನು ಯಾರ ತಲೆಯಮೇಲೆ ಹಸ್ತವಿಡುವೆನೋ ಅವರು ಉರಿದು ಕೂಡಲೆ ಚಿತಾಭಸ್ಮ (ಚಿತಾಭಸ್ಮ) ವಾಗಬೇಕು." ಎಂಬ ವರ ಬೇಡಿಕೊಂಡನು. ಶಿವನು ತಥಾಸ್ತು ಎಂದನು. ಮುಂದೆ ಭಸ್ಮಾಸುರನಿಗೆ ಚಿದಾಭಸ್ಮ ಒದಗಿಸಲಿಕ್ಕೆ ಏನೂ ತೊಂದರೆಯಾಗಲಿಲ್ಲ.

ಆದರೆ ಭಸ್ಮಾಸುರನಿಗೆ ಕುಬುದ್ಧಿ (ಸ್ವಾರ್ಥಸಾಧಕ ಬುದ್ಧಿ) ಹುಟ್ಟಿತು. ಶಿವನ ತಲೆಯಮೇಲೇ ಹಸ್ತವಿಟ್ಟು ಅವನನ್ನು ನಾಶಮಾಡಿ ತಾನೇ ವಿಶ್ವ (ಶಕ್ತಿ)ದೇವಿಯ ಪಾರ್ವತಿಯ ಸ್ವಾಮಿಯಾಗಬೇಕೆಂದು ಯೋಚಿಸಿ ಶಿವನನ್ನು ದಗ್ಧಪಡಿಸಲಿಕ್ಕೆ ಬೆನ್ನು ಹತ್ತಿದನು. ಶಿವನು ತಪ್ಪಿಕೊಳ್ಳಲು ಅತ್ತಿತ್ತ ಅಲೆದಾಡಹತ್ತಿದನು. ಇದನ್ನು ಕಂಡು ಭಸ್ಮಾಸುರನು ಇಲ್ಲಿ ತಪ್ಪುಮಾಡುವನು ಅನ್ಯರನ್ನು ದಹಿಸಿದರೆ ಅವನು ತಾನು ವಿಶ್ವದ ಸ್ವಾಮಿಯಾಗನು. ಅದಕ್ಕೆ ತಾನೇ ಸ್ವತಃ ದಗ್ಧನಾಗಬೇಕಾಗುವದು. ದಗ್ಧ ಅಂದರೆ ನಿರ್ಣಾಮ (ನಿರ್ + ನಾಮ). ನಿರ್ಣಾಮೋದಕವೆಂಬುದು ದಶವಿಧ ಪಾದೋದಕದಲ್ಲಿ (ಕೃಪೆಯಲ್ಲಿ) ಒಂಬತ್ತನೆಯದು. ನಿಜಗುರು ಕೃಪೆಯಿಂದ ಮಾತ್ರ ಶಿಷ್ಯನು ಇಂತಾಗುವನು. ಇದನ್ನೇ ಷಟ್‌ಸ್ಥಲದ ಜಂಗಮ ಲಿಂಗದ ಉಪಲಿಂಗಗಳಲ್ಲಿ ಒಂಬತ್ತನೆಯದಾದ ನಷ್ಟಾಗಮ ಲಿಂಗವೆಂದು ಹೇಳಿದರು.) ಎಂದು ವಿಷ್ಣುವು ಆಲೋಚಿಸಿ ಕೂಡಲೆ ಮೋಹಿನಿಯ ರೂಪ ಧರಿಸಿ ಭಸ್ಮಾಸುರನ ಎದುರಿಗೆ ಬಂದನು. ಮೋಹಿನಿಯು ಶಕ್ತಿ ಸ್ವರೂಪೆಯು. ಶಕ್ತಿಯಾದ ಅನ್ನಪೂರ್ಣೆಯನ್ನು ಶಂಕರಾಚಾರ್ಯರು ಓಂಕಾರ ಬೀಜಾಕ್ಷರೀ, ಸೌಂದರ್ಯ ರತ್ನಾಕರೀ' ಎಂದು ಮುಂತಾಗಿ ಬಣ್ಣಿಸಿರುವರು. ಅಂತೇ ಆ ಅತ್ಯಂತ ಸುಂದರಿಯಾದ ಮೋಹಿನಿಯನ್ನು ಕಂಡೊಡನೆ ಶಿವನನ್ನು ಬಿಟ್ಟು ಭಸ್ಮಾಸುರನು

ಆಕೆಯಮುಂದೆ ಲಾಂಗೂಲ ಬಾಲನ ನಡೆಸಿದನು ನನಗೆ ನೀನು ವಶಳಾ ಗೆಂದನು. ಆಕೆ "ನನ್ನಂತೆ ನೀನು ಕುಣಿದು ಹಾವಭಾವ ಮಾಡಿದರೆ ನಾನು ನಿನ್ನನ್ನು ಲಗ್ನವಾಗುವೆನು" ಎಂದಳು. ಅದಕ್ಕೆ ಭಸ್ಮಾಸುರನು ಸಂತೋಷ - ದಿಂದ ಒಪ್ಪಿ. ಆಕೆಯಂತೆ ಕುಣಿಯುತ್ತಲೂ ಹಾವಭಾವ ಮಾಡುತ್ತಲೂ ಕಳೆದನು. ಅದು ಒಳ್ಳೇ ಭರಕ್ಕೆ ಬಂದು ಭಸ್ಮಾಸುರನಿಗೆ ಎಚ್ಚರ ಉಳಿಯ ಲಿಲ್ಲ. ಆಗ ಮೋಹಿನಿಯು ತನ್ನ ತಲೆಯ ಮೇಲೆ ಬಲಗೈಯನ್ನು ಇರಿಸಿ ಕೊಂಡಳು. ರಾಕ್ಷಸನೂ ಹಾಗೇ ಮಾಡಲು, ಕೂಡಲೇ ಉರಿದು ಚಿದ್ಭಸ್ಮ ವಾಗಿ ಬಿದ್ದನು. ಹೀಗಾಗಿ ಶಿವನ ಮೇಲೆ ಬಂದ ಸಂಕಟ ಪರಿಹರಿಸಲ್ಪ ಟ್ಟಿತಂತೆ! ಇರಲಿ. ಇದರ ಸಾರಾಂಶವನ್ನು ನೋಡೋಣ.

ಭಸ್ಮವೆಂದರೆ ವಿಭೂತಿ. ಅದು ಯಾವ ಯಾವ ವಸ್ತುವನ್ನು ಸ್ಪರ್ಶಿ ಸುವದೋ ಅದರ ನಾಮ ರೂಪ ಗುಣಗಳು ಕೂಡಲೇ ನಷ್ಟವಾಗಿ ಅಸ್ತಿ, ಭಾತಿ, ಪ್ರೀಯ, ಅಂದರೆ ಸತ್ ಚಿತ್ ಆನಂದ ಸ್ವರೂಪವೇ (ಚಿದ್ಭಸ್ಮವೇ ಇಲ್ಲವೇ ಏಕಮೇವಾದ್ವಿತೀಯತೆಯೇ) ಉಳಿಯುವದು.

(೧) ಕೆಲವು ಕಡೆ ಎರಡು ಶಬ್ದಗಳು ಕೂಡುವಾಗ ನಡುವೆ ಆ ಎಂಬ ಅಕ್ಷರವು ಸುಮ್ಮಸುಮ್ಮನೇ ಸೇರುವದುಂಟು. ಅದಕ್ಕೇನೂ ಅರ್ಥವಿರುವದಿಲ್ಲ ಉದಾ:— ವಿಶ್ವ+ಮಿತ್ರ=ವಿಶ್ವಾಮಿತ್ರ; ಶಿವ+ಪುರ ಶಿವಾಪುರ; ರತ್ನ+ಗಿರಿ ರತ್ನಾಗಿರಿ; ಮುಂತಾದವು

ಭಸ್ಮಾಸುರ ರಾಕ್ಷಸನೆಂದರೆ, ಗುರುದೇವನು. ಅವನ ಕೃಪಾಹಸ್ತವು ಯಾರ ತಲೆಯಮೇಲೆ ಬೀಳುವದೋ ಅವರು ದಗ್ಧರಾಗಿ (ಪುರುಷಮಣಿಯು ಕಬ್ಬಿಣವನ್ನು ಸ್ಪರ್ಶಿಸಲು ಅದು ಚಿನ್ನವಾದಂತೆ) ಶಿವಚಿತ್ಕಳಾ ರೂಪವಾಗಿ ಶಿವನಲ್ಲಿ ಬೆರೆದು ಐಕ್ಯರಾಗುವರು. ವಿಷ್ಣುವೇ ಸತ್ಪುರುಷ ಮಹಾಗುರು ಸ್ವರೂಪವು. ಅವನು ಆ ಭಸ್ಮಾಸುರ ಗುರುವನ್ನೇ ಭಸ್ಮಿಸಿ ಶಿವರೂಪ ಪಡಿ ಸಿದನು. ಆಗ ಅವನು ಪಾರ್ವತಿಯು (ವಿಶ್ವದ) ನಾಥ ಜಪ್ಟೇಏಕೆ ಸರ್ವಕ್ಕೂ [ತನಗೂ ಶಿವನಿಗೂ ಜಗತ್ತಿಗೂ] ಅಧಿಪತಿಯಾದನು.

**ಲಿಂಗವಂತರ ಭಸ್ಮ:**— ಇದನ್ನು ಎಲ್ಲರೂ ಬಲ್ಲರು. ಅದು ತಾನು ಸ್ವತಃ ಪರಿಶುದ್ಧವಾಗಿದ್ದು, ಅದನ್ನು ಅಪೇಕ್ಷಿಸುವ ಜಲ ರುದ್ರಾಕ್ಷಿ ಲಿಂಗ ಭಕ್ತನ ಸರ್ವಾಂಗಕ್ಕೆ ಧರಿಸಿ, ಆ ಮೇಲೆ ಅವನು ತನ್ನ ಅಂಗದಲ್ಲಿ ಪ್ರಣ ವಗಳನ್ನು ಆಯಾ ಸ್ಥಳಗಳಲ್ಲಿ ವಿಭೂತಿಯಿಂದ ಸ್ಥಾಪಿಸಿಕೊಂಡು, ಲಿಂಗ

ರೂಪನಾಗುವನು. ಅಂದರೆ ಅವೆಲ್ಲವುಗಳ ನಾಮ ರೂಪಗಳನ್ನು ಹೋಗಲಾಡಿಸಿ, ಸಚ್ಚಿದಾನಂದತ್ವ ಪಡೆಯಲು ಹೆಣಗುವನು.

ಭಸ್ಮವನ್ನು ಲಿಂಗಕ್ಕೆ ಧರಿಸುವಾಗ:— अनादी शाश्वतं शान्तम् चैतन्यं चित्स्वरुपकम् । चिद्‌गं वृषभाकारम् । चित्परम लिंगधारणम् ॥ ಎಂದು ಭಕ್ತನು ಉಸುರುವನು. ಇಲ್ಲಿ ಲಿಂಗವೆಂದರೆ ಇಷ್ಟಲಿಂಗ ಒಂದೇಯಲ್ಲ. ಸರ್ವಪದಾರ್ಥಗಳೆಂದು ತಿಳಿಯಬೇಕು ಏಕೆಂದರೆ—

"लिंगमध्य जगत् सर्वं । त्रैलोक्यं सचराचरम ।
लिंग बाह्यात् परम नास्ती तस्माद् लिंग परात्परम ॥

ಈ ಮಾತು ಸಕೃದ್ದರ್ಶನಕ್ಕೆ ಅತಿಶಯೋಕ್ತಿ ಎಂದು ಕೆಲವರಿಗೆ ಅನಿಸಬಹುದು. ಆದರೆ ಇದರಲ್ಲಿ ಏನೇನೂ ಅಸತ್ಯವಿಲ್ಲ. ಸಂಪೂರ್ಣ ದಿಟದಿಂದಲೇ ತುಂಬಿರುವದು. ಲಿಂಗವೆಂದರೆ ಇಂತಹರಿಗೆ ಕರದಲ್ಲಿರುವ ಇಷ್ಟಲಿಂಗದ ವಿನಾ ಹೆಚ್ಚಿಗೇನೂ ಗೊತ್ತಿರುವದಿಲ್ಲ. ಇನ್ನು ಮೇಲಿನ ಮಂತ್ರವನ್ನು ವಿವೇಚಿಸುವ.

ಅನಾದಿ=ನ+ಆದಿ' ಅಂದರೆ ಆದಿ ಇಲ್ಲದ್ದು, ಅಥವಾ ಆದಿಯಪೂರ್ವದಲ್ಲಿ ಅನಂತಕಾಲ ಇದ್ದದ್ದು ಎಂಬರ್ಥವು. ಆದಿಯೆಂದರೆ ಜಗದುತ್ಪತ್ತಿಯ ಕಾಲವು. ಜಗತ್ತಿನ ಹುಟ್ಟುವಿಕೆಯ ಆರಂಭವು ನಿಜವಾಗಿ ಓಂ (ಪ್ರಣವದ ಉದಯದಿಂದಲೇ ಆಗುವದು. ಆದುದರಿಂದ ಜಗತ್ತಿನ ಹುಟ್ಟುವಿಕೆಯ ಕಾಲವೆಂದರೆ ಓಂ' ಚಿಚ್ಛಕ್ತಿಯಿಂದ ಹಿಡಿದು ಸ್ಥೂಲ ಪಂಚಮಹಾಭೂತಗಳ ಹಾಗು, ಅವುಗಳಿಂದ ವಿಶ್ವದ ಉತ್ಪತ್ತಿಯ ವರೆಗಿನ ಕಾಲವೆಂದು ತಿಳಿಯಬೇಕು. ಇದಕ್ಕಿಂತಲೂ ಮೊದಲಿನ ಅತರ್ಕ್ಯ ಅಗಣಿತ ಕಾಲವೇ ಅನಾದಿಯು. ಈ ಅನಾದಿಯಲ್ಲಿ ಕೂಡ ಇದ್ದ ವಸ್ತುವಿಗೆ ಅನಾದಿ ಎಂದಿರುವರು. ಇದೇ ಲಿಂಗದ ಪ್ರಥಮ ಲಕ್ಷಣ.

ಶಾಶ್ವತಂ:— ಎಂದೆಂದೂ ನಾಶವಾಗದೇ ಈದ್ದ ರೀತಿಯಲ್ಲಿಯೇ ಯಾವಾಗಲೂ ಇರುವ ವಸ್ತುವೇ ಶಾಶ್ವತವೆಂದು ಊಹಿಸಬೇಕು. ಇದನ್ನೇ ಪ್ರಸಾದವೆಂದೂ ಕರೆದಿರುವರು. ಇದು ಆ ವಸ್ತುವಿನ ದ್ವಿತೀಯ ಲಕ್ಷಣವು.

ಶಾಂತಂ:— ಆ ವಸ್ತುವಿನ ತೃತೀಯ ಲಕ್ಷಣವೇ ಸರ್ವದಾ ಶಾಂತಿಯಿಂದ ಇರುವದು. ಅದಕ್ಕೆ ಯಾವ ಗರಜೂ ಇರುವದಿಲ್ಲ. ಯಾಕೆಂದರೆ ಅದು ಎಲ್ಲ ಪದಾರ್ಥಗಳು ತಾನೇ ಆಗಿರುವದರಿಂದ ನಮ್ಮಂತೆ ಷಡೂರ್ಮಿ

ಗಳು ಅದಕ್ಕೆ ಇಲ್ಲ. ಈ ಷಣತ್ರಯ, ತಾಪತ್ರಯ, ಮೊದಲಾದವುಗಳೂ ಇಲ್ಲ. ಅದರ ಮನವು ಯಾವಾಗಲೂ ಸಮಾಧಾನದಲ್ಲಿಯೇ ಇರುವದು. ಆನಂದಭರಿತವಾಗಿಯೇ ಇರುವದು. ಹೀಗಿರುವದೇ ಶಾಂತಿಯು. ಮನವು ಸದಾ ಲಿಂಗ (ಸುಜ್ಞಾನ) ದಲ್ಲಿಯೇ ಬೆರೆದು ತದ್ರೂಪವಾಗಿರುವದು.

**ಚೈತನ್ಯಂ:**— ಚೇತನ+ಚೈತನ್ಯ ಚೇತನ (ಶಕ್ತಿ ಸಾಮರ್ಥ್ಯ) ವುಳ್ಳದೇ ಚೈತನ್ಯವು ಅದಕ್ಕೆ ಪ್ರಾಣ (ಜೀವ) ಚರ, ಜಂಗಮ ಎಂತಲೂ ಹೆಸರುಗಳುಂಟು. ಈ ಚೈತನ್ಯವು ಜಗತ್ತಿನೊಳಗಿನ ಪ್ರತಿಯೊಂದು ಪದಾರ್ಥದಲ್ಲಿಯೂ ಇರುವದು. ಅದು ಪರಶಿವನ ತೇಜವು.

**ಚಿತ್ ಸ್ವರೂಪಕಂ:**— ಅನಾದಿಲಿಂಗವು ತನ್ನ ಲೀಲೆಗೋಸುಗ ಜಗನ್ನಿರ್ಮಾಣಮಾಡಲು ತನ್ನ ಚಿತ್ಕಳಾಶಕ್ತಿಯನ್ನು ತನ್ನೊಳಗಿಂದ ಬಹಿಷ್ಕರಿಸಿತು. ಆ ಶಕ್ತಿಯೇ ಚಿತ್ಸ್ವರೂಪಕಂ ಅಂದರೆ ಚಿತ್ ಎಂಬ ಹೆಸರಿನಿಂದ ಪರಮಾತ್ಮನ ಸ್ವರೂಪನ್ನು ತಾಳಿರುವದು. ಇದೇ ಆ ಅನಾದಿ ವಸ್ತುವಿನ ಏರನೆಯ ಧರ್ಮವು.

**ಚಿದಂಗಃ**— ಚಿತ್+ಲಿಂಗ, ಚಿದಂಗ ಆಚಿತ್ತಿಗೆ ಪರಮಾತ್ಮನು ತಾನೇ ಅಂಗವಾದನು. (ಲಿಂಗವು ತ್ಯಾಗಾದಿ ಕಾರಣಾಂತ ಹನ್ನೆರಡು ವಿಧವಾಗಿರುವದು. ಆ ಅಂಗಗಳಾಗಿ 'ಓ' ಮಾದಿ 'ಮಾ' ಕಾರಾಂತ ೧೨ ಪ್ರಣಮಗಳೇ ಇಷ್ಟಾದಿ ನಿರಂಜನಾಂತ ೧೨ ಲಿಂಗಗಳಾಗಿ ವಾಸಿಸುತ್ತಿರುವವು. ಈ ಲಿಂಗರೂಪ ಶಿವಪ್ರೇರಣೆಯೇ ಶಕ್ತಿದೇವಿಯ ಸಾಮರ್ಥ್ಯದ ಉಗಮಸ್ಥಾನವು.) ಪರಮಾತ್ಮನೆಂದರೆ ಪ್ರಜ್ಞಾನ (ಪರಬ್ರಹ್ಮ ಪರಶಿವ) ಈ ಪರಶಿವನನ್ನು ಕೂಡಿಕೊಳ್ಳದಿದ್ದರೆ ಆ ಶಕ್ತಿಗೆ ಏನೂ ಮಾಡಲು ಬಾರದು. ಶಕ್ತಿಯು ಎಲ್ಲವನ್ನು ಮಾಡಿದರೂ ಅದಕ್ಕೆ ಶಿವನೇ ಪ್ರೇರಕನಾಗಿರುವನು.

**ವೃಷಭಾಕಾರಂ:**— ವೃಷಭನೆಂದರೆ ಅನಾದಿ ಭಕ್ತನು. ಆ ಅನಾದಿ ಲಿಂಗದಲ್ಲಿಯೇ ಐಕ್ಯವಾಗಿದ್ದನು. ಈತನೇ ಚಿಚ್ಛಕ್ತಿಯ ಉದಯಕ್ಕೆ ಸ್ಥಾನವು. 'ವೃಷಭ' ಶಬ್ದದ ಅಪಭ್ರಂಶವೇ ಬಸವ' ಈ ಬಸವನೇ ಸಪ್ತಜನ್ಮ (ಶಿಲಾದ ಸ್ಕಂದ, ನೀಲಲೋಹಿತ, ಮನಃಪ್ರಕಾರ, ಕಾಲಸಂಹಾರ, ವೃಷಭ, ಬಸವ) ಗಳಲ್ಲಿ ಕಡೆಯುವನು. ಆದಿಯಲ್ಲಿ ನಂದಿನಾಥ, ಅನಾದಿಯಲ್ಲಿ ವೃಷಭನಾಥ ಮೇದಿನೀ ಕಲ್ಯಾಣದಲ್ಲಿ ಬಸವನಾಮದಿ" ಎಂದು ಭಕ್ತೋತ್ತಮರೂ ಬಸವನನ್ನು ಕೊಂಡಾಡಿರುವರು. ಈ ಬಸವನೇ ಸದ್ಭಕ್ತನು. ಪ್ರಮ

ಥಾಗ್ರಣಿಯು. ಶಿವ ಭಕ್ತಿಯನ್ನು ಬೆಳೆಸಲಿಕ್ಕೆ ನಂದಿಯ ಅವತಾರವಾಗಿ ಭೂಮಿಗೆ ಬಂದವನು. ಸತ್ (ಶಾಶ್ವತ್) ಸ್ಥಿತಿಗೆ ಮೆಟ್ಟಿದ ಭಕ್ತರೆಲ್ಲ ಏಳನೆಯ ಜನ್ಮದನಾಂತು, ಬಸವರಾಗಿರುವರು. ಶಿವನ ಒಕ್ಕೆ (ಜಗವಾಗಿರುವ) ಮಿಕ್ಕುದಕ್ಕೆ ( ಜಗವಾಗಿ ಉಳಿದದ್ದಕ್ಕೆ ) ಯೋಗ್ಯರೆನಿಸಿಕೊಂಡಿರುವರು. ಸಂಪೂರ್ಣ ನಿಜಲಿಂಗವಾಗಿರುವದು. (ಅನಾದಿ ಲಿಂಗದ ಹತ್ತನೆಯ ಒಂದು ಅಂಶದಲ್ಲಿಯೇ ಆಕಾರಾದಿ ಪಂಚ ಮಹಾಭೂತಗಳೂ ಅವುಗಳಿಂದ ಸರ್ವ ವಿಶ್ವೋತ್ಪತ್ತಿಯೂ ಆಗಿ, ಮತ್ತೆ ಹತ್ತರಲ್ಲಿ ಒಂಬತ್ತು ಭಾಗವು ಉಳಿದಿರುವದು. ವಿಶ್ವವಾದ ಭಾಗವೇ ಒಕ್ಕುದು, ಉಳಿದ ಭಾಗವೇ ಮಿಕ್ಕದ್ದು).

ಈ ಪ್ರಕಾರ ಭಾವನೆಯನ್ನು ಪಡೆದೇ ಆ ಮಹಾ ಜ್ಞಾನವನ್ನೇ ಭಸ್ಮವೆಂದು ಮಾಡಿರಿ. ಆ ಚಿದ್ಭಸ್ಮವನ್ನು ಲಿಂಗಕ್ಕೆ ಧರಿಸಬೇಕು. ನಾವು ಧರಿಸುವ ಕ್ರಿಯಾ (ಕೃತ್ರಿಮ) ಭಸ್ಮವಾದುದ್ದರಿಂದ ಅದರಲ್ಲಿ ಇಂತಹ ಶ್ರೇಷ್ಠಭಾವನೆಯನ್ನು ತುಂಬಬೇಕು.

ಲಿಂಗವಂತರು ಭಾವನಾ ಪ್ರಧಾನರು. ನಮ್ಮ ಪ್ರತಿಯೊಂದು ಸಂಗತಿಯಲ್ಲಿ ( ಅಷ್ಟಾವರಣ, ಪಂಚಾಚಾರ, ಷಟ್‌ಸ್ಥಲಗಳಲ್ಲಿ ) ಯೂ ಅದು ಅವಶ್ಯವಾಗಿ ಬೇಕೇ ಬೇಕು. ಮಹಾಲಿಂಗವನ್ನು ಸದ್ಭಾವದಲ್ಲಿಯೇ ಪೂಜಿಸಿದರೆ ಮಾತ್ರ ಅದು ಅಳವಡುವದು. ಭಾವನೆಯಲ್ಲದೆ ಬರೇ ಎಷ್ಟೋ ಸ್ತೋತ್ರ ಹೇಳಿದರೂ, ಭಜನೆ ಮಾಡಿ ಕುಣಿದಾಡಿದರೂ, ಮಂತ್ರ ಜಪ ಮಾಡಿದರೂ, ಕ್ರಿಯೆಗಳನ್ನಾಚರಿಸಿದರೂ ಅವೆಲ್ಲ ವ್ಯರ್ಥವಾಗುವವು. ಪದಾರ್ಥಗಳ ನಾಮ ರೂಪ ಗುಣಗಳನ್ನು ಕಳೆದು ನೋಡಿದರೆ ಹಿಂದೆ ಸತ್ ಚಿತ್ ಆನಂದ ವಿನಾ ಬೇರೊಂದು ಉಳಿಯದು ಎಂದು ಒಬ್ಬ ಗೃಹಸ್ಥರಿಗೆ (ವಿಚಾರವಂತರಾದ ಬುದ್ಧಿವಂತರಿಗೆ) ನಾಮ ಹೇಳಲು "ಇದು ಶಕ್ಯವಿದೆಯೇ?" ಎಂದು ಅವರು ಕೇಳಿದರು. ಅದಕ್ಕೆ ನೀನು—"ಮೊದಲು ಆ ಭಾವನೆಯನ್ನು ತಾಳಬೇಕು. ಬಳಿಕ ಅದನ್ನು ಹೆಚ್ಚಿಚ್ಚಾಗಿ ಬೆಳೆಸುತ್ತಲೇ ಹೋಗಬೇಕು. ಅದು ಬೆಳೆದು ಪೂರ್ಣಾವಸ್ಥೆಗೆ ಬಂದರೆ ಅದಕ್ಕೆ ಫಲಗಳುಟಾಗುವವು. ಸತ್, ಚಿತ್ ಆನಂದಗಳು ಲಭಿಸುವವು. ಹಾಗೆ ಮಾಡದೆ ಹೋದರೆ ಮಾತ್ರ ಶಕ್ಯವಿಲ್ಲ" ಎಂದು ಹೇಳಿದನು. ಅವರು ಸುಮ್ಮನಾದರು. ಶರಣನು ಅಂತಹ ಪ್ರಬಲ ಭಾವನೆ ಧರಿಸಿಯೇ ವಿಶ್ವವನ್ನೆಲ್ಲ ಪ್ರಸಾದಲಿಂಗವಾಗಿ

ಕಾಣುವನು. ಅಕ್ಕ ಮಹಾದೇವಿಯವರು "ಎಲ್ಲೆಲ್ಲಿಯೂ ದೇವಾ ನೀನೇ ಇರುತ್ತಿದ್ದು ನನ್ನ ದೃಷ್ಟಿಗೆ ಅದೇಕೆ ಗೋಚರಿಸಲೊಲ್ಲೆ ? " ಎಂದು ಚನ್ನ ಮಲ್ಲಿಕಾರ್ಜುನನಿಗೆ ಪ್ರಶ್ನೆ ಮಾಡಿದುದನ್ನು ಬಲ್ಲಿರಷ್ಟೇ ! ಆಗ ಅವರು ತಮ್ಮ ಭಾವನೆಯನ್ನು ಉದ್ದೀಪ್ತಗೊಳಿಸುವದರಲ್ಲಿಯೇ ತೊಡಗಿದ್ದರು. ಈ ಮಾತನ್ನು ಎಲ್ಲ ಲಿಂಗಧಾರಿಗಳು (ಅವರು ಈಶ್ವರರೇ ಇರಲಿ, ಮಹೇಶ್ವರರೇ ಇರಲಿ.) ಒಳಿತಾಗಿ ಗಮನಿಸಬೇಕು. ಇಲ್ಲದಿದ್ದರೆ ಶ್ರೀ ಬಸವಣ್ಣನವರು ಹೇಳಿದಂತೆ "ಒಲಿದು ಭೂದಿಯ ಬಳಿಯಲು ಬೇಡ, ಹೂಸಿ ಫಲವೇನು ? ಮನದಲ್ಲಿ ಲೇಸಿಲ್ಲದನ್ನಕ್ಕ !" ಎಂಬಂತೆ ಆಗುವದು. ಎಂದು ಸವಿನಯ ಬೇಡಿಕೊಂಡು ಈ ಪುಟ್ಟ ಬರಹವನ್ನು ಮುಗಿಸುವೆನು.

---

## ರೇಣುಕ ರೇವಣಸಿದ್ಧರ ಐತಿಹ್ಯವೇನು ?

(ಲೇಖಕ:— ವ್ಹಿ. ಜಿ. ಪಾಟೀಲ. ರಿ. ಅ. ಎ. ಇನ್ಸಪೇಕ್ಟರ ಬೆಳಗಾಂವ)

-(⌒[०]⌒)-

ಆರ್ಯರು ಉತ್ತರ ಭಾರತವನ್ನು (ಆರ್ಯಾವರ್ತ) ವ್ಯಾಪಿಸಿದ ಮೇಲೆ ವಿಂಧ್ಯ ಪರ್ವತವನ್ನು ದಾಟಿ, ದಕ್ಷಿಣ ಭಾರತಕ್ಕೆ ಇಳಿದರು. ಇವರಲ್ಲಿ ಎಲ್ಲಕ್ಕೂ ಮೊದಲು ದಕ್ಷಿಣಭಾರತಕ್ಕೆ ಬಂದ ಮನುಷ್ಯನು ಅಗಸ್ತ್ಯ ಋಷಿಯು. ಇವನು ವಿಂಧ್ಯ ಪರ್ವತವನ್ನು ದಾಟಿ, ನಾಶಿಕ ವಾತಾಪಿಪುರ ( ಬದಾಮಿ ) ಐಹೊಳೆ (ಇಲ್ವಲನ ಊರು) ರಂಭಾಪುರಿಗಳ ಮೇಲಿಂದ ಪಾಂಡ್ಯ (ತಮಿಳ) ರಾಜ್ಯವನ್ನು ಸೇರಿ, ಅಲ್ಲಿಂದ ಕೆಂಬೋಡಿಯಾ ( ಕಾಂಭೋಜ ) ಶಾಮ (ಸಯಾಮ) ಬರ್ಹಣ ( ಬೋರ್ನಿಓ ) ಕಾಶಿದ್ವೀಪ ವರಾಹ ದ್ವೀಪಗಳಿಗೆ ಹೋಗಿ, ತರುವಾಯ ಜಾವಾ ದ್ವೀಪಕ್ಕೆ ಸಾಗಿ, ಅಲ್ಲಿ ಶಿವಾಲಯವನ್ನು ಕಟ್ಟಿಸಿ ಶೈವ ಮತದ ಪ್ರಸಾರ ಮಾಡಿದಂತೆ ಶಾಸನಗಳಿಂದ ತಿಳಿಯುತ್ತದೆ.

ಪೂರ್ವ ಜಾವಾದ "ದಿನಯ" ಎಂಬ ಗ್ರಾಮದಲ್ಲಿ ಕ್ರಿ. ಶ. ಪೂ. ೭೬೦ ರಲ್ಲಿ ಬರೆಯಲ್ಪಟ್ಟ ಒಂದು ಶಾಸನದಲ್ಲಿ "ಅಗಸ್ತ್ಯರ ಮೂರ್ತಿಯು ಮಾಡಲ್ಪಟ್ಟಿತು " ಎಂದು ಬರೆದಿದೆ. ಇದರಿಂದ ಇವರ ಮತವು ಲೋಕಪ್ರಿಯವಾಗಿ ಇವರೂ ಲೋಕಾದರಕ್ಕೆ ಪಾತ್ರರಾಗಿದ್ದರೆಂದು ಇದರಿಂದ ತರ್ಕಿಸಬಹುದಾಗಿದೆ.

ಆದರಿಂದ ಅಗಸ್ತ್ಯರು ಕ್ರಿ. ಶ. ಹಿಂದೆ ೯೦೦ನೆಯ ವರ್ಷದಲ್ಲಿ ಅಂದರೆ ಕ್ರಿ. ಶ. ಹಿಂದೆ ಸುಮಾರು ೭೮೦ ರಲ್ಲಿ ದಕ್ಷಿಣಾಪಥದಲ್ಲಿ ಪ್ರವಾಸ ಮಾಡಿ, ಜಾವಾಕ್ಕೆ ಮುಟ್ಟಿರಬೇಕೆಂದು ಹೇಳಿದರೆ ತಪ್ಪಾಗಲಾರದು.

ಅಗಸ್ತ್ಯರು ದಕ್ಷಿಣಾಪಥ (ದಕ್ಷಿಣ ಭಾರತ, ದಲ್ಲಿದ್ದಾಗ ರೇಣುಕರಿಂದ ವೀರಶೈವ ದೀಕ್ಷೆಯನ್ನು ತಕೊಂಡರೆಂದು ವೀರಶೈವ ಗ್ರಂಥಗಳು ಹೇಳುತ್ತವೆ. ಇದಕ್ಕೆ ಸಾಕ್ಷಿಯಾಗಿ ಮೊದಲು ರೇಣುಕರ ಆಶ್ರಮವಿರಬಹುದಾದ ಈಗಿನ ರಂಭಾಪುರಿ (ಬಾಳೇಹೊನ್ನೂರ) ಯ ನೆರೆಯಲ್ಲಿ ಅಗಸ್ತ್ಯ ಆಶ್ರಮವಿದ್ದದ್ದನ್ನು ಈಗಲೂ ನೋಡಬಹುದಾಗಿದೆ. ಇದಲ್ಲದೆ ರೇಣುಕರು ಅಗಸ್ತ್ಯರಿಗೆ ವೀರ ಶೈವ ಸಿದ್ಧಾಂತವನ್ನು ಉಪದೇಶಿಸಿದ ಸಂಗತಿಯು ನಿಜವೆಂಬ ಬಗ್ಗೆ ಗ್ರಂಥಾ ಧಾರಗಳೂ ದೊರೆತಿವೆ.

ಅಗಸ್ತ್ಯರು ವೀರಶೈವ ಪರವಾಗಿ ಬ್ರಹ್ಮ ಸೂತ್ರಗಳಿಗೆ "ಮುನಿ ಚಂದ್ರವೃತ್ತಿ" ಎಂಬ ಭಾಷ್ಯವನ್ನು ಬರೆದಿದ್ದಾರೆ. ಇದರದೊಂದು ಪ್ರತಿಯು "ಕುಂಭಕೋಣದಲ್ಲಿ" ದೊರೆತಿದೆ. ಶ್ರೀಕಂಠ ಭಾಷ್ಯದಲ್ಲಿ ಇದರ ಉಲ್ಲೇಖ ಉಂಟು. ಶ್ರೀಪತಿ ಪಂಡಿತರು ಶ್ರೀಕರ ಭಾಷ್ಯವನ್ನು ಇದರ ಆಧಾರದಿಂದ ಬರೆದಿದ್ದಾರೆ. ಅದ್ದರಿಂದ ರೇಣುಕರು ಅಗಸ್ತ್ಯರಿಗೆ ವೀರಶೈವ ದೀಕ್ಷೆ ಕೊಟ್ಟ ಸಂಗತಿಯು ನಿಜವೆಂದು ಸಿದ್ಧವಾಗುವದರಿಂದ ಅವರಿಗೆ ವೀರಶೈವ ತತ್ತ್ವೋ ಪದೇಶ ಮಾಡಿದ ರೇಣುಕರು ಕ್ರಿ. ಶ. ಪೂ. ೭೮೦ ಅಂದರೆ ಇಂದಿಗೆ ಸುಮಾರು ೨೭೦೦ ವರ್ಷಗಳ ಹಿಂದೆ ಜೀವಿಸಿದ್ದರೆಂದು ಸಿದ್ಧವಾಗುತ್ತದೆ.

ರೇಣುಕರು ಅಗಸ್ತ್ಯರಿಗೆ ಉಪದೇಶಮಾಡಿದ ವೀರಶೈವ ತತ್ವಗಳನ್ನೇ "ಸಿದ್ಧಾಂತ ಶಿಖಾಮಣಿ" ನಾಮದಿಂದ ಗ್ರಂಥವನ್ನು ರಚಿಸಿದ "ಶಿವಯೋಗಿ ಶಿವಾಚಾರ್ಯನು, ಕುಂಭೋದ್ಭವನೂ, ಲೋಪಾಮುದ್ರೆಯ ಗಂಡನೂ ಆದ ಅಗಸ್ತ್ಯನಿಗೆ ಉಪದೇಶ ಮಾಡಿದ ರೇಣುಕನೂ ವಿಭೀಷಣನ ಇಷ್ಟದಂತೆ ಲಂಕೆಗೆ ಹೋಗಿ ೩ ಕೋಟಿ ಲಿಂಗಗಳನ್ನು ಸ್ಥಾಪನೆ ಮಾಡಿದ ರೇಣುಕನೂ ಒಬ್ಬನೇ ಎಂದು (ಶಿದ್ಧಾಂತ ಶಿಖಾಮಣಿಕಾರನು) ಹೇಳುತ್ತಾನೆ.

ರೇಣುಕರು ೧೪೦೦ ವರ್ಷ ಬದುಕಿದ್ದರೆಂದೂ, ಅವರ ಅಪರಾವತಾರಿ ಗಳಾದ "ರೇವಣಸಿದ್ಧರು" ಬಿಜ್ಜಳ ವಿಕ್ರಮಾದಿತ್ಯ ಮೊದಲಾದ ಅರಸರ ಕಾಲದಲ್ಲಿ ಇದ್ದರೆಂದೂ, ರಂಭಾಪುರಿ ಮಠದ ಕಾರಭಾರಿಗಳು ಮೈಸೂರ ಮುಖ್ಯ ಮಂತ್ರಿ ಕೆ. ಸಿ. ರೆಡ್ಡಿಯವರಿಗೆ ಕೊಟ್ಟ ಮಾನಪತ್ರದಲ್ಲಿ ಉಲ್ಲೇಖಿ

ಸಿದ್ದಾರೆ. ಇದರಿಂದ ರೇಣುಕ ರೇವಣಸಿದ್ಧರು ಬೇರೆ ಬೇರೆ ವ್ಯಕ್ತಿಗಳಾಗಿದ್ದು ಬೇರೆ ಬೇರೆ ಕಾಲಗಳಲ್ಲಿ ಜೀವಿಸಿದ್ದರೆಂಬ ಸಂಗತಿಯು ನಿಚ್ಚಳವಾಗಿ ಒಡೆದು ಕಾಣುತ್ತದೆ.

ಇನ್ನು ಮನುಷ್ಯನು ೧೪೦೦ ವರ್ಷ ಬದುಕುವದು ಶಕ್ಯವೋ ಅಶಕ್ಯವೋ? ಎಂಬದರ ವಿಚಾರವನ್ನು (ಅದಿಭೌತಿಕ ಹಾಗು ಆಧ್ಯಾತ್ಮಿಕ .ಶಾಸ್ತ್ರಗಳಿಂದ ವಿಚಾರ ಮಾಡಲು) ಮಾಡಲು ಸಂಶೋಧಕರಿಗೆ ಒಪ್ಪಿಸಿ ನಾವು ಮುಕ್ತರಾಗುವೆವು.

ಇನ್ನು ಎರಡನೆಯ ಮಹಾ ಪುರುಷರಾದ "ರೇವಣಸಿದ್ಧರ" ವಿಷಯವಾಗಿ ನಮಗೆ ದೊರೆತ ಸಾಧನಗಳಿಂದ ಅವರ ನಿಜಚರಿತೆಯನ್ನು ವಾಚಕರ ಮುಂದಿಡಲು ಯತ್ನಿಸುವೆವು.

ಸುರಪುರ ತಾಲೂಕ "ಶಿರಿವಾಳ ಶಾಸನದಲ್ಲಿ (೧೧೮೫) ಶಿವಯೋಗಿ ಶಾಂತಮಯ್ಯಗಳ ಪುತ್ರ ರೇಣುಕಾಚಾರ್ಯರ ಪ್ರಸಿದ್ಧಿ ಎಂತೆಂದೊಡೆ" ಎಂದು ಬರೆದಿದೆ. ಇವರು ನಿರ್ಲಜ್ಜ ಶಾಂತಯ್ಯನವರಿಂದ ದೀಕ್ಷೆ ಹೊಂದಿದ್ದಾರೆ.

ಇವರು ಕ್ರಿ. ಶ. ೧ ೬೭ ತರುವಾಯ ಬದುಕಿದ್ದರೆಂದು ಶಿರಿವಾಳ ಹಾಗು ಚೌಡದಾನ ಪುರಗಳ ಶಾಸನಗಳಿಂದ ಕಂಡುಬರುತ್ತದೆ.

ಬಿಜ್ಜಳನು ಕಲ್ಯಾಣಕ್ಕೆ ಅರಸನಾಗುವ ಮೊದಲು ಅಂದರೆ ಚಾಲುಕ್ಯರ ೩ನೆಯ ತೈಲಪನ ಕಾಲದಲ್ಲಿ ಇವರು ಕಲ್ಯಾಣಕ್ಕೆ ಬಂದು ಒಬ್ಬ ಗಾಣಿಗನಲ್ಲಿ ಗುಪ್ತವಾಗಿ ಇದ್ದಂತೆ ತಿಳಿಯುತ್ತದೆ. ಬಹುತರ ಈ ಅರಸನದು ವೀರಶೈವರ ಮೇಲೆ ವಕ್ರದೃಷ್ಟಿ ಇರಬಹುದೆಂದು ಇದರಿಂದ ಧ್ವನಿತವಾಗುತ್ತದೆ.

ಆನೆ, ಕುದುರೆ, ಒಂಟೆ ಮೊದಲಾದ ವೈಭವದ ಚಿಹ್ನೆಗಳಿಂದ ಯುಕ್ತನಾಗಿ ಸೊಲ್ಲಾಪುರಕ್ಕೆ ಬಂದ ರೇವಣನೂ, ಮಾಯಾದೇವಿಯಲ್ಲಿ ನೀರು ಕೊತ್ತ ರೇವಣನೂ, ಪಿಣ್ಣಾಂಕ ನಾಮದಿಂದ ಸಂಚರಿಸಿದ ರೇವಣನೂ, ಈಗಿನ ರಂಭಾಪುರಿ ಸಿಂಹಾಸನ ಸ್ಥಾಪಿಸಿದ ರೇವಣನೂ ಒಬ್ಬನೇ ಆಗಿರಬೇಕೆಂದು (ಕಾಲಗಣನೆಯಿಂದ) ನಮಗೆ ತೋರುತ್ತದೆ. ಇವನ ಕಾಲವು ಕ್ರಿ. ಶ. ೧೧೬೧ ರಿಂದ ೧೧೮೫ ಇರಬೇಕೆಂದು ರಾ || ಬ || ಹಳಕಟ್ಟಿಯವರು ಹೇಳುತ್ತಾರೆ.

ಇವರ ಜನನದ ಬಗ್ಗೆಯೂ ಭಿನ್ನಾಭಿಪ್ರಾಯುಗಳಿವೆ. ಹೇಗೆಂದರೆ:— ಹುಬ್ಬಳ್ಳಿಯ ಮೂರುಸಾವಿರ ಮಠದ ಜಗದ್ಗುರುಗಳಿಂದ ಪ್ರಸಿದ್ಧಿಸಲ್ಪಟ್ಟ ಮರುಳಾರಾಧ್ಯ ಸಾಂಗತ್ಯದಲ್ಲಿ ಹೀಗೆ ಹೇಳಿದೆ.

"ಕೃಷ್ಣಾತೀರದಲ್ಲಿರುವ ಸೇಗುಣಸಿಯ ಗೌಡರ ಮನೆಯಲ್ಲಿ ರೇವಣ ಸಿದ್ಧರು ಜನಿಸಿದರು."

ಮರಾಠೀ ನವನಾಥ ಸಿದ್ಧರ ಚರಿತ್ರೆಯಲ್ಲಿ ಹೀಗೆ ಹೇಳಿದೆ :— "ಬ್ರಹ್ಮ ತೇಜಸ್ಸು ಕೂಸಿನ ರೂಪದಿಂದ ರೇವಾನದಿಯ ದಂಡೆಯಲ್ಲಿ ಬಿದ್ದಿತ್ತು. ಅದನ್ನು ಒಬ್ಬ ಒಕ್ಕಲಿಗನು ತಕ್ಕೊಂಡು ಹೋಗಿ, ಜೋಪಾನ ಮಾಡಿದನು. ಮುಂದೆ ಅವನು ದೊಡ್ಡವನಾದನು. ಅದೇ ದಾರಿಯಿಂದ [ಈ ಹುಡುಗನಿದ್ದ ಸ್ಥಳದ ಮೇಲಿಂದ ದತ್ತಾತ್ರೇಯನು ಗಿರಿನಾರಕ್ಕೆ ಹೋಗುವಾಗ ಈ ಹುಡುಗನನ್ನು ಕಂಡು ಸಂತೋಷಪಟ್ಟು, ಒಂದು ಮಂತ್ರವನ್ನು ಹೇಳಿಹೋದನು ಆ ಮಂತ್ರ ಪಠಣದಿಂದ ಈ ಹುಡುಗನು ಸಿದ್ಧಿಯನ್ನು ಪಡೆದು ಅದರ ಪ್ರಭಾವದಿಂದ ದಾಸೋಹ ನಡೆಯಿಸುತ್ತಿದ್ದನು. ರೇವಾನದಿಯ ದಂಡೆಯಲ್ಲಿ ಇವನು ಹುಟ್ಟಿದ್ದರಿಂದ ರೇವಣನೆಂದೂ ( ರೇವಾ+ಅಣ್ಣಾ ಆಗ ಆ ಪ್ರದೇಶವು ಕನ್ನಡ ಪ್ರದೇಶವಾಗಿರಬೇಕು.) ಸಿದ್ಧಿಯನ್ನು ಪಡೆದದ್ದರಿಂದ ಸಿದ್ಧನೆಂದೂ ಎರಡೂ ಕೂಡಿಸಿ ರೇವಣ್ಣಾ+ಸಿದ್ಧ = ರೇವಣ್ಣಸಿದ್ಧ = ರೇವಣಸಿದ್ಧನೆಂದೂ ಕರೆಯಹತ್ತಿದರು. ಇವನು ಗೋರಕ್ಷನಾಥನನ್ನು ಗೆದ್ದನು. ಕೊಲ್ಹಾಪುರದ ನೆರೆಯಲ್ಲಿರುವ ಸಿದ್ಧಗಿರಿಯಲ್ಲಿ ನಿವಾಸಿಸಿದನು. ಇವನು ಯಾವಾಗಲೂ ಅಡವಿಯಲ್ಲಿಯೇ ವಾಸಮಾಡುವದನ್ನು ನೋಡಿ, ಜನರು ಇವನನ್ನು ಕಾಡಸಿದ್ಧೇಶ್ವರನೆಂದೂ ಕರೆದಂತೆ ತೋರುತ್ತದೆ.

ಅರ್ಪಣ— ಒಮ್ಮೆಲೆ ಒಂದಕ್ಕೊಂದು ಹೊಂದದಂಥ ಐತಿಹಾಸಿಕ ಅವಶೇಷಗಳನ್ನು ಈ ಲೇಖ ಕರಂಡಕದಲ್ಲಿ ತುಂಬಿ ವಾಚಕರ ಮುಂದೆ ಇಟ್ಟಿರುವೆನು. ಪ್ರಾಜ್ಞರಾದ ಸಂಶೋಧಕರು ಕುಶಲತನದಿಂದ ಜೋಡಿಸಿ, ಇವರ ಚರಿತೆಗಳ ನಿಶ್ಚಿತ ಸ್ವರೂಪವನ್ನು ಗೊತ್ತುಪಡಿಸಬೇಕೆಂದು ಹಾರೈಸಿ ಇದನ್ನು ಸಮಾಪ್ತಗೊಳಿಸುತ್ತೇನೆ.

# ಮಹಾತ್ಮಾ ಬಸವಣ್ಣನವರು

( ಲೇಖಕ:— ಸದಾಶಿವ. ವಿ. ಬಡಿಗಣ್ಣವರ, ಗದಗ. )

oo(⌓)●(⌓)oo

ಇಂದಿನ ಇಪ್ಪತ್ತನೇ ಶತಮಾನಕ್ಕೂ ಅಂದಿನ ಹನ್ನೆರಡನೇ ಶತಮಾನಕ್ಕೂ ಅಂತರವಿಲ್ಲವೆಂದು ಸೂಕ್ಷ್ಮವಾಗಿ ವಿಚಾರಿಸಿದರೆ ಅರಿಯುವಿ ಇರವು. ಇಂದಿನದು ಧರ್ಮ ಹಾಗು ರಾಜಕೀಯವು ಅಧೋಗತಿಗಿಳಿದಿವೆ. ನಮಗೆ ಇಂದು ಧರ್ಮಕ್ಕಿಂತಲೂ ಹೆಚ್ಚಾಗಿ ರಾಜಕೀಯವು ಅಧೋಗತಿಗಿಳಿದಿದೆ ಎಂದು ಸರ್ವರಿಗೂ ತಿಳಿದ ಮಾತಾಗಿದೆ. ಭಾರತದಲ್ಲಿ ಈಗ ಪ್ರಾಂತ ನಿರ್ಮಾಣದ ಹಾವಳಿ ಎದ್ದಿದೆ. ಈ ಹಾವಳಿಯು ಸನ್ಮಾರ್ಗವಾಗಿರುವದು. ಆದರೆ ಸರಕಾರದವರು ಅಷ್ಟು ವಿಶೇಷ ಲಕ್ಷಗೊಟ್ಟಿಲ್ಲ. ಅಂತೆಯೇ ಪ್ರಾಂತ ನಿರ್ಮಾಣ ಮಾಡಬಯಸುವ ಮುಖಂಡರ ಇಂದಿನ ಅಸ್ತ್ರಗಳಾದ ಚಳವಳಿ, ಉಪವಾಸ ಇವು ಅಟಂ ಬಾಂಬಿನಕ್ಕಿಂತಲೂ ಹೆಚ್ಚಿನ ಆಯುಧಗಳಾಗಿ ನಿಂತಿವೆ. ಈಗ ಪ್ರಾಂತ ನಿರ್ಮಾಣವಾಗುವ ಸುಸಮಯ ಒದಗಿ ಬಂದಿದೆ. ಇದರಂತೆ ಹನ್ನೆರಡನೆ ಶತಮಾನದಲ್ಲಿಯೂ ರಾಜಕೀಯ ಹಾಗು ಧರ್ಮದ ಅಧೋಗತಿಗಿಳಿದಿತ್ತು. ಆದರೆ ರಾಜಕೀಯಕ್ಕಿಂತಲೂ ಅಂದು ಧರ್ಮದ ಅಧೋಗತಿ ಹೆಚ್ಚು ಇಳಿದಿದ್ದರಿಂದ ಅದನ್ನು ಅಭಿವೃದ್ಧಿಗೊಳಿಸುವದಕ್ಕೋಸ್ಕರ ಹಾಗು ಜನಾಂಗವನ್ನು ಶಾಂತಿ ಸುಖಮಯದಿಂದ ಇರುವದಕ್ಕಾಗಿಯೇ ಕಾರ್ಯವನ್ನು ಮಾಡಿಸಲೋಸುಗ ಆ ದಿವ್ಯ ಶಕ್ತಿಯಾದಂಥ ಪರಮಾತ್ಮನು ತನ್ನ ಸ್ವರೂಪದಿಂದಲೇ ಮಾನವನಾಗಿ ಹುಟ್ಟಿಬಂದಿರುವ ದ್ವಿತೀಯ ಶಂಭುವೆನಿಸಿದ ಮಹಾತ್ಮಾ ಬಸವಣ್ಣನವರು ಹನ್ನೆರಡನೇ ಶತಮಾನದಲ್ಲಿ ಅವತರಿಸಿದರು.

ಯಾವ ಜನಾಂಗದ ಸಲುವಾಗಿ ಪರಿವೆಯಿಲ್ಲದೆ, ಕಾರ್ಯವನ್ನು ಮಾಡುತ್ತ ಜನರ ಉದ್ಧಾರದ ಸಲುವಾಗಿ ಬೀರಿದ ತತ್ವಗಳಾದ ಸತ್ಯ, ಅಹಿಂಸೆ, ಶಾಂತಿ, ಪ್ರೇಮ, ಸಹಕಾರ, ಸದ್ಭಾವ ಮೊದಲಾದವು ಈಗಲೂ ಅಚ್ಚಳಿಯದೆ ಉಳಿದಿವೆ. ಇವು ಸದಾ ದೀಪಸ್ತಂಭಗಳಂತೆ ಕಂಗೊಳಿಸುತ್ತವೆ. ಈ ತತ್ವಗಳು ಯಾವದೇ ರೀತಿಯಿಂದ ಅಧೋಗತಿಗಿಳಿದಾಗ ಅಭಿವೃದ್ಧಿಗೊಳಿಸಲು ಸಾಧನವಾಗಿರುವವು.

ಬಸವಣ್ಣನವರಿಗೆ ವೀರಶೈವ ಮತೋದ್ಧಾರವನ್ನು ಮಾಡಿದ ಶ್ರೇಯಸ್ಸು ಅವರಿಗೆ ಸಲ್ಲದೆ ಇರಲಾರದು. ಹಾಗು ವಿಶ್ವಧರ್ಮವಾಗಲು ಅಭ್ಯಂತರ ವಿಲ್ಲವೆಂಬುದನ್ನರಿತು ವೀರಶೈವ ಧರ್ಮವನ್ನು ಮತ್ತಿಷ್ಟು ದೃಢೀಕರಿಸಬೇಕೆಂದು ತಮ್ಮ ಹೊಸದಾದ ಶೈಲಿಯಲ್ಲಿ "ವಚನ ಸಾಹಿತ್ಯ" ಪ್ರಾರಂಭಿಸಿದರು. ಆ ವಚನ ಸಾಹಿತ್ಯವು ಇಂದು ಗೌರೀ ಶಿಖರಕ್ಕಿಂತಲೂ ಉನ್ನತ ಮಟ್ಟಕ್ಕೇರಿರುತ್ತದೆ. ಅದಕ್ಕೆ ಸದಾ ಅಗ್ರಸ್ಥಾನವೇ ಮೀಸಲಾಗಿರುವದು. ಅದು ಅಂಥಾ ಮಹತ್ವವನ್ನು ಪಡೆದದ್ದರಿಂದಲೇ ಈ ಗೌರವವು ಸಿಕ್ಕಿದೆ.

ಧರ್ಮದ ತತ್ವವು ನಿಜವಾಗಿಯೂ ಅರಿಯಬೇಕಾದರೆ ವಾಗ್ವಾದದಿಂದಲೇ ಎಂದು ಅರಿತು "ಅನುಭವಮಂಟಪವೆಂದು" ಸಭೆಯ ಮಂದಿರವನ್ನು ಮಾಡಿದರು. ಆ ಸಭೆಯಲ್ಲಿ ಅಲ್ಲಮಪ್ರಭು, ಬಸವೇಶ್ವರ, ಚನ್ನಬಸವೇಶ್ವರ, ಮಡಿವಾಳ ಮಾಚಿದೇವ, ಅಕ್ಕಮಹಾದೇವಿ, ಮೊದಲಾದವರು ಪ್ರಮುಖರಾಗಿ ರತ್ನದಂತೆ ವಿರಾಜಮಾನವಾಗಿ ಕಂಗೊಳಿಸುತ್ತಿದ್ದರು. ಅಲ್ಲದೆ ಅಸಂಖ್ಯಾತ ಶಿವಶರಣ ಶಿವಶರಣೆಯರು ಕೂಡಿ ತಮಗೆ ಬಂದಂಥ ಸಂಶಯಗಳನ್ನು ನಿವಾರಣೆ ಮಾಡಿಕೊಳ್ಳುತ್ತಿದ್ದರು. ಈ ರೀತಿಯಿಂದಲೂ ತರ್ಕ ವಿತರ್ಕ ಮಾಡಿ, ಧರ್ಮ ಗ್ರಂಥಗಳನ್ನು ಮುಂದಿನ ಜನಾಂಗಕ್ಕೆ ಸನ್ಮಾರ್ಗವನ್ನು ತೋರಿಸುವದಕ್ಕಾಗಿ ಬರೆದಿಟ್ಟು ಹೋದುದು ಇಂದಿನವರ ಪುಣ್ಯವೇ ಸರಿ. ಇಂದಿನವರು ಅಂದಿನವರನ್ನು ಸ್ಮರಿಸದೆ ಇರಲಾರರು.

ಬಸವಣ್ಣನವರ ೮೩೩ನೇ ಜಯಂತಿಯನ್ನು ಆಚರಿಸುತ್ತಲಿದ್ದೇವೆ. ಅವರ ತತ್ವಗಳನ್ನು ಇಂದಿನವರಾದ ನಾವು ಕೃತಿಯಲ್ಲಿ ತಂದರೆ ಮಾತ್ರ ಅವರ ಜಯಂತಿಯನ್ನು ನಿಜವಾದ ರೀತಿಯಲ್ಲಿ ಆಚರಿಸಿದಂತಾಗುವದು. ಆ ಮಹಾ ಮಹಿಮರಾದ ಬಸವಣ್ಣನವರು ಪುನಃ ಅವತರಿಸಿ, ನಾವು ಅಧೋಗತಿಗಿಳಿದದ್ದನ್ನು ಅಭಿವೃದ್ಧಿಗೊಳಿಸಲು ದಯಮಾಡಿಸಲೆಂದು ವಿಶ್ವದ ಜನಾಂಗವು ಪ್ರಾರ್ಥಿಸುತ್ತದೆ.

# ಧಾರ್ಮಿಕ ಭಾವನೆ

( ಲೇಖಕ— ಸದಾಶಿವ. ಎ. ಬಡಿಗಂಣನವರ ಗದಗ. )

[≍≍●≍≍]

ಭಾರತದವರು ವಿಶ್ವದಲ್ಲಿಯೇ ಹೆಚ್ಚಾಗಿ ಕೇವಲ ಧಾರ್ಮಿಕ ಸ್ವಭಾವದವರು. ಅವರು ಅದರಲ್ಲಿ ವಿಶ್ವಾಸವುಳ್ಳವರು ಎಂದು ಪಾಶ್ಚಿಮಾತ್ಯರು ಮೇಲಿಂದ ಮೇಲೆ ಹೇಳುತ್ತಾರಲ್ಲದೆ ಉದ್ಗಾರವನ್ನು ಎತ್ತುತ್ತಾರೆ. ಧಾರ್ಮಿಕ ಪ್ರವೃತ್ತಿವುಳ್ಳವರಾಗಿದ್ದರಿಂದಲೇ ಭಾರತದಲ್ಲಿ ಎಲ್ಲಿ ನೋಡಿದಲ್ಲಿ ದೇವಸ್ಥಾನಗಳು, ಗುಡಿಗುಂಡಾರಗಳು ಮಠಮಾನ್ಯಗಳು ಕಂಗೊಳಿಸುತ್ತವೆ. ಅಲ್ಲದೆ ನದಿಗಳ ದಂಡೆಯ ಮೇಲೆ ಪುಣ್ಯಕ್ಷೇತ್ರಗಳು, ಅಲ್ಲಿ ಪ್ರಸಿದ್ಧ ದೇವಸ್ಥಾನಗಳುಂಟು. ಆಯಾ, ದೇವಸ್ಥಾನಗಳಲ್ಲಿ ನಾನಾತರದ ಸುವಾದಗಳಿಂದ ಶೋಭಿಸುತ್ತಿರುತ್ತದಲ್ಲದೆ, ಜನರನ್ನೂ ಆಕರ್ಷಿಸಿ, ಮಾನವನು ಮಾಡಿದಂಥ ತಪ್ಪುಕೃತಿಗಳನ್ನೂ ಆ ಮೂರ್ತಿ ಸ್ವರೂಪನಾದ ಪರಮಾತ್ಮನು ಕ್ಷಮಿಸುವನಲ್ಲದೆ, ಸುಮಾರ್ಗವನ್ನು ತೋರಿಸುವನು.

ಪ್ರತಿಯೊಂದು ಮನೆತನಕ್ಕೆ ಯಜಮಾನವುಂಟು. ಆ ಯಜಮಾನನು ತನ್ನ ಮನೆತನದ ಸರ್ವರೀತಿಯಿಂದಲೂ ಆಗು ಹೋಗುಗಳನ್ನು ಹೇಗೆ ನೋಡಿಕೊಂಡು ಹೋಗುತ್ತಾನೋ? ಹಾಗೆ ಇಡೀ ವಿಶ್ವದಲ್ಲಿಯ ಜೀವರಾಶಿಗೆ ಓರ್ವಯಜಮಾನ ಇರಬೇಕಲ್ಲವೇ? ಆ ಯಜಮಾನನೇ ಆ ದಿವ್ಯ ಶಕ್ತಿಯಾದಂಥ ಪರಮಾತ್ಮನು. ಅವನು ಎಲ್ಲ ಜೀವರಾಶಿಗಳ ಆಗುಹೋಗುಗಳ ಸರ್ವ ವ್ಯವಹಾರಗಳನ್ನು ಅತಿ ಸೂಕ್ಷ್ಮದೃಷ್ಟಿಯಿಂದ, ಪರಿಶೀಲಿಸುತ್ತಾನೆ. ಈ ಭಾವನೆಯನ್ನು ಭಾರತದವರು ನೆರೆನಂಬಿದ್ದಾರೆ. ಹಾಗೂ ಅದರಂತೆ ಯಥಾಪ್ರಕಾರವಾಗಿ ಪರಂಪರೆಯಿಂದ, ಆಚರಿಸುತ್ತಾ ಬಂದಿದ್ದಾರೆ.

ಆ ಪರಮಾತ್ಮನನ್ನು ಗುರ್ತಿಗಾಗಿ ಒಂದು ಆಕಾರ (ಮೂರ್ತಿ) ವನ್ನು ನಿರ್ಮಿಸಿ ಅದಕ್ಕೊಂದು ದೇವಸ್ಥಾನವನ್ನು ಕಟ್ಟಿಸಿ ಜನರು ಅತ್ಯಂತ ಪೂಜ್ಯಭಾವನೆಯಿಂದ ತಮ್ಮ ಆಗುಹೋಗುಗಳ ಪ್ರತಿನಿತ್ಯದ ವ್ಯವಹಾರವನ್ನು ಪ್ರತಿನಿತ್ಯ ಹೇಳುವರು. ಸಂಕಟ ಬಂದಾಗ್ಗೆ ಮಾತ್ರವಂತೂ ಆ ಮೂರ್ತಿಯನ್ನು ಬಿಟ್ಟು ಅಗಲಲಾರರು. ಆ ಮೂರ್ತಿ ಸ್ವರೂಪನಾದ

ಪರಮಾತ್ಮನು ಅವರವರ ಭಕ್ತಿಯ ಮೇರೆಗೆ ಸುಖವನ್ನು ಕೊಡುತ್ತಾನೆ. ಇದು ಎಷ್ಟೋ ಭಕ್ತಿವಂತರಿಗೆ ಕಂಡಮಾತಾಗಿರುವದು. ಇದೇ ಆತ್ಮೋನ್ನತಿಗೆ ಪ್ರಥಮ ಮೆಟ್ಟಲಾಗಿರುವದು. ಆದುದರಿಂದ ಧಾರ್ಮಿಕ ಭಾವನೆಯಿಂದಲೇ, ಆಧ್ಯಾತ್ಮಿಕ ಭಾವನೆ, ಅಧ್ಯಾತ್ಮಿಕ ಭಾವನೆಯಿಂದಲೇ ಶಾಂತಿ, ಚಿರಶಾಂತಿ ದೊರೆಯುವದು ಶಾಂತಿಯು ಧಾರ್ಮಿಕ ಭಾವನೆಯಲ್ಲಿ ಅಡಗಿಕೊಂಡಿರುವದು. ಧಾರ್ಮಿಕ ಭಾವನೆಯು ಮಸಕಾಗಿರುವದರಿಂದ ಶಾಂತಿಯು ಕೂಡ ನಮಗೆ ಮಸಕಾಗಿರುವದು. ಇದು ಕನ್ನಡಿಯ ಮೇಲಿನ ಧೂಳದಂತಿದೆ. ಕನ್ನಡಿಯ ಮೇಲಿನ ಧೂಳವನ್ನು ಹೋಗಲಾಡಿಸಿದರೆ, ಅದು ಹೇಗೆ ಪ್ರಕಾಶಮಾನವಾಗಿ ಕಂಗೊಳಿಸುವದೋ ? ಹಾಗೆಯೇ ಧಾರ್ಮಿಕ ಭಾವನೆಯ ಮೇಲಿರತಕ್ಕ ಮೂಢ ಭಾವನೆಯ ಧೂಳವನ್ನು ಹೋಗಲಾಡಿಸಿದರೆ ಮಾತ್ರ ಶಾಂತಿಯ ಮಾರ್ಗವು ದೊರೆಯುವದು. ಕಾರಣ, ವಿಶ್ವದ ಪ್ರತಿಯೊಂದು ಸ್ಥಳದಲ್ಲಿ ಶಾಂತಿಯ ವಾತಾವರಣವು ಮೂಡಬೇಕಾದರೆ ಧಾರ್ಮಿಕ ಭಾವನೆ ಬೆಳೆಯಬೇಕು. ಧಾರ್ಮಿಕ ಭಾವನೆಗೆ ಆದರ್ಶಶೀಲರಾದ ಭಾರತದವರನ್ನು ಪಾಶ್ಚಿಮಾತ್ಯರು, ಪೌರ್ವಾತ್ಯರೂ, ಸರ್ವರೂ, ಮೊದಲು ಧಾರ್ಮಿಕ ಭಾವನೆಯನ್ನು ನಂಬಿ, ವಿಶ್ವದ ಜನಾಂಗವು ತಮ್ಮ ತಮ್ಮ ಧರ್ಮದ ಪದ್ಧತಿ ಪ್ರಕಾರ ನಡೆದರೆ ಮಾತ್ರ ಇಡೀ ಜನಾಂಗವು ಶಾಂತಿ ಮಹಾಸಾಗರದಲ್ಲಿ ನಿಂತು ಹರುಷೋದ್ಗಾರಗಳಿಂದ ಕುಣಿದಾಡುವದಲ್ಲದೆ, ಸುಖದಿಂದ ಇರುವದು. ಇದೆಲ್ಲಕ್ಕೂ ಮೂಲ ಕಾರಣವಾದ ಧಾರ್ಮಿಕ ಭಾವನೆಯು ಪ್ರತಿಯೊಬ್ಬ ಮಾನವನಲ್ಲಿ ದಿನ ದಿನಕ್ಕೂ ಅಭಿವೃದ್ಧಿಯನ್ನು ಹೊಂದಲೆಂದು ಹಾರೈಸುತ್ತೇನೆ.

# ಶರಣರ ವಾಣಿ

ಲೇಖಕರು— ಸಂಗೊಳ್ಳಿ ಪಿ. ಜಿ. ಅಂಗಡಿ
ಎಫ್. ವಾಯ್. ಆರ್ಟ್ಸ(ಅ) ಲಿಂಗರಾಜ ಕಾಲೇಜ ಬೆಳಗಾವಿ.

" ವಚನದಲ್ಲಿ ನಾಮಾಮೃತವ ತುಂಬಿ, ನಯನದಲ್ಲಿ ನಿಮ್ಮ ಮೂರುತಿ ತುಂಬಿ, ಮನದಲ್ಲಿ ನಿಮ್ಮ ನೆನಹು ತುಂಬಿ, ಕಿವಿಯಲ್ಲಿ ಕೀರ್ತಿ ತುಂಬಿ, ಕೂಡಲಸಂಗಮದೇವ ನಿಮ್ಮ ಚರಣ ಕಮಲದೊಳು ಗಾಳವ ತುಂಬಿ."—

ಎಂತಹ ಸರಸ ವಚನವಿದು! ಪರಮಾತ್ಮನ ಬಗ್ಗೆ ಭಕ್ತನಿಗಿರುವ ಅನುರಾಗವನ್ನು ಹೇಗೆ ವ್ಯಕ್ತಪಡಿಸುತ್ತದೆ? ಪದ್ಯದಂತೆ ಅನುಪ್ರಾಸದಿಂದ ಹೇಗೆ ಇಂಪಾಗಿದೆ!! ತನ್ನದೊಂದು ವಿಶಿಷ್ಟ ಸಂಸ್ಕೃತಿಯಿಂದ ಬಾಳ್ವುದೂ ಕನ್ನಡವು ಆಗಿದೆ. ಕಾಲಕಾಲಕ್ಕೆ ಕನ್ನಡ ಸಾಹಿತ್ಯದ ಬೆಳವಣಿಗೆಗಾಗಿ ಜೈನ, ಲಿಂಗವಂತ, ಬ್ರಾಹ್ಮಣ ಕವಿಗಳು ತಮ್ಮ ಸೇವೆಯನ್ನರ್ಪಿಸಿದ್ದಾರೆ. ಕನ್ನಡದಲ್ಲಿ ಗದ್ಯಸಾಹಿತ್ಯದ ಅಭಾವವಿದೆ. ಈ ಕೊರತೆಯನ್ನು ಶಿವಶರಣರ ವಚನ ಸಾಹಿತ್ಯವು ಪೂರೈಸಿದೆ. ಶಿವಶರಣರ ವಚನಗಳು ಹೇರಳವಾಗಿವೆ, ಅಪಾರವಾಗಿವೆ, ಅಮೂಲ್ಯವಾಗಿವೆ. ಕನ್ನಡ ಗದ್ಯಸಾಹಿತ್ಯವೆಂದರೆ ಶರಣರ ವಚನ ಸಾಹಿತ್ಯವೆಂದೇ ಹೇಳುವಂತಿದೆ. ಅಧ್ಯಾತ್ಮ, ಧರ್ಮ, ನೀತಿ, ಸಮಾಜ ಈ ವಿಷಯಗಳು ಒಡಗೊಂಡಿವೆ. ರಾಜಕೀಯ ಆರ್ಥಿಕ ವಿಷಯಗಳ ದ್ಯೋತಕವಾಗಿಯೂ ಇದ್ದುಕೊಂಡು ವಚನಸಾಹಿತ್ಯವು ಕನ್ನಡಿಗರ ಹೆಮ್ಮೆಗೆ ಕಾರಣವಾಗಿವೆ. ಅನ್ಯಭಾಷಾ ಸಾಹಿತಿಗಳೂ ಸಹ ವಚನ ವಾಙ್ಮಯ ಸಂದೇಶದಿಂದ ತೃಪ್ತರಾಗಲು, ಆದರ ಬುದ್ಧಿಯಿಂದ ವಚನಗಳ ಅಭ್ಯಾಸದ ಕಡೆಗೆ ಗಮನವನ್ನಿತ್ತಿದ್ದಾರೆ.

" ಪರಧನ ಒಲ್ಲದಿಪ್ಪುದೆ ವ್ರತ, ಪರಸ್ತ್ರೀಯರ ಕೂಡದಿಪ್ಪುದೆ ಶೀಲ, ಸರ್ವ ಜೀವವ ಕೊಲ್ಲದಿಪ್ಪುದೆ ನೇಮ, ತಥ್ಯ-ಮಿಥ್ಯವನತಿಗಳದಿಪ್ಪುದೇ ನಿತ್ಯನೇಮ, ಇದು ಈಶ್ಯಾನ ಮಲ್ಲಿಕಾರ್ಜುನ ಲಿಂಗಕ್ಕೆ ಸಂದೇಹವಿಲ್ಲದ ವ್ರತ."

ಮನುಷ್ಯನು ನೀತಿಪರನಾಗಲಿಕ್ಕೆ ಅನುಕೂಲವಾದ, ಸುಲಭವಾದ, ಸಾಧ್ಯವಾದ ಕಟ್ಟಳೆಗಳನ್ನು ಈ ವಚನವು ಹೇಗೆ ಅಮೃತದ ಬೋಧೆಯನ್ನು ಪಸಮಾಡಬಲ್ಲದು !!

ವಚನಕಾರರ ಸಾಮಾಜಿಕ ವಿಚಾರಗಳನ್ನು ಅವಲೋಕಿಸುವಾಗ ಬರಿಯ ಕುಲಶೀಲ, ಜನ್ಮ ಅಥವಾ ವಯ ಇವುಗಳ ವರ್ಚಸ್ಸನ್ನು ಕಿತ್ತಿ ಹಾಕಿ, ಗುಣ ಕರ್ಮಗಳ ಮಹತ್ವವನ್ನು ಸಮಾಜದಲ್ಲಿ ಪ್ರಸ್ಥಾಪಿಸಲಿಕ್ಕೆ ಅವರು ಹೇಗೆ ಹೆಣಗಿದರು? ನಾನು ಶ್ರೇಷ್ಠ, ನೀನು ಶ್ರೇಷ್ಠ ಎನ್ನುವ ವರು ಜಗತ್ತಿನಲ್ಲಿ ದೊಡ್ಡವರೆಂದು ಅನ್ನಿಸಿಕೊಳ್ಳಲಾರರು. ಅವರು ನಿಜ ವಾದ ಹಿರಿಯರಲ್ಲ. ಬಸವಣ್ಣನವರು ಒಂದು ವಚನದಲ್ಲಿ ಹೀಗೆ ಹೇಳಿ ದ್ದಾರೆ — "ಹಿರಿ-ಕಿರಿದೆಂಬ ಶಬ್ದವಡಗಿ ಸಮದೃಷ್ಟಿಯು ನೆಲೆಗೊಂಡ ಲ್ಲಿಯೇ ನಿಜ ಹಿರಿತನವು ಇರಬಲ್ಲದು" ಮೇಲಿನ ದೇಹವು ಹೆಣ್ಣಿರಲಿ, ಗಂಡಿರಲಿ, ಬ್ರಾಹ್ಮಣನದಿರಲಿ ಹೊಲೆಯನದಿರಲಿ ಅವರ ಪ್ರಾಣ-ಮನ ಆತ್ಮಗಳಲ್ಲಿ ಹೆಣ್ಣು, ಗಂಡು, ಹಾರುವ, ಹೊಲೆಯ ಎಂಬ ಭೇದಗಳಿಲ್ಲ, ಆತ್ಮವೂ ಎಲ್ಲಿ ಹೋದರೂ ಒಂದೇ. ಆತ್ಮಂಗೆ ಆವಕುಲವುಂಟು. ಬರಿಯ ಜಾತಿ ಲಿಂಗವಂತರ ಹೊಟ್ಟೆಯಲ್ಲಿ ಹುಟ್ಟಿದರೆ ಅಥವಾ ಅದೇಕೆ, ಪ್ರತ್ಯಕ್ಷ ಬ್ರಹ್ಮಜ್ಞಾನಿಯ ಹೊಟ್ಟೆಯಲ್ಲಿ ಹುಟ್ಟಿದರೂ ಮನುಷ್ಯನು ನಿಜವಾದ ಲಿಂಗ ವಂತನಾಗುವನು. ಅದೇ ಪ್ರಕಾರ, ವೇದಗಳನ್ನೋದುವದರಿಂದ ಯಜ್ಞ ಯಾಗಾದಿ ಕರ್ಮಗಳನ್ನು ಮಾಡುವದರಿಂದ ಯಾರಾದರೂ ಬ್ರಾಹ್ಮಣರಾ ಗಬಲ್ಲರೇ? ಬ್ರಹ್ಮವರಿದವನು ಬ್ರಾಹ್ಮಣನು. ಸರ್ವಜೀವಹಿತಕ್ಕೋಸಗಾಗ ದವನು ಸಮ್ಮಕಾರನು. ಹೀಗೆ ಇವೆರಡೇ ಉಚ್ಚ ನೀಚ ಭೇದಗಳು.

ಇದಲ್ಲದೇ—

"ಕೊಲ್ಲುವವನೇ ಮಾದಿಗನು, ಹೊಲಸು ತಿಂಬುವವನೇ ಹೊಲೆಯು, ಕುಲವೇನೋ? ಆವಂದಿರ ಕುಲವೇನೋ? ಸಕಲ ಜೀವಿಗೆ ಲೇಸನೆ ಬಯಸುವವರು ನಮ್ಮ ಕೂಡಲಸಂಗನ ಶರಣರೆಲ್ಲ ಕುಲಜರು."

ಗುಣ ಕರ್ಮಗಳಿಗೇನೇ ಬೆಲೆಯುಂಟೆಂದು 'ಮಾನವ ಪ್ರಾಣಿಯು ಹೃದಯವಲ್ಲಿ ಒಂದು ನಿ-"ದರ್ಶ"-ನ (*Vision*) ದ ದಿವ್ಯ ಭಾವನೆ ಯನ್ನು ಚಿತ್ರಿಸಿದೆ. ಆಚಾರವೇ ಕುಲ. ಅನಾಚಾರವೇ ಹೊಲೆಯ, ಕೊಲ್ಲುವವನೇ ಮಾದಿಗನು, ಹೊಲಸು ತಿಂಬುವವನೇ ಹೊಲೆಯನು ಸಕಲ ಜೀವಾತ್ಮರಿಗೆ ಲೇಸನೆ ಬಯಸಿ ಲೇಸನೆ ಮಾಡುವವನು ಕುಲ ಜನು. ಕೆಟ್ಟ ಕೆಲಸಗಳನ್ನು ಮಾಡುವವನು ಹೊಲೆಯನೆನಿಸುವನೆಂದು ಮಾದರಿಗಾಗಿ ಹಲವು ದುರಾಚಾರಗಳನ್ನು ವಚನಕಾರರು ಕೊಟ್ಟಿದ್ದಾರೆ.

ಗುರುಹಿರಿಯರಿಗೆ ಬೈದವನೆ ಹೊಲೆಯ; ತಂದೆಗೆ ಮಾರುತ್ತರವನಿತ್ತವನೆ ಹೊಲೆಯ, ಹತ್ತು ಅಡಿ ಒಂದೂ ನಿಜವಿಲ್ಲದವನೆ ಹೊಲೆಯ. ಧನಕ್ಕಾಗಿ ಜೀವ ಕೊಲ್ಲುವವನೆ ಹೊಲೆಯ; ಚಿತ್ತದಲ್ಲಿ ಪರಸತಿಯ ಬಯಸುವವನೆ ಹೊಲೆಯ; ಪರನಿಂದೆಗೆಳಸುವವನೆ ಹೊಲೆಯ. ಇಂಥ ಹೊಲೆಯರು ಊರತುಂಬ ಇರುವರು. ಇವರನ್ನು ಹುಡುಕಲು ಹೊಲಗೇರಿಗೆ ಹೋಗುವ ಕಾರಣವಿಲ್ಲ. ಶೀಲ ಶೀಲವೆಂದು ಗರ್ವದಿಂದ ಹೇಳಬೇಡಿರಿ. ಅದರಿಂದ ನಾವು ಹೆಚ್ಚು ನೀವು ಹೆಚ್ಚು ಎಂದು ಹೇಳಿಕೊಳ್ಳಬೇಡಿರಿ. ಯಾಕಂದರೆ ನಿಜ ಶೀಲವು ಈ ಬಾಹ್ಯಾಚಾರಗಳಲ್ಲಿಲ್ಲ. ಅದು ನೀತಿಶುದ್ಧ ಆಚಾರದಲ್ಲಿದೆ. ಕೆರೆ ಬಾವಿ ಹಳ್ಳಗಳ ನೀರು ಬಿಟ್ಟರೆ, ಕೊಡದ ಬಾಯಿಗೆ ಅರಿವೆ ಹಾಕಿ ನೀರು ಸೋಸಿದರೆ, ಅದು ಶೀಲವೇ? ಇದೆಲ್ಲ ಬಾಹ್ಯಾಡಂಬರವು. ಸಂಸಾರ ವಿಷಯ ರಸವನ್ನು ಬಿಟ್ಟು, ಅರಿಷಡ್ವರ್ಗಂಗಳನ್ನು ಮೆಟ್ಟಿ, ಅಂತಃಶುದ್ಧಿಯನ್ನು ಮಾಡಿದರಯೇ ಅದು ನಿಜವಾದ ಶೀಲವು.

"ಮಾತಿನ ಮಾತಿಗೆ ನಿನ್ನ ಕೊಂದಿಹರೆಂದು
ಎಲೆಹೋತೇ ಅಳು ಕಂಡೆಯಾ?
ವೇದವನೋದಿದವರ ಮುಂದೆ ಅಳು ಕಂಡೆಯಾ ಹೋತೆ?
ಶಾಸ್ತ್ರವ ಕೇಳಿದವರ ಮುಂದೆ ಅಳು ಕಂಡೆಯಾ ಹೋತೆ?
ನೀನತ್ತುದಕ್ಕೆ ತಕ್ಕುದು ಮಾಡುವ ಕೂಡಲಸಂಗಮ ದೇವ"

ಮಾನವರು ಅಹಿಂಸಾಮಯರಾಗಿರಬೇಕೆಂದು ಈ ವಚನವು ಮಾರ್ಮಿಕವಾಗಿ ತಿಳಿಸಿದೆ.

ಭಕ್ತರು ತಮ್ಮ ತಮ್ಮೊಳಗೆ ಒಬ್ಬರನ್ನೊಬ್ಬರು ದೂರ ನೋಡಿದರೆ ಅಥವಾ ಅನ್ನೋದಕ, ಲಗ್ನ, ವ್ಯವಹಾರಗಳನ್ನು ಮಾಡದಿದ್ದರೆ ಅವರಲ್ಲಿ ಪರಸ್ಪರ ಸ್ನೇಹವೂ, ಹಿತಸಂಬಂಧಾದಿಗಳೂ ಬೆಳೆಯುವದು ಅಸಾಧ್ಯವು. ಆದರೆ, ಎಡೆಗೆ ಬಾರದಾತ ಅಡಿಗೆಗೆ ದೂರ, ಅಡಿಗೆಗೆ ದೂರದಾತ ಮನೆಗೆ ದೂರ, ಮನೆಗೆ ದೂರದಾತ ಮನಕ್ಕೆ ದೂರ. ಹೀಗೆ ಅವರು ಒಬ್ಬರಿಗೊಬ್ಬರಿಗೆ ದೂರಾಗುತ್ತಲೇ ಹೋಗುವರು. ಆದುದರಿಂದ ಶರಣರಲ್ಲಿ ಕುಲವನ್ನರಸದೆ ಆಚಾರವನ್ನೇ ಅರಸಬೇಕು. ದೀಕ್ಷೆ ಪಡೆದು ಶಿವಾಚಾರ ಸಂಪನ್ನರಾದವರೆಲ್ಲರ ಕುಲವು ಶಿವಕುಲವೆಂಬುದೊಂದೇ. ಆ ಬಳಿಕ ತನ್ನ ಕುಲಶೀಲದ ಅಭಿಮಾನವನ್ನು ತಾಳಕೂಡದು. ಒಮ್ಮೆ ಭವಿತನ ಬಿಟ್ಟು ಭಕ್ತನಾದ

ಮೇಲೆ ಸಿರಿಯಾಳನು ಸೆಟ್ಟಿಯಲ್ಲ; ಮಾಚಯ್ಯನು ಮಡಿವಾಳನಲ್ಲ; ಕಕ್ಕಯ್ಯನು ಡೋಹರನಲ್ಲ; ಚನ್ನಯ್ಯನು ಮಾದಿಗನಲ್ಲ. ಯಾಕಂದರೆ ಅವರೆಲ್ಲರೂ ಭಕ್ತ ಬಂಧುಗಳಾಗಿರುವರು. ವಚನಕಾರರು ಆ ರೀತಿ ಜಾತಿ ಕುಲಗಳನ್ನು ಅಲ್ಲಗಳೆದು ಪರಸ್ಪರ ಅನ್ನೋದಕ, ಲಗ್ನ ವ್ಯವಹಾರಾದಿಗಳನ್ನು ಮಾಡಿ, ತಾವು ನುಡಿದಂತೆ ನಡೆದು ತೋರಿಸಿದರು. ಈ ವಿಷಯವನ್ನು ಕುರಿತು ಅವರು ಪುರಾತನ ಋಷಿ, ಮುನಿಗಳ ಉದಾಹರಣೆಯನ್ನಾದರೂ ಕೊಟ್ಟು, ಜಾತಿ ಕುಲಗಳಿಗಿಂತ "ಗುಣ" ಕರ್ಮಗಳೇ ಶ್ರೇಷ್ಠ ಎಂದು ಸಿದ್ಧ ಮಾಡಿದ್ದಾರೆ.

ಒಟ್ಟಿನ ಮೇಲೆ ಲಲಿತವಾಗಿ, ಸುಲಭವಾಗಿ, ಭಾವಗರ್ಭಿತವಾಗಿ, ಅನುಭವಪೂರಿತವಾಗಿ ಇರುವ ವಚನಗಳು ಬಿಚ್ಚಿದೆದೆಯ "ಗುರು" ವಿನಂತೆ ಮಾನವ ಕೋಟಿಗೆ ತಾತ್ವಿಕ ಸಂದೇಶಗಳನ್ನು ಚಿತ್ತಾಕರ್ಷಕವಾಗುವಂತೆ ಬೋಧಿಸುತ್ತವೆ. ವಚನಗಳು ಶಬ್ದಾಡಂಬರದಿಂದ ಕೂಡಿಲ್ಲ. ವಚನಗಳ ಭಾಷಾ ಶೈಲಿಯು ಪಂಡಿತ ಪಾಮರರಿಗೆ ಅರ್ಥವಾಗುವಹಾಗೆ ಇದೆ. ಜ್ಞಾನಾಮೃತವನ್ನುಣಿಸಲು ವಚನಗಳು " ಕನ್ನಡ " ಕ್ಕೆ ರನ್ನದ ಮುಕುಟಾಗಿದೆ.

ಮನಸ್ಸು, ನೀತಿ, ಶರೀರಗಳಿಂದ ಸುಸಂಸ್ಕೃತನಾಗಿ ವಿವೇಕದಿಂದ ನೆರೆಯವರ ಸುಖದುಃಖಗಳಲ್ಲಿ ಭಾಗಿಯಾಗಿ, ಸುವ್ಯವಸ್ಥಿತ "ಸಮಾಜ" ರಚನೆಯಲ್ಲಿ ಆನಂದಗೊಳ್ಳುವಂತೆ ಮಾನವ ಜೀವಿಗೆ ತಕ್ಕ ಸಲಕರಣೆಗಳನ್ನೊದಗಿಸಿ ಕೊಡುವದೇ ವಚನಶಾಸ್ತ್ರಗಳ ಮೂಲ "ಗುರಿ" ಯಾಗಿದೆ. ಡಾಂಭಿಕ ಪೂಜೆ' ಯಜ್ಞಯಾಗ, ಜಪ ತಪಗಳಿಗಿಂತಲೂ ಚಿತ್ತ ನೈರ್ಮಲ್ಯದಿಂದ ಕಾಯಕ ವೃತ್ತಿಯಲ್ಲಿರುವ ಜೀವನವು ಮೇಲ್ತರದ್ದೆಂದೂ, ಶಕುನ, ಸ್ವಪ್ನ, ನಕ್ಷತ್ರ ಮುಂತಾದೆಲ್ಲ ಭಾವಿಕ ಕಾರ್ಯಗಳಿಗೆ ಮನ ಸೋಲುವದು, ಕಾಯಕಗಳಲ್ಲಿ ಕೀಳುತನವನ್ನು ಕಲ್ಪಿಸುವದು ನ್ಯಾಯುವಲ್ಲೆಂದೂ ಹೇಳಿ, ಮಾನವನ ನಿಜವಾದ ಜೀವನದ "ಪಡಿನೆಳಲ" ನ್ನು ವಚನಶಾಸ್ತ್ರಗಳಲ್ಲಿ ಕಾಣಬಹುದೆಂದು ತಿಳಿಸುವ ವಚನಶಾಸ್ತ್ರಗಳ ದಿವ್ಯ ಸಂದೇಶದ ಹೊಳಪು ಎಲ್ಲರ ಹೃದಯ ಕಮಲವನ್ನು ಅರಳಿಸುತ್ತದೆ.

ಸಂಕುಚಿತ ಮನೋವ್ಯಾಪಾರಗಳೆಲ್ಲ ಬೈಲಾಗಿ ಸರ್ವಸಮತೆ, ಸೌಹಾರ್ದ, ಐಕ್ಯ, ಸ್ವತಂತ್ರ್ಯ ಭಿಲಾಷೆಗಳಿಂದ "ವಿಶ್ವಬಂಧುತ್ವ" ವು ಬೆಳೆಯುತ್ತದೆ.

"ಞ ಎಂದರೆ ಒಂದು ವ್ಯಕ್ತಿಯಲ್ಲ, ಮಾನವಕೋಟಿಯ ಒಂದು ಘಟಕ" ಎಂಬ ವಿಶಾಲ ಭಾವನೆಯು ಮೂಡುತ್ತದೆ. ಕಟ್ಟಕಡೆಗೆ ಜೀವನಿಗೆ ಆತ್ಮಾನಂದವೇ ಲಭಿಸುತ್ತದೆ. ಇದುವೇ ಶರಣ ವಾಣಿಯ ತಾತ್ಪರ್ಯ!!

---

# ರಾಷ್ಟ್ರೀಯ ವಚನಗಳು.

(ಲೇಖಕರು:-ಶ್ರೀ ರೇವಣಶಿದ್ದಪ್ಪಾ ಶೀಲವಂತ, ಹುನಗುಂದ.)

........ooo........

ಕೂಲಿಕಾರರ ಜೀವನವೇ ಸೂರ್ಯ ನಾಡಿಯಯ್ಯಾ। ರೈತರ ಜೀವನವೇ ಚಂದ್ರ ನಾಡಿಯಯ್ಯಾ। ಈ ಎರಡನ್ನೂ ಸಮತ್ವದಿಂದ ನಡೆಸಿಕೊಂಡು ಹೋಗುವದೇ ರಾಷ್ಟ್ರದ ಮುಖ್ಯ ಜೀವಾಳವಯ್ಯಾ। ದೇವಾ ರಾಷ್ಟ್ರದ ಸಮಸ್ತ ಜನತೆಗೆ ಸಮತಾ ತತ್ವವೇ ರಾಷ್ಟ್ರದ ಹೊನ್ನು ಕಳಸವೆಂದರುಹಯ್ಯಾ. ಕೋಟೇಕಲ್ಲ ಶ್ರೀ ಹೊಳೆಹುಚ್ಚೇಶ್ವರಾ ॥

ಔದ್ಯೋಗಿಕ ಅವನತಿಯಿಂದ ಅನ್ಯ ದೇಶದವರ ಮುಖ ನೋಡುವ ದೆಂತಯ್ಯಾ। ಭರತಭೂಮಿಯಲ್ಲಿ ಕಚ್ಚಾ ಸರಕುಗಳು ಹೇರಳವಾಗಿರುತಿರ ಲಿಕ್ಕೆ ಆಲಸ್ಯವೇಕೆ ಹೇಳಯ್ಯಾ। ದುಡಿತವೇ ದುಡ್ಡಿನ ತಾಯಿಯೆಂದು ಮರೆ ತವರಿಗೆ ಬುದ್ಧಿ ಹೇಳಿ ರಕ್ಷಿಸಬಾರದೇನಯ್ಯಾ ಕೋಟೇಕಲ್ಲ ಶ್ರೀ ಹೊಳೆ ಹುಚ್ಚೇಶ್ವರಾ ॥

ಕರವ ಹೇರುವ ಮಂತ್ರಿಗಳೇ ಉತ್ಪಾದನೆಯ ಕಡೆ ಚಿತ್ತ ಕೊಡಿರೇ। ಭೂ ಸುಧಾರಣೆಯಿಲ್ಲದೇ ಬಡವಾಯ್ತು ನೋಡಿರೆ। ಔದ್ಯೋಗಿಕ ಅವನತಿ ಯಿಂದ ಕೊರಗುತಿಹುದು ನೋಡಿರೇ। ದೇವಾ ಇವನ್ನು ಸಾಹಿತ್ಯ ರೂಪ ದಲ್ಲಿ ಪುನರ್ಘಟಿಸಿ ಯಶವ ನೀಡಿರೇ ಕೋಟೇಕಲ್ಲ ಶ್ರೀ ಹೊಳೆ ಹುಚ್ಚೇಶ್ವರಾ ॥

ಓ ರಾಷ್ಟ್ರದ ಮೇಂಬರ ಮಂತ್ರಿಗಳಾಗುವ ಜನರೇ, ಪ್ರಜಾಜನತೆಯ ಕಷ್ಟವನರಿಯಿರೇ। ಹೋಟೆನ ಕಾಲಕ್ಕೆ ಕಾಲ ಹಿಡಿಯುವಿರಿ. ಮುಂದೆ ವದೆಯುವದು ಅನ್ಯಾಯ ನೋಡಯ್ಯಾ। ಸರ್ವರ ಚಿಂತೆಯನರಿಯದವ ರಾದಡೇನು ರಾಷ್ಟ್ರಭಕ್ತರಾಗಬಲ್ಲರೇನಯ್ಯಾ। ದೇವಾ ಇಂಥವರಿಗೆ ನಿಜಶಾಂತಿ ದೊರೆಯುವದೇನು ನೋಡಾ ಕೋಟೇಕಲ್ಲ ಶ್ರೀ ಹೊಳೆ ಹುಚ್ಚೇಶ್ವರಾ ॥

ಜಗದ ವೃಕ್ಷಕ್ಕೆ ಅಜ್ಞಾನವೆಂಬ ಅನೇಕ ವಿಟಪಗಳಾಗಿ ಪರಿಣಮಿಸಿದವು ನೋಡಾ! ವಿಚಾರಿಸಿ ನೋಡಿದೊಡೆ ಏನೂ ಹುರುಳಿಲ್ಲವಯ್ಯಾ। ಪಂಚ ತತ್ವದಿಂದುದ್ಭವಿಸಿದ ನಾವೆಲ್ಲರೂ ಭಿನ್ನವಾದರೆ, ಸರ್ವ ಜೀವ ಹೃದಯದಲ್ಲಿ ಹುದುಗಿಕೊಂಡಿಪ್ಪ ದೇವನೇನಾದರೂ ಭಿನ್ನವೇ? ಇದನ್ನರಿತು ನಡೆದರೆ ಧರ್ಮದ ನಿಜವಾದ ಕೂಟನ್ನು ಸ್ಥಾಪಿಸಿದಂತಾಗುತ್ತದೆ, ನೋಡಯ್ಯಾ। ಇಲ್ಲದಿದ್ದರೆ ಜಗತ್ತು ಅಧರ್ಮಮಯವಾಗಿ ನಾನಾ ಕಾರ್ಪಣ್ಯಗಳಿಗೀಡಾಗುವವಲ್ಲದೇ ನರಕವು ಪ್ರವಾಹರಾಣಿಯಾಗಿಯೂ ತಪ್ಪುವದಿಲ್ಲ ನೋಡಯ್ಯಾ. ಕೋಟೇಕಲ್ಲ ಶ್ರೀ ಹೊಳೆ ಹುಚ್ಚೇಶ್ವರಾ।

---

## ಸತ್ಯರೂಪದ ದೇವರು

(ಮಹಾತ್ಮಾ ಗಾಂಧಿಯವರು ತಾ. ೩೧-೧೨-೩೮ನೇ ದಿವಸ ಬರೆದ ಲೇಖವು 'ಹರಿಜನ' ಪತ್ರಿಕೆಯ ತಾ. ೧೧-೭-೫೨ರ ಸಂಚಿಕೆಯಲ್ಲಿ ಪ್ರಕಟವಾಗಿದ್ದು ಅದರ ಭಾಷಾಂತರವಿದು.)

ದೇವರೆಂದರೆ ಸತ್ಯ ಎಂದು ನಾನು ಏಕೆ ತಿಳಿಯುತ್ತೇನೆ ಎಂದು ನೀವು ಕೇಳಿರುವಿರಿ- ನನ್ನ ಬಾಲ್ಯದಲ್ಲಿ 'ಸಹಸ್ರ ನಾಮ' ದ ಪಠನೆಯನ್ನು ನನಗೆ ಕಲ್ಪಿಸಿದ್ದರು. ಆದರೆ ಅದರಿಂದ ದೇವರ ಎಲ್ಲ ಹೆಸರುಗಳು ಮುಗಿದವೆಂದು ನನಗೆನಿಸಲಿಲ್ಲ. ಎಷ್ಟು ಪ್ರಾಣಿಗಳಿವೆಯೋ ಅಷ್ಟು ಹೆಸರುಗಳು ದೇವರಿಗಿವೆ ಎಂದು ನಾವು ನಂಬುತ್ತೇವೆ. ಹೀಗಿದ್ದರೂ

ಅವನು ಹೆಸರಿಲ್ಲದವನು ಎಂದು ಅನ್ನುತ್ತೇವೆ. ದೇವರಿಗೆ ಅನೇಕ ರೂಪ
ಗಳಿವೆ. ಆದರೆ ಅವನಿಗೆ ನಿರಾಕಾರನೆನ್ನುತ್ತೇವೆ. ಅನೇಕ ನಾಲಿಗೆಗಳಿಂದ
ಅವನು ಮಾತಾಡುತ್ತಾನೆ. ಆದರೆ ನಾವು ಮಾತಾಡದನೆನ್ನುತ್ತೇವೆ.
ಇಸ್ಲಾಮು ಧರ್ಮವನ್ನು ನಾನು ಅಭ್ಯಸಿಸುವಾಗ್ಗೆ ಅಲ್ಲಿಯೂ ದೇವರಿಗೆ
ಅನೇಕ ಹೆಸರುಗಳಿದ್ದುದನ್ನು ಕಂಡೆ. ದೇವರು ಕರುಣಾಕರನಾಗಿದ್ದಾನೆ
ಎಂದು ಎನ್ನುವವರೊಡನೆ ನಾನೂ ಹಾಗೆಯೇ ಅನ್ನುತ್ತೇನೆ. ಆದರೆ ಆಳ
ವಾಗಿ ವಿಚಾರ ಮಾಡಿದಾಗ, ದೇವರು ದೇವರೇ ಆಗಿದ್ದರೂ ಅವನು 'ಸತ್ಯ'
ಆಗಿದ್ದಾನೆ ಎಂದು ನನಗೆನಿಸಿತು. ದೇವರ ಸಂಪೂರ್ಣ ವರ್ಣನೆ ಕೊಡು
ವುದಾದರೆ, ನನ್ನ ವಿಷಯದಲ್ಲಂತೂ ದೇವರೆಂದರೆ ಸತ್ಯ. ಆದರೆ ಎರಡು
ವರ್ಷಗಳ ಹಿಂದೆ ಸತ್ಯವೇ ದೇವರು ಎಂಬ ನಿರ್ಣಯಕ್ಕೆ ನಾನು ಬಂದೆ.
ಇವೆರಡೂ ಮಾತಿನಲ್ಲಿಯ ಸೂಕ್ಷ್ಮ ಭೇದವು ನಿಮಗೆ ಕಾಣಬಹುದು.
ಕಳೆದ ೫೦ ವರ್ಷಗಳಿಂದ ನಾನು ನಡೆಸಿದ ಸತ್ಯ ಶೋಧನೆಯ ನಂತರ ಈ
ನಿರ್ಣಯಕ್ಕೆ ನಾನು ಬಂದಿದ್ದೇನೆ. ಆ ವೇಳೆ ಸತ್ಯಕ್ಕೆ ಮುಟ್ಟುವ ಎಲ್ಲಕ್ಕೂ
ಸಮೀಪದ ದಾರಿಯು ಪ್ರೇಮದ ಮುಖಾಂತರ ಹೋಗುತ್ತದೆಂಬುದನ್ನು
ಕಂಡೆ. ಇಂಗ್ರೇಜಿ ಭಾಷೆಯಲ್ಲಂತೂ ಈ ಪ್ರೇಮ ಶಬ್ದಕ್ಕೆ ಅನೇಕ ಅರ್ಥ
ಗಳಿವೆ. ಇಂದ್ರಿಯ ವ್ಯಾಪಾರಕ್ಕೆ ಸಂಬಂಧಪಟ್ಟ ಪ್ರೇಮದಿಂದ ಅವನತಿಯೂ
ಆಗುವದುಂಟು. ಆದರೆ ಅಹಿಂಸಾಮಯ ಪ್ರೇಮಕ್ಕೆ ಜಗತ್ತಿನಲ್ಲಿ ತೀರ ಸ್ವಲ್ಪ
ಅರ್ಥಗಳುಂಟೆಂಬುದು ನನ್ನ ಅನುಭವಕ್ಕೆ ಬಂದಿದೆ. ಸತ್ಯ ಶಬ್ದಕ್ಕೆ ಎರಡು
ಅರ್ಥವಿದ್ದದ್ದು ನನಗೆ ಕಂಡುಬಂದಿಲ್ಲ. ಮತ್ತು ನಾಸ್ತಿಕರು ಕೂಡ ಸತ್ಯದ ಅವಶ್ಯ
ಕತೆ ಮತ್ತು ಸಾಮರ್ಥ್ಯಗಳನ್ನು ಅಲ್ಲಗಳೆದಿಲ್ಲ. ಆದರೆ ನಾಸ್ತಿಕರು ತಾವು ಮಾಡು
ತ್ತಿರುವ ಸತ್ಯ ಶೋಧನೆಯ ಹುರುಪಿನಲ್ಲಿ ದೇವರ ಅಸ್ತಿತ್ವವನ್ನೇ ಅಲ್ಲಗಳೆಯಲು
ಹಿಂಜರಿಯುವುದಿಲ್ಲ. ಆದರೆ ಅವರ ಆ ದೃಷ್ಟಿಯು ಅವರ ನಿರ್ಣಯದ
ಮೇರೆಗೆ ಸರಿಯಾಗಿದೆ. ಆ ವಿಚಾರ ಸರಣಿಯ ಮೂಲಕವೇ ನಾನು,
ದೇವರೆಂದರೆ ಸತ್ಯ ಎಂಬ ನನ್ನ ವ್ಯಾಖ್ಯೆಯನ್ನು ಸತ್ಯವೆಂದರೇ ದೇವರು
ಎಂಬುದಾಗಿ ತಿದ್ದಿಕೊಂಡೆ. ತನ್ನನ್ನು ನಾಸ್ತಿಕನೆಂದು ಕರೆದುಕೊಳ್ಳುವುದರಲ್ಲಿ
ಆನಂದ ಪಡುತ್ತಿದ್ದ ಚಾರ್ಲಸ ಬ್ರ್ಯಾಡಲಾ ಇವರ ಹೆಸರು ಈ ಸಂದರ್ಭ
ದಲ್ಲಿ ನನಗೆ ನೆನಪಾಗುತ್ತದೆ. ಅವರ ಬಗ್ಗೆ ನನಗೆ ಅಲ್ಪ ಸ್ವಲ್ಪ ಪರಿಚಯ
ವಿದ್ದು, ಅವರನ್ನು ನಾನು ನಾಸ್ತಿಕರೆಂದು ಕರೆಯಲು ಸಿದ್ಧನಿಲ್ಲ. ದೈವಭೀತ
ಮನುಷ್ಯ ಎಂದು ಅವರನ್ನು ಕರೆಯಲು ನಾನು ಇಚ್ಛಿಸುತ್ತೇನೆ. ಅವರು

ಈ ಮಾತಿಗೆ ಒಪ್ಪಲಿಕ್ಕಿಲ್ಲ. "ಶ್ರೀ ಬ್ರ್ಯಾಡಲಾ, ನೀವು ಸತ್ಯಪ್ರಿಯರಾಗಿದ್ದೀರಿ, ಆದರೆ ದೈವ ಭೀತರಲ್ಲ" ಎಂದು ನಾನೆಂದರೆ ಅವರು ಆದರಿಂದ ಆನಂದಪಡಬಹುದು. ಆದರೆ ಅವರ ವಾದವನ್ನು ನಾನು, ಸತ್ಯವೆಂದರೇನೇ ದೇವರು ಎಂದು ಹೇಳಿ ನಿರ್ಮಲಗೊಳಿಸಬಲ್ಲೆನು. ಮತ್ತು ಈ ರೀತಿಯಾಗಿ ನಾನು ಅನೇಕ ತರುಣರನ್ನು ಸುಮ್ಮನಾಗಿಸಿದ್ದುಂಟು.

ಆದರೆ ಕೋಟ್ಯಂತರ ಜನರು ದೇವರ ಹೆಸರು ತೆಗೆದುಕೊಂಡು ಕೋಲಾಹಲವನ್ನುಂಟುಮಾಡಿದುದು ಒಂದು ತೊಡಕೇ ಆಗಿದೆ. ವಿಚಾರಿಗಳು ಕೂಡ ಸತ್ಯದ ಸಂಬಂಧದಲ್ಲಿ ತೊಡಕನ್ನುಂಟುಮಾಡುವುದಿಲ್ಲವೆಂದಲ್ಲ. ಸತ್ಯ ಮತ್ತು ಶಾಸ್ತ್ರಗಳ ಹೆಸರಿನಲ್ಲಿ ಪ್ರಾಣಿಗಳ ಮೇಲೆ ಎಂತಹ ಕ್ರೌರ್ಯವು ಅಂಗವಿಚ್ಛೇದನೆ ಮಾಡುವ ಮೂಲಕ ನಡೆಯುತ್ತದೆಂಬುದನ್ನು ನಾನು ಬಲ್ಲೆ. ಹೀಗೆ ಈ ದಾರಿಯಲ್ಲಿ ಅನೇಕ ತೊಡಕುಗಳಿವೆ. ದೇವರನ್ನು ನೀವು ಹೇಗೆ ವರ್ಣಿಸಿದರೂ ಬಾಧೆಯಿಲ್ಲ. ಮಾನವೀ ಮನಸ್ಸಿನ ಶಕ್ತಿಯು ಮರ್ಯಾದಿತವಿದೆ. ಅದರ ಶಕ್ತಿಗೆ ಮೀರಿದ ಒಂದು ವಸ್ತುವಿನ ಬಗ್ಗೆ ವಿಚಾರಮಾಡಬೇಕಾದರೆ ಆ ಮರ್ಯಾದೆಯೊಡನೆಯೇ ಯತ್ನಿಸಬೇಕಾಗುತ್ತದೆ. ದೇವರೊಬ್ಬನೇ ಇದ್ದಾನೆ, ಬೇರೆ ಏನೂ ಇಲ್ಲ, ಎಂಬ ಮಾತನ್ನು ಈ ಕಾರಣದಿಂದ ಹಿಂದೂ ತತ್ವಜ್ಞಾನವು ಪ್ರತಿಪಾದಿಸುತ್ತದೆ. ಇಸ್ಲಾಮ ಧರ್ಮದ ಕಲೇಮಾ ಶಬ್ದದಲ್ಲಿಯೂ ಇದೇ ಮಾತು ವ್ಯಕ್ತವಾಗುತ್ತದೆ. ಅಲ್ಲಿ ಈ ಮಾತು ಬಹಳ ಸ್ಪಷ್ಟವಾಗಿದೆ. ಸಂಸ್ಕೃತ ಭಾಷೆಯಲ್ಲಿರುವ ಸತ್ಯ ಶಬ್ದದ ಅರ್ಥವನ್ನು ನೋಡಿದರೆ, ಯಾವುದು ಇದೆಯೋ ಅದು ಸತ್ಯ ಎಂದಾಗುತ್ತದೆ. ಆದ್ದರಿಂದ ನಾನು ಸತ್ಯ ಎಂದರೆ ದೇವರು ಎಂಬ ವ್ಯಾಖ್ಯೆಗೆ ಬಂದು ಮುಟ್ಟಿದ್ದೇನೆ. ಮತ್ತು ಅದರಿಂದಲೇ ನನಗೆ ಹೆಚ್ಚಿನ ಸಮಾಧಾನವಾಗುತ್ತಿದೆ. ಈ ವ್ಯಾಖ್ಯೆಯ ಪ್ರಾತ್ಯಕ್ಷಿಕೆಯನ್ನು ಪಡೆಯುವುದಾದರೆ ಪ್ರೇಮ ಅರ್ಥಾತ್ ಹಿಂಸೆಯ ಮುಖಾಂತರವೇ ಕ್ರಮಿಸುವುದು ಅನಿವಾರ್ಯವಾಗಿದೆ. ಮತ್ತು ಕೊನೆಯಲ್ಲಿ ಸಾಧನ ಮತ್ತು ಸಾಧ್ಯಗಳು ಏಕ ಸ್ವರೂಪದವಾಗುವವು ಎಂದು ನಂಬುವ ನಾನು ಸತ್ಯವೆಂದರೆ ಪ್ರೇಮ ಎಂದು ಇಟ್ಟುಕೊಳ್ಳಲು ಹಿಂದೆ ಮುಂದೆ ನೋಡುತ್ತಿಲ್ಲ.

ಹಾಗಾದರೆ ಸತ್ಯವೆಂದರೇನು ? ಅದನ್ನು ಸ್ಪಷ್ಟೀಕರಿಸುವುದು ಕಠಿಣವಿದ್ದರೂ "ನಿನ್ನ ಅಂತರ್ವಾಣಿಯು ಏನು ಹೇಳುತ್ತದೋ ಅದೇ ಸತ್ಯ" ಎಂದು ನಾನು ತಿಳಿದುಕೊಂಡಿದ್ದೇನೆ. ಬೇರೆ ಬೇರೆ ಜನರು ಬೇರೆ ಬೇರೆ

ಮತ್ತು ಪರಸ್ಪರ ವಿರುದ್ಧವಾದ ಸತ್ಯಗಳನ್ನು ಕಾಣುತ್ತಿದ್ದಾರಲ್ಲ? ಎಂದು ನೀವು ಕೇಳಬಹುದು. ಮಾನವೀ ಮನಸ್ಸು ಅನೇಕ ಪರಿಸ್ಥಿತಿಗಳಲ್ಲಿ ಕಾರ್ಯ ಮಾಡುತ್ತಿದೆ. ಆದ್ದರಿಂದ ಅವರ ಪ್ರಗತಿಯು ಎಲ್ಲರ ವಿಷಯದಲ್ಲಿ ಒಂದೇ ರೀತಿಯದಾಗಿ ಇರುವುದಿಲ್ಲ. ಆದ್ದರಿಂದ ನನಗೆ ಸತ್ಯವಾದದ್ದು ಬೇರೆಯವ ನಿಗೆ ಆಗಲಿಕ್ಕಿಲ್ಲ. ಸತ್ಯದ ಬಗ್ಗೆ ಪ್ರಯೋಗ ಮಾಡಿದವರು ಆ ಬಗ್ಗೆ ಅನೇಕ ಭಿನ್ನ ಭಿನ್ನ ಪರಿಸ್ಥಿತಿಗಳ ಮೇಲೆ ಅವಲಂಬಿಸಬೇಕಾಗುತ್ತದೆ ಎಂಬ ನಿರ್ಧಾರಕ್ಕೆ ಬಂದಿದ್ದಾರೆ. ಶಾಸ್ತ್ರೀಯ ಸಂಶೋಧನೆಯ ವಿಷಯದಲ್ಲೂ ಇದೇ ಮಾತು ಕಂಡುಬರುತ್ತದೆ. ಅದಕ್ಕಾದರೂ ಒಂದು ನಿಷ್ಠುರ ನಿಯ ಮಾವಳಿಯ ಮೇಲೆ ಅವಲಂಬಿಸಿ ಮುಂದರಿಯಬೇಕಾಗುತ್ತದೆ. ಅದೇ ಮೇರೆಗೆ ಈ ಅಧ್ಯಾತ್ಮ ಕ್ಷೇತ್ರದಲ್ಲಿ ಕೂಡ ಪ್ರಯೋಗ ಮಾಡುವವನು ಒಂದು ಪದ್ಧತಿಯ ಮೇಲೆ ಸರಿಯಾಗಿ ಅಂಟಿಕೊಂಡು ಸಾಗಬೇಕಾಗುವದು. ಅಂತರ್ವಾಣಿಯು ಬಗ್ಗೆ ಮಾತಾಡುವ ಪ್ರತಿಯೊಬ್ಬನು ತನ್ನ ಶಕ್ತಿ ಮರ್ಯಾದೆ ಗಳ ಬಗ್ಗೆ ಜ್ಞಾನವಿದ್ದವನು ಇರಬೇಕಾಗುವದು. ಸತ್ಯವೇ ದೇವರು ಎಂಬ ಮಾತಿನ ಜ್ಞಾನ ಪಡೆಯಲು ಪ್ರಯೋಗ ಮಾಡುವವರು, ಸತ್ಯ, ಬ್ರಹ್ಮ ಚರ್ಯೆ (ಪಾವಿತ್ರ್ಯ) ಅಹಿಂಸೆ, ಬಡತನ, ಅಸಂಗ್ರಹ ಈ ಸಂಬಂಧವಾದ ವ್ರತವನ್ನು ಪಾಲಿಸಬೇಕಾಗುವವುದು. ಅದಿಲ್ಲದಿದ್ದರೆ ಆ ಪ್ರಯೋಗಕ್ಕೆ ಯಶ ದೊರೆಯಲಾರದು. ಇನ್ನೂ ಅನೇಕ ಸಂಗತಿಗಳು ಈ ಬಗ್ಗೆ ಹೇಳಲ್ಪಟ್ಟಿವೆ. ಅವೆಲ್ಲವುಗಳನ್ನು ನಿಮಗೆ ನಾನು ಹೇಳಲು ಬಯಸುವದಿಲ್ಲ.

ಈ ದಾರಿಯ ಪರಿಚಯುವಿದ್ದವರು ಪ್ರತಿಯೊಬ್ಬನು ಅಂತರ್ವಾಣಿಯ ಮಾತಾಡುವದು ಯೋಗ್ಯವಾಗಲಾರದು ಎಂಬ ಮಾತನ್ನು ತಿಳಿಯಬಲ್ಲರು. ಈಗ ಎಲ್ಲರೂ ಅಂತರ್ವಾಣಿಯ ಮಾತಾಡುತ್ತಿರುವದರಿಂದ ಮತ್ತು ಯಾವದೇ ತರಹದ ತಪಸ್ಸು ಮಾಡಲು ಅವರು ಲಕ್ಷಿಸದಿರುವದರಿಂದ, ಭಯಗ್ರಸ್ತ ಜಗತ್ತಿಗೆ ಅಸತ್ಯವು ಸತ್ಯದ ಸ್ವರೂಪದಲ್ಲಿ ಕೊಡಲ್ಪಡುತ್ತಿದೆ. ಅತಿ ನಮ್ರತೆ ಯೊಡನೆ ನಾನು ತಮಗೆ ಹೇಳುವುದೇನೆಂದರೆ, ನಮ್ರತೆಯ ಖಣಿ ಇಲ್ಲದಿರು ವ ಯಾವನೊಬ್ಬನಿಂದ ಸತ್ಯವು ಕಂಡು ಹಿಡಿಯಲ್ಪಡಲಾರದು. ಸತ್ಯರೂಪೀ ಸಮುದ್ರದ ಪಾತಳಿಯ ಮೇಲೆ ಈಸುವವನು ತನ್ನನ್ನು ಶೂನ್ಯ ಸ್ವರೂಪಕ್ಕೆ ತಂದುಕೊಳ್ಳಬೇಕಾಗುವದು. ಈ ಆಕರ್ಷಕ ಮಾರ್ಗದಲ್ಲಿ ಇದಕ್ಕೂ ಹೆಚ್ಚು ನಾನು ಕ್ರಮಿಸಲಾರೆನು.

# ಸೊಗಸಿನ ಬಾಳು

(ಲೇ:— ಸಿ. ನಾ. ಮಹಾಂತಣ್ಣವರ, ಮು. ಹೊಸೂರ.)

ಶಿವಪುರವೆಂಬ ಸಣ್ಣ ಹಳ್ಳಿ. ಅಲ್ಲಿ ಸಂಗಪ್ಪನೆಂಬ ಸದಾಚಾರಿ. ಆತನ ಕಾಯಕ ಕೃಷಿಯು. ಶರೀರದಿಂದ ಸದೃಢನು. ಆತನ ಹೆಂಡತಿಯ ಹೆಸರು ಹಂಪವ್ವ. ಈರ್ವರೂ ಮೊದಲು ಪರರ ಹೊಲದ ಕೆಲಸಮಾಡುತ್ತ ಕೂಡಿಟ್ಟ ಕೆಲ ಹಣದಿಂದ ಕಡಿಮೆ ಬೆಲೆಗೆ ಖರೀದಿ ಕರಕಿಯ ಹೊಲ. ಆಗ ಬೇಸಿಗೆಯ ಬಿಸಿಲು. ದಿನಾಲು ಈರ್ವರೂ ಒಪ್ಪತ್ತು ಪರರ ಹೊಲದಲ್ಲಿ ಕೂಲಿ ಮಾಡುತ್ತ ದಿನಂಪ್ರತಿ ಸಂಜೆಯ ಮುಂದೆ ತಮ್ಮ ಹೊಲದ ನಟ್ಟಿನ ಸಾಗುವಳಿ. ಹೀಗಿರಲು ಆ ವರ್ಷ ಹಾಗೂ ಹೇಗೂ ಆದ ಕೆಲಸದಲ್ಲಿ ಅರ್ಧ ಹಸನ ಭೂಮಿಯೊಳು ಹೊಟ್ಟೆಯ ಪೂರ್ತೆ ಕಾಳಿನ ಸಂಗ್ರಹವಾಗಿ, ಮೂರು ವರ್ಷ ನಟ್ಟಿಗರಿ ಮುಗಿಸಿ, ಹೊಲದ ಸುತ್ತಲು ಒಡ್ಡು ಬಿಗಿದು ಎರಡು ಸಾರೆ ರೆಂಟೆಯ ಹೊಡೆದು ಮೂರು ಸಾರೆ ಹರಗುವ ಕೆಲಸವು ಬೇಸಿಗೆಯೊಳಗೆಯೇ ತೀರೋಣವಾಗಿ, ನಂತರ ಎರೆಹೊಲ ಇದ್ದದರಿಂದ ಮಳೆಗಾಲದಲ್ಲಿ ಮತ್ತೆ ಮೂರು ಸಾರೆ ಹಸರ ಹರ್ತಿ ಮಾಡಿ, ಹಸಿಯ ಹದನೋಡಿ ಬಿತ್ತಿಗೆಯಾಯಿತು. ಎರಡು ಮೂರು ಸಾರೆ ಎಡೆಹೊಡೆದು ಕಸವಿಲ್ಲದಂತೆಯೂ ಬೀಡಿ ಸೆಳೆಯದಂತೆಯ ೂ ನೋಡಿಕೊಳ್ಳುತ್ತಿದ್ದರು. ಇದರಿಂದ ಬೆಳೆಯು ಸಾಕಷ್ಟು ಬಂತು.

ನಂತರ ಮೂರನೆಯ ವರ್ಷ ಹೋದ ವರ್ಷದಂತೆ ಕೆಲಸ ಮಾಡಿ ಗೊಬ್ಬರ ಹಾಕಿ ರೆಂಟೆ ಕುಂಟೆಗಳನ್ನು ಹೊಡೆದು ಸಣ್ಣ ಸಣ್ಣ ಪ್ಲಾಟುಗಳನ್ನು ಮಾಡಿ, ನೆಲವು ಸಮತಳವಾಗುವಂತೆ ಪ್ರಯತ್ನಿಸಿ, ಮಳೆಯ ನೀರು ಎಲ್ಲ ಪ್ಲಾಟುಗಳಲ್ಲಿ ನಿಂತು, ನೀರುಂಡು ಹೆಚ್ಚಾದ ನೀರು ಹೊರಗೆ ಸೋಡಿಯಿಂದ ಹೋಗುವಂತೆ ಮಾಡಿದ್ದರಿಂದ ಆ ವರ್ಷ ಅಲ್ಪ ಮಳೆಯಾದರೂ ಹೊಲವು ಪೂರ್ಣ ಹಸಿಯಾಗಿ ಬಿತ್ತಿ ಬೆಳೆ ತಕ್ಕೊಂಡರು. ಉಳಿದ ಆ ಊರ ಒಕ್ಕಲಿಗರು ತಮ್ಮ ಹೊಲಗಳು ಸಾಕಷ್ಟು ಹಸಿಯಾಗದ್ದರಿಂದ ಬಿತ್ತಿ ಬೆಳೆ ಗೇಡು ಮಾಡಿಕೊಂಡರು. ಸಂಗಣ್ಣನ ಶ್ರಮ ನೋಡಿ ಅವರು ಮನದೊಳು ನಾಚಿ, ಚಹಾ ಕುಡಿದು ಚಹಾದ ಅಂಗಡಿಯ ಮುಂದೆ ಹರಟೆಹೊಡೆಯುವ

ದನ್ನು ಬಿಟ್ಟು, ಅವನ ಹಾಗೆ ಸತ್ಕಾಯಕವಾದ "ಕೃಷಿ ಪ್ರದೀಪಿಕೆ" ಯೆಂಬ ಪುಸ್ತಕ ತರಿಸಿ ಅದರಂತೆ ಕೆಲಸ ಮಾಡುತ್ತ ಬಂದದ್ದರಿಂದ ಈಗೆ ಆ ಊರ್ರು ನಿಜ ಶಿವಪುರವೇ ಆಗಿಬಿಟ್ಟದೆ.

ವಚನ:— ಹತ್ತದೆ ಹರಗದೆ, ಒತ್ತದೆ ಒಜ್ಜಿಹಾಕದೆ, ಎತ್ತದೆ ಎರಗದೆ, ಕೆತ್ತದೆ ಕೆದರದೆ, ಬಿತ್ತದೆ ಬೆಳೆಯದೆ, ಸುತ್ತಲಿನ ಕುತ್ತುಗಳ ಕತ್ತರಿಸದೆ, ನೆತ್ತಿಯೊಳು ನೀರ್ವನಿಗಳು ಒಡೆಯದೆ, ಒತ್ತರಿಸಿ ಬೀಳುವ ಮಳೆಯ ನೀರು ನೆಲ್ಲುವ ಒಡ್ಡು ಒರೆಗಳ ಹಾಕದೆ, ಮೃತ್ಯುಂಜಯನ ಮೇಲೆ ದೋಷನಿಡುವ ಹೇಸಿಗಳಿಗೇನೆಂಬೆನಯ್ಯ ಸಿದ್ಧೇಶ್ವರಾ. ||೧||

ಗುದ್ದಲಿಯೇ ಗೆಳೆಯಾಗಿ, ಶುದ್ಧ ಎತ್ತು ಬಂಡಿಗಳು ಜೋಡಾಗಿ, ಬುದ್ಧಿವಂತರ ನೆರೆಯಾಗಿ, ಹೊಲದ ಹಸ್ಸಿನೊಳು ಸದ್ದಿಲ್ಲದೆ ಕೃಷಿ ಕಾಯಕವನೇ ಕೈಕೊಂಡು ಇದ್ದದರಲ್ಲಿ ಶುದ್ಧ ಪ್ರಸಾದದ ಅನುವುದೋರಿ ಬದುಕಿಸಯ್ಯ ಎನ್ನ ಸಿದ್ಧೇಶ್ವರಾ. ||೨||

ಕಾಯಕವಿಲ್ಲೆಂದು ಕಳವಳಿಸಿ ಗದ್ದರಿಸುವ ಉದ್ದಂಗಿಯ ವಿಸ್ಮಯವಂತರೆಲ್ಲ ಛಿದ್ರನಾಕರಿಗೆ ಮನಸೋತು ಬಿದ್ದು ಬೆಂಡಾಗದೆ ತಿದ್ದಿ ತೀಡುವಕ್ರಾ ಪಕ್ಕೆ ಮರುಳಾಗದೆ ಕದ್ದು ತಿನ್ನುವ ಕಪಟ ಕಾಯಕವ ಕಡೆಮೆಟ್ಟಿ ಸೀಳಿ ಎಂಬತ್ತುನಾಲ್ಕುಲಕ್ಷ ಜೀವರಾಶಿಗಳೆಲ್ಲ ಉಂಡು ಉಬ್ಬುವ ಕೃಷಿಕಾಯಕವ ಕೈಕೊಳ್ಳರೆಂದು ನಮ್ಮ ಸಿದ್ಧೇಶ್ವರಾ ||೩||

ಸಕಳ ಜನರ ಸಹವಾಸದೊಳಿರದೆ, ಪರಮ ನೀತಿಯ ನೆಲೆಯನರಿಯದೆ, ಪರಸ್ತ್ರೀಯರ ನಾದಿನೊಳಗಿರ್ದು ಪರರ ವಿತ್ತವ ಅಪಹರಿಸುವ ಕುಹಕರ ನೆರೆಬೇಡೆಂದ ನಮ್ಮ ಸಿದ್ಧೇಶ್ವರಾ ||೪||

ದೇಶಭಕ್ತರ ದಿಶೆಗಳನರಿದು, ದೋಷರಹಿತ ದಾರಿಯ ಹಿಡಿದು ಸೋಸಿ ನೋಡುತ ಸತ್ಯಾಸತ್ಯವ, ಸಾತ್ವಿಕ ವೃತ್ತಿಯ ಸಾಧನಗೈದು; ಭವಪಾಶವ ಪರಿವ ಪಶುಪತಿಯ ಪಾದವ ಹಿಡಿಯೆಂದ ನಮ್ಮ ಸಿದ್ಧೇಶ್ವರಾ || ೫ ||

ಕಂದ:— ಸಮುಹೃದಯದ ಸಂತಾನಂ ।
ಮೃದುವಚನದೆ ಬೋಧ ಮಾಳ್ಪ ಮಾತೃಸ್ಥಾನಂ ||

ಪದಫಲ ಪಡೆಯುವ ಬಾಣಂ ।
ಕದಲದ ಕಲ್ಯಾಣದೋರ್ಪ ಸರ್ವಜ್ಞಾನಂ ॥೧॥

ನವಕರ್ನಾಟಕ ಪತ್ರಂ ।
ನವಜೀವಾಳದ ಸಮಾಜಗೆಯ್ಯುವ ಗಾತ್ರಂ ॥
ನವಗುಣ ನಿರತದ ಛತ್ರಂ ।
ನವಧಾನ್ಯಂಗಳನುಣಿಸುವ ಕ್ಷೇತ್ರಂ ಪಾತ್ರಂ ॥೨॥

ಹಿಂದಿನ ಹಿರಿಯರು ಹಾಕಿದ ।
ಕಂದದ ಕುಂದದ ಸುನೀತಿ ಸನ್ಮಾರ್ಗಗಳಂ ॥
ಬಂಧುರತನದಿಂ ಪಾಲಿಸಿ ।
ಚಂದದಿ ಮುಂಬರುವ ಸಾಧನಂಗಳ ತೋರ್ಕುಂ ॥೩॥

ಜಾತಿಯ ಖ್ಯಾತಿಗೆ ಪೋಗದೆ ।
ಮಾತಿನ ಮನೆಗೆ ಸಿಲುಕದೆ ಕಾಯಕದೊಲವಂ ॥
ನೂತನ ಕ್ರಮದಿಂ ಪುಟ್ಟಿಸಿ ।
ಪೂತ ಸ್ವತಂತ್ರ ನವರಾಷ್ಟ್ರ ಮಾಳ್ಪುದು ಸತ್ಯಂ ॥೪॥

ನಾಡಿನ ನಡತೆಯ ತಿದ್ದುವ ।
ಬೇಡಿದ ಫಲಗಳ ಕಡೆಯುವ ಪತ್ರವ ಸತತಂ ॥
ನೋಡುತ ನುಡಿಯುತ ನಡೆವಗೆ ।
ಕಡೆಮೊದಲಿಲ್ಲದ ಸ್ವರಾಜ್ಯಸುಖವೇಂ ದೂರ್ಕೈ ॥೫॥

# ಬಸವಣ್ಣನವರ ಚರಿತ್ರೆ

( ಲೇ:— ಪ್ರೋ. ಎಸ್. ಎಸ್. ಮಾಳವಾಡ. )

ಕರ್ನಾಟಕದಲ್ಲಿ ಕಲ್ಬರಿಹಗಳು ಹೇರಳವಾಗಿ ದೊರಕುತ್ತಿವೆ. ಇದು ದರಿಂದಲೇ ಏನೋ, ಚರಿತ್ರೆಯು ಅಧಿಕೃತವಾಗಬೇಕಾದರೆ ಅದಕ್ಕೆ ಕಲ್ಬರಿಹಗಳ ಮುದ್ರೆ ಬೇಕೆಂಬ ಅಭಿಪ್ರಾಯವೂ ನಮ್ಮಲ್ಲಿ ಬೆಳೆದು ಬಂದಿದೆ. ಆದರೆ ಬಸವಣ್ಣನವರ ಚರಿತ್ರೆ ಕಲ್ಬರಿಹಗಳಲ್ಲಿ ಕಂಡು ಬರು ವುದಿಲ್ಲವಾದರೂ, ಕನ್ನಡಿಗರ ಜನಮನದ ಮೇಲೆ ಸ್ಪಷ್ಟವಾಗಿ ಬರೆಯ ಲ್ಪಟ್ಟಿದೆ. ಶಾಸನೋಕ್ತವಲ್ಲದ್ದರಿಂದ ಬಸವಣ್ಣನವರು, ಆತನ ಅನುಯಾ ಯಿಗಳು ಇವರ ಬಗ್ಗೆ ಸಾಹಿತ್ಯದಲ್ಲಿರುವ ಚರಿತ್ರಾಂಶಗಳು ಅಧಿಕೃತವಲ್ಲ ವೆಂದು ಹೇಳುವವರೂ ಇದ್ದಾರೆ. ಹಾಗೂ ಬಸವಣ್ಣನವರ ಹೆಸರು ಶಾಸನೋಕ್ತವೆಂದು ತೋರಿಸಿ ಕೊಡುವವರೂ ಇದ್ದಾರೆ. ಆದರೆ ಅವರಿ ಬ್ಬರಿಗೂ ನಮ್ಮ ಸಮಾಧಾನವಿಷ್ಟೇ:— ಶಾಸವೊಂದನ್ನೇ ಅಧಿಕೃತ ಚರಿತ್ರೆಯ ಸಾಧನವೆಂದು ತಿಳಿಯುವುದು ಸರಿಯಲ್ಲ ಮತ್ತು ಶಾಸನೋ ಕ್ತರಾಗಲು ಬಸವಣ್ಣನವರು ಯಾವುದೊಂದು ಗುಡಿಗೆ ದತ್ತಿ ಕೊಡಲಿಲ್ಲ; ಅಥವಾ ರಣಭೂಮಿಯ ಮೇಲೆ ಕಾದಾಡಲು ಹೋಗಲಿಲ್ಲ. ಅಲೌಕಿಕ ವಾದ ಧಾರ್ಮಿಕ ಜೀವನದಿಂದ ಕರ್ನಾಟಕವನ್ನು ಬೆಳಗಿದ ಬಸವಣ್ಣನ ವರ ಚರಿತ್ರೆಯನ್ನು ಕನ್ನಡ ಕವಿಗಳು ಅನೇಕ ರೀತಿಯಲ್ಲಿ ಹಾಡಿದ್ದಾರೆ ಆ ಹೇಳಿಕೆಯನ್ನು ಸಮನ್ವಯಿಸಿಕೊಂಡು ಬಸವಣ್ಣನವರ ಜೀವನಾಂಗಗ ಳನ್ನು ಅರಿತುಕೊಳ್ಳಬಹುದಾಗಿದೆ. ಬಸವಣ್ಣನವರ ವಚನಗಳು ಅನೇಕ ಶಿವಶರಣರ ವಚನಗಳು ಅನೇಕ ಕಲ್ಬರಿಹಗಳಿಗಿಂತಲೂ ಸ್ಫುಟ ವಾಗಿ ಬಸವಣ್ಣನವರ ವ್ಯಕ್ತಿ ಸ್ವರೂಪವನ್ನು ನಿರೂಪಿಸುತ್ತಿವೆ. ಉಳ್ಳವರು ಶಿವಾಲಯವ ಮಾಡುವರೆಂದೂ ತಾವು ಏನೂ ಇಲ್ಲದ ಬಡವರಾದ್ದರಿಂದ ತಾವು ಶಿವಾಲಯವನ್ನು ಕಟ್ಟಿಸಲಾರೆವೆಂದೂ ಬಸವಣ್ಣನವರು ತಾವೇ ಹೇಳಿದ್ದಾರೆ. ಹಾಗೂ ಬಸವಣ್ಣನವರು ರಣಭೂಮಿಯಲ್ಲಿ ಯುದ್ಧಮಾ ಡದೆ ನಮ್ಮ ಧಾರ್ಮಿಕ-ಸಾಮಾಜಿಕ ಕ್ಷೇತ್ರಗಳಲ್ಲಿ ಕೋಲಾಹಲ ನಡೆ ಸಿದ ಅಜ್ಞಾನ ಡಂಭಾಚಾರಗಳೆಂಬ ಶತ್ರುಗಳೊಡನೆ ಹೋರಾಡಿದರು.

ಅಂತೆಯೇ ಅವರ ಚರಿತ್ರೆ ಶಾಸನಗಳಲ್ಲಿ ಇರಲಿಕ್ಕಿಲ್ಲ. ಬಸವಣ್ಣನವರು ಬಿಜ್ಜಳನ ಮುಖ್ಯ ಮಂತ್ರಿಗಳಾಗಿದ್ದರೆಂಬ ಹೇಳಿಕೆಯೂ ಇದೆ. ಆದರೆ ನಾನು ಬಿಜ್ಜಳನ ಕಾಲದ ಅನೇಕ ಶಿಲಾಶಾಸನಗಳನ್ನು ಪರಿಶೀಲಿಸಿದಾಗ ಬಿಜ್ಜಳನ ಮುಖ್ಯ ಅಧಿಕಾರಿಗಳ ಹೆಸರುಗಳಲ್ಲಿ ಬಸವಣ್ಣನವರ ಹೆಸರು ದೊರೆಯಲಿಲ್ಲ. ಬಹುಶಃ ಬಸವಣ್ಣನವರು ಬಿಜ್ಜಳನ ಆಸ್ಥಾನದಲ್ಲಿ ದೊಡ್ಡ ಅಧಿಕಾರದಲ್ಲಿ ಇರದೆ ಹೋಗಿರಬಹುದು. ಈ ಮಾತು ನಿಜವಾದರೆ ಬಸವಣ್ಣನವರು ತಮ್ಮ ಅಧಿಕಾರಸ್ಥಾನದ ಉಪಯೋಗಮಾಡಿ ಶೈವಮತವನ್ನು ಬೆಳೆಸಿದರೆಂಬ ಆರೋಪವೂ ತಾನಾಗಿಯೇ ಹೋಗುವುದು. ಸಮಾಜ ಕ್ರಾಂತಿಯ ಮೂಲಕ ಜನಮನದಲ್ಲಿ ಹಿರಿಯ ಸ್ಥಾನ ಪಡೆದ ಬಸವಣ್ಣನವರಿಗೆ ನಮ್ಮ ಕವಿಗಳು ಬಿಜ್ಜಳನ ಆಸ್ಥಾನದಲ್ಲಿಯೂ ಹಿರಿಯ ಸ್ಥಾನ ಕಲ್ಪಿಸಿರಬಹುದು.

ಬಸವಣ್ಣನವರು ಶಾಸನೋಕ್ತ ವ್ಯಕ್ತಿಯೆಂದು ತೋರಿಸುವ ಪ್ರಯತ್ನ ಬಹು ದಿನಗಳ ಹಿಂದೆಯೇ ನಡೆದಿದೆ. ಎಪಿಗ್ರಾಫಿಕಾ ಇಂಡಿಕಾ ೫ನೆಯ ಸಂಪುಟದಲ್ಲಿ ಫ್ಲೀಟ್ ಸಾಹೇಬರು ಮಾನಿಂಗವಳ್ಳಿಯ (ಮನಗೋಳಿ) ೧೧೬೦ ನೆಯ ವರುಷದ ಒಂದು ಶಾಸನವನ್ನು ಪ್ರಕಟಿಸಿ ಅದರಲ್ಲಿಯ ಬಸವನ ಉಲ್ಲೇಖವನ್ನು ತೋರಿಸಿದ್ದಾರೆ. 'ಕೆನರೀಸ್ ಲಿಟರೇಚರ್' ಎಂಬ ಪುಸ್ತಕ ೫೩ನೆಯ ಪುಟದಲ್ಲಿಯೂ ಈ ಮಾತಿನ ಪ್ರಸ್ತಾಪವಿದೆ. ಈ ಶಾಸನದಲ್ಲಿ ಬಸವ ಎಂಬ ಹೆಸರು ಇರುವುದಾದರೂ ಕೂಡ ಭಕ್ತಿಭಾಂಡಾರಿ ಬಸವಣ್ಣನವರೂ ಈ ಶಾಸನೋಕ್ತ ವ್ಯಕ್ತಿಯೂ ಒಂದೇ ಎಂದು ಹೇಳುವುದು ಸರಿಯಾಗಲಾರದು. ಏಕೆಂದರೆ ಈ ಶಾಸನೋಕ್ತ ಬಸವನ ತಾಯಿತಂದೆಗಳು ಚಂದ್ರರಾಜ, ಚಂದ್ರಾಂಬಿಕೆ ಎಂದೂ, ಅವರು ಕಾಶ್ಯಪಗೋತ್ರದವರೆಂದೂ, ಈ ಬಸವನು ಕಲಿದೇವೇಶ್ವರನ ಗುಡಿಯನ್ನು ಕಟ್ಟಿಸಿದನೆಂದೂ ಹೇಳಿದೆ. ಆದರೆ ಈ ಯಾವ ಸಂಗತಿಗಳೂ ಭಕ್ತಿ ಭಾಂಡಾರಿ ಬಸವಣ್ಣನವರ ಚರಿತ್ರೆಗೆ ಅನ್ವಯಿಸುವುದಿಲ್ಲ. ಈ ಶಾಸನದಲ್ಲಿಯ ವ್ಯಕ್ತಿ ಬೇರೆ ಯಾರೋ ಆಗಿರಬೇಕು. ತನ್ನ ಕಾಲುಗಳನ್ನೇ ಕಂಭಗಳನ್ನಾಗಿಮಾಡಿ ತನ್ನದೇಹವನ್ನೇ ದೇವಾಲಯವೆಂದು ತಿಳಿಯುವ ಕಲ್ಯಾಣದ ಬಸವಣ್ಣನೂ ಶಿವದೇವಾಲಯ ಕಟ್ಟಿಸಿ ಪ್ರಸಿದ್ಧಿ ಪಡೆದ ಈ ಮಾನಿಂಗವಳ್ಳಿಯ ಬಸವನೂ ಒಂದೆ ಆಗುವುದು ಸಾಧ್ಯವಿಲ್ಲ ೧೯[illegible]೮ನೆಯ ವರುಷದ ಮಾರ್ಚ ತಿಂಗಳ ಶಿವಾನುಭವ

ಸಂಚಿಕೆ ಅರ್ಜುನವಾಡದ ಶಿಲಾಶಾಸನವೂ ಆ ವಿಚಾರವಾಗಿ ಒಂದು ಲೇಖನವೂ ಪ್ರಕಟವಾಗಿವೆ. ಆದರೆ ಅದು ೧೨೬೦ ನೆಯ ಇಸವಿಯದು. ಅದರಲ್ಲಿ ಬಸವನ ವಂಶದ ಹಾಲಿಬಸವಿದೇವ ಎಂಬವನ ಪ್ರಸ್ತಾಪವಿದೆ. ಆದರೆ ಬಸವನ ಬಗ್ಗೆ 'ಬಾಗೇವಾಡಿ ಪುರವರಾಧೀಶ್ವರ ಮಾದಿರಾಜನ ತನುಜಂ' ಎಂಬ ಉಲ್ಲೇಖವಿದೆ. ಆದರೆ ಬಸವನು ಕಾಲವಾದ ಎಷ್ಟೋ ವರುಷಗಳ ಮೇಲೆ ಆತನ ವಂಶಜರ ಪ್ರಸ್ತಾಪವನ್ನೊಳಗೊಂಡ ಶಿಲಾಲೇಖವಿದು. ಕರ್ನಾಟಕ ಶಾಸನ ಸಾಹಿತ್ಯದಲ್ಲಿ ಈ ಸುಮಾರಿಗೆ ನಾವು 'ಬಸವ' ಎಂಬ ಕೆಲವು ಹೆಸರುಗಳನ್ನು ಕಾಣುತ್ತೇವೆ. ಕರ್ನಾಟಕ ಸಾಹಿತ್ಯ ಪರಿಷತ್ಪತ್ರಿಕೆಯ ೨೩ ನೆಯ ವರುಷದ ೪ನೆಯ ಸಂಚಿಕೆಯಲ್ಲಿ ಶ್ರೀಮಾನ್ ಎಸ್. ಕಂಠಶಾಸ್ತ್ರಿಗಳು ಬಸವ ಎಂಬ ಹೆಸರಿನ ಉಲ್ಲೇಖವುಳ್ಳ ಈ ಕಾಲದ ಆರು ಶಾಸನಗಳನ್ನು ಸಂಗ್ರಹಿಸಿ ಲೇಖನ ಬರೆದಿದ್ದಾರೆ. ಆದರೆ ಲೇಖಕರೇ ಒಪ್ಪಿರುವಂತೆ ಈ ಶಾಸನಗಳೆಲ್ಲವೂ ಬಸವನ ಕಾಲಕ್ಕಿಂತಲೂ ಸುಮಾರು ಶತಾಬ್ದ ಈಚಿನವು. ಆದುದರಿಂದ ಬಸವಣ್ಣನವರ ಚರಿತ್ರೆಯನ್ನು ನಿರ್ಣಯಿಸಲಿಕ್ಕೆ ಶಾಸನಗಳು ಸಹಾಯಕಾರಿಯಾಗಿಲ್ಲವೆಂಬ ಮಾತನ್ನು ನಾವು ಒಪ್ಪಬೇಕಾಗುತ್ತದೆ. ಮೇಲಿನ ಶಾಸನಗಳ ಮೂಲಕ ಬಸವನು ಕಾಲ್ಪನಿಕ ವ್ಯಕ್ತಿಯಲ್ಲವೆಂದೂ ಚಾರಿತ್ರಿಕ ವ್ಯಕ್ತಿಯೆಂದೂ ಮಾತ್ರ ಸಿದ್ಧವಾಗುತ್ತದೆ. ಆ ಚಾರಿತ್ರಿಕ ವ್ಯಕ್ತಿಯು ಬಜ್ಜಳನ ಕಾಲದವನೆಂಬ ಮಾತು ಸ್ಪಷ್ಟವಾಗುತ್ತದೆ. ಆ ಚಾರಿತ್ರಿಕ ವ್ಯಕ್ತಿಯು ಬಿಜ್ಜಳನ ಕಾಲದವನೆಂಬ ಅಭಿಪ್ರಾಯವೂ ಇದುವರೆಗೆ ಬಂದಿದೆ. ಆದರೆ ಶ್ರೀಮಾನ್ ಎಸ್. ಶ್ರೀಕಂಠಶಾಸ್ತ್ರಿಗಳು ಮೇಲೆ ಉಕ್ತವಾದ ಪರಿಷತ್ಪತ್ರಿಕೆಯ ಸಂಚಿಕೆಯಲ್ಲಿಯ ಲೇಖದಲ್ಲಿ ಆ ಬಿಜ್ಜಳನು ಕಲಚೂರ್ಯ ಬಿಜ್ಜಳನಾಗಿರದೆ ೧೧೬೯ರಿಂದ ೧೧೬[illegible]ರ ವರೆಗೆ ಆಳಿದ ಸಿಂದವಂಶದ ಬಿಜ್ಜರಸನಾಗಿರಬಹುದೆಂದು ಸೂಚಿಸಿದ್ದಾರೆ. ಬಸವಣ್ಣನವರು ಕಲಚೂರ್ಯ ಬಿಜ್ಜಳನ ಆಸ್ಥಾನದಲ್ಲಿ ಇರಲಿಕ್ಕಿಲ್ಲವೆಂದು ಸೂಚಿಸುವದಕ್ಕೆ ಅವರು ಕೊಡುವ ಕಾರಣಗಳು ಎರಡು:—

(೧) ಕಲಚೂರ್ಯ ಬಿಜ್ಜಳನು ಶೈವವಂಶೀಯನೆಂದೂ, ಆತನು ರಾಜ್ಯವನ್ನು ತ್ಯಜಿಸಿದನಲ್ಲದೆ ಕೊಲ್ಲಲ್ಪಡಲಿಲ್ಲವೆಂದೂ ಶಾಸನಗಳಿಂದ ತಿಳಿಯುತ್ತದೆ. ಆದರೆ ಪುರಾಣಗಳಲ್ಲಿ ಬಿಜ್ಜಳನು ಜೈನನಾಗಿದ್ದನೆಂದೂ ಬಸವನ ಅನುಯಾಯಿಗಳಿಂದ ಕೊಲ್ಲಲ್ಪಟ್ಟನೆಂದೂ ಹೇಳಿದೆ.

(೨) ಬಸವೇಶ್ವರರು ಒಂದು ವಚನದಲ್ಲಿ ಒಬ್ಬ ಜಂಗಮನ ಅಭಿಮಾನದಿಂದ ಚಾಳುಕ್ಯರಾಯನ ಆಳಿಕೆ ತಿಗೆಯಿತು ಎಂದೂ; ಕಲ್ಯಾಣವು ಹಾಳಾಯಿತೆಂದೂ ಉಲ್ಲೇಖವಿದೆ. ಆದ್ದರಿಂದ ಈ ಉಲ್ಲೇಖವು ಕಲಚೂರ್ಯ ಬಿಜ್ಜಳನಿಗೆ ಸಂಬಂಧಿಸಿರಲಾರದು. ಕಲ್ಯಾಣ ಹಾಳಾದುದು ಕಲಚೂರ್ಯ ಬಿಜ್ಜಳನ ಕಾಲದಲ್ಲಿ ಅಲ್ಲ.

ಈ ಅಕ್ಷೇಪಣೆಗಳಿಗೆ ಸಮಾಧಾನ ಹೇಳಲು ಸಾಧ್ಯವಿದೆ. ಮೊದಲನೆಯ ಹೇಳಿಕೆಯು ಕಲಚೂರ್ಯ ಬಿಜ್ಜಳನಿಗೆ ಅನ್ವಯಿಸಬಹುದಷ್ಟೇ. ಕಲಚೂರ್ಯ ಬಿಜ್ಜಳನು ಶೈವಪಕ್ಷಪಾತಿಯೆಂದು ದಿವಂಗತ ಪ್ರೊ|| ಟಿ. ಎಸ್. ವೆಂಕಣ್ಣಯ್ಯನವರು ಪ್ರಬುದ್ಧ ಕರ್ನಾಟಕದ ತಮ್ಮ ಲೇಖನದಲ್ಲಿ ಸೂಚಿಸಿದ್ದಾರೆ. ಇನ್ನು ಬಸವೇಶ್ವರರ ವಚನದಲ್ಲಿಯ ಉಕ್ತಿಯಬಗ್ಗೆ ಸಂದಿಗ್ಧ ಅರ್ಥವಾಗುತ್ತಿರುವದು ನಿಜವಾದರೂ ಕೂಡ, ರಾ|| ಸಾ|| ಹಳಕಟ್ಟಿಯವರು ಶಿವಾನುಭವದ ೧೩ ನೆಯ ವರುಷದ ೫-೬ನೆಯ ಸಂಚಿಕೆಯಲ್ಲಿ 'ಬರೆದ ಬಸವಣ್ಣನವರಿಗಿಂತ ಪೂರ್ವದ ಕಾಲ' ಎಂಬ ಐತಿಹಾಸಿಕ ಲೇಖನಗಳಲ್ಲಿ ಈ ಉಕ್ತಿಗೆ ಸ್ಪಷ್ಟವಾದ ಅರ್ಥವನ್ನು ಕೊಡುವ ಪ್ರಯತ್ನ ಮಾಡಿದ್ದಾರೆ. ಬಸವೇಶ್ವರರ ವಚನದಲ್ಲಿ ಸೂಚಿತವಾದ 'ಜಂಗಮ' ಶಬ್ದವು ಶ್ರೀ ರೇವಣಸಿದ್ಧರಿಗೆ ಅನ್ವಯಿಸುವದೆಂದೂ ಚಾಲುಕ್ಯರಾಯನೆಂದರೆ ಚಾಳುಕ್ಯ. ನೂರ್ಮಡಿ ತೈಲಪನೆಂದೂ ಅವರು ಹೇಳುತ್ತಿರುವುದು ತೋರುತ್ತಿದೆ. ಚಾಳುಕ್ಯ ನೂರ್ಮಡಿ ತೈಲಪನನಂತರವೇ ಚಾಳುಕ್ಯರಾಜ್ಯವು ಕಲಚೂರ್ಯ ಬಿಜ್ಜಳನಿಗೆ ಸೇರಿತು. ಈ ದೃಷ್ಟಿಯಿಂದ 'ಚಾಳುಕ್ಯರಾಯನ ಆಳಿಗ ತೆಗೆಯಿತ್ತು' ಎಂಬ ಉಕ್ತಿಗೆ ನಾವು ಸರಿಯಾದ ಅರ್ಥವನ್ನು ಹಚ್ಚಬಹುದಾಗಿದೆ. ಹೀಗೆ ನಾವು ಶ್ರೀ ಕಂಠಶಾಸ್ತ್ರಿಗಳ ಹೇಳಿಕೆಗೆ ಸಮಾಧಾನ ಕೊಡಬಹುದಾದರೂ, ಅವರು ಸೂಚಿಸಿರುವ ಮಾತು ಸ್ವಾರಸ್ಯ ಪೂರ್ಣವಾಗಿದ್ದು, ಆ ಬಗ್ಗೆ ಹೆಚ್ಚಿನ ಶೋಧನೆ ನಡೆಯುವದು ಅವಶ್ಯವಾಗಿದೆ. ಬಿಜ್ಜಳನು ಯಾರು, ಎಂಬ ಪ್ರಶ್ನೆಯೊಡನೆ ಬಸವಣ್ಣನವರ ಕಾಲದ ವಿಚಾರವು ಬರುತ್ತದೆ. ಕಲಚೂರ್ಯ ಬಿಜ್ಜಳನ ಕಾಲವು ೧೧೫೧ರಿಂದ ೧೧೬೭ರ ವರೆಗೆ. ಶ್ರೀ ಎಸ್. ಶ್ರೀಕಂಠಶಾಸ್ತ್ರಿಗಳು ಸೂಚಿಸುವ ಸಿಂದವಂಶದ ಬಿಜ್ಜರಸನ ಕಾಲ ೧೧೭೯ರಿಂದ ೧೧೭೮ರ ವರೆಗೆ. ಆದರೆ ಈ ಬಿಜ್ಜರಸನು ಕರ್ನಾಟಕದ ಇತಿಹಾಸದಲ್ಲಿ ಅಷ್ಟೊಂದು ಮುಖ್ಯ

ವ್ಯಕ್ತಿಯಾಗಿಲ್ಲ. ಅಲ್ಲದೆ ಬಸವಣ್ಣನವರ ಕಾಲದ ಬಿಜ್ಜಳನು ಅಲ್ಲ ಎಂದು ನಿರ್ವಿವಾದವಾಗಿ ಸಿದ್ಧವಾಗಿಯೂ ಇಲ್ಲ, ಆದರಿಂದ ಬಸವಣ್ಣನವರು ಐಕ್ಯ ಹೊಂದಿದ ಕಾಲವನ್ನು ಸುಮಾರು ೧೧೬೮ (ಅಂದರೆ ಬಿಜ್ಜಳನು ರಾಜ್ಯ ಬಿಟ್ಟ ಕಾಲ) ಎಂದು ಇಟ್ಟುಕೊಳ್ಳಬಹುದು. ಇನ್ನು ಬಸವಣ್ಣನವರು ಹುಟ್ಟಿದ ಕಾಲದ ಬಗ್ಗೆ ಭಿನ್ನಾಭಿಪ್ರಾಯಗಳಿವೆ. ಈ ವಿಚಾರವಾಗಿ ಶ್ರೀಮಾನ್ ಯಂಗಟಿ ವಕೀಲರು ಶಿವಾನುಭವದ ೧೯-೭ ನೆಯ ವರುಷದ ಮಾರ್ಚತಿಂಗಳ ಸಂಚಿಕೆಯಲ್ಲಿ ಒಂದು ಉಪಯುಕ್ತ ಲೇಖನಬರೆದಿದ್ದಾರೆ. ವೀರಶೈವ ಪುರಾಣಕಾರರು ಬಸವಣ್ಣನವರು ಮೂರು ಪಟ್ಟಿಗಳವರೆಗೆ (೩೬ ವರುಷ ಜೀವಿಸಿದ್ದರೆಂದು ಹೇಳುತ್ತಾರೆ. ಈ ಮಾತನ್ನು ಸುಲಭವಾಗಿ ಒಪ್ಪಲಾಗುವದಿಲ್ಲ. ಏಕೆಂದರೆ ಬಸವಣ್ಣನವರು ಬಿಜ್ಜಳನ ಆಸ್ಥಾನದಲ್ಲಿರುವಾಗ ಸಾಕಷ್ಟು ಪ್ರೌಢ ವಯಸ್ಸಿನವರಾಗಿದ್ದರೆಂದು ಪ್ರಗಲ್ಭ ವಿಚಾರ, ಕಾರ್ಯಕ್ರಮಗಳಿಂದ ನಿರ್ಧರಿಸಬಹುದಾಗಿದೆ. ಶಿವತತ್ವ ಚಿಂತಾಮಣಿಕಾರರು ಬಸವಣ್ಣನವರು ಹುಟ್ಟಿದ ಕಾಲವನ್ನು ೧೧೩೯ ಎಂದು ಹೇಳುತ್ತಾರೆ. ಅದು ನಿಜವಾದರೆ ಬಸವಣ್ಣನವರು ಬಿಜ್ಜಳನ ಆಸ್ಥಾನದಲ್ಲಿದ್ದುಕೊಂಡು ಧರ್ಮೋದ್ಧರಣ ಕಾರ್ಯವನ್ನು ನಡೆಸುತ್ತಿರುವಾಗ ಸುಮಾರು ೨೩ ವರುಷದವರಿದ್ದರೆಂದು ಸೂಚಿತವಾಗುತ್ತದೆ. ಆದರೆ ಬಿಜ್ಜಳನ ಆಸ್ಥಾನದಲ್ಲಿರುವಾಗ ಬಸವಣ್ಣನವರ ಪರಿಪಕ್ವ ವಿಚಾರದವರಿದ್ದರು. ತಾರುಣ್ಯದ ಆವೇಶಪೂರ್ಣ ಕೃತಿಗಳನ್ನು ಅವರು ಕೈಕೊಂಡಿರಲಿಲ್ಲ. ಇದರಿಂದ ಅವರು ಪ್ರೌಢವಯಸ್ಕರಾಗಿರಬೇಕು. ಇದಕ್ಕನುಸರಿಸಿ ನಾವು ಬಸವಣ್ಣನವರು ಹುಟ್ಟಿದ ಕಾಲವನ್ನು ಸುಮಾರು ೧೧ ೦ ಎಂದು ಇಟ್ಟುಕೊಳ್ಳಬಹುದು.

ಅವತಾರ ಕಾರಣಗಳನ್ನು ಪುರಾಣಕಾರರು ಬೇರೆಬೇರೆಯಾಗಿ ಕೊಟ್ಟಿರುತ್ತಾರೆ. ನಾವು ಅವುಗಳನ್ನು ಬಿಟ್ಟು ಬಿಡಬಹುದು. ಬಸವಣ್ಣನವರು ಬಾಗೇವಾಡಿಯ ಶೈವಬ್ರಾಹ್ಮಣ ಕುಲದಲ್ಲಿ ಜನ್ಮತಾಳಿದ ಮಾತಿಗೆ ಭಿನ್ನಾಭಿಪ್ರಾಯಗಳಿಲ್ಲ. ಆದರೆ ಪುರಾಣಗಳಲ್ಲಿ ಹೇಳಿದ 'ಕಮ್ಮೆ' ಕುಲವನ್ನು ಶ್ರೀ ರಾಜಪುರೋಹಿತರು 'ಕಾಣ್ವ' ಶಾಖೆಯೆಂದು ತಿದ್ದುವಪ್ರಯತ್ನ ಮಾಡಿದ್ದಾರೆ. ಬಾಗೇವಾಡಿಯ ಅಗ್ರಹಾರದಲ್ಲಿ ಮಾದರಸನೆಂಬ ಶಿವಭಕ್ತನ ಮಗನಾಗಿ ಹುಟ್ಟಿದ ಬಸವನು ತನ್ನ ಎಂಟನೆಯ ವರುಷಕ್ಕೆ ಉಪನಯನ ಸಂಸ್ಕಾರವನ್ನು ಪ್ರತಿಭಟಿಸಿ ಹೊರಟನೆಂಬ ಮಾತನ್ನು ಭೀಮಕವಿಯು

ಹೇಳಿದ್ದಾನೆ. ಆದರೆ 'ಕರ್ಮಲತೆಯಂತಿರ್ದ ಬಸಿವಾರಮಂ ಬಸುಟು' ಎಂಬ ಹರಿಹರನ ಹೇಳಿಕೆಗೆ ಇನ್ನೂ ಕೆಲವು ಆಧಾರಗಳು ದೊರೆಯುವದರಿಂದ ಬಸವಣ್ಣನವರಿಗೆ ಬಾಲ್ಯದಲ್ಲಿ ಉಪನಯನ ಸಂಸ್ಕಾರವಾಗಿರಬೇಕೆಂದೂ, ಅನಂತರ ಅವರ ಸತ್ಯಶೋಧನೆ, ಜ್ಞಾನತೃಷೆ ಇವುಗಳ ಫಲವಾಗಿ ಅವರು ಉಪನಯನ ಇತ್ಯಾದಿ ಧಾರ್ಮಿಕ ಸಂಸ್ಕಾರಗಳು ಅರ್ಥ ರಹಿತವೆಂದು ಕಂಡುಕೊಂಡಿ ಬೇಕೆಂದೂ ನನಗೆ ಅನ್ನಿಸುತ್ತದೆ. ಸಾಂಪ್ರದಾಯ ಬದ್ಧವಾದ ಧಾರ್ಮಿಕ ವೃತ್ತಗಳ ತೊಡಕಿನಿಂದ ಕೂಡಿದ ತಮ್ಮ ಮನೆಯನ್ನು ಬಿಟ್ಟುಕೊಟ್ಟು, ಸತ್ಯಾನ್ವೇಷಿಗಾಗಿ ಜ್ಞಾನದ ಹಂಬಲದಿಂದ ತಿರುಗುತ್ತಿರುವಾಗ ಅವರು ಕಪ್ಪಡಿಸಂಗಮಕ್ಕೆ ಬಂದಿರಬೇಕು. ಅಲ್ಲಿಯ ಸ್ಥಾನಪತಿಗಳ ಸಲಹೆಯಂತೆ ಸಂಗಮೇಶ್ವರ ಪೂಜಾನಿರತರಾಗಿ ಕೆಲವು ದಿನಗಳವರೆಗೆ ಅಲ್ಲಿದ್ದುಕೊಂಡು, ಕಡೆಗೆ ಅಂತರಾತ್ಮನ ಸ್ಫೂರ್ತಿಯಿಂದ ಅಥವಾ ಸಂಗಮೇಶ್ವರನ ಆದೇಶದಂತೆ ಅವರು ಬಿಜ್ಜಳನ ಆಸ್ಥಾನವನ್ನು ಸೇರುತ್ತಾರೆ. ಬಿಜ್ಜಳನ ಆಸ್ಥಾನಕ್ಕೆ ಹೊರಡಬೇಕಾಗಿ ಬಂದಾಗ ಬಸವಣ್ಣನವನು "ಅಕ್ಷರಜ್ಞಾನಂ ಉಂಟು; ಅದಂ ಐದೆ ಮಾರುವೆ" ಎಂಬುದಾಗಿ ಹೇಳಿದಂತೆ ಹರಿಹರನ ಗ್ರಂಥದಲ್ಲಿದೆ. ಬಿಜ್ಜಳನ ಆಸ್ಥಾನದಲ್ಲಿ ತಮ್ಮ ಅನುಪಮವಾದ ಬುದ್ಧಿ ಮತ್ತೆಯನ್ನು ತೋರಿ ಅಧಿಕಾರದ ಸ್ಥಾನ ಪಡೆಯುತ್ತಾರೆ. ಬಸವಣ್ಣನವರು ಪುರಾಣಗಳಲ್ಲಿ ದಂಡನಾಯಕ, ಮಂತ್ರೀಶ, ಭಂಡಾರಿ ಎಂಬುದಾಗಿ ಕರೆಯಲ್ಪಟ್ಟಿದ್ದರೂ ಅವರು ನಿಶ್ಚಿತವಾಗಿ ಯಾವ ಅಧಿಕಾರದಲ್ಲಿದ್ದರೆಂದು ಹೇಳುವುದು ಕಠಿಣ. ಅಲ್ಲದೆ ಈ ಮೊದಲೇ ನಾನು ಸೂಚಿಸಿದಂತೆ ಅವರು ಶ್ರೇಷ್ಠವಾದ ರಾಜಕೀಯ ಅಧಿಕಾರದಲ್ಲಿದ್ದುಕೊಂಡು, ಆ ಅಧಿಕಾರದ ಬಲದಿಂದ ವೀರಶೈವ ಧರ್ಮ ಪ್ರಚಾರ ಮಾಡಿದರೆಂದು ಹೇಳುವ ಅಭಿಪ್ರಾಯವು ಸಮಂಜಸವೆಂದು ನನಗೆ ತೋರುವದಿಲ್ಲ. ಅಸಾಮಾನ್ಯವಾದ ವ್ಯಕ್ತಿತ್ವದ ವರ್ಚಸ್ಸುಳ್ಳ ಬಸವಣ್ಣನವರಿಗೆ ರಾಜಕೀಯ ಕಾಲದ ಬಲವು ಬೇಕಾಗಿಂರಲಿಲ್ಲ. ಬಸವಣ್ಣನವರು ಬೋಧಿಸಿದ ಉದಾತ್ತ ತತ್ವಗಳಿಂದಲೂ ಈ ಮಾತು ಸಿದ್ಧವಾಗುತ್ತದೆ." ಬಸವ ರಾಜಕಾರಣಿ ಎಂದು ಓರ್ವ ಇತಿಹಾಸಕಾರರು ಹೇಳಿದ ಮಾತಿನಲ್ಲಿ ಸತ್ಯದ, ಪ್ರಾಮಾಣಿಕತನದ ಅಭಾವವಿದೆಯೆಂದು ಹೇಳಬೇಕಾಗುತ್ತದೆ. ಬಸವನು ಶ್ರೇಷ್ಠವಾದ ರಾಜಕೀಯ ಅಧಿಕಾರದಲ್ಲಿ

ದಾಗಿತ್ತು. ಬಸವಣ್ಣನವರು ಬುದ್ಧಿಬಲದಿಂದ ಬಿಜ್ಜಳನ ಆಸ್ಥಾನದಲ್ಲಿ ಒಂದು ಅಧಿಕಾರ ಸ್ಥಾನ ಪಡೆದರು. ತಮ್ಮ ಅಲೌಕಿಕವಾದ ಧಾರ್ಮಿಕ ಜೀವನದ ಮೂಲಕ ಜನತೆಯ ಹೃದಯದಲ್ಲಿ ಶ್ರೇಷ್ಠ ಸ್ಥಾನ ಪಡೆದರು.

ಬಿಜ್ಜಳನ ಆಸ್ಥಾನದಲ್ಲಿ ಬಸವಣ್ಣನವರ ಸ್ವಜಾತೀಯನಾದ ಬಲದೇವನೆಂಬ ಮಂತ್ರಿಯಿದ್ದನೆಂದು ಪುರಾಣಗಳಿಂದ ತಿಳಿಯುತ್ತದೆ. ಹಾಗೂ ಆತನು ಬಸವಣ್ಣನವರ ಸೋದರಮಾವನೆಂದೂ ಪುರಾಣಗಳಲ್ಲಿ ಹೇಳಿದೆ. ಹರಿಹರನು ಸಿದ್ಧ ದಂಡಾಧಿಪನ ಹೆಸರನ್ನು ಮಾತ್ರ ಹೇಳುತ್ತಾನೆ. ಸಿದ್ದಣ್ಣ ಮಂತ್ರಿಯ ಹೆಸರು ಇನ್ನೂ ಕೆಲವು ಕಡೆ ಬರುತ್ತದೆ. ಬಸವಣ್ಣನವರು ಬಲದೇವನ ಮಗಳಾದ ಗಂಗಾಂಬಿಕೆಯನ್ನು, ಸಿದ್ದಣ್ಣ ಮಂತ್ರಿಯ ಮಗಳಾದ ನೀಲಾಂಬಿಕೆಯಕೆಯನ್ನೂ ಮದುವೆಯಾದರು. ಈ ಮದುವೆಗಳಿಂದ ಬಸವಣ್ಣನವರು ಬಲದೇವ ಸಿದ್ದಣ್ಣ ಇವರುಗಳ ಜೀವನಾನಂತರ ಅವರವರ ಆಸ್ತಿಗೂ ಅಧಿಕಾರಿಗಳಾಗಿರಬಹುದು. ಸಿದ್ದಣ್ಣ-ಬಲದೇವರು ಅಣ್ಣತಮ್ಮಂದಿರೆಂದು 'ಶಿವಕಥಾಸಾಗರ' ದಿಂದ ತಿಳಿಯುತ್ತದೆ. ಹರಿಹರನ ಹೇಳಿಕೆಯಂತೆ ಬಸವಣ್ಣನವರ ಹೆಂಡಂದಿರ ಹೆಸರುಗಳು ಗಂಗಾದೇವಿ ಮತ್ತು ಮಾಯಾದೇವಿ ಎಂದಿವೆ. ಅಲ್ಲದೆ ಬಸವಣ್ಣನವರು ಬಾಗೇವಾಡಿಯನ್ನು ಬಿಡುವುದಕ್ಕೆ ಮೊದಲು ಅವರಿಗೆ ಓರ್ವ ಮುತ್ತಜ್ಜಿ ಇದ್ದಳೆಂದು ಹರಿಹರನು ಹೇಳಿದ್ದಾನೆ.

ಬಿಜ್ಜಳನ ಆಸ್ಥಾನದಲ್ಲಿರುವಾಗ ಬಸವಣ್ಣನವರು ತಮ್ಮ ಅಲೌಕಿಕವಾದ ಧಾರ್ಮಿಕ ಜೀವನದಿಂದ ಉನ್ನತ ಪದವಿಗೇರಿದರು. ನಿಜವಾದ ನೀತಿಯ ಧರ್ಮದ ಪ್ರಚಾರ ಮಾಡಿ, ಲೋಕಕಲ್ಯಾಣಕ್ಕಾಗಿ ಹಗಲಿರುಳೂ ಹೆಣಗಾಡಿದರು. ತಮ್ಮ ಉಜ್ವಲವ್ಯಕ್ತಿತ್ವದ ಮೂಲಕ ಅಸಂಖ್ಯ ಶರಣರನ್ನು ಆಕರ್ಷಿಸಿದರು. ಭಾರತದ ವಿವಿಧ ಭಾಗಗಳಿಂದ ಜನತೆಯು ಆಕರ್ಷಿಸಲ್ಪಟ್ಟಿತು. ಬಸವಣ್ಣನವರು ಸರಳವಾದ, ನೀತಿಪೂರ್ವವಾದ ಸಕಲ ಮಾನವರ ಕಲ್ಯಾಣವನ್ನು ಸರಿಯಾಗಿ ಮಾಡುವ ಧರ್ಮ ಪ್ರಚಾರ ಮಾಡಬೇಕೆಂಬ ಉದ್ದೇಶದಿಂದ ವೀರಶೈವ ಧರ್ಮೋದ್ಧಾರಣ ಕಾರ್ಯಕ್ಷೇತ್ರವಾದ ಕರ್ನಾಟಕವು ಧನ್ಯವಾಯಿತು. ಶರಣರ ವಿಚಾರಗಳನ್ನು

ತಲ್ಲಿ "ಅನುಭವಮಂಟಪ"ವು ಏರ್ಪಟ್ಟಿತು. ಬಸವಣ್ಣನವರ ಘನತೆ ಹೆಚ್ಚಿತು. ಅವರ ಈ ಘನತೆಗೆ ಆಸ್ಥಾನದಲ್ಲಿಯ ಕೆಲವರಿಗೆ ಸೇರದೆ ಅವರು ಬಿಜ್ಜಳನೆದುರು ಚಾಡಿ ಹೇಳಿರಬೇಕು. ಇದರಿಂದ ಬಿಜ್ಜಳನಿಗೂ ಬಸವಣ್ಣನವರಿಗೂ ಮನಸ್ತಾಪವಾಗಿರಬೇಕು. ಬಸವಣ್ಣನವರ ಸಾಮಾಜಿಕ ಕ್ರಾಂತಿಯ ಆಂದೋಲನವು ಮಧುವಯ್ಯ ಹರಳಯ್ಯರೆಂಬ ವಿಪ್ರ ಅಸ್ಪೃಶ್ಯರ ಶರೀರಸಂಬಂಧದಲ್ಲಿ ಪರ್ಯವಸಾನವಾಗಿ ಬಸವನ ಅನುಯಾಯಿಗಳಿಗೂ, ಬಿಜ್ಜಳನಿಗೂ ಮನಸ್ತಾಪ ಹೆಚ್ಚಿ ಅದು ಕಹಿಫಲವನ್ನು ಕೊಟ್ಟಿರಬೇಕು. ಇದರಿಂದ ಬಿಜ್ಜಳನ ಕೊಲೆಯು ನಡೆದಿರಬಹುದಾದರೂ ಬಸವನಂತಹ ಮಹಾತ್ಮನು ಬಿಜ್ಜಳನ ಕೊಲೆಗೆ ಉತ್ತರವಾದಿಯಾಗುವುದು ಸಾಧ್ಯವಲ್ಲವೆಂದು ನಮ್ಮ ಸ್ಪಷ್ಟವಾದ ಅಭಿಪ್ರಾಯ. ಈ ಅಭಿಪ್ರಾಯಕ್ಕೆ ತಕ್ಕಷ್ಟು ಉದಾಹರಣೆಗಳನ್ನು ಕೊಡಬಹುದಾಗಿದೆ.

ಬಸವಣ್ಣನವರು ಅನೇಕ ಪವಾಡಗಳನ್ನು ಮಾಡಿದರೆಂದು ವೀರಶೈವ ಪುರಾಣಗಳಲ್ಲಿ ಹೇಳಲಾಗುತ್ತಿದೆ. ಜೈನ ಪುರಾಣಗಳು ಬಸವನು ದುರಾಚಾರಿಯಾಗಿದ್ದನೆಂದೂ ಉಚಿತವಲ್ಲದ ರೀತಿಯಲ್ಲಿ ತನ್ನ ಧರ್ಮಪ್ರಸಾರ ಮಾಡಿದನೆಂದೂ ಹೇಳುತ್ತಿವೆ. ಇವೆರಡೂ ಹೇಳಿಕೆಗಳಲ್ಲಿ ಅರ್ಥವಿಲ್ಲ. ಅವುಗಳಿಗಾಗಿ ನಾವು ಹೆಚ್ಚು ಬೆಲೆ ಕೊಡಬೇಕಾಗಿಲ್ಲ. ಮಹಾತ್ಮರ ಜೀವನದಲ್ಲಿ ಈ ಅತಿಶಯ ಹೊಗಳಿಕೆ ದುರಾಚಾರದ ಪ್ರಚಾರ ಇದ್ದೇ ಇವೆಯೆಂಬುದನ್ನು ನಾವು ಹಿಂದಿನ ಹಾಗೂ ಇಂದಿನ ಮಹಾತ್ಮರ ಜೀವನಗಳಿಂದ ಕಾಣುತ್ತೇವೆ. ಮಾನವ ಕುಲದ ಕಲ್ಯಾಣಕ್ಕಾಗಿ ದೇಹವನ್ನು ಸವೆಯಿಸುತ್ತಿದ್ದ ಮಹಾತ್ಮ ಬಸವಣ್ಣನವರು ತಮ್ಮ ಧಾರ್ಮಿಕ ಸಾಮಾಜಿಕ ಆಂದೋಲನವು ಕಹಿಫಲಗಳನ್ನು ಕೊಡಲು ಮೊದಲು ಮಾಡಿದಾಗ ಅದನ್ನು ತಡೆಯುವುದು ಸಾಧ್ಯವಲ್ಲವೆಂದು ತೋರಿದಾಗ ತಾವು ತಮ್ಮ ಕಾರ್ಯರಂಗದಿಂದ ಒಮ್ಮೆಲೇ ಹಿಂದೆ ಸರಿಸಬಹುದು. ಪ್ರಕ್ಷುಬ್ಧವಾದ ಧಾರ್ಮಿಕ ಕ್ಷೇತ್ರವನ್ನು ತೊರೆದು ಸಂಗಮನ ಪ್ರಶಾಂತವಾದ ಸನ್ನಿಧಾನದಲ್ಲಿ ತಮ್ಮ ಜೀವನದ ಕೊನೆಯನ್ನು ಕಂಡಿರಬಹುದು.

# ಧಾರ್ಮಿಕ ಲಿಂಗವಂತ ಘಟನಾ ಸಮಿತಿ

(ಲೇ - ಲಿಂಗನಗೌಡ ಪಾಟೀಲ, ಮು. ರಾಮದುರ್ಗ)

ooo●ooo

ನಮ್ಮ ಭಾರತ ದೇಶವು ಅತ್ಯಂತ ಪ್ರಾಚೀನ ಕಾಲದಿಂದ ಧರ್ಮದ ತವರಮನೆಯಾಗಿದೆ. ಅತ್ಯಂತ ಉಚ್ಚಮಟ್ಟದ ತತ್ವಜ್ಞಾನವು ಇಲ್ಲಿಯೇ ಉದಯವಾಗಿದೆ. ಜಗತ್ತಿನ ಎಲ್ಲ ಧರ್ಮಗಳು ಹಾಗು ಸಂಸ್ಕೃತಿಗಳು ಭಾರತದಿಂದಲೇ ಸ್ಫೂರ್ತಿ ಹೊಂದಿದೆಯೆಂದು ಸಿದ್ಧಮಾಡಿ ತೋರಿಸುವದಂಟಿಷ್ಟೇ ?

ಇಂಥ ಭಾರತದೇಶದಲ್ಲಿ ಲಿಂಗವಂತ ಧರ್ಮವು ಆದಿ, ಅನಾದಿಯಿಂದ ಇದೆ. ಅದು ಕಾಲ ಕಾಲಕ್ಕೆ ಅವಸ್ಥಾಂತರ ಹೊಂದುತ್ತಿದ್ದರೂ ಅದರ ಧ್ಯೇಯ ಅಚ್ಚಳಿಯದೆ ಉಳಿದಿದೆ. ಬಸವಾದಿ ಪ್ರಮಥರ ಕಾಲಕ್ಕೆ ಅದು ಪರಿಪೂರ್ಣವಾಗುವಂತೆ ಪಾಲಿಸಲ್ಪಟ್ಟಿತು. ವ್ಯಕ್ತಿಯ ಮೂಲಕ ಸಮಾಜ ಮತ್ತು ಸಮಾಜದ ಮೂಲಕ ವ್ಯಕ್ತಿಯು ವಿಕಾಸ ಹೊಂದಲು ಯೋಗ್ಯ ಅನುವು ಆಗ ದೊರೆತಿದ್ದಿತು. ಅನಂತರ ಅದು ಹಿಂದೆ ಬೀಳುತ್ತ ಪರಕೀಯರ ಆಘಾತಕ್ಕೆ ಸಿಲುಕಿ ತನ್ನ ವೈಶಿಷ್ಟ್ಯ ಹಾಗು ಆದರ್ಶವನ್ನು ಮರೆತು ಬಿಟ್ಟಿತು.

## ಆಧುನಿಕ ಯುಗದ ಸುಧಾರಣೆ

ಕಳೆದ ಅರ್ಧಶತಮಾನದಿಂದ ಲಿಂಗವಂತ ಸಮಾಜದಲ್ಲಿ ಸುಧಾರಣೆಗೆ ಮೊದಲಾಯಿತು. ಸಂಸ್ಕೃತ ಪಾಠಶಾಲೆಗಳು ಏರ್ಪಟ್ಟವು. ಅಯ್ಯನವರ ಮಕ್ಕಳು ಕಾಶಿಗೆ ಕಳಿಸಲ್ಪಟ್ಟು ಶಾಸ್ತ್ರಿಗಳಾಗಿ ಬರಹತ್ತಿದರು. ಬ್ರಾಹ್ಮಣರಲ್ಲಿ ಕಲಿತು ಬ್ರಾಹ್ಮಣ್ಯದ ಅನುಕರಣವನ್ನೇ ಅವರು ಮಾಡಿಬಂದವರಾದುದರಿಂದ ವೀರಶೈವರಲ್ಲಿ ಕೆಲವರು ಬ್ರಾಹ್ಮಣರೆಂದು ಅವರು ಸಾಧಿಸಿದುದರಲ್ಲಿ ಆಶ್ಚರ್ಯವೇನೂ ಇಲ್ಲ. ಇವರಿಂದ ಸಮಾಜಕ್ಕೆ ಒಂದು ಲಾಭವಾದದ್ದೆಂದರೆ ಲಗ್ನ, ಲಕ್ಷ್ಮಿಪೂಜೆ, ವಾಸ್ತುಪೂಜೆ ಜೋತಿಷ್ಯ ಹೇಳುವದು ಇಂಥ ಪ್ರಸಂಗಗಳಲ್ಲಿ ಬ್ರಾಹ್ಮಣರು ಅಗ್ರಸ್ಥಾನ ವಹಿಸುತ್ತಿದ್ದು

## ವಚನ ಗ್ರಂಥಗಳ ಪ್ರಕಾಶನ

ಅನಂತರದಲ್ಲಿ ವಚನ ಗ್ರಂಥಗಳು ಅಚ್ಚುಮಾಡಲ್ಪಟ್ಟವು. ಅವುಗಳ ತತ್ತ್ವ ಮತ್ತು ನೀತಿಬೋಧಗಳು ಜನರನ್ನು ಆಕರ್ಷಿಸಿದವು. ವಚನಗಳಲ್ಲಿ ತತ್ವಜ್ಞಾನವಿದೆಯೆಂದರೆ ಸಂಗೀತವೂ ಇದೆಎಂದು ಕೆಲವರು ಎತ್ತಿಕೊಂಡರು. ವಚನಗಳಲ್ಲಿ ಸುಧಾರಕ ವಿಚಾರಗಳಿವೆಯೆಂದರೆ ಶ್ರೇಷ್ಠ ಆರ್ಥಿಕ ರಚನೆಯೂ ಇದೆ ಎಂದು ಮತ್ತೆ ಕೆಲವರು ಅವುಗಳನ್ನು ಸ್ವಾಗತಿಸಲು ಮುಂದೆಬಂದರು. ಶಿವಾನುಭವ ಮಾಸಪತ್ರಿಕೆ ಹೊರಟಿತು. ವೀರಶೈವ ಮಹಾ ಸಭೆ ಕರೆದದ್ದಾಯಿತು. ವೀರಶೈವರ ವೈಶಿಷ್ಟ್ಯದ ಊಹಾಪೋಹಗಳು ಕೆಲವೊಂದ ಘರ್ಷಣೆಗಳೂ ನಡೆದರೂ ಜನರಲ್ಲಿ ವಚನ ಬಗ್ಗೆ ಎಷ್ಟೋ ಜಾಗೃತಿಯಾಯಿತು ಇಲ್ಲಿಯವರೆಗೆ ನಂದಿಧ್ವಜ ವ್ಯಾಸನ ತೋಳು ಮೆರೆಯಿಸುವದರಲ್ಲಿಯೇ ಅಭಿಮಾನ ಆನಂದ ಪಡುತ್ತಿದ್ದ ಲಿಂಗವಂತರ ಈ ಶರಣರ ವಚನ ಪ್ರಸಾರ ಮಾಡುವದರಲ್ಲಿ ತೊಡಗಿದರು. ಅಯ್ಯನವರಿಗೆ ಊಟ ದಕ್ಷಿಣೆ ಕೊಟ್ಟರೆ ಧರ್ಮಾಚಾರವಾಯಿತೆಂಬ ಕಲ್ಪನೆಯು ವಿಕಾಸವಾಗಿ ವಿದ್ಯಾರ್ಥಿ ಭೋಜನಗೃಹ, ವಸತಿಗೃಹಗಳು ನಿರ್ಮಾಣಮಾಡಲ್ಪಟ್ಟು ವ್ಯಾಖ್ಯಾನಗಳನ್ನು ಮಾಡಿಸುವದೂ ನಡೆಯಿತು.

## ಶಿವಾನುಭವ ಸಂಘಸ್ಥಾಪನೆ

ಇದಾದ ಮೇಲೆ ಕಲ್ಯಾಣ ಪಟ್ಟಣದಲ್ಲಿ ಬಸವಾದಿ ಪ್ರಮಥರು ಶಿವಾನುಭವ ಮಂಟಪ ಏರ್ಪಡಿಸಿ ಪ್ರತಿದಿವಸ ಶಿವಾನುಭವಗೋಷ್ಠಿ ನಡೆಸುತ್ತಿದ್ದರೆಂದೂ ಅಲ್ಲಿ ಪ್ರತಿಯೊಂದು ಮಾತನ್ನು ಕೂಲಂಕಷ ವಿಚಾರಿಸಿ ಅನುಭವದ ಒರೆಗಲ್ಲಿಗೆ ತಿಕ್ಕಿ ಯೋಗ್ಯವಾದವುಗಳನ್ನು ಬರೆದಿಟ್ಟಿರುವರೆಂಬ ವಿಚಾರವೂ ಪ್ರಚಾರಗೊಂಡಿತು. ಅರ್ಚನೆ ಅರ್ಪಣೆಗಳು ಲಿಂಗವಂತರಿಗೆ ಹೇಗೆ ನಿತ್ಯಾವಶ್ಯಕತೆಯೆಂಬದು ಮನದಟ್ಟಾಯಿತು. ಅಂದಿನಿಂದ ಅಲ್ಲಲ್ಲಿ ಶಿವಾನುಭವಗೋಷ್ಠಿಗಳು ಜರುಗಿ ಅ. ಭಾ. ಶಿವಾನುಭವಗೋಷ್ಠಿಗಳು ಮುಖಪತ್ರವಾಗಿ ಒಂದು ಪತ್ರಿಕೆಯೂ ಹೊರಡುತ್ತಿದೆಯಲ್ಲದೆ ಪ್ರಚಾರ ಕಾರ್ಯವೂ ನಡೆದಿದೆ.

ಶಿವಾನುಭವ ಪ್ರಚಾರವು ಈ ರೀತಿನಡೆದಿರುವಾಗ ಒಂದು ಮಾತಿನ ಅಗತ್ಯವು ಪ್ರಚಾರಕರಿಗೆ ಹೊಳೆದಿರಬೇಕು ಅದೆಂದರೆ ಪ್ರಚಾರಕನು ಶಿಕ್ಷ

ರಿಗೆ ಅಷ್ಟಾವರಣಗಳೆಂದರೇನು. ಷಟ್‌ಸ್ಥಲದ ಏರ್ಪಾಡು ಹೇಗೆ ಶಿವಶ ರಣರ ಜೀವನ ಹೇಗೆ ಸಾಗಿತ್ತು ಎಂಬುದರ ಜ್ಞಾನ ಸ್ವಲ್ಪಾದರೂ ಇಲ್ಲ ದಿದ್ದರೆ ಅವರು ಕೇಳುವದೇನು ಹಾಗು ಅವರಿಗೆ ಹೇಳಬೇಕೇನು ? ಆದು ದರಿಂದ ಈ ಅಭಿರುಚಿ ಹುಟ್ಟಬೇಕಾದರೆ ಶಿವಾನುಭವದ ಅಭ್ಯಾಸವು ಲಿಂಗ ವಂತರೇ ಏಕೆ ಉಳಿದವರಲ್ಲಿಯೂ ನಡೆಯಬೇಕೆಂಬ ಉದ್ದೇಶದಿಂದ ಗದ ಗಿನಲ್ಲಿ ವೀರಶೈವ ವಿದ್ಯಾಪೀಠವೂ ಸ್ಥಾಪಿಸಲ್ಪಟ್ಟ ಆದರಿಂದ ಅಪೇಕ್ಷಿತ ಉದ್ದೇಶವು ಎಷ್ಟೋ ಮಟ್ಟಿಗೆ ಈಡೇರಿದೆಯೆಂದು ಹೇಳಬಹುದು.

## ಘಟನಾಸಮಿತಿಯು ಅಗತ್ಯವೇಕೆ?

ಸದ್ಯಕ್ಕೆ ನಮ್ಮ ಸಮಾಜವು ಈ ಹಂತಕ್ಕೆ ಬಂದು ಮುಟ್ಟಿದೆ. ಶರ ಣರ ವಚನಗಳು ಶ್ರೇಷ್ಠವಿರುತ್ತವೆ. ಅವುಗಳನ್ನು ಗಾಯಕರು ಸಂಗೀತ ರೂಪವಾಗಿ ಹಾಡಬಹುದು. ಸುಧಾರಕರು ಅವುಗಳನ್ನು ಉದಾಹರಿಸುತ್ತ ರಾಷ್ಟ್ರೀಯ ವಿಧಾಯಕ ಕಾರ್ಯದತ್ತ ಜನರ ಲಕ್ಷ ಸೆಳೆಯಬಹುದು, ಇಲ್ಲವೆ ಸರ್ವಧರ್ಮ ಸಮ್ಮೇಲನನೆರೆಯಿಸಿ ಅಲ್ಲಿಕೂಡ ವೀರಶೈವ ಧರ್ಮವು ಉಳಿದ ಧರ್ಮಗಳಂತೆಯೇ ಶ್ರೇಷ್ಠ ತತ್ವಗಳಿಂದ ಕೂಡಿದೆಯೆಂದು ತೋರಿ ಸಬಹುದು. ಅಥವಾ ಸ್ವಮತೀಯರಂತೆಯೇ ಪರಮತೀಯ ಲೇಖಕರು ಇವುಗಳ ಜನಪ್ರಿಯತೆಯ ರಹಸ್ಯವನ್ನು ಅರಿತವರಾಗಿ ಇವುಗಳನ್ನು ತುಲ ನಾತ್ಮಕ ದೃಷ್ಟಿಯಿಂದ ವಿವೇಚನೆಮಾಡಿ ಹೆಚ್ಚೆತ್ತಿಗೆ ಬರೆದು ಅವುಗಳ ಮೂಲಕ ಹೇರಳ ಹಣ ಸಂಪಾದಿಸಲೂ ಬಹುದು.

ಇಷ್ಟಾದರೆ ಲಿಂಗವಂತರ ಕಾರ್ಯ ಮುಗಿಯಿತೇ ? ಶಿವಾನುಭವ ಮಂಟ ಪಸ್ಥಾಪನೆಯ ಉದ್ದೇಶ ಈ ಡೇರಿತೆ? ಲಿಂಗವಂತ ಧರ್ಮದಲ್ಲಿ ನವಚೈತನ್ಯ ಬಂದಂತಾಯಿತೆ ? ಸಾಮಾನ್ಯ ಮನುಷ್ಯನ ಸರ್ವವಿಧ ವಿಕಾಸ ಸಾಧಿಸಿ ದಂತಾಯಿತೆ ? ಇಲ್ಲವೆಂದೇ ಹೇಳಬೇಕಾಗುತ್ತದೆ. ಇಷ್ಟೇ ಅಲ್ಲ ಇಲ್ಲಿಗೇನೇ ಈ ಕಾರ್ಯ ನಿಂತರೆ ಲಿಂಗವಂತ ಸಮಾಜದ ಮತ್ತು ತತ್ತ್ವಜ್ಞಾನದ ಸರ್ವತೋಮುಖ ಅವನತಿ ಪ್ರಾರಂಭವಾಯಿತೆಂದೇ ತಿಳಿಯಬೇಕಾಗುತ್ತದೆ.

ಏಕೆಂದರೆ ಶರಣರ ವಚನ ಓದಿದವರಿಗೆ ಒಂದು ಮಾತು ಸ್ಪಷ್ಟ ವಾಗಿ ಕಂಡುಬರುತ್ತದೆ. ಏನೆಂದರೆ: – "ನಾವುರಚಿಸಿದ ವಚನಗಳನ್ನೇ ಶರಣ ಸಂತತಿಯು ಚಾಚೂ ತಪ್ಪದೆ ಪಾಲಿಸಲಿ, ಅವರೇನೂ ಶಿವಾನುಭವ

ಗೋಷ್ಠಿ ನಡೆಯಿಸಬೇಕಿಲ್ಲ" ಎಂಬುದಾಗಿ ಬಸವಾದಿ ಪ್ರಮಥರ ಉದ್ದೇಶ ವಿರಲಿಲ್ಲ. ಒಂದು ವಚನದಲ್ಲಿ ಅವರು ಹೇಳುವದೇನೆಂದರೆ:— ಆಚಾರ ವಿಚಾರ ತಪ್ಪಿದಲ್ಲಿ ಶರಣರವಾದದದಲ್ಲದೆ ಇನ್ನೊಂದರಲ್ಲಿಲ್ಲ. ಶರಣರವಾದ ಮೋಕ್ಷದನಾಡು, ಶರಣರವಾದ ಮುಕ್ತಿಯಬೀಡು ಶರಣರವಾದ ಕಾಳ ಲಿಂಗದೇವನು ಮಾಡಿದ ಮಾಯೆಯ ಕೇಡು" ಕಾಲಕಾಲಕ್ಕೆ ಶಿವಾನುಭವಗೋಷ್ಠಿ ನಡೆದು ಕಾಲಕಾಲದ ಸಮಸ್ಯೆಗಳು ಆಯಾಕಾಲದವರಿಂದಲೇ ಬಿಡಿಸಲ್ಪಟ್ಟಾಗ ಮಾತ್ರ ಶಿವಾನುಭವದ ಸಾರ್ಥಕ್ಯವಾದಂತಾಗುವದು. ಹಡಪದ ಅಪ್ಪಣ್ಣ ಎಂಬ ಶರಣರು ಇದೇ ಮಾತನ್ನು ನಿಚ್ಚಳವಾಗಿ ಹೇಳುತ್ತಾರೆ.

|| ಪುರಾತನರು ಪುರಾತನರು ಎಂದು ಪುರಾಣದೊಳಗಣ ಕಥೆಯನ್ನೇ ಕಲಿತುಕೊಂಡು....ಅಂದು ಹೋದವರು ಇಂದು ಬಂದವರು ಒಂದೇ ಎಂದರಿದ ಭಕ್ತರ ಆಚರಣೆಯು ಘೋರ ಬದುಕಿಸಯ್ಯ ಬಸವಪ್ರಿಯ ಕೂಡಲ ಚನ್ನ ಬಸವಣ್ಣ ॥ ನಾವು ಲಿಂಗವಂತರು ಹೊತ್ತಿಗೆ ಗುಲಾಮರಾಗಬಾರದೆಂಬುದೇ ಬಸವಾದಿ ಪ್ರಮಥರ ಉದ್ದೇಶವಾಗಿದ್ದಿತು. ನಮ್ಮ ಅನುಭವವೇ ನಮ್ಮ ಪ್ರಮಾಣವಾಗಿರಬೇಕು. ವಚನ ಗ್ರಂಥಗಳಾಗಲಿ ಬೇರೆ ಯಾವದೇ ಧರ್ಮ ಗ್ರಂಥಗಳಾಗಲಿ ಸಾಧನ ಸಹಾಯಕಗಳಾಗಬಹುದು. ಆದರೆ ನಮ್ಮ ಅನುಭವದ ಒರೆಗಲ್ಲೂ ಬಸವಾದಿ ಪ್ರಮಥರ ಕಾಲದ ಒರೆಗಲ್ಲಿನಷ್ಟೇ ಚುರುಕಾಗಿರಬೇಕು ಎಂಬುದೇ ಆ ಪ್ರಮಥರ ಉದ್ದೇಶವಿದ್ದಿತು. ಹೀಗೆಂದ ಮಾತ್ರಕ್ಕೆ ತಪ್ಪು ತಿಳುವಳಿಕೆಗೂ ಆಸ್ಪದವಾಗಬಾರದು. ಈಗಿನ ಭಕ್ತರು ಬಸವಾದಿಗಳಷ್ಟೇ ಯೋಗ್ಯತೆಯವರು ಈಗಿನ ವಿರಕ್ತರು ಪ್ರಭುದೇವರಷ್ಟೇ ಯೋಗ್ಯತಾ ಸಂಪನ್ನರು ಎಂಬುದನ್ನು ಸಾಧಿಸಲು ಹೊರಟಿರುವೆವೆಂದು ಯಾರೂ ತಿಳಿಯಬೇಕಿಲ್ಲ. ಆದರೆ ಬಸವಾದಿ ಪ್ರಮಥರು ಯಾವ ರಚನೆ ನಿಷ್ಠೆಯಿಂದ ತಮ್ಮ ಕಾಲದ ಸಮಸ್ಯೆಗಳನ್ನು ಎದುರಿಸಿ ಶಿವಾನುಭವ ಗಂಗೆಯನ್ನು ಧಾಣಿ ಡಂಗುರವಾಗಿ ಹರಿಯುವಂತೆ ಮಾಡಿದರೋ ಅದೇ ನಮ್ಮ ಕಾಲದಲ್ಲೂ ನಮ್ಮ ಸಮಸ್ಯೆಗಳನ್ನು ನಮ್ಮಿಂದ ಪರಿಹರಿಸಿ ಮುಂದಕ್ಕೆ ಹರಿದು ಹೋಗುವಂತಾಗಬೇಕು. ಬ್ರಿಟನ್ ಜನಾಂಗವು ನೆಲ್ಸನ್ನನಿಂದ ಪ್ರಾಣಾರ್ಪಣದ ಪಾಠ ಕಲಿಯಬಹುದು. ಆದರೆ ನೆಲ್ಸನ್ನನ ಹಡಗದಲ್ಲಿಯೇ ಕುಳಿತು ಹಿಟ್ಲರನ ರಾಕೇಟ ಬಿಂಬ ಎದುರಿಸಬಹುದಿತ್ತೇ ? ಆದರಿಂದ ನೆಲ್ಸನ್ನನ ಸಾವೆ ಕಡಿಮೆ ಯೋಗ್ಯತೆಯದೆಂದು ತಿಳಿಯಕೂ

ತದು. ಆದರೆ ನೆಲ್ಸನ್ನನ ಕಾಲದ ನಿಷ್ಠೆ ಕಾಲಕ್ಕೆ ತಕ್ಕಂತೆ ಬ್ರಿಟನ್ ಜನಾಂಗದಲ್ಲಿ ಜಾಗ್ರತವಾಗಿದೆಯೆಂದೇ ತಿಳಿಯಬೇಕು.

## ಘಟನಾ ಸಮಿತಿಯ ರಚನೆ

ಈ ಉದ್ದೇಶದಿಂದ ಶಿವಾನುಭವಿಗಳು ಘಟನಾಸಮಿತಿ ನೆರೆಯುವಂತಾಗಬೇಕು. ಅಂದರೆ ಅನಾದಿಕಾಲದಿಂದ ಬಂದ ಲಿಂಗವಂತರು ಪರಂಪ ಅಭ್ಯಾಸಮಾಡಿ ಸದ್ಯದ ಪರಿಸ್ಥಿತಿ ಸೂಕ್ಷ್ಮಾವಲೋಕನ ಮಾಡಿ ಅವಶ್ಯ ಕಂಡಲ್ಲಿ ಯೋಗ್ಯ ಮಾರ್ಪಾಡುಗಳನ್ನು ಮಾಡಿ ಸರ್ವಮಾನ್ಯವಾಗುವ ಧಾರ್ಮಿಕ ಘಟನೆಯನ್ನು ನಿರ್ಮಿಸಲು ಶಿವಾನುಭವಿಗಳ ಘಟನಾಸಮಿತಿ ಸೇರಬೇಕು. ಕಾಲಚಕ್ರವು ಉರುಳಿದಂತೆ ನಮ್ಮ ಸದ್ಯದ ಸಮಾಜದಲ್ಲಿ ಬೇರೆಯವರ ಅನೇಕ ರೀತಿನೀತಿ ಬಂದುಕೂಡಿವೆ. ಸ್ವಚ್ಛ ಶರಣಧರ್ಮವನ್ನು ಪಾಲಿಸಲಾರದಷ್ಟು ನಾವು ವ್ಯತ್ಯಾಸವಾಗಿದ್ದೇವೆ. ಇಂಥಕಾಲದಲ್ಲಿ ನಮ್ಮ ಆದಿಯೇನು ನಮ್ಮ ಧರ್ಮಗ್ರಂಥಗಳು ಯಾವವಿರಬೇಕು, ಯಾವ ತತ್ತ್ವವನ್ನು ಯಾವರೀತಿಯಿಂದ ಪಾಲಿಸಬೇಕು, ನಮ್ಮ ಸಮಾಜರಚನೆಯಲ್ಲಿ ಯಾವ ಯಾವ ಮಾರ್ಪಾಡುಗಳಾಗಬೇಕು. ಪರಮತೀಯರೊಡನೆ ನಮ್ಮ ಸಂಬಂಧ ಹೇಗಿಟ್ಟುಕೊಂಡರೆ ಧರ್ಮಾಚರಣೆಗೆ ಸಹಾಯವಾದೀತು ಇವೇ ಮೊದಲಾದವನ್ನು ಚರ್ಚಿಸಿ ಅಧಿಕೃತಗೊಳಿಸಲು ಘಟನಾಸಮಿತಿಬೇಕು.

ಪ್ರಾರಂಭದಲ್ಲಿ ಈ ಯೋಜನೆಯ ಅವಶ್ಯಕತೆಯನ್ನರಿತ ನಾಲ್ಕೆಂಟು ಜನ ಶಿವಾನುಭವಿಗಳು ಒಂದೆಡೆ ಕೂಡಿ ಪರಿಶೀಲಕ ಸಮಿತಿಯ ಕಾರ್ಯಮಾಡಬೇಕು. ಅನಂತರ ಬೇರೆ ಬೇರೆ ವಿಚಾರಸರಣಿಗಳ ತಜ್ಞರ ಒಂದು ತಾತ್ಪೂರ್ತಿಕ ಪ್ರಾತಿನಿಧಿಕ ಕಮಿಟಿ ಕರೆದು ಅದರ ಮುಂದೆ ಆ ವಿಚಾರ ಮಂಡಿಸಬೇಕು. ಅನಂತರ ಅದಕ್ಕಿಂತ ವಿಸ್ತೃತ ಕಮಿಟಿ ಕರೆದು ಒಂದು ಘಟನಾಸಮಿತಿ ರಚಿಸಲು ಅನುಕೂಲವಾಗುವದು. ಅದು ಲಿಂಗವಂತರಿಗಾಗಿ ಒಂದು ಘಟನೆಯ ನಿಯಮಾವಳಿ ಮಾಡಿಕೊಟ್ಟ ಮೇಲೆ ಅದೇ ಮೇರೆಗೆ ಕ್ರಮಶಃ ಕಾರ್ಯ ಮಾಡುತ್ತ ಹೋಗಲು ಅನುಕೂಲವಾಗುತ್ತದೆ.

ಭಗವಾನ ಬುದ್ಧದೇವನು ಕಾಲವಾದ ಮೇಲೆ ಭಾರತದಲ್ಲಿ ಬೌದ್ಧ ಧರ್ಮಕ್ಕೆ ಆಘಾತ ಉಂಟಾಗಲು ಬೌದ್ಧ [illegible]

ಕರೆದರು. ಅನಂತರ ಮತ್ತೆ ಮೂರುಸಾರೆ ಸಂಘ ನೆರೆಯಿಸಿ ಬೌದ್ಧಗ್ರಂಥ ರಚನೆಮಾಡಿದರು. ಆದರೆ ಬುದ್ಧನ ವಾಕ್ಯಕಳೇ ಪ್ರಮಾಣವೆಂದು ಅವರು ಇಂದು ಪುಸ್ತಕ ದಾಸರಾದರೋ ಅಂದು ಆಧಾರ ತಪ್ಪಿದವರಾಗಿ ಹಿಂದುಸ್ತಾನ ದಿಂದ ಹೊರದೂಡಲ್ಪಟ್ಟವರಾದರೂ ಆ ಪ್ರಸಂಗ ಇಂದಿಲ್ಲ ನಾಳೆ ನಮಗಾಗಿಯೇ ಕಾದು ನಿಂತಿದೆ. ಅದನ್ನು ಎದುರಿಸಬೇಕಾಗಿದ್ದರೆ ಈ ದಿಶೆಯಲ್ಲಿ ಕಾರ್ಯ ಪ್ರವೃತ್ತರಾಗುವದು ಯೋಗ್ಯವೋ ಹೇಗೆಂಬುದನ್ನು ಶಿವಾನುಭವಿಗಳೇ ನಿರ್ಧರಿಸಲಿ.

## ಘಟನಾ ಸಮಿತಿ ಕಾರ್ಯಕಾರಿಯಾಗಬಲ್ಲುದೇ ?

ಪ್ರಾಮಾಣಿಕ ರೀತಿಯಿಂದ ವಿಚಾರಿಸಿದಲ್ಲಿ ಇಂಥ ಒಂದು ಘಟನಾ ಸಮಿತಿ ನೆರೆಯುವದು ಅಗತ್ಯವೆಂದು ಕೆಲವರಿಗೆ ತೋರಿದರೂ ಇದು ಕಾರ್ಯ ಕಾರಿಯಾಗಬಲ್ಲುದೇ ಎಂಬ ಅನುಮಾನ ಧುತ್ತೆಂದು ನಿಲ್ಲಬಹುದು. ಮೊದ ಲಿಗೆ ಇಂಥಾ ಸಮಿತಿ ನೆರೆಯುವದೇ ಕಠಿಣ. ನೆರೆದರೂ ಒಂದೊಂದು ವಿಚಾರ ಸರಣಿಯವರು ತಮ್ಮ ತಮ್ಮ ವಿಚಾರ ಕುದುರೆಗಳನ್ನೇ ಮುಂದೆ ಮಾಡಿ, ಗುಲ್ಲು ಧೂಳು ಎಬ್ಬಿಸಿ ಅವಹೇಳನಕ್ಕೆ ಒಳಗಾಗಬಹುದು. ಒಂದು ವೇಳೆ ಹೀಗಾಗದೆ ನಿಯಮಾವಳಿರಚಿಸಿದರೂ ಅದರಂತೆ ನಡೆಯಲು ಯಾವ ಭಕ್ತ ಮಾಹೇಶ್ವರರು ಸಿದ್ಧರಾಗಬಹುದು ? ಇದು ತೊಂದರೆಯಿಂದ ಹೆಚ್ಚಿನ ತೊಂದರೆಗೆ ಎಳೆದೊಯ್ಯಬಹುದಲ್ಲ ಎಂಬ ಶಂಕೆ ಉದ್ಭವಿಸುವದು ಸಹಜ. ಸಧ್ಯದ ಸಮಾಜದ ನಾಡಿ ನೋಡಿದರೆ ಮೇಲಿನ ಶಂಕೆಗಳು ಒಂದು ವೇಳೆ ಸತ್ಯವಾಗಿ ಪರಿಣಮಿಸಲೂ ಬಹುದು. ಆದರೆ ಸುತ್ತಲಿನ ಗಂಡಾಂತರ ಪರಿಸ್ಥಿತಿ ನಮ್ಮ ಜನರ ಔದಾಸೀನ್ಯ ಪರಕೀಯರ ವಿಚಾರ ಪ್ರಚಾರಗಳ ಆಕ್ರಮಣ ನೋಡಿದಲ್ಲಿ ಕಳಕಳಿಯುಳ್ಳ ಕೆಲವರಿಗಾದರೂ ಈ ಯೋಜನೆ ಅಪರಿಹಾರ್ಯವೆಂದು ಅನಿಸದಿರದು. ಅಂಥ ಕಳಕಳಿಯ ಜನರು ಕೂಡಿ ತಮ್ಮಿಂದ ಸಾಧ್ಯವಾಗುವಷ್ಟೇ ಆಚಾರ ವಿಚಾರಗಳನ್ನು ನಿರ್ಧರಿಸಿಕೊಂಡು ಹೊರಟಲ್ಲಿ ಸ್ವಲ್ಪ ಕಾಲದಲ್ಲಿಯೇ ಅವರ ಸಂಖ್ಯೆಯೂ ಶಕ್ತಿಯೂ ಬೆಳೆ ಯುತ್ತ ಹೋಗುವದರಲ್ಲಿ ಸಂಶಯವಿಲ್ಲ. ಅನುಮಾನಕ್ಕಂಜಿದರೆ ಕಾಲಗರ್ಭ ದಲ್ಲಿ ಕರಗಿಹೋಗಲಿಕ್ಕಿಲ್ಲವೇ ?

ಆಗ ಅಲ್ಲಮಪ್ರಭುವು ಗೋರಕ್ಷನಾಥನಿಗೆ ಇದು ಸಿದ್ಧಿಯಲ್ಲ,ಮಾಯೆಯು ಚಿನ್ಹವು. ಇದೆಲ್ಲ ವ್ಯರ್ಥ ಶ್ರಮವು ಎಂತು ಹೇಳಿ– ನೀನು ಈ ಖಡ್ಗದಿಂದ ನನ್ನ ಶರೀರಕ್ಕೆ ಪ್ರಹಾರ ಮಾಡಿ ನೋಡು, ಅದು ಹೇಗಾಗುತ್ತದೆಂಬ ದನ್ನು ಪರೀಕ್ಷಿಸು, ಎಂದು ಹೇಳಿದನು. ಆಗ ಗೋರಕ್ಷನು ಅಲ್ಲಮನ ಸರ್ವ ಭಾಗದ ಮೇಲೆ ಅದನ್ನು ಪ್ರಯೋಗಿಸಲು ಆ ಖಡ್ಗಕ್ಕೆ ಅಲ್ಲಮನ ಅಂಗ ಸ್ಪರ್ಶವು ಸ್ವಲ್ಪಾದರೂ ಆಗಲಿಲ್ಲ. ಅದು ಆಕಾಶದಂತೆ ನಿರಾಕಾರ ವಾಗಿ ತೋರಿತು. ಇವನ್ನು ಗೋರಕ್ಷನು ನೋಡಿ ಬೆರಗಾದನು. ಕೂಡಲೇ ಖಡ್ಗವನ್ನು ಕೆಳಗೆ ಚೆಲ್ಲಿ ಪ್ರಭುವೇ ನನ್ನನ್ನು ಉದ್ಧರಿಸು ಎಂದು ಅವನಿಗೆ ಶರಣು ಹೋದನು. ಆಗ ಅಲ್ಲಮನು ಅವನನ್ನು ತನ್ನ ಕೈಯಿಂದ ಹಿಡಿದೆಬ್ಬಿಸಿ ಗೋರಕ್ಷನಿಗೆ ತನ್ನ ಹಸ್ತ ಸ್ಪರ್ಶ ಮಾಡಿದನು. ಆಗ ಅವನಲ್ಲಿ ಶಿವಜ್ಞಾನಾನುಭವವು ಕೂಡಲೇ ಅಂಕುರಿಸಿತು. ಆಗ ಅಲ್ಲಮಪ್ರಭುವು ಅವನಿಗೆ ಲಿಂಗಬೋಧೆಯನ್ನು ಮಾಡಿ ವೀರಶೈವ ದೀಕ್ಷೆ ಯನ್ನು ಅವನಿಗೆ ದಯಪಾಲಿಸಿದನು. ಆ ಮೇಲೆ ಅಲ್ಲಮಪ್ರಭುವು ಗೋರಕ್ಷನಾಥನ ಅಪ್ಪಣೆಯನ್ನು ತೆಗೆದುಕೊಂಡು ಮುಂದೆ ತೆರಳಿದನು.

## ಬೇಡರನ್ನು ಕಂಡದ್ದು.

ಮುಂದೆ ಅವನು ಪಾತಾಳ ಗಂಗೆಯಲ್ಲಿ ಹರಿಯುತ್ತಿದ್ದ ಮಂಗಳ ಪ್ರದವಾದ ನದಿಯನ್ನು ಕಂಡನು. ಅದು ಮನೋಹರವಾದ ಸ್ಥಾನವಾಗಿತ್ತು. ಅವನು ಅಲ್ಲಿ ವಿಶ್ರಮಿಸಿ ಮುಂದೆ ಮುಂದೆ ಸಾಗುತ್ತ ಹೋಗುತ್ತಿರಲು ಒಂದು ವಿಶಾಲವಾದ ಅರಣ್ಯವನ್ನು ಕಂಡನು. ಅದರಲ್ಲಿ ಬೇಡರ ಒಂದು ತಂಡವು ವಾಸಮಾಡುತ್ತಿದ್ದು ಅದರಲ್ಲಿಯ ಬೇಡರು ಯಾವಾಗಲೂ ಪ್ರಾಣಿಗಳನ್ನು ಕೊಂದು ಅವುಗಳ ಮೇಲೆ ಉಪಜೀವನ ಸಾಗಿಸುತ್ತಿದ್ದು ದನ್ನು ಕಂಡನು.

ರಾಕ್ಷಸರಂಥ ಈ ಕ್ರೂರ ಸ್ವಭಾವದ ಬೇಡರನ್ನು ಅಲ್ಲಮಪ್ರಭುವು ನೋಡಿ ಅವನ ಮನಸ್ಸಿನಲ್ಲಿ ಈ ವರೆಗೆ ಇವರು ಎಷ್ಟು ಜೀವ ಹಿಂಸೆ ಮಾಡಿರಬಹುದು ? ಇವರನ್ನು ನಾನು ಕಣ್ಣಿನಿಂದ ನೋಡಿ ಹಾಗೆಯೇ ಬಿಟ್ಟು ಹೋಗುವದು ಯೋಗ್ಯವಾದುದಲ್ಲ, ಎಂದು ಚಿಂತಿಸಿ ಅವನು ದಯಾರ್ದ್ರ ಹೃದಯನಾಗಿ ಅವರಿಗೆ– ಎಲೈ ಬೇಡರೇ ನಿಮ್ಮಲ್ಲಿರುವ ಕ್ರೂರವಾದ ಇಂದ್ರಿಯಗಳ ಬೇಟೆಯಾಡಬೇಕು. ಇದನ್ನು ಬಿಟ್ಟು ನೀವು ನಿರುಪದ್ರವ ಪ್ರಾಣಿಗಳ ಬೇಟೆಯನ್ನಾಡಿ, ಜೀವ ಹಿಂಸೆ ಮಾಡುತಿರುವಿರಿ ?

ಇದು ಪಾಪಕರವು. ಇದನ್ನು ಬಿಟ್ಟು ಕಲ್ಯಾಣಕರವಾದ ಕಾರ್ಯಗಳನ್ನು ಮಾಡಿರಿ, ಎಂದು ಅನೇಕ ರೀತಿಯಿಂದ ಅವರಿಗೆ ಬೋಧಿಸಿದನು. ಹೀಗೆ ವರ್ತಿಸಿದಲ್ಲಿ ನಿಮ್ಮ ಸರ್ವಪಾಪಗಳು ನಾಶವಾಗುವವು ದೇಹವು ಪವಿತ್ರ ವಾಗುವದು, ಎಂದು ಹೇಳಲು ಅವರು ತಮ್ಮ ಖಡ್ಗಗಳನ್ನು ನೆಲಕ್ಕೆಚಲ್ಲಿ ಅನನ್ಯಭಕ್ತಿಯಿಂದ ಅಲ್ಲಮಪ್ರಭುವಿನ ಶಿಷ್ಯತ್ವವನ್ನು ಸ್ವೀಕರಿಸಿದರು.

ಮುಂದೆ ಅಲ್ಲಮಪ್ರಭುವು ಶ್ರೀಗಿರಿಯಿಂದ ಇಳಿದು ಮುಂದೆ ಸಾಗಿದನು. ಅವನಿಗೆ ಮಾರ್ಗದಲ್ಲಿ ವಿಷಯಾಂಧರಾದ ವಿಲಾಸೀ ಪುರುಷರು, ಆಗಿಂದಾಗ್ಗೆ ಭೆಟ್ಟಿಯಾಗುತ್ತಿದ್ದರು. ಅವರು ಅಲ್ಲಮಪ್ರಭುವಿನ ದರ್ಶನದಿಂದ ವಿವೇಕಿಗಳಾಗಿ ತಮಗೆ ಮೋಕ್ಷ ಮಾರ್ಗವನ್ನು ಬೋಧಿಸಿ ತಮ್ಮನ್ನು ಉದ್ಧರಿಸಬೇಕೆಂದು ಅವನನ್ನು ಪ್ರಾರ್ಥಿಸುತ್ತರು. ಅಲ್ಲಮಪ್ರಭು ಅವರಿಗೆ ಅಂತಃಕುಂಡಲಿನೀ ಶಕ್ತಿಯ ರೀತಿಯನ್ನು ತಿಳಿಸಿ ಅವರ ಮನಸ್ಸಿನಲ್ಲಿ ವಿರಕ್ತಿಯನ್ನು ಹುಟ್ಟಿಸುವನು. ಇದರಿಂದ ಅವರನ್ನು ಪರಮಾನಂದಗೊಳಿಸುತ್ತಿದ್ದನು.

ಅವನು ಹಾಗೆಯೇ ಅನೇಕ ಸಿದ್ಧರಿಗೆ ಅವರವರ ಇಚ್ಛಾನುಸಾರವಾಗಿ ಸಿದ್ಧಿಗಳ ಮಾರ್ಗಗಳನ್ನು ಉಪದೇಶಿಸಿ ಅವುಗಳಿಗಿಂತಲೂ ಶ್ರೇಷ್ಠವಾಗಿ ಲಿಂಗಾಂಗ ಸಾಮರಸ್ಯ ಜ್ಞಾನವು ಹೆಚ್ಚಿನದೆಂದು ಅವರಿಗೆ ತೋರಿಸುತ್ತ ಮುಂದೆ ಸಾಗುವನು. ಇದರಿಂದಲೇ ಅವನ ಖ್ಯಾತಿಯು ಎಲ್ಲ ಕಡೆಗೂ ಹಬ್ಬುತ್ತಲೇ ನಡೆಯಿತು.

## ಮುನಿಗಳಿಗೆ ಉಪದೇಶ

ಹೀಗೆ ಅಲ್ಲಮಪ್ರಭುವು ಸಂಚರಿಸುತ್ತ ಹೋಗುತ್ತಿರುವಲ್ಲಿ ಮಾರ್ಗದಲ್ಲಿ ಒಂದು ವನವನ್ನು ಕಂಡನು. ಅದರಲ್ಲಿ ಅನೇಕ ಮುನಿಗಳು ಇರುವದನ್ನು ಕಂಡನು. ಅವರಲ್ಲಿ ಸತ್ಯಸಂಧರಾದ ನಿತ್ಯ ನೈಮಿತ್ತಿಕ ಕಾರ್ಯಗಳನ್ನು ಯಥಾವಿಧಿ ಮಾಡುತ್ತಿರುವ ಅನೇಕ ಮುನೀಶ್ವರರು ಗುಡಿಸಲಗಳನ್ನು ಕಟ್ಟಿಕೊಂಡು ಇರುತ್ತಿದ್ದದನ್ನು ಕಂಡನು. ಅವರು ಅಲ್ಲಿ ನಿಶ್ಚಲ ಮನಸ್ಸಿನಿಂದ ತಪಶ್ಚರ್ಯವನ್ನು ಆಚರಿಸುತ್ತ ಕುಳಿತಿರುವರು. ಅಲ್ಲಮಪ್ರಭುವು ಅವರ ರಮಣೀಯವಾದ ಈ ತಪೋವನವನ್ನು ನೋಡಿ ತನ್ನೊಳಗೆ ಅಕಟಕಟ, ಈ ಜನರು ಎಷ್ಟು ಪ್ರಯಾಸಕರವಾದ ಕಾರ್ಯಗಳನ್ನು ಮಾಡುತ್ತಿದ್ದಾರೆ. ಅವುಗಳ ಮಾಡುವಿಕೆಯಿಂದ ಅವರಿಗೆ ಫಲಪ್ರಾಪ್ತಿಯಾದರೂ ಎಷ್ಟು

ಸ್ವಲ್ಪ ! ಆದರೆ ಇಷ್ಟೊಂದು ಕಠುತರವಾದ ತಪಸ್ಸಿನಿಂದ ಇವರಿಗೆ ಲಭಿಸುವ ಏನು ? ಅವರಿಗೆ ಸ್ವರ್ಗ ಸುಖವು ಮಾತ್ರ ಪ್ರಾಪ್ತವಾಗುವದು. ಈ ಸುಖಕ್ಕೆ ಕಾರಣವಾದ ಪುಣ್ಯ ಕರ್ಮವು, ತೀರಿದ ಬಳಿಕ ಅವರು ಪುನ: ಭೂಮಿಯಲ್ಲಿ ಬಂದು ಹುಟ್ಟುವರು. ಇವರಿಗೆ ತತ್ವೋಪದೇಶಮಾಡಿ ಅವರನ್ನು ಶಾಶ್ವತವಾಗಿ ಉದ್ಧರಿಸಬೇಕು. ಹೀಗೆ ಅಲ್ಲಮ ಪ್ರಭುವು ಮನಸ್ಸಿನಲ್ಲಿ ಯೋಚಿಸಿ ಆ ಮುನೀಶ್ವರರನ್ನು ಕುರಿತು ಎಲೈ ಮುನಿಗಳೇ ನೀವು ಮಾಡುವ ಕರ್ಮಗಳಿಗೆ ಅಂತ್ಯವಿಲ್ಲ. ಅವುಗಳ ಫಲಪ್ರಾಪ್ತಿಗಾಗಿ ನೀವು ಬಹು ಶ್ರಮ ಪಡುತ್ತೀರಿ. ನೀವು ಅವುಗಳನ್ನು ಬಿಟ್ಟು ಶಿವಾನುಭವದ ಜ್ಞಾನವನ್ನು ಹೊಂದಿ ಲಿಂಗಪೂಜಾ ಲಿಂಗಜ್ಞಾನಗಳನ್ನು ಹೊಂದಬೇಕು. ನೀವು ಯಜ್ಞಾದಿ ಕರ್ಮಗಳನ್ನು ಮಾಡುತ್ತೀರಿ. ಅವುಗಳಿಂದ ಹಿಂಸೆ ಉಂಟಾಗುತ್ತದೆ. ಅವುಗಳನ್ನು ನೀವು ಸಂಪೂರ್ಣವಾಗಿ ಬಿಡಬೇಕು. ಅವುಗಳ ಬದಲು ನೀವು ಅಂತರ್ಯ ಯಜ್ಞವನ್ನು ಮಾಡಿ ಪುನೀತರಾಗಬೇಕು. ಈ ಯಜ್ಞದಲ್ಲಿ ಅಹಂಕಾರವೇ ಪಶು, ಮನವೇ ವಧಸ್ತಂಭ, ವಿಜ್ಞಾನವೇ ಅಗ್ನಿ, ಆತ್ಮನೇ ಯಜಮಾನ, ಎಂದು ಭಾವಿಸಿ ಲಿಂಗಾನುಭವವನ್ನು ತಿಳಿದುಕೊಳ್ಳಬೇಕು. ಆಗ ಮುನಿಗಳಿಗೆ ಶಿವತತ್ವವು ಗೋಚರಿಸಿತು. ಆಗ ಅವರು ಶಿವದೀಕ್ಷೆಯನ್ನು ಹೊಂದುವವರಾದರು.

## ದಕ್ಷಿಣ ದೇಶದಲ್ಲಿ ಪ್ರವಾಸ

ಮುಂದೆ ಅಲ್ಲಮಪ್ರಭುವು ದಕ್ಷಿಣ ದೇಶಗಳ ಕಡೆಗೆ ಹೋಗಿ ಪೊನ್ನಂಬಲ ನಾಡಿನ ದರ್ಶನವನ್ನು ಹೊಂದಿದನು. ಅಲ್ಲಿದ್ದ ಮಹಾನುಭಾವರೊಡನೆ ಶಿವಾನುಭವ ಸದ್ಗೋಷ್ಠಿಗಳನ್ನು ನಡಿಸಿದನು.

ಹೀಗೆ ಅವರಿಗೆ ಲಿಂಗಮಾರ್ಗದ ರೀತಿಯನ್ನು ತಿಳಿಸಿ ಪೂರ್ವ ಸಮುದ್ರ ದಂಡೆಗುಂಟ ಪ್ರವಾಸ ಮಾಡುತ್ತ ರಾಮೇಶ್ವರ ವರೆಗೆ ಹೋದನು. ಅಲ್ಲಿ ಶಿವಾನುಭವ ಪ್ರಸಂಗಗಳನ್ನು ಮಾಡಿ ಅಲ್ಲಿದ್ದ ದಕ್ಷಿಣ ಸಮುದ್ರವನ್ನು ನಿರೀಕ್ಷಿಸಿ, ಪಶ್ಚಿಮ ಸಮುದ್ರದತ್ತ ಹೊರಳಿದನು. ಅದರ ದಂಡೆಯಗುಂಟ ಪ್ರವಾಸ ಮಾಡುತ್ತ ಮಹಾಬಲೇಶ್ವರನ ಸ್ಥಾನವಾದ ಗೋಕರ್ಣಕ್ಕೆ ಬಂದನು. ಅಲ್ಲಿದ್ದ ಪುಣ್ಯಸ್ಥಳಗಳನ್ನು ನಿರೀಕ್ಷಿಸಿ ಉತ್ತರ ದೇಶದಲ್ಲಿದ್ದ ಸೌರಾಷ್ಟ್ರ ಸೋಮನಾಥನ ಕ್ಷೇತ್ರವನ್ನು ನೋಡಿದನು. ಅಲ್ಲಿ ಬಹುಜನರು ಅಲ್ಲಮ ಪ್ರಭುವಿನ ಖ್ಯಾತಿಯನ್ನು ಕೇಳಿದವರಾದ್ದರಿಂದ ಅವರು ಅವನನ್ನು ಇದಿರ್ಗೊಂಡು ಸನ್ಮಾನಿಸಿದರು.

## ಉತ್ತರ ದೇಶದಲ್ಲಿ ಪ್ರವಾಸ

ಅಲ್ಲಮ ಪ್ರಭುವು ಅವರ ಭಕ್ತಿಯನ್ನು ಕೈಕೊಂಡು ಉತ್ತರ ದಿಗ್ಭಾಗಕ್ಕೆ ಹೊರಟು ಅನೇಕ ಪುಣ್ಯ ಕ್ಷೇತ್ರಗಳನ್ನು ನಿರೀಕ್ಷಿಸುತ್ತ ನಿರ್ಮಲ ಗಂಗಾ ನದಿಗೆ ಬಂದು ಅಲ್ಲಿ ಸ್ನಾನ ಮಾಡಿ ಅಲ್ಲಿದ್ದ ಅನೇಕ ಪುಣ್ಯ ಸ್ಥಳಗಳನ್ನು ಸಂದರ್ಶಿಸಿದನು. ಮುಂದೆ ಅವನು ಇನ್ನೂ ಉತ್ತರಕ್ಕೆ ತೆರಳಿ ಹಿಮಾಲಯ ಪ್ರದೇಶವನ್ನು ಪ್ರವೇಶಿಸಿದನು.

ಅಲ್ಲಿದ್ದ ಅತ್ಯಂತ ಪುಣ್ಯ ಸ್ಥಳವಾದ ಕೇದಾರ ದೇವಸ್ಥಾನವನ್ನು ನಿರೀಕ್ಷಿಸಿದನು. ಅಲ್ಲಿಯ ಉತ್ಕಟವಾದ ಹಿಮವನ್ನು ಗೆಲಿದು ಅಲ್ಲಿ ಒಂದು ಮಹೋತ್ತರವಾದ ಗುಹೆಯು ಇರುವದನ್ನು ಕಂಡು ಅಲ್ಲಿ ಪದ್ಮಾಸನ ಹಾಕಿಕೊಂಡು ಏಕಾಗ್ರ ಚಿತ್ತವುಳ್ಳವನಾಗಿ ಲಿಂಗದಲ್ಲಿ ಸಮರಸ ಭಾವದಿಂದ ನಿರ್ಭಾವ ಪದದಲ್ಲಿ ನಿಂದು ನಿಶ್ಶೂನ್ಯವನ್ನು ನಿರೀಕ್ಷಿಸುತ್ತ ನಿಜ ಸಮಾಧಿಯಲ್ಲಿ ಕೆಲಕಾಲ ಕಳೆದನು. ಹೀಗೆ ಅಲ್ಲಿ ಕೆಲಕಾಲವಿದ್ದು ಕಲ್ಯಾಣ ಪಟ್ಟಣಕ್ಕೆ ತಿರುಗಿ ಹೋಗಬೇಕೆಂದು ಮರಳಿ ಹೊರಟನು. ಅವನು ಪ್ರವಾಸ ಮಾಡುತ್ತ ಮಾಡುತ್ತ ಕೆಲವು ದಿವಸಗಳಲ್ಲಿ ಕಲ್ಯಾಣ ಪಟ್ಟಣವನ್ನು ಮುಟ್ಟುವವನಾದನು.

## ಅಲ್ಲಮ ಪ್ರಭುವಿನ ದೇವಾಲಯಗಳು.

ಅಲ್ಲಮ ಪ್ರಭುವು ಪ್ರವಾಸ ಮಾಡಿದ ಸ್ಥಳಗಳಲ್ಲಿ ದೇವಾಲಯಗಳು ಕೆಲವು ಕಡೆಗೆ ಮಾತ್ರ ಆಗಿರುತ್ತವೆ. ಬನವಾಸಿಯಲ್ಲಿ ಆತನ ಹೆಸರಿನ ಒಂದು ದೇವಾಲಯವಿರುತ್ತದೆ. ಬೇರೆ ಕಡೆಗೆ ಸಹ ಅವನ ದೇವಾಲಯಗಳು ಇದ್ದುದು ತಿಳಿದುಬರುತ್ತದೆ. ಆದರೆ ಅಲ್ಲಮ ಪ್ರಭುವಿನ ತರುವಾಯ ಶೂನ್ಯ ಸಿಂಹಾಸನವನ್ನೇರಿದ ಅನೇಕ ಸ್ವಾಮಿಗಳು ಪ್ರಸಿದ್ಧರಾಗಿದ್ದಾರೆ. ಅವರಿಗೂ ಕೂಡ ಪ್ರಭು ಎಂದು ಕರೆಯುವ ವಾಡಿಕೆ ಇತ್ತು. ಅಂಥವರ ದೇವಾಲಯಗಳಿಗೂ ಪ್ರಭುದೇವರ ಗುಡಿಗಳೆಂದು ಹೇಳುವ ರೂಢಿಯು ಇರುತ್ತದೆ. ಆದರೆ ಅವು ಅಲ್ಲಮ ಪ್ರಭುವಿನ ದೇವಾಲಯಗಳೆಂದು ಹೇಳಲಿಕ್ಕೆ ಬರಲಾರದು. ಒಟ್ಟಾರೆ ಪ್ರಭುವಿನ ದೇವಾಲಯಗಳು ಕೆಲವು ಇವೆಯೇ ಹೊರತು ಅವುಗಳ ಸಂಖ್ಯೆಯು ಹೆಚ್ಚಿಗಿರುವದಿಲ್ಲ.

## ಶೂನ್ಯ ಸಿಂಹಾಸನದ ಸ್ಥಾಪನೆ.

ಅಲ್ಲಮ ಪ್ರಭುವು ಪ್ರವಾಸ ಮಾಡುವಲ್ಲಿ ಅವನಿಗಾದ ಸತ್ಕಾರಗಳ ವಾರ್ತೆಗಳು ಕಲ್ಯಾಣ ಪಟ್ಟಣಕ್ಕೆ ಆಗಿಂದಾಗ್ಗೆ ಬಂದು ತಲ್ಪುತ್ತಿದ್ದವು. ಆಗ ಬಸವೇಶ್ವರನೂ ಶಿವಶರಣರೂ ಆನಂದಪಟ್ಟು ಅವನಿಗಾಗಿ ಒಂದು ಶೂನ್ಯ ಸಿಂಹಾಸನವನ್ನು ವಿರಚಿಸಿ ಅಲ್ಲಮ ಪ್ರಭುವಿನನ್ನು ಅದರ ಮೇಲೆ ಆರೂಢಗೊಳಿಸಿ ಅವನನ್ನು ಜಗದ್ಗುರುವನ್ನಾಗಿ ಮಾಡಬೇಕೆಂದು ನಿರ್ಧರಿಸಿದ ಹಾಗೆ ಕಂಡು ಬರುತ್ತದೆ. ಆ ಪ್ರಕಾರ ಶಿವಶರಣರು ಅಲ್ಲಮಪ್ರಭುವು ಕಲ್ಯಾಣಕ್ಕೆ ಬರುವದಕ್ಕಿಂತ ಮೊದಲು ಇಂಥ ಒಂದು ಸಿಂಹಾಸನವನ್ನು ರಚಿಸಿದ್ದರು. ಅದು ಷಟ್‌ಸ್ಥಲ ತತ್ವಗಳನ್ನು ಉದಹರಿಸುವಂತೆ ಅದರ ರಚನೆಯಾಗಿದ್ದಿತು. ಈ ಪ್ರಕಾರ ಶಿವಶರಣರು ಒಂದು ಶೂನ್ಯ ಸಿಂಹಾಸನವನ್ನು ರಚಿಸಿ ಅಲ್ಲಮ ಪ್ರಭುವಿನ ಮಾರ್ಗ ನಿರೀಕ್ಷಣೆಯನ್ನು ಮಾಡುವವರಾಗಿದ್ದರು. ಮುಂದೆ ಕೆಲವು ದಿವಸಗಳ ಮೇಲೆ ಅಲ್ಲಮ ಪ್ರಭುವು ಒಂದು ಕ್ಷತಕ ವೇಷವನ್ನು ಧಾರಣ ಮಾಡಿ ಯಾರಿಗೂ ತಿಳಿಯದಂತೆ ಕಲ್ಯಾಣ ಪಟ್ಟಣವನ್ನು ಪ್ರವೇಶಿಸಿದನು ಅವನ ಗುರುತು ಯಾರಿಗೂ ಹತ್ತಲಿಲ್ಲ. ಆದರೆ ಕಡೆಗೆ ಬಸವೇಶ್ವರನು ಅವನ ಗುರುತನ್ನು ಹಿಡಿದು ಅವನನ್ನು ಅರಮನೆಗೆ ಕರೆತಂದು ಶೂನ್ಯ ಸಿಂಹಾಸನದ ಮೇಲೆ ಕುಳ್ಳಿರಿಸಿದನು. ಶಿವಶರಣರು ಇದನ್ನು ನೋಡಿ ಆಶ್ಚರ್ಯಪಟ್ಟು ಅಲ್ಲಮಪ್ರಭುವಿನನ್ನು ಸ್ತುತಿಸುವವರಾದರು. ಆಗ ಪಟ್ಟಣದಲ್ಲಿ ಅಲ್ಲಮಪ್ರಭುವಿನ ವಿಷಯವಾಗಿ ಮಾನ ಮರ್ಯಾದೆಗಳು ಉತ್ಸಾಹದಿಂದ ಜರಗಿದವು.

## ಅಲ್ಲಮ ಪ್ರಭುವಿನ ಬೋಧೆ.

ಆಮೇಲೆ ಅಲ್ಲಮ ಪ್ರಭುವು ಶಿವಶರಣರೆಲ್ಲರನ್ನು ತನ್ನ ಸನ್ನಿಧಾನದಲ್ಲಿ ಬರಮಾಡಿಕೊಂಡು ಅವರಿಗೆ ಶಿವರಹಸ್ಯವನ್ನು ವಿಸ್ತಾರವಾಗಿ ಬೋಧಿಸಿದನು. ಇದನ್ನು ಕೇಳಿ ಶಿವಶರಣರೆಲ್ಲರು ಭಕ್ತಿಯಿಂದ ಅಲ್ಲಮ ಪ್ರಭುವಿನನ್ನು ಹೊಗಳುವವರಾದರು. ಈ ಪ್ರಕಾರ ಕಲ್ಯಾಣ ಪಟ್ಟಣದಲ್ಲಿ ಶಿವಶರಣರು ಶಿವಾನುಭವ ಮಂಟಪದಲ್ಲಿ ಷಟ್‌ಸ್ಥಲ ಸಿದ್ಧಾಂತ ಮತ್ತು ಶಿವಾದ್ವೈತ ಇವುಗಳ ವಿಚಾರಗಳನ್ನು ಚರ್ಚೆಮಾಡುತ್ತ ಕಾಲಕಳೆಯುತ್ತಿದ್ದರು.

## ಅಲ್ಲಮಪ್ರಭುವಿನ ಬಗ್ಗೆ ಮಾತ್ಸರ್ಯ

ಹೀಗೆ ಅಲ್ಲಮಪ್ರಭುವಿಗೆ ಮಾನಮರ್ಯಾದೆಗಳು ಪಟ್ಟಣದಲ್ಲಿ ನಡೆದದ್ದನ್ನು ಜಂಗಮರು ನೋಡಿ ಮಾತ್ಸರ್ಯ ಬುದ್ಧಿಯುಳ್ಳವರಾಗಿ ಬಸವೇಶ್ವರನ ಸನ್ನಿಧಾನವನ್ನು ಬಿಟ್ಟು ಹೊರಟು ಹೋದರು. ಆದರೆ ಬಸವೇಶ್ವರನು ಅವರನ್ನು ತನ್ನಲ್ಲಿಗೆ ಬರಮಾಡಿಕೊಂಡು ಅವರಿಗೆ ತಿಳಿಹೇಳಿ ಅವರನ್ನು ಸಮಾಧಾನ ಪಡಿಸಿದನು. ಅವರು ಭೋಜನವನ್ನು ಬಿಟ್ಟು ಹೊರಟು ಹೋಗಿದ್ದರು. ಆದರೆ ಅಲ್ಲಮಪ್ರಭುವಿಗೆ ಬಸವೇಶ್ವರನು ಆತಾರ್ಪಣ ಪೂರ್ವಕವಾಗಿ ವ್ಯವಹರಿಸಿದನು. ಆಗ ಅಲ್ಲಮಪ್ರಭುವೂ ಕೂಡ ತೃಪ್ತಿಯುಳ್ಳವನಾದನು. ಅವನ ಈ ತೃಪ್ತಿಯು ಇಡೀ ಜಂಗಮರನ್ನೆಲ್ಲ ತೃಪ್ತಿಗೊಳಿಸಿತು. ಇದರಿಂದ ಯಾವ ಜಂಗಮರು ಅವನ ಕೂಡ ಮಾತ್ಸರ್ಯ ಬುದ್ಧಿಯುಳ್ಳವರಾಗಿ ನಡೆಯುತ್ತಿದ್ದರೋ ಅವರು ಸಹ ಅಲ್ಲಮಪ್ರಭು ಮತ್ತು ಬಸವೇಶ್ವರ ಇವರ ವಿಷಯವಾಗಿ ಭಕ್ತಿಭಾವವುಳ್ಳವರಾಗಿ ಆಚರಿಸಹತ್ತಿದರು. ಹೀಗೆ ಬಸವೇಶ್ವರನು ಎಲ್ಲರನ್ನೂ ಸಮಾಧಾನ ಪಡಿಸುವ ಸಾಮರ್ಥ್ಯವುಳ್ಳವನಾಗಿದ್ದನು.

## ಕಲ್ಯಾಣದಲ್ಲಿ ವಾಸ

ಅಲ್ಲಮಪ್ರಭುವು ಸಿಂಹಾಸನಸ್ಥನಾದ ಬಳಿಕ ಈ ಸ್ಥಾನದಲ್ಲಿ ಅವನು ಎಷ್ಟು ವರುಷ ಕಾಲಕಳೆದನೆಂಬುದು ನಿಶ್ಚಿತವಾಗಿ ಗೊತ್ತಾಗುವದಿಲ್ಲ. ಬಿಜ್ಜಳನು ಚಕ್ರವರ್ತಿಯಾಗಿ ೧೧೬೭ರ ವರೆಗೆ ಅಂದರೆ ೬ ವರುಷ ರಾಜ್ಯವಾಳಿದನು. ಈ ಅವಧಿಯಲ್ಲಿಯೇ ಅಲ್ಲಮಪ್ರಭುವು ಕೆಲವು ಕಾಲ ಕಲ್ಯಾಣ ಪಟ್ಟಣದಲ್ಲಿ ಧರ್ಮ ಸಂಶೋಧನೆ ಮತ್ತು ಧರ್ಮಚರ್ಚೆಗಳಲ್ಲಿ ಕಾಲ ಕಳೆದು ಆ ಮೇಲೆ ಅವನು ಪ್ರವಾಸಕ್ಕೆ ಹೊರಟಿರಬೇಕು. ಅವನು ಪ್ರವಾಸದಲ್ಲಿ ಕನಿಷ್ಠ ಒಂದೆರಡು ವರ್ಷಗಳನ್ನಾದರೂ ಕಳೆದಿರಬೇಕು. ಮುಂದೆ ಅವನು ಒಂದು ಅಥವಾ ಎರಡು ವರ್ಷ ಕಲ್ಯಾಣ ಪಟ್ಟಣದಲ್ಲಿ ವಾಸಿಸಿರಬಹುದು.

## ಧರ್ಮ ಪ್ರಸಾರ ಕಾರ್ಯಗಳು

ಅಲ್ಲಮಪ್ರಭುವು ಪ್ರವಾಸಮಾಡಿ ತಿರುಗಿ ಬಂದು ಶೂನ್ಯಸಿಂಹಾಸನವನ್ನು ಆರೋಹಣ ಮಾಡಿದ ಬಳಿಕ ಅವನಿಗೆ ಸ್ವಾಭಾವಿಕವಾಗಿ ನಾಡಿ

ನಲ್ಲಿ ಘನತರವಾದ ಸ್ಥಿತಿಯು ಪ್ರಾಪ್ತವಾಗಿದ್ದಿತು. ಈ ಕಾಲದಲ್ಲಿ ಬಹು ಜನರು ಆವನ ವರ್ಚಸ್ಸಿಗೆ ಒಳಗಾಗಿ ವೀರಶೈವ ಧರ್ಮವನ್ನು ಸ್ವೀಕರಿಸಿರಬಹುದು. ಇದರಲ್ಲಿ ಅವನಿಗೆ ಚೆನ್ನಬಸವೇಶ್ವರನೂ ಬಸವೇಶ್ವರನೂ ಅವನಿಗೆ ಸಹಾಯಕರಾಗಿ ವರ್ತಿಸಿದ್ದಾರೆ.

## ಪರಧರ್ಮೀಯರ ವಿರೋಧ

ಶಿವಶರಣರು ಅಲ್ಲಮಪ್ರಭುವಿನ ನೇತೃತ್ವದಲ್ಲಿ ನಡಿಸಿದ ಈ ಧಾರ್ಮಿಕ ಚಳವಳಿಯ ಮೂಲಕ ಜೈನರೂ ಸನಾತನ ಧರ್ಮೀಯರೂ ಅವರಿಗೆ ಕಡು ಹಗೆಗಳಾಗಿ ಆಚರಿಸಿದ್ದು ತಿಳಿಯುತ್ತದೆ. ಅವರು ಹೀಗೆ ಮಾಡುವದು ಸ್ವಾಭಾವಿಕವು. ವೀರಶೈವರಲ್ಲಿ ಒಬ್ಬನೇ ದೇವರಿದ್ದಾನೆ, ಎಲ್ಲರೂ ಸಮಾನಾಧಿಕಾರವುಳ್ಳವರು, ಅವರಲ್ಲಿ ಅಸ್ಪೃಶ್ಯತ್ವವಿಲ್ಲ, ಹೊಲೆಯರೂ ಬ್ರಾಹ್ಮಣರೂ ಸಮಾನರು, ಸ್ತ್ರೀಪುರುಷರೆಲ್ಲರೂ ಸಮಾನರು, ಕಿರುಕುಳ ದೈವಗಳನ್ನು ನಂಬಬಾರದು ಜಂಗಮಮೊದಲ್ಗೊಂಡು ಎಲ್ಲರೂ ಕಾಯಕವನ್ನು ಮಾಡತಕ್ಕದ್ದು, ಕಾಯಕಮಾಡುವವರೆಲ್ಲರೂ ಸಮಾನರು, ವೀರಶೈವರು ಸೂತಕಗಳನ್ನು ಪಾಲಿಸಬಾರದು, ಬ್ರಾಹ್ಮಣರ ಧರ್ಮಗ್ರಂಥಗಳನ್ನು ಮಾನ್ಯ ಮಾಡಕೂಡದು, ಬ್ರಾಹ್ಮಣರ ವೇದಮಂತ್ರಾದಿಗಳನ್ನು ಉಚ್ಚರಿಸದೆ ಪಂಚಾಕ್ಷರಿಯ ಒಂದೇ ಮಂತ್ರವನ್ನು ಉಚ್ಚರಿಸಬೇಕು, ಅನಾವಶ್ಯಕವಾಗಿ ಇಂದ್ರಿಯಗಳನ್ನು ಕ್ಲೇಶಗೊಳಿಸಬಾರದು, ಪ್ರತಿಯೊಂದು ದಿನವು ಪುಣ್ಯಕಾಲವು, ಆದ್ದರಿಂದ ಹಬ್ಬಹುಣ್ಣಿಮೆಗಳನ್ನು ಆಚರಿಸಕೂಡದು, ಉಪವಾಸಾದಿ ವ್ರತಗಳನ್ನು ಮಾಡಕೂಡದು, ಪಂಚಾಚಾರಗಳೇ ಮಹತ್ವವಾದವುಗಳು, ಅವುಗಳಂತೆ ಆಚರಿಸುವವರೇ ಶ್ರೇಷ್ಠರು, ಕಷ್ಟಕರವಾದ ಯೋಗ ಮಾರ್ಗವನ್ನು ಅವಲಂಬಿಸಕೂಡದು, ಇವೇ ಮೊದಲಾದ ವಿಷಯಗಳು ಬ್ರಾಹ್ಮಣ ಜೈನ ಮೊದಲಾದವರ ಮನಸ್ಸನ್ನು ಕಲುಷಿತಗೊಳಿಸಿದವು. ಇದರಿಂದ ಬಸವೇಶ್ವರ ಅಲ್ಲಮರನ್ನು ವಿರೋಧಿಸುವವರ ಸಂಖ್ಯೆಯು ದೇಶದಲ್ಲಿ ಹೆಚ್ಚಾಗಹತ್ತಿತು. ಆಗ ವಿರೋಧಿಗಳು ಬಸವೇಶ್ವರನನ್ನು ರಾಜ್ಯದ ಹೊರಗೆ ಹಾಕಬೇಕೆಂದು ಯೋಚಿಸಿ ಬಸವೇಶ್ವರನು ಕಳ್ಳನಿದ್ದಾನೆ, ರಾಜ್ಯದ ಹಣವನ್ನು ಅಪಹರಿಸುತ್ತಾನೆ, ದುಷ್ಟರನ್ನು ತನ್ನಲ್ಲಿಟ್ಟುಕೊಂಡು ಅವರನ್ನು ರಕ್ಷಿಸುತ್ತಾನೆ, ಇವೇ ಮೊದಲಾದ ಆರೋಪಗಳನ್ನು ಬಿಜ್ಜಳನೃಪನ ಮುಂದೆ ಅವರು ಇಡಲು ಪ್ರಾರಂಭಿಸಿದರು. ಆದರೆ ಇವು ಸುಳ್ಳು ಆರೋಪಗ

# ಶಿವಾನುಭವ

—೦೦೦●೦೦೦—

ಸಂಪುಟ ೨೭ ] [ ಸಂ

ಸಂಪಾದಕರು

ಫ. ಗು. ಹಳಕಟ್ಟಿ

ಬಿ. ಎ. ಎಲ್. ಎಲ್. ಬಿ.



ವಾ. ಚ. ೫-೧೨-೦ ] ವಿಜಾಪೂರ [ ಸಪ್ಟಂಬರ

# ವಿಷಯಾನುಕ್ರಮಣಿಕೆ





---

# ಶಿವಾನುಭವ

| ವರ್ಷ ೨೭ | ಸಪ್ಟಂಬರ ೧೯೫೪ | ಸಂಚಿಕೆ ೯ |
|---|---|---|


## ಕರ್ನಾಟಕದ ಕಲಚುರಿಗಳು

[ಸಂಪುಟ ೨೭ ಸಂಚಿಕೆ ೬ ಇದರಿಂದ ಮುಂದುವರಿದುದ್ದು]

(ಲೇ:—ಶ್ರೀ ದೇಸಾಯಿ ಪಾಂಡುರಂಗರಾಯರು ಎಂ. ಏ.)

### ವೀರಬಿಜ್ಜಳ

(ಕ್ರಿ. ಶ. ೧೧೮೪-೯೪)

ಕಲಚುರಿಗಳ ಸ್ವತಂತ್ರ ಆಳಿಕೆ ಸಮಾಪ್ತವಾದರೂ ಕಲಚುರಿ ಮನೆತನದ ಚರಿತ್ರೆ ಮುಗಿಯಲಿಲ್ಲ. ವಿಸ್ತಾರವಾದ ಅಧಿರಾಜ್ಯವು ಅವರ ಕೈತಪ್ಪಿ ಹೋದರೂ ಚಿಕ್ಕದಾದ ಪಿತ್ರಾರ್ಜಿತ ಮಂಡಲ ರಾಜ್ಯವು ಇನ್ನೂ ಅವರ ವಶದಲ್ಲಿ ಇದ್ದೇ ಇದ್ದಿತು. ಸಾಮ್ರಾಜ್ಯವನ್ನು ಕಳೆದುಕೊಂಡ ಸಿಂಘಣನು ಈ ಮಂಡಲರಾಜ್ಯದ ಒಡೆಯನಾಗಿ ಸ್ವಲ್ಪಕಾಲ ಜೀವಿಸಿರಬಹುದು. ಸಿಂಘಣನ ತರುವಾಯ ಇನ್ನೂ ಕೆಲವರು ಆಳುವ ಅರಸರಿಗೆ ಅಂಕಿತರಾಗಿ ಬಾಳಿರಬೇಕು ಎಂದು ತಿಳಿಯುತ್ತದೆ. ಇಂತಹರ ಸ್ಥಿತಿಗತಿಗಳನ್ನು ಇದೀಗ ವಿಚಾರಿಸುವ.

ಮಂಗಳಿವೇಡದ ಪ್ರದೇಶವು ಕಲಚುರಿಗಳ ಅನುವಂಶಿಕ ಮಂಡಲ ರಾಜ್ಯವಾಗಿದ್ದ ವಿಷಯವನ್ನು ಈ ಹಿಂದೆ ಪರಿಶೀಲಿಸಿದ್ದೇವೆ. ಇದು ತಂಕಾಡು ಎಂಬ ನಾಡಿಗೆ ಸೇರಿದ್ದಿತು. ಬಿಜ್ಜಳನ ಪೂರ್ವಿಕರಾದ ಬಿಜ್ಜರಸ

ಕನ್ನಮರಸ, ಮೊದಲಾದವರು ಈ ಮಂಗಳವೇಡದಿಂದ ರಾಜ್ಯವಾಳಿದ ಪ್ರಕಾರವನ್ನು ಈ ಮುಂಚೆ ಲಕ್ಷಿಸಿದ್ದೇವೆ. ಇದೀಗ ಅದೇ ಆ ಮಂಗಳವೇಡ ಮತ್ತು ಕರಿನಾಡಿನತ್ತ ಮತ್ತೆ ಮರಳುವೆ.

ಜತ್ ತಾಲೂಕಿನ ಸಂಖ ಎಂಬ ಗ್ರಾಮದಲ್ಲಿ ನಾನು ಕಂಡು ಹಿಡಿದ ಒಂದು ಶಾಸನ ಕಲಚುರಿ ಸಂಕಮದೇವನು ಆ ಗ್ರಾಮದ ಮಾಣಿಕೇಶ್ವರ ದೇವರಿಗೆ ಬಿಟ್ಟ ದತ್ತಿಯನ್ನು ವಿವರಿಸಿ, ಅನಂತರ ರಾಯಮುರಾರಿ ಸೋವಿದೇವನ ಮಗನಾದ ವೀರಬಿಜ್ಜಳನು ತರಿಕಾಡು ನಾಡಿನ ಅಂಕುಲಗೆ ಎಂಬ ಕಂಪಣಕ್ಕೆ ಸೇರಿದ ಆಸಗೆ ಎಂಬ ಗ್ರಾಮವನ್ನು ಅದೇ ದೇವರಿಗೆ ದಾನವಾಗಿ ಕೊಟ್ಟ ವಿಷಯವನ್ನು ತಿಳಿಸುತ್ತದೆ. ಈ ಎರಡನೆಯ ದತ್ತಿಯ ಕಾಲವು ಪರಿಧಾವಿ ಸಂವತ್ಸರ, ಫಾಲ್ಗುನ ಪೌರ್ಣಿಮೆ, ಸೋಮವಾರ, ಚಂದ್ರಗ್ರಹಣವೆಂದು ಉಕ್ತವಾಗಿದೆ. ಈ ತೇದಿ ಸಮರ್ಪಕವಾಗಿಲ್ಲ. ಪರಿಧಾವಿ ಸಂವತ್ಸರ ೧೧೧೪ ನೆಯ ಶಕವರ್ಷಕ್ಕೆ ಒಪ್ಪಿಗೆಯಾಗುತ್ತದೆ. ಈ ಸಂವತ್ಸರದ ಫಾಲ್ಗುನ ಪೌರ್ಣಿಮೆ ಬುಧವಾರದ ದಿನ ಬಿತ್ತಿದ್ದು, ಅಂದು ಚಂದ್ರಗ್ರಹಣವು ಸಂದಿಸಲಿಲ್ಲ. ಆದರೂ ಸ್ಥೂಲವಾಗಿ ಕ್ರಿ. ಶ. ೧೧೯೩ ಫೆಬ್ರುವರಿ ೧೭ ಈ ದತ್ತಿಯ ಕಾಲವೆಂದು ಇಟ್ಟುಕೊಳ್ಳಬಹುದು. ರಾಯಮುರಾರಿ ಸೋವಿದೇವನಿಗೆ ವೀರಬಿಜ್ಜಳನೆಂಬ ಮಗನಿದ್ದ ಸಂಗತಿ ಇದುವರೆಗೆ ಯಾವ ಆಧಾರದಿಂದಲೂ ತಿಳಿದಿರಲಿಲ್ಲ. ಈ ಸಂಖದ ಶಾಸನದಿಂದ ಅದು ಮೊದಲು ಬಾರಿ ನಮ್ಮ ಅವಗಾಹನೆಗೆ ಬರುತ್ತದೆ.

ಕಲಚುರಿಗಳ ಈ ವೃತ್ತಾಂತವನ್ನು ಸಧ್ಯಕ್ಕೆ ಇಲ್ಲಿಗೆ ನಿಲ್ಲಿಸಿ ದೇವಗಿರಿ ಯಾದವರ ಚರಿತ್ರೆಯ ಕಡೆಗೆ ಸ್ವಲ್ಪ ದೃಷ್ಟಿಯನ್ನು ಹೊರಳಿಸುವ. ಇದರಿಂದ ಯಾದವರ ಚರಿತ್ರೆಯಲ್ಲಿಯ ಒಂದೆರಡು ಸಮಸ್ಯೆಗಳಿಗೆ ಉತ್ತರ ದೊರೆಯಲು ಸಹಾಯವಾಗುವಂತಿದೆ; ಮಾತ್ರವಲ್ಲದೆ ಕಲಚುರಿ ಚರಿತ್ರೆಯ ಮೇಲೂ ಸ್ವಲ್ಪ ದೂರಕ್ಕೆ ಬೆಳಕು ಬರುವಹಾಗಿದೆ.

ದೇವಗಿರಿ ಯಾದವ ಮನೆತನವನ್ನು ಪ್ರಾಬಲ್ಯಕ್ಕೆ ತಂದವನು ಭಿಲ್ಲಮ. ಈತನು ಕ್ರಿ. ಶ. ೧೧೮೭ ರಿಂದ ಇಲ್ಲವೆ ಒಂದೆರಡು ಸಂವತ್ಸರ ಅದಕ್ಕೂ ಪೂರ್ವದಿಂದ ಸ್ವತಂತ್ರ ರಾಜನಾಗಿ ಕರ್ನಾಟಕ ಚರಿತ್ರೆಯ ರಂಗದಲ್ಲಿ ಕಾಣಿಸಿಕೊಳ್ಳುತ್ತಾನೆ. ಒಂದು ಆಧಾರದಂತೆ ಭಿಲ್ಲಮನ

ತಂದೆ ಇನ್ನೊಂದು ಆಧಾರದಂತೆ ಭಿಲ್ಲಮು ತಾತನಾದ ಮೈಲುಗಿ ಇಲ್ಲವೆ ಮಲ್ಲುಗಿ ಎಂಬವನಾದರೂ ಶೂರನಾಗಿದ್ದು ತನ್ನ ರಾಜ್ಯವನ್ನು ವಿಸ್ತರಿಸಲು ಪ್ರಯತ್ನಿಸಿದಂತೆ ಕಂಡುಬರುತ್ತದೆ. ಜಲ್ಹಣ ಕವಿಯು ಸೂಕ್ತಿಮುಕ್ತಾವಲೀ ಎಂಬ ಗ್ರಂಥದ ಪೀಠಿಕೆಯಲ್ಲಿ ಯಾದವ ಮಲ್ಲುಗಿ ಮತ್ತು ಭಿಲ್ಲಮರ ವಿಷಯವಾಗಿ ಕೆಲವು ಚಾರಿತ್ರಿಕ ಸಂಗತಿಗಳು ವರ್ಣಿಸಲಾಗಿವೆ. ಅವು ಹೀಗೆ; ಮಲ್ಲುಗಿಯ ಸೇವೆಯಲ್ಲಿ ದಾದಾ ಎಂಬ ಶೂರ ದಂಡನಾಯಕ ನಿದ್ದನು. ಈತನ ಪ್ರತಾಪವನ್ನು ಸಹಿಸಲಾರದೆ ವಿಜ್ಜಣನ ಸೈನ್ಯವು ಯುದ್ಧದಲ್ಲಿ ಕಂಗೆಟ್ಟು ಹೋಯಿತು. ದಾದಾ ದಂಡನಾಯಕನ ಮಗನಾದ ಮಹೀಧರನಾದರೂ ತನ್ನ ತಂದೆಯ ಒಡೆಯನಾದ ಮಲ್ಲುಗಿಯ ರಾಜ್ಯಕ್ಕೆ ಆಧಾರವಾಗಿ ನಿಂತನು. ಮಹೀಧರನು ಸಂಗ್ರಾಮದುಲ್ಲಿ ಬಿಜ್ಜಣನ ಬಲವನ್ನು ಜರ್ಜರಮಾಡಿದನು. ಬಿಜ್ಜಣನನ್ನು ಸೋಲಿಸಿ ಮಹೀಧರನು ಮರಣ ಹೊಂದಿದನು. ಬಳಿಕ ಆತನ ತಮ್ಮನಾದ ಜಲ್ಹನು ಭಿಲ್ಲಮನ ಆಳಿಕೆಗೆ ಊರುಗೋಲಾದನು.

ಹೇಮಾದ್ರಿಯು ವ್ರತಖಂಡದಲ್ಲಿ ಈ ಭಿಲ್ಲಮನ ವಿಷಯವನ್ನು ಹೀಗೆ ವರ್ಣಿಸಿದೆ:—

ಯಃ ಶ್ರೀವರ್ಧನಮಾಸಸಾದ ನಗರಂ ಕ್ಷೋಣೀಪತೇರಂತಲಾತ್
ಯಃ ಪ್ರತ್ಯಣ್ಡಕಭೂಭೃತಂ ಚ ಸಮರೇ ದುಷ್ಟಂ ವ್ಯಜೇಷ್ಟ ಕ್ಷಣಾತ್
ಯೋವಾ ಮಂಗಲವೇಷ್ಟಕ ಕ್ಷಿತಿಪತಿಂ ಶ್ರೀಭಿಲ್ಲಣಂ ಜಘ್ನಿವಾನ್
ಕಲ್ಯಾಣ ಶ್ರೀಯಮುಷ್ಯಮಾಪ್ಯ ದದಧೇಯೋ ಹೋಸಲೇಶಂ ವ್ಯಸುಂ ॥

ಈ ಪದ್ಯದ ಮೂರನೆಯ ಚರಣದಲ್ಲಿ ಹೇಳಿದ ಮಂಗಲವೇಷ್ಟಕವು ಮಂಗಳಿವೇಡವಾಗಿರಬೇಕುಕು; ಅದರ ರಾಜನಾದ ಬಿಲ್ಲಣನೆಂಬ ಹೆಸರು ಬಿಜ್ಜಣ ಎಂಬುದರ ಸ್ಖಲಿತ ರೂಪವು; ಇದರ ಪಾಠಾಂತರವಾಗಿದ್ದ 'ವಜ್ರಿಣಂ' ಎಂಬ ಪದವಾದರೂ ಬಿಜ್ಜಳನನ್ನೇ ನಿರ್ದೇಶಿಸುತ್ತದೆ. ಮುಂತಾದ ಅಂಶಗಳು ಈಗಾಗಲೆ ಅನ್ವೇಷಕರ ಅವಲೋಕನಕ್ಕೆ ಬಂದಿದ್ದು ಅವುಗಳ ವಿಚಾರವಾಗಿ ಭಿನ್ನಾಭಿಪ್ರಾಯಕ್ಕೆ ಎಡೆಯಿಲ್ಲ. ಈ ಪ್ರಮೇಯದ ಇನ್ನೊಂದು ಭಾಗವನ್ನು ಎಂದರೆ ಮಂಗಲವೇಷ್ಟಕದ ಬಿಲ್ಲಣ ಅಥವಾ ವಜ್ರಿನ್ ಎಂಬಾತನು ಕಲಚುರಿ ಬಿಜ್ಜಳನೇ ಆಗಿರಬೇಕು ಎಂಬ ಅಂಶವನ್ನು ಕುರಿತು ನಾನು ಮತ್ತು ಶ್ರೀ ಪೈಗಳು ಸ್ವತಂತ್ರವಾಗಿ ಭಿನ್ನಭಿನ್ನ ದಿಕ್ಕಿನಿಂದ ಪರಿಶೋಧಿಸಿ ಏಕಾಭಿಪ್ರಾಯವುಳ್ಳವರಾಗಿರುವುದು ಒಂದು ಕುತೂಹ

ಲವೆಂದೇ ಹೇಳಬೇಕು. ಆದರೆ ಈ ಬಿಜ್ಜಳನು ಯಾರು ಎಂಬ ವಿಚಾರದಲ್ಲಿ ಶ್ರೀಯುತರು ಎರಡು ಮೂರು ಕಾಲ್ಪನಿಕ ಊಹೆಗಳನ್ನು ಮುಂದು ಮಾಡಿ ಕೈಯೂರಿ ನಿಂತಿದ್ದಾರೆ. ಆದರೆ ನನಗೆ ದೊರೆತ ಸಾಧನಗಳ ಮೂಲಕ ಈ ವಿಷಯವನ್ನು ಸುಲಭವಾಗಿ ತೀರ್ಮಾನಿಸಲು ಅನುಕೂಲವಾಗಿದೆ.

ಮೇಲೆ ಸಂಗ್ರಹಿಸಿದ ಯಾದವ ಮಲ್ಲುಗಿ ಮತ್ತು ಭಿಲ್ಲಮರ ವೃತ್ತಾಂತದಲ್ಲಿ ವಿಜ್ಜಣ ಇಲ್ಲವೆ ಬಿಜ್ಜಣ ಎಂಬ ಹೆಸರು ಮೂರು ಸಂದರ್ಭಗಳಲ್ಲಿ ಕಾಣಿಸಿಕೊಳ್ಳುತ್ತದೆ. ಇದು ಬಿಜ್ಜಳ ಎಂಬುದಕ್ಕೆ ಸಮಾನವಾದುದು. ದಾದಾ ಮತ್ತು ಮತ್ತು ಮಹೀಧರ ಇವರೊಡನೆ ಕಾದಿದ ಹಾಗೂ ಮಲ್ಲುಗಿಯ ಸಮಕಾಲಿಕರಾದ ವಿಜ್ಜಣ ಮತ್ತು ಬಿಜ್ಜಣ, ಇವರು ಏಕ ವ್ಯಕ್ತಿಯಾಗಿರಬೇಕು. ಹೇಮಾದ್ರಿ ವರ್ಣಿಸಿದ ಬಿಜ್ಜಣನು ಭಿಲ್ಲಮನ ಪ್ರತಿಸ್ಪರ್ಧಿ; ಈತನು ಈ ಜಲ್ಹಣನ ಬಿಜ್ಜಣನಿಗಿಂತ ಭಿನ್ನನಾಗಿರಬೇಕು. ಏಕೆಂದರೆ ಭಿಲ್ಲಮನಿಗೂ ಮಲ್ಲುಗಿಗೂ ಒಂದು ತಲೆಮಾರಿನಷ್ಟಾದರೂ ಕಾಲಾಂತರವಿದೆ. ಜಲ್ಹಣನ ಬಿಜ್ಜಣನು ಚಾಲುಕ್ಯ ರಾಜ್ಯಾಪಹಾರಕ ಬಿಜ್ಜಳನಾಗಿರಬೇಕು. ಏಕೆಂದರೆ ಆತನ ಜೀವನ ಕಾಲವು ಭಿಲ್ಲಮನ ಕಾಲಕ್ಕಿಂತ ಒಂದು ತಲೆಮಾರಿನಷ್ಟು ಹಿಂದಿನದಾಗಿದೆ. ಸಾಮಂತನಾದ ಯಾದವ ಮಲ್ಲುಗಿ ತನ್ನ ರಾಜ್ಯವನ್ನು ವಿಸ್ತರಿಸಿಕೊಳ್ಳಲು ಹೆಣಗುತ್ತಿರುವಾಗ ಬಿಜ್ಜಳನು ಆತನನ್ನು ತಡೆಯಲು ಪ್ರಯತ್ನಿಸಿರಬೇಕು. ತನ್ನ ಸಿಂಹಾಸನವನ್ನು ಸ್ಥಿರಗೊಳಿಸುವ ಚಿಂತೆಯಲ್ಲಿ ಮಗ್ನನಾಗಿದ್ದ ಬಿಜ್ಜಳನಿಗೆ ಮಲ್ಲುಗಿಯ ವಿರುದ್ಧವಾಗಿ ಹೆಚ್ಚಿನ ಪಡೆಯನ್ನು ಅಟ್ಟಲು ಸಾಧ್ಯವಾಗಿರಲಿಕ್ಕಿಲ್ಲ. ಆದುದರಿಂದ ಬಿಜ್ಜಳನ ಸೈನ್ಯವು ಜಯಶೀಲವಾಗಿರಲಿಕ್ಕಿಲ್ಲ. ಈ ಘಟನೆಯನ್ನು ಅನುಲಕ್ಷಿಸಿ ದಾದಾ ದಂಡನಾಥನು ತನ್ನ ಪ್ರತಾಪದ ಮುಂದೆ ಬಿಜ್ಜಳನ ಬಲವು ಕಂಗೆಟ್ಟು ಹೋಯಿತು ಎಂದು ಬೆನ್ನು ತಟ್ಟಿಕೊಂಡಿರಬೇಕು. ಬಳಿಕ ಮಹೀಧರನ ಕಾಲದಲ್ಲಿ ಯಾದವರ ಮೇಲೆ ಬಿಜ್ಜಳನು ಇನ್ನೊಂದು ಬಾರಿ ದಂಡನ್ನು ಕಳುಹಿದಂತೆ ತೋರುತ್ತದೆ. ಈ ಸಮರದಲ್ಲಿಯೂ ಬಿಜ್ಜಳನ ಸೇನೆಗೆ ಹೆಚ್ಚಿನ ಶೌರ್ಯ ಪ್ರದರ್ಶನ ಮಾಡಲಿಕ್ಕೆ ಆಗಿರಲಿಕ್ಕಿಲ್ಲ. ಆದರೆ ಯಾದವ ದಂಡಾಧಿಪತಿ ಮಹೀಧರನ ಮಾತ್ರ ರಣಾಂಗಣದಲ್ಲಿ ಪತನವಾದಂತೆ ತೋರುತ್ತದೆ.

ಭಿಲ್ಲಮನೊಡನೆ ಕಾದಿದ ಬಿಜ್ಜಳನು ರಾಯಮುರಾರಿ ಸೋವಿದೇವನ ಮಗನಾದ ವೀರಬಿಜ್ಜಳನಾಗಿರಬೇಕು. ಮೇಲೆ ವಿವರಿಸಿದ ಸಂಖದ ಶಾಸನದಿಂದ ಈತನು ೧೧೯೩ನೆಯ ಕ್ರಿ. ಶ. ದಲ್ಲಿ ತನ್ನ ಪಿತ್ರಾಗತ ಮಂಗಳವೇಡದ ಮಂಡಲ ರಾಜ್ಯದ ಒಡೆಯನಾಗಿದ್ದನು ಎಂಬ ವಿಷಯ ಸ್ಪಷ್ಟವಾಗುತ್ತದೆ. ಈ ಏಕವ್ಯಕ್ತೀಕರಣಕ್ಕೆ ಆಪಾತತಃ ಒಂದು ಮಾತಿನ ವಿರೋಧವು ಬರುತ್ತದೆ. ಅದು ಹೀಗೆ: ಮೇಲಿನ ಭಿಲ್ಲಮ ಪರಾಕ್ರಮ ವರ್ಣನೆಯಲ್ಲಿ ಆತನು ಮಂಗಳವೇಡದ ಬಿಜ್ಜಳನನ್ನು 'ಜಘ್ನಿವಾನ್' ಎಂದರೆ ಕೊಂದನು ಎಂದು ಹೇಳಿದೆ. ಭಿಲ್ಲಮನ ದಕ್ಷಿಣ ದಂಡಯಾತ್ರೆ ಕ್ರಿ. ಶ. ೧೧೯೧ ರ ವರೆಗೆ ಮುಂದುವರಿದು ಅದೇ ವರ್ಷ ಭಿಲ್ಲಮನು ನಿಧನಹೊಂದಿದನು. ಎಂದು ಸ್ಥೂಲವಾಗಿ ತಿಳಿಯುವುದರಿಂದ ಕ್ರಿ. ಶ. ೧೧೯೧ ರಲ್ಲಿ ಇಲ್ಲವೆ ಅದಕ್ಕೂ ಮೊದಲು ಭಿಲ್ಲಮನಿಂದ ಹತನಾದ ಬಿಜ್ಜಳನು ಕ್ರಿ. ಶ. ೧೧೯೩ ರಲ್ಲಿ ಜೀವಿಸಿರುವುದು ಹೇಗೆ ಸಂಭವನೀಯ? ಇದಕ್ಕೆ ಸಮಾಧಾನವು ಹೀಗೆ: ಹನ್ ಧಾತುವಿಗೆ 'ಹೊಡೆ ಹೊಡೆದು ಕೆಡುಹು,' ಮುಂತಾದ ಅರ್ಥಗಳು ಆಗುತ್ತಿರುವುದರಿಂದ ಇಲ್ಲಿ 'ಜಘ್ನಿವಾನ್' ಎಂಬ ಪದಕ್ಕೆ 'ಸದೆಬಡೆದನು' ಎಂಬ ಅಭಿಪ್ರಾಯವನ್ನು ಇಟ್ಟುಕೊಳ್ಳುವುದು ಯುಕ್ತವಾಗಿದೆ. ಈ ಅಭಿಪ್ರಾಯವು ಅದೇ ಪದ್ಯದಲ್ಲಿಯ ಇನ್ನೊಂದು ಮಾತಿನಿಂದ ಪೋಷಿತವಾಗುತ್ತದೆ. ಮುಂದಿನ ಪಾದದಲ್ಲಿ ಭಿಲ್ಲಮನು ಹೊಯ್ಸಳ ರಾಜನನ್ನು 'ವ್ಯಸು'ವಾಗಿ ಮಾಡಿದ ಅಂಶವು ಉಕ್ತವಾಗಿದೆ. ಇಲ್ಲಿಯಾದರೂ 'ವ್ಯಸು' ಎಂಬ ಮಾತಿಗೆ ಹೆಚ್ಚು ಪರಿಚಯದ 'ಗತಪ್ರಾಣ, ಮೃತ' ಎಂಬ ಅರ್ಥಮಾಡದೆ 'ಹತಬಲ' ಎಂಬುದಾಗಿ ಅರ್ಥೀಕರಿಸದೇ ಹಾಗುತ್ತದೆ. ಏಕೆಂದರೆ ಭಿಲ್ಲಮನ ಈ ದಂಡಯಾತ್ರೆಯಲ್ಲಿ ಆತನ ಪ್ರತಿಸ್ಪರ್ಧಿಯಾದ ಹೊಯ್ಸಳ ಇಮ್ಮಡಿ ಬಲ್ಲಾಳನು ಮೃತನಾಗಲಿಲ್ಲವೆಂಬ ವಿಷಯವು ಚರಿತ್ರೆಯಿಂದ ಸ್ಫುಟವಾಗುತ್ತದೆ.

ಇಂತು ಮಂಗಳವೇಡದಲ್ಲಿ ಆಳುತ್ತಿದ್ದ ವೀರಬಿಜ್ಜಳನು ಹೆಸರಿಗೆ ತಕ್ಕಂತೆ ವೀರನಾಗಿರಬೇಕು. ಈತನು ಮಾಂಡಲೀಕನಾಗಿದ್ದರೂ ತನ್ನ ರಾಜ್ಯದಲ್ಲಿ ಸ್ಥಿರವಾಗಿ ನಿಂತುಕೊಂಡು ಬಲವನ್ನು ಸಂಗ್ರಹಿಸಿ ಉತ್ತರದಿಂದ ನುಗ್ಗಿ ಬರುತ್ತಿರುವ ಮಹತ್ವಾಕಾಂಕ್ಷಿ ಭಿಲ್ಲಮನ ಬಲಿಷ್ಠ ಸೇನಾ ಸಮೂಹವನ್ನು ಪ್ರತಿಭಟಿಸಿ ತಡೆದು ನಿಲ್ಲಿಸಲು ಪ್ರಯತ್ನಿಸಿರಬೇಕು. ಅದರಲ್ಲಿ ಕೊನೆಗೆ ಸೋತು ಹೋಗಿರಬೇಕು.

ಮೇಲ್ಕಂಡ ಸಂಖದ ಶಾಸನದಲ್ಲಿ ಮುಂದೆ ಆನಂದ ಸಂವತ್ಸರದ ಲ್ಲಿಯ ಮಿತಿಗೆ ಸಲ್ಲುವ ಕ್ರಿ. ವ. ೧೧೯೪ ಅಕ್ಟೋಬರ ೩೧ ಈ ತೇದಿಗೆ ಭಿಲ್ಲಮನ ಮಗನಾದ ಜೈತ್ರಪಾಲನು ಅದೇ ಮಾಣಕೇಶ್ವರ ದೇವರಿಗೆ ಅದೇ ಅಂಕುಲಗೆ ಕಂಪಣಕ್ಕೆ ಸೇರಿದ ಇನ್ನೊಂದು ಗ್ರಾಮವನ್ನು ದತ್ತಿಯಾಗಿ ಬಿಟ್ಟ ವಿಷಯುವು ನಿರ್ದಿಷ್ಟವಾಗಿದೆ. ಇದರಿಂದ ಈ ಹೊತ್ತಿಗೆ ಕಲಚುರಿ ಗಳು ಈ ಪ್ರದೇಶದ ಮೇಲಿನ ತಮ್ಮ ಒಡೆತನವನ್ನು ಕಳೆದುಕೊಂಡಿದ್ದು ಯಾದವರ ಪ್ರಭುತ್ವವು ಅಲ್ಲಿ ಸ್ಥಾಪಿತವಾಗಿರಬೇಕು ಎಂದು ಸ್ಫುಟವಾ ಗುತ್ತದೆ. ವೀರಬಿಜ್ಜಳನ ತರುವಾಯ ಕಲಚುರಿ ಮನೆತನದ ಒಂದೆರಡು ವ್ಯಕ್ತಿಗಳು ಅಲ್ಲಲ್ಲಿ ಕಾಣಿಸಿಕೊಂಡರೂ ಮಂಗಳವೇಡದ ಪ್ರದೇಶದೊಡನೆ ಅವರ ಸಂಬಂಧವು ಸೂಚಿತವಾಗದೆ ಇರುವುದರಿಂದ ಮೂರು ಶತಮಾ ನಗಳ ಸುದೀರ್ಘಕಾಲದಿಂದ ನಡೆದುಬಂದ ಕಲಚುರಿಗಳ ಮಂಗಳವೇಡದ ಆಧಿಪತ್ಯವು ವೀರಬಿಜ್ಜಳನೊಂದಿಗೆ ಸಮಾಪ್ತಿಹೊಂದಿತು ಎಂದು ಹೇಳಬೇ ಕಾಗುತ್ತದೆ.

ವಿಜಾಪುರ ಜಿಲ್ಲೆಯ ಸಿಂದಗಿ ತಾಲೂಕಿನ ಕಡಲೆವಾಡ ಗ್ರಾಮ ದಲ್ಲಿ ದೊರೆತ ದೇವಗಿರಿ ಯಾದವ ಸಿಂಘಣನ ಆಳಿಕೆಯ ೧೨೦೪-೦೫ ಕ್ರಿ. ವ. ಕ್ಕೆ ಸಲ್ಲುವ ಒಂದು ಶಾಸನದಲ್ಲಿ 'ಕಲಚುರ್ಯ ವಂಶೋದ್ಭವರಾದ ರಾಯಮುರಾರಿ ಜಂಸುಗಿ ದೇವಪರಸರು ರಾಜ ಬಿಜ್ಜಲದೇವಪನು ಸ್ವಸ ಮಸ್ತ ಸಂಬಂಧಿಗಳ ಸಹಿತವಾಗಿ' ಅಲ್ಲಿಯ ಸೋಮನಾಥ ದೇವರಿಗೆ ದಾನಕೊಟ್ಟ ಸಂಗತಿ ಉಕ್ತವಾಗಿದೆ. ಈ ಜನ್ನುಗಿ ಮತ್ತು ಬಿಜ್ಜಲರು ವೀರಬಿಜ್ಜಳನ ಮಗ ಮತ್ತು ಮೊಮ್ಮಗ ಆಗಿರಬಹುದು. ವೀರಬಿಜ್ಜಳನ ತರುವಾಯ ಆತನ ವಂಶಿಕರು, ಮತ್ತು ಜ್ಞಾತಿಗಳು ಮಂಗಳವೇಡದಿಂದ ಬಂದು ಕಡಲೆವಾಡದಲ್ಲಿ ನೆಲಸಿರಬೇಕು, ಎಂಬ ವಿಷಯವನ್ನು ಈ ಕಡ ಲೆವಾಡ ಶಾಸನದಿಂದ ಊಹಿಸಬಹುದಾಗಿದೆ.

ಇಲ್ಲಿಗೆ ಕಲಚುರಿ ವಂಶದ ಚರಿತ್ರೆ ಮುಗಿದಂತಾಯಿತು. ಹಿಂದೆ ಈ ಮನೆತನದ ಮೊದಲಿನ ಕೆಲವು ತಲೆಮಾರುಗಳ ವಂಶ ಕ್ರಮವನ್ನು ಕೊಟ್ಟಿದ್ದೇನೆ. ಅವರ ಮುಂದಿನವರ ವಂಶಕ್ರಮವು ಇಂತಾಗುತ್ತದೆ.


ಕೃಷ್ಣ, ಕರ್ಣ, ಕನ್ನಮ (೨) (೧೦೬೭)
ಜೋಗಮ×ತಾರಾದೇವಿ (೧೦೮೦–೧೧೧೮)
ಸಾವಳದೇವಿ×ವಿಕ್ರಮಾದಿತ್ಯ (೬)
ಪೆರ್ಮಾಡಿ, ಹೆಮ್ಮಾಡಿ (೧೧೧೮–೧೧೪೦)
ಬಿಜ್ಜಳ (೨) (೧೧೪೦–೧೧೬೭)
ಮೈಳುಗಿ (೧೦೬೭
ಏಚಲದೇವಿಯಿಂದ
[೧] ಸಿರಿಯಾದೇವಿ
× ಸಿಂದಚಾವುಂಡ
[೨] ವಜ್ರದೇವ
(?)
ಕರ್ಣ, ಕನ್ನರ,
ಕಲಿದೇವ (೧೧೬೭)
[೩] ರಾಯಮುರಾರಿ
ಸೋವಿದೇವ (೧೧೬೭–೭೬)
ವೀರಬಿಜ್ಜಳ (೩)
(೧೧೯೩)
ರಾಯಮುರಾರಿ ಜನ್ನುಗಿ (೧೨೦೪)
ಬಿಜ್ಜಳ (೪)
[೪] ಮಲ್ಲಿಕಾರ್ಜುನ
ಮಲ್ಲುಗಿ,
ಮೈಳುಗಿ (೧೧೭೫–೭೬)
[೫] ಸಂಕಮ (೨)
(೧೧೭೫–೮೦)
[೬] ಆಹವಮಲ್ಲ,
(೧೧೮೦–೮೩)
[೭] ಸಿಂಘಣ
(೧೧೮೩–೮೪)
[೮] ಮಗಳು×
ಬಂದಣಿಕೆ ಬರ್ಮರಸ (೧೧೬೨)

## ೨ ಕಲಚುರಿ ನೆಲೆವೀಡುಗಳು.

ಕಲಚುರಿ ಶಾಸನಗಳನ್ನು ಅವಲೋಕಿಸಿದರೆ ಅವರು ಅನೇಕ ಸ್ಥಳಗಳನ್ನು ಆಗಾಗ ತಮ್ಮ ರಾಜಧಾನಿಯಾಗಿ ಮಾಡಿಕೊಂಡು ಆಳಿದಂತೆ ಕಂಡುಬರುತ್ತದೆ. ಇಂತಹ ಸ್ಥಳಗಳು ನಾಲ್ಕು: ೧ ಮಂಗಳವೇಡ, ೨ ಕಲ್ಯಾಣ, ೩ ಮೊದೆಗನೂರ್, ೪ ಸಲೆಯಹಳ್ಳಿ. ಒಂದೊಂದರ ಮಹತ್ವಕ್ಕೆ ಅನುಗುಣವಾಗಿ ಮತ್ತು ಕಾಲಾನುಕ್ರಮದಿಂದ ಈ ರಾಜಧಾನಿಗಳ ಚರಿತ್ರೆಯನ್ನು ಸಂಕ್ಷೇಪವಾಗಿ ಪರಿಶೀಲಿಸುವ.

### ಮಂಗಳವೇಡ.

ಕರ್ನಾಟಕದಲ್ಲಿ ವಲಸೆಯಾಗಿ ಬಂದ ಕಲಚುರಿಗಳ ಪೂರ್ವಜರು ಮೊದಲು ನೆಲಸಿದ ಊರು ಮಂಗಳವೇಡ. ಇದುವೆ ಅವರ ಮಂಡಲ ರಾಜ್ಯದ ಪ್ರಮುಖ ಸ್ಥಳವಾಗಿ ಪ್ರಖ್ಯಾತಿಗೆ ಬಂದಿತು. ಮಾಡಗಿಹಾಳ ಶಾಸನದ ಆಧಾರದಿಂದ ಈ ವಿಷಯವನ್ನು ಹಿಂದೆ ವಿವರಿಸಿದ್ದೇನೆ. ನಮ್ಮ ಅನ್ವೇಷಣದಲ್ಲಿ ಕಂಡ ಕಲಚುರಿಗಳ ಪ್ರಥಮ ಜ್ಞಾತ ಪೂರ್ವಜನಾದ ಉಚಿತನೂ ಆತನ ಸಂತತಿಯವರೂ ಇದೇ ಪಟ್ಟಣದಲ್ಲಿ ನಾಯಕರಾಗಿರಬೇಕು ಎಂದು ಇಟ್ಟುಕೊಳ್ಳಲು ಅಭ್ಯಂತರವಿಲ್ಲ. ಬಿಜ್ಜ, ಬಿಜ್ಜರಸ, ಅಥವಾ ಒಂದನೆಯ ಬಿಜ್ಜಲನ ಹಾಗೂ ಆತನ ಮಗನಾದ ಕನ್ನಮರಸನ ಚಡಚಣದ ಶಾಸನಗಳಿಂದ ಮಂಗಳವೇಡವು ಅವರ ರಾಜಧಾನಿಯಾಗಿದ್ದ ಅಂಶವನ್ನು ಈ ಹಿಂದೆ ಅವಲೋಕಿಸಿದ್ದೇವೆ. ಈ ಒಂದನೆಯ ಬಿಜ್ಜಲನೇ ಹರಿಹರನ ರೇವಣಸಿದ್ಧೇಶ್ವರದೇವರ ಪುರಾಣದಲ್ಲಿ ಉಕ್ತನಾದ ಬಿಜ್ಜಣನಾಗಿರಬೇಕು. ಈ ಬಿಜ್ಜಣನಿಗೆ ಮಂಗಳವಾಡವು ರಾಜಧಾನಿಯಾಗಿದ್ದಂತೆ ಆ ಪುರಾಣದಲ್ಲಿ ವರ್ಣಿಸಿದೆ. ಕನ್ನಮರಸನ ಮಗನಾದ ಜೋಗಮನು ಮಂಗಳವಾಡದ ಮಹಾಮಂಡಳೇಶ್ವರನೆಂಬ ನಾಮಾಂಕಿತನಾಗಿದ್ದನು. ಇದಲ್ಲದೆ ಬೇರೆ ಆಧಾರಗಳಿಂದಲೂ ಮಂಗಳವೇಡವು ಆತನ ನೆಲೆವೀಡಾಗಿದ್ದ ಅಂಶವು ಸ್ಪಷ್ಟವಾಗುತ್ತದೆ.

ಚಾಲುಕ್ಯ ರಾಜ್ಯಾಪಹರಣ ಮಾಡುವವರೆಗೆ ಬಿಜ್ಜಳನ ನೆಲೆವೀಡು ಮುಖ್ಯವಾಗಿ ಮಂಗಳವೇಡವೇ ಆಗಿದ್ದಿತು. ಈ ಸಂಗತಿ ಬಸವರಾಜದೇವರ ರಗಳೆ, ಮೊದಲಾದೆಡೆಯ ವರ್ಣನೆಯಿಂದಲೂ ವ್ಯಸವಡ,

ಸಂಖ, ಮತ್ತು ಸಿಧನಾಥ, ಗ್ರಾಮಗಳಲ್ಲಿಯ ಶಾಸನಗಳಿಂದಲೂ ನಿಶ್ಚಿತ ವಾಗುತ್ತದೆ. ಚಕ್ರೇಶ್ವರನಾದ ಬಳಿಕ ಮಾತ್ರ ಬಿಜ್ಜಳನು ತನ್ನ ಆಳಿಕೆಯ ಹೆಚ್ಚುಕಾಲವನ್ನು ಕಲ್ಯಾಣದಲ್ಲಿ ಕಳೆದಂತೆ ಪ್ರಕಟವಾಗುತ್ತದೆ.

ಕ್ರಿ. ಶ. ೧೧೬೮ ರಿಂದ ೧೧೭೭ರ ವರೆಗಿನ ಐದು ಶಾಸನಗಳಲ್ಲಿ ರಾಯಮುರಾರಿ ಸೋವಿದೇವನು ಮಂಗಳವೇಡದ ನೆಲೆವೀಡಿನಲ್ಲಿದ್ದಂತೆ ನಿರ್ದೇಶಗಳು ದೊರೆಯುತ್ತವೆ. ಈ ಶಾಸನಗಳು ಸಾತಾರಾ, ಜತ್ ಮತ್ತು ವಿಜಾಪೂರ ಪ್ರದೇಶದ ಭೀಮಘಾಟ, ಉಮದಿ, ಕಡಲೆವಾಡ, ಮೊದಲಾದ ಗ್ರಾಮಗಳಲ್ಲಿ ಕಂಡುಹಿಡಿಯಲಾದುವು. ೧೧೮೧ನೆಯ ಕ್ರಿ. ಶ. ದ ಒಂದು ಶಾಸನದಲ್ಲಿ ಸಂಕಮನ ರಾಜಧಾನಿ ಮಂಗಳವಾಡವಾಗಿದ್ದಂತೆ ಹೇಳಿದೆ. ಅದಕ್ಕೂ ಪೂರ್ವದ ೧೧೭೮ ನೆಯ ಕ್ರಿ. ಶ. ದ ಸಂಖದ ಶಾಸನದಲ್ಲಿ ಆ ಗ್ರಾಮದ ಒಂದು ದೇವಾಲಯಕ್ಕೆ ಆತನು ದಾನಮಾಡಿದ ವಿಷಯವು ಉಕ್ತವಾಗಿದೆ. ಅದೇ ಸಂಖದ ಶಾಸನ ಮತ್ತು ಹೇಮಾದ್ರಿಯ ವ್ರತಖಂಡದ ಆಧಾರದಿಂದ ರಾಯಮುರಾರಿ ಸೋವಿದೇವನ ಮಗನಾದ ವೀರ ಬಿಜ್ಜಳನು ಮಂಗಳವೇಡ ರಾಜ್ಯದ ಒಡೆಯನಾಗಿದ್ದನೆಂದು ತಿಳಿದುಬರುತ್ತದೆ. ಈ ಅಂಶವನ್ನು ಮೇಲೆ ಚರ್ಚಿಸಿದ್ದೇನೆ.

ಈ ಊರ ಹೆಸರಿನ ಮಂಗಳವೇಡ ಎಂಬ ರೂಪವು ಹೆಚ್ಚು ಸಾಮಾನ್ಯವಾದುದು. ಮಂಗಳವಾಡ ಎಂಬ ರೂಪವು ಕೆಲವು ಶಾಸನಗಳಲ್ಲಿಯೂ ಹೆಚ್ಚಾಗಿ ಸಾಹಿತ್ಯದಲ್ಲಿಯೂ ಗೋಚರವಾಗುತ್ತದೆ.

## ಕಲ್ಯಾಣ

ಚಾಲುಕ್ಯ ಸಿಂಹಾಸನವನ್ನು ಆಕ್ರಮಿಸಿದ ಅನಂತರವೇ ಕಲ್ಯಾಣವು ಕಲಚುರಿಗಳ ರಾಜಧಾನಿಯಾಯಿತು. ಬಿಜ್ಜಳನ ಆಳಿಕೆಯ ಶಾಸನಗಳಲ್ಲಿ ಮಾತ್ರ ಈ ಸ್ಥಳವು ಹೆಚ್ಚಾಗಿ ಕಾಣಿಸಿಕೊಳ್ಳುತ್ತದೆ. ಅನಂತರ ಸೋವಿದೇವ—ಸಂಕಮರ ಆಳಿಕೆಯ ಶಾಸನಗಳಲ್ಲಿ ಇದರ ಉಲ್ಲೇಖನಗಳು ವಿರಳವಾಗಿವೆ. ಸೋವಿದೇವನು ಕ್ರಿ.ಶ. ೧೧೭೦-೭೨ರಲ್ಲಿ ಮತ್ತು ಸಂಕಮನು ಕ್ರಿ. ಶ. ೧೧೭೭-೭೯ ರಲ್ಲಿ ಕಲ್ಯಾಣದಲ್ಲಿ ಇದ್ದಂತೆ ತಿಳಿಯುತ್ತದೆ ಆಹವಮಲ್ಲನ ಶಾಸನಗಳಲ್ಲಿ ಇದರ ನಿರ್ದೇಶವು ದೊರೆತಿಲ್ಲ. ಇದನ್ನು ನೋಡಿದರೆ ಕಲ್ಯಾಣವು ರಾಜಕೀಯ ದೃಷ್ಟಿಯಿಂದ ಬಿಜ್ಜಳಪುತ್ರರಿಗೆ ಅನುಕೂಲವಾಗಿ ಪರಿಣಮಿಸಲಿಲ್ಲವೆಂದು ತೋರುತ್ತದೆ. ಯಾದವರಂತಹ ಮಾಂಡಲೀಕರ ಪ್ರಾಬಲ್ಯವು ಇದಕ್ಕೆ ಒಂದು ಕಾರಣವಾಗಿರಬಹುದು.

### ಮೋದೆಗನೂರ್

ಸೋವಿದೇವನ ಕಾಲದಲ್ಲಿ ಈ ಊರು ಕಲಚುರಿಗಳ ನೆಲೆವೀಡಾಗುವ ಪ್ರತಿಷ್ಠೆಯನ್ನು ಪಡೆಯಿತು. ಆತನ ಆಳಿಕೆಯ ಶಾಸನಗಳಲ್ಲಿ ಅದು ಅನೇಕ ಸಲ ಕಾಣಿಸಿಕೊಳ್ಳುತ್ತವೆ. ಸಂಕಮನ ಆಳಿಕೆಯ ಎರಡು ಮೂರು ಶಾಸನಗಳಲ್ಲಿ ಮತ್ತು ಆಹವಮಲ್ಲನ ಒಂದು ಶಾಸನದಲ್ಲಿ ಇದರ ನಿರ್ದೇಶವು ದೊರೆಯುತ್ತದೆ. ಮೊದೆಗನೂರ್, ಮೊದೆನೂರ್, ಮೊದೆಯ ನೂರ್ ಎಂಬ ರೂಪಾಂತರಗಳಲ್ಲಿಯೂ ಈ ಊರನ್ನು ಹೆಸರಿಸಲಾಗಿದೆ. ಇದು ಇಂದಿನ ಕೊಪ್ಪಳ ಜಿಲ್ಲೆಯಲ್ಲಿಯ ಮೋದಿನೂರೆಂಬ ಗ್ರಾಮವು. ಈ ಗ್ರಾಮದ ವೀರಭದ್ರ ದೇವಾಲಯದಲ್ಲಿ ನಾನು ಕಂಡುಹಿಡಿದ ಶಾಸನ ದಿಂದ ಈ ಅಂಶವು ನಿಸ್ಸಂದಿಗ್ಧವಾಗಿ ಸಿದ್ಧವಾಗುತ್ತದೆ. ಇಂದಿನ ಯಲ ಬುರ್ಗಿ ಅಥವಾ ಸಿಂದರ ರಾಜಧಾನಿಯಾದ ಎರಂಬರಗೆ ಈ ಗ್ರಾಮದಿಂದ ಸ್ವಲ್ಪ ದೂರದಲ್ಲಿದೆ. ಸಿಂದ ಆಚುಗಿ ಮತ್ತು ಆತನ ಮಗ ಚಾವುಂಡ ಇವರು ಬಲಿಷ್ಠರಾಗಿದ್ದರು. ಚಾವುಂಡನಿಗೆ ಬಿಜ್ಜಳನು ತನ್ನ ಮಗಳು ಸಿರಿಯಾದೇವಿಯನ್ನು ಕೊಟ್ಟಿದ್ದನು. ಈ ಕಾರಣಗಳ ಮೂಲಕ ಸೋವಿ ದೇವನು ಈ ಗ್ರಾಮವನ್ನು ತನ್ನ ರಾಜಧಾನಿಯಾಗಿ ಆರಿಸಿಕೊಂಡಿರ ಬಹುದು.

### ಸೆಲಿಯಹಳ್ಳಿ

ಸೋವಿದೇವ ಮತ್ತು ಸಂಕಮನ ಇವರ ಕೆಲವೇ ಶಾಸನಗಳಲ್ಲಿ ಈ ನೆಲೆವೀಡಿನ ಉಲ್ಲೇಖಗಳು ದೊರೆತಿವೆ. ಸೋವಿದೇವನು ಕ್ರಿ. ವ. ೧೧೭೨-೭೩ ರಲ್ಲಿ ಮತ್ತು ಸಂಕಮನು ಕ್ರಿ. ವ. ೧೧೭೮ರಲ್ಲಿ ಈ ಊರಲ್ಲಿ ವಾಸಿಸು ತ್ತಿದ್ದಂತೆ ತಿಳಿಯುತ್ತದೆ. ಈ ಊರು ಕೊಲ್ಹಾಪುರ ಜಿಲ್ಲೆಯ ಶಿಲೋಳಿ ಗ್ರಾಮವಾಗಿರಬೇಕೆಂದು ಫ್ಲೀಟ ಸೂಚಿಸಿದ್ದಾನೆ. ಈ ಅಂಶವನ್ನು ನಿರ್ಧರಿಸಲು ಇನ್ನೂ ಹೆಚ್ಚು ನಿಶ್ಚಯಾತ್ಮಕ ಆಧಾರಗಳ ಅಗತ್ಯವಿದೆ.

---

## ಚಾಲುಕ್ಯ ಪ್ರತಿಷ್ಠಾಪನೆ

ಬಿಜ್ಜಳನು ಕ್ರಿ. ವ. ೧೧೬೨ ರ ಸುಮಾರಿಗೆ ಚಾಲುಕ್ಯ ಸಿಂಹಾಸನ ವನ್ನು ಆಕ್ರಮಿಸಿದನೆಂಬ ವಿಷಯವನ್ನು ಈ ಹಿಂದೆ ಪರಿಶೀಲಿಸಿದ್ದೇವೆ. ಈ ರಾಜ್ಯ ಕ್ರಾಂತಿಯ ಕೋಲಾಹಲದಲ್ಲಿ ನುಮ್ಮಡಿ ತೈಲಪನು ಮತ್ತು

ಚಾಲುಕ್ಯ ಕುಲದ ಇನ್ನೂ ಕೆಲ ರಾಜಕುಮಾರರು ಹತರಾಗಿರಬೇಕು ಎಂಬ ಸಂಗತಿಯನ್ನು ಅವಲೋಕಿಸಿದ್ದೇವೆ. ಬಳಿಕ ಈ ಚಾಲುಕ್ಯ ಮನೆತನದವನಾದ ನಾಲ್ವಡಿ ಸೋಮೇಶ್ವರನು ಕ್ರಿ. ಶ. ೧೧೮೪ರಲ್ಲಿ ಬಿಜ್ಜಳಪುತ್ರ ಸಿಂಘಣನಿಂದ ಮರಳಿ ತನ್ನ ರಾಜ್ಯವನ್ನು ಕಿತ್ತುಕೊಂಡನೆಂಬ ಘಟನೆಯನ್ನು ಪರ್ಯಾಮರ್ಶಿಸಿದ್ದೇವೆ. ಈ ನಡುವಿನ ಸುಮಾರು ೨೦—೨೨ ಸಂವತ್ಸರಗಳ ಕಾಲಾವಧಿಯಲ್ಲಿ ಚಾಲುಕ್ಯ ವಂಶದ ರಾಜಕುಮಾರರು ಅಜ್ಞಾತವಾಸವನ್ನು ಅನುಭವಿಸಿದರು. ಈ ವಿಪತ್ಕಾಲದಲ್ಲಿ ಅವರು ಏನುಮಾಡುತ್ತಿದ್ದರು? ಅವರ ಚಲನವಲನಗಳಿಂದ ಕಲಚುರಿ ಆಳಿಕೆಗೆ ಯಾವ ವಿಧದಿಂದಲಾದರೂ ಹಾನಿ ಸಂಭವಿಸಿತೆ? ಚಾಲುಕ್ಯ ರಾಜ್ಯದ ಪುನಃಸ್ಥಾಪನೆಗೆ ಸಹಾಯ ಮಾಡಿದವರು ಯಾರು? ನಾಲ್ವಡಿ ಸೋಮೇಶ್ವರನ ಬಲಾಬಲ ಎಂತಹದು? ಮುಂತಾದ ಪ್ರಶ್ನೆಯಗಳು ಕಲಚುರಿ ಚರಿತ್ರೆಯ ಭಾಗವಾಗಿರುವದರಿಂದ ಇವುಗಳನ್ನು ಕಂಡು ಹಿಡಿಯಲು ಚಾರಿತ್ರಿಕ ಸಾಧನಗಳಿಂದ ಎಷ್ಟು ದೂರಕ್ಕೆ ನೆರವು ದೊರೆಯುತ್ತದೆ, ಎಂಬ ವಿಚಾರವನ್ನು ಇಲ್ಲಿ ಸಂಕ್ಷೇಪವಾಗಿ ಪ್ರಸ್ತಾವಿಸುವೆ.

ಬಿಜ್ಜಳನ ರಾಜ್ಯಾಪಹರಣವು ಮುಗಿಯುತ್ತ ಬಂದಿರುವ ಕಾಲದಿಂದ ಪುನಃ ಚಾಲುಕ್ಯ ರಾಜ್ಯಸ್ಥಾಪನೆಯಾಗುವ ವರೆಗಿನ ಅವಧಿಯಲ್ಲಿ ಚಾಲುಕ್ಯ ಮನೆತನದ ಕೆಲವರು ರಾಜಪುತ್ರರು ಅಲ್ಲಲ್ಲಿ ಆಳುತ್ತಿರುವ ರಹಸ್ಯಮಯವಾದ ಸನ್ನಿವೇಶವು ಗೋಚರವಾಗುತ್ತದೆ. ಇವರು ಆ ಆಳಿಕೆಯನ್ನು ಎತ್ತಿ ಹಿಡಿಯುವ ಶಾಸನಗಳು ಮುಖ್ಯವಾಗಿ ದಕ್ಷಿಣ ಕರ್ನಾಟಕದ ಭಾಗಗಳಲ್ಲಿ, ಅದರಲ್ಲಿಯೂ ಹೆಚ್ಚಾಗಿ ಚಿತ್ರದುರ್ಗ, ಬಳ್ಳಾರಿ ಮತ್ತು ಅನಂತಪುರ ಜಿಲ್ಲೆಗಳ ಪ್ರದೇಶವಲ್ಲಿ ದೊರೆತಿವೆ. ಇವುಗಳ ಮೂಲಕ ಕಲ್ಯಾಣ ರಾಜಧಾನಿಯಿಂದ ಹೊಡೆದೊಡಿಸಲಾದ ಚಾಲುಕ್ಯರು ಈ ಪ್ರದೇಶಕ್ಕೆ ಬಂದು ತಂಗಿರಬೇಕೆಂದೂ ಅವರಿಗೆ ಇಲ್ಲಿಯ ಜನಗಳ ಮತ್ತು ಮಾಂಡಲಿಕರ ಸಹಾಯವು ಒದಗಿರಬೇಕೆಂದೂ ತಿಳಿಯಬಹುದಾಗಿದೆ. ಈ ವಿಚಾರವಾಗಿ ನಿದರ್ಶನಗಳು ಸಾಕಷ್ಟು ಸಂಖ್ಯೆಯಲ್ಲಿ ದೊರೆತಿದ್ದರೂ, ಅವುಗಳಲ್ಲಿ ಕೆಲ ಸಂದೇಹಗಳು ಇಲ್ಲದೆ ಇಲ್ಲ. ಈ ವಿಷಯದತ್ತ ಇದುವರೆಗೆ ಅನ್ವೇಷಕರ ಲಕ್ಷ್ಯವು ಹೋದಂತೆ ತೋರಲಿಲ್ಲ. ಆದುದರಿಂದ ಮುಂದಿನ ವಿವೇಚನೆಯ ಸೌಲಭ್ಯಕ್ಕಾಗಿ ಈಶಾಸನಗಳನ್ನು ಹೆಚ್ಚು ವಿವರಗಳೊಂದಿಗೆ ಪರಿಶೀಲಿಸುವೆ. ಶಾಸನಗಳ ಈ ಪಟ್ಟಿ ಪರಿಪೂರ್ಣವಾಗಿಲ್ಲ.

## ತ್ರಿಭುವನಮಲ್ಲ

೧. ಅನಂತಪುರ ಜಿಲ್ಲೆಯ ಮಡಕಶಿರಾ ತಾಲೂಕಿನ ಹೇಮಾವತಿ ಗ್ರಾಮದ ಶಾಸನ ಕಾಲ ಶಕ ೧೦೮೪, ವೃಷ = ಕ್ರಿ. ಶ. ೧೧೬೨, ಡಿಸೆಂಬರ. ಚಾಲುಕ್ಯ ಚಕ್ರವರ್ತಿ ವಿಕ್ರಮದೇವನು ರಾಜ್ಯವಾಳುತ್ತಿದ್ದನೆಂದು ಹೇಳಿದೆ. ರಾಜನ ಹೆಸರಿನ ಹಿಂದೆ 'ಸಮಸ್ತ ಭುವನಾಶ್ರಯ' ಮುಂತಾದ ಸುಪರಿಚಿತ ಚಾಲುಕ್ಯ ಪ್ರಶಸ್ತಿ ಕಾಣಿಸಿಕೊಳ್ಳುತ್ತದೆ. ಆತನ ಸಾಮಂತ ತ್ರಿಭುವನಮಲ್ಲ —ಮಲ್ಲಿದೇವ— ಚೋಳಮಹಾರಾಜನು ಸೀರೆನಾಡನ್ನು ಹೆಂಜೇರು ಅಂದರೆ ಇಂದಿನ ಹೇಮಾವತಿ ರಾಜಧಾನಿಯಿಂದ ಆಳುತ್ತಿದ್ದನೆಂದು ನಿರೂಪಿಸಿದೆ.

೨. ಅದೇ ಹೇಮಾವತಿ ಗ್ರಾಮದ ಶಾಸನ ಕಾಲ ಶಕ ೧೦೯೦, ಸರ್ವಜಿತ್ = ಕ್ರಿ. ಶ. ೧೧೬೭ ಮೇ. ಚಾಲುಕ್ಯರ ಪರಿಚಿತ ಪ್ರಶಸ್ತಿ ಸಹಿತನಾಗಿದ್ದ 'ಚಾಲುಕ್ಯ ಚಕ್ರವರ್ತಿ' ರಾಜ್ಯವಾಳುತ್ತಿದ್ದನೆಂದು ಹೇಳಿದೆ. ಆತನ ಸಾಮಂತ ಮಹಾಮಂಡಲೇಶ್ವರ ತ್ರಿಭುವನಮಲ್ಲ—ಮಲ್ಲಿದೇವ— ಚೋಳಮಹಾರಾಜನು ಹೆಂಜೇರು ಬೀಡಿನಲ್ಲಿ ಆಳುತ್ತಿದ್ದನೆಂದು ವರ್ಣಿಸಿದೆ.

೩. ಬಳ್ಳಾರಿ ಜಿಲ್ಲೆಯ ರಾಯದುರ್ಗ ತಾಲೂಕಿನ ಗೋವಿಂದವಾಡ ಗ್ರಾಮದ ಶಾಸನ. ಕಾಲ ಶಕ ೧೦೯೨ ವಿರೋಧಿ = ಕ್ರಿ. ಶ. ೧೧೬೯ ಸುಪರಿಚಿತ ಪ್ರಶಸ್ತಿ ಸಹಿತ 'ಚಾಲುಕ್ಯ ಚಕ್ರವರ್ತಿ' ರಾಜ್ಯವಾಳುತ್ತಿದ್ದನೆಂದು ಹೇಳಿದೆ. ಆತನ ಸಾಮಂತ ತ್ರಿಭುವನಮಲ್ಲ. ಮಲ್ಲಿದೇವ, ಚೋಳಮಹಾರಾಜನು ಹೆಂಜೇರು ರಾಜಧಾನಿಯಿಂದ ಆಳುತ್ತಿದ್ದನು.

## ಸ್ಪಷ್ಟೀಕರಣ

ಈ ನಾಲ್ಕು ಶಾಸನಗಳಲ್ಲಿ ಒಂದು ಶಾಸನವು ರಾಜನನ್ನು ತ್ರಿಭುವನಮಲ್ಲನೆಂದು ಹೆಸರಿಸುವುದು. ಇನ್ನೊಂದು ವಿಕ್ರಮದೇವನೆಂದು. ಮಿಕ್ಕೆರಡರಲ್ಲಿ ರಾಜನ ವಿಶಿಷ್ಟ ಹೆಸರೇ ಇಲ್ಲ. ಆದರೂ ಇವು ಒಬ್ಬನ ಆಳಿಕೆಗೆ ಸಂಬಂಧಿಸಿದವು ಎಂದು ಗ್ರಹಿಸಬಹುದಾಗಿದೆ. ಏಕೆಂದರೆ ತ್ರಿಭುವನಮಲ್ಲ ಮತ್ತು ವಿಕ್ರಮಾದಿತ್ಯ ಇವು ಹಿಂದಿನ ಆರನೆಯ ವಿಕ್ರಮಾದಿತ್ಯನ ಸಮೀಕರಣವನ್ನು ಬಳಸುವುದು ಯುಕ್ತವೆಂದು ತೋರುತ್ತದೆ. ಈ ತ್ರಿಭುವನಮಲ್ಲನೇ ಮುಂದೆ ನಾಲ್ವಡಿ ಸೋಮೇಶ್ವರನೆಂದು ಪಟ್ಟಕ್ಕೆ

ಬಂದವನು. ಈತನು ಮುಮ್ಮಡಿ ತೈಲಪನ ಹಿರಿಯ ಮಗನಾಗಿದ್ದಂತೆ ತೋರು ತ್ತದೆ. ಈ ಕಾರಣದಿಂದಲೆ ಈತನನ್ನು ಪಟ್ಟಕ್ಕೆ ಬಾಧ್ಯಸ್ಥನೆಂದು ಗಣಿಸಿ ಈ ಸಂಗತಿಯನ್ನು ಪ್ರಾಮುಖ್ಯವಾಗಿ ಸೂಚಿಸಲು ಅದ್ವಿತೀಯವಾಗಿ ಚಾಳುಕ್ಯ ಚಕ್ರವರ್ತಿ ಎಂದು ಈತನನ್ನು ಸಂಬೋಧಿಸಿರಬೇಕು. ಮೇಲಿನ ಮೂರ ನೆಯ ಶಾಸನದಲ್ಲಿಯು ಕಲ್ಯಾಣದ ನೆಲೆವೀಡಿನ ನಿರ್ದೇಶವು ಕೇವಲ ಔಪ ಚಾರಿಕವಾಗಿದೆ. ಏಕೆಂದರೆ ಈ ಸಮಯದಲ್ಲಿ ಕಲ್ಯಾಣವು ಕಲಚುರಿಗಳ ಸ್ವಾಧೀನದಲ್ಲಿ ಇದ್ದ ವಿಷಯವು ಶಾಸನ ಪ್ರಮಾಣದಿಂದ ಸಿದ್ಧವಾಗುತ್ತದೆ. ಕಲ್ಯಾಣದ ಮೇಲಿಯೇ ನ್ಯಾಯವಾದ ಹಮ್ಮು ಬಾಧ್ಯತೆ ನಷ್ಟವಾಗಿಲ್ಲ ಎಂದು ತೋರಿಸಲು ಈ ಚಾಲುಕ್ಯ ಶಾಸನದಲ್ಲಿ ಈ ಪ್ರಯೋಗವನ್ನು ಮಾಡಿ ರಬೇಕು. ಮೇಲೆ ನಿರ್ದಿಷ್ಟನಾದ ಸಾಮಂತ ತ್ರಿಭುವನಮಲ್ಲ— ಜಗದೇ ವನು ನಿಡುಗಲ್ಲಲ್ಲಿ ಆಳಿದ ಚೋಳ ವಂಶೀಯನು. ಈ ವಂಶದ ಅರಸರು ಚೋಳ ಮಹಾರಾಜ ಎಂಬ ಬಿರುದನ್ನು ಧರಿಸಿದರು.

## ಜಗದೇಕಮಲ್ಲ

೧. ಬಳ್ಳಾರಿ ಜಿಲ್ಲೆಯ ಹಡಪನಹಳ್ಳಿ ತಾಲೂಕಿನ ಬಾಗಳಿ ಗ್ರಾಮದ ಶಾಸನ ಕಾಲ ಶಕ ೧೦೮೨ ವಿಕ್ರಮ= ಕ್ರಿ. ಶ. ೧೧೬೦, ಆಗಸ್ಟ್. ಸುಪರಿಚಿತ ಚಾಲುಕ್ಯ ಪ್ರಶಸ್ತಿಯುತನಾದ ಜಗದೇಕಮಲ್ಲನು ರಾಜ್ಯವಾಳುತ್ತಿದ್ದಂತೆ ಹೇಳಿದೆ. ಆತನ ಸಾಮಂತ ವೀರಪಾಂಡ್ಯನು ಕದಂಬಳಿಗೆ, ಬಲ್ಲಕುಂದೆ ಮತ್ತು ಕೋಗಳಿ ನಾಡುಗಳನ್ನು ಆಳುತ್ತಿದ್ದನು.

೨. ಚಿತ್ರದುರ್ಗ ಜಿಲ್ಲೆಯ ದಾವಣಗೆರೆ ೪೩ ಅಂಕದ ಶಾಸನ ಕಾಲ ಬಿಜ್ಜಳನ ೮ನೆಯ ವರ್ಷ, ಸುಭಾನು = ಕ್ರಿ. ಶ. ೧೧೬೩ ಮೊದಲು ಚಾಲುಕ್ಯ ಜಗದೇಕಮಲ್ಲನನ್ನು ಕುಂತಳ ದೇಶದ ಭೂಪತಿಯೆಂದು ಸ್ತುತಿಸಿದೆ. ಬಳಿಕ ಆ ಕಾಲದಲ್ಲಿ ಬಿಜ್ಜಳನು ರಾಜ್ಯಭಾರ ಮಾಡುತ್ತಿದಂತೆ ನಿರೂಪಿಸಿದೆ.

೩. ಅನಂತಪುರ ಜಿಲ್ಲೆಯ ಮಡಕಶಿರಾ ತಾಲೂಕಿನ ಮಧುಡಿ ಗ್ರಾಮದ ಶಾಸನ ಕಾಲ ಶಕ ೧೦೯೧, ವಿರೋಧಿ =೧೧೬೯, ಆಗಸ್ಟ್. ಚಾಲುಕ್ಯ ಪ್ರಶಸ್ತಿ ಸಹಿತ ಜಗದೇಕಮಲ್ಲನು ಕಲ್ಯಾಣದ ನೆಲೆವೀಡಿನಲ್ಲಿ ರಾಜ್ಯವಾಳುತ್ತಿದ್ದಂತೆ ಹೇಳಿದೆ. ಆತನ ಸಾಮಂತ ಜಗದೇಕಮಲ್ಲ— ಮಲ್ಲಿದೇವ—ಚೋಳಮಹಾರಾಜನು ಹೆಂಜೆಯ ರಾಜಧಾನಿಯಿಂದ ಆಳುತ್ತಿದ್ದನು.

೪. ಬಳ್ಳಾರಿ ಜಿಲ್ಲೆಯ ಹರಪನಹಳ್ಳಿ ತಾಲೂಕಿನ ಬಡಬನ್ನಿಹಳ್ಳಿ ಗ್ರಾಮದ ಶಾಸನ ಕಾಲ ಶಕ ೧೦೯೫ ಜಯ – ಕ್ರಿ. ಶ. ೧೧೭೩, ಜೂನ ಚಾಲುಕ್ಯ ಪ್ರಶಸ್ತಿ ಸಮೇತ ಜಗದೇಕಮಲ್ಲನು ರಾಜ್ಯವಾಳುತ್ತಿದ್ದನು. ನೊಳಂಬ ಚಕ್ರವರ್ತಿ ಹರಿಹರ ಕ್ಷೇತ್ರದಲ್ಲಿಯ ನೊಳಂಬೇಶ್ವರ ದೇವರಿಗೆ ಭೂದಾನ ಮಾಡಿದನೆಂದು ಹೇಳಿದೆ. ನೊಳಂಬ ಚಕ್ರವರ್ತಿಯ ವಿಶಿಷ್ಟ ಹೆಸರನ್ನು ನಿರ್ದೇಶಿಸಿಲ್ಲ. ಈತನು ಜಗದೇಕಮಲ್ಲನ ಸಾಮಂತನಾಗಿರಬೇಕು.

೫. ಅದೇ ತಾಲೂಕಿನಲ್ಲಿಯ ಮನ್ನೆರಮಸಲವಾಡ ಗ್ರಾಮದ ಶಾಸನ ಕಾಲ ಕಲಚುರಿ ರಾಯನಾರಾಯಣ ಆಹವಮಲ್ಲನ ಆಳಿಕೆಯ ೪ ನೆಯ ವರ್ಷ, ಶೋಭಕೃತ್ ಸಂವತ್ಸರ= ಕ್ರಿ. ಶ. ೧೧೮೩ ಜೂನ್ ಸಮಸ್ತ ಚಾಲುಕ್ಯ ಪ್ರಶಸ್ತಿಯಿಂದ ಅಲಂಕೃತನಾದ ಜಗದೇಕಮಲ್ಲನು ಕಲ್ಯಾಣದ ನೆಲೆವೀಡಿನಲ್ಲಿ ರಾಜ್ಯವಾಳುತ್ತಿದ್ದಂತೆ ಹೇಳಿದೆ. ಆತನ ಸಾಮಂತ ವಿಜಯಪಾಂಡ್ಯನು ಕೋಗಳಿ ಮತ್ತು ನೊಳಂಬವಾಡಿ ನಾಡುಗಳನ್ನು ಆಳುತ್ತಿದ್ದನು.

೬. ಚಿತ್ರದುರ್ಗ ಜಿಲ್ಲೆಯ ಚಿತ್ರದುರ್ಗ ೧೩ ಅಂಕದ ಚಿತ್ರದುರ್ಗ ಗ್ರಾಮದ ಶಾಸನ ಕಾಲ ಶೋಭಕೃತ್ ಸಂವತ್ಸರ, ಫಾಲ್ಗುನ=ಕ್ರಿ. ಶ. ೧೧೮೪. ಚಾಲುಕ್ಯ ಪ್ರಶಸ್ತಿ ಪುರಸ್ಕೃತನಾದ ಜಗದೇಕಮಲ್ಲನು ರಾಜ್ಯವಾಳುತ್ತಿದ್ದಂತೆ ಹೇಳಿದೆ. ಆತನ ಸಾಮಂತ ವಿಜಯಪಾಂಡ್ಯನು ನೊಳಂಬವಾಡಿ ಪ್ರಾಂತವನ್ನು ಉಚ್ಚಂಗಿಯ ನೆಲೆವೀಡಿನಿಂದ ಆಳುತ್ತಿದ್ದನು. ಈ ವಿಜಯಪಾಂಡ್ಯನು ಮೇಲಿನ ಬಾಗಳಿಯ ಶಾಸನದ ವೀರಪಾಂಡ್ಯನ ತಮ್ಮನು. ಮೇಲಿನ ೫ನೆಯ ಅಂಕದ ಮತ್ತು ಇತರ ಶಾಸನಗಳ ಸಹಾಯದಿಂದ ಈ ಶಾಸನದ ಕಾಲವನ್ನು ಮೇಲಿನಂತೆ ನಿರ್ಧರಿಸಿದೆ.

## ಸ್ಪಷ್ಟೀಕರಣ

ಈ ಮೇಲಿನ ಶಾಸನಗಳಲ್ಲಿ ಉಕ್ತನಾದ ಜಗದೇಕಮಲ್ಲನು ಚಾಲುಕ್ಯ ಕುಲದ ಸುಪ್ರತಿಷ್ಠಿತ ರಾಜಪುತ್ರನೇ ಆಗಿರಬೇಕು. ಈತನು ಕ್ರಿ. ಶ. ೧೧೫೦ ರಲ್ಲಿ ನಿಧನಹೊಂದಿದ, ಮುಮ್ಮಡಿ ಸೋಮೇಶ್ವರಪುತ್ರ ಇಮ್ಮಡಿ ಜಗದೇಕಮಲ್ಲನು ಆಗಿರಲಾರನು. ಈತನು ಮುಮ್ಮಡಿ ತೈಲಪನ ಜೇರೊಬ್ಬ ಮಗನಾಗಿದ್ದರೂ ಆಗಿರಬಹುದು. ಆದರೆ ಹೀಗೆ ಹೇಳುವುದಕ್ಕೆ ನಿಶ್ಚಿತ ಪ್ರಮಾಣವು ದೊರೆಯುವುದಿಲ್ಲ. ಎರಡು ಶಾಸನಗಳಲ್ಲಿ

ಆತನು ಕಲ್ಯಾಣದಲ್ಲಿ ಆಳುತ್ತಿದ್ದನೆಂದು ಹೇಳಿದೆ. ಇದು ಹಿಂದೆ ಸೂಚಿಸಿದಂತೆ ಉಪಚಾರ ಮಾತ್ರವಾಗಿರಬೇಕು. ಏಕೆಂದರೆ ಚಾಲುಕ್ಯ ರಾಜ್ಯವು ಪುನಃ ಸ್ಥಾಪನೆಯಾದ ಅನಂತರವೂ ಕಲ್ಯಾಣಪಟ್ಟಣವು ನಾಲ್ವಡಿ ಸೋಮೇಶ್ವರನ ಸ್ಥಿರರಾಜಧಾನಿಯಾಗುವ ಸಂನಿವೇಶವು ಉಂಟಾಗಲಿಲ್ಲ. ಈ ವಿಷಯವನ್ನು ಮುಂದೆ ವಿವೇಚಿಸಲಿರುವೆನು. ಮೇಲಿನ ೫ನೆಯ ಅಂಕದ ಶಾಸನದಲ್ಲಿ ಕಲಚುರಿ ಆಹವಮಲ್ಲನ ಆಳಿಕೆಯ ವರ್ಷವನ್ನು ನಿರ್ದೇಶಿಸಿದೆ. ಇದರಿಂದ ಕಲಚುರಿಗಳು ತಮ್ಮ ಪ್ರಭುತ್ವವನ್ನು ಈ ಪ್ರದೇಶದ ಮೇಲೆ ಸ್ಥಾಪಿಸಲು ಪ್ರಯತ್ನಿಸಿರಬೇಕೆಂದು ತೋರುತ್ತದೆ. ಈ ಅಂಶವು ಈ ಮುಂದಿನ ವಿವೇಚನೆಯಲ್ಲಿ ಸ್ಪಷ್ಟವಾಗುವುದು. ಮೇಲಿನ ೩ ಮತ್ತು ೪ ಅಂಕದ ಶಾಸನಗಳಲ್ಲಿ ಬರುವ ಜಗದೇಕಮಲ್ಲ-ಮಲ್ಲಿದೇವ ಮತ್ತು ನೊಣಂಬ ಚಕ್ರವರ್ತಿ ಈ ಸಾಮಂತರು ನಿಡುಗಲ್ ಚೋಳವಂಶದವರು ಆಗಿರಬೇಕು. ನೊಣಂಬ ಚಕ್ರವರ್ತಿ ಎಂಬುದು ತ್ರಿಭುವನಮಲ್ಲ-ಮಲ್ಲಿದೇವನ ಬಿರುದಾಗಿರಬಹುದು. ಈ ಮಲ್ಲಿದೇವನಿಗೆ ಜಗದೇಕಮಲ್ಲ ಎಂಬ ಬಿರುದಾದರೂ ಇದ್ದಿತು. ೧, ೫ ಮತ್ತು ೬ ಈ ಅಂಕಗಳಲ್ಲಿ ಕಂಡ ವೀರಪಾಂಡ್ಯ ಮತ್ತು ವಿಜಯಪಾಂಡ್ಯರು ಉಚ್ಚಂಗಿಯ ಪಾಂಡ್ಯ ಕುಲದವರು.

## ಭೂಲೋಕಮಲ್ಲ.

ಶಿವಮೊಗ್ಗ ಹೋಬಳಿಯ ಪುರದಹಾಳು ಗ್ರಾಮದ ಶಾಸನ; ಕಾಲ ಶಕ ೧೦೮೨, ವಿಕ್ರಮ = ಕ್ರಿ. ವ. ೧೧೬೦. ಸಮಸ್ತ ಚಾಲುಕ್ಯ ಪ್ರಶಸ್ತಿಯಿಂದ ಶೋಭಿತನಾದ ಭೂಲೋಕಮಲ್ಲದೇವನು ರಾಜ್ಯವಾಳುತ್ತಿದ್ದನೆಂದು ಹೇಳಿದೆ. ಆತನ ಸಾಮಂತ ಶಂಕರ ಜಗದೇವರಸನು ಸಾಂತಳಿಗೆ ಮತ್ತು ಬನವಾಸಿ ನಾಡುಗಳನ್ನು ಆಳುತ್ತಿದ್ದನು. ಈ ಭೂಲೋಕಮಲ್ಲನು ಭೂಲೋಕಮಲ್ಲ ಮುಮ್ಮಡಿ ಸೋಮೇಶ್ವರನಿಂದ ಭಿನ್ನನು ಎಂಬ ವಿಷಯ ಸ್ವಯಂ ಸ್ಪಷ್ಟವಿದೆ.

## ನಿಷ್ಕರ್ಷೆ.

ಇಂತು ಅನೂಚಾನವಾಗಿ ಕ್ರಿ. ವ. ೧೧೬೦ ರಿಂದ ೧೧೮೪ ರ ವರೆಗೆ ಎಂದರೆ ಕಲಚುರಿಗಳು ಚಾಲುಕ್ಯ ರಾಜ್ಯಾಪಹಾರಮಾಡಿ ಸಾಮ್ರಾಜ್ಯವಾಳಿದ ಸಮಗ್ರಕಾಲಾವಧಿಯ ಉದ್ದಕ್ಕೂ ಚಾಲುಕ್ಯ ಆಳಿಕೆಗಳನ್ನು

ನಿರ್ದೇಶಿಸುವ ಶಾಸನಗಳು ಇವಾಗಿವೆ. ಈ ಶಾಸನಗಳಲ್ಲಿ ಮೂವರು ರಾಜಪುತ್ರರು ಕಾಣಿಸಿಕೊಳ್ಳುತ್ತಾರೆ. ತ್ರಿಭುವನಮಲ್ಲ, ಜಗದೇಕಮಲ್ಲ ಮತ್ತು ಭೂಲೋಕಮಲ್ಲ. ಇವರಲ್ಲಿ ಮೊದಲನೆಯವನು ಮೇಲೆ ಪ್ರತಿಪಾದಿಸಿದಂತೆ ಮುಮ್ಮಡಿ ತೈಲಪನ ಮಗ ನಾಲ್ವಡಿ ಸೋಮೇಶ್ವರನೆಂದು ನಿರ್ಧರಿಸಬಹುದು. ಜಗದೇಕಮಲ್ಲ ಮತ್ತು ಭೂಲೋಕಮಲ್ಲ ಇವರು ಆತನ ತಮ್ಮಂದಿರೋ, ಇಲ್ಲವೆ ಅದೇ ಮನೆತನದ ಬೇರೆ ಹತ್ತುಗಡೆಯ ರಾಜಪುತ್ರರೋ ಎಂಬುದನ್ನು ನಿಶ್ಚಿತವಾಗಿ ಹೇಳಲು ಆಧಾರವು ಸಾಲದು. ಆದರೂ ಇವರು ಮುಮ್ಮಡಿ ತೈಲಪನ ಮಕ್ಕಳಾಗಿರುವುದು ಹೆಚ್ಚು ಸಂಭವನೀಯ. ಆದರೆ ಈ ಜಗದೇಕಮಲ್ಲನು ಇಷ್ಟು ದೀರ್ಘಕಾಲಾವಧಿಯ ವರೆಗೆ ತನ್ನ ಸ್ವತಂತ್ರ ಅಳಿಕೆಯನ್ನು ಹೇಳಿಕೊಳ್ಳುತ್ತಿರುವುದು ವಿಸ್ಮಯ ಕಾರಕವಾಗಿದೆ. ಈತ ಮತ್ತು ತ್ರಿಭುವನಮಲ್ಲ ಇವರ ನಡುವೆ ಪರಸ್ಪರ ಸಂಬಂಧವು ಯಾವ ಪರಿಯದಾಗಿದ್ದಿತ್ತು ಎಂಬುದನ್ನು ತಿಳಿಯಲು ಸಾಧನವಿಲ್ಲ. ೧೧೮೮ನೆಯ ಕ್ರಿ. ವ. ದ ಮಧ್ಯದ ಸುಮಾರಿಗೆ ತ್ರಿಭುವನಮಲ್ಲನಿಂದ ಮತ್ತೆ ಚಾಲುಕ್ಯ ರಾಜ್ಯವು ಸ್ಥಾಪಿತವಾಯಿತು. ಆ ಬಳಿಕ ಈ ಜಗದೇಕಮಲ್ಲನ ನಿರ್ದೇಶವು ದೊರೆಯುವುದಿಲ್ಲ. ಇದೊಂದು ವಿಚಾರಣೀಯ ಅಂಶವು.

ಕಲ್ಯಾಣದಿಂದ ವಲಸೆಬಂದ ಈ ರಾಜಪುತ್ರರಿಗೆ ಆಶ್ರಯವಿತ್ತು, ಅವರ ಪಕ್ಷವನ್ನು ಎತ್ತಿಹಿಡಿದು ಹೋರಾಡಿದವರಾದ ಎರಡು ಮನೆತನದ ಮಾಂಡಲಿಕರು ಇಲ್ಲಿ ಪ್ರಾಮುಖ್ಯವಾಗಿ ಕಂಡುಬರುತ್ತಾರೆ. ಇವರು ನಿಡುಗಲ್ಲಿನಲ್ಲಿ ಆಳಿದ ಚೋಳರು ಮತ್ತು ಉಚ್ಚಂಗಿ ದುರ್ಗದ ಪಾಂಡ್ಯರು ಐದು ಶಾಸನಗಳಲ್ಲಿ ಚೋಳರು ಮತ್ತು ಮೂರು ಶಾಸನಗಳಲ್ಲಿ ಪಾಂಡ್ಯರು ಕಾಣಿಸಿಕೊಳ್ಳುತ್ತಾರೆ. ಇವರ ಅನಂತರ, ಭೂಲೋಕಮಲ್ಲನ ಶಾಸನವನ್ನು ನೋಡಿದರೆ ಶಾಂತರ ಮನೆತನದ ಸಾಮಂತರಾದರೂ ಕೆಲಮಟ್ಟಿಗೆ ಚಾಲುಕ್ಯರಿಗೆ ಸಹಾಯವಿತ್ತಂತೆ ತೋರುತ್ತದೆ.

ಇನ್ನೊಂದು ಮುಖದಿಂದ ಪರಾಮರ್ಶಿಸಿದರೂ ಮೇಲಿನ ನಿಷ್ಕರ್ಷೆಗೆ ಪೋಷಕವಾಗುವಂತಹ ನಿದರ್ಶನಗಳು ಸಿಕ್ಕುತ್ತವೆ. ಈ ಪರಾಮರ್ಶೆಯಲ್ಲಿ ನಾವು ಮುಖ್ಯವಾಗಿ ಬಳ್ಳಾರಿ ಮತ್ತು ಅನಂತಪುರ ಜಿಲ್ಲೆಯ ಭಾಗಗಳಲ್ಲಿ ಇದೇ ಕ್ರಿ. ವ. ೧೦೭೬ ರಿಂದ ೧೧೮೮ರ ವರೆಗಿನ ಕಾಲಾವಧಿಯಲ್ಲಿ

ದೊರೆಯಬಹುದಾದ ಕಲಚುರಿ ಶಾಸನಗಳನ್ನು ಲಕ್ಷಿಸಬೇಕಾಗಿದೆ. ಈ ಪರೀಕ್ಷಣದಲ್ಲಿ ನಮ್ಮ ಅವಗಾಹನೆಗೆ ಬರುವ ಮೊದಲನೆಯ ಅಂಶವು ಕಲಚುರಿ ಶಾಸನಗಳ ಅಲ್ಪ ಸಂಖ್ಯೆ ಮತ್ತು ಅಮುಖ್ಯತೆ. ನಮ್ಮ ಅನ್ವೇಷಣಕ್ಕೆ ಸಹಾಯಕವಾದ ನಾಲ್ಕೈದು ಶಾಸನಗಳನ್ನು ಇಲ್ಲಿ ಎತ್ತಿ ಕೊಂಡು ಅವುಗಳಿಂದ ನಿಷ್ಪನ್ನವಾಗುವ ಚಾರಿತ್ರಿಕ ಅಂಶಗಳನ್ನು ಸ್ವಲ್ಪ ದೂರಕ್ಕೆ ವಿವೇಚಿಸುವೆ.

## ಕಲಚುರಿ ಶಾಸನಗಳ ಸಾಕ್ಷ್ಯ

೧. ಬಳ್ಳಾರಿ ಜಿಲ್ಲೆಯ ಹರಪನಹಳ್ಳಿ ತಾಲೂಕಿನ ನೀಲಗುಂದ ಗ್ರಾಮದ ಶಾಸನ ಕಾಲ ಚಿತ್ರಭಾನು ಸಂವತ್ಸರ (ಶಕ ೧೦೮೪), ಪುಷ್ಯ= ಕ್ರಿ- ವ. ೧೧೬೨ ನವೆಂಬರ. ಚಾಲುಕ್ಯ ಅಧಿರಾಜನ ನಿರ್ದೇಶವಿಲ್ಲ. ಭುಜ ಬಳ ಚಕ್ರವರ್ತಿ ಬಿಜ್ಜಳದೇವನು ರಾಜ್ಯವಾಳುತ್ತಿದ್ದನೆಂದು ಹೇಳಿ, ಆತನ ಸಾಮಂತ ವೀರಪಾಂಡ್ಯನು ಕೋಗಳಿ ಮತ್ತು ಕಡಂಬಳಿಗೆ ಪ್ರದೇಶದ ಆಡಳಿತವನ್ನು ನಡೆಸುತ್ತಿದ್ದಂತೆ ವಿವರಿಸುತ್ತದೆ. ಹಿಂದೆ ನೋಡಿದ ೧೧೬೦ ನೆಯ ಕ್ರಿ. ವ. ದ ಬಾಗಳಿಯ ಶಾಸನದಲ್ಲಿ ಇದೇ ವೀರ ಪಾಂಡ್ಯನು ಚಾಲುಕ್ಯ ಪಕ್ಷಪಾತಕ್ಕಾಗಿ ಬಿಜ್ಜಳನು ಆತನ ಮೇಲೆ ದಂಡಚಕ್ರವನ್ನು ಕೈಕೊಂಡು ತಾತ್ಪೂರ್ತಿಕವಾಗಿ ಆತನನ್ನು ತನ್ನ ಅಂಕೆಗೆ ಒಳಪಡಿಸಿರ ಬೇಕು. ಏಕೆಂದರೆ ಪಾಂಡ್ಯ ಸಾಮಂತರು ಚಾಲುಕ್ಯ ಪಕ್ಷದಲ್ಲಿ ಉಳಿದಂತೆ ಬೇರೆ ಶಾಸನಗಳಿಂದ ವ್ಯಕ್ತವಾಗುತ್ತದೆ.

೨-೩ ಅದೇ ಜಿಲ್ಲೆಯ ಆದವಾನಿ ತಾಲೂಕಿನ ಪೆದ್ದುತುಂಬಳಂ ಬಳಿಯ ಕರಕಂಶಪುರ ಮತ್ತು ಬಪುರ ಈ ಗ್ರಾಮಗಳಲ್ಲಿಯ ಕ್ರಿ. ವ. ೧೧೬೪ ಮತ್ತು ೧೧೭೩ಕ್ಕೆ ಸಲ್ಲುವ ಎರಡು ಶಾಸನಗಳಲ್ಲಿ ಬಿಜ್ಜಳ ಮತ್ತು ಸೋವಿದೇವ ಇವರ ಆಳಿಕೆಗಳ ನಿರ್ದೇಶವು ಬರುತ್ತದೆ. ಈ ಪ್ರದೇಶವು ಸಿಂದವಾಡಿಗೆ ಸೇರಿದ್ದು ಇಲ್ಲಿ ಸಿಂದ ಮನೆತನದ ಮಾಂಡಲೀಕರು ಅರಸ ರಾಗಿದ್ದರು. ಆದರೆ ಈ ಕಾಲಕ್ಕೆ ಅವರ ಆಳಿಕೆ ಕಾಣಿಸಿಕೊಳ್ಳುವುದಿಲ್ಲ; ಮಾತ್ರವಲ್ಲದೆ ಈ ಶಾಸನಗಳಲ್ಲಿ ಕಲಚುರಿ ರಾಜ್ಯಕ್ಕೆ ವಿಧೇಯರಾದ ಅಧಿಕಾರಿಗಳು ತಲೆದೋರುತ್ತಾರೆ. ಈ ಕಾಲಕ್ಕೆ ಸಿಂದರು ಕಲಚುರಿಗಳಿಗೆ ವಿರೋಧವಾಗಿ ವರ್ತಿಸಿದುದಕ್ಕಾಗಿ ಅವರನ್ನು ದಂಡಿಸಿ ತಳ್ಳಿಹಾಕಿರಬಹುದು ಎಂದು ತೋರುತ್ತದೆ.

೪-೫ ಅದೇ ಜಿಲ್ಲೆಯ ಬಳ್ಳಾರಿ ತಾಲೂಕಿನ ಕುರುಗೋಡ ಗ್ರಾಮದ ಎರಡು ಶಾಸನಗಳು ಕಾಲ ಶಕ ೧೦೯೭, ಮನ್ಮಥ = ಕ್ರಿ. ಶ. ಸು. ೧೧೭೬ ಮತ್ತು ಶಕ ೧೦೯೯, ಹೇವಿಳಂಬಿ = ಕ್ರಿ. ಶ. ೧೧೭೭. ಒಂದನೆಯದರಲ್ಲಿ ಸೋವಿದೇವನು ರಾಜ್ಯವಾಳುತ್ತಿದ್ದನೆಂದು ಹೇಳಿದೆ. 'ಕುಂತಳದೇಶದ ಚಕ್ರವರ್ತಿ' ಎಂಬುದಾಗಿ ವಿಶಿಷ್ಟ ರೀತಿಯಲ್ಲಿ ಆತನನ್ನು ನಿರ್ದೇಶಿಸಿರುವುದರಿಂದ ಆತನು ತನ್ನ ರಾಜ್ಯದ ದಕ್ಷಿಣ ಭಾಗದಲ್ಲಿ ದಂಡಯಾತ್ರೆ ಮಾಡಿ ಕಲಚುರಿ ಆಳಿಕೆಯನ್ನು ಪ್ರಸ್ಥಾಪಿಸಿದಂತೆ ತೋರುತ್ತದೆ. ಎರಡನೆಯ ಶಾಸನ ಕಾಲದಲ್ಲಿ ಶಂಖವರ್ಮದೇವ ಎಂಬರೆ ಸಂಕಮನು ಆಳುತ್ತಿದ್ದನು. ಈ ಉಭಯ ಶಾಸನಗಳಲ್ಲಿ ಸಿಂದಮನೆತನದ ರಾಚಮಲ್ಲನು ಕಲಚುರಿಗಳ ಮಹಾಮಂಡಲೇಶ್ವರನಾಗಿದ್ದಂತೆ ಕಂಡುಬರುತ್ತದೆ.

ಇದಲ್ಲದೆ ಮೇಲ್‌ಕಂಡ ಆಹವಮಲ್ಲನ ಆಳಿಕೆಯನ್ನು ನಿರ್ದೇಶಿಸುವ ಮನ್ನೆರ ಮಸಲವಾಡ ಗ್ರಾಮದ ಜಗದೇಕಮಲ್ಲನ ಶಾಸನವನ್ನು ಲಕ್ಷಿಸಬೇಕಾದುದು.

## ಕಾವಣ ಬ್ರಹ್ಮದಂಡನಾಯಕರು

ಈ ಸಂದರ್ಭದಲ್ಲಿ ಸಾಮಂತ ಮಂಡಲೇಶ್ವರರುಗಳಲ್ಲಿ ಮಾತ್ರವಲ್ಲದೆ, ಕಲಚುರಿಗಳ ಪ್ರತ್ಯಕ್ಷ ಸೇವೆಯಲ್ಲಿದ್ದ ಅಧಿಕಾರಿಗಳಲ್ಲಿಯೂ ಒಡಕು ಹುಟ್ಟಿ, ಕೆಲವರು ಕಲಚುರಿ ಪಕ್ಷವನ್ನು ಮತ್ತು ಕೆಲವರು ಚಾಲುಕ್ಯ ಪಕ್ಷವನ್ನು ವಹಿಸಿದುದರಿಂದ ರಾಜ್ಯದಲ್ಲಿ ಅಸ್ಥಿರ ಮತ್ತು ಗೊಂದಲದ ಪರಿಸ್ಥಿತಿ ಹೇಗೆ ನಿರ್ಮಾಣವಾಯಿತು ಎಂಬುದನ್ನು ತೋರಿಸಲು ಒಂದು ವಿಶಿಷ್ಟ ಉದಾಹರಣೆಯನ್ನು ಸಲ್ಲಿಸಬಹುದು. ನಗರನಾಡಿನ ಕಾಮ ಅಥವಾ ಕಾವಣ ಮತ್ತು ಆತನ ಮಗ ಬ್ರಹ್ಮ ಅಥವಾ ಬ್ರಹ್ಮರಸ, ಇವರು ಕಲಚುರಿ ಆಳಿಕೆಯಲ್ಲಿ ದಂಡನಾಯಕರೆಂದು ಪ್ರಸಿದ್ಧಿಗೆ ಬಂದರು. ಬ್ರಹ್ಮನು ಮೊದಲು ರಾಯಮುರಾರಿ ಸೋವಿದೇವನ ಆಳಿಕೆಯ ಕ್ರಿ. ಶ. ೧೧೭೫ರಲ್ಲಿ ಆತನ ಮಹಾ ಪ್ರಧಾನ ಮತ್ತು ಸೇನಾಧಿಪತಿಯೆಂದು ಕಾಣಿಸಿಕೊಳ್ಳುತ್ತಾನೆ. ಮುಂದೆ ಸ್ವಲ್ಪ ಕಾಲದಲ್ಲಿ ಈತನು ಕಲಚುರಿ ಪಕ್ಷವನ್ನು ತ್ಯಜಿಸಿ ಚಾಲುಕ್ಯ ಪಕ್ಷವನ್ನು ಸೇರಿದನು. ಮಾತ್ರವಲ್ಲದೆ ಸೋಮೇಶ್ವರನ ರಾಜ್ಯಸ್ಥಾಪನಾಕಾರ್ಯದಲ್ಲಿ ಪ್ರಮುಖ ಭಾಗವನ್ನು ವಹಿಸಿ ಕಲಚುರ್ಯ ಕಾಲಾ

ನಲಸನೆಂತಲೂ ಚಾಲುಕ್ಯ ರಾಜ್ಯ ಪ್ರತಿಷ್ಠಾಪನಾಚಾರ್ಯನೆಂತಲೂ ಪ್ರಶಸ್ತಿಯನ್ನು ಗಳಿಸಿದನು. ಮಗನು ಚಾಲುಕ್ಯ ಪಕ್ಷವನ್ನು ಸ್ವೀಕರಿಸಿದರೂ ತಂದೆ ಕಾವಣನು ಕಲಚುರಿ ಪಕ್ಷಪಾತಿಯಾಗಿಯೇ ಹೋರಾಡಿದನು. ಈತನು ಕ್ರಿ. ಶ. ೧೧೭೯ರಲ್ಲಿ ಸಂಕಮನ ಸಕಲ ಸೈನ್ಯಾಧಿಪತ್ಯವನ್ನು ವಹಿಸಿ ಆತನಿಗೆ ಆಧಾರವಾಗಿ ನಿಂತು ಕಲಚುರ್ಯ ರಾಜ್ಯ ಸಮುದ್ಧರಣ ಎಂಬ ಗೌರವದ ಉಪಾಧಿಗೆ ಅರ್ಹನಾದನು. ಇಂತು ಈ ಪಿತಾಪುತ್ರರು ಪ್ರತಿಪಕ್ಷಿಗಳಾದುದರಿಂದ ಉಭಯರಲ್ಲಿ ತೀವ್ರ ವಿರೋಧದ ಸಂದರ್ಭಗಳು ಉಂಟಾದವು. ಕೊನೆಗೆ ಬ್ರಹ್ಮದಂಡಾಧಿಪತಿಯ ಯುಕ್ತಿ ಪ್ರಯುಕ್ತಿಯಿಂದ ತನ್ನ ತಂದೆಯ ಕೈಕೆಳಗಿನ ಅನೇಕ ಸೇನಾನಾಯಕರನ್ನು ಮತ್ತು ಸೈನಿಕರನ್ನು ತನ್ನ ಕಡೆಗೆ ಒಲಿಸಿಕೊಂಡುದರಿಂದ ಕಲಚುರಿಗಳು ದಾರುಣ ಪರಾಜಯಕ್ಕೆ ಈಡಾದರು. ಇದೇ ಸಮಯಕ್ಕೆ ದಕ್ಷಿಣದಲ್ಲಿ ಹೊಯ್ಸಳ ವೀರಬಲ್ಲಾಳನು ಕೈಕೊಂಡ ಆಕ್ರಮಣೋಪಾಯಗಳಿಂದ ಕಲಚುರಿ ಪ್ರಭುತ್ವಕ್ಕೆ ಬಲವಾದ ಪೆಟ್ಟು ತಗಲಿತು.

## ಮುಮ್ಮಡಿ ತೈಲಪನ ಮುನ್ನೋಟ

ಮೇಲಿನ ಸಂಗತಿಗಳನ್ನು ವಿಮರ್ಶಿಸಿದರೆ ಚಾಲುಕ್ಯ ರಾಜ್ಯದ ಮೇಲೆ ಬರಲಿರುವ ಗಂಡಾಂತರವನ್ನು ಮುಮ್ಮಡಿ ತೈಲಪನು ಮುಂಗಂಡಿರಬೇಕು ಎಂಬ ನಿದರ್ಶನಕ್ಕೆ ಬರುತ್ತದೆ. ಆತನು ದುರ್ಬಲನಾಗಿದ್ದರೂ ಸರ್ವತಃ ಆಜಾಗರೂಕನಾಗಿರಲಿಲ್ಲ. ಉತ್ತರದಲ್ಲಿ ವರಂಗಲ್ಲಿನ ಕಾಕತೀಯರ ಬಲವು ಹೆಚ್ಚಿ ಅವರ ಶಾಖವು ಆತನ ರಾಜ್ಯಕ್ಕೆ ತಗಲಿಕೊಂಡಿತು; ಕ್ರಿ. ಶ. ೧೧೫೫ ಈ ಮೊದಲಿನಿಂದಲೂ ಹೊಂಚು ಹಾಕುತ್ತಿದ್ದ ಬಿಜ್ಜಳನ ಸಾಮರ್ಥ್ಯವು ದಿನದಿನಕ್ಕೆ ಅಭಿವೃದ್ಧಿಯಾಗುತ್ತ, ಆತನು ಚಾಲುಕ್ಯ ಅಧಿರಾಜ್ಯವನ್ನು ಒಪ್ಪದಂತೆ ಆದನು. ಆತನ ಆಕ್ರಮಣವನ್ನು ಹತ್ತಿಕ್ಕುವ ಶಕ್ತಿ ತನ್ನಲ್ಲಿ ಸಾಲದಾಯಿತು. ಈ ಎಲ್ಲ ಘಟನೆಗಳನ್ನು ದೂರದೃಷ್ಟಿಯಿಂದ ಆಲೋಚಿಸಿ, ವಿಶ್ವಸ್ತರಾದ ತನ್ನ ಸಾಮಂತರ ಅನುಮತಿಯನ್ನು ಪಡೆದು, ತೈಲಪನ ಪ್ರಬುದ್ಧರೂ ತಕ್ಕಮಟ್ಟಿಗೆ ಸಮರ್ಥರೂ ಆದ ರಾಜಪುತ್ರರನ್ನು ತನ್ನ ರಾಜ್ಯದ ದಕ್ಷಿಣ ಭಾಗಕ್ಕೆ ಕಳುಹಿ ಅವರು ಸುರಕ್ಷಿತವಾಗಿ ಜೀವಿಸಿರುವಂತೆ ಯೋಜನೆಯನ್ನು ಮಾಡಿರಬೇಕು. ತಾನು

ಮಾತ್ರ ಬರುವುದನ್ನು ಇದಿರಿಸಲು ತನ್ನ ಸ್ವಸ್ಥಳದಲ್ಲಿ, ಕಲ್ಯಾಣ ರಾಜಧಾನಿಯಲ್ಲಿ ಕೊನೆಯವರೆಗೆ ಉಳಿದುಕೊಂಡಿರಬೇಕು. ಇಂತಹ ಒಂದು ಸನ್ನಿವೇಶವನ್ನು ನಾವು ಗೃಹೀತವಾಗಿ ಇಟ್ಟುಕೊಳ್ಳದೆ ಇದ್ದರೆ ಕ್ರಿ. ವ. ೧೧೬೦ರಲ್ಲಿ ಭೂಲೋಕಮಲ್ಲ ಮತ್ತು ಜಗದೇಕಮಲ್ಲ ಎಂಬೀ ಚಾಲುಕ್ಯ ರಾಜಪುತ್ರರು ಶಿವಮೊಗ್ಗ ಮತ್ತು ಬಳ್ಳಾರಿ ಭಾಗಗಳಲ್ಲಿ ಹಾಗೂ ಕ್ರಿ. ವ. ೧೧೬೩ರಲ್ಲಿ ಎಂದರೆ ಬಿಜ್ಜಳನ ರಾಜ್ಯಾಪಹರಣ ಸಮಯದಲ್ಲಿ ಚಾಲುಕ್ಯ ಚಕ್ರವರ್ತಿ ವಿಕ್ರಮ ಅಥವಾ ತ್ರಿಭುವನಮಲ್ಲನು ಆ ದೂರದ ಅನಂತಪುರ ಜಿಲ್ಲೆಯ ಭಾಗದಲ್ಲಿ, ಆಳುತ್ತಿರುವಂತಹ ಸಮಸ್ಯೆಗಳಿಗೆ ಸಮರ್ಪಕವಾದ ಉತ್ತರಗಳನ್ನು ಹೇಳುವ ಬಗೆ ಯಾವುದು?

ಮೇಲಣ ನನ್ನ ಪ್ರತಿಪಾದನೆಯನ್ನು ಭದ್ರವಾಗಿ ಎತ್ತಿ ನಿಲ್ಲಿಸುವಂತಹ ಇನ್ನೊಂದು ಶಾಸನ ಪ್ರಮಾಣವು ನನ್ನ ಬಳಿಯಲ್ಲಿದೆ. ಈ ಪ್ರಮಾಣವು ಇದುವರೆಗೆ ಎಲ್ಲಿಯೂ ಪ್ರಕಟವಾಗಿಲ್ಲ. ಇದು ಕಲಬುರ್ಗಿ ಜಿಲ್ಲೆಯ ಸೇಡಮ್ ಎಂಬ ಗ್ರಾಮದಲ್ಲಿ ನಾನು ಕಂಡುಹಿಡಿದ ಶಿಲಾಶಾಸನ. ಈ ಶಾಸನದಲ್ಲಿ ಚಾಲುಕ್ಯ ವಂಶಾವಳಿಯನ್ನು ವರ್ಣಿಸಿದೆ. 'ನೂರ್ಮಡಿ ಕ್ಷಿತಿಪ' ಎಂಬ ಬಿರುದಿನ ಮುಮ್ಮಡಿ ತೈಲಪನನ್ನು ಪ್ರಶಂಸಿಸಿ, ಬಳಿಕ ಚಾಲುಕ್ಯ ಪ್ರಶಸ್ತಿಯಿಂದ ಪ್ರತಿಷ್ಠಿತನಾದ ತ್ರಿಭುವನಮಲ್ಲದೇವನು ಮೂರನೆಯ ವಿಕ್ರಮ ಸಂವತ್ಸರದಲ್ಲಿ ಪೊಟ್ಟಳಕೆರೆಯ ನೆಲೆವೀಡಿನಲ್ಲಿ ರಾಜ್ಯವಾಳುತ್ತಿದ್ದನೆಂದು ನಿರೂಪಿಸಿದೆ. ಈ ತ್ರಿಭುವನಮಲ್ಲನು ನಾಲ್ವಡಿ ಸೋಮೇಶ್ವರನೇ ಆಗಿರಬೇಕು. ಆತನ ಆಳಿಕೆಯ ೩ನೆಯ ವಿಕ್ರಮ ವರ್ಷವನ್ನು ಬೇರೊಂದಕ್ಕಲ್ಲದೆ ೧೧೮೦ನೆಯ ಕ್ರಿ. ವ.ಕ್ಕೆ ಮಾತ್ರ ಸಲ್ಲಿಸಬೇಕಾಗುತ್ತದೆ. ಹಾಗಾದರೆ ಆತನ ಆಳಿಕೆಯ ಮೊದಲನೆಯ ವರ್ಷ ೧೧೭೮ನೆಯ ಕ್ರಿ. ವ. ವೆಂದಾಗುತ್ತದೆ. ನನಗೆ ತಿಳಿದ ಮಟ್ಟಿಗೆ ಇಷ್ಟು ಪೂರ್ವದಕಾಲದಲ್ಲಿ ನಾಲ್ವಡಿ ಸೋಮೇಶ್ವರನ ಆಳಿಕೆಯನ್ನು ನಿರ್ದೇಶಿಸುವ ಶಾಸನವು ಇದೊಂದೇ. ಈ ಕಾಲದಲ್ಲಿ ಮುಮ್ಮಡಿ ತೈಲಪನು ಜೀವಿಸಿದ್ದನು ಎಂಬ ವಿಷಯ ಸುಸ್ಪಷ್ಟವಿರುವುದರಿಂದ ಈ ಶಾಸನದಿಂದ ನಿಷ್ಪನ್ನವಾಗುವ ಚರಿತ್ರಾಂಶವೇನು ಎಂಬುದನ್ನು ನಾವು ಯೋಚಿಸುವ. ತಂದೆ ಮಕ್ಕಳು ಇಲ್ಲವೆ ಅಣ್ಣತಮ್ಮಂದಿರು ಏಕಕಾಲಕ್ಕೆ ರಾಜ್ಯದ ಆಡಳಿತದಲ್ಲಿ ಭಾಗಿಗಳಾಗಿ ರಾಜ್ಯಭಾರ ಮಾಡಿದ ಉದಾಹರಣೆಗಳು ಚರಿತ್ರೆಯಲ್ಲಿ ಸಿಕ್ಕುತ್ತವೆ.

ಇದಕ್ಕೆ ಅನುಗುಣಗಾಗಿ ಚಾಲುಕ್ಯ ರಾಜ್ಯದ ಮೇಲೆ ಮುಂಬರುವ ಸಂಕಟವನ್ನು ನಿರೀಕ್ಷಿಸಿದ ತ್ರೈಲಪನು ಪ್ರಬುದ್ಧನಾದ ತನ್ನ ಹಿರಿಯ ಮಗ ನಾಲ್ವಡಿ ಸೋಮೇಶ್ವರನನ್ನು ತನ್ನ ಆಡಳಿತದಲ್ಲಿ ಸಮಭಾಗಿಯನ್ನಾಗಿ ಮಾಡಿ ಕ್ರಿ. ವ. ೧೧೫೮ರಲ್ಲಿಯೇ ಆತನ ರಾಜ್ಯಭಾರವನ್ನು ಮುಂದುವರಿಸಲು ಅಣಿಯಾದಂತೆ ತೋರುತ್ತದೆ. ಆದರೆ ಹಿಂದೆ ನೋಡಿರಂತೆ ಈ ಹಂಚಿಕೆ ನಿಷ್ಫಲವಾದುದರಿಂದ ಆತನು ತನ್ನ ಮಗನನ್ನು ಬೇರೆ ರಾಜಪುತ್ರರೊಂದಿಗೆ ಕ್ಷಿಪ್ರದಲ್ಲಿ ತೆಂಕಣ ನಾಡಿಗೆ ಕಳಿಸಿಕೊಡುವ ಸಂದರ್ಭವು ಉಂಟಾಗಿರಬೇಕು.

## ಸೋಮೇಶ್ವರ-ಜಯಂತೀಪುರ.

ಚಾಲುಕ್ಯರಾಜ್ಯ ಪ್ರತಿಷ್ಠಾಪಕನಾದ ನಾಲ್ವಡಿ ಸೋಮೇಶ್ವರನ ಶಾಸನಗಳು ೧೧೮೪ನೆಯ ಕ್ರಿ. ವ. ದಿಂದ ಪ್ರಾರಂಭವಾಗುತ್ತವೆ. ಈ ವರ್ಷದ ನವೆಂಬರ ೫ ಸೋಮವಾರದ ಮಿತಿಗೆ ಸಲ್ಲುವ ಕ್ರೋಧಿ ಸಂವತ್ಸರದ ಕಾರ್ತಿಕ ಅಮಾವಾಸ್ಯೆ ಸೂರ್ಯಗ್ರಹಣದಂದಿನ, ಆದವಾನಿ ತಾಲೂಕಿನ ಮಲಕಾಪುರ ಗ್ರಾಮದ ಶಾಸನವು ಆತನ ಆಳಿಕೆಯ ಮೊತ್ತಮೊದಲಿನ ಶಾಸನವೆಂದು ಪರಿಗಣಿಸಲಾಗಿದೆ. ಈ ಶಾಸನದಲ್ಲಿ ತ್ರೈಲೋಕ್ಯಮಲ್ಲ ಮತ್ತು ಭುಜಬಲವೀರ ಎಂಬ ಬಿರುದುಗಳನ್ನು ಧರಿಸಿದ ಆತನು ಜಯಂತೀಪುರ ಎಂದರೆ ಬನವಾಸಿಯಲ್ಲಿ ಆಳುತ್ತಿದ್ದನೆಂದು ಹೇಳಿದೆ. ಈ ಹಿಂದೆ ನೋಡಿದ ಮಿಣಜಗಿ ಗ್ರಾಮದ ಶಾಸನದ ತೇದಿಯೂ ಇದುವೇ ಆಗಿದೆ. ಮಿಣಜಗಿ ಶಾಸನದಲ್ಲಿ ಸೋಮೇಶ್ವರನು ಗೋದಾವರೀತೀರದಲ್ಲಿ ತಂಗಿದ್ದನೆಂದು ಉಕ್ತವಾಗಿದೆ. ಬಹುಶಃ ಇದೇ ಮಿತಿಯನ್ನು ಅಸಮಗ್ರವಾಗಿ ನಿರ್ದೇಶಿಸುವ ಅಣ್ಣಿಗೆರೆ ಶಾಸನದಲ್ಲಿ ಕ್ರೋಧಿ ಸಂವತ್ಸರವು ಆತನ ಆಳಿಕೆಯ ಎರಡನೆಯ ವರ್ಷವೆಂದು ಹೇಳಿದೆ. ಬೇರೆ ನಿದರ್ಶನದಂತೆ ಇದು ಆತನ ಮೂರನೆಯ ವರ್ಷವಾಗುತ್ತದೆ. ಇದರಿಂದ ಆತನು ಕ್ರೋಧಿ ಸಂವತ್ಸರದ ಪೂರ್ವದ ಒಂದೆರಡು ವರ್ಷಗಳ ಅವಧಿಯಲ್ಲಿ ಕಲಚುರಿ ಪಕ್ಷದವರ ಮೇಲೆ ಆಕ್ರಮಣವನ್ನು ಪ್ರಾರಂಭಿಸಿ ಜಯಶೀಲನಾಗುತ್ತ ನಡೆದಿರಬೇಕು ಎಂದು ತಿಳಿಯಬಹುದಾಗಿದೆ. ಆನಂತರದ ಕ್ರಿ. ವ. ೧೧೮೫ ಫೆಬ್ರುವರಿಯಂದಿನ ಅನಂತಪುರ ಜಿಲ್ಲೆಯಲ್ಲಿ ಪಾತಶೀವರಂ ಗ್ರಾಮದ ಶಾಸನದಲ್ಲಿ ಆತನಿಗೆ 'ಕಳಚುರ್ಯಕುಲನಿರ್ಮೂಳನಂ' ಎಂಬ ಪ್ರಶಸ್ತಿ

ಯನ್ನು ಕೊಟ್ಟಿದೆ. ಆದುದರಿಂದ ಈ ಹೊತ್ತಿಗೆ ಕಲಚುರಿಗಳೂ ಅವರ ಪಕ್ಷದವರೂ ಸಂಪೂರ್ಣವಾಗಿ ಸೋತು ಶರಣಾಗತರಾಗಿದ್ದರು ಎಂದು ತಿಳಿಯಬೇಕಾಗುತ್ತದೆ. ಈ ಶಾಸನದಲ್ಲಿ ನಿಡುಗಲ್ ಚೋಳ ವಂಶದ ತ್ರಿಭುವನಮಲ್ಲ— ಭೋಗಿದೇವ—ಚೋಳಮಹಾರಾಜನು ಸೋಮೇಶ್ವರನ 'ಪಾದಪದ್ಮೋಪಜೀವಿ' ಮಹಾಮಂಡಳೇಶ್ವರನಾಗಿ ಕಾಣಿಸಿಕೊಳ್ಳುತ್ತಾನೆ.

ಕ್ರಿ. ವ. ೧೧೮೬ ದಿಸೆಂಬರ ೨೫ ರಂದಿನ, ಆದವಾನಿ ತಾಲೂಕಿನ ನಂದವರಂ ಗ್ರಾಮದ ಶಾಸನದಿಂದ ಸೋಮೇಶ್ವರನು ಮತ್ತೆ ಜಯಂತೀಪುರದಲ್ಲಿ ಇದ್ದಂತೆ ತಿಳಿಯುತ್ತದೆ. ಮುಂದಿನ ಸಂವತ್ಸರದ ಕ್ರಿ. ವ. ೧೧೮೭ ಸಪ್ಟೆಂಬರ ೧೮ ರಂದಿನ, ಚಿತ್ರದುರ್ಗ ೩೩ ಅಂಕದ ಶಾಸನದಲ್ಲಿಯೂ ಆತನು ಜಯಂತೀಪುರದಲ್ಲಿ ಇದ್ದಂತೆ ಹೇಳಿದೆ. ಕ್ರಿ. ವ. ೧೧೯೮ ಕ್ಕೆ ಸರಿಹೊಂದಿಸಿದ ಚಿತ್ರದುರ್ಗ ೩೬ ಅಂಕದ ಸೋಮೇಶ್ವರನ ಕೊನೆಯ ಶಾಸನದಲ್ಲಿಯೂ ಆತನು ಅದೇ ಜಯಂತೀಪುರದಲ್ಲಿ ಕಾಣಿಸಿಕೊಳ್ಳುತ್ತಾನೆ. ಆದುದರಿಂದ ಸೋಮೇಶ್ವರನ ಸ್ಥಿರವಾದ ರಾಜಧಾನಿ ಜಯಂತೀಪುರವೇ ಆಗಿದ್ದಿತು ಎಂದು ನಿಷ್ಪನ್ನವಾಗುತ್ತದೆ. ಈ ದೃಷ್ಟಿಯಿಂದ ಅಣ್ಣಿಗೆರೆಯನ್ನು ಇಲ್ಲವೆ ಕಲ್ಯಾಣವನ್ನು ಸೋಮೇಶ್ವರನ ನೆಲೆವೀಡುಗಳೆಂದು ಹೇಳುವ ಒಂದೆರಡು ಶಾಸನಗಳು ಅಪವಾದ ಮಾತ್ರವೆಂದು ಎಣಿಸಬೇಕಾಗುತ್ತದೆ. ಸೋಮೇಶ್ವರನು ೧೧೯೮ನೆಯ ಕ್ರಿ. ವ. ದಲ್ಲಿ ಜೀವಿಸಿದ್ದನೆಂತಲೂ ಪಶ್ಚಿಮ ಕರಾವಳಿಯ ಮಂಡಳೇಶ್ವರರ ಬೆಂಬಲವು ಆತನಿಗೆ ಇದ್ದಿತೆಂದೂ ಸ್ಫುಟಗೊಳಿಸುವ ಇನ್ನೊಂದು ಶಾಸನವು ದೊರೆತಿದೆ. ಈ ಶಾಸನದಲ್ಲಿ ಗೋವೆಯ ಕದಂಬರ ಮುಮ್ಮಡಿ ಜಯಕೇಸಿ ಸೋಮೇಶ್ವರನ 'ಪಾದಪದ್ಮೋಪಜೀವಿ' ಯಾಗಿದ್ದನೆಂದು ಹೇಳಿದೆ.

ಜಯಂತೀಪುರವು ಹಾನಗಲ್ಲ ಕದಂಬರ ರಾಜ್ಯಕ್ಕೆ ಒಳಪಟ್ಟಿದ್ದಿತು. ಹಾನಗಲ್ಲ ಕದಂಬರು ಚಾಲುಕ್ಯರ ವಿಶ್ವಸ್ತ ಮಹಾಮಂಡಲೇಶ್ವರರಾಗಿದ್ದರು ಆದುದರಿಂದ ಚಾಲುಕ್ಯ ಪ್ರತಿಷ್ಠಾಪನೆಯ ಯೋಜನೆಯಲ್ಲಿ ಮೇಲೆ ವಿವರಿಸಿದ ಮಿಕ್ಕ ಸಾಮಂತರ ಜೊತೆಗೆ ಇವರಾದರೂ ಹೆಚ್ಚಿನ ಸಹಾಯ ಸಾಹಸಗಳನ್ನು ನೀಡಿರಬೇಕು ಎಂದು ತೋರುತ್ತದೆ. ಈ ಸಾಹಸಗಳಲ್ಲಿ ಕದಂಬ ಕಾಮದೇವನು ಭಾಗಿಯಾಗಿದ್ದಂತೆ ಊಹಿಸಬಹುದು. ಮುಂದೆಯೂ ಕಾಮದೇವನು ಈ ಚಾಲುಕ್ಯ ರಾಜನಿಗೆ ಸ್ವಾಮಿನಿಷ್ಠನಾಗಿ ಉಳಿದಂತೆ

ತಿಳಿಯುತ್ತದೆ. ಇನ್ನೊಂದು ಸನ್ನಿವೇಶವೂ ಜಯಂತೀಪುರವು ಸೋಮೇ
ಶ್ವರನ ಸ್ಥಿರರಾಜಧಾನಿಯಾಗಲು ಸಹಾಯವಾಗಿರಬೇಕು. ಉಚ್ಚಂಗಿಯ
ಪಾಂಡ್ಯರು ಚಾಲುಕ್ಯ ಪಕ್ಷಪಾತಿಗಳಾಗಿದ್ದರು. ನೊಳಂಬವಾಡಿಯೊಂದಿಗೆ
ಅವರ ವಶದಲ್ಲಿದ್ದ ಸಾಂತಳಿಗೆ ನಾಡು ಬನವಾಸಿಗೆ ಹತ್ತಿಗೆಯಾಗಿದ್ದಿತು.
ಈ ಮೇರೆಗೆ ದಕ್ಷಿಣದಲ್ಲಿ ದೊರೆತ ಸಾಮಂತರ ಬೆಂಬಲದ ಅನುಕೂಲ
ಆವರಣವನ್ನು ಮತ್ತು ಉತ್ತರದಲ್ಲಿ ಯಾದವರ ಆಕ್ರಮಣ, ಹೊಯ್ಸಳ-
ಯಾದವ ತಿಕ್ಕಾಟ, ಮುಂತಾದ ಪ್ರತಿಕೂಲ ಪರಿಸ್ಥಿತಿಯನ್ನು ಪರ್ಯಾ
ಲೋಚಿಸಿ ಸೋಮೇಶ್ವರನು ಕಲಚುರಿಗಳ ಪತನಾನಂತರವೂ ಉತ್ತರದ
ಗಡಿಗಳನ್ನು ಜಯಿಸುವ ಅಭಿಲಾಷೆಯನ್ನು ವಿಸರ್ಜಿಸಿ ಕೊನೆಯವರೆಗೆ
ದಕ್ಷಿಣ ಕರ್ನಾಟಕದ ಪರಿಮಿತ ರಾಜ್ಯದಲ್ಲಿಯೇ ಸಂತೋಷಗೊಂಡಿರ
ಬೇಕು. ಈ ಅಂಶವು ಮೇಲಿನ ವಿವೇಚನೆಯಿಂದ ವಿಶದವಾಗುತ್ತದೆ.

## ಉಪಸಂಹಾರ

ಈ ಮೇರೆಗೆ ಮೇಲಿನ ಅನ್ವೇಷಣದಲ್ಲಿ ಕರ್ನಾಟಕದ ಕಲಚುರಿಗಳ
ರಾಜಕೀಯ ಚರಿತ್ರೆಯನ್ನು ಕುರಿತು ಅನೇಕ ನೂತನಾಂಶಗಳು ಬೆಳಕಿಗೆ
ಬರುತ್ತವೆ. ಈ ಅನ್ವೇಷಣದಲ್ಲಿ ಮಧ್ಯೋತ್ತರ ಭಾರತದ ಮತ್ತು ಕರ್ನಾ
ಟಕದ ಕಲಚುರಿಗಳ ನಡುವೆ ನೇರವಾದ ಮತ್ತು ನಿಕಟವಾದ ಅನುವಂ
ಶಿಕ ಸಂಬಂಧವಿದ್ದ ಸಂಗತಿ ಕಂಡುಬಂದಿದೆ. ಕಲಚುರಿಗಳ ವಂಶವೃ
ತ್ತಾಂತವು ಇದುವರೆಗೆ ತಿಳಿದುದಕ್ಕಿಂತ ಹೆಚ್ಚು ಪ್ರಾಚೀನಕಾಲದ ವರೆಗೆ
ಹೋಗುತ್ತಿದ್ದು, ಉಚಿತನೆಂಬ ಮೂಲಪುರುಷನು ಸುಮಾರು ೧೦ನೆಯ
ಶತಮಾನದ ಆದಿಭಾಗದಲ್ಲಿ ಬಾಳಿರಬೇಕು ಎಂದು ತೋರಿಸಿದೆ.
ಜೋಗಮ ಮತ್ತು ಪೆರ್ಮಾಡಿಗಳ ವಿಷಯವಾಗಿ ಹೆಚ್ಚಿನ ವಿಚಾರಗಳನ್ನು
ನಿರೂಪಿಸಲಾಗಿದೆ. ಬಿಜ್ಜಳನ ರಾಜ್ಯಕ್ರಾಂತಿಯ ಪಾರ್ಶ್ವಭೂಮಿ, ಆಕ್ರಾಂ
ತಿಗೆ ಪೋಷಕವಾದ ಸನ್ನಿವೇಶಗಳು ವೀರಶೈವ ಮತಕ್ರಾಂತಿಯ ನಿಜ
ಸ್ವರೂಪ, ಮೊದಲಾದ ವಿಷಯಗಳನ್ನು ಅನೇಕ ಚಾರಿತ್ರಿಕ ಸಾಧನಗಳ
ಆಧಾರದಿಂದ ಸಯುಕ್ತಿಕವಾಗಿ ವಿಮರ್ಶಿಸಲಾಗಿದೆ. ಬಿಜ್ಜಳನ ಅನಂತರ
ಕಲಚುರಿಗಳ ಆಳಿಕೆಯ ಬಗೆಗೆ ಅನೇಕ ವಿವರಗಳನ್ನು ಸಂಗ್ರಹಿಸಲಾಗಿದೆ
ಕಲಚುರಿಗಳ ಆಕ್ರಮಣ ಕಾಲದಲ್ಲಿ ಪದಭ್ರಷ್ಟ ಚಾಲುಕ್ಯ ಪಕ್ಷದವರು
ದೂರದೃಷ್ಟಿಯಿಂದ ಚಾಲುಕ್ಯರ ಪುನಃಪ್ರತಿಷ್ಠೆಗಾಗಿ ಕೈಕೊಂಡ ಯೋಜ

ನೆಗಳ ಮತ್ತು ನಡೆಸಿದ ಉದ್ಯೋಗಗಳ ಉದ್‌ಬೋಧಕ ಕಥೆಯನ್ನು ಅನೇಕ ಶಾಸನಗಳ ಸಹಾಯದಿಂದ ಮೊದಲು ಬಾರಿ ನಿವೇದಿಸಲಾಗಿದೆ.

## ಒಂದು ಕಲ್ಪನಾತರಂಗ

ಏಳನೆಯ ಶತಮಾನದಲ್ಲಿ ಮಧ್ಯಭಾರತದ ಕಲಚುರಿಗಳ, ಬಾದಾಮಿ ಚಾಲುಕ್ಯರ ಶತ್ರುತ್ವದ ಮೂಲಕ ಇವರ ರಾಜಕೀಯ ಆಕ್ರಮಣಕ್ಕೆ ಗುರಿಯಾಗಿ ಬಲಗುಂದಿ ದೇಶಭ್ರಷ್ಟರಾದರು. ಮುಂದೆ ಆ ದೇಶಭ್ರಷ್ಟ ಕಲಚುರಿಗಳ ವಂಶಿಕರು ಚಾಲುಕ್ಯರ ನಿವಾಸಸ್ಥಾನವಾದ ಕರ್ನಾಟಕಕ್ಕೆ ಬಂದು ಆ ಚಾಲುಕ್ಯ ವಂಶದ ಈಚೆಯ ಅರಸರ ಆಶ್ರಯವನ್ನು ಪಡೆದು ಕಾಲ ಕ್ರಮದಲ್ಲಿ ಬಲಿಷ್ಠರಾಗಿ, ಅವರ ಸಿಂಹಾಸನವನ್ನು ಅಪಹರಿಸಿ ೧೨ ನೆಯ ಶತಮಾನದಲ್ಲಿ ಅವರನ್ನು ರಾಜ್ಯಭ್ರಷ್ಟರನ್ನಾಗಿಸಿದರು. ಇದೊಂದು ಯೋಗಾಯೋಗವೆ? ವಿಧಿವಿಲಾಸವೆ? ಕಾಲಕರ್ಮವಿಪಾಕದ ವೈಚಿತ್ರವೆ? ಏನೆಂದು ಹೇಳಬೇಕು !

॥ ಕಾಲಪುರುಷಾಯ ನಮಃ ॥

---

( ಮುಂದುವರಿಯುವದು. )

# ಟೀಕೆ ಟಿಪ್ಪಣೆಗಳು

## ದೇವರದಾಸಿಮಾರ್ಯರ ಗ್ರಂಥ ಪ್ರಶಸ್ತಿ ಸಮಾರಂಭ

ಈ ಸಮಾರಂಭವನ್ನು ಹೋದ ತಿಂಗಳಿನ ಪ್ರಾರಂಭದಲ್ಲಿ ಜರುಗಿಸಲಾಯಿತು. ಸಮಾರಂಭವನ್ನು ಬೆಂಗಳೂರಿನ ಪ್ರಮುಖರು ಅಲ್ಲಿಯ ಕನ್ನಡ ಸಾಹಿತ್ಯ ಮಂದಿರದಲ್ಲಿ ಜರುಗಿಸಿದರು. ಈ ಸ್ಮಾರಕ ಉತ್ಸವದ ಉದ್ಘಾಟನೆಯನ್ನು ಶಾಸನ ಸಭಾಧ್ಯಕ್ಷರಾದ ಶ್ರೀ ಹೆಚ್. ಸಿದ್ದಯ್ಯನವರು ನೆರವೇರಿಸಿದರು. ದೇವರ ದಾಸಿಮಾರ್ಯನು ವೀರಶೈವ ಇತಿಹಾಸದಲ್ಲಿ ಒಬ್ಬ ಮಹಾಪುರುಷನಾಗಿದ್ದಾನೆಂಬುದು ಜನರ ನಿದರ್ಶನಕ್ಕೆ ಬರಹತ್ತಿರುತ್ತದೆಂಬುದು ಕಂಡುಬರುತ್ತಿದೆ. ದೇವರ ದಾಸಿಮಾರ್ಯನು ಬಸವೇಶ್ವರನಕ್ಕಿಂತಲೂ ಮೊದಲಿನವನಾಗಿ ಪುರಾತನ ಕಾಲದ ವಚನಕಾರರಲ್ಲಿ ಒಬ್ಬನಾಗಿದ್ದಾನೆ. ಇವನು ೧೦೦೮ ರಿಂದ ೧೦೪೨ರ ವರೆಗೆ ಚಾಲುಕ್ಯ ರಾಜ್ಯವನ್ನು ಆಳಿದ ಜಯಸಿಂಹನ ಕಾಲಕ್ಕೆ ಇದ್ದನು. ಇವನ ವಚನಗಳನ್ನು ರಾ|| ಬ|| ಫ. ಗು. ಹಳಕಟ್ಟಿಯವರು ಅನೇಕ ಗ್ರಂಥಗಳೊಳಗಿಂದ ಆಯ್ದು ಅವುಗಳನ್ನು ಸುಮಾರು ೨೦ ವರ್ಷಗಳ ಹಿಂದೆ ಪ್ರಕಟಿಸಿದರು. ಹೀಗೆ ಅವುಗಳನ್ನು ಪ್ರಕಟಿಸಿದ ಬಳಿಕ ಯಾರೂ ಅವುಗಳಿಗೆ ಮಹತ್ವ ಕೊಡಲಿಲ್ಲ. ಮುಂದೆ ರಾ|| ಬ|| ಹಳಕಟ್ಟಿಯವರು ಶಿವಶರಣರ ಚರಿತ್ರೆಗಳನ್ನು ಸಂಗ್ರಹಿಸಿ ಪ್ರಕಾಶಪಡಿಸುತ್ತಿರುವಾಗ ಅವರು ದೇವರ ದಾಸಿಮಯ್ಯನ ಚಾರಿತ್ರೆಯನ್ನು ಸಂಶೋಧಿಸಿ ಅದನ್ನು ಅಚ್ಚು ಹಾಕಲಿಕ್ಕೆ ಹತ್ತಿದರು. ಇದು ಶಿವಶರಣರ ಚರಿತ್ರೆಗಳು ಭಾಗ ೩. ಇದರಲ್ಲಿ ಪ್ರಕಟವಾಗಿದೆ. ಇದು ಸುಮಾರು ೮೦ ಪುಟಗಳುಳ್ಳ ಲೇಖನವಾಗಿರುತ್ತದೆ. ಮುಂದೆ ಮೈಸೂರು ವಿಶ್ವ ವಿದ್ಯಾಲಯದವರು ಈ ವಚನ ಗ್ರಂಥವನ್ನು ಕಾಲೇಜಿನ ಉಚ್ಚ ತರದ ಪರೀಕ್ಷೆಗಳಿಗೆ ಪಠ್ಯ ಪುಸ್ತಕವನ್ನಾಗಿ ನಿಯಮಿಸಹತ್ತಿದರು. ಈ ಚರಿತ್ರೆಯಲ್ಲಿ ನಾವು ದೇವರ ದಾಸಿಮಯ್ಯನು ಶ್ರೀಶೈಲ ಸಿಂಹಾಸನದ ಅಧಿಪತಿಗಳಾದ ಚಂದ್ರಗುಂಡ ದೇಶಕೇಂದ್ರರಿಂದ ದೀಕ್ಷಾ ಹೊಂದಿದನೆಂದು ಉಲ್ಲೇಖಿಸಿದ್ದೆವು. ಇದು ಶ್ರೀ ಜಗದ್ಗುರು ಸಿದ್ಧಮಾಮಿಡಿ ಮಹಾ ಸ್ವಾಮಿಗಳವರ ನಿದರ್ಶನ ಬಂದಂತೆ ನಮಗೆ ತೋರುತ್ತದೆ. ಶ್ರೀ ಮಹಾ ಸ್ವಾಮಿಗಳವರು ಉಚ್ಚ ವಾಙ್ಮಯದ ಕಡೆಗೆ ಯಾವಾಗಲೂ ಲಕ್ಷವನ್ನು ಪೂರೈಸುವವರಾಗಿದ್ದಾರೆ. ದೇವರ ದಾಸಿಮಯ್ಯನು ಶ್ರೇಷ್ಠ ತರಗತಿಯ ವಚನಕಾರನಾಗಿ ಪ್ರ

ಹಾಸಿಕ ಪುರುಷನಾಗಿರುವದರಿಂದ ಕರ್ನಾಟಕಸ್ತರು ಅವನನ್ನು ಲಕ್ಷಿಸುವದು ಅವಶ್ಯವೆಂದು ಭಾವಿಸಿ ಈ ಉತ್ಸವವನ್ನು ಶ್ರೀ ಮಹಾಸ್ವಾಮಿಗಳು ಕೈಕೊಂಡರು. ಅವರು ಒಂದು ಸಂಪಾದಕ ಮಂಡಲಿಯನ್ನು ನಿಯಮಿಸಿಕೊಂಡು ಅದರ ಮುಖಾಂತರ ಈ ಪ್ರಶಸ್ತಿ ಗ್ರಂಥವನ್ನು ತಯಾರಿಸುವ ಕಾರ್ಯವನ್ನೂ ಕೈಕೊಂಡರು.

ಈ ಗ್ರಂಥೆದಲ್ಲಿ ಈ ದಾಸಿಮಾರ್ಯ ಮಹಾನುಭಾವನು ಮಾಡಿದ ಮಹತ್ಕಾರ್ಯಗಳ ಪೂರ್ಣ ನಿರೂಪಣೆ ಇವೆ. ಅವನಿಗೆ ಸಂಬಂಧಿಸಿದ ಶಿಲಾ ಶಾಸನಗಳು ಈ ಗ್ರಂಥದಲ್ಲಿ ಪ್ರಕಟವಾಗಿವೆ. ಅನೇಕ ವಿದ್ವಾಂಸರು ಸಂಶೋಧನಾತ್ಮಕವಾದ ಲೇಖಗಳನ್ನು ಇದರಲ್ಲಿ ಬರೆದಿದ್ದಾರೆ. ಈ ಗ್ರಂಥನ ಪುಟ ಸಂಖ್ಯೆಯು ೪೧೫ ಇದ್ದು ವಿಷಯಗಳು ಬಹು ಸುಂದರವಾಗಿಯೂ ಆಕರ್ಷಕವಾಗಿಯೂ ನಿರೂಪಿಸಲ್ಪಟ್ಟವೆ. ಇದರಲ್ಲಿ ಬಂದ ವಿಷಯಗಳು ರಾ॥ ಬ॥ ಶ್ರೀ ಹಳಕಟ್ಟಿಯವರು ಮಾಡಿದ ಶೋಧನೆಗಳನ್ನು ಒಳಗೊಂಡಿರುತ್ತದೆ. ಪ್ರತಿಯೊಬ್ಬ ವೀರಶೈವನು ಈ ಗ್ರಂಥವನ್ನು ಸಂಗ್ರಹಿಸಲು ಯೋಗ್ಯವಾಗಿರುತ್ತದೆ.

## ಕೈ. ವಾ. ಚನಮಲ್ಲಪ್ಪ ಹಲಸಂಗಿ ( ಮಧುರ ಚೆನ್ನ ) ಇವರ ನಿಧನ.

ಕೈ. ವಾ. ಚನಮಲ್ಲಪ್ಪ ಹಲಸಂಗಿ, ತಾ॥ ಇಂಡಿ ಇವರು ೧೫-೮-೫೩ ನೇ ದಿವಸ ತಮ್ಮ ಗ್ರಾಮದಲ್ಲಿ ನಿಧನ ಹೊಂದಿದ್ದಕ್ಕೋಸ್ಕರ ನಾವು ಅತ್ಯಂತ ವಿಷಾದ ಪಡುತ್ತೇವೆ. ಅವರಿಗೂ ಶಿವಾನುಭವ ಪತ್ರಿಕೆಗೂ ಬಹುದಿವಸಗಳಿಂದ ನಿಕಟ ಸಂಬಂಧವಿದ್ದಿತು. ಅವರ ಅನೇಕ ವಿದ್ವತ್ಪೂರ್ಣ ಲೇಖಗಳು ಈ ಪತ್ರಿಕೆಯಲ್ಲಿ ಯಾವಾಗಲೂ ಪ್ರಕಟವಾಗುತ್ತ ಬಂದಿರುತ್ತವೆ. ಅವರು ಐತಿಹಾಸಿಕ ಸಂಶೋಧನೆಗೋಸ್ಕರ ಅತ್ಯಂತ ಪ್ರೀತಿಯುಳ್ಳರು. ಅವರು ಶಿಲಾಶಾಸನಗಳನ್ನು ಓದುವದನ್ನು ಚೆನ್ನಾಗಿ ತಿಳಿದವರಾಗಿದ್ದರು. ಅವರು ಒಂದು ಕಾಲದಲ್ಲಿ ಶಿಲಾಶಾಸನಗಳನ್ನು ಓದಬೇಕೆಂಬ ಅಪೇಕ್ಷೆಯುಳ್ಳವರಾಗಿ ವಿಜಾಪೂರ ಜಿಲ್ಹೆಯಲ್ಲಿ ಅನೇಕ ಗ್ರಾಮಗಳನ್ನು ಸಂದರ್ಶಿಸಿ ಬಂದರು. ಶ್ರೀ ರಾಜಪುರೋಹಿತರವರು ಹುಕ್ಕೇರಿ ಹತ್ತಿರ ಇರುವ ಅರ್ಜುನವಾಡ ಗ್ರಾಮದಲ್ಲಿದ್ದ ಬಸವೇಶ್ವರನ ಶಿಲಾಶಾಸನವನ್ನು ಮೊದಲು ಅಕಸ್ಮಾತ್ತಾಗಿ ಕಂಡು ಹಿಡಿದು ಅದನ್ನು ಅವರು ನಮ್ಮ ಕಡೆಗೆ ಕಳಿಸಿಕೊಟ್ಟರು. ಶ್ರೀ ಚನಮಲ್ಲಪ್ಪನವರು ಅದನ್ನು ತೆಗೆದುಕೊಂಡು ಹೋಗಿ ಅದನ್ನು ಸಂಪೂರ್ಣ

ವಾಗಿ ಸ್ಪಷ್ಟಪಡಿಸಿದರು. ಆದರಲ್ಲಿ ಬಸವೇಶ್ವರನ ಮತ್ತು ಅವನ ಮನೆತನದವರ ಮಹತ್ವದ ವಿವರಣೆಗಳು ಇದ್ದು ಅವುಗಳನ್ನು ನಾವು ಶಿವಾನುಭವ ಪತ್ರಿಕೆಯಲ್ಲಿ ಟಿಪ್ಪಣಿಗಳೊಂದಿಗೆ ಪ್ರಕಟಿಸಿದ್ದೇವೆ. ಮುಂದೆ ಶ್ರೀ ಚನಮಲ್ಲಪ್ಪನವರು ಷಟ್‌ಸ್ಥಲ ಸಿದ್ಧಾಂತದ ಬಗ್ಗೆ ಅನೇಕ ಲೇಖನಗಳನ್ನು ಶಿವಾನುಭವ ಪತ್ರಿಕೆಯಲ್ಲಿ ಆಗಿಂದಾಗ್ಗೆ ಬರೆಯುತ್ತ ಬಂದರು. ಅವರು ಶಿವಶರಣರ ವಿಚಾರಗಳ ಬಗ್ಗೆ ಆದರ ಭಾವವನ್ನು ಯಾವಾಗಲೂ ತೋರಿಸುತ್ತಿದ್ದರು. ಅವರು ಕವಿತಾ ಸಾಮರ್ಥ್ಯವನ್ನು ಚೆನ್ನಾಗಿ ಹೊಂದಿದವರಾಗಿದ್ದರು. ಅವರ ಅನೇಕ ಕವಿತಾ ಗ್ರಂಥಗಳು ಈ ಮೊದಲಿಗೆ ಪ್ರಕಟವಾಗಿ ಪ್ರಸಿದ್ಧವಾಗಿರುತ್ತವೆ. ಅವರು ಈಚೆಗೆ ಶ್ರೀ ಅರವಿಂದರ ಅಧ್ಯಾತ್ಮ ವಿಚಾರಗಳ ಬಗ್ಗೆ ಅತ್ಯಂತ ಆದರ ಭಾವವನ್ನು ಹೊಂದಿದವರಾಗಿ ಅವರ ತತ್ವಗಳ ಬಗ್ಗೆ ಉದ್ಗ್ರಂಥಗಳನ್ನು ಬರೆದಿದ್ದಾರೆ. ಅವರು ಹೀಗೆ ಕನ್ನಡ ಸೇವೆಯನ್ನು ಮೊದಲಿನಿಂದ ಈ ವರೆಗೂ ಮಾಡುತ್ತ ಬಂದಿದ್ದಾರೆ. ಅವರು ನಾಡಿನಲ್ಲಿ ಅಧ್ಯಾತ್ಮ ವಿದ್ಯೆಯನ್ನು ಬೆಳೆಸುವ ಉದ್ದೇಶವುಳ್ಳವರಾಗಿ ಅರವಿಂದ ಮಂಡಳಗಳನ್ನು ಬಹು ಕಡೆಗೆ ಸ್ಥಾಪಿಸಿದ್ದಾರೆ. ಅವರು ಆಗಿಂದಾಗ್ಗೆ ಪಾಂಡಿಚೇರಿಗೆ ಹೋಗಿ ಅರವಿಂದರ ದರ್ಶನವನ್ನು ಹೊಂದಿ ಬರುವರು. ಅವರು ಒಂದು ಸಣ್ಣ ಗ್ರಾಮದವರು. ವಿದ್ಯೆಯಲ್ಲಿ ಹಿಂದೆ ಬಿದ್ದ ತಾಲೂಕಿನವರು. ಅವರ ಶಿಕ್ಷಣವಾದರೂ ಪ್ರಾಥಮಿಕ ಶಾಲೆಗಳಲ್ಲಿಯ ಶಿಕ್ಷಣಕ್ಕಿಂತಲೂ ಮುಂದುವರೆದಿದ್ದಿಲ್ಲ. ಇಂಗ್ಲಿಷ ಜ್ಞಾನವು ಅವರಿಗೆ ೨—೩ ಎತ್ತೆಗಿಂತಲೂ ಹೆಚ್ಚಿಗಿರಲಿಲ್ಲ. ಆದರೂ ಅವರು ತಮ್ಮ ವ್ಯಾಸಂಗದ ಬಲದಿಂದ ಕನ್ನಡ ಭಾಷೆಯ ಜ್ಞಾನವನ್ನು ಚೆನ್ನಾಗಿ ಪಡೆದದ್ದಲ್ಲದೆ ಇಂಗ್ಲಿಷ ಭಾಷೆಯ ಕಠಿಣ ಗ್ರಂಥಗಳನ್ನು ಸುಲಭವಾಗಿ ತಿಳಿದುಕೊಳ್ಳುವಷ್ಟು ಯೋಗ್ಯತೆಯನ್ನು ಹೊಂದಿದ್ದರು. ಅವರ ಮನೆಯಲ್ಲಿ ಉಚ್ಚ ಶಿಕ್ಷಣ ಪಡೆದವರು ಯಾರೂ ಇದ್ದಿದ್ದಿಲ್ಲ. ಅವರು ಕೇವಲ ಒಕ್ಕಲುತನವನ್ನು ಅವಲಂಬಿಸಿ ತಮ್ಮ ಉಪಜೀವನವನ್ನು ಸಾಗಿಸುತ್ತಿದ್ದರು. ಇಂಥ ಪರಿಸ್ಥಿತಿಯಲ್ಲಿ ಅವರು ಘನತರವಾದ ಪಾಂಡಿತ್ಯವನ್ನು ಸ್ವಪ್ರಯತ್ನದಿಂದ ಹೊಂದಿದವರಾಗಿದ್ದರು. ಅವರು ಮೊದಲು ಗೆಳೆಯರ ಬಳಗವನ್ನು ಶ್ರೀಯುತ ಬೇಂದ್ರೆಯವರ ನಿರೀಕ್ಷಣೆಯಲ್ಲಿ ತಮ್ಮ ಗ್ರಾಮದಲ್ಲಿ ಸ್ಥಾಪಿಸಿ ಅತ್ಯುತ್ತಮ ನಿಬಂಧಗಳನ್ನು ಬರೆಯುತ್ತ ಬಂದರು. ಮುಂದೆ ಅವರ ವಾಚನಾಭಿರುಚಿಯು ಬೆಳೆಯುತ್ತಲೇ ಹೋಯಿತು. ೮—೧೦

ತರುಣರನ್ನು ಕೂಡಿಸಿಕೊಂಡು ಅವರನ್ನೊಡಗೊಂಡು ಗ್ರಂಥ ಪ್ರಕಟನೆಯ ಕಾರ್ಯವನ್ನು ಕೆಲಕಾಲ ಕೈಕೊಂಡು ಕೆಲವು ಗ್ರಂಥಗಳನ್ನು ಪ್ರಕಟಿಸಿದರು. ಆದರೆ ಮುಂದೆ ಅವರ ಪ್ರಕೃತಿಯು ಕೆಟ್ಟಿತು. ಆದರೆ ಅವರು ಅದನ್ನು ತಮ್ಮ ನಿಯಂತ್ರಿತ ವರ್ತನೆಯಿಂದ ಸರಿಪಡಿಸಿಕೊಂಡರು. ಈಚೆಗೆ ಅವರ ಪ್ರಕೃತಿಯು ಬಹಳ ಸುಧಾರಿಸಿತ್ತು. ಆದರೆ ಇತ್ತಿತ್ತ ಅವರಿಗೆ ಕ್ಯಾನ್ಸರ ರೋಗವು ಸಂಭವಿಸಿತು. ಮತ್ತು ಅದರಿಂದಲೆ ಅವರು ಮರಣ ಹೊಂದಿದರು. ಅವರು ಮರಣ ಹೊಂದಿದಾಗ್ಗೆ ಅವರಿಗೆ ೫೦ ವರ್ಷಗಳು ಮಾತ್ರ ಆಗಿದ್ದವು. ಹೀಗೆ ಅವರು ಅಕಾಲಿಕವಾಗಿಯೇ ಮೃತ್ಯುಮುಖವನ್ನೈದಿದರು. ಅವರು ಅತ್ಯಂತ ಸಾದಾ ಜೀವನವುಳ್ಳವರಾಗಿ ಮಾದರೀ ಪುರುಷರಾಗಿದ್ದರು. ಅವರು ತಮ್ಮ ಉಚ್ಚ ವಿಚಾರ ಮತ್ತು ಸಾದಾ ನಡೆಯಿಂದ ಜನಪ್ರಿಯರಾಗಿದ್ದರು. ಅವರ ವರ್ಚಸ್ಸು ಎಲ್ಲರಲ್ಲಿ ಯಾವಾಗಲೂ ಹೆಚ್ಚುತ್ತಲೇ ಬಂದು ಜನಾನುರಾಗವನ್ನು ಚನ್ನಾಗಿ ಪಡೆದವರಾಗಿದ್ದರು. ಅವರ ಮರಣದಿಂದ ಕರ್ನಾಟಕಕ್ಕೆ ದೊಡ್ಡ ಹಾನಿಯಾಗಿರುತ್ತದೆ. ಪರಮಾತ್ಮನು ಅವರ ಆತ್ಮಕ್ಕೆ ಶಾಂತಿಯನ್ನೀಯಲಿ.

**ಕರ್ನಾಟಕದ ಕಲಚೂರಿಗಳು:—** "ಕರ್ನಾಟಕದ ಕಲಚೂರಿಗಳು" ಈ ಶಿರೋ ಲೇಖದ ಕೆಳಗೆ ನಾವು ಕಲಚೂರ್ಯ ರಾಜವಂಶದ ಅರಸರ ವಿಷಯವಾಗಿ ಶ್ರೀಪಾಂಡುರಂಗರಾವ ದೇಸಾಯಿ ಇವರ ಸಂಶೋಧನಾತ್ಮಕ ಲೇಖಗಳನ್ನು ಆಗಿಂದಾಗ್ಗೆ ಪ್ರಕಟಿಸುತ್ತ ಬಂದಿದ್ದೇವೆ. ಈ ಲೇಖಗಳಿಗೂ ವೀರಶೈವ ಸಂಸ್ಕೃತಿಗೂ ಆವ ಸಂಬಂಧ ವಿರುತ್ತದೆಂದು ನಮ್ಮ ವಾಚಕರು ನಮಗೆ ಪ್ರಶ್ನಿಸಬಹುದು. ಬಸವೇಶ್ವರನ ಚರಿತ್ರೆಗೂ ಈ ಕಲಚೂರ್ಯ ರಾಜವಂಶಕ್ಕೂ ನಿಕಟಸಂಬಂಧ ವಿದೆ ಎಂದು ನಾವು ಭಾವಿಸಿ ಈ ಲೇಖಗಳನ್ನು ಪ್ರಸಿದ್ಧಿಸುತ್ತ ಬಂದಿದ್ದೇವೆ. ವಾಚಕರು ಇದಕ್ಕೋಸ್ಕರ ಬೇಸರಿಸಬಾರದೆಂದು ನಮ್ಮ ನಮ್ರ ಸೂಚನೆ ಇದೆ.

ಮಹಾಕವಿ ಹರಿಹರನು ತನ್ನ ಬಸವರಾಜ ದೇವರ ರಗಳೆಯಲ್ಲಿ ಬಸವೇಶ್ವರನು ಕೂಡಲಸಂಗಮ ಕ್ಷೇತ್ರದಲ್ಲಿರುವಾಗಲೇ ಆವನು ಈ ಕ್ಷೇತ್ರವನ್ನು ಬಿಟ್ಟುಕೊಟ್ಟು ಮಂಗಳವಾಡಕ್ಕೆ ಬಂದು ಬಿಜ್ಜಳನಲ್ಲಿ ಒಬ್ಬ ಲೇಖಕನ ಕೆಲಸವನ್ನು ಕೈಕೊಂಡನೆಂದು ವರ್ಣನೆ ಇದೆ. ಆಗ ಅವನು ಚಿಕ್ಕ ವಯಸ್ಸಿನವನಾಗಿದ್ದನು. ಅವನು ಮುಂದೆ ಬಿಜ್ಜಳನಲ್ಲಿ ಕೆಲಸ ಮಾಡುತ್ತ

ಕ್ರಮೇಣ ಅವನಲ್ಲಿ ಕೋಶಾಧಿಕಾರಿ, ಮುಂದೆ ದಂಡನಾಯಕ ಕಡೆಗೆ ಮಂತ್ರಿಯಾಗಿರಬೇಕೆಂದು ಈವರೆಗೆ ನಮ್ಮ ಊಹೆಯಾಗಿತ್ತು. ಆದರೆ ಶ್ರೀ ಪಾಂಡುರಂಗರಾಯರು ಬರೆದ ಬಿಜ್ಜಳನ ಚರಿತ್ರೆಯನ್ನು ನಾವು ನೋಡಿದ ಬಳಿಕ ನಮ್ಮ ಈ ಅಭಿಪ್ರಾಯವನ್ನು ಬದಲುಮಾಡುವದು ಅವಶ್ಯವೆಂದು ತೋರುತ್ತದೆ.

ಬಿಜ್ಜಳನ ವೃತ್ತಾಂತವನ್ನು ನಾವು ಪರೀಕ್ಷಿಸಲಾಗಿ ಅವನು ಅತ್ಯಂತ ಹಿಂಸಾಚಾರ ವೃತ್ತಿಯನ್ನು ಕೈಕೊಂಡು ಚಾಲುಕ್ಯರ ಸಾಮಂತ ರಾಜರನ್ನು ಸದೆಬಡಿಯುತ್ತ ಅವರು ತನ್ನ ನಿಯಂತ್ರಣದಲ್ಲಿರುವಂತೆ ಮಾಡುತ್ತ ಚಾಲುಕ್ಯರ ರಾಜ್ಯವನ್ನು ಕ್ರಮೇಣ ತನ್ನ ಕೈವಶ ಮಾಡಿಕೊಳ್ಳುತ್ತ ಚಾಲುಕ್ಯ ರಾಜಮನೆತನದವರನ್ನು ಸಂಧಿಯು ಬಂದ ಹಾಗೆ ಕೊಲ್ಲಿಸುತ್ತ ಕಡೆಗೆ ಕಲ್ಯಾಣ ಪಟ್ಟಣದ ಮೇಲೆ ದಾಳಿಮಾಡಿ ಪಟ್ಟಣವನ್ನು ಹಾಳುಗೆಡವಿ ಚಾಲುಕ್ಯ ಸಾಮ್ರಾಜ್ಯಾಧಿಪತಿಯನ್ನು ಕೊಲೆಬಡಿಸಿ ತಾನು ಕಡೆಗೆ ಚಕ್ರಾಧಿಪತ್ಯವನ್ನು ಕೈವಶಮಾಡಿಕೊಂಡನೆಂದು ಧ್ವನಿತವಾಗುತ್ತದೆ. ಬಿಜ್ಜಳನ ಈ ಎಲ್ಲ ಹಿಂಸಾತ್ಮಕ ಕಾರ್ಯಗಳಲ್ಲಿ ಬಸವೇಶ್ವರನು ಅವನಿಗೆ ಸಹಾಯಕನಾಗಿ ವರ್ತಿಸಿ ಕಡೆಗೆ ಅವನಲ್ಲಿ ಮಂತ್ರಿಪದವನ್ನು ಸ್ವೀಕರಿಸಿದನು ಎಂದು ನಾವು ಅನುಮಾನ ಮಾಡಬೇಕಾಗುತ್ತದೆ. ಬಸವೇಶ್ವರನು ಈ ರೀತಿ ಮಾಡಿರಬಹುದೆಂದು ನಮ್ಮ ಮನಸ್ಸು ಒಪ್ಪದು.

ಬಸವೇಶ್ವರನ ಉಕ್ತಿಗಳನ್ನು ಮತ್ತು ಶಿವಶರಣರ ವಚನಗ್ರಂಥಗಳನ್ನು ನಾವು ಸೂಕ್ಷ್ಮವಾಗಿ ಅವಲೋಕಿಸಿದಲ್ಲಿ ಬಿಜ್ಜಳನಹಿಂಸಾತ್ಮಕ ಮತ್ತು ಮೋಸದ ಕೃತ್ಯಗಳಿಗೆ ಶರಣರು ಅವನಿಗೆ ಆಳಾಗಿ ಮತ್ತು ಅನುಕೂಲರಾಗಿ ವರ್ತಿಸುವ ಸಂಭವ ತೋರುವದಿಲ್ಲ. ಬಸವೇಶ್ವರನು ಕೆಲವು ದಿವಸ ಮಾತ್ರ ಬಿಜ್ಜಳನಲ್ಲಿ ಕಾರಕೂನನಾಗಿ ಕೆಲಸಮಾಡಿರಬಹುದು. ಆದರೆ ಮುಂದೆ ಬಿಜ್ಜಳನ ಮಹತ್ವಾಕಾಂಕ್ಷೆಗಳನ್ನು ಅವನು ಅರಿತ ಕೂಡಲೆ ಅವನ ಸೇವೆಯನ್ನು ಬಿಟ್ಟು ಪುನ: ಕೂಡಲಸಂಗಮ ಕ್ಷೇತ್ರಕ್ಕೆ ಬಂದು ತನ್ನ ಧರ್ಮ ಸಂಶೋಧನದಲ್ಲಿ ಧರ್ಮೋದ್ಧಾರ ಮತ್ತು ಧರ್ಮಪ್ರಸಾರ ಕಾರ್ಯಗಳಲ್ಲಿ ತೊಡಗಿರಬೇಕು. ಈ ಕಾರ್ಯಗಳನ್ನು ಮಾಡುತ್ತ ಅವನು ದೇಶಸಂಚಾರ ಸಹ ಮಾಡಿರಬಹುದು, ಎಂದು ನಮ್ಮ ಈಗಿನ ತಿಳುವಳಿಕೆಯಾಗಿದೆ. ಇದರಿಂದ ಬಸವೇಶ್ವರನು ನಾಡಿನಲ್ಲಿ ಒಬ್ಬ ವರ್ಚಸ್ಸುಳ್ಳ ಉಜ್ವಲ ವ್ಯಕ್ತಿಯಾದನು. ಬಿಜ್ಜಳನು ಮುಂದೆ ಚಕ್ರಾಧಿಪತಿಯಾದ ಬಳಿಕ

ಪ್ರಜೆಗಳು ಅವನ ವಿಷಯವಾಗಿ ಎಷ್ಟು ಮಾತ್ರವೂ ಆದರ ಭಾವವನ್ನು ತಾಳದೆ ಅವನನ್ನು ವಿರೋಧಿಸಿರಬೇಕು. ಆಗ ಬಿಜ್ಜಳನು ಬಸವೇಶ್ವರನ ಮಹತ್ವವನ್ನು ಅರಿತವನಾಗಿ ಬಲದೇವನಿಗೆ ಮಂತ್ರಿಪದವನ್ನು ಮೊದಲು ಕೊಟ್ಟು, ಅವನ ಸಹೋದರಿಯ ಮಗನಾದ ಬಸವೇಶ್ವರನನ್ನು ಅವನ ಮೂಲಕ ಕಲ್ಯಾಣಕ್ಕೆ ಬರಮಾಡಿಕೊಂಡು ಅವನಿಗೆ ಮುಂದೆ ರಾಜ್ಯಾಧಿಪತ್ಯದಲ್ಲಿ ಶ್ರೇಷ್ಠಸ್ಥಾನವನ್ನು ಕೊಟ್ಟಿರಬೇಕು. ಮುಂದೆ ಬಿಜ್ಜಳನಲ್ಲಿ ಬಸವೇಶ್ವರನು ೫—೬ ವರ್ಷ ಕೆಲಸ ಮಾಡಿದನು. ಆಗ ಅವನು ಶಿವಾನುಭವದ ತತ್ವಗಳನ್ನು ನಾಡಿನಲ್ಲಿ ಪ್ರಸಾರಮಾಡಿರಬೇಕು. ಇದರಿಂದ ಬಸವೇಶ್ವರನು ಪ್ರಜೆಗಳಲ್ಲಿ ತನ್ನ ಧಾರ್ಮಿಕ ವರ್ಚಸ್ಸನ್ನು ಮತ್ತಿಷ್ಟು ಹೆಚ್ಚಿಗೆ ಬೆಳಸಿರಬೇಕು. ಆದರೆ ಅವನು ಬಿಜ್ಜಳನ ಅಪ್ಪಣೆಗಳನ್ನು ಅಂಧತೆಯಿಂದ ಕೇಳುತ್ತ ಅವನ ಸಹಾಯವನ್ನು ತೆಗೆದುಕೊಂಡು ವೀರಶೈವ ಮತವನ್ನು ವಿಸ್ತರಿಸಿಲ್ಲ. ಬಸವೇಶ್ವರನೂ ಶಿವಶರಣರೂ ತಮ್ಮ ಮತ ತತ್ವಗಳ ಶ್ರೇಷ್ಠತೆಯನ್ನು ಜನರಿಗೆ ಅರುಹುತ್ತ ಅದನ್ನು ಅವರು ಪ್ರಸಾರ ಮಾಡಿದ್ದಾರೆಂದು ಹೇಳುವದೇ ನಮ್ಮ ಅಭಿಪ್ರಾಯವಾಗಿದೆ.

ಈ ಸಂಗತಿಯು ದೃಢಪಡುವದರಿಂದ ನಾವು ಕಲಚೂರ್ಯರ ವೃತ್ತಾಂತವನ್ನು ಪತ್ರಿಕೆಯ ಸಂಚಿಕೆಗಳಲ್ಲಿ ಇದ್ದಹಾಗೆ ಕೊಡುತ್ತ ಬಂದಿದ್ದೇವೆ. ಇದಕ್ಕೋಸ್ಕರ ವಾಚಕರು ನಮ್ಮನ್ನು ಕ್ಷಮಿಸಬೇಕು. ಅವರಲ್ಲಿ ಅನೇಕರು ಸಂಶೋಧಕ ಬುದ್ಧಿಯುಳ್ಳವರಿದ್ದಾರೆಂಬುದು ನಮಗೆ ಪರಿಚಯವಿದೆ. ಅವರು ಈ ವಿಷಯವನ್ನು ಕುರಿತು ವಿಚಾರಮಾಡಿ ಬಸವೇಶ್ವರನ ಚರಿತ್ರೆಯ ಮೇಲೆ ಯಾವ ಪ್ರಕಾಶವು ಬೀಳುತ್ತದೆಂಬುದನ್ನು ಅವರು ತೂಗಿನೋಡಬೇಕೆಂದು ನಮ್ಮ ಸವಿನಯ ವಿಜ್ಞಾಪನೆ ಇದೆ.

**ಜನತೆಯಲ್ಲಿ ನೈತಿಕ ಶಿಕ್ಷಣ:—** ಈಗ ದೇಶದಲ್ಲೆಲ್ಲ ಜನತೆಯ ನೈತಿಕ ಮಟ್ಟವು ಬಹಳ ಕೆಳಗಿಳಿದದೆ ಎಂಬ ಕೂಗು ಕೇಳಬರುತ್ತದೆ. ಆದರೆ ಇದಕ್ಕೆ ಉಪಾಯವೇನೆಂಬುದರ ವಿಷಯವಾಗಿ ವಿಧಾಯಕ ಸೂಚನೆಗಳು ಎಲ್ಲಿಯೂ ಆಗಿರುವದಿಲ್ಲ. ಮೈಸೂರ ರಾಜ್ಯದಲ್ಲಿ ನೈತಿಕ ಸ್ಥಿತಿ ಸುಧಾರಿಸುವ ವಿಷಯವಾಗಿ ಒಂದು ಯೋಜನೆಯಾಗಿದೆಯಂತೆ ಅದರ ಮುಖ್ಯಾಂಶಗಳು ಆವವೆಂದರೆ:— ಸರಕಾರೀ ಶಾಲಾಭವನಗಳನ್ನು ಇದರ ಸಲುವಾಗಿ ಉಪಯೋಗಿಸಿಕೊಳ್ಳಬಹುದು. ಪುರಾತನ ಸಾಂಸ್ಕೃತಿಕ ಸ್ಥಿತಿಯ ವಿಷಯವಾಗಿ ಜನತೆಯಲ್ಲಿ ಉಪನ್ಯಾಸಗಳಲ್ಲಿ ಏರ್ಪಡಿಸುವದು. ಹಾಗೆಯೇ

ಗಮಕಿಗಳನ್ನು ನೇಮಿಸುವದು. ಗ್ರಂಥಕಾರರಿಗೆ ಸಹಾಯ, ಈ ಕಾರ್ಯಗಳಿಗೆ ಅಕ್ಷಯ ಸರಕಾರದವರು ೫ ಲಕ್ಷ ರೂಪಾಯಿಗಳನ್ನು ವೆಚ್ಚಮಾಡುವರು. ಆದರೆ ನೈತಿಕ ಬಲವು ಇಳಿಯಲಿಕ್ಕೆ ಸರಕಾರೀ ಕಾಯದೆಗಳು, ನಿಯಮಗಳು, ಅವ್ಯವಹಾರ್ಯ ಯೋಜನೆಗಳು ಮುಖ್ಯವಾಗಿದ್ದು ಅವುಗಳ ಮೇಲ್ವಿಚಾರಕರ ನೈತಿಕ ವರ್ತನೆಯು ಕಡಿಮೆ ಸ್ತರದ್ದಿರುವದರಿಂದ ಸರಕಾರದ ಹೇಳಿಕೆಗಳಿಂದ ಏನೂ ಪರಿಣಾಮವಾಗಿರುವದಿಲ್ಲ.

**ವೀರಶೈವ ಮಹಾಸಭೆ ಕಲ್ಯಾಣ:—** ಬೀದರ ಜಿಲ್ಲೆಯಲ್ಲಿರುವ ಕಲ್ಯಾಣದಲ್ಲಿ ಈ ವರ್ಷ ಡಿಶೆಂಬರ ತಿಂಗಳಲ್ಲಿ ಸರ್ವಭಾರತ ವೀರಶೈವ ಮಹಾಸಭೆಯು ಖಚಿತವಾಗಿ ನಡೆಯುತ್ತದೆಂದು ತಿಳಿಯುತ್ತದೆ. ಇದರ ಪ್ರವರ್ತಕರು ಕೆಲವು ಉಪಯುಕ್ತ ಮತ್ತು ವಿಧಾಯಕ ಕಾರ್ಯಗಳನ್ನು ಕೈಕೊಳ್ಳಲು ನಿಶ್ಚಯಿಸಿರುತ್ತಾರೆ. ಅಲ್ಲಿ ಸಂಶೋಧನ ಮಾಡತಕ್ಕ ವಿಷಯಗಳಾದರೂ ವಿಪುಲವಾಗಿರುತ್ತವೆ. ಇಂಥ ಕಾರ್ಯಗಳು ಈ ವರೆಗೂ ಇಲ್ಲಿ ಏನೂ ನಡೆದಿರುವದಿಲ್ಲ. ಐತಿಹಾಸಿಕ ಅವಶೇಷಗಳು, ಧಾರ್ಮಿಕ ಗ್ರಂಥಗಳುಳ್ಳ ಮಠಗಳು ಅಲ್ಲಿ ಅನೇಕವಾಗಿವೆ. ಇವುಗಳನ್ನು ಸಂಶೋಧಿಸುವ ಕಾರ್ಯಗಳು ಬಲವಾಗಿ ಸಾಗಲೆಂದು ನಾವು ಹಾರೈಸಿದ್ದೇವೆ. ಈಗ ಕಾರ್ಯನಿರ್ವಾಹಕ ಮಂಡಳದವರು ಚಿರಸ್ಥಾಯೀ ಫಂಡಿಗೆ ಸಹಾಯವನ್ನು ಕೋರಿದ್ದಾರೆ.

---

# ಶರಣಾಗದಿಹುದೆ?

ಜ್ಞಾನಕ್ಕೆ ಅಜ್ಞಾನ ಶರಣು
ಹೋಗದೆ ಇಹುದೆ?

ನೀರಿಂಗೆ ಉರಿಬೆಂಕಿ
ಶರಣಾಗದಿಹುದೆ?

ಬೆಳಕಿಂಗೆ ಕತ್ತಲೆಯು
ಶರಣಾಗದಿಹುದೆ?

ಸಂತಸಕೆ ಅಳಲದುವು
ಶರಣಾಗದಿಹುದೆ?

ಸೌಖ್ಯಕ್ಕೆ ದುಃಖವದು
ಶರಣಾಗದಿಹುದೆ?

ಆತ್ಮಕ್ಕೆ ದೇಹವದು
ಶರಣಾಗದಿಹುದೆ?

ಈಶಂಗೆ ಆತ್ಮವದು
ಶರಣಾಗದಿಹುದೆ?

—ನಿಂ. ಬ. ಸಾವಳಗಿ, ಜ್ಯೂ. ಬಿ. ಎ.
ಲಿಂಗರಾಜ ಕಾಲೇಜ ಬೆಳಗಾಂವ



ಇರುತ್ತವೆಂಬುದನ್ನು ಬಸವೇಶ್ವರನು ಕಾಲಕಾಲಕ್ಕೆ ಬಿಜ್ಜಳನಿಗೆ ತಿಳಿಸಿ ಹೇಳುವನು. ಆದರೆ ಪರವಾದಿಗಳು ಶಿವಶರಣರ ಮೇಲೆ ಪಟ್ಟಣದಲ್ಲಿ ಮತ್ತು ಸುತ್ತಲಿನ ರಾಜ್ಯದಲ್ಲಿ ಸುಳ್ಳು ಆರೋಪಗಳನ್ನು ಹೊರಿಸುತ್ತ ಅವರನ್ನು ಪೀಡಿಸುವದನ್ನು ಬಿಡಲಿಲ್ಲ. ಇದರಿಂದ ಈ ಉಭಯ ಪಕ್ಷದವರಲ್ಲಿ ಆಗಿಂದಾಗ್ಗೆ ಕಾದಾಟಗಳಾಗುತ್ತಿದ್ದವೆಂದು ನಾವು ಪ್ರಕಟಿಸಿದ ಶಿವಶರಣರ ಚರಿತ್ರೆಗಳಿಂದ ವಾಚಕರಿಗೆ ಸ್ಪಷ್ಟವಾಗುವಂತೆ ಇದೆ.

## ದೇಶತ್ಯಾಗ

ಇಂಥ ಬಿಕ್ಕಟ್ಟಿನ ಪರಿಸ್ಥಿತಿಯಲ್ಲಿ ಬಿಜ್ಜಳ ರಾಜನನ್ನು ಸಿಂಹಾಸನದಿಂದ ತಳ್ಳಿಹಾಕಬೇಕೆಂದು ಒಳಸಂಚುಗಳು ಬಿಜ್ಜಳನ ಅರಮನೆಯಲ್ಲಿ ನಡೆದಿದ್ದವೆಂಬುದು ಶಿಲಾಶಾಸನಗಳಿಂದ ಗೊತ್ತಾಗುತ್ತದೆ. ಬಿಜ್ಜಳನಿಗೆ ೫—೬ ಜನ ಮಕ್ಕಳಿದ್ದರು. ಅವರೆಲ್ಲರೂ ಬಿಜ್ಜಳನನ್ನು ರಾಜ್ಯದಿಂದ ತಳ್ಳಬೇಕೆಂಬ ದುರ್ಬುದ್ಧಿಯುಳ್ಳವರಾಗಿದ್ದರು. ಇದು ಶಾಸನಗಳಿಂದ ಮತ್ತು ಕರ್ನಾಟಕ ಇತಿಹಾಸದಿಂದ ತಿಳಿದುಬರುತ್ತದೆ. ಈ ಸ್ಥಿತಿಯಲ್ಲಿ ಸರಳ ಹೃದಯರಾದ ಅಲ್ಲಮಪ್ರಭುವು, ಬಸವೇಶ್ವರ, ಚೆನ್ನಬಸವೇಶ್ವರ, ಸಿದ್ಧರಾಮೇಶ್ವರ, ಈ ಮೊದಲಾದ ಶಿವಶರಣರು ಅರಸನ ಅಂಕಿತದಲ್ಲಿದ್ದುಕೊಂಡು ತಮ್ಮ ಧರ್ಮಕಾರ್ಯಗಳನ್ನು ನಡಿಸುವದು ಅಶಕ್ಯವೆಂದು ಅವರಿಗೆ ತೋರಿತು. ಆದ್ದರಿಂದ ಅವರು ಬಿಜ್ಜಳನ ರಾಜ್ಯವನ್ನು ಬಿಟ್ಟು ಬೇರೊಂದು ಶಾಂತ ವಾತಾವರಣವುಳ್ಳ ದೇಶಕ್ಕೆ ಹೋಗಿ ಸುರಕ್ಷಿತವಾಗಿ ಇರಬೇಕೆಂದು ಅವರು ನಿರ್ಧರಿಸಿದಂತೆ ನಮಗೆ ತೋರುತ್ತದೆ. ಬಿಜ್ಜಳನ ಕೊಲೆ ಮಾಡಬೇಕೆಂಬ ಸಂಚುಗಳಲ್ಲಿ ಅವರು ಸೇರಿಕೊಂಡಿಲ್ಲ.

## ಹರಳಯ್ಯ ಮಧುವಯ್ಯಗಳ ಕೊಲೆ

ಈ ಸಂದರ್ಭದಲ್ಲಿ ಹರಳಯ್ಯ ಮತ್ತು ಮಧುವರಸ ಇವರಲ್ಲಿ ಪರಸ್ಪರ ಆಪ್ತತ್ವವು ಸಂಭವಿಸಿತು. ಇದರ ಪರಿಣಾಮವಾಗಿ ಒಂದುಕಡೆ ಶಿವಶರಣರು ಮತ್ತೊಂದು ಕಡೆ ಜೈನರು ಮತ್ತು ಬ್ರಾಹ್ಮಣ ಮೊದಲಾದ ಸನಾತನಿಗಳು ಹೀಗೆ ಎರಡು ಪಕ್ಷಗಳಾಗಿ ಭಯಂಕರ ಅನಾಹುತಗಳು ಜರಿಗಿದವು. ಇವುಗಳನ್ನು ನಾವು ಈ ಉಭಯತರ ಚರಿತ್ರೆಗಳಲ್ಲಿ ವಿವರಿಸಿದ್ದೇವೆ. ಅವುಗಳನ್ನು ನಾವು ಇಲ್ಲಿ ಪುನಃ ವಿವರಿಸುವದು ಅನಾವಶ್ಯಕವಾಗಿದೆ. ಆದರೆ ಇದರ ಪರಿಣಾಮವಾಗಿ ಹರಳಯ್ಯ ಮಧುವಯ್ಯಗಳಿಬ್ಬರೂ ಕ್ರೂರತನದಿಂದ ಘಾತಿಸಲ್ಪಟ್ಟರು.

ಶಿವಶರಣರಿಗೆ ಈ ಪರಿಸ್ಥಿತಿಯು ಉಂಟಾದ ಬಳಿಕ ಬಸವೇಶ್ವರ ಅಲ್ಲಮಪ್ರಭುವು ಈ ಉಭಯತರು ದೇಶತ್ಯಾಗ ಮಾಡಬೇಕೆಂದು ಮೊದಲು ನಿರ್ಧರಿಸಿದ ಪ್ರಕಾರ ಅಲ್ಲಮಪ್ರಭುವು ಶ್ರೀಶೈಲ ಪ್ರದೇಶಕ್ಕೆ ಮಹಾದೇವಿಯಕ್ಕನೊಂದಿಗೆ ತೆರಳಿದನು. ಬಸವೇಶ್ವರನು ಕೂಡಲಸಂಗವು ಕ್ಷೇತ್ರದಲ್ಲಿ ಇರಲು ಹೊರಟನು. ಈ ಉಭಯತರು ಏಕ ಕಾಲದಲ್ಲಿ ಕಲ್ಯಾಣವನ್ನು ಬಿಟ್ಟಿರಬಹುದು.

## ಅಲ್ಲಮ ಪ್ರಭುವು ಶ್ರೀಶೈಲಕ್ಕೆ ಬಂದಿದ್ದು.

ಹೀಗೆ ಈ ಉಭಯತರು ಕಲ್ಯಾಣವನ್ನು ಬಿಡುವ ಮುಂದೆ ಅವರು ಚೆನ್ನಬಸವೇಶ್ವರನನ್ನು ಉಳಿದ ಎಲ್ಲ ಶಿವಶರಣರ ಮೇಲೆ ಮುಖ್ಯಾಧಿಕಾರಿಯನ್ನಾಗಿ ನಿಯಮಿಸಿ ಎಲ್ಲರೂ ಅವನ ಅಪ್ಪಣೆಯ ಮೇರೆಗೆ ನಡೆಯಬೇಕೆಂದು ಕಟ್ಟುಮಾಡಿದರು. ಅವರು ಹಾಗೆ ಮಾಡದೆ ಹೋಗಿದ್ದರೆ ಶಿವಶರಣರ ಸುಸ್ಥಿತಿಗೆ ಭಂಗ ಉಂಟಾಗಬಹುದಾಗಿತ್ತು. ಅಲ್ಲಮಪ್ರಭುವು ಹೀಗೆ ವ್ಯವಸ್ಥೆಯನ್ನು ಮಾಡಿ ತಾನು ಕಲ್ಯಾಣ ಪಟ್ಟಣವನ್ನು ಬಿಟ್ಟು ಶ್ರೀಶೈಲಕ್ಕೆ ಹೋದನು.

ಮುಂದೆ ಅಲ್ಲಮಪ್ರಭುವು ಶ್ರೀಶೈಲದಲ್ಲಿ ಎಷ್ಟು ದಿವಸ ವಾಸಮಾಡಿದನೆಂಬುದು ಗೊತ್ತಾಗುವದಿಲ್ಲ. ಅವನು ಈ ಸ್ಥಾನದಲ್ಲಿಯೇ ಲಿಂಗದಲ್ಲಿ ಅಡಗಿದನೆಂದು ಮಾತ್ರ ತಿಳಿದುಬರುತ್ತದೆ. ಅವನು ಕದಳೀಬನದಲ್ಲಿ ಸಮಾಧಿಸ್ಥನಾದನೆಂದು ವೀರಶೈವರ ಎಲ್ಲ ಗ್ರಂಥಗಳು ಹೇಳುತ್ತವೆ. ಮಹಾದೇವಿಯಕ್ಕನಾದರೂ ಅಲ್ಲಿಯೇ ಲಯವಾದಳೆಂದು ತಿಳಿದುಬರುತ್ತದೆ.

ಅಲ್ಲಮಪ್ರಭುವಾಗಲಿ ಬಸವೇಶ್ವರನಾಗಲಿ ಮುಂದೆ ತೊರಗಲು ನಾಡಿನಲ್ಲಿ ನಡೆದ ಯುದ್ಧಗಳಲ್ಲಿ ಭಾಗ ವಹಿಸಿರುವದಿಲ್ಲ. ಅಲ್ಲಮಪ್ರಭುವು ಮತ್ತು ಮಹಾದೇವಿಯಕ್ಕ ಇವರಿಗಂತೂ ಅವುಗಳ ಪರಿಚಯವೇ ಇರಲಿಲ್ಲವೆಂದು ತೋರುತ್ತದೆ. ಅವರ ಮನಸ್ಸಿನಲ್ಲಿ ಶ್ರೀಶೈಲದಲ್ಲಿ ತಮ್ಮ ಧರ್ಮದಂತೆ ನಡೆಯುತ್ತ ಶಾಂತಚಿತ್ತರಾಗಿ ಅಧ್ಯಾತ್ಮ ವಿಚಾರಗಳಲ್ಲಿ ಕಾಲ ಕಳೆಯಬೇಕೆಂದು ಯೋಚಿಸಿದ್ದರೆಂದು ತೋರುತ್ತದೆ. ಆ ಪ್ರಕಾರ ಅವರು ಅಲ್ಲಿ ಶಾಂತತೆಯಿಂದ ಕಾಲಕಳೆಯುತ್ತ ಸಮಾಧಿಸ್ಥರಾಗಿದ್ದಾರೆ.

ಅವರು ಎಷ್ಟು ದಿವಸ ಇಲ್ಲಿ ಕಾಲಕಳೆದರೆಂಬುದು ನಮಗೆ ತಿಳಿದು ಬಂದಿಲ್ಲ. ಅವರು ಶ್ರೀಶೈಲದ ನಿಬಿಡವಾದ ಅರಣ್ಯ ಪ್ರದೇಶದಲ್ಲಿ ಅಧ್ಯಾತ್ಮ ಚಿಂತನೆಯಲ್ಲಿದ್ದುಕೊಂಡು ಅಲ್ಲಿಯೇ ಅವರು ಸವಾಧಿಸ್ತರಾದರೆಂಬುದು ನಿಃಸಂದೇಹವಾದದ್ದು

ಈ ಪ್ರಕಾರ ಅಲ್ಲಮಪ್ರಭುವಿನ ಉದಾತ್ತ ಚರಿತ್ರೆ ಇದೆ. ಇವನು ಆರಂಭದಿಂದಲು ಕಡೆಯುವರೆಗೂ ಉದಾತ್ತ ವ್ಯಕ್ತಿವುಳ್ಳವನಾಗಿ ತನ್ನ ಜೀವನವನ್ನು ನಡೆಸುತ್ತ ಬಂದನು. ಅದ್ದರಿಂದ ಅವನು ವೀರಶೈವ ಮಹಾಪುರುಷರಲ್ಲಿ ಗಣ್ಯ ಪುರುಷನೆಂದು ಪ್ರಸಿದ್ಧನಾಗಿದ್ದಾನೆ.

## ಕಥಾಂತರಗಳು

ಅಲ್ಲಮಪ್ರಭುವಿನ ವಿಷಯವಾಗಿ ಕೆಲವು ಕಥಾಂತರಗಳಿವೆ. (೧) ಇವುಗಳಲ್ಲಿ ಒಂದನ್ನು ಕುರಿತು ನಾವು ಈ ಮೊದಲು ಅವನ ಈ ಚರಿತ್ರೆಯಲ್ಲಿ ವಿವರಣೆ ಮಾಡಿದ್ದೇವೆ. ಅದು ಮಾಯಾದೇವಿ ಅಥವಾ ಕಾಮಲತೆಯಲ್ಲಿ ಅವನು ಮೋಹಿತನಾಗಿ ಅವಳೊಡನೆ ಅಂತಃಪುರದಲ್ಲಿಇದ್ದನೆಂಬದರ ವಿಷಯವಾಗಿ ಇರುತ್ತದೆ. ಈ ಸಂಗತಿಯು ನಂಬಲಿಕ್ಕೆ ಅರ್ಹವಲ್ಲವೆಂದು ನಾವು ಹಿಂದೆಯೇ ವಿವರಿಸಿದ್ದೇವೆ. ಹರಿಹರ ಕವಿಯು ಹೀಗೆ ವಿವರಿಸಿದ್ದು ಐತಿಹಾಸಿಕ ಸಂಗತಿಗಳು ಅವನ ಕಾಲದಲ್ಲಿ ಜನರಲ್ಲಿ ಮರೆತು ಹೋದದ್ದರ ಪರಿಣಾಮವಾಗಿರುತ್ತದೆ. ಆದ್ದರಿಂದ ಬೇರೆ ಬೇರೆ ಗ್ರಂಥಗಳಲ್ಲಿ ಕಂಡು ಬರುವ ಸಂಗತಿಗಳು ಸಂಭವನಿಯವೋ ಅಥವಾ ಅಲ್ಲವೋ ಎಂಬುದನ್ನು ಪರೀಕ್ಷಿಸಿ ನಂಬಲರ್ಹವಾದುದಾದೆಂಬುದನ್ನು ನಾವು ವಿಚಾರಿಸಿ ಅದನ್ನು ವಿವರಿಸುವದು ಅವಶ್ಯವಿರುತ್ತದೆ. ಆದ್ದರಿಂದ ನಾವು ಈ ಚರಿತ್ರೆಯಲ್ಲಿ ಹರಿಹರನ ಈ ವಿವರಣೆಯನ್ನು ಅನುಸರಿಸಿರುವದಿಲ್ಲ.

(೨) ಸಿದ್ಧರಾಮೇಶ್ವರನು ಯಾರಿಂದ ಲಿಂಗಧಾರಣೆಯನ್ನು ಹೊಂದಿದನೆಂಬುದರ ಬಗ್ಗೆ ಕಥಾಂತರಗಳಿವೆ. ಅವು ಯಾವವೆಂದರೆ:—

(ಅ) ಸಿದ್ಧರಾಮೇಶ್ವರನು ಕಪಿಲ ಸಿದ್ಧ ಮಲ್ಲಿಕಾರ್ಜುನನ ಮೂರ್ತಿಯು ಪ್ರತ್ಯಕ್ಷನಾಗಿ, ಅವನಿಗೆ ಲಿಂಗಧಾರಣೆ ಮಾಡಿದನೆಂದು ಒಂದು ಕಥೆಯು ಇದೆ. ಇದು ಸಿದ್ಧರಾಮೇಶ್ವರನ ಮಹತ್ವವನ್ನು ಹೆಚ್ಚಿಸಲು ಹುಟ್ಟಿಸಿದ ಒಂದು ಕಾಲ್ಪನಿಕ ಕಥೆ ಎಂದು ತಿಳಿದು ನಾವು ಇದನ್ನು ಈ ಚರಿತ್ರೆಯಲ್ಲಿ ವಿವರಿಸಿಲ್ಲ. ಇದು ಕೇವಲ ಪವಾಡವಾಗಿರುತ್ತದೆ.

(೭) ಅಲ್ಲಮಪ್ರಭುವು ಸಿದ್ಧರಾಮೇಶ್ವರನೊಡನೆ ವಾದ ಮಾಡಿ ಅದನ್ನು ಮುಗಿಸಿದ ಬಳಿಕ ಇಷ್ಟಲಿಂಗದ ಸ್ವರೂಪವನ್ನು ಚೆನ್ನಬಸವೇಶ್ವರನ ಮೂಲಕ ಅವನಿಗೆ ತಿಳುಹಿಸಬೇಕೆಂದು ಬಯಸಿ ಅವನನ್ನು ಕಲ್ಯಾಣಕ್ಕೆ ಕರೆತಂದು ಅಲ್ಲಿ ಚೆನ್ನಬಸವೇಶ್ವರನಿಂದ ಲಿಂಗಧಾರಣ ಮಾಡಿಸಿದನೆಂಬುದು ಎರಡನೆಯ ಕಥಾಂತರವಿರುತ್ತದೆ. ಇದು ಸಂಭವನೀಯವೆಂದು ನಮಗೆ ತೋರುವದಿಲ್ಲ, ಯಾಕೆಂದರೆ ಅಲ್ಲಮಪ್ರಭುವು ಇಷ್ಟರಲ್ಲಿ ಉನ್ನತ ಜ್ಞಾನವನ್ನೇ ಹೊಂದಿದವನಾಗಿ ಬಹಳ ಪ್ರಸಿದ್ಧನಾಗಿದ್ದನು. ಅವನು ಸಿದ್ಧರಾಮೇಶ್ವರನಿಗೆ ತನ್ನ ಮಹತ್ವವನ್ನು ಪ್ರತ್ಯಕ್ಷ ತೋರಿಸಲಾಗಿ ಸಿದ್ಧರಾಮೇಶ್ವರನು ಅವನಿಗೆ ಶರಣಾಗತನಾಗಿ ಲಿಂಗಬೋಧೆಯನ್ನು ತನಗೆ ತಿಳಿಸಬೇಕೆಂದು ಅವನಿಗೆ ಬಿನ್ನಹಮಾಡಿಕೊಂಡನು. ಆದ್ದರಿಂದ ಅಲ್ಲಮಪ್ರಭುವು ಅವನಿಗೆ ಲಿಂಗೋಪದೇಶಮಾಡಿ ದೀಕ್ಷೆಯನ್ನು ಮಾಡಿದನೆಂದು ಕಥಾಂತರವಿದ್ದು ಇದು ಹೆಚ್ಚಿಗೆ ಸಂಭವನೀಯವೆಂದು ತೋರುತ್ತದೆ. ಆದ್ದರಿಂದ ಈ ಸಂಗತಿಯು ನಿಜವೆಂದು ನಾವು ಭಾವಿಸಿ ಅದನ್ನೇ ನಾವು ಈ ಚರಿತ್ರೆಯಲ್ಲಿ ಉಲ್ಲೇಖಿಸಿದ್ದೇವೆ. ಈ ಕಾಲದಲ್ಲಿ ಅಲ್ಲಮಪ್ರಭುವಾಗಲಿ, ಸಿದ್ಧರಾಮೇಶ್ವರನಾಗಲಿ, ಚೆನ್ನಬಸವೇಶ್ವರನನ್ನು ಕಂಡು ಶಿವಾನುಭವ ಗೋಷ್ಠಿಗಳನ್ನು ನಡೆಸಿದ್ದು ತಿಳಿದು ಬರುವದಿಲ್ಲ. ಈ ಕಥೆಯು ಶೂನ್ಯಸಂಪಾದನೆಯಲ್ಲಿ ಇದ್ದು ಇದರ ಗ್ರಂಥಕಾರನು ಸಂದರ್ಭಕ್ಕನುಸರಿಸಿ ತನ್ನ ಕಥೆಗಳಲ್ಲಿ ಬದಲಾವಣೆ ಮಾಡುತ್ತಿರುವದು ಕಂಡು ಬರುತ್ತದೆ. ಆದ್ದರಿಂದ ನಾವು ಈ ಕಥೆಯನ್ನು ಅನುಸರಿಸಿರುವದಿಲ್ಲ.

(೮) ಅಲ್ಲಮ ಪ್ರಭುವು ಯಾವಸ್ಥಳದಲ್ಲಿ ಐಕ್ಯ ಹೊಂದಿದನೆಂಬುದರ ಬಗ್ಗೆಯೂ ಕಥಾಂತರಗಳಿವೆ. ಪುರಾತನ ಪ್ರಸಿದ್ಧ ಗ್ರಂಥಕಾರರೆಲ್ಲರೂ ಅವನು ಶ್ರೀಶೈಲದಲ್ಲಿ ಐಕ್ಯವಾದನೆಂದು ಹೇಳುತ್ತಾರೆ. ಆದರೆ ಈಗ ಅಲ್ಲಿ ಅವನ ಸಮಾಧಿಯಾಗಲಿ ಅವನ ಇತರ ಕುರುಹಾಗಲಿ ಕಂಡುಬರುವದಿಲ್ಲ. ಅಲ್ಲಮಪ್ರಭುವು ಮಹಾದೇವಿಯಕ್ಕ ಮತ್ತು ಬಸವೇಶ್ವರ ಈ ಮೂವರು ಏಕಕಾಲಕ್ಕೆ ಆರಂಭದಲ್ಲಿಯೇ ಕಲ್ಯಾಣ ಪಟ್ಟಣವನ್ನು ಬಿಟ್ಟವರಾಗಿದ್ದಾರೆ. ಮುಂದೆ ಕೆಲವು ತಿಂಗಳುಗಳಲ್ಲಿ ಬಿಜ್ಜಳನ ಸೈನಿಕರಿಗೂ, ಶಿವಶರಣರಿಗೂ ಕಡುತರವಾದ ಕಾಳಗಗಳು ಆರಂಭವಾದವು. ಈ ಕಾಲದಲ್ಲಿ ಈ ಮೂವರು ಗುಪ್ತಸಮಾಧಿಯನ್ನು ವಹಿಸಿದರೆಂದು ನಮಗೆ ತೋರುತ್ತದೆ.

ಈ ವಿಷಯವನ್ನು ಕುರಿತು ಇನ್ನೂ ಹೆಚ್ಚಿಗೆ ಸಂಶೋಧನೆ ಮಾಡುವದು ಅವಶ್ಯವಾಗಿರುತ್ತದೆ.

ಅಲ್ಲಮಪ್ರಭುವಿನ ಚರಿತ್ರೆಯ ಉಳಿದ ಭಾಗಗಳಲ್ಲಿ ನಾವು ಅವನ ಪವಾಡಗಳ ವಿಷಯಗಳಲ್ಲಿಯ ಚರಿತ್ರಾತ್ಮಕ ಸಂಗತಿಗಳನ್ನು ಪ್ರಮುಖ್ಯವಾಗಿ ಆಯ್ದು ವಿವರಿಸುತ್ತ ಬಂದಿದ್ದೇವೆ. ಅಲ್ಲಮಪ್ರಭುವಿನ ವಿಷಯವಾಗಿ ಇನ್ನೂ ಹೆಚ್ಚಿಗೆ ನಾವು ಸಂಶೋಧನೆ ಮಾಡುವದು ಬಹಳ ಅವಶ್ಯವಿರುತ್ತದೆಂದು ಇಲ್ಲಿ ಉಲ್ಲೇಖಿಸಿ ಈ ಚರಿತ್ರೆಯನ್ನು ಮುಗಿಸುತ್ತೇವೆ.

---

## ಮಹಾದೇವಿಯಕ್ಕ

ಮಹಾದೇವಿಯಕ್ಕನು ಶಿವಶರಣರ ಸಮೂಹವೆಂಬ ತಾರಾಗಣದಲ್ಲಿ ಅತಿಉಜ್ವಲವಾಗಿ ಶೋಭಾಯಮಾನಳಾಗಿ ಧ್ರುವ ತಾರೆಯಂತೆ ನಿಶ್ಚಲವಾಗಿ ಶಾಶ್ವತವಾಗಿ ಬೆಳಗುತ್ತ ಬಂದಿದ್ದಾಳೆ. ಬಸವೇಶ್ವರನ ಕಾಲದಲ್ಲಿ ಅವಳು ಎಲ್ಲರಿಂದ ಮನ್ನಣೆಯನ್ನು ಹೊಂದಿದವಳಾಗಿದ್ದಳು. ಅವನ ತರುವಾಯ ಅನೇಕ ಶತಮಾನಗಳು ಸಂದಿಹೋದರೂ ಅವಳ ಕೀರ್ತಿಯು ಯಥಾವತ್ತಾಗಿ ಪ್ರಕಾಶಿಸುತ್ತ ಬಂದಿದೆ. ಈಗಲೂ ಕೂಡ ಕರ್ನಾಟಕಸ್ತರನ್ನೆಲ್ಲ ಆಕರ್ಷಿಸಿ ಅವರ ಮನ ಬುದ್ಧಿ ಚಿತ್ತಕ್ಕೆ ಆನಂದವನ್ನು ನೀಡುವವಳಾಗಿದ್ದಾಳೆ. ಎಲ್ಲ ಕಡೆಗೂ ಆಕೆಯ ಹೆಸರಿನಿಂದ ಅಕ್ಕನ ಬಳಗಗಳು ಉಂಟಾಗುತ್ತಲಿವೆ. ಕರ್ನಾಟಕದಲ್ಲಿ ಅನೇಕ ಸ್ತ್ರೀರತ್ನಗಳೂ ಥಳ ಥಳನೆ ಹೊಳೆಯುತ್ತವೆ. ಅವುಗಳಲ್ಲಿ ಮಹಾದೇವಿಯಕ್ಕನು ಸ್ವಸಂತ್ರ ಪ್ರಕಾಶದಿಂದ ಬೆಳಗುತ್ತಲಿದ್ದಾಳೆ.

ಮಹಾದೇವಿಯಕ್ಕನ ಚರಿತ್ರೆಗಳು ಅನೇಕವಾಗಿವೆ. ಅವುಗಳಲ್ಲಿ ಅವಳು ಕೌಶಿಕರಾಜನನ್ನು ತೊರೆದು ಕಲ್ಯಾಣಕ್ಕೆ ಹೋದದ್ದರ ವರ್ಣನೆಗಳು ಇವೆ. ಕಲ್ಯಾಣಕ್ಕೆ ಹೋದ ಬಳಿಕ ಅವಳು ಪೂರ್ಣಜ್ಞಾನಿಎಂದು ಹೆಸರುಗೊಂಡಳೆಂಬ ವಿವರಣೆಗಳಿವೆ. ಮುಂದೆ ಅವಳು ಶ್ರೀಶೈಲಕ್ಕೆ ಹೋಗಿ ಕದಳೀ ವನದಲ್ಲಿ ಲಿಂಗದಲ್ಲಿ ಸಾಮರಸ್ಯವನ್ನು ಹೊಂದಿದಳೆಂಬ ವಿವರಣೆಯು ಇದ್ದು ಇಷ್ಟಕ್ಕೆ ಅವಳ ಚರಿತ್ರೆಯು ಮುಗಿಯುತ್ತದೆ. ಆದರೆ ನಮಗೆ ದೊರೆತ ಅವಳ ಗಲಳ ವಚನಗಳನ್ನು ನೋಡಿದರೆ ಅವಳ ಶಿವಾನುಭವ ಸ್ಥಾನವು ಎಷ್ಟು ಅಗಾಧವಾಗಿತ್ತೆಂಬುದು ಗೊತ್ತಾಗುತ್ತದೆ.

ಹಿಂದೂ ಸಂಸ್ಕೃತಿಯ ಪ್ರಕಾರ ಸ್ವಂತದ ವೃತ್ತಾಂತವನ್ನು ಯಾರೂ ಹೇಳ ಕೂಡದೆಂಬ ನಿಯಮವಿದೆ. ಇದಕ್ಕನುಸರಿಸಿ ಶಿವಶರಣರೆಲ್ಲ ಆಚರಿಸಿದ್ದಾರೆ. ಮಹಾದೇವಿಯಕ್ಕನಾದರೂ ಹಾಗೆಯೆ ವರ್ತಿಸಿದ್ದಾರೆ. ಅವಳು ತನ್ನ ವೃತ್ತಾಂತವನ್ನು ವಿಸ್ತಾರವಾಗಿ ಎಲ್ಲಿಯೂ ಹೇಳಿಕೊಂಡಿಲ್ಲ. ಆದರೆ ಅವಳ ವಚನಗಳನ್ನು ಪರೀಕ್ಷಿಸಿದರೆ ಅವುಗಳಲ್ಲಿ ಅವಳ ಜೀವಿತದಲ್ಲಿ ಉಂಟಾದ ಘಟನೆಗಳು ಆಗಿಂದಾಗ್ಗೆ ಇಣಿಕಿ ಹಾಕುತ್ತ ಇವೆ ಎಂಬುದನ್ನು ನಾವು ಕಾಣಬಹುದು. ನಾವು ಇಂಥವುಗಳನ್ನು ಸಂಗ್ರಹಿಸಿ ಅವಳ ಚರಿತ್ರೆಯನ್ನು ಬರೆಯಬೇಕಾಗಿ ಬಂದಿದೆ.

ಮಹಾದೇವಿಯಕ್ಕನು ಕಲ್ಯಾಣಕ್ಕೆ ಬಂದಾಗ್ಗೆ ಆಕೆಯ ವಯಸ್ಸು ಕೇವಲ ೧೬ ವರ್ಷಗಳಾಗಿದ್ದವು. ಅಲ್ಲಿ ಅವಳು ಮುಂದೆ ೬ ವರ್ಷಕಾಲ ಕಳೆದು ಶ್ರೀಶೈಲಕ್ಕೆ ಹೋಗುವವಳಾದಳು. ಆದ್ದರಿಂದ ಅವಳು ೧೧೬೮ರಲ್ಲಿ ಸಮಾಧಿಸ್ಥಳಾದಾಗ ಆಕೆಗೆ ಬರೀ ೨೨ ವರ್ಷಗಳಾಗಿದ್ದವು. ಆದ್ದರಿಂದ ಅವಳ ಜನನವು ೧೧೪೬ ರಲ್ಲಿ ಆಗಿರಬೇಕು. ಅಂದರೆ ಅವಳು ಬಸವೇಶ್ವರನಕಿಂತಲೂ ೧೪ ವರ್ಷ ಚಿಕ್ಕವಳು. ಅವಳು ಇಷ್ಟು ಅಲ್ಪಕಾಲದಲ್ಲಿಯೇ ಉಜ್ವಲ ಅನುಭಾವಿಯಾಗಿ ಶಿವಶರಣರಲ್ಲಿ ಅಮೋಘವಾದ ಸ್ಥಾನವನ್ನು ಪಡೆದಿದ್ದಾಳೆ.

ಈಗ ಮೈಸೂರ ಸಂಸ್ಥಾನ ಶಿವಮೊಗ್ಗಾ ಜಿಲ್ಲೆಯಲ್ಲಿರುವ ಉಡುತಡಿ ಎಂಬ ಗ್ರಾಮದಲ್ಲಿ ಅವಳು ಜನಿಸಿದಳು. ಈ ಜಿಲ್ಲೆಯಲ್ಲಿ ಈಗ ಉಡಗಣಿ ತಡಗಣಿ ಎಂಬ ಹೆಸರಿನ ಎರಡು ಗ್ರಾಮಗಳು ಸಮೀಪವಾಗಿ ಇವೆ. ಪೂರ್ವ ಕಾಲದಲ್ಲಿ ಈ ಎರಡೂ ಗ್ರಾಮಗಳು ಹೊಂದಿಕೊಂಡು ಉಡುತಡಿ ಎಂಬ ಒಂದೇ ಹೆಸರಿನ ಗ್ರಾಮವಾಗಿತ್ತೆಂದು ತೋರುತ್ತದೆ. ಇಲ್ಲಿ ವಿಮಲ ಮತ್ತು ಸುಮತಿ ಎಂಬ ದಂಪತಿಗಳು ವಾಸಮಾಡುತ್ತಿದ್ದರು. ಈ ಉಭಯತರು ವೀರಶೈವ ಧರ್ಮದಂತೆ ನಡೆಯುವವರಾಗಿದ್ದರೆಂದು ತಿಳಿದುಬರುತ್ತದೆ.

ಉಡುತಡಿಯು ಬನವಾಸಿ ನಾಡಿನಲ್ಲಿದ್ದು ಈ ಗ್ರಾಮವು ಬನವಾಸಿಯಿಂದ ಸುಮಾರು ೪೦ ಮೈಲುಗಳ ಮೇಲೆ ಇರುತ್ತದೆ. ಬನವಾಸಿಯು ಚಾಲುಕ್ಯರ ರಾಜ್ಯದಲ್ಲಿ ಒಂದು ಮಹತ್ವದ ಪ್ರಾಂತವಾಗಿದ್ದು, ಇಲ್ಲಿ ಒಬ್ಬ ಮಂಡಲಾಧೀಶ್ವರನು ಚಾಲುಕ್ಯ ರಾಜನಿಗೆ ಅಂಕಿತನಾಗಿ ರಾಜ್ಯ

ವಾಳುತ್ತಿದ್ದನು. ಬನವಾಸಿಯು ಬಹುಕಾಲದಿಂದಲೂ ಒಂದು ಪುಣ್ಯ ಕ್ಷೇತ್ರವೆಂದು ಪರಿಗಣಿಸಲ್ಪಡುತ್ತಿತ್ತು. ಪಶ್ಚಿಮ ಸಮುದ್ರದ ತೀರದಲ್ಲಿ ಈ ಕಾಲದಲ್ಲಿ ಕೆಲವು ಬಂದರಗಳಿದ್ದು ಅವುಗಳೊಳಗಿಂದ ಅರಬಸ್ತಾನ, ಇರಾಣಗಳಲ್ಲಿಗೆ ದೊಡ್ಡ ವ್ಯಾಪಾರವು ನಡೆಯುತ್ತಿದ್ದಿತು. ಈ ವ್ಯಾಪಾರವು ಬನವಾಸಿಯ ಮಾರ್ಗವಾಗಿಯೇ ದೇಶದಲ್ಲೆಲ್ಲ ಪಸರಿಸಿತ್ತು. ಆದ್ದರಿಂದ ಈ ಪ್ರಾಂತದ ಜನರು ಧನಾಢ್ಯರಾಗಿದ್ದರು. ಈ ಕಾಲದಲ್ಲಿ ಉಡುತಡಿ ಈ ಗ್ರಾಮದಲ್ಲಿ ಕೌಶಿಕ ರಾಜನೆಂಬ ರಾಜನು ಆಳುತ್ತಿದ್ದನು. ಅವನು ಬನವಾಸಿ ಮಂಡಲೇಶ್ವರನಿಗೆ ಅಧೀನನಾಗಿ ತನ್ನ ಪ್ರದೇಶದಲ್ಲಿ ಆಳುತ್ತಿದ್ದನು

ಬನವಾಸಿ ಪಟ್ಟಣವಿದ್ದ ಈ ಪ್ರದೇಶವು ನಾಗರಿಕತೆಯಲ್ಲಿ ಎಂದಿನಿಂದಲೂ ಬಹು ಪ್ರಸಿದ್ಧವಾಗಿತ್ತು. ಇಲ್ಲಿ ಅನೇಕ ಕವಿಗಳೂ ಕಲಾವಿದರೂ ವಾಸಿಸುತ್ತಿದ್ದರು. ೧೦ ನೇ ಶತಮಾನದಲ್ಲಿ ಆಗಿಹೋದ ಕನ್ನಡ ಮಹಾಕವಿಯಾದ ಪಂಪನು ಬನವಾಸಿ ನಾಡಿನವನಾಗಿದ್ದಾನೆ. ಈ ಕಾಲದಲ್ಲಿ ಶಿವಶರಣರ ತತ್ವಗಳ ಪ್ರಭಾವವು ಎಲ್ಲ ಕಡೆಗು ಪಸರಿಸಹತ್ತಿತ್ತು. ಈ ಕಾಲದಲ್ಲಿ ಅನೇಕ ಶಿವಶರಣರು ಈ ಪ್ರಾಂತದಲ್ಲಿ ಉದ್ಭವಿಸಿದ್ದರು. ಇಲ್ಲಿ ರೇವಣಸಿದ್ಧ ಅನುಮಿಷ, ಅಲ್ಲಮಪ್ರಭು ಮೊದಲಾದವರು ಪ್ರಸಿದ್ಧಿಗೆ ಬಂದರು. ಈ ಭಾಗದಲ್ಲಿ ಶಿವಶರಣರಂತೆಯೇ ಬೌದ್ಧ, ಜೈನ, ಬ್ರಾಹ್ಮಣ ಮೊದಲಾದ ಮತಸ್ಥರೂ ಪ್ರಭಾವಿಗಳಾಗಿ ವಾಸವಾಗುತ್ತಿದ್ದರು. ಹೀಗೆ ಈ ಪ್ರದೇಶದಲ್ಲಿ ಮೊದಲಿನಿಂದಲೂ ಒಂದು ಧಾರ್ಮಿಕ ವಾತಾವರಣವು ಇದ್ದಿತೆಂದು ಊಹಿಸಲು ಯಾವ ಪ್ರತ್ಯವಾಯವೂ ಇರಲಾರದು.

ಮಹಾದೇವಿಯಕ್ಕನ ತಾಯಿತಂದೆಗಳಾದ ವಿಮಲ, ಸುಮತಿ ಇವರು ವೀರಶೈವ ಧರ್ಮವನ್ನು ಪರಿಪಾಲಿಸುವವರಾಗಿದ್ದರಿಂದ ಮಹಾದೇವಿಯಕ್ಕನಿಗೆ ವೀರಶೈವ ಧರ್ಮಾಚಾರದಂತೆ ಪೂರ್ವ ವಯಸ್ಸಿನಲ್ಲಿಯೇ ಲಿಂಗಧಾರಣವಾಗಿರಲಿಕ್ಕೇಬೇಕು. ಹೀಗೆ ತನಗೆಲಿಂಗಧಾರಣ ಮಾಡಿದ ಗುರುವಿನ ಹೆಸರನ್ನು ಮಹಾದೇವಿಯಕ್ಕನು ತನ್ನ ವಚನದಲ್ಲಿ ಎಲ್ಲಿಯೂ ಹೇಳಿರುವದಿಲ್ಲ. ಅವಳ ೨೮ನೇ ವಚನದಲ್ಲಿ ಮಾತ್ರ ಶ್ರೀ ಗುರುಲಿಂಗದೇವರು ತಮ್ಮ ಹಸ್ತವ ತಂದು ಎನ್ನ ಮಸ್ತಕದಮೇಲೆ ಇರಿಸಿದಾಗಲೆ ಎನ್ನ ಭವಂ ನಾಸ್ತಿಯಾಯಿತ್ತು, ತನ್ನ ಕರಸ್ಥಲದಲ್ಲಿದ್ದ ಮಹಾಲಿಂಗವನೆನ್ನ ಮನಸ್ಥಲದಲ್ಲಿ

ಮೂರ್ತಿಗೊಳಿಸಿದ, ಎಂದು ಮೊದಲಾಗಿ ಹೇಳಿದ್ದಾಳೆ. ಆದರೆ ಅವಳು ಅವನ ಹೆಸರನ್ನು ಹೇಳಿರುವದಿಲ್ಲ. ಆದರೆ ಅವಳು ತಾನು ಲಿಂಗಧಾರಣೆಯನ್ನು ಬಸವೇಶ್ವರನ ಕಡೆಯಿಂದ ಹೊಂದಿದ್ದರ ಬಗ್ಗೆ ಅನೇಕ ತಾತ್ವಿಕ ವಚನಗಳನ್ನು ಅವಳು ನುಡಿದಿದ್ದಾಳೆ. ಅವಳು ಕಲ್ಯಾಣಕ್ಕೆ ಹೋದ ಬಳಿಕ ಲಿಂಗಧಾರಣದ ವಿಷಯವಾಗಿ ಹೆಚ್ಚಿನ ಜ್ಞಾನವನ್ನು ಸಂಪಾದನೆ ಮಾಡಿ ಬಸವೇಶ್ವರನ ಕಡೆಯಿಂದ ಜ್ಞಾನದೀಕ್ಷೆಯನ್ನು ಹೊಂದಿರಬೇಕೆಂದು ನಮಗೆ ತೋರುತ್ತದೆ. ಇದರ ಬಗ್ಗೆ ನಾವು ಮುಂದೆ ಪ್ರಸ್ತಾಪಿಸುವೆವು. ಆದರೆ ಆರಂಭದಲ್ಲಿ ಅವಳಿಗೆ ಲಿಂಗಧಾರಣೆ ಮಾಡಿದವರು ಯಾರೆಂಬುದು ಅವಳ ವಚನಗಳಿಂದ ತಿಳಿದು ಬರುವದಿಲ್ಲೆಂದು ಹೇಳುವದೇ ನಮ್ಮ ಮುಖ್ಯ ಅಭಿಪ್ರಾಯವಾಗಿದೆ.

ಮಹಾದೇವಿಯಕ್ಕನು ತನ್ನ ತಾಯಿತಂದೆಗಳ ಮನೆಯಲ್ಲಿ ಜನ್ಮ ಲಿಂಗಧಾರಣೆಯನ್ನು ಹೊಂದಿದ ಬಳಿಕ ಅವಳು ಅವರ ಮನೆಯಲ್ಲಿ ೧೬ವರ್ಷ ಕಾಲ ಕಳೆದಿದ್ದಾಳೆ.ಈ ಸಮಯದಲ್ಲಿ ಅವಳುಅಜ್ಞಾನಿಯಾಗಿ ಬೆಳೆಯದೆ,ಹೆಚ್ಚಿನ ಶಿಕ್ಷಣವನ್ನು ಹೊಂದಿದವಳಾದಳೆಂದು ತಿಳಿಯುತ್ತಿದೆ. ಇದು ಅವಳ ವಚನಗಳಿಂದಲೇ ಗೊತ್ತಾಗುತ್ತಿದೆ. ಅವಳು ಸಂಸ್ಕೃತ ಭಾಷೆಯನ್ನು ಚೆನ್ನಾಗಿ ಕಲಿತವಳಾಗಿದ್ದಳು. ಇದನ್ನು ನಾವು ಅವಳ ೧೧೪ನೇ ವಚನದಿಂದ ಊಹಿಸಲು ಅಡ್ಡಿ ಇಲ್ಲ. ಆದರಲ್ಲಿ ಅವಳು ಹೇಳುವದೇನಂದರೆ, ಇಷ್ಟ ಲಿಂಗವಿದ್ದಂತೆ ಸ್ಥಾವರ ಲಿಂಗಕ್ಕೆ ಶರಣೆಂದಡೆ ತಡೆಯದೆ ಹುಟ್ಟಿಸುವ ಶ್ವಾನನ ಗರ್ಭದಲ್ಲಿ. ಅದೆಂತೆಂದೊಡೆ, ಶಿವಧರ್ಮ ಪುರಾಣೆ॥ ಎಂದು ಇದರಲ್ಲಿಯು ಸಂಸ್ಕೃತ ಆಧಾರವನ್ನು ಕೊಟ್ಟಿದ್ದಾಳೆ. ಶಿವಧರ್ಮ ಪುರಾಣವು ವೀರಶೈವರ ಒಂದು ಮಹತ್ವದ ಗ್ರಂಥವಿರುತ್ತದೆ. ಇದರಲ್ಲಿಯ ಅವತರಣಗಳನ್ನು ವೀರಶೈವ ಗ್ರಂಥಕಾರರು ತಮ್ಮ ಗ್ರಂಥಗಳಲ್ಲಿ ಆಗಿಂದಾಗ್ಗೆ ಕೊಡುತ್ತಾರೆ. ಆದರೆ ಈ ಗ್ರಂಥವು ಈ ವರೆಗೂ ನಮಗೆ ಉಪಲಬ್ಧವಾಗಿರುವದಿಲ್ಲ. ಮತ್ತು ಅದರ ಪ್ರಚಾರವೂ ಇಲ್ಲ. ಸಂಸ್ಕೃತ ಭಾಷೆಯನ್ನು ಅವಳು ಕಲ್ಯಾಣಕ್ಕೆ ಹೋದಬಳಿಕ ಕಲಿತಿರಬಹುದೆಂದು ನಮಗೆ ತೋರುವದಿಲ್ಲ. ಯಾಕೆಂದರೆ ಅಲ್ಲಿ ಯಾವಾಗಲೂ ಶಿವಶರಣರ ಕಾರ್ಯ ಕಲಾಪಗಳು ನಡೆಯುತ್ತಿದ್ದು ಆಗ ಅವಳು ಈ ಭಾಷೆಯ ಅಭ್ಯಾಸಮಾಡಲು ಸಂಧಿಯು ದೊರೆಯುವ ಸಂಭವವು ಇರಲಾರದು.

ಮಹಾದೇವಿಯಕ್ಕನು ತನ್ನ ತಂದೆಯ ಮನೆಯಲ್ಲಿ ಇದ್ದಾಗಲೇ ಅವಳು ಕನ್ನಡ ಸಾಹಿತ್ಯವನ್ನು ಚನ್ನಾಗಿ ಅಭ್ಯಾಸ ಮಾಡಿದ್ದಲ್ಲದೆ ಎಲ್ಲ ಕಲೆಗಳನು ಸಹ ಬಲ್ಲವಳಾಗಿದ್ದಳೆಂದು ಹರಿಹರನು ತನ್ನ ರಗಳೆಯಲ್ಲಿ ಬರೆದಿದ್ದಾನೆ, ಇದು ಸಂಭಾವ್ಯವಾಗಿದೆ. ಅವನು ಅನ್ನುವದೇನಂದರೆ "ಶಿವಭಕ್ತಿ ಭರಿತೆಯು. ಶಿವಜ್ಞಾನ ಸಂಪನ್ನೆಯು, ಸಾಹಿತ್ಯವಿದೆಯು, ಸಕಲಕಲಾ ಕೋವಿದೆಯುಪ್ಪುದುತಡೆಯ ಮಹಾದೇವಿಯು ತನುವಿನ ಬಾಲ್ಯಂ ಸಡಿಲ್ದು" ಎಂದು ಹೇಳುತ್ತಾನೆ. ಇದರಲ್ಲಿ ಅತಿಶಯೋಕ್ತಿಯು ಏನೂ ಇರುವದಿಲ್ಲೆಂದು ನಮಗೆ ತೋರುತ್ತದೆ. ಹಿಂದಿನ ಕಾಲದಲ್ಲಿ ಶೈವ, ವೀರಶೈವರಲ್ಲಿ ಬಾಲ ವಿವಾಹವು ಈ ಪ್ರಾಂತದಲ್ಲಿ ಪ್ರಚಲಿತವಿರಲಿಲ್ಲ. ಈ ಸಮಯದಲ್ಲಿ ಅವರಲ್ಲಿಯ ಹೆಣ್ಣುಮಕ್ಕಳು ಚೆನ್ನಾಗಿ ಶಿಕ್ಷಣವನ್ನು ಹೊಂದಿದವರಾಗುತ್ತಿದ್ದರೆಂದು ತೋರುತ್ತದೆ ಇಂಥ ಅನೇಕ ಉದಾಹರಣೆಗಳು ನವ ಪ್ರಕಟಿಸಿದ ಶಿವಶರಣೆಯರ ಚರಿತ್ರೆಗಳಲ್ಲಿ ಕಾಣಬಹುದು.

ಹೀಗೆ ಮಹಾದೇವಿಯಕ್ಕನು ತನ್ನ ಪೂರ್ವ ವಯಸ್ಸಿನಲ್ಲಿ ಹೆಚ್ಚಿನ ತರದ ಧರ್ಮ ಜ್ಞಾನವನ್ನು ಹೊಂದಿದ್ದರಿಂದ ಅವಳು ತನ್ನ ಚಿಕ್ಕವಯಸ್ಸಿನಲ್ಲಿಯೇ ವೀರಶೈವ ಧರ್ಮಜ್ಞಾನಮಾತ್ರವಲ್ಲ, ಸಾಹಿತ್ಯ ಜ್ಞಾನವನು ಸಹ ಹೊಂದಿ ಶ್ರೇಷ್ಠ ತರಗತಿಯ ಶಿವಜ್ಞಾನಿಯೂ ವಚನಕಾರಳೂ ಆದಳೆಂದು ಊಹಿಸಲು ಆವ ಪ್ರತ್ಯವಾಯವೂ ಇರಲಾರದು.

ಮಹಾದೇವಿಯಕ್ಕನು ಚಿಕ್ಕಂದಿನಲ್ಲಿ ಸಂಸ್ಕೃತ ಮತ್ತು ಕನ್ನಡ ಭಾಷೆಗಳ ಜ್ಞಾನ ಮಾಡಿಕೊಂಡು ಪುರಾಣಾಗಮಗಳ ಅಭ್ಯಾಸವನ್ನು ಸಹ ಚೆನ್ನಾಗಿ ಮಾಡಿಕೊಂಡಿರಬೇಕೆಂದು ತೋರುತ್ತದೆ. ಶೈವ ಪುರಾಣಾದಿಗಳು ಅವಳಿಗೆ ಚೆನ್ನಾಗಿ ಪರಿಚಯವಾಗಿದ್ದವು. ಆದ್ದರಿಂದ ಅವಳು ತನ್ನ ವಚನಗಳಲ್ಲಿ ಶಿವನ ಸಭೆ, ಕೈಲಾಸ ಪರ್ವತ, ಶಿವನ ಪರಿವಾರ ದೇವತೆಗಳು ಇವುಗಳ ವರ್ಣನೆಯನ್ನು ಬಹಳ ಚೆನ್ನಾಗಿ ಮಾಡುತ್ತಾಳೆ. ಈ ಕಾಲದಲ್ಲಿ ಮಲ್ಲಿಕಾರ್ಜುನನ ಭಕ್ತಿಯು ಕರ್ನಾಟಕದಲ್ಲಿ ಎಲ್ಲ ಕಡೆಗೂ ಬಹಳ ಪಸರಿಸಿತ್ತೆಂದು ತೋರುತ್ತದೆ. ಸಿದ್ಧರಾಮೇಶ್ವರನು, ಕಕ್ಕಯ್ಯ ಮೊದಲಾದ ಅನೇಕ ಮಹತ್ವದ ಶಿವಶರಣರು ಶ್ರೀಶೈಲ ಮಲ್ಲಿಕಾರ್ಜುನನಿಗೋಸ್ಕರ ಬಹಳ ಭಕ್ತಿಯನ್ನು ವಹಿಸಿದವರಾಗಿದ್ದಾರೆ. ಉಡುತಡಿಯಲ್ಲಿ ಮಲ್ಲಿಕಾರ್ಜುನನ ಒಂದು ದೇವಾಲಯವೂ ಉಂಟು. ಮಹಾದೇವಿಯಕ್ಕನು ಮಲ್ಲಿಕಾರ್ಜುನನ ಹೆಸರಿನಿಂದ ವಚನಗಳನ್ನು ರಚಿಸಿದ್ದರ

ಮೇಲಿಂದ ಮಲ್ಲಿಕಾರ್ಜುನನ ಬಗ್ಗೆ ಭಕ್ತಿಯು ಆವಳ ಚಿಕ್ಕ ವಯಸ್ಸಿ ನಲ್ಲಿಯೇ ಅವಳಲ್ಲಿ ಉಂಟಾಗಿರಬಹುದೆಂದು ನಾವು ಊಹಿಸಬಹುದಾಗಿದೆ. ಇದೇ ಕಾಲದಲ್ಲಿ ಬನವಾಸಿ ನಾಡಿನಲ್ಲಿ ರೇವಣಸಿದ್ಧ, ಸತ್ಯಕ್ಕ, ಅನುಮಿಷ, ಮೊದಲಾದ ವಚನಕಾರರು ಉಂಟಾಗಿದ್ದರು. ಇವರು ಶ್ರೇಷ್ಠ ತರಗತಿಯ ಶಿವಾನುಭವಿಗಳು. ಇವರ ಶಿವಾನುಭವದ ವಿಚಾರಗಳು ನಾಡಿನಲ್ಲಿ ಕೆಲವಟ್ಟಿಗಾದರೂ ಪಸರಿಸಿರಬಹುದು. ಅವು ಮಹಾದೇವಿಯಕ್ಕನನ್ನು ಆಕೆಯ ಸಣ್ಣ ವಯಸ್ಸಿನಲ್ಲಿ ಆಕರ್ಷಿಸಿರಬಹುದು. ಬಸವೇಶ್ವರನು ಐದಾರು ವರ್ಷ ಮಾತ್ರ ಕಲ್ಯಾಣ ಪಟ್ಟಣದಲ್ಲಿ ಮಂತ್ರಿಯಾಗಿದ್ದನು. ಇಷ್ಟು ಅಲ್ಪ ಕಾಲದಲ್ಲಿಯೇ ಮಹಾದೇವಿಯಕ್ಕನು ಬಹು ಶ್ರೇಷ್ಠಳೂ ಅನುಭಾ ವದ ಪೂರ್ಣ ಸ್ಥಿತಿಯನ್ನು ಹೊಂದಿದವಳೂ ಆಗುವ ಸಂಭವವಿಲ್ಲ. ಅವ ಳಿಗೆ ಶಿವಾನುಭವದ ವ್ಯಾಸಂಗವು ಅವಳ ಚಿಕ್ಕ ವಯಸ್ಸಿನಲ್ಲಿಯೇ ಪ್ರಾರಂಭವಾಗಿರಬಹುದು. ಅದಕ್ಕೆ ಅನುಕೂಲವಾದ ಸನ್ನಿವೇಶಗಳು ಬನವಾಸಿ ನಾಡಿನಲ್ಲಿ ಈ ಕಾಲದಲ್ಲಿ ಉಂಟಾಗಿದ್ದವು. ಈ ಕಾರಣಕ್ಕೋಸ್ಕರ ಮಹಾದೇವಿಯಕ್ಕ ಮೊದಲ್ಗೊಂಡು ಬಹುಜನ ಶಿವಶರಣ ಶಿವಶರ ಣೆಯರು ಈ ಭಾಗದಲ್ಲಿ ಉಂಟಾಗಿದ್ದಾರೆ.

ಈ ಪ್ರಕಾರ ಮಹಾದೇವಿಯಕ್ಕನು ತನ್ನ ತಾಯಿ ತಂದೆಗಳ ಮತ್ತು ಕುಲಗುರುವಿನ ನಿದರ್ಶನದಲ್ಲಿ ಹೆಚ್ಚಿನ ತರಗತಿಯ ಶಿವಜ್ಞಾನವನ್ನು ಹೊಂದುತ್ತ ಬಂದಳು. ಆಕೆಗೆ ಒಬ್ಬ ಗುರುವು ಇದ್ದನೆಂಬುದು ತಿಳಿದು ಬರುತ್ತಿದ್ದರೂ ಆತನ ವಿಷಯವಾಗಿ ನಮಗೆ ವಿವರಣೆಗಳು ಗೊತ್ತಾಗಿರು ವದಿಲ್ಲ. ಆದರೆ ಅವನ ವಿಷಯವಾಗಿ ಆಕೆಯು ಆದರ ಭಾವವನ್ನು ತೋರಿ ಸುತ್ತಿರುವದರಿಂದ ಆತನು ಹೆಚ್ಚಿನ ತರಗತಿಯವನಿರಬೇಕೆಂದು ಮಾತ್ರ ನಾವು ಊಹಿಸುತ್ತೇವೆ. ಅವಳ ಗ್ರಂಥದಲ್ಲಿಯ ೨೯ನೇ ವಚನದಲ್ಲಿ "ಸಂಸಾರ ಸಾಗರದೊಳಗೆ ಬಿದ್ದೆ ನೋಡಾ ನಾನು. ಸಂಸಾರ ನಿಸ್ಸಾರವೆಂದು ತೋರಿದನೆನ್ನ ಗುರು. ಅಂಗ ವಿಕಾರದ ಸಂಗವನಿರಿಸಿ ಲಿಂಗವನಂಗದ ಮೇಲೆ ಸ್ಥಾಪ್ಯವ ಮಾಡಿದನೆನ್ನ ಗುರು" ಎಂದು ಮುಂತಾಗಿ ಹೇಳು ತ್ತಾಳೆ. ಆದರೆ ಆ ಗುರುವಿನ ಹೆಸರನ್ನು ಅವಳು ಇಲ್ಲಿ ಹೇಳಿಲ್ಲ. ಒಂದು ವೇಳೆ ಹೇಳಿದ್ದರೆ ಅದು ಅವನಿಗೋಸ್ಕರ ಅನಾದರ ಭಾವವನ್ನು ತೋರಿಸಿ ದಂತಾಗುತ್ತದೆಂದು ಅವಳು ತಿಳಿದಿರಬಹುದು. ಹೀಗೆ ಗುರುವಿನ ಹೆಸ ರನ್ನು ಹೇಳುವ ಸಂಪ್ರದಾಯವೂ ನಾಡಿನಲ್ಲಿ ಇರುವದಿಲ್ಲ.

ಈ ಪ್ರಕಾರ ಮಹಾದೇವಿಯಕ್ಕನು ಉಡುತಡಿಯಲ್ಲಿ ಕಾಲಕಳೆ
ಯುತ್ತಿರಲು ಅವಳ ಪ್ರಸಿದ್ಧಿಯು ಜನರಲ್ಲಿ ಸ್ವಾಭಾವಿಕವಾಗಿ ಪಸರಿಸದೇ
ಕೇಬುದು ಸ್ಪಷ್ಟವಿದೆ. ಹೀಗಿರಲು ಕೆಲವೊಂದು ದಿವಸ ಕೌಶಿಕ ರಾಜನು
ವೈಹಾಳಿಯಿಂದ ಬೀದಿಯಿಂದ ತಿರುಗಿಬರುತ್ತಿದ್ದನು. ಆಗ ಗಜಮಸ್ತಕದ
ಮೇಲೆ ಅವನು ಪುಣ್ಯ ಪಾತಕರ ಸಂದಣಿಯಲ್ಲಿರುವಾಗ ಮಹಾದೇವಿ
ಯಕ್ಕನು ತನ್ನ ಮನೆಯ ಮುಂದೆ ನಿಂತದ್ದನ್ನು ಕಂಡನು. ಆಗ ಅವಳು
ತನ್ನ ಎಳೆ ಯೌವ್ವನದಲ್ಲಿ ಸೌಂದರ್ಯವತಿಯಾಗಿ ಶೋಭಿಸುತ್ತಿದ್ದಳು.
ಅರಸನು ಅವಳನ್ನು ನೋಡಿದ ಕೂಡಲೇ ಅವಳಲ್ಲಿ ಮೋಹ ಪರವಶ
ನಾದನು. ಆಗ ಅವನ ಮನಸ್ಸು ಚಂಚಲತೆಯನ್ನು ಹೊಂದಿತು. ಅವನು
ತನ್ನ ಅರಮನೆಗೆ ಬಂದ ಬಳಿಕ ತನ್ನ ಮಂತ್ರಿಗಳನ್ನು ಕರೆಸಿ ತಾನು
ಮಹಾದೇವಿಯಕ್ಕನನ್ನು ಲಗ್ನವಾಗುವೆನೆಂದು ತಿಳಿಸಿ ಅವಳನ್ನು ತನಗೆ
ಕೊಡಲು ಅವಳ ತಾಯಿ ತಂದೆಗಳ ಸಮ್ಮತಿಯನ್ನು ತೆಗೆದುಕೊಂಡು
ಬನ್ನಿರೆಂದು ಹೇಳಿ ಕಳುಹಿದನು. ಆ ಪ್ರಕಾರ ಅವರು ಮಹಾದೇವಿಯಕ್ಕನ
ಮನೆಗೆ ಹೋಗಿ ಅವಳ ತಂದೆ ತಾಯಿಗಳಿಗೆ ಈ ವಿಷಯವನ್ನು ಕುರಿತು
ಕೇಳಲಾಗಿ ಅವರು ಅತಿ ಸಂಕೋಚಭಾವದಿಂದ ಇದನ್ನು ಮಹಾದೇವಿಯಕ್ಕ
ನಿಗೆ ತಿಳಿಸಿದರು. ಆದಕ್ಕೆ ಅವಳು ಧಿಗಿಲು ಭುಗಿಲೆಂದು ಕೋಪಿಸಿ ಕೌಶಿಕನು
ಜೈನ ಧರ್ಮದವನಾಗಿದ್ದಾನೆ. ಅವನಲ್ಲಿ ಶಿವಭಕ್ತಿಎಂಬುದೇನು ಇಲ್ಲ, ಇಂಥವ
ನನ್ನು ನಾನು ಹೇಗೆ ಲಗ್ನವಾಗಬಹುದೆಂದು ನುಡಿದು ಇದು ಭಕ್ತರ
ಶೀಲವಲ್ಲೆಂದು ನುಡಿದಳು. ಆಗ ತಾಯಿ ತಂದೆಗಳು ಅವಳ ಈ ಮಾತನ್ನು
ಅರಸನಿಗೆ ತಿಳಿಸಿರೆಂದು ಮಂತ್ರಿಗಳ ಕೂಡ ಹೇಳಿ ಕಳಿಸಿದರು. ಮಂತ್ರಿ
ಗಳು ಅರಸನಿಗೆ ಆ ಪ್ರಕಾರ ತಿಳಿಸಲಾಗಿ ಮಂತ್ರಿಗಳು ಅರಸನ ಅಭಿ
ಪ್ರಾಯವನ್ನು ತಿಳಿದುಕೊಂಡು ಮಹಾದೇವಿಯಕ್ಕನ ಮನೆಗೆ ತಿರುಗಿಬಂದು
ತಾಯಿ ತಂದೆಗಳಿಗೆ ಹೇಳಿದ್ದೇನಂದರೆ— ಅರಸನು ಕುಪಿತನಾಗಿದ್ದಾನೆ
ನಿಮಗೆ ದುರ್ಮರಣವಾಗುವದು ನಿಶ್ಚಯವು. ನೀವು ಮಹಾದೇವಿಯಕ್ಕ
ನನ್ನು ಕೊಡದೆಹೋದರೆ ನಿಮಗೆ ಸಾವು ನಿಶ್ಚಯವು. ಆದರೆ ಒಂದು
ವೇಳೆ ಕೊಟ್ಟರೆ ನೀವು ಸುಖಿಯಾಗಿ ಬಾಳುವಿರಿ, ಎಂದು ಹೇಳಿದರು.
ಆಗ ತಾಯಿ ತಂದೆಗಳು ಮಹಾದೇವಿಯಕ್ಕನನ್ನು ಕಂಡು ಅರಸನ ಈ ಅಭಿ
ಪ್ರಾಯವನ್ನು ಅವಳಿಗೆ ತಿಳಿಸಿ ಹೇಗೆ ಮೊದಲಿನ ಕಾಲದಲ್ಲಿ ಕಾರಿ
ಕಾಲಮ್ಮ, ವೈಜಕ್ಕವ್ವೆ, ಮಾಂಗಾಯಕ್ಕರಸಿ ಇವರು ಭವಿಗಳು ಕೂಡ

ಇದ್ದರೂ ತಮ್ಮ ಶಿವಭಕ್ತಿಯನ್ನು ಬಿಡಲಿಲ್ಲವೋ ಹಾಗೆಯೇ ನೀನು ಆಚರಿಸಬೇಕೆಂದು ಅವರು ಅವಳಿಗೆ ಬೋಧಿಸಿದರು. ಮಹಾದೇವಿಯಕ್ಕನು ನಿಶ್ಚಲ ಹೃದಯಳು ಮತ್ತು ಸಂಪೂರ್ಣ ಶಿವಾನುಭವಿಯು. ಅವಳು ಅರಸನ ಅಪ್ಪಣೆಯನ್ನು ಕೇಳಿ ಜಾಣತನದಿಂದ ತನ್ನ ತಾಯಿತಂದೆಗಳನ್ನು ಸಂತೈಸುತ್ತ ತನ್ನ ಮುಂದೆ ಇದ್ದ ಮಂತ್ರಿಗಳಿಗೆ ಹೇಳಿದ್ದೇನಂದರೆ— ಅರಸನ ಅಭಿಪ್ರಾಯದಂತೆ ನಾನು ನಡೆಯುವೆನು. ಆದರೆ ಆತನು ನನ್ನ ಶಿವಭಕ್ತಿಗೆ ಹಾನಿಬಾರದಂತೆ ವರ್ತಿಸಬೇಕು. ಇದಕ್ಕೆ ಅವನ ಒಪ್ಪಿಗೆಯನ್ನು ಪಡೆಯಬೇಕು. ಅರಸನನ್ನು ಲಗ್ನವಾಗಲು ಇದೊಂದೇ ನನ್ನ ಶರ್ತು ಇದೆ, ಎಂದು ಹೇಳಿ ಕಳಿಸಿದಳು. ಮಂತ್ರಿಗಳು ಹಾಗೆಯೇ ಆಗಲೆಂದು ಅರಸನೆಡೆಗೆ ಹೋಗಿ ಮಹಾದೇವಿಯಕ್ಕನ ಅಭಿಪ್ರಾಯವನ್ನು ಅವನಿಗೆ ತಿಳಿಸಿ ಅವನ ಉತ್ತರವನ್ನು ಕೇಳಿಕೊಂಡು ತಿರುಗಿಬಂದು ಮಹಾದೇವಿಯಕ್ಕನಿಗೆ— ನಿನ್ನ ಶಿವಭಕ್ತಿಗೆ ಹಾನಿಬಾರದಂತೆ ಅರಸನು ವರ್ತಿಸುವನು. ಅದಕ್ಕೆ ಅವನು ಒಪ್ಪಿಗೆ ಕೊಟ್ಟಿದ್ದಾನೆ, ಎಂದು ಹೇಳಿದರು. ಮಹಾದೇವಿಯಕ್ಕನು ಇದನ್ನು ಕೇಳಿ ಅರಸನ ಮಂದಿರಕ್ಕೆ ಹೋಗಲು ಸಿದ್ಧಳಾದಳು.

ಮೇಲಿನ ಸಂಗತಿಗಳನ್ನು ನಾವು ನಿರೀಕ್ಷಿಸಿದಲ್ಲಿ ಮಹಾದೇವಿಯಕ್ಕನ ಸ್ವಭಾವದ ಪರಿಚಯವು ನಮಗೆ ಚನ್ನಾಗಿ ಆಗುವಂತೆ ಇದೆ. ಅವಳಲ್ಲಿ ವೀರಶೈವ ಮತದ ಬಗ್ಗೆ ಉತ್ಕಟ ಅಭಿಮಾನವು ಉಂಟಾಗಿದ್ದಿತೆಂಬುದರಲ್ಲಿ ಏನೂ ಸಂದೇಹ ವಿರಲಾರದು. ಆದರೆ ಅವಳು ಅರಸನಲ್ಲಿದ್ದುಕೊಂಡು ವಿಷಯ ಲೋಲುಪಳಾಗಿ ವರ್ತಿಸಲಿಕ್ಕೆ ಅವಳು ಇಚ್ಛಿಸಲಿಲ್ಲ. ಅವಳು ವೀರಶೈವಮತ ತತ್ವಗಳ ಬಗ್ಗೆ ಅಭಿಮಾನವುಳ್ಳವಳಾಗಿ ಅವುಗಳಂತೆ ತಾನು ನಡೆಯಲಿಕ್ಕೆ ಅರಸನು ಎಷ್ಟು ಮಾತ್ರವು ಅತಂಕ ತಂದೊಡ್ಡದೆಂಬ ಕರಾರನ್ನು ಮಾತ್ರ ಅವನಿಗೆ ಹಾಕಿದಳು. ಈ ಕಾಲದಲ್ಲಿ ಕರ್ನಾಟಕದ ಮುಖ್ಯ ಸಮಾಜಗಳಾದ ಜೈನ, ಬ್ರಾಹ್ಮಣ, ವೀರಶೈವ, ಪಾಶುಪತ ಈ ಧರ್ಮಗಳ ಅನುಯಾಯಿಗಳು ಕರ್ನಾಟಕದಲ್ಲಿ ಬಹುಜನರು ವಾಸಿಸುತ್ತಿದ್ದರು. ಅವರಲ್ಲಿ ಪರಸ್ಪರ ಧರ್ಮಾಂತರಗಳು ಸುಲಭವಾಗಿ ಈಕಾಲದಲ್ಲಿ ಆಗುತ್ತಿದ್ದವೆಂದು ಇತಿಹಾಸದಿಂದ ತಿಳಿದುಬರುತ್ತದೆ. ಅವರಲ್ಲಿ ಪರಸ್ಪರ ಅನ್ನೋದಕ ವ್ಯವಹಾರಗಳೂ ಕೂಡ ಸರಳವಾಗಿ ನಡೆಯುತ್ತಿದ್ದವು. ಆದದ್ದರಿಂದ ಮಹಾದೇವಿಯಕ್ಕನು ಅರಸನಿಂದ ಯಾವ ಶರ್ತನ್ನು ತೆಗೆದುಕೊಳ್ಳದೆ ಅವನ ಕಡೆಗೆ ಇರಲಿಕ್ಕೆ ಅವಳು ಹೋಗಬಹುದಾಗಿತ್ತು. ಆದರೆ

ಬಲ್ಲರೆ ಕೂಡಿಕೊಂಡಿಪ್ಪ ನಮ್ಮ ಕೂಡಲಸಂಗಮ ದೇವ.

ಸುಯಿಧಾನ = ಸಂವಿಧಾನ, ಜಾಗ್ರತೆ ವಹಿಸುವದು, ಲಕ್ಷಿಸುವದು, ಆದರಿಸುವದು.

ಭಕ್ತಿಯು ಹೇಗಿರುತ್ತದೆಂಬುದನ್ನು ಬಸವೇಶ್ವರನು ಈ ವಚನದಲ್ಲಿ ಹೇಳಿರುತ್ತಾನೆ. ಅದು ಅವನ ನಡೆಯಲ್ಲಿ ತೋರಬೇಕೆಂದು ಅವನ ಅಭಿಪ್ರಾಯವು. ಇದು ಹೇಗೆಂಬುದನ್ನು ಅವನು ಇಲ್ಲಿ ಕೆಲವು ಉದಾಹರಣೆಗಳನ್ನು ಕೊಟ್ಟು ಹೇಳಿದ್ದಾನೆ. ಭಕ್ತನಾದವನು ಹರಿಯುವ ನದಿಯಂತಿರಬೇಕೆಂದು ಅವನು ಹೇಳುತ್ತಾನೆ. ಒಕ್ಕಲಗರು ಇಂಥ ನದಿಯಿಂದ ಕಾಲಿವೆಗಳನ್ನು ತೆಗೆದು ಹೊಲಗಳಿಗೆ ಒಯ್ದು ಅದರ ನೀರನ್ನು ಉಪಯೋಗಿಸುತ್ತಾರೆ. ಇದರಿಂದ ಅಲ್ಲಿ ಫಲ ಪೈರು ವೃಕ್ಷಾದಿಗಳು ಸಮೃದ್ಧವಾಗಿ ಬೆಳೆಯುತ್ತವೆ. ಪಶು ಪಕ್ಷಾದಿಗಳು ಅಲ್ಲಿ ಆನಂದದಿಂದ ನಲಿದಾಡುತ್ತವೆ. ಭಕ್ತಿಯುಳ್ಳವನು ಜನರಿಗೆ ಹೀಗೆ ಹರಿಯುವ ನದಿಯಂತೆ ಉಪಕಾರಿಯಾಗಿರಬೇಕೆಂದು ಬಸವೇಶ್ವರನ ಅಭಿಪ್ರಾಯವು. ಜನರು ಒಂದೆಡೆಯಲ್ಲಿ ಸೇರಿರಲಾಗಿ ಭಕ್ತಿಯುಳ್ಳವನು ಅವರಿಗೋಸ್ಕರ ಸುಯಿಧಾನ ಅಂದರೆ ಅವರಿಗೆ ಏನು ಬೇಕೆಂಬುದನ್ನು ತಿಳಿದುಕೊಂಡು ಅವುಗಳನ್ನು ಅವರಿಗೆ ಸಲ್ಲಿಸಿ ಉಪಚರಿಸುತ್ತಾನೆ. ಇದು ಭಕ್ತಿ ಇದ್ದವನ ನಡೆಯಾಗಿದೆ. ಅಲ್ಲದೆ ಅವನು ಜನರಿಗೆ ಮೊದಲು ಕೊಟ್ಟು ಏನಾದರೂ ಉಳಿದರೆ ಮಾತ್ರ ತಾನು ಸೇವಿಸುತ್ತಾನೆ. ಅಂದರೆ ಅವನು ಅತ್ಯಂತ ಉದಾರಿಯು. ಇವು ಭಕ್ತನ ಆಚರಣೆಗಳು. ಇಂಥವನಲ್ಲಿ ಪರಮಾತ್ಮನು ಇರುತ್ತಾನೆಂದು ಬಸವೇಶ್ವರನು ಈ ವಚನದಲ್ಲಿ ಹೇಳಿದ್ದಾನೆ.

(೫೪) ಎಂತಕ್ಕೆ ಎಂತಕ್ಕೆ ನಾ ನಿಮ್ಮ ದೇವನೆಂದರಿದೆನು ? ಇಂತಾಗಿ ನೀವೆನ್ನನಾರೆಂದರಿಯಿರಿ. ನಂಬಲರಿಯೆ, ನಂಬಿಸಲರಿಯೆ. ಒಲಿಯಲರಿಯೆ, ಒಲಿಸಲರಿಯೆ. "ಯಥಾ ಭಾವ ಸ್ತಥಾ ಲಿಂಗಂ । ಸತ್ಯಂ ಸತ್ಯಂ ನ ಸಂಶಯಃ ॥ ಯಥಾ ಭಕ್ತಿ ಸ್ತಥಾ ಸಿದ್ಧಿಃ ॥ ಸತ್ಯಂ ಸತ್ಯಂ ನ ಸಂಶಯಃ" ನಮ್ಮ ಕೂಡಲ ಸಂಗಮದೇವ ಕೇಳಯ್ಯ, ಕೋಟಿ ಕೋಟಿ ವರುಷ ಕೋಟಲೆಗೊಂಡರೇನಯ್ಯ ?

ಕೋಟಲೆ = ತೊಂದರೆ.

ನಾನು ಪರಮಾತ್ಮನನ್ನು ಕುರಿತು "ನೀನು ದೇವರೆಂದು ನಾನು ಹೇಗೆ ತಿಳಿಯಬೇಕು? ನೀನು ದೇವರೆಂದು ನಾನು ಹೇಗೆ ತಿಳಿಯಬೇಕು? ಎಂದು ಪ್ರಶ್ನೆ ಮಾಡುತ್ತೇನೆ." ಹೀಗೆ ಪ್ರಶ್ನೆ ಮಾಡಬಾರದೆಂದು ಬಸವೇಶ್ವರನ ಅಭಿಪ್ರಾಯವು. ಇದು ಪರಮಾತ್ಮನಲ್ಲಿ ಅಪನಂಬಿಗೆಯನ್ನು ತೋರಿಸುತ್ತದೆ. ಬಸವೇಶ್ವರನು ಅನ್ನುವದೇನಂದರೆ— ನಾನು ದೇವರನ್ನು ನೀಟಾಗಿ ನಂಬುವದಿಲ್ಲ. ಮತ್ತು ಎರಡನೆಯವರು ನಂಬುವಂತೆಯೂ ಮಾಡುವದಿಲ್ಲ. ನಾನು ಅವನನ್ನು ಪ್ರೀತಿಸುವದಿಲ್ಲ, ಎರಡನೆಯವರು ಪ್ರೀತಿಸುವಂತೆಯೂ ಮಾಡುವದಿಲ್ಲ. ಇದು ನನ್ನಲ್ಲಿ ಭಕ್ತಿಯು ಇಲ್ಲವೆಂಬುವನ್ನು ತೋರಿಸುತ್ತದೆ. ಮನುಷ್ಯನಲ್ಲಿ "ಭಾವವು ಹೇಗೆ ಇದೆಯೋ ಹಾಗೆಯೇ ಅವನಲ್ಲಿ ಲಿಂಗವಿರುತ್ತದೆ. ಅವನಲ್ಲಿ ಹೇಗೆ ಭಕ್ತಿಯು ಇದೆಯೋ ಹಾಗೆಯೇ ಸಿದ್ಧಿಯು ಆಗುತ್ತದೆ." ಹೀಗೆ ಒಂದು ಉಕ್ತಿಯು ಇದ್ದು ಅದನ್ನು ಬಸವೇಶ್ವರನು ಇಲ್ಲಿ ಉದಹರಿಸಿ ಹೇಳುವದೇನಂದರೆ— ನಾನು ದೇವರಲ್ಲಿ ವಿಶ್ವಾಸವನ್ನಿಟ್ಟು ನಡೆಯುವದಿಲ್ಲ. ಆದ್ದರಿಂದ ನಾನು ಕೋಟಿ ಕೋಟಿ ವರುಷ ಹುಟ್ಟಿ ಹುಟ್ಟಿ ಬರುತ್ತೇನೆ. ಮತ್ತು ನಾನು ವ್ಯರ್ಥ ಶ್ರಮ ಪಡುತ್ತೇನೆ ಎಂದು ಅವನು ಈ ವಚನದಲ್ಲಿ ಹೇಳಿದ್ದಾನೆ. ಅವನು ಭಕ್ತಿಯು ಹೇಗಿರಬೇಕೆಂಬುದನ್ನು ಹೇಳಿದ್ದಾನೆ.

(೫೫) ಚಂದ್ರಕಾಂತದ ಸಿಲೆಯಲ್ಲಿ ಜಲವಿಲ್ಲದನ್ನಕ್ಕ ಶೈತ್ಯವ ತೋರುವ ಪರಿ ಎಂತೋ? ಸೂರ್ಯಕಾಂತ ಶಿಲೆಯಲ್ಲಿ ಅಗ್ನಿ ಇಲ್ಲದನ್ನಕ್ಕ ಉಷ್ಣವ ತೋರುವ ಪರಿ ಎಂತೋ? ಶರಣರ ಭಕ್ತಿಗೆ ಕಾಯಕವಿಲ್ಲದನ್ನಕ್ಕ ಕೂಡಲಸಂಗನನರಿವ ಪರಿ ಎಂತೋ?

ಚಂದ್ರಕಾಂತದ ಶಿಲೆಯಲ್ಲಿ ಜಲವಿರುವದರಿಂದ ಅದರಲ್ಲಿ ಶೈತ್ಯವಿರುತ್ತದೆ. ಅದರಲ್ಲಿ ಈ ಜಲವು ಇರದಿದ್ದರೆ ಆ ಶೈತ್ಯವು ಅದರಲ್ಲಿ ಹೇಗೆ ತೋರಬೇಕು? ಸೂರ್ಯಕಾಂತದ ಶಿಲೆಯಲ್ಲಿ ಅಗ್ನಿಯು ಇರುವದರಿಂದ ಅದರಲ್ಲಿ ಉಷ್ಣತೆಯು ಇರುತ್ತದೆ. ಆದರೆ ಅದರಲ್ಲಿ ಅಗ್ನಿಯು ಇರದಿದ್ದರೆ ಆ ಉಷ್ಣತೆಯು ಅದರಲ್ಲಿ ಹೇಗೆ ತೋರಬೇಕು? ಹಾಗೆಯೇ ಶಿವಶರಣನಲ್ಲಿ ಭಕ್ತಿಯು ಇರುತ್ತದೆ. ಭಕ್ತಿಯು ಅವನಲ್ಲಿ ಇರದಿದ್ದರೆ ಅವನು ಪರಮಾತ್ಮನನ್ನು ಅರಿಯುವದು ಹೇಗೆ? ಅಂದರೆ ಭಕ್ತಿಯಿಂದಲೇ ಪರಮಾತ್ಮನನ್ನು ಅರಿಯಬೇಕೆಂದ. ಬಸವೇಶ್ವರನ ಅಭಿಪ್ರಾಯವು.

(೫೬) ಕಾಣಿಯ ಲೋಭ ಕೋಟಿಯ ಲಾಭವ ಕೆಡಿಸಿದುದ ನಾನರಿಯೆನಯ್ಯ. ಭಕ್ತಿಯ ಕುಳವ ನಾನರಿಯದೆ ಮತಿಗೆಟ್ಟ ಪರಿಯ ನಾನ

ರಿಯೆನಯ್ಯಾ. ಕೂಡಲ ಸಂಗನ ಶರಣರ ಸಂಗದಿಂದರಿದರೆ ನಾನು ಬದುಕುವೆನಯ್ಯಾ.

ಕಾಣಿಯು ತಕ್ಕಡಿಯಲ್ಲಿರುವ ಹೆಚ್ಚು ಕಡಿಮೆಯನ್ನು ಸರಿಪಡಿಸುತ್ತದೆ. ತೂಕವು ಸರಿಯಾಗಿ ಇದ್ದಲ್ಲಿ ವ್ಯಾಪಾರಸ್ಥನು ಕೋಟಿ ಲಾಭವನ್ನು ಪಡೆಯುತ್ತಾನೆ. ಯಾಕಂದರೆ ಅವನು ಪ್ರಾಮಾಣಿಕನೆಂದು ಜನರು ಅವನಲ್ಲಿ ಹೆಚ್ಚು ವ್ಯವಹಾರ ಮಾಡುತ್ತಾರೆ. ಆದರೆ ಲೋಭಿಯಾದವನು ಕಾಣಿಯನ್ನು ಹಚ್ಚದೆ ತೂಗುವದುಂಟು. ಇದು ಮುಂದೆ ಹೊರಪಡುವದು. ಆಗ ಅವನ ವ್ಯಾಪಾರವು ಕಡಿಮೆಯಾಗಿ ಅವನು ಹಾನಿಗೊಳಗಾಗುತ್ತಾನೆ. ಈ ರೀತಿಯನ್ನು ನಾವು ಅರಿಯಬೇಕು. ಇಲ್ಲಿ ಬಸವೇಶ್ವರನು ಹೇಳುವದೇನಂದರೆ, ಭಕ್ತಿ ಎಂಬುದು ಇಂಥ ಕಾಣಿಯಂತೆ ಇದೆ. ಅಂದರೆ ಮನುಷ್ಯನ ನಡೆಯಲ್ಲಿ ಹೆಚ್ಚು ಕಡಿಮೆಯಾದರೆ ಈ ಭಕ್ತಿಯು ಅದನ್ನು ಸರಿಪಡಿಸುತ್ತದೆ. ಅಂದರೆ ಅದು ಅವನನ್ನು ಸರಿಯಾದ ಹಾದಿಗೆ ಹಚ್ಚುತ್ತದೆ. ಭಕ್ತಿಯ ಕಾರ್ಯವು ಹೀಗಿರುತ್ತದೆಂಬುದನ್ನು ಅರಿತುಕೊಂಡು ಭಕ್ತನು ಭಕ್ತಿಯಿಂದ ನಡೆಯಬೇಕು. ಇದನ್ನು ಅರಿಯದೆ ನಡೆಯುವಂಥ ಮೂಢರನ್ನು ನಾನು ಕಾಣೆನೆಂದು ಬಸವೇಶ್ವರನು ಇಲ್ಲಿ ಹೇಳುತ್ತಾನೆ. ಭಕ್ತಿಯ ಈ ರೀತಿಯನ್ನು ನಾನು ಶರಣರ ಸಂಗದಿಂದ ಅರಿಯುವೆನು. ಮತ್ತು ನಾನು ಹೀಗೆ ವರ್ತಿಸಿದಲ್ಲಿ ಅದು ನನ್ನ ಜೀವಿತದ ಸಾಫಲ್ಯವೆಂದು ತಿಳಿಯುತ್ತೇನೆಂದು ಬಸವೇಶ್ವರನು ಇಲ್ಲಿ ಹೇಳಿದ್ದಾನೆ.

## ನಿಷ್ಕಪಟ ಭಕ್ತಿಯುಳ್ಳವನಾಗಿರು.

(೫೭) ಭಕ್ತಿ ಎಳ್ಳನಿತಿಲ್ಲ. ಯುಕ್ತಿ ಶೂನ್ಯನಯ್ಯಾ. ನಾನು ತನುವಂಚಕ, ಮನವಂಚಕ, ಧನವಂಚಕ ನಾನಯ್ಯಾ. ಕೂಡಲ ಸಂಗಮದೇವ ಮಳಲೊಟ್ಟಿಲೆನ್ನ ಮಾತು.

ಮಳಲು = ಉಸುಕು, ಒಟ್ಟಿಲು = ಗುಂಪಿ.

ನನ್ನಲ್ಲಿ ಭಕ್ತಿಯು ಎಳ್ಳಷ್ಟಾದರೂ ಇಲ್ಲ. ಆದರೆ ಭಕ್ತಿಯು ಇಲ್ಲದೆ ಮನುಷ್ಯನು ಉತ್ತಮ ಸ್ಥಿತಿಯನ್ನು ಹೊಂದಲಾರನು. ಇದು ಗೊತ್ತಿದ್ದರೂ ನಾನು ಮುಂದೇನು ಮಾಡಬೇಕೆಂಬುದನ್ನು ನಿಶ್ಚಯಿಸಿಕೊಂಡಿಲ್ಲ. ನಾನು ಯುಕ್ತಿಶೂನ್ಯನಾಗಿದ್ದೇನೆ. ನಾನು ನನ್ನ ದೇಹದಲ್ಲಿ ಶ್ರಮ ಮಾಡುವ

ದಿಲ್ಲ. ಆದ್ದರಿಂದ ನಾನು ತನುವಂಚಕನು. ನಾನು ಮನಸ್ಸಿನಿಂದ ಶ್ರಮ ಮಾಡುವದಿಲ್ಲ. ಆದ್ದರಿಂದ ನಾನು ಮನವಂಚಕನು. ನಾನು ಯಾರಿಗೂ-ಧನಸಹಾಯ ಮಾಡುವದಿಲ್ಲ. ಆದ್ದರಿಂದ ನಾನು ಧನ ವಂಚಕನು. ನಾನು ಬರೀ ದೊಡ್ಡ ಮಾತುಗಳನ್ನು ಹೇಳುತ್ತೇನೆ. ಅವು ಗಳಲ್ಲಿ ಏನೂ ಹುರುಳಿಲ್ಲ. ಅವು ಉಸುಕಿನ ಗುಂಪೆಗಳು ಮಾತ್ರ. ಹೀಗೆ ನುಡಿಯುವದರಿಂದ ನನಗೆ ಉತ್ತಮ ಸ್ಥಿತಿಯು ಪ್ರಾಪ್ತವಾಗುವ ದಿಲ್ಲವೆಂದು ಬಸವೇಶ್ವರನು ಇಲ್ಲಿ ಹೇಳಿದ್ದಾನೆ.

(೫೮) ಒಂದುವನರಿಯದ ಸಂದೇಹಿ ನಾನಯ್ಯಾ. ನಂಬುಗೆ ಇಲ್ಲದ ಡಂಭಕ ನಾನಯ್ಯಾ. ನಿಮ್ಮ ನಂಬಿದ ಶರಣರ ಡಿಂಗರಿಗ ನಾನು ಕೂಡಲ ಸಂಗಮದೇವಾ.

ಡಿಂಗರಿಗ = ಸೇವಕ.

ನನಗೆ ಯಾವ ವಸ್ತುವಿನ ಬಗ್ಗೆಯೂ ಜ್ಞಾನವಿಲ್ಲ. ಇದರಿಂದ ನಾನು ಎಲ್ಲದರಲ್ಲಿಯೂ ಸಂದೇಹವುಳ್ಳವನಾಗಿದ್ದೇನೆ. ನನಗೆ ಜ್ಞಾನ ವಿಲ್ಲದ್ದರಿಂದ ನಾನು ಯಾವದನ್ನೂ ನಂಬುವದಿಲ್ಲ. ಇದರಿಂದ ನಾನು ಡಂಭಾಚಾರಿಯಾಗಿದ್ದೇನೆ. ಆದರೆ ಶರಣರು ನನ್ನಂತೆ ಸಂದೇಹವುಳ್ಳವರಲ್ಲ. ಅವರು ನಂಬಿಗೆಯುಳ್ಳವರು. ಇಂಥ ಶರಣರ ಸೇವಕನಾಗಿ ನಾನು ನಡಿ ಯುತ್ತೇನೆಂದು ಬಸವೇಶ್ವರನು ತನ್ನನ್ನು ಕುರಿತು ಹೇಳಿಕೊಳ್ಳುತ್ತಾನೆ.

(೫೯) ಆನು ಭಕ್ತನಲ್ಲಯ್ಯಾ. ಆನು ವೇಷಧಾರಿಯಯ್ಯಾ. ಕಾಟುಕ, ಕೆತ್ತುಕ, ಪೊಲ್ಲುಗನೆಂಬುದು ಎನ್ನ ಹೆಸರು. ಕೂಡಲಸಂಗಮ ದೇವಾ ನಿಮ್ಮ ಶರಣರ ಮನೆಯ ಮಗ ನಾನಯ್ಯಾ.

ಕಾಟುಕ = ಕಟಕ; ಕೆತ್ತುಕ = ಕೆತ್ತುವವ; ಪೊಲ್ಲುಗ = ಅಯೋಗ್ಯ ವಾದದ್ದನ್ನು ಮಾಡುವವ.

ಪರಮಾತ್ಮನಲ್ಲಿ ನನ್ನ ವಿಶ್ವಾಸವಿಲ್ಲ. ಆದ್ದರಿಂದ ನಾನು ಭಕ್ತ ನಲ್ಲ. ನಾನು ಬರೀ ವೇಷಧಾರಿಯು. ಆದ್ದರಿಂದ ನೀವು ನನ್ನನ್ನು ಭಕ್ತನೆಂದು ಕರೆಯಬೇಡಿರಿ. ನನ್ನ ಹೆಸರು ಕಾಟುಕ, ಕೆತ್ತುಕ, ಪೊಲ್ಲುಗ ನೆಂದು ಇದೆ. ಹೀಗೆಯೇ ನನ್ನನ್ನು ಕರೆಯಿರಿ. ಎಲೋ ಪರಮಾತ್ಮನೇ ನಾನು ನಿನ್ನ ಶರಣರ ಮನೆಯ ಪ್ರೀತಿಯ ಮಗನಾಗಿರುವಂತೆ ಮಾಡು ಎಂದು ಬಸವೇಶ್ವರನು ಪರಮಾತ್ಮನನ್ನು ಕುರಿತು ಪ್ರಾರ್ಥಿಸುತ್ತಾನೆ.

(೬೦) ಭಕ್ತಿ ಸುಭಾಷೆಯ ನುಡಿಯ ನುಡಿವೆ. ನುಡಿದಂತೆ ನಡೆವೆ. ನಡೆಯೊಳಗೆ ನುಡಿಯ ಪೂರೈಸುವೆ. ಮೇಲೆ ತೂಗುವ ತ್ರಾಸು. ಕಟ್ಟಳೆ ನಿಮ್ಮ ಕಯ್ಯಲು. ಒಂದು ಜವೆ ಕೊರತೆಯಾದರೆ ಎನ್ನನದ್ದಿ ನೀನೆದ್ದು ಹೋಗು ಕೂಡಲಸಂಗಮ ದೇವಾ.

ತ್ರಾಸು= ತಕ್ಕಡಿ; ಕಟ್ಟಳೆ= ತೂಗುವ ಗುಂಡು; ಜವೆ= ಗೋದಿ ಕಾಳು; ಅದ್ದು= ಮುಳುಗಿಸು.

ಇಲ್ಲಿ ಬಸವೇಶ್ವರನು ಅನ್ನುವದೇನಂಗರೆ— ನಾನು ಭಕ್ತಿಯ ನುಡಿಗಳನ್ನು ಇಂಪಾಗಿ ನುಡಿಯುತ್ತೇನೆ. ಹೀಗೆ ನುಡಿದಂತೆಯೇ ನಾನು ನಡೆಯುವೆನು. ನಾನು ನುಡಿದದ್ದನ್ನು ನಡೆಯಲ್ಲಿ ನಿಜವಾಗಿ ಪೂರ್ಣ ಮಾಡುವೆನು. ಎಲೋ ಪರಮಾತ್ಮನೇ ನೀನು ನಿನ್ನ ಕೈಯ್ಯಲ್ಲಿ ತೂಗುವ ತಕ್ಕಡಿ ಮತ್ತು ತೂಕದ ಗುಂಡುಗಳನ್ನು ಹಿಡಿ. ನೀನು ಆ ತಕ್ಕಡಿಯಿಂದ ನನ್ನನ್ನು ಚನ್ನಾಗಿ ತೂಗಿ ನೋಡು. ಹೀಗೆ ನೋಡಲಾಗಿ ನನ್ನ ನಡೆಯಲ್ಲಿ ಒಂದು ಜವೆ ಅಂದರೆ ಗೋದೀ ಕಾಳಿನಷ್ಟು ತೂಕದಲ್ಲಿ ಕಡಿಮೆಯಾದರೆ, ನೀನು ನನ್ನನ್ನು ನೀರಿನಲ್ಲಿ ಮುಳುಗಿಸಿ ಎದ್ದು ಹೋಗು ಎಂದು ಬಸವೇಶ್ವರನು ಪರಮಾತ್ಮನಲ್ಲಿ ಬಿನ್ನಹ ಮಾಡಿಕೊಳ್ಳುತ್ತಾನೆ. ಅಂದರೆ ಭಕ್ತನೆನಿಸಿಕೊಳ್ಳುವವನಲ್ಲಿ ಎಷ್ಟು ಮಾತ್ರವೂ ಕಪಟತನವಿರಬಾರದೆಂದು ಅವನ ಅಭಿಪ್ರಾಯವು.

(೬೧) ಮಸಿಯನೇಸುಕಾಲ ಬೆಳಗಿದರೆ, ಬಿಳಿದಾಗಬಲ್ಲುದೇ ? ಕರ್ಮಸ್ಥಿತಿ ಬೆನ್ನ ಬಿಡದು. ಅನಂತ ಕೋಟಿ ಸನ್ಮಾನವ ಮಾಡಿದರೇನು? ನಿಮಿಷದ ಉದಾಸೀನ ಕೆಡಿಸಿತ್ತು. ಕೂಡಲಸಂಗಮ ದೇವಾ ನಿಮ್ಮ ನಂಬಿಯೂ ನಂಬದ ಡಂಭಕ ನಾನಯ್ಯ.

ಮಸಿ = ಇದ್ದಲಿ.

ಇದ್ದಲಿಯನ್ನು ಎಷ್ಟು ದಿವಸ ತೊಳೆದರೂ ಅದು ಎಂದೂ ಬಿಳಿದಾಗಲಾರದು. ನನ್ನ ಸ್ಥಿತಿಯು ಈ ಇದ್ದಲಿಯಂತೆ ಇದೆ. ಸಂಚಿತ, ಪ್ರಾರಬ್ಧ, ಆಗಾಮಿ ಎಂಬ ಕರ್ಮಗಳ ಮೂಲಕ ನನ್ನ ಸ್ಥಿತಿಯು ನನಗೆ ಪ್ರಾಪ್ತವಾಗಿದ್ದು ಇವುಗಳು ನಾಶವಾಗುವ ವರೆಗೆ ಈ ಸ್ಥಿತಿಯು ನನ್ನಲ್ಲಿ ಉಳಿದೇ ತೀರುವದು. ಇದ್ದಲಿಯ ಬಣ್ಣದಂತೆ ಅದು ಏನು ಮಾಡಿದರೂ

ಹೋಗಲಾರದು. ಆದರೆ ಈ ಕರ್ಮಗಳು ನಾಶವಾಗಬೇಕೆಂದು ನಾನು ಅನಂತ ಕೋಟಿ ವರುಷ ಪರಮಾತ್ಮನ ಪೂಜೆಯನ್ನು ಮಾಡುತ್ತ ಬಂದಿದ್ದೇನೆ. ಆದರೂ ಕೂಡ ನನ್ನ ಈಗಿನ ಕನಿಷ್ಠ ಸ್ಥಿತಿಯು ನನ್ನನ್ನು ಬಿಡುವದಿಲ್ಲ. ಯಾಕಂದರೆ ನಾನು ಪರಮಾತ್ಮನಲ್ಲಿ ಒಂದು ನಿಮಿಷ ಮಾತ್ರ ಉದಾಸೀನ ಭಾವವನ್ನು ತಾಳಿದರೆ ಸಾಕು. ನಾನು ಮಾಡಿದ ಭಕ್ತಿ ಎಲ್ಲವೂ ವ್ಯರ್ಥ ಹೋಗಿಬಿಡುತ್ತದೆ. ನನ್ನಲ್ಲಿ ನಿಜವಾದ ಭಕ್ತಿ ಎಂಬುದು ಏನೂ ಇಲ್ಲದ್ದರಿಂದ ನನಗೆ ಈ ಗತಿಯಾಗಿದೆ. ನನ್ನದು ಕೇವಲ ಡಾಂಭಿಕ ಭಕ್ತಿಯು. ಅಂದರೆ ನಾನು ಹೊರಗೆ ಮಾತ್ರ ನಂಬಿದವನಂತೆ ತೋರಿಸುತ್ತೇನೆಯೇ ಹೊರ್ತು ನನ್ನಲ್ಲಿ ನಂಬಿಗೆ ಎಂಬುದೇನೂ ಇಲ್ಲ. ನಂಬಿಯೂ ನಂಬದ ಡಂಭಕನೆಂದು ಬಸವೇಶ್ವರನು ತನ್ನನ್ನು ಕರೆದುಕೊಂಡಿದ್ದಾನೆ. ಅಂದರೆ ತನ್ನಲ್ಲಿ ನಿಜವಾದ ಭಕ್ತಿಯು ಇರದ್ದರಿಂದ ತಾನು ಮಾಡಿದ ಕರ್ಮಗಳು ನಾಶವಾಗುವದಿಲ್ಲ. ಅವು ಉಳಿದೇ ತೀರುವವೆಂದು ಅವನ ಅಭಿಪ್ರಾಯವು.

(೬೨) ಶಬ್ದ ಸಂಭಾಷಣೆಯು ನುಡಿಯ ವರ್ತಿಸಿ ನುಡಿವೆ. ತೊಡೆಹದ ಕೆಲಸದ ಬಣ್ಣದಂತೆ, ಕಡಿಹಕ್ಕೆ ಒರೆಗೆ ಬಾರದು ನೋಡಾ. ಎನ್ನ ಮನದಲೊಂದು, ಹೃದಯದಲೊಂದು, ವಚನದಲೊಂದು ನೋಡಾ. ಕೂಡಲಸಂಗಮ ದೇವಾ. ಆನು ಭಕ್ತನೆಂಬ ಹುಸಿಯ ಮುಸಕವನೇನ ಬಣ್ಣಿಸುವೆನಯ್ಯ ?

ವರ್ತಿಸಿ ನುಡಿ = ಅತಿಶಯೋಕ್ತಿ ಮಾಡಿ ನುಡಿ. ತೊಡೆಹ = ಗಿಲೀಟು. ಕಡೆಹ = ಕಡಿಯುವದು. ಒರೆ = ತಿಕ್ಕುವದು. ಮುಸಕ = ಉದ್ವೇಗದ ನುಡಿ.

ನನ್ನ ಶಬ್ದ ಸಂಭಾಷಣೆಯಲ್ಲಿ ಅತಿಶಯೋಕ್ತಿ ಇರುತ್ತದೆ. ನನ್ನ ನುಡಿಗಳು ಬಂಗಾರದ ಗಿಲೀಟಿನ ಬಣ್ಣದಂತೆ ಇವೆ. ಅದನ್ನು ಕಡಿದರೆ ಅಥವಾ ತಿಕ್ಕಿದರೆ ಆ ಗಿಲೀಟು ನನ್ನ ಕೈಗೆ ಸಿಕ್ಕದು. ಅದರಲ್ಲಿ ನಿಜವಿಲ್ಲ. ನನ್ನ ಮನಸ್ಸಿನಲ್ಲಿ ಒಂದು, ಹೃದಯದಲ್ಲಿ ಒಂದು, ವಚನದಲ್ಲಿ ಒಂದು, ಹೀಗೆ ನನ್ನ ನುಡಿಗಳು ಇರುತ್ತವೆ. ಆದರೆ ನಾನು ಭಕ್ತನು ಎಂದು ಉಬ್ಬುಬ್ಬಿ ಮಾತನಾಡುತ್ತೇನೆ. ಈ ನುಡಿಗಳು ಸುಳ್ಳು. ಇದನ್ನು ನಾನೇನು ಹೇಳಲಿ?

(೬೩) ಅರ್ಥ ಪ್ರಾಣ ಅಭಿಮಾನ ನಿಮ್ಮದೆಂಬಿರಿ. ಒತ್ತಿ ನೋಡಿದರೆ ಮುಟ್ಟಲೀಯಿರಿ. ಮುಟ್ಟಿ ಬಂದಲ್ಲಿ ಕಠಾರಿ ಕಾಳಗವ ನಿವಾರಿಸುವಿರಲ್ಲದೆ ಲಿಂಗಜಂಗಮವಂತನಾಗಬಾರದು. ಕೂಡಲಸಂಗಮ ದೇವ ವೇಷಡಂಭಕರಿಗೆ ಭಕ್ತಿ ಎಂತಪ್ಪುದಯ್ಯಾ?

ನಿವಾರಿಸು= ಹಿಂದಕ್ಕೆ ಸರಿಸು.

ನೀವು ನಿಮ್ಮ ದ್ರವ್ಯ, ಪ್ರಾಣ, ಅಭಿಮಾನ ಇವೆಲ್ಲವೂ ಲಿಂಗ ಜಂಗಮಕ್ಕೆಂದು ಅನ್ನುವಿರಿ. ಆದರೆ ಅವುಗಳನ್ನು ಕೊಡಿರೆಂದು ಅವರು ಕೇಳಿದರೆ ನೀವು ಅವುಗಳನ್ನು ಮುಟ್ಟಗೊಡುವದಿಲ್ಲ. ಒಂದು ವೇಳೆ ಅವುಗಳನ್ನು ಮುಟ್ಟಿದರೆ ನೀವು ಕಠಾರಿಯನ್ನು ಹಿಡಿದು ಕಾಳಗ ಮಾಡುವಿರಿ. ಹೀಗೆ ನೀವು ಮಾಡುವಿರೇ ಹೊರ್ತು, ಅವುಗಳನ್ನು ಲಿಂಗ ಜಂಗಮಕ್ಕೆ ಅರ್ಪಿಸಿ ಅವರಿಂದ ಪ್ರಸಾದವನ್ನು ಪಡೆದು ಲಿಂಗ ರೂಪ ಮತ್ತು ಜಂಗಮ ರೂಪವಾಗಿರಲಾರಿರಿ. ಎಲೋ ಪರಮಾತ್ಮನೇ, ನಾನು ಕೇವಲ ವೇಷಧಾರಿಯು. ಡಾಂಭಿಕನು. ಇಂಥವನಿಗೆ ಭಕ್ತಿ ಎಂಬುದು ಹೇಗುಂಟಾದೀತು? ಭಕ್ತಿಯು ಉಂಟಾಗಲಾರದೆಂದು ಬಸವೇಶ್ವರನ ಅಭಿಪ್ರಾಯವು.

(೬೪) ದಿಟ ಪುಟ ಭಕುತಿ ಸಂಪುಟ ನೆಲೆಗೊಳ್ಳದಾಗಿ ಟಿಂಬಕ ನಾಡಿಸುತಿದ್ದಿತಯ್ಯ ನಿನ್ನ ಮಾಯೆ. ಕೂಡಲಸಂಗಮ ದೇವಯ್ಯ. ಹೊನ್ನ ಹೆಣ್ಣ ಮಣ್ಣ ತೋರಿ.

ಪುಟ – ಸ್ಫುಟ, ಸ್ಪಷ್ಟವಾದ; ಸಂಪುಟ – ಕರಡಿಗೆಯಲ್ಲಿ ಹಿಡಿಯಲ್ಪಟ್ಟ ರೀತಿ, ಅತ್ತಿತ್ತ ಅಲುಗಾಡದ ಸ್ಥಿತಿಯು.

ದಿಟವಾದ ಮತ್ತು ಸ್ಪಷ್ಟವಾದ ಭಕ್ತಿಯು ನನ್ನಲ್ಲಿ ಗಟ್ಟಿಯಾಗಿಯೂ ಚಾಂಚಲ್ಯವಿಲ್ಲದೆಯೂ ನೆಲೆಗೊಂಡಿಲ್ಲ. ಆದ್ದರಿಂದ ಮಾಯೆಯು ಹೊನ್ನು ಹೆಣ್ಣು ಮಣ್ಣುಗಳನ್ನು ನನಗೆ ತೋರಿಸಿ ಮನೋವಿಕಾರಗಳನ್ನು ನನ್ನಲ್ಲಿ ಹುಟ್ಟಿಸುತ್ತದೆ. ಇವುಗಳಿಗೆ ನಾನು ಒಳಗಾಗುತ್ತೇನೆ. ಹೀಗಾಗಲು ಟೀವ, ಟಿಂಬಕ ಎಂದು ತಂತಿಯ ಸ್ವರವು ಹೊರಟ ಕೂಡಲೆ ಹೇಗೆ ಪ್ರಾಣಿಗಳು ಅದನ್ನು ಕೇಳಿ ಆಕರ್ಷಣ ಹೊಂದುತ್ತವೆಯೋ ಹಾಗೆಯೇ ನಾನು ಈ ಮೂರು ವಸ್ತುಗಳ ಮೋಹಕ್ಕೆ ಬಿದ್ದು ನಾನು ಅವುಗಳ ಬಲೆಯಲ್ಲಿ ಸಿಕ್ಕಿಬೀಳುತ್ತೇನೆ. ಇದು- ಭಕ್ತಿಯು ಇದ್ದದ್ದರ ಚಿಹ್ನವಲ್ಲವೆಂದು ಬಸವೇಶ್ವರನು ಹೇಳುತ್ತಾನೆ.

(೬೫) ಗೀಜಗನ ಗೂಡು, ಕೋಡಗದಣಲ ಸಂಚ, ಬಾದುವನ ಮದುವೆ, ಬಾವಲ ಬಿದ್ದಿನಂತೆ, ಜೂಜುಗಾರನ ಮಾತು, ಬೀದಿಯ ಗುಂಡನ ಸೊಬಗು, ಓಡಿನೋಗೆಗೆಯ ಹೊಯಿದಂತೆ ಕಾಣಿರೋ. ಶಿವನ ಆದಿ ಯಂತುವನರಿಯದವನ ಭಕ್ತಿ ಸುಖ ಶೋಧನೆಗೆ ಮದ್ದ ಕೊಂಡಂತೆ ಕೂಡಲಸಂಗಮ ದೇವಾ.

ಅಣಲ = ಅಂಗುಳ; ಸಂಚಿ = ಗುಂಪಿ, ಸಂಗ್ರಹ. ಬಾದುವು = ಅಶಕ್ತ, ನಪುಂಸಕ. ಬಾವಲ = ತೊಗಲು ಬಾವಲಿ, ಬದ್ದು = ಔತಣದ ಊಟ, ಗುಂಡ = ಸೇವಕ, ಓಡು = ಡೋಣಿ; ಮದ್ದು = ಔಷಧ.

ಭಕ್ತಿಯುಳ್ಳವನು ಕೇವಲ ಅಂಧ ಭಕ್ತಿಯುಳ್ಳವನಾಗಿರದೆ ಪರಮಾತ್ಮನ ಆದಿ ಮತ್ತು ಅಂತ್ಯವನ್ನು ಅರಿಯಬೇಕು- ಅಂದರೆ ಅವನು ಜ್ಞಾನಿಯಾಗಿರಬೇಕು. ಇಲ್ಲದಿದ್ದರೆ ಅವನ ಭಕ್ತಿಯು ವ್ಯರ್ಥವಾದದ್ದು. ಅದು ಹೇಗೆ ವ್ಯರ್ಥವೆಂಬುದನ್ನು ಬಸವೇಶ್ವರನು ಇಲ್ಲಿ ಕೆಲವು ಉದಾಹರಣೆಗಳನ್ನು ಕೊಟ್ಟು ಹೇಳಿದ್ದಾನೆ. ಗೀಜಗ ಪಕ್ಷಿಯು ಬಹು ಶ್ರಮಪಟ್ಟು ಗೂಡನ್ನು ಕಟ್ಟಿಕೊಳ್ಳುತ್ತದೆ. ಆದರೆ ಆ ಗೂಡು ಅದಕ್ಕೆ ಉಪಯೋಗವಾಗದೆ ಬೇರೆ ಪಕ್ಷಿಗಳು ಅದರಲ್ಲಿ ಸೇರಿಕೊಳ್ಳುತ್ತವೆ. ತಿಳವಳಿಕೆ ಇಲ್ಲದವನ ಭಕ್ತಿಯು ಈ ಪಕ್ಷಿಯು ವ್ಯರ್ಥ ಶ್ರಮ ಪಟ್ಟಂತೆ ಇದೆ. ಕೋಡಗವು ತನ್ನ ಆಹಾರ ಪದಾರ್ಥಗಳನ್ನು ತನ್ನ ದವಡೆಯಲ್ಲಿ ಸಂಗ್ರಹಿಸುವದುಂಟು. ಆದರೆ ಹೀಗೆ ಸಂಗ್ರಹವಾದದ್ದು ಯಾರ ಉಪಯೋಗಕ್ಕೂ ಬರುವದಿಲ್ಲ. ಇದೇ ಪ್ರಕಾರ ಅಂಧ ಭಕ್ತಿಯುಳ್ಳವನ ಭಕ್ತಿಯು ಬೇರೆ ಯಾರಿಗೂ ಉಪಯೋಗವಾಗುವದಿಲ್ಲ. ಲಗ್ನವಾಗುವದರ ಉದ್ದೇಶವು ಮಕ್ಕಳು ಮರಿಗಳನ್ನು ಹಡೆದು ಸುಖವಾಗಿ ಬಾಳುವದು ಇರುತ್ತದೆ. ಆದರೆ ನಪುಂಸಕನಿಗೆ ಲಗ್ನ ಮಾಡಿದಲ್ಲಿ ಅದರಿಂದೇನೂ ಸಾರ್ಥಕ್ಯವಿಲ್ಲ. ಹಾಗೆಯೇ ಜ್ಞಾನವಿಲ್ಲದವನ ಭಕ್ತಿಯು ನಿಷ್ಪ್ರಯೋಜನವಾದದ್ದು. ತೊಗಲ ಬಾವುಲಿಯು ತಿನ್ನುವದು ಮತ್ತು ಮಲವನ್ನು ಬಿಡುವುದು ಒಂದೇ ಬಾಯಿಂದ. ಇಂಥದರ ಕೂಡ ಔತಣ ಮಾಡಿದರೆ ಉತ್ತಮ ವಸ್ತುವಿನೊಡನೆ ಹೊಲಸನ್ನು ಸಹ ರುಚಿಸಬೇಕಾಗುತ್ತದೆ. ಇದು ಬಹು ಅಸಹ್ಯವಾದದ್ದು. ಹಾಗೆಯೇ ಜ್ಞಾನವಿಲ್ಲದ ಭಕ್ತಿಯು ಇದ್ದರೆ ಉತ್ತಮವಾದುದರ ಕೂಡ ಹೊಲಸು ಸಹ ಅದರಲ್ಲಿ ಕೂಡುತ್ತದೆ. ಇದರಿಂದ ಎಲ್ಲವೂ

ಕೊಲಸಾಗುತ್ತದೆ. ಜೂಜುಗಾರನು ಯಾವಾಗಲೂ ಸುಳ್ಳು ಹೇಳುತ್ತಾನೆ. ಮೋಸಗಾರಿಕೆಯಿಂದ ಅವನು ಇರುವವನು. ಜ್ಞಾನವಿಲ್ಲದ ಭಕ್ತಿಯು ಇದೇ ತೆರನಾಗಿರುತ್ತದೆ. ಅದೂ ಒಂದು ಮೋಸವೇ ಇರುತ್ತದೆ. ಒಬ್ಬ ಕೂಲಿಯವನು ದಾರಿಯಲ್ಲಿ ತಿರುಗುತ್ತ ಕೆಲಸ ಹುಡುಕುತ್ತ ಹೋಗುತ್ತಾನೆ. ಆಗ ಅವನು ಜನರ ಕಣ್ಣಿಗೆ ತಾನು ಬೀಳಬೇಕೆಂದು ಸೊಬಗಿನ ವೇಷ ವನ್ನು ಧಾರಣ ಮಾಡಿಕೊಂಡು ಹೋಗುತ್ತಾನೆ. ಆದರೆ ಅವನ ಈ ಸೊಬಗು ಏನು ಪ್ರಯೋಜನ? ಅವನು ಸಣ್ಣ ಕಾರ್ಯದಲ್ಲಿಯೇ ತೊಡ ಗುವನು. ಹಾಗೆಯೇ ಜ್ಞಾನವಿಲ್ಲದ ಭಕ್ತಿಯು ಬಾಹ್ಯ ವೇಷವೇ ಹೊರ್ತು ಅದರಿಂದ ಬೇರೆ ಉಪಯೋಗವಿಲ್ಲ. ಒಂದು ದೋಣಿಯಲ್ಲಿ ಸಸಿಗೆಳನ್ನು ಬೆಳಸಬೇಕೆಂದು ಅವುಗಳ ಬೀಜಗಳನ್ನು ತಂದು ಅಲ್ಲಿ ಬಿತ್ತಿದಲ್ಲಿ ಅವು ಗಳಿಗೆ ಮೊಳಕೆಗಳು ಒಡೆದರೂ ಅವುಗಳ ಬೇರುಗಳು ಕೆಳಕ್ಕೆ ಬಹಳ ಇಳಿಯಲಾರವು. ಯಾಕಂದರೆ ಕೆಳಗೆ ನೀರು ಹತ್ತುತ್ತದೆ. ಆದ್ದರಿಂದ ಅವು ಹೆಚ್ಚಿಗೆ ಬೆಳೆಯಲಾರವು. ಹಾಗೆಯೇ ಅಜ್ಞಾನಿಯಾದವನ ಭಕ್ತಿ ಯಲ್ಲಿ ಬೆಳವಣಿಗೆಯು ಇರುವದಿಲ್ಲ. ಕೆಲವರಿಗೆ ರೋಗಾದಿಗಳೇನೂ ಇಲ್ಲ ದಿದ್ದರೂ ಅವರು ತಮ್ಮ ಮನಸ್ಸಿಗೆ ಸಮಾಧಾನವಾಗಬೇಕೆಂದು ಔಷಧ ವನ್ನು ನಿಷ್ಕಾರಣವಾಗಿ ತೆಗೆದುಕೊಳ್ಳುತ್ತಾರೆ. ಇದು ನಿಷ್ಪ್ರಯೋಜನ ವಾದದ್ದು. ಇಷ್ಟೇ ಅಲ್ಲ, ಅದು ದೇಹಕ್ಕೆ ಅಪಾಯವನ್ನು ಸಹ ಮಾಡ ಬಹುದು. ಹಾಗೆ ಜ್ಞಾನವಿಲ್ಲದ ಭಕ್ತಿಯು ನಿರುಪಯೋಗವಾದದ್ದು. ಇಷ್ಟೇ ಅಲ್ಲ, ಅದರಿಂದ ಅಹಿತವೂ ಆಗಬಹುದು. ಒಟ್ಟಿಗೆ ಶಿವಶರಣರು ಅಂಥ ಭಕ್ತಿಯನ್ನು ಸೇರುವದಿಲ್ಲ. ಭಕ್ತಿಯು ಕೂಡ ಪರಮಾತ್ಮನ ತಿಳಿ ವಳಿಕೆ ಇರಬೇಕೆಂದು ಅವರ ಅಭಿಪ್ರಾಯವು. ಇದಕ್ಕೆ ಬಸವೇಶ್ವರನು ಕೆಲವು ಉದಾಹರಣೆಗಳನ್ನು ಕೊಟ್ಟು ಈ ವಿಷಯವನ್ನು ಇಲ್ಲಿ ವಿಶದಪಡಿ ಸಿದ್ದಾನೆ.

(೬೬) ಸ್ನೆಹ ತಪ್ಪಿದ ಠಾವಿನಲ್ಲಿ ಗುಣವರನಸುವರೇ ಅಯ್ಯಾ? ಹೂವು ಬಾಡಿದಲ್ಲಿ ಪರಿಮಳವನರಸುವರೇ ಅಯ್ಯಾ? ಎನ್ನ ತಂದೆ ಕೂಡಲಸಂಗ ಮದೇವ, ತೊರೆ ಇಳಿದರೆ ಅಂಬಿಗಂಗೇನುಂಟು?

ಪ್ರೀತಿಯು ತಪ್ಪಿದ ಸ್ಥಳದಲ್ಲಿ ಯೋಗ್ಯ ನಡೆಗಳನ್ನು ಹುಡುಕ ಹೋದರೆ ಅವು ಅಲ್ಲಿ ಸಿಕ್ಕ ಬಹುದೇ? ಅವು ಸಿಕ್ಕಲಾರವು. ಹೂವು ಬಾಡಿದ ಬಳಿಕ ಅದರಲ್ಲಿ ಸುವಾಸನೆಯನ್ನು ಹುಡುಕಲಿಕ್ಕೆ ಯಾರಾದರೂ

ಹೋಗುವರೇ? ಯಾರೂ ಹೋಗುವದಿಲ್ಲ. ನದಿಯು ಇಳಿದಬಳಿಕ ನದಿಯನು ಹಾಯಿಸುವ ಅಂಬಿಗನಿಗೆ ಏನು ದೊರಕೀತು? ಏನೂ ದೊರಕುವದಿಲ್ಲ. ಆದ್ದರಿಂದ ಭಕ್ತಿಯು ಎಲ್ಲಿ ಇದೆಯೋ ಅಲ್ಲಿಯೇ ಅದನ್ನು ಕಾಣಲು ಹೋಗಬೇಕೇ ಹೊರತು, ಅದು ಇಲ್ಲದಲ್ಲಿ ಅದನ್ನು ಹುಡುಕಲಿಕ್ಕೆ ಹೋಗಿ ವ್ಯರ್ಥ ಶ್ರಮ ಪಡಬಾರದೆಂದು ಬಸವೇಶ್ವರನು ಇಲ್ಲಿ ಹೇಳುತ್ತಾನೆ.

(೬೭) ಅಳೆಯುತ್ತಳೆಯುತ್ತ ಬಳಲುವರಲ್ಲದೆ ಕೊಳಗ ಬಳಲುವದೇ? ಬಟ್ಟೆಯು ನಡೆವುತ್ತ ನಡೆವುತ್ತ ಬಳಲುವರಲ್ಲದೆ ಬಟ್ಟೆ ಬಳಲುವದೇ? ಶ್ರಮವ ಮಾಡುತ್ತ ಮಾಡುತ್ತ ಬಳಲುವರಲ್ಲದೆ ಕೋಲು ಬಳಲುವದೇ? ನಿಜವನರಿಯದ ಭಕ್ತ ಬಳಲುವನಲ್ಲದೆ ಲಿಂಗ ಬಳಲುವದೇ? ಕೂಡಲಸಂಗಮದೇವ ಅರಸರಿಯದ ಬಟ್ಟೆಯೋ.

ಭಕ್ತನು ಭಕ್ತಿಯ ನಿಜವನ್ನರಿತು ಭಕ್ತಿಯನ್ನು ಮಾಡಬೇಕು. ಅಂದರೆ ಅದು ಫಲಕಾರಿಯು. ಆದರೆ ನಿಜವನ್ನರಿಯದೆ ಭಕ್ತಿಯನ್ನು ಮಾಡಹೋದರೆ ಅದು 'ವ್ಯರ್ಥ ಶ್ರಮವು'. ಈ ಸಂಗತಿಯನ್ನು ಬಸವೇಶ್ವರನು ಅಳೆಯುವ ಮಾಪು, ನಡೆಯುವ ದಾರಿ, ಹೊಲದ ರಾಶೀಮಾಡುವಾಗ ಉಪಯೋಗಿಸುವ ಕೋಲು ಇವುಗಳ ಉದಾಹರಣೆಗಳನ್ನು ಕೊಟ್ಟು ಹೇಳಿದ್ದಾನೆ. ಒಕ್ಕಲಿಗರು ಧಾನ್ಯವನ್ನು ಅಳೆಯುತ್ತ, ಅಳೆಯುತ್ತ ಇದ್ದರೆ ಅವರ ಕೈ ಬಳಲುತ್ತದೆಯೇ ಹೊರತು ಅವರು ಅಳೆಯುವ ಮಾಪು ಎಂದೂ ಬಳಲುವದಿಲ್ಲ. ದಾರೀ ನಡೆಯುತ್ತ ನಡೆಯುತ್ತ ಹೋದರೆ ಕಡೆಗೆ ನಡೆಯುವವನೇ ಬಳಲುತ್ತಾನೆಯೇ ಹೊರತು ದಾರಿಯು ಬಳಲುವದಿಲ್ಲ. ರಾಶೀ ಮಾಡುವಲ್ಲಿ ತೆನೆಗಳನ್ನು ಕೋಲಿನಿಂದ ಒಂದೇಸವನೆ ಹೊಡೆಯುವದುಂಟು. ಹೀಗೆ ಹೊಡೆದಲ್ಲಿ ಹೊಡೆಯುವವನ ಕೈ ಬಳಲುತ್ತದೆಯೇ ಹೊರತು ಆ ಕೋಲು ಬಳಲಲಾರದು. ಅಂದರೆ ಒಬ್ಬನಿಗೆ ಹಿತ ಅಥವಾ ಅಹಿತವಾಗುವದು ಅಳೆಯುವ ಮಾಪು, ನಡೆಯುವದಾರಿ, ಹೊಡೆಯುವ ಕೋಲು ಇವುಗಳ ಕಡೆಗೆ ಇರದೆ ಅವುಗಳನ್ನು ಉಪಯೋಗಿಸುವಂಥವನ ಕಡೆಗೆ ಇರುತ್ತದೆಂಬ ಭಾವವು ಯಾಕಂದರೆ ಈ ಜಿನಸುಗಳು ಕೇವಲ ಸಾಧನಗಳು ಮಾತ್ರ. ಹಾಗೆಯೇ ಪೂಜಿಸುವ ಲಿಂಗವು, ಈ ಮಾಪು, ದಾರಿ ಕೋಲು ಇವುಗಳು ಸಾಧನೆಗಳು ಮಾತ್ರ. ಹೀಗೆ ಆ ಲಿಂಗವನ್ನು ಪೂಜಿಸುವ ಫಲವು ದೊರೆಕೊಳ್ಳುವದು ಪೂಜೆ ಮಾಡುವವನ ಮೇಲೆ

ಅವಲಂಬಿಸಿದೆಯೇ ಹೊರ್ತು ಆ ಲಿಂಗದ ಮೇಲೆ ಅವಲಂಬಿಸಿರುವದಿಲ್ಲ. ಆದರೆ ಲಿಂಗವನ್ನು ಪೂಜಿಸಿಯೂ ಅವರ ಫಲವು ತೋರದಿದ್ದರೆ ಅದರ ಹೊಣೆಯು ಲಿಂಗದ ಕಡೆಗೆ ಇರದೆ ತನ್ನ ಕಡೆಗೆ ಇರುತ್ತದೆಂದು ಬಸವೇಶ್ವರನು ಅಭಿಪ್ರಾಯ ಪಡುತ್ತಾನೆ. ಅರಸನಿಗೆ ಬಿಟ್ಟಿಯ ಮಾಡುವಲ್ಲಿ ಅದು ಅವನಿಗೆ ತಿಳಿಯುವಂತೆ ಮಾಡಬೇಕು. ಅಂದರೆ ಅವನಿಂದ ಮಾಡುವವನಿಗೆ ಏನಾದರೂ ಲಾಭವಾದೀತು. ಆದರೆ ಅರಸನಿಗೆ ತಿಳಿಯದಂತೆ ಮಾಡಿದರೆ ಮಾಡುವವನಿಗೆ ಏನು ಪ್ರಯೋಜನವು? ಅದು ವ್ಯರ್ಥ ಶ್ರಮವು ಮಾತ್ರ. ಲಿಂಗ ಭಕ್ತಿಯು ಹೀಗೆಯೇ ಇದೆ. ಲಿಂಗಭಕ್ತಿಯನ್ನು ಮಾಡುವಲ್ಲಿ ಅದರ ಪರಿಣಾಮವು ಮೊದಲು ತನ್ನ ಮೇಲೆ ಆಗಬೇಕು. ಅಂದರೆ ಅದು ಫಲಕಾರಿಯು. ಇಲ್ಲದಿದ್ದರೆ ಅದು ಫಲಕಾರಿಯಲ್ಲ. ಅಂದರೆ ಲಿಂಗ ಭಕ್ತಿಯನ್ನು ಮಾಡುವಲ್ಲಿ ಅದು ಶುದ್ಧ ಮನಸ್ಸಿನಿಂದ ಮಾಡಿದರೆ ಮಾತ್ರ ಪ್ರಯೋಜನವು. ಇಲ್ಲದಿದ್ದರೆ ಪ್ರಯೋಜನಕರವಲ್ಲವೆಂಬ ಭಾವವು ಇದರಲ್ಲಿದೆ.

(೬೮) ಸಿಂಗದ ನಡು ಮುರಿಯಲಾ ಸಿಂಗವೇನು ಬಾತೆ? ಸುಂಡಿಲ ಮುರಿದರೆ ಗಜವೇನು ಬಾತೆ? ಸಂಗ್ರಾಮದಲ್ಲಿ ವೀರನುಳಿಯಲದೇನು ಬಾತೆ? ಶೃಂಗಾರದ ಮೂಗು ಹೋದರೆ ಶೃಂಗಾರವೇನು ಬಾತೆ? ನಿಜ ತುಂಬಿದ ಭಕ್ತಿ ತುಳುಕಾಡದವರ ಸಂಗವೇನು ಬಾತೆ ಕೂಡಲ ಸಂಗಮದೇವ.

ಬಾತೆ= ಪ್ರಯೋಜನ.

ಸಿಂಹನ ನಡು ಮುರಿಯಲು ಆ ಸಿಂಹನ ಪ್ರಯೋಜನವೇನು? ಆಗ ಅದು ದುರ್ಬಲ ಪ್ರಾಣಿಯಾಗುವದು. ಆನೆಯ ಸೊಂಡಿಲು ಮುರಿದರೆ, ಆ ಆನೆಯ ಪ್ರಯೋಜನವೇನು? ಆಗ ಅದರ ಸಾಮರ್ಥ್ಯವೇ ಹೋಗಿ ಬಿಡುತ್ತದೆ. ಯುದ್ಧ ನಡೆದ ಕಾಲದಲ್ಲಿ ವೀರನಾದವನು ಮುಂದಕ್ಕೆ ಹೋಗದೆ ಹಿಂದೆ ಸರಿದರೆ ಅವನ ಪ್ರಯೋಜನವೇನು? ಹೀಗಾದಲ್ಲಿ ವೈರಿಗಳು ಗೆಲ್ಲುವದೇ ನಿಶ್ಚಯವು. ಅಲಂಕಾರವಾದ ಮೂಗು ಛೇದನವಾಗಿ ಹೋದರೆ ಮನುಷ್ಯನು ತಾನು ಅಲಂಕಾರ ಮಾಡಿಕೊಳ್ಳಬೇಕೆಂಬುದು ಏಕೆ? ಅದು ನಿಷ್ಪ್ರಯೋಜನವಾದದ್ದು. ಇದರಂತೆ ಮನುಷ್ಯನಲ್ಲಿ ನಿಜವು ತುಂಬಿದ ಭಕ್ತಿಯು ಇರಬೇಕು. ಅದು ಇರದಿದ್ದರೆ ಅಂಥವನ ಸಹವಾಸದ ಪ್ರಯೋ

ಜನವೇನು ? ಅದರಿಂದ ಏನೂ ಪ್ರಯೋಜನವಿಲ್ಲ. ಅಂದರೆ ಭಕ್ತಿಯಿಂದಲೇ ಮನುಷ್ಯನು ಸಾಮರ್ಥ್ಯವುಳ್ಳವನಾಗುತ್ತಾನೆ. ಅದು ಇಲ್ಲದಿದ್ದರೆ ಅವನು ದುರ್ಬಲನಾಗುತ್ತಾನೆ. ಆದರೆ ಈ ಭಕ್ತಿಯು ಕೇವಲ ಅಂಧ ಭಕ್ತಿಯಾಗಿರದೆ ಅದರಲ್ಲಿ ನಿಜವು ಅಂದರೆ ಪರಮಾತ್ಮನ ಸ್ವರೂಪದ ಬಗ್ಗೆ ತಿಳಿವಳಿಕೆಯು ಇರಬೇಕೆಂದು ಬಸವೇಶ್ವರನು ಅಭಿಪ್ರಾಯಪಡುತ್ತಾನೆ. ಈ ತಿಳಿವಳಿಕೆಯು ಇಲ್ಲದೆ ಹೋದರೆ ಅಂಥ ಭಕ್ತನ ಸ್ನೇಹದಿಂದ ಏನು ಪ್ರಯೋಜನ? ಏನೂ ಪ್ರಯೋಜನವಿಲ್ಲೆಂದು ಬಸವೇಶ್ವರನು ಅನ್ನುತ್ತಾನೆ.

(೬೯) ಮಾತಿನಲ್ಲಿ ಶ್ರೋತ್ರ ಸಖನ ನುಡಿಯ ಬಹುದಲ್ಲದೆ ಮಾಡುವ ಸತ್ಕ್ರಿಯಿಂದ ಭಕ್ತನೆನಿಸಲು ಬಾರದು. ಅರ್ಥ ಪ್ರಾಣಾಭಿಮಾನ ವಾರಿಗೆಯೂ ಸಮನಿಸದು, ಲಿಂಗಮುಖದಲುದಯವಾದ ಶರಣಂಗಲ್ಲದೆ ಅಯ್ಯಾ. ಕೂಡಲಸಂಗನ ಶರಣರ ಭಕ್ತಿ ಭಂಡಾರವು ಎನಗೆಂತು ಸಾಧ್ಯವಪ್ಪುದು ಹೇಳೆನ್ನ ತಂದೆ ?

ನಾನು ಮಾತಿನಲ್ಲಿ ಮಾತ್ರ ಸವಿಯಾಗಿ ನುಡಿಯಬಲ್ಲೆನೆಯೇ ಹೊರತು ನಾನು ಸತ್‌ಕೃತ್ಯಗಳನ್ನು ಮಾಡಿ ಭಕ್ತನೆನಿಸಿಕೊಳ್ಳುವದು ನನ್ನಿಂದ ಆಗದು. ನನ್ನ ಅರ್ಥ, ಪ್ರಾಣ, ಅಭಿಮಾನ ಇವುಗಳನ್ನು ನಿರ್ವಂಚನೆಯಿಂದ ಪರಮಾತ್ಮನಿಗೆ ಅರ್ಪಿಸಿ ಪ್ರಸಾದ ರೂಪವಾಗಿ ಮಾಡಿ ಅವುಗಳನ್ನು ಅನುಭವಿಸುವದು ನನ್ನಿಂದ ಆಗದು. ಇದು ಲಿಂಗದಲ್ಲಿ ಹುಟ್ಟಿ ಬೆಳೆದ ಶರಣನಿಗೆ ಮಾತ್ರ ಸಾಧ್ಯವು. ಉಳಿದವರಿಗೆ ಅದು ಸಾಧ್ಯವಾಗಲಾರದು. ಎಲೋ ಪರಮಾತ್ಮನೇ, ನನ್ನ ತಂದೆಯೇ, ಶರಣರ ಭಕ್ತಿ ಭಂಡಾರವು ಎನಗೆ ಹೇಗೆ ದೊರಕೀತು ಹೇಳು, ಎಂದು ಬಸವೇಶ್ವರನು ಪರಮಾತ್ಮನನ್ನು ಕುರಿತು ಇಲ್ಲಿ ಬೇಡಿಕೊಳ್ಳುತ್ತಾನೆ.

(೭೦) ಲೌಕಿಕರ ಕಂಡು ಆಡುವೆ, ಹಾಡುವೆ. ತಾರ್ಕಿಕರ ಕಂಡು ಆಡುವೆ, ಹಾಡುವೆ. ಸಹಜ ಗುಣವೆನ್ನಲಿಲ್ಲಯ್ಯ. ನಿಜಭಕ್ತಿ ಎನಗಿಲ್ಲ. ತಂದೆ, ಏಕೋ ಭಾವ ಎನಗುಳ್ಳರೆ, ಏಕೆ ನೀ ಕರುಣಿಸೆ ಕೂಡಲ ಸಂಗಮದೇವಾ?

ಪ್ರಪಂಚದಲ್ಲಿರುವವರು ಲೌಕಿಕದ ಮಾತುಗಳನ್ನಾಡುತ್ತ ಅದರಲ್ಲಿಯೇ ವೇಳೆಗಳೆಯುತ್ತಾರೆ. ಅವರನ್ನು ನೋಡಿ ನಾನು ಹರ್ಷಪಟ್ಟು ಅವರ

ಕೂಡ ವಿನೋದ ಮಾಡುವೆ. ಮತ್ತು ಹಾಡುತ್ತಿರುವೆ. ಬೇರೆ ಕೆಲ
ವರು ಬರೀ ವಾಗ್ವಾದ ಮಾಡುವಲ್ಲಿ ಜಾಣರಿರುತ್ತಾರೆ. ಅಂಥವರ ಕೂಡ
ನಾನು ಸರಸಸಲ್ಲಾಪಗಳನ್ನು ಮಾಡುತ್ತೇನೆ. ಮತ್ತು ಹಾಡುತ್ತ ವೇಳೆ
ಗಳೆಯುತ್ತೇನೆ. ಇವು ಸಾತ್ವಿಕರಲ್ಲಿರತಕ್ಕ ಸ್ವಾಭಾವಿಕ ಗುಣಗಳಲ್ಲ. ಇವು
ಗಳಲ್ಲಿ ವಂಚನೆ ಇದೆ. ಆದರೆ ನನ್ನಲ್ಲಿ ಒಂದೇ ಒಂದು ಗುಣವಿರಬೇಕು.
ಅದು ಪರಮಾತ್ಮನಲ್ಲಿರಬೇಕಾದ ಏಕೋಭಾವವು. ಇದೇ ನಿಜಭಕ್ತಿಯು.
ಅದು ಇದ್ದ ಬಳಿಕ ನಿನ್ನ ಕರುಣೆಯು ನನ್ನ ಮೇಲೆ ಏಕಾಗಬಾರದಾ? ಆಗ
ನೀನು ನನ್ನಲ್ಲಿ ನಿಜವಾಗಿ ಕಾರುಣ್ಯವುಳ್ಳವನಾಗುವಿ ಎಂದು ಬಸವೇಶ್ವ
ರನು ಇಲ್ಲಿ ಹೇಳಿದ್ದಾನೆ.

(೭೧) ಏನನೋದಿ, ಏನ ಕೇಳಿ, ಏನ ಮಾಡಿಯೂ ಫಲವೇನು,
ನಿನ್ನವರೊಲಿಯದನ್ನಕ್ಕ? ಶಿವ ಶಿವ, ಮಹಾದೇವ, ಬಾಳಿಲ್ಲದವಳ ಓಲೆ
ಯಂತಾಯಿತ್ತೆನಗೆ ಕೂಡಲಸಂಗಮದೇವಾ.

ನಾನು ಅನೇಕ ಶಾಸ್ತ್ರಗ್ರಂಥಗಳನ್ನು ಓದಿರಬಹುದು, ಕೇಳಿರಬಹುದು.
ಮತ್ತು ಅವುಗಳಂತೆ ಆಚರಿಸಿಯೂ ಇರಬಹುದು. ಆದರೆ ಎಲ್ಲಿಯ ವರೆಗೆ
ನಿನ್ನವರು, ಅಂದರೆ ನಿನ್ನ ಭಕ್ತರು ನನ್ನಲ್ಲಿ ಪ್ರೇಮವುಳ್ಳವರಿರುವದಿಲ್ಲವೋ
ಆ ವರೆಗೆ ಆ ನನ್ನ ವಿದ್ವತ್ತೆ ಮತ್ತು ಓದು ಇವೆಲ್ಲವೂ ವ್ಯರ್ಥವಾದವು
ಗಳು. ಶಿವ ಶಿವಾ, ಮಹಾದೇವ, ಬಾಳಿಲ್ಲದವಳು ಅಂದರೆ ವಿಧವೆಯಾಗಿ
ರುವವಳು ಪತಿಯು ಇದ್ದ ಸ್ತ್ರೀಯಳು ಧರಿಸುವಂಥ ಓಲೆಗಳನ್ನು ಧರಿ
ಸಿದರೆ ಆ ಓಲೆಗಳಿಗೆ ಕನಿಷ್ಟ ಸ್ಥಿತಿಯೇ ದೊರಕು ಉಚ್ಚ ಸ್ಥಿತಿಯು
ಬರಲಾರದು. ಅಂದರೆ ನಿಜವಾದ ಭಕ್ತಿಯುಳ್ಳವನೇ ಭಾಗ್ಯವಂತನೆಂಬ
ಅಭಿಪ್ರಾಯವು ಇದರಲ್ಲಿ ಇದೆ.

(೭೨) ಉಡುವಿನ ಭಾವದಲ್ಲಿ ಹಡೆದವರೆಮ್ಮವರು. ಉಸಿರುವಳ್ಳಿ
ಯಂತೆನ್ನ ಇರವು. ಬಾವುಲ ಬಾಳುವೆಯು ತೆರನಂತೆ ಹೊತ್ತಾರೆ ಎದ್ದ
ಕುರುಡಂಗೆ ಅಗುಸೆಯಲ್ಲಿ ಅಸ್ತಮಯವಾದಂತೆ ಆನು ಭಕ್ತಿಯ ಬಯಸಿದರೆ
ಹುದೇ ಕೂಡಲಸಂಗಮದೇವಾ ?

ಉಡವು ಸಿಕ್ಕದ್ದನ್ನೆಲ್ಲ ಗಟ್ಟಿಯಾಗಿ ಹಿಡಿದುಕೊಂಡು ಬಿಡುತ್ತದೆ.
ಅದರಲ್ಲಿ ತಾರತಮ್ಯಭಾವವಿಲ್ಲ. ಮನುಷ್ಯನು ಅದರಂತೆ ಆಚರಿಸಬಾರದು.
ಅಂದರೆ ಅವನು ಉತ್ತಮವಾದದ್ದನ್ನು ಹಿಡಿದು ಕೆಡುಕಾದದ್ದನ್ನು ಬಿಡ
ಬೇಕು. ಹೀಗೆ ತಾರತಮ್ಯದಿಂದ ಆಚರಿಸಿದಲ್ಲಿ ಅವನಲ್ಲಿ ಭಕ್ತಿಯು ನೆಲೆ

ಗೋಸ್ಕುವದು. ಅವನು ಉಸಿರುವಳ್ಳಿಯಂತೆಯೂ ಇರಬಾರದು. ಈ ಹುಳವು ಮುಂಜಾವಿನಲ್ಲಿ ಹಚ್ಚಗೆ, ಮಧ್ಯಾಹ್ನದಲ್ಲಿ ನಸುಗೆಂಪು, ಸಂಜೆಗೆ ಕಪ್ಪು ಬಣ್ಣದ್ದಾಗುತ್ತದೆ. ಅದರಂತೆ ಮನುಷ್ಯನು ಚಂಚಲವೃತ್ತಿಯು ಳ್ಳವನಾದರೆ ಅವನಲ್ಲಿ ಭಕ್ತಿಯು ಇರಲಾರದು. ಅವನು ತೊಗಲಬಾವು ಲಿಯಂತೆಯೂ ಇರಬಾರದು. ಇದು ಬಾಯಿಂದ ತಿಂದು ಅವೇ ಬಾಯಿಂದಲೇ ಮಲವನ್ನು ಬಿಡುತ್ತದೆ. ಭಕ್ತನು ಹೀಗೆ ಆಚರಿಸದೆ ಅವನು ಯಾವಾ ಗಲೂ ಸದ್ಗುಣಿಯಾಗಿ ಆಚರಿಸಬೇಕೇ ಹೊರ್ತು ದುರ್ಗುಣಿಯಾಗಿ ಹೊಲಸು ರೀತಿಯಿಂದ ಆಚರಿಸಬಾರದು. ಮನುಷ್ಯನು ಕುರುಡನಂತೆಯೂ ಇರ ಬಾರದು. ಒಬ್ಬಾನೊಬ್ಬ ಕುರುಡನು ಒಂದು ಊರಿಗೆ ಹೋಗಬೇಕೆಂದು ಮುಂಜಾವಿನಲ್ಲಿ ಎದ್ದು ದಾರಿ ತಪ್ಪಲಾಗಿ ಊರನ್ನೆಲ್ಲ ಸುತ್ತುತ್ತಾ ಸಂಜೆಯು ವರೆಗೆ ನಡೆಯುತ್ತಾ ಇರಲು ಅವನು ಆ ಗ್ರಾಮದ ಅಗಸೀ ಬಾಗಿಲಿಗೆ ಮಾತ್ರ ಬರುತ್ತಾನೆ. ಮುಂದೆ ಅವನು ತಾನು ಹೋಗತಕ್ಕ ಊರಿಗೆಹೋಗಿ ಮುಟ್ಟುವದು ಹೇಗೋ ಏನೋ ಎಂಬುದು ತಿಳಿಯದ ಸಂಗತಿಯು. ಭಕ್ತನು ಇಂಥ ಕುರುಡನಂತೆ ಇರಬಾರದು. ಅಂದರೆ ಅವನು ಅಜ್ಞಾನಿಯಾಗಿರಬಾರದು. ಅವನು ಜ್ಞಾನಿಯಾಗಿದ್ದುಕೊಂಡು ತಾನು ಹೋಗತಕ್ಕ ಊರಿನ ಹಾದಿಯನ್ನು ಗೊತ್ತುಮಾಡಿಕೊಂಡು ಹೊರಟರೆ ಅವನು ಊರನ್ನು ಮುಟ್ಟುವನು. ಇಲ್ಲಿ ಬಸವೇಶ್ವರನು ಅನ್ನುವದೇನಂದರೆ, ನಾನು ಇಂಥ ಉಡುವಿನಂತೆ, ಉಸಿರುವಳ್ಳಿಯಂತೆ, ತೊಗಲುಬಾವುಲಿ ಯಂತೆ, ಕುರುಡನಂತೆ ಇರುತ್ತೇನೆ. ಇದರಿಂದ ನಾನು ಭಕ್ತಿಯನ್ನು ಬಯಸಿದರೆ ಅದು ನನಗೆ ಎಂದೂ ದೊರೆಯಲಾರದು. ಮತ್ತು ನನ್ನ ಇಷ್ಟವನ್ನು ಹೊಂದಲಾರೆನು ಎಂದು ಅನ್ನುತ್ತಾನೆ.

---

## ಲಿಂಗವನ್ನು ಪೂಜಿಸು

(೭೩) ಸಂಸಾರವೆಂಬುದೊಂದು ಗಾಳಿಯ ಸೊಡರು. ಸಿರಿಯೆಂಬು ದೊಂದು ಸಂತೆಯ ಮಂದಿ ಕಂಡಯ್ಯಾ. ಇದ ನೆಚ್ಚಿ ಕೆಡಬೇಡ, ಸಿರಿ ಎಂಬುದ. ಮರೆಯದೆ ಪೂಜಿಸು ನಮ್ಮ ಕೂಡಲಸಂಗಮದೇವನ.

ಸೊಡರು = ದೀಪ

ಈ ಸಂಸಾರದಲ್ಲಿ ನಾನು ಹೆಣ್ಣು, ಮಣ್ಣು, ಹೊನ್ನು ಇವುಗಳು ಶಾಶ್ವತವೆಂದು ತಿಳಿದು ನಡೆಯುತ್ತೇನೆ. ಆದರೆ ಅವು ಗಾಳಿಯಲ್ಲಿಟ್ಟ

ದೀಪದಂತೆ ಇವೆ ಎಂದು ನೀನು ತಿಳಿಯಬೇಕು. ಆ ದೀಪವು ಬೇಕಾದಾಗ ತತ್‌ಕ್ಷಣ ಹೋಗಿ ಬಿಡುವದು. ಹಾಗೆಯೇ ಹೆಣ್ಣು, ಮಣ್ಣು, ಹೊನ್ನುಗಳು ಶಾಶ್ವತವಲ್ಲ. ಸಿರಿ ಎಂಬುದು ಸಂತೆಯಲ್ಲಿ ಕೂಡಿದ ಮಂದಿಯಂತೆ, ಎಂದು ಬಸವೇಶ್ವರನು ಹೇಳಿದ್ದಾನೆ. ಆಗ ಅನೇಕ ಗ್ರಾಮಗಳಿಂದ ಅನೇಕ ಜನರು ಒತ್ತಟ್ಟಿಗೆ ಸೇರುತ್ತಾರೆ. ಆಗ ಅವರು ಮಾಡುವ ಗುಲ್ಲು ಭೋರೆಂದು ದೂರದ ವರೆಗೆ ಕೇಳುತ್ತದೆ. ಆದರೆ ಸಾಯಂಕಾಲದಲ್ಲಿ ಈ ಜನರೆಲ್ಲ ಎತ್ತಲಿಂದ ಬಂದಿದ್ದರೋ ಅತ್ತ ಅವರು ಹೋಗಿ ಬಿಡುತ್ತಾರೆ. ಆಗ ಪೇಟೆಯಲ್ಲಿ ಒಬ್ಬರೂ ಇಲ್ಲದೆ ಅದು ಹಾಳುಸುರಿಯುತ್ತದೆ. ಅಷ್ಟೈಶ್ವರ್ಯ ಭೋಗ್ಯ ವಸ್ತುಗಳ ಸ್ಥಿತಿಯೂ ಸಹ ಹೀಗೆಯೇ ಇದೆ. ಇಂಥ ಸಿರಿಯನ್ನು ನೀನು ನಂಬಬೇಡ. ಇದನ್ನು ಮರೆತು ಪರಮಾತ್ಮನೊಬ್ಬನನ್ನು ನಂಬಿ ಪೂಜಿಸು ಎಂದು ಬಸವೇಶ್ವರನು ಇಲ್ಲಿ ಹೇಳಿದ್ದಾನೆ.

(೭೪) ಹೊತ್ತಾರೆ ಎದ್ದು ಅಗ್ಗವಣಿ ಪತ್ರೆಯ ತಂದು ಹೊತ್ತು ಹೋಗದ ಮುನ್ನ ಪೂಜಿಸು ಲಿಂಗವ. ಹೊತ್ತು ಹೋದ ಬಳಿಕ ನಿನ್ನ ನಾರು ಬಲ್ಲರು? ಹೊತ್ತು ಹೋಗದ ಮುನ್ನ ಮೃತ್ಯು ಒಯ್ಯದ ಮುನ್ನ ತೊತ್ತುಗೆಲಸವ ಮಾಡು ಕೂಡಲಸಂಗಮದೇವನ.

ಅಗ್ಗವಣಿ = ನೀರು

ನಿನ್ನಲ್ಲಿ ಭಕ್ತಿಯು ಇದ್ದರೆ ನೀನು ಮುಂಜಾವಿನಲ್ಲೆದ್ದು ಪೂಜೆಗೋಸ್ಕರ ನೀರನ್ನು ಮತ್ತು ವನದಿಂದ ಬಿಲ್ವ ಪತ್ರೆಗಳನ್ನು ತಂದು ವೇಳೆಗೆ ಸರಿಯಾಗಿ ಲಿಂಗಪೂಜೆಯನ್ನು ಮಾಡು. ಇದು ನೀನು ಮಾಡಬೇಕಾದ ನಿತ್ಯ ಕರ್ಮವು. ಹೀಗೆ ಮಾಡದೆ ನೀನು ವ್ಯರ್ಥ ವೇಳೆಗಳೆದಲ್ಲಿ ಮುಂದೆ ನಿನ್ನನಾರೂ ಕೇಳುವದಿಲ್ಲ. ಆದುದರಿಂದ ನಿನ್ನ ವೇಳೆಯು ಹೋಗುವ ಪೂರ್ವದಲ್ಲಿ ಮತ್ತು ಸಾವು ನಿನಗೆ ಬರುವ ಪೂರ್ವದಲ್ಲಿ ನೀನು ನಿನ್ನ ಮನಸ್ಸಿನಲ್ಲಿ ಪರಮಾತ್ಮನು ನನ್ನ ಒಡೆಯನು, ನಾನು ಅವನ ಸೇವಕನು ಎಂದು ಭಾವಿಸಿ ಪರಮಾತ್ಮನ ಸೇವೆಯನ್ನು ಒಂದು ತೊತ್ತಿನಂತೆ ಮಾಡು ಎಂದು ಬಸವೇಶ್ವರನು ಈ ವಚನದಲ್ಲಿ ಹೇಳಿದ್ದಾನೆ.

(೭೫) ನೆರೆ ಕೆನ್ನೆಗೆ, ತೆರೆ ಗಲ್ಲಕ್ಕೆ ಶರೀರ ಗೂಡ ಹೋಗದಮುನ್ನ ಹಲ್ಲು ಹೋಗಿ, ಬೆನ್ನು ಬಾಗಿ ಅನ್ಯರಿಗೆ ಹಂಗಾಗದ ಮುನ್ನ, ಕಾಲ

ಮೇಲೆ ಕೈಯನೂರಿ, ಕೋಲ ಹಿಡಿಯದ ಮುನ್ನ ಮುಪ್ಪಿಂದೊಪ್ಪವಳಿಯದ ಮುನ್ನ ಪೂಜಿಸು ಕೂಡಲಸಂಗಮದೇವನ.

ಕೆನ್ನೆ = ಗಲ್ಲ, ತೆರೆ = ಮಡಿಕೆ, ಒಪ್ಪ = ಸೌಂದರ್ಯ

ಕೆನ್ನೆಯ ಮೇಲೆ ಇದ್ದ ಕಪ್ಪುಗೂದಲುಗಳು ಬೆಳ್ಳಗಾಗುವ ಮೊದಲು, ನುಣುಪಾದ ನಿನ್ನ ಗಲ್ಲಗಳಮೇಲೆ ಮಡಿಕೆಗಳು ಬೀಳುವ ಮೊದಲು, ಶರೀರವು ಗೂಡಿನಂತೆ ಬಗ್ಗುವ ಮೊದಲು, ಹಲ್ಲು ಬಿದ್ದು, ಬೆನ್ನು ಬಾಗಿ ಅಶಕ್ತನಾಗಿ ಹೆರವರನ್ನು ಅವಲಂಬಿಸುವಂಥ ಸ್ಥಿತಿಯು ಬರುವ ಮೊದಲು, ಕಾಲ ಮೇಲೆ ಕಯ್ಯನಿಟ್ಟು ಕೋಲನ್ನು ಹಿಡಿದು ಮೇಲೇಳುವಷ್ಟು ಅಶಕ್ತನಾಗುವ ಮೊದಲು, ಮುಪ್ಪಿನಿಂದ ಶರೀರದ ಸೌಂದರ್ಯವು ಹೋಗುವ ಮೊದಲು, ಮೃತ್ಯುವು ಒಯ್ಯುವ ಮೊದಲು, ನೀನು ಪರಮಾತ್ಮನನ್ನು ಪೂಜಿಸಬೇಕು, ಎಂದು ಬಸವೇಶ್ವರನು ಈ ವಚನದಲ್ಲಿ ಬೋಧಿಸಿದ್ದಾನೆ.

(೭೬) ಎಲೆಲೆ ಮಾನವಾ, ಅಳಿಯಾಸೆ ಬೇಡವೋ. ಕಾಳಬೆಳದಿಂಗಳ ಸಿರಿ ಸ್ಥಿರವಲ್ಲ. ಕೇಡಿಲ್ಲದ ಪದವಿ. ಕೂಡಲಸಂಗಮದೇವನ ಮರೆಯದೆ ಪೂಜಿಸು.

ಅಳಿಯಾಸೆ = ನಿರರ್ಥಕವಾದ ಆಸೆ. ಕಾಳ ಬೆಳದಿಂಗಳು = ಕೃಷ್ಣಪಕ್ಷದ ಬೆಳದಿಂಗಳು.

ಎಲೋ ಮಾನವನೇ, ನೀನು ಯಾವಾಗಲೂ ಅನಿತ್ಯವಾದ ವಸ್ತುಗಳನ್ನು ಆಶಿಸುತ್ತೀ. ಆದರೆ ಇಂಥ ವಸ್ತುಗಳನ್ನು ನೀನು ಆಶೆ ಮಾಡಬೇಡ. ನೀನು ಇಚ್ಛಿಸುವ ಸಿರಿಯು ಸ್ಥಿರವಲ್ಲ. ಪೌರ್ಣಿಮೆಯ ದಿನದ ಬೆಳದಿಂಗಳು ಬೆಳತನಕ ಇದ್ದರೂ ಮುಂದೆ ಕೃಷ್ಣಪಕ್ಷದಲ್ಲಿ ಆ ಬೆಳದಿಂಗಳು ಕಡಿಮೆಯಾಗುತ್ತ ಹೋಗಿ ಅಮಾವಾಸ್ಯೆಯ ದಿನ ಅದು ಏನೂ ಕಾಣುವದಿಲ್ಲ. ಸಿರಿಯು ಎಂಬುದು ಹೀಗೆಯೇ ಇದೆ. ಪರಮಾತ್ಮನೇ ಇಂಥ ಸಿರಿಯನ್ನು ನೀನು ನನಗೆ ಕೊಡಬೇಡ. ಲಿಂಗಾಂಗ ಸಾಮರಸ್ಯ ಪದವಿಯು ಎಂದಿಗೂ ನಾಶವಾಗದಂಥಾದ್ದು. ಅದನ್ನು ನನಗೆ ಕೊಡು, ಎಂದು ಬಸವೇಶ್ವರನು ಪರಮಾತ್ಮನನ್ನು ಕುರಿತು ಪ್ರಾರ್ಥಿಸುತ್ತಾನೆ. ಪರಮಾತ್ಮನನ್ನು ಮರೆಯದೆ ಪೂಜಿಸಿದಲ್ಲಿ ಇದು ನನಗೆ ಪ್ರಾಪ್ತವಾಗುತ್ತದೆಂಬಲೂ ಅವನು ಇಲ್ಲಿ ಹೇಳಿದ್ದಾನೆ.

# ಓದುಗರಲ್ಲಿ ವಿಜ್ಞಾಪನೆ

ಮಾನ್ಯರೇ,

ನಮ್ಮ ಶಿವಾನುಭವ ಗ್ರಂಥಮಾಲೆಯಿಂದ ಈ ವರೆಗೆ ವಚನ ವಾಙ್ಮಯ ವಿಷಯವಾಗಿ ೬೨ ಗ್ರಂಥಗಳು ಪ್ರಕಟವಾಗಿದ್ದು ಅವುಗಳಲ್ಲಿ ಸಧ್ಯ ೪೦ ಗ್ರಂಥ ದೊರೆಯುತ್ತವೆ. ೧೦ ಗ್ರಂಥಗಳು ಅಚ್ಚಿನಲ್ಲಿವೆ. ೨೨ ಗ್ರಂಥಗಳು ಈ ಮೊದಲು ಪ್ರಕಟವಾಗಿ ತೀರಿ ಮತ್ತೆ ಪುನಃ ಅಚ್ಚಿಗೆ ಸಿದ್ಧವಾಗಿವೆ. ಕಾರಣ ಅವುಗಳ ಕ್ರಯಪಟ್ಟಿಯನ್ನು ನಮ್ಮ ಈ ಶಿವಾನುಭವ ಸಂಚಿಕೆಯಲ್ಲಿ ಪ್ರಕಟಿಸಲಾಗಿದೆ. ಅವುಗಳಲ್ಲಿ ತಮಗೆ ಬೇಕಾದ ಗ್ರಂಥಗಳನ್ನು ಈ ಸಂಚಿಕೆಯಲ್ಲಿರುವ ಆರ್ಡರ ಫಾರ್ಮಿನಲ್ಲಿ ಬರೆದು ನಮ್ಮ ಕಡೆಗೆ ಕಳಿಸಬೇಕಾಗಿ ನಮ್ಮ ಸವಿನಯ ವಿನಂತಿ.

ವಿ. ಸೂಃ— ಕ್ರಯಪಟ್ಟಿಯ ಮೇರೆಗೆ ಬೇಕಾದ ಗ್ರಂಥಗಳ ಬೆಲೆಯನ್ನು ಆರ್ಡರ ಸಂಗಡ ಹಣವನ್ನು M. O. ದಿಂದ ಕಳಿಸಿದವರಿಗೆ ಪೋಸ್ಟೇಜ ಫ್ರೀ ಇಲ್ಲವೆ ವ್ಹಿ-ಪಿ. ಯಿಂದ ಬೇಕಾಗಿದ್ದರೆ ಇಂದೇ ಆರ್ಡರ ಕಳಿಸಿರಿ.

ಮ್ಯಾನೇಜರ

ಶಿವಾನುಭವ ಗ್ರಂಥಮಾಲಾ

ಆಫೀಸ

ವಿಜಾಪೂರ